12.9.40




ವಿಕ್ರಮ ಸಂವತ್ಸರ] —೮೩— [ವಿನಾಯಕನ ಸಂಚಿಕೆ







ಮೈಸೂರು :

ಮೈಸೂರು ವಿಶ್ವವಿದ್ಯಾನಿಲಯ

೧೯೪೦

ಸಂಪುಟ ೨೨] [ಸಂಚಿಕೆ ೧

# ವಿಷಯ ಸೂಚಿಕೆ

# ಪ್ರಬುದ್ಧ ಕರ್ಣಾಟಕ

---




ಸಂಪುಟ ೨೨

(ವಿಕ್ರಮ ಸಂವತ್ಸರ)





ಮೈಸೂರು :

ಮೈಸೂರು ವಿಶ್ವವಿದ್ಯಾನಿಲಯ

೧೯೪೧

## ವಿಷಯ ಸೂಚಿಕೆ

### ೧. ಕವನಗಳು—



### ೨. ನಾಟಕ—



### ೩. ಸಾಹಿತ್ಯ ವಿಚಾರ—

## ४. ಕಾವ್ಯಕಥೆ—



## ೫. ಸಣ್ಣ ಕಥೆ—



## ೬. ಪುಟ್ಟಕಥೆ—



## ೭. ಕವಿಕಥೆ—



## ೮. ನಾಟಕ ಕಥೆ—



## ೯. ಪತ್ರಕಥೆ

## ೧೦. ಶಾಸ್ತ್ರವಿಚಾರ—



## ೧೧. ಪುಸ್ತಕಗಳ ಪಟ್ಟಿ—



## ೧೨. ಕಾವ್ಯಾವಲೋಕನ—



ಶ್ರೀ ರಾಮಾನುಜಾಚಾರ್ಯರು

ಚಿತ್ರಕಾರರು : ಶ್ರೀ ರಾಜಾರವಿವರ್ಮರವರು

(ಪಡಿಯಚ್ಚನ್ನು ಶ್ರೀಮಾನ್ ಜಿ. ಆರ್. ಜೋಸ್ಯರ್, ಎಂ.ಎ., ಅವರು ದಯೆಯಿಟ್ಟು ಕೊಟ್ಟಿರುತ್ತಾರೆ)




ಕರ್ಣಾಟಕ

ವಿಕ್ರಮ ಸಂವತ್ಸರ — ೮೩ — ವಿನಾಯಕನ ಸಂಚಿಕೆ

# ಕನಸಾದ ನನಸು

ದೇವಲೋಕದ ಭೇರಿರವವೊಂದು ಭೋರ್ಗರೆದು
ಒರ್ಮೆಯೇ ಕೂಗಿದುದು ಜಗದೊಡಲ ಹರಿದು!
ಬೆಚ್ಚಿಬಿದ್ದೆನು, ಎದ್ದು ಬಾಗಿಲಿಗೆ ಓಡಿದೆನು,
ಇರುವೆಡೆಯನರಿಯದೆಯೆ ಸುತ್ತಲೂ ನೋಡಿದೆನು.
ಇಂದಿದೇನೀ ಬೆಡಗು? ಬೇಲೂರು ಪಟ್ಟಣವು
ಇಂದ್ರನಮರಾವತಿಯ ಹಿರಿಸೊಬಗ ಜರೆಯುತಿದೆ,
ಬೀದಿಬೀದಿಗಳೆಲ್ಲ ಸಿಂಗರದಿ ಮೆರೆಯುತಿವೆ,
ಗರುಡಹನುಮಧ್ವಜವು ಅಲ್ಲಲ್ಲಿ ಹಾರುತಿದೆ,
ರಂಗವಲ್ಲಿಯ ಸೊಬಗು ಮನೆಮನೆಗೆ ಕಾಣುತಿದೆ;
ತಳಿರುತೋರಣಗಳೆಡೆಯೆಡೆಯೊಳಗೆ ತೂಗುತಿವೆ,
ಮಡದಿಯರು ಸಡಗರದಿ ಹೊಸ ಉಡುಪ ತಾವ್ ಧರಿಸಿ,

ಸುಣ್ಣ ಕಾರಣೆಗಳಿಂ ಮನೆಗಳನು ಸಿಂಗರಿಸಿ,
ಹೊಂಜೊಡರ ಬೀದಿಯೊಳು ಸಂಭ್ರಮದಿ ಅಸುಗೊಳಿಸಿ,
ರನ್ನದಾರತಿಯನಣಿಮಾಡುತಿಹರು ;
ಮಕ್ಕಳಾ ತಂಡಗಳು ಕಿರುಗೆಜ್ಜೆಯುಲಿಯಿಂದ
ಅಕ್ಕರೆಯ ದನಿಗೆಯ್ದು ಕುಣಿಯುತಿವೆ ನಲವಿಂದ.
ಮಂದಿಮಂದಿಗಳೆಲ್ಲ ಶುಭ್ರವಸ್ತ್ರವ ಧರಿಸಿ
ಸಂದಣಿಸಿ ಸಾಗುತಿದೆ ಬೀದಿಗಳನನುಸರಿಸಿ ;
ದೇಗುಲದ ಮುಂದುಗಡೆ ಮುಂಜಗಲಿಯುದ್ದಕೂ
ಹಸರುವಾಣಿಯಪಂದಲ್ ಸೋಜಿಗದಿ ನಲಿಯುತಿದೆ ;
ಕಾರಣವ ತಿಳಿಯುವೆನು ನಾನೆಂದು ಓಡಿದೆನು ;
ಆತುರದಿ ಪೋಗುತಿಹ ಮುದುಕನನು ಕೇಳಿದೆನು.
"ಸಂಭ್ರಮವಿದೇನಜ್ಜ, ಸಾಗುತಿಹುದಾವೆಡೆಗೆ ?"
"ನುಡಿವುದಕೆ ತೆರಹಿಲ್ಲ, ಹೊರಟಿಹುದು ಮೆರವಣಿಗೆ ;"
"ಮೆರವಣಿಗೆಯೇತರದು ? ಬರುತಿಹುದದೆಲ್ಲಿಂದ ?"
"ಎಗಚಿನದಿಯೆಡೆಯೊಳಿಹ ಎಲೆವನೆಯ ಕಡೆಯಿಂದ."
ಓಡಿದೆನು ಬಲುಭರದಿ, ಮಂದಿಗಳನನುಸರಿಸಿ,
ನೋಡಿದೆನು ಬೆರಗಾಗಿ ಬರುತಲಿಹ ದಿಬ್ಬಣವ,
ಅಂಬಾರಿಯಾನೆಗಳು, ತಮ್ಮಟೆಯ ವೃಷಭಗಳು,
ಪಳವಿಗೆಯ ಒಂಟೆಗಳು, ಕಾಲಾಳ ತಂಡಗಳು,
ಕುದುರೆಗಳನೇರಿ ಬಹ ರಾವುತರ ಸಾಲುಗಳು,
ಶಿಸ್ತಿನಿಂ ಮೆರೆಯುತಿಹ ಇಂಪಾದ ವಾದ್ಯಗಳು,
ಎಲ್ಲರಿಗು ಹೊಸ ಉಡಿಗೆ, ಬಣ್ಣಬಣ್ಣದ ತೊಡಿಗೆ,
ಕಣ್ಮನಕೆ ಪೊಸತೆನಿಪ ನೂತನದ ನಡಿಗೆ,
ಹಿಂದೆಯೇ ಕೇಳುತಿದೆ ಬಿರುದಿನಾರ್ಭಟವು,
ಬಲುಭರದಿ ಕೂಗುತಿಹ ಮಾಗಧರ ನಿಡುಸರವು,
"ಚೋಳ ಕಾಲಾನಲಾ, ಪಾಂಡ್ಯ ಮಲಯಾನಿಲಾ,
ಗಂಗೇಭ-ಮದಸಿಂಹ, ರಿಪುರಾಯ ಕಲಿಕಾಲ,
ಜಗತಿ ಧರಣಿಲೋಕೋತ್ತಂಸಿತಾತ್ಮೀಯಪಾದಃ,
ಚತುರವಿಬುಧಗೋಷ್ಠೀಪ್ರೌಢ ವಾಣೀವಿನೋದಃ,

ಸಕಳಭರತವಿದ್ಯಾಹೃದ್ಯಗಂಭೀರಭಾವಃ
ವಿಪುಳವಿಜಯಲಕ್ಷ್ಮೀವಲ್ಲಭೋ ವಿಷ್ಣುದೇವಃ."
ಎನಿದೇನಚ್ಚರಿಯು ಅರ್ಥವಾಗುತ್ತಿಲ್ಲ!
ಕೇಳಿದರು ತೆರಪಿಂದೆ ಪೇಳುವರೆ ಇಲ್ಲ.
ಇಲ್ಲಿಯೇ ಬರುತಿಹನು ವಿಷ್ಣುವರ್ಧನದೇವ
ಧೌತವಸ್ತ್ರವ ಧರಿಸಿ ಭಕ್ತಿಪೂರಿತ ಭಾವ
ಸಿರಿಯರಸಿ ಶಾಂತಲೆಯು ಸಚಿವಮುಖ್ಯರು ಸಹಿತ
ಬರಿಗಾಲು ನಡಗೆಯೊಳು ಲೋಕವಿಖ್ಯಾತ;
ಉಭಯ ಪಾರ್ಶ್ವಗಳಲ್ಲಿ ಶಂಖಚಕ್ರಗಳು,
ಎಡೆಎಡೆಯೆ ಮೆರೆಯುತಿವೆ ಚಮರಕುಂಚಗಳು;
ಹಿಂದೆಯೇ ಕಾಣುತಿದೆ ಬಂಗಾರದಂದಣವು,
ಸುತ್ತಲೂ ಮೆರೆಯುತಿಹ ದ್ವಿಜರ ಘೋಷಣವು.
"ವೇದಮಾರ್ಗ ಪ್ರತಿಷ್ಠಾಪನಾಚಾರ್ಯ,
ಯಾಮುನಾಚಾರ್ಯವರಶಿಷ್ಯ ಗುರುವರ್ಯ,
ಜಗದರಿವ ಪಸರಿಸಿದ ಶ್ರೀ ಭಾಷ್ಯಕಾರ,
ಜಯಜಯತು ಕಲಿಯುಗದ ಶೇಷನವತಾರ."
ಈರಾರು ನಾಮಗಳ ಧರಿಸಿರುವ ದ್ವಿಜವರರು
ಅಂದಣದ ಕೆಲಬಲದಿ ಬರುತಿಹರು ದಂಡಧರರು.
ಒಳಗಿಹನದಾರಲ್ಲಿ ಮುಪ್ಪಿನಾ ಯತಿವರನು?
ಭೂಲೋಕಕಿಳಿತಂದ ದೇವರುಷಿಯಂತಿಹನು.
ತೊಂಡೆಹಣ್ಣಿನ ಬಣ್ಣ, ಸೌಮ್ಯವಾಗಿಹ ವದನ,
ಕಂಡವರನೆರಗಿಸುವ ಶಕ್ತಿಯುತ ಮುಕ್ತಿಸದನ.
ಕೇಳಿದೆನು ಸಡಗರದಿ ಬರುತಿದ್ದ ದ್ವಿಜವರನ,
ಏನಿದೇನಿದು ದೇವ, ಆರಿವನು ಯತಿವರನು?
ಪೋಗುತಿಹುದಾವೆಡೆಗೆ ದೊರೆಯೊಡನೆ ಗುರುವರನು?
ಕರುಣದಿಂ ನುಡಿದನವ, "ಈತನೇ ಬಹುಧುರ್ಯ
ಜಿಟ್ಟಿಗನ ಕೈವಿಡಿದ ರಾಮಾನುಜಾಚಾರ್ಯ,
ಪೋಗುತಿಹ ದೇಗುಲಕೆ,
ಮಂಗಳಾಶಾಸನಕೆ."

ಎರಗಿದೆನು ತಕ್ಷಣವೆ ಭಕ್ತಿಯಲಿ ನಡುಕಟ್ಟಿ,
ಸ್ನಾನವಿಲ್ಲದ ಭಾವ ನಾಚಿಸಿತು ಮನಮುಟ್ಟಿ;
ನೋಡಿಕೊಂಡೆನು ಮೆಯ್ಯ, ಎಂತಾಯ್ತೊ ನಾ ಕಾಣೆ
ಈರಾರು ನಾಮಗಳು ಬೆಳಗುತಿವೆ, ಹರಿಯಾಣೆ!
ಸಂದಣಿಯು ಸಾಗುತಿದೆ ನಡೆದೆ ನಾನದರೊಡನೆ,
ಬಿರುದುಗಳ ಕೂಗುತಿಹ ದ್ವಿಜವರರ ರವದೊಡನೆ;
ಬಲಗಡೆಗೆ ಅರಮನೆಯು ಕುಸುರಿ ಕೆಲಸಗಳಿಂದ
ಮೆರೆಯುತಿದೆ ಸಂಭ್ರಮದಿ; ತಳಿರುತೋರಣದಿಂದ
ಮುಂಗಡೆಯ ಚಪ್ಪರದಿ ರಜತಸಿಂಹಾಸನವು
ಯತಿವರನ ಬರುವಿಕೆಯ ಬಯಸುತಿದೆ ಚಣಚಣವು.
ಗುರುದೇವನಿಳಿದಲ್ಲಿ ಮಂಡಿಸಿದ ಆಸನದಿ;
ರಾಜರಾಣಿಯರೆಲ್ಲರೈತಂದು ಬಲುಭರದಿ
ಪೊಂಗಳಸದುದಕದಲಿ ಸಿರಿಯಡಿಯ ತಾವ್ ತೊಳೆದು
ಪಾದಕಾಣಿಕೆಯಿತ್ತರನುನಯದಿ ಮನವೊಲಿದು.
ಮನಮೆಚ್ಚಿ ಯತಿರಾಜ ನುಡಿದ ಸಂಭ್ರಮದಿಂದ,
"ಸಚ್ಛಿಷ್ಯ ನೀನಿಂದು ಗುರುಭಕ್ತಿಯೊಲವಿಂದ
ಇತ್ತ ಈ ಕಾಣಿಕೆಯೆ ಕೇಶವನ ದೇಗುಲಕೆ
ಮೊದಲ ಪೂಜೆಯ ಮುಡಿಪು; ಒಪ್ಪಿದನು ದೊರೆಯದಕೆ.
ಗುರುಶಿಷ್ಯರಿರ್ವರೂ ಸಾಗಿದರು ಮೊದಲಂತೆ,
ಸೇನೆಗಳು ನಡೆಯುತಿವೆ ಭೂಮಿ ಬೆಸಲಾದಂತೆ,
ಬೀದಿಬೀದಿಗಳಲ್ಲಿ ಮಹಡಿಮೇಲ್ಗಡೆಯಲ್ಲಿ
ವನಿತೆಯರ ಸಂದಣಿಯು ನಲಿಯುತಿದೆ ಹೂ ಚೆಲ್ಲಿ;
ಅಡಿಗಡಿಗೆ ಬೆಳಗುವರು ಆರತಿಯನರಸನಿಗೆ,
ವೇದಸಂಭಾವನೆಯನೆತ್ತುವರು ಯತಿವರಗೆ;
ಚೌವಟ್ಟದೆಡೆಯಲ್ಲಿ ವಣಜಿಗರ ತಂಡಗಳು
ಭಕ್ತಿಕಾಣಿಕೆಯಾಗಿ ತಂದಿತ್ತ ಮಾಲೆಗಳು
ಅಂದಣವ ನೆರೆ ತುಂಬಿ ಮುಚ್ಚುತಿದೆ ಯತಿವರನ
ಸನ್ಯಾಸಿಗಿದು ಬೇಡವೆಂದೆನೆಯು ಕೇಳದವನ.
ಮೆರವಣಿಗೆ ಮುಂಸಾಗಿ ದೇಗುಲದ ಮುಂಗಡೆಗೆ

ಬಂದು ಸೇರಿತು ಭರದಿ ಪಂದಲಿನ ಅಡಿಗೆ.
ಭೂಸುರರು ಮುನ್ನಡೆಯೆ ಪೊನ್ನಡಿಯ ಬೆಳಸಿದನು
ಭೂಭಾರಹೊತ್ತವಸು ಹೊಕ್ಕುದ್ವಾರವನು.
ಪ್ರಾಕಾರದೊಳಗಿನಲಿ ಕಾಲಿಡಲು ತೆರಹುಂಟೆ?
ಮಂದಿಗಳ ಜಂಗುಳಿಯೊಳೆಡೆಯಾಡಲನುವುಂಟೆ?
ಈಶಾನ್ಯಮೂಲೆಯೊಳು ಯಾಗಶಾಲೆಯ ಜ್ವಾಲೆ
ಚಿಮ್ಮಿ ನೆಗೆಯುತ್ತಲಿದೆ ಗೋಪುರದ ಮೇಲೆ;
ಆಗ್ನೇಯದಿಕ್ಕಿನೊಳು ಪಾಕಶಾಲೆಯ ಧೂಮ
ಹಬ್ಬಿ ಹರಿಯುತ್ತಲಿದೆ ಮೋಡಗಳ ಸ್ತೋಮ;
ನಡುವೆ ಬಲಗಡೆಯಲ್ಲಿ ವೇದಪಾರಂಗತರು
ಅವರ ಇದಿರ್ಗಡೆಯಲ್ಲಿ ದ್ರವಿಡ ಅಧ್ಯಾಪಕರು,
ಗಂಭೀರದನಿಯಿಂದ ಘೋಷಿಸುತ್ತಿಹರು.
ಮುಂದೆಯೇ ನಿಂದಿಹರು ಶಿಲ್ಪಿಗಳು ಕೈಮುಗಿದು
ಮಾಯಣ್ಣ ಮಲಿಯಣ್ಣ ಚಿಕ್ಕಣ್ಣ ಮಲ್ಲಣ್ಣ
ನಾಗೋಜ ದಾಸೋಜ ದೇವೋಜ ಕೆದರೋಜ,
ದೊರೆಯ ಮೆಚ್ಚಿಗೆಯನ್ನು ಕೇಳಲೊಲಿದೊಲಿದು.
ಗುರುವರನ ನಡೆಪುತ್ತ ಭೂಸುರರ್ಗೆ ಮಣಿಯುತ್ತ
ಶಿಲ್ಪಿಗಳ ಮೊಗನೋಡಿ ಮುಗುಳ್ನಗೆಯ ಸೂಸುತ್ತ
ದೊರೆ ನಡೆದ ತಾ ಮುಂದೆ, ಯತಿವರನು ಹಿಂದೆ;
ನಿಂತರಿರ್ವರು ಪೋಗಿ ಕೇಶವನ ಮುಂದೆ.
ಮೈ ಪುಳಕ ತಲೆದೋರೆ, ಭಕ್ತಿಭಾವವು ಮೀರೆ,
ಗಂಭೀರದುಲಿಯಿಂದ ದೊರೆ ನುಡಿದ ಜೊಂಪೇರೆ;
"ಹೇ ದೇವ ನಿಮ್ಮಡಿಯನಾಶ್ರಯಿಸಿ ಬದುಕಿದೆನು,
ಇದುವೆ ಗುರುದಕ್ಷಿಣೆಯು ಸ್ವೀಕರಿಸಬೇಕಿದನು."
ಎಂದೆನುತ ಅರ್ತಿಯಲಿ ತೋರಿದನು ಸಿರಿವರನ,
ಉನ್ನತಾಸನದಲ್ಲಿ ನಿಂತಿರ್ದ ಮೋಹನನ.
ಕಣ್ಣೀರ ಸುರಿಸುತ್ತ ಮಾರ್ನುಡಿದ ಎಳೆದೇವ
ಶಿಷ್ಯನೊಳು ಮಿಗಿಲಾದ ಪ್ರೇಮಪೂರಿತಭಾವ;
"ಸಿರಿಯಣುಗ, ಶಿಷ್ಯವರ, ಏರ್ಪೇಳ್ವೆ ನಿನ್ನನುವ

ಸಫಲಗೊಳಿಸಿದೆಯೆನ್ನ ಬಹುಕಾಲದಾಶಯವ,
ದೇವನಾಣತಿಯಿಂದು ಸಾಫಲ್ಯವಾಯ್ತು;
ಶತ್ರುವರ್ಗವದೆಲ್ಲ ನಿರ್ನಾಮವಾಯ್ತು;
ಮೇಲ್ನಾಡಿಗಾಂ ಬಂದ ಗೆಯ್ಮೆ ಪೂರೈಸಿತ್ತು;
ವೈಷ್ಣವಾಂಕುರ ಪೂತು ಸೊಂಪಾಗಿ ಫಲವಾಯ್ತು.
ಏನೀವೆ? ಮುದಿ ತವಸಿ ಇದಕೆ ಪ್ರತಿಫಲವಾಗಿ
ಆದರೂ ಒಂದುಂಟು; ಇಡುವೆ ಬಲುಹಿರಿದಾಗಿ
ಎಂದಿಗೂ ಅಳಿಯದಿಹ ಶಾಶ್ವತದ ರಕ್ಷೆಯನು;
ಜಗದವರು ಒಡೆಯಲಾರದ ಭದ್ರಕವಚವನು.
ನೀಮಾಡಿದೀ ಸೇವೆ ಕುಲಕೆ ಹಿರಿಹೆಸರಾಗಿ
ಕುಂದಿಗಿನಿತೆಡೆಗುಡದೆ ಜಗಕೆ ಅಚ್ಚರಿಯಾಗಿ
ರವಿಶಶಿಗಳುಳ್ಳಬರ ಮೇಲ್ಮೆಯಿಂದೊಡಗೂಡಿ
ಎಂದೆಂದು ಶೋಭಿಸಲಿ ನಿನ್ನ ಐಸಿರಿ ಪಾಡಿ.
ಇಕೊ ಬೆಳಗಲಾರತಿಯು ಆದ್ಯಂತರಹಿತನಿಗೆ
ಬೆಳಕುಕತ್ತಲೆಗಳಿಗೆ ತಾ ಹೇತುವಾದವಗೆ
ಲೋಕವೇ ತಾನಾಗಿ ತಾನದನು ಸೃಜಿಸಿದಗೆ
ಜಗವನೆಲ್ಲವ ಪೊರೆವ ಸೌಮ್ಯಕೇಶವಗೆ.''
ಒಡನೆಯೇ ಮೊಳಗಿದುವು ವಾದ್ಯತಂಡಗಳೆಲ್ಲ
ವೇಗದಿಂ ಹರಿಯುತ್ತ ದಿಙ್ಮಾಲೆಗಳನೆಲ್ಲ. . . .

ಭಯದಿಂದ ಬೆಚ್ಚುತ್ತೆ ಕಣ್ಬಿಟ್ಟು ನೋಡಿದೆನು!
ಛತ್ರದಾ ಮೂಲೆಯೊಳು ಕತ್ತಲಲಿ ಬಿದ್ದಿಹೆನು.
ಕ್ಷಣ ಮುಂದೆ ನನಸಾಗಿ, ಒರ್ಮೆಯೇ ಕನಸಾಯ್ತು.
ಇಲ್ಲವೆನಗಾ ಪುಣ್ಯ; ಸಿಕ್ಕಿದಷ್ಟೇ ಧನ್ಯ!

ಎಙ್. ಅನಂತರಂಗಾಚಾರ್.





ವಿಶ್ವವಿದ್ಯಾನಿಲಯ ಕಲಾವಸ್ತು ಪ್ರದರ್ಶನ

೧. ಕಾರ್ಯದರ್ಶಿಗಳು ವರದಿಯನ್ನು ಓದುತ್ತಿರುವುದು.

೨. ಚಿತ್ರಶಾಖೆಯ ಒಂದು ಭಾಗ.

# ವಿಶ್ವವಿದ್ಯಾನಿಲಯ ಕಲಾವಸ್ತು ಪ್ರದರ್ಶನ

ಮೈಸೂರು ವಿಶ್ವವಿದ್ಯಾನಿಲಯ ಸಂಘದ ಆಶ್ರಯದಲ್ಲಿ ಈ ವರ್ಷ ಕಲಾವಸ್ತು ಪ್ರದರ್ಶನವೊಂದು ನಡೆಯಿತು. ಈ ಸಂಸ್ಥೆಯ ಆಶ್ರಯದಲ್ಲಿ ಇದುವರೆಗೆ ಮೂರು ಪ್ರದರ್ಶನಗಳು ನಡೆದಿದ್ದುವು, ಇದು ನಾಲ್ಕನೆಯದು. ಮೊದಲು ಎರಡುಬಾರಿ ನಡೆದ ಪ್ರದರ್ಶನಗಳು ಕೇವಲ ಮೈಸೂರು ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳಿಗೆ ಮಾತ್ರ ಅನ್ವಯಿಸುವಂತಹುವು. ೧೯೩೭-೩೮ ರಲ್ಲಿ ನಡೆದ ಪ್ರದರ್ಶನವನ್ನು ದಕ್ಷಿಣಭಾರತ ವಿಶ್ವವಿದ್ಯಾನಿಲಯ ವಸ್ತುಪ್ರದರ್ಶನವನ್ನಾಗಿ ಏರ್ಪಡಿಸಲಾಗಿತ್ತು. ಈ ಬಾರಿ ಪ್ರದರ್ಶನದ ವ್ಯಾಪ್ತಿಯನ್ನು ಹೆಚ್ಚಿಸಿ ಇಂಡಿಯಾ ದೇಶದ ಎಲ್ಲ ವಿಶ್ವವಿದ್ಯಾನಿಲಯಗಳ ವಿದ್ಯಾರ್ಥಿಗಳೂ ಭಾಗವಹಿಸಲು ಅವಕಾಶವನ್ನುಂಟುಮಾಡಲಾಯಿತು. ಇಂತಹ ಪ್ರದರ್ಶನವು ನಡೆದುದು ಇದೇ ಮೊದಲನೆಯಬಾರಿ. ಪ್ರದರ್ಶನಕ್ಕೆ ಬಂದಿದ್ದ ಕುಶಲ ಕಲಾವಸ್ತುಗಳನ್ನು ಈ ಕೆಳಗೆ ಕಂಡಂತೆ ವಿಂಗಡಿಸಲಾಗಿತ್ತು:

೧. ರೇಖಾವಿನ್ಯಾಸ ಮತ್ತು ಚಿತ್ರಕಲೆ
೨. ಛಾಯಾಚಿತ್ರಗಳು
೩. ಕೈಗಾರಿಕೆಯ ಪದಾರ್ಥಗಳು
೪. ವೈಜ್ಞಾನಿಕ ವಸ್ತುಗಳು
೫. ಚಿತ್ರವಸ್ತ್ರಗಳು
೬. ಇತರ ವಿದ್ಯಾರ್ಥಿ ಹವ್ಯಾಸಗಳು

ಭಾರತದ ಅನೇಕ ಭಾಗಗಳಿಂದ ಪ್ರದರ್ಶನಕ್ಕೆ ವಸ್ತುಗಳು ಬಂದಿದ್ದುವು. ಅಮೃತಸರ, ಸಿಂಧ್ ಹೈದರಾಬಾದ್, ಬರೋಡಾ, ಪೂನಾ, ದಖ್ಖನ್ ಹೈದರಾಬಾದ್, ಮದರಾಸು, ತಿರುವಾಂಕೂರು ಮುಂತಾದ ಪ್ರದೇಶಗಳ ೨೪ ಕಾಲೇಜುಗಳಿಗೆ ಸೇರಿದ ಸುಮಾರು ನೂರು ಮಂದಿ ವಿದ್ಯಾರ್ಥಿಗಳು ಇದರಲ್ಲಿ ಭಾಗವಹಿಸಿದ್ದರು. ಒಟ್ಟು ಐದುನೂರು ಪ್ರದರ್ಶನ ವಸ್ತುಗಳು ಬಂದಿದ್ದುವು. ಎಲ್ಲವೂ ಕಾಲೇಜುಗಳಲ್ಲಿ ವ್ಯಾಸಂಗಮಾಡುತ್ತಾ ಪರೀಕ್ಷೆಗಳ ಹವ್ಯಾಸದಲ್ಲಿ ತೊಡಗಿರುವ ವಿದ್ಯಾರ್ಥಿ ವಿದ್ಯಾರ್ಥಿನಿಯರು ತಮ್ಮ ವಿರಾಮಕಾಲದಲ್ಲಿ ಮಾಡಿದ ವಸ್ತುಗಳು.

ಕಲಾವಸ್ತುಗಳ ಪ್ರದರ್ಶನದ ಜೊತೆಗೆ, ಮೈಸೂರು ಮೆಡಿಕಲ್ ಕಾಲೇಜಿನವರ ಸಹಾಯದಿಂದ ಒಂದು ಆರೋಗ್ಯ ಶಾಖೆಯನ್ನೂ, ಪ್ರೊಫೆಸರ್, ಡಾ|| ಎಂ. ವಿ.

ಗೋಪಾಲಸ್ವಾಮಿಯವರ ಸಹಾಯದಿಂದ ಮನಶ್ಶಾಸ್ತ್ರದ ಪ್ರಯೋಗ ಪ್ರದರ್ಶನ ಶಾಖೆಯನ್ನೂ ತೆರೆಯಲಾಗಿತ್ತು. ಇವುಗಳ ಜೊತೆಗೆ ಕಾಲೇಜಿನ ವಿದ್ಯಾರ್ಥಿಗಳಿಗೆ ಅನ್ವಯಿಸುವ ಹಾಗೆ ದೇಹಸೌಂದರ್ಯ ಸ್ಪರ್ಧೆಯೊಂದು ನಡೆಯಿತು.

ಇಂಡಿಯಾ ಸರ್ಕಾರದ ವಾಣಿಜ್ಯ ಮತ್ತು ಕೈಗಾರಿಕೆಯ ಮಂತ್ರಿಗಳಾದ ದಿವಾನ್ ಬಹದ್ದೂರ್ ಸರ್ ಎ. ರಾಮಸ್ವಾಮಿ ಮೊದಲಿಯಾರ್ ಅವರು ಪ್ರದರ್ಶನದ ಪ್ರಾರಂಭೋತ್ಸವವನ್ನು ನೆರವೇರಿಸಿದರು. ಪ್ರದರ್ಶನವನ್ನು ಆರು ದಿನಗಳು ತೆರೆಯಲಾಗಿತ್ತು. ಪ್ರತಿದಿನವೂ ಸಂಜೆ ನಾಗಸ್ವರ, ಸಂಗೀತ ಮೊದಲಾದುವುಗಳನ್ನು ಏರ್ಪಡಿಸಲಾಗಿತ್ತು. ಸುಮಾರು ನಾಲ್ಕುಸಾವಿರ ಮಂದಿ ಪ್ರೇಕ್ಷಕರು ಪ್ರದರ್ಶನವನ್ನು ನೋಡಿ ಸಂತೋಷಿಸಿದರೆಂದು ಊಹಿಸಲಾಗಿದೆ. ನಮ್ಮ ವಿಶ್ವವಿದ್ಯಾನಿಲಯದ ವೈಸ್ ಛಾನ್ಸಲರವರಾದ ರಾಜಕಾರ್ಯಪ್ರವೀಣ, ಶ್ರೀಮಾನ್ ಎನ್. ಎಸ್. ಸುಬ್ಬರಾಯರವರು ಪ್ರದರ್ಶನದ ನಾನಾ ಶಾಖೆಗಳಲ್ಲಿ ಜಯಶೀಲರಾದ ಸುಮಾರು ನಲವತ್ತು ಮಂದಿ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಬೆಳ್ಳಿ ಬಟ್ಟಲುಗಳನ್ನೂ, ಬಹುಮಾನ ಪತ್ರಗಳನ್ನೂ ಹಂಚಿದರು. ಒಟ್ಟಿನಲ್ಲಿ ಪ್ರದರ್ಶನವು ಯಶಸ್ವಿಯಾಗಿ ನಡೆಯಿತು.

ಮೈಸೂರು ಕಲೆಗೆ ಬೀಡು. ಇಲ್ಲಿ ಅನೇಕ ಕಲಾವಿದರು ಹುಟ್ಟಿ ಬೆಳೆದು ದೇಶಕ್ಕೆ ಕೀರ್ತಿಯನ್ನು ತಂದಿದ್ದಾರೆ ತರುತ್ತಿದ್ದಾರೆ. ಇಂತಹ ಕಲಾವಿದರಿಗೆ ಯಾತ್ರಾಸ್ಥಳದಂತಿರುವ ಮೈಸೂರಲ್ಲಿ, ಅದರಲ್ಲೂ ವಿಶ್ವವಿದ್ಯಾನಿಲಯದಲ್ಲಿ, ಕಾಲೇಜಿನಲ್ಲಿ ವ್ಯಾಸಂಗಮಾಡುವವರಿಗಾಗಿಯೇ ಮೀಸಲಾದ ಇಂತಹ "ಅಖಿಲ ಭಾರತ ವಿಶ್ವವಿದ್ಯಾನಿಲಯ ಕಲಾವಸ್ತು ಪ್ರದರ್ಶನ"ವನ್ನು ನಡೆಸಿದುದರ ಔಚಿತ್ಯವನ್ನು ಕುರಿತು ಬೇರೆ ಹೇಳಬೇಕಾಗಿಲ್ಲ.

ಇಂತಹ ಪ್ರದರ್ಶನಗಳು, ಕುಶಲಕಲೆಗಳ ಕೈಗಾರಿಕೆಗಳ ಮತ್ತು ವೈಜ್ಞಾನಿಕ ಪ್ರಯೋಗಗಳ ಹವ್ಯಾಸಗಳಲ್ಲಿ ತೊಡಗಿರುವ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಉತ್ತೇಜನವನ್ನು ಕೊಟ್ಟು, ಅವುಗಳಲ್ಲಿನ ಆಸಕ್ತಿಯನ್ನು ಹೆಚ್ಚಿಸಿ, ಅದರಿಂದ ಅವರಿಗೂ ದೇಶಕ್ಕೂ ಒಳ್ಳೆಯದಾಗುವಂತೆ ಮಾಡುವುದು; ವಿದ್ಯಾರ್ಥಿಗಳ ಇಂತಹ ಕೆಲಸಗಳನ್ನು ಹಿರಿಯರು ನಾಲ್ಕು ಜನ ನೋಡಿ ಸಂತೋಷಪಟ್ಟು ಅವರನ್ನು ಹರಸಲು ಒಂದು ಅವಕಾಶವನ್ನು ಕಲ್ಪಿಸಿಕೊಡುವುದು: ಇವೇ ಪ್ರದರ್ಶನದ ವ್ಯವಸ್ಥಾಪಕರ ಆಶೆ. ಈ ಆಶೆಯು ಈ ಸಲ ನಡೆದ ಪ್ರದರ್ಶನದಿಂದ ಸ್ವಲ್ಪ ಮಟ್ಟಿಗೆ ಈಡೇರಿತೆನ್ನುವುದರಲ್ಲಿ ಸಂದೇಹವಿಲ್ಲ. ಇಂತಹ ಪ್ರದರ್ಶನಗಳು ಪ್ರತಿವರ್ಷವೂ ನಡೆದು ಇನ್ನೂ ಹೆಚ್ಚು ಫಲಕಾರಿಯಾಗಲೆಂದು ಹಾರೈಸುತ್ತೇನೆ.

ಎಂ. ಪಿ. ಎಲ್. ಶಾಸ್ತ್ರಿ,
ಕಾರ್ಯದರ್ಶಿ, ಪ್ರದರ್ಶನ ಸಮಿತಿ.





ವಿಶ್ವವಿದ್ಯಾನಿಲಯ ಕಲಾವಸ್ತು ಪ್ರದರ್ಶನ

ನಟರಾಜನ ಮತ್ತು ಬುದ್ಧನ ವಿಗ್ರಹಗಳು

# ಎಕ್ಸ್ ರೇ ಅಥವಾ ರಾಂಟ್‌ಜನ್ ಕಿರಣಗಳು

## (X Rays)

### (೧) ಚರಿತ್ರೆ

**ಪ್ರವೇಶ.**—ರಾಂಟ್‌ಜನ್ ಎಂಬಾತನು ಬವೇರಿಯ ದೇಶಕ್ಕೆ ಸೇರಿದ ವುರ್ಸ್‌ಬರ್ಗ್ ಪಟ್ಟಣದ ಒಬ್ಬ ಪ್ರಸಿದ್ಧ ವಿಜ್ಞಾನಿ. ೧೮೯೫ರಲ್ಲಿ ಇವನು ವಿದ್ಯುಚ್ಛಕ್ತಿಯ ವಿಷಯದಲ್ಲಿ ಒಂದು ಸಂಶೋಧನೆಯನ್ನು ನಡೆಸುತ್ತಿದ್ದನು. ವಿದ್ಯುಚ್ಛಕ್ತಿಯ ವಿಷಯವನ್ನು ತಿಳಿದಿರುವವರು ಕ್ರುಕ್ಸ್ ಕೊಳಬೆಯ ಉಪಯೋಗವನ್ನು ಬಲ್ಲರು.




**ಕ್ರುಕ್ಸ್ ಕೊಳಬೆ**

ರಾಂಟ್‌ಜನ್ನನಿಗೆ ಮೊದಲು ಎಕ್ಸ್ ರೇ ಗೋಚರಿಸಿದ ವಾಯುರಹಿತವಾದ ಕೊಳಬೆ (೧೮೯೫)

ಇದು ಒಂದು ಗಾಜಿನ ಕೊಳವೆ. ಅದರ ಒಳಗಿರುವ ಗಾಳಿಯನ್ನೆಲ್ಲಾ ತೆಗೆದು ಅಲ್ಪಸ್ವಲ್ಪ ಮಾತ್ರ ಬಿಟ್ಟಿರುತ್ತಾರೆ. ಎರಡು ಕೊನೆಗಳಿಗೂ ವಿದ್ಯುತ್ ಧ್ರುವಗಳನ್ನು ಜಂಟಿಸಲು ಅಣಿಮಾಡಿರುತ್ತಾರೆ. ಅನಿಲಗಳ ಮೂಲಕ ವಿದ್ಯುಚ್ಛಕ್ತಿಯು ಪ್ರವಹಿಸುವುದಿಲ್ಲ. ಆದರೆ ಕ್ರುಕ್ಸ್ ಕೊಳಬೆಯೊಳಗೆ ವಾಯುವಿನ ಒತ್ತಡವು ಬಹಳ ಕಡಮೆ. ಇದರ ಕೊನೆಗಳಿಗೆ ವಿದ್ಯುದುತ್ಪತ್ತಿಯಂತ್ರದ ಎರಡು ಧ್ರುವಗಳನ್ನು ಸೇರಿಸಿದರೆ ಋಣ ಧ್ರುವದಿಂದ ಒಂದು ವಿಧವಾದ ಕಿಡಿಯು ಹೊರಟು ಧನಧ್ರುವಕ್ಕೆ ಧುಮುಕುತ್ತದೆ.

ಇದಕ್ಕೆ ಕ್ಯಾಥೋಡ್ ಕಿರಣಗಳೆಂದು ಹೆಸರು. ಹತ್ತಾರು ವರ್ಷಗಳಿಂದ ವೈಜ್ಞಾನಿಕರು ಈ ಕಿರಣಗಳ ಪರೀಕ್ಷೆಯಲ್ಲಿ ನಿರತರಾಗಿದ್ದರು. ಇಂಥವರ ಪೈಕಿ ರಾಂಟ್‌ಜನ್ನನೂ ಒಬ್ಬ. ೧೮೯೫ರ ಅಂತ್ಯಭಾಗದಲ್ಲಿ ಒಂದು ದಿನ ಈ ಪರೀಕ್ಷೆಯನ್ನು ನಡೆಸುತ್ತಿದ್ದಾಗ ಧನಧ್ರುವದಿಂದ ಸ್ವಲ್ಪ ದೂರದಲ್ಲಿದ್ದ ಬೇರಿಯಂ ಪ್ಲಾಟಿನೋ ಸಯನೈಡ್ ಎಂಬ ಉಪ್ಪಿನ ಹರಳುಗಳು ಪ್ರಕಾಶಿಸುವುದನ್ನು ಇವನು ಕಂಡನು. ವಿದ್ಯುಚ್ಛಕ್ತಿಯನ್ನು ನಿಲ್ಲಿಸಲು, ಇವುಗಳ ಪ್ರಕಾಶವೂ ನಿಂತಿತು. ಕೊಳವೆಯೊಳಗಿನ ಕಿಡಿಯು ಇವುಗಳನ್ನು ಬೆಳಗಿಸುವುದೆಂಬ ಸಂಶಯ ಹುಟ್ಟಿ ಕೊಳವೆಯ ಸುತ್ತ ಕರಿಯ ತೆರೆಯನ್ನು ಸುತ್ತಿ ಒಳಗಿನ ಬೆಳಕು ಹೊರಗೆ ಬರದಂತೆ ತಡೆದನು. ಆದರೂ ಈ ಹರಳುಗಳು ಅದೇರೀತಿ ಪ್ರಕಾಶಿಸಿದವು. ರಾಂಟ್‌ಜನ್ನನು ಆಶ್ಚರ್ಯಚಕಿತನಾದನು. ಸಾಮಾನ್ಯ ಬೆಳಕು ಹೊಗಲಾರದ ಕರಿಯ ಕಾಗದದ ಮೂಲಕ ಈ ಹೊಸ ಶಕ್ತಿಯು ನುಸಿದರೆ, ಅದನ್ನು ತಡೆಯುವ ಮರ, ಲೋಹ ಮುಂತಾದವುಗಳ ಮೂಲಕ ಅದೇರೀತಿ ಈ ಶಕ್ತಿಯು ಪ್ರವೇಶಿಸಬಲ್ಲದೋ? ಇವನ ಕುತೂಹಲವು ತುಟ್ಟತುದಿಗೇರಿತು. ಧನಧ್ರುವಕ್ಕೂ ಹರಳುಗಳಿಗೂ ಮಧ್ಯೆ ವಿವಿಧ ಪದಾರ್ಥಗಳ ತಗಡುಗಳನ್ನಿಟ್ಟು ಪರೀಕ್ಷಿಸತೊಡಗಿದನು. ಈ ಶಕ್ತಿಯು ನಿರಾಯಾಸವಾಗಿ ಎಲ್ಲವನ್ನೂ ಭೇದಿಸಿತು. ಸ್ವಲ್ಪ ದಪ್ಪನಾದ ತಗಡುಗಳನ್ನಿಟ್ಟು ಪರೀಕ್ಷಿಸುತ್ತಾ, ೧/೨೧ ಅಂಗುಲ ದಪ್ಪವುಳ್ಳ ಸೀಸದ ತಗಡಿನ ಮೂಲಕ ಇದು ಪ್ರವೇಶಿಸಲಾರದೆಂದು ಕಂಡು ಹಿಡಿದನು. ಈ ಹೊಸ ಶಕ್ತಿಯ ಸ್ವರೂಪವನ್ನು ಸರಿಯಾಗಿ ವರ್ಣಿಸಲಾರದೆ ಇದನ್ನು ಎಕ್ಸ್ ರೇ ಎಂದು ಕರೆದು ಇದರ ಮಹಿಮೆಯನ್ನು ತನ್ನ ಒಡನಾಡಿಗಳಿಗೆ ತಿಳಿಸಿದನು. ಬೆಳಕು ಹೋಗದ ವಸ್ತುಗಳ ಮೂಲಕ ನುಗ್ಗುವುದು ಈ ಕಿರಣಗಳ ಗುಣಗಳಲ್ಲಿ ಒಂದು. ಇದರಿಂದಲೇ ಇವರ ಇರವು ಮೊದಲು ರಾಂಟ್‌ಜನ್ನನಿಗೂ, ಅವನಿಂದ ಇತರರಿಗೂ ತಿಳಿದದ್ದು.

**ಮೊದಲ ಕೌತುಕ.**—ಈ ಹೊಸ ಕಿರಣದ ವಿಷಯವನ್ನು ಕೇಳಿ ವೈಜ್ಞಾನಿಕರೆಲ್ಲರೂ ಮುಗ್ಧರಾದರು. ೧೮೭೫ರಿಂದ ಅನೇಕ ವೈಜ್ಞಾನಿಕರು ವಾಯುರಹಿತವಾದ ಕೊಳವೆಯ ಮೂಲಕ ವಿದ್ಯುತ್ಪ್ರವಾಹವನ್ನು ಹರಿಸಿ ಪರೀಕ್ಷೆ ನಡೆಸುತ್ತಿದ್ದರು. ಈ ಸಂದರ್ಭಗಳಲ್ಲೆಲ್ಲ ಎಕ್ಸ್ ರೇಗಳೂ ತಯಾರಾಗಿರಬೇಕು. ಆದರೆ ಅವನ್ನು ಯಾರೂ ಗುರುತಿಸಲಾರದೆ ಹೋದರು. ಈ ಅದೃಷ್ಟವು ರಾಂಟ್‌ಜನ್ನಿಗೆ ಸೇರಿತ್ತು. ಅವನು ಈ ವಿಷಯವಾಗಿ ಬರೆದು ಓದಿದ ಮೊದಲನೆಯ ಪ್ರಬಂಧದಲ್ಲಿ ಈ ಕಿರಣಗಳ ಶಕ್ತಿಯನ್ನು ಸ್ವಲ್ಪಮಟ್ಟಿಗೆ ವಿವರಿಸಿದ್ದನು. ಪದಾರ್ಥಗಳ ಸಾಂದ್ರತೆಗೆ (Density) ತಕ್ಕಂತೆ ಇವು ಅವುಗಳ ಮೂಲಕ ಪ್ರವೇಶಿಸುತ್ತವೆ. ಮರ ಉಕ್ಕಿಗಿಂತ, ಉಕ್ಕು



ವಿಲ್ಹೆಲ್ಮ್ ಕಾನ್ರಾಡ್ ರಾಂಟ್‌ಜನ್ (೧೮೪೫-೧೯೨೩)
(ಪಡಿಯಚ್ಚು ಶ್ರೀಮಾನ್ ಯು. ರಾಘವೇಂದ್ರಾಚಾರ್ಯರು
ದಯೆಯಿಟ್ಟು ಕೊಟ್ಟದ್ದು)



೧. ತಲೆ ಮತ್ತು ಮುಖದ ಎಕ್ಸ್‌ರೇ ಚಿತ್ರ



೨. ಕಾಲಿನ ಎಕ್ಸ್‌ರೇ ಚಿತ್ರ

(ಪಡಿಯಚ್ಚುಗಳು ಶ್ರೀಮಾರ್ನ ಯು. ರಾಘವೇಂದ್ರಾಚಾರ್ಯರು ದಯೆಯಿಟ್ಟು ಕೊಟ್ಟವು)

ಸೀಸಕ್ಕಿಂತ ಸಾಂದ್ರತೆಯಲ್ಲಿ ಕಡಮೆ. ಈ ಕಿರಣಗಳು ಸೀಸಕ್ಕಿಂತ ಆಳವಾಗಿ ಉಕ್ಕಿನ ಒಳಕ್ಕೂ, ಉಕ್ಕಿಗಿಂತ ಹೆಚ್ಚಾಗಿ ಮರದ ಒಳಕ್ಕೂ ಪ್ರವೇಶಿಸಬಲ್ಲದು. ಕುತೂಹಲದಿಂದ ತನ್ನ ಕೈಯನ್ನು ಅವುಗಳ ಪಥದಲ್ಲಿಡಲು ಹಿಂದೆ ಸರಿಯಾಗಿ ಅಣಿ ಮಾಡಿಟ್ಟಿದ್ದ ಒಂದು ತೆರೆಯ ಮೇಲೆ ನೆರಳು ಬಿತ್ತು; ಕೈಯಿನ ನೆರಳಲ್ಲ—ಕೈ ಒಳಗಿನ ಮೂಳೆಗಳ ನೆರಳು. ರಾಂಟ್‌ಜನ್ನನಿಗೆ ಮೊದಲು ಗಾಬರಿಯಾಯಿತು. ಅನಂತರ ಆಶ್ಚರ್ಯ ಸಂತೋಷಗಳು ಉಕ್ಕಿದುವು; ದೇಹದ ಒಳರಚನೆಯನ್ನು ಪರೀಕ್ಷಿಸಲು ಇದು ಅತ್ಯುತ್ತಮವಾದ ಸಹಕಾರಿಯೆಂದು ಕೂಡಲೆ ಕಂಡನು. ಈ ವಿಷಯಗಳೆಲ್ಲ ವನ್ನೂ ತನ್ನ ಮೊದಲನೆಯ ಪ್ರಬಂಧದಲ್ಲಿಯೇ ವರ್ಣಿಸಿದ್ದನು. ಈ ಸುದ್ದಿಯು ಅಮೆರಿಕ ದೇಶವನ್ನು ಮುಟ್ಟಿತು. ಈ ಸುದ್ದಿ ತಿಳಿದ ನಾಲ್ಕನೆಯ ದಿನವೇ ಒಬ್ಬ ವೈದ್ಯನು ಚಿಕಿತ್ಸೆಗಾಗಿ ಬಂದಿದ್ದ ಒಬ್ಬ ರೋಗಿಯ ಮುಂಗಾಲಿನ ಮೂಲಕ ಈ ಕಿರಣಗಳನ್ನು ಬಿಟ್ಟು ಒಳಗಿದ್ದ ಒಂದು ಗುಂಡನ್ನು (bullet) ಪತ್ತೆ ಹಿಡಿದನು. ಗಾಯವಾಗಿದ್ದ ಸ್ಥಳದಿಂದ ಗುಂಡು ಐದು ಅಂಗುಲ ಒಳಹೊಕ್ಕಿತ್ತು. ಇದು ಇದ್ದ ಸ್ಥಳವು ತಿಳಿಯದಿದ್ದರೆ ಆ ಭಾಗದ ಕಾಲನ್ನೆಲ್ಲ ಕೊಯ್ದು ಪರೀಕ್ಷಿಸಬೇಕಾಗಿತ್ತು. ಸರಿಯಾದ ಸ್ಥಳವು ತಿಳಿದದ್ದರಿಂದ ಆ ಭಾಗಕ್ಕೆ ಸರಿಯಾಗಿ ಎರಡಂಗುಲ ಆಳ ಮಾತ್ರ ಕತ್ತರಿಸಿ ಗುಂಡನ್ನು ಹೊರಕ್ಕೆ ತೆಗೆಯಲು ಸಾಧ್ಯವಾಯಿತು. ಹೆಚ್ಚು ಶ್ರಮವಿಲ್ಲದೆ ರೋಗಿಯು ಗುಣಹೊಂದಿದನು. ವೈದ್ಯರೆಲ್ಲರೂ ಈ ಕಿರಣಗಳ ಸಹಾಯವನ್ನು ಮನಗಂಡು ಈ ಹೊಸ ಸಾಧನವನ್ನೊದಗಿಸಿದ ರಾಂಟ್‌ಜನ್ನನನ್ನು ಕೊಂಡಾಡಿದರು. ಜರ್ಮನಿ ರಾಜ್ಯದ ಚಕ್ರವರ್ತಿಯು ಇವನನ್ನು ವಿಶೇಷವಾಗಿ ಸನ್ಮಾನಿಸಿದನು. ಈ ಕಿರಣಗಳ ಪರೀಕ್ಷೆಗಾಗಿ ಒಂದು ಗೋಷ್ಠಿಯನ್ನೇರ್ಪಡಿಸಿದನು. ಸದಸ್ಯರ ಪೈಕಿ ಕೆಲವರು ಈ ಕಿರಣಗಳ ಸಹಾಯದಿಂದ ಯುದ್ಧ ಸಾಮಗ್ರಿಗಳನ್ನು ಪರೀಕ್ಷಿಸುವ ರೀತಿಯನ್ನು ತೋರಿಸಿಕೊಟ್ಟರು. ಒಬ್ಬರು ಮುರಿದುಹೋಗಿದ್ದ ಮೂಳೆಯು ಯಾವ ರೀತಿ ಬೆಳೆಯುತ್ತದೆ ಎನ್ನುವುದನ್ನು ಘಂಟೆಘಂಟೆಗೂ ಪರೀಕ್ಷಿಸಿ ತಕ್ಕ ಚಿತ್ರಗಳನ್ನು ತೆಗೆದು ಜನಗಳಿಗೆ ವಿಶದಪಡಿಸಿದರು.

**ಸ್ವರೂಪ ಪರೀಕ್ಷೆ.**—ಈ ಕಿರಣಗಳ ಉಪಯೋಗವು ಎಲ್ಲರಿಗೂ ಆಶ್ಚರ್ಯ ವನ್ನುಂಟುಮಾಡಿತು. ಅವರು ಕುತೂಹಲಭರಿತರಾಗಿ ಇದರ ಹೊಸ ಉಪಯೋಗ ಗಳನ್ನು ಬಿದಕಲಾರಂಭಿಸಿದರು. ಆದರೆ ಅನೇಕ ವೈಜ್ಞಾನಿಕರಿಗೆ ಈ ಬಗೆಯ ಕುತೂಹಲವುಂಟಾಗಲಿಲ್ಲ. ಈ ಕಿರಣಗಳ ಉಪಯೋಗವು ಅವರನ್ನು ದಣಿಸಿದರೂ, ಈ ಕಿರಣಗಳಾವುವು? ಇವುಗಳ ಉತ್ಪತ್ತಿಗೆ ಕಾರಣವೇನು? ಇವನ್ನು ಏಕೆ ನೋಡಲಾಗುವುದಿಲ್ಲ?—ಇವೇ ಮೊದಲಾದ ಪ್ರಶ್ನೆಗಳು ಮುತ್ತಿಗೆ ಹಾಕಿ ಅವರ

ಮನಸ್ಸನ್ನು ಕಲಕಿ ರೇಗಿಸಿ ಅವರ ನಿದ್ರೆಯನ್ನಪಹರಿಸಿದುವು. ರಾಂಟ್‌ಜನ್ನನು ಮೊಟ್ಟಮೊದಲು ಓದಿದ ಲೇಖನದಲ್ಲಿಯೇ ಈ ಕಿರಣಗಳೂ ಬೆಳಕಿನ ಜಾತಿಗೆ ಸೇರಿದ ಒಂದು ವಿಭೇದವೆಂದೂ, ಬೆಳಕಿನಂತೆಯೇ ತರಂಗಗಳಾಗಿದ್ದು ಚಲಿಸುತ್ತವೆಯೆಂದೂ ವರ್ಣಿಸಿದ್ದನು. ಆ ಜಾತಿಗೆ ಸೇರಿದ್ದರೆ ಬೆಳಕಿನ ಕಿರಣಗಳಂತೆ ಇವೂ ಕನ್ನಡಿಯಲ್ಲಿ ಪ್ರತಿಬಿಂಬಿಸಬೇಕು; ವಿಭಜನ ಜಾಲರಿಯ (Diffraction Grating) ಮೂಲಕ ಹಾಯಿಸಿದಾಗ ಬೇರ್ಪಡಬೇಕು. ಬೆಳಕಿನಲ್ಲಿ ಕಾಣುವುದು ಈ ಎರಡು ಮುಖ್ಯ ಲಕ್ಷಣಗಳು. ಈ ನೂತನ ಕಿರಣಗಳಲ್ಲಿ ಇವೊಂದೂ ಕಂಡುಬರಲಿಲ್ಲ. ರಾಂಟ್‌ಜನ್ನಿನ ವಿವರಣೆಯು ವೈಜ್ಞಾನಿಕರನ್ನು ತೃಪ್ತಿಪಡಿಸಲಿಲ್ಲ. ಈ ಸಮಸ್ಯೆಯು ಪರಿಹಾರವಾದಲ್ಲದೆ ಭೌತಶಾಸ್ತ್ರವು ಮುನ್ನಡೆಯಲಾರದು. ಇದನ್ನು ಬಿಡಿಸದಿರುವುದು ತಮಗೆ ಒಂದು ಅಪಕೀರ್ತಿ. ಈ ವಿಧವಾದ ಬಿಸನಗಳು ವಿಜ್ಞಾನ ಪ್ರಪಂಚವನ್ನು ಸುಮಾರು ಇಪ್ಪತ್ತು ವರ್ಷ ಕಾಲ ಕಲಕಿದುವು.

ಸರ್ ಜೆ. ಜೆ. ಥಾಮ್‌ಸನ್ನರವರು ಈ ಕಿರಣಗಳ ಕೆಲವು ಹೊಸ ಗುಣಗಳನ್ನು ಕಂಡುಹಿಡಿದರು. ವಿದ್ಯುಚ್ಛಕ್ತಿಯು ಹಾಯದ ಅನಿಲಗಳು ಇವುಗಳ ಪ್ರಚೋದನೆಯಿಂದ ವಿದ್ಯುತ್ಪ್ರವಾಹಕಗಳಾಗುತ್ತವೆಯೆಂದು ತೋರಿಸಿದರು. ಈ ರೀತಿ ಪರಿಶೋಧನೆ ನಡೆಸುತ್ತಾ ಪದಾರ್ಥಗಳ ಸ್ವರೂಪವನ್ನು ಪರೀಕ್ಷಿಸಲಾರಂಭಿಸಿ ಈ ವಿಷಯದಲ್ಲಿ ಮೆಚ್ಚಿಗೆಯನ್ನು ಪಡೆದಿದ್ದ ಅನೇಕ ಅಭಿಪ್ರಾಯಗಳು ಆಧಾರರಹಿತವಾದವೆಂದು ತೋರಿಸಿದರು.

ಪದಾರ್ಥಗಳ ರಚನೆಯ ವಿಷಯದಲ್ಲಿ ವೈಜ್ಞಾನಿಕರಿಗಿದ್ದ ಅಭಿಪ್ರಾಯವನ್ನು ಸ್ವಲ್ಪ ವಿವರಿಸೋಣ: ವಸ್ತುಗಳನ್ನು ವಿಭಜಿಸುತ್ತಾ ಹೋದರೆ ಅವುಗಳಿಗೆ ಮೂಲವಾದ ಅಣುಗಳು ಉಳಿಯುತ್ತವೆ. ನಾವು ತಿನ್ನುವ ಉಪ್ಪಿನ ಅಣುವನ್ನು ತೆಗೆದುಕೊಳ್ಳೋಣ. ವಿದ್ಯುಚ್ಛಕ್ತಿಯ ಸಹಾಯದಿಂದ ಅದನ್ನು ವಿಭಜಿಸಿದರೆ ಎರಡು ಪದಾರ್ಥಗಳು ಸೇರಿ ಉಪ್ಪು ಆಗಿದೆಯೆಂದು ತಿಳಿಯುತ್ತದೆ. ಇವು ಯಾವುವೆಂದರೆ ಸೋಡಿಯಂ ಮತ್ತು ಕ್ಲೋರೈನ್. ಉಪ್ಪಿನ ಕನಿಷ್ಠಾಂಶ ಅದರ ಅಣು. ಈ ಅಣುವನ್ನು ಕಷ್ಟಪಟ್ಟು ವಿಭಜಿಸಿ ಪರೀಕ್ಷಿಸಿದರೆ ಸೋಡಿಯಮಿನ ಪರಮಾಣುವೂ, ಕ್ಲೋರೈನಿನ ಪರಮಾಣುವೂ ಸೇರಿ ಇದು ರೂಪ ಹೊಂದಿದೆಯೆಂದು ತಿಳಿಯುತ್ತದೆ. ಈ ಪರಮಾಣುವಿಗಿಂತಲೂ ಕನಿಷ್ಠರೂಪವಿಲ್ಲ. ಏಕೆಂದರೆ ಅವುಗಳನ್ನು ವಿಭಜಿಸಲಾಗುವುದಿಲ್ಲ. ಪ್ರಪಂಚದಲ್ಲಿರುವ ಪ್ರತಿಯೊಂದು ವಸ್ತುವೂ ಇಂಥ ಪರಮಾಣುಗಳ ಸಂಘಟನೆಯಿಂದಾದದ್ದು. ಸಕಲ ವಸ್ತುಗಳಿಗೂ ಈ ಪರಮಾಣುಗಳೇ ಮೂಲ. ಇವುಗಳಲ್ಲಿ ಸುಮಾರು ತೊಂಬತ್ತೆರಡು ಜಾತಿಗಳಿವೆ—ಚಿನ್ನದ ಪರಮಾಣು, ಕಬ್ಬಿಣದ ಪರಮಾಣು, ಇಂಗಾಲದ ಪರಮಾಣು,

ಜಲಜನಕದ ಪರಮಾಣು ಇತ್ಯಾದಿ. ಒಂದು ಪರಮಾಣುವಿಗೂ ಇನ್ನೊಂದಕ್ಕೂ ಎಷ್ಟೋ ವ್ಯತ್ಯಾಸವಿದೆ. ಒಂದೊಂದಕ್ಕೂ ಕೆಲವು ಬೇರೆ ಬೇರೆ ಗುಣಗಳಿವೆ. ಈ ಗುಣಗಳನ್ನು ಬದಲಾಯಿಸುವುದಾಗಲಿ, ಅಥವಾ ಒಂದು ಪರಮಾಣುವಿನಿಂದ ಮತ್ತೊಂದು ಪರಮಾಣುವನ್ನು ತಯಾರಿಸುವುದಾಗಲಿ ಸಾಧ್ಯವಿಲ್ಲ. ಈ ಪರಮಾಣುಗಳು ವಿವಿಧ ರೀತಿಯಲ್ಲಿ ವಿವಿಧ ಪ್ರಮಾಣದಲ್ಲಿ ಸೇರುವುದರಿಂದಲೇ ವಿಶ್ವದಲ್ಲಿರುವ ಕಲ್ಲು ಮಣ್ಣು, ಗಿಡ ಮರ, ಕ್ರಿಮಿ ಕೀಟ, ಪಶು ಪಕ್ಷಿ, ನರ ವಾನರ, ಮುಂತಾದ ಲಕ್ಷೋಪಲಕ್ಷ ಭೇದಗಳುಂಟಾಗಿರುವುದು.

ಒಂದೆರಡು ಶತಮಾನಗಳಿಂದಲೂ ಬೇರೂರಿಕೊಂಡಿದ್ದ ಈ ಅಭಿಪ್ರಾಯ ಸರಣಿಯು ಥಾಮ್‌ಸನ್‌ರವರ ಅದ್ಭುತಪ್ರಯೋಗಗಳ ಪರೀಕ್ಷೆಯನ್ನು ತಾಳಲಾರದೆ ಹೋಯಿತು. ಥಾಮ್‌ಸನ್‌ರವರು ಪ್ರಾರಂಭಿಸಿದ್ದ ಕೆಲಸವನ್ನು ರದರ್‌ಫರ್ಡ್ ಮತ್ತು ಬೋರ್‌ರವರು ಸಾಂಗಗೊಳಿಸಿದರು. ತೀಕ್ಷ್ಣವಾದ ವಿದ್ಯುಚ್ಛಕ್ತಿಯ ಸಹಾಯದಿಂದ ಈ ಪರಮಾಣುಗಳ ವಜ್ರಕಟ್ಟನ್ನು ಮುರಿದು ಒಳಹೊಕ್ಕು ಪರೀಕ್ಷಿಸಿ ಅವುಗಳ ನಿರ್ಮಾಣವನ್ನು ಈ ರೀತಿ ವಿವರಿಸಿದರು. ಪರಮಾಣುಗಳೆಲ್ಲವೂ ವಿದ್ಯುಚ್ಛಕ್ತಿಯ ಸ್ವರೂಪ. ಒಂದೊಂದು ಪರಮಾಣುವಿನ ಮಧ್ಯದಲ್ಲಿಯೂ ಸೂರ್ಯನಂತಿರುವ ಧನ ವಿದ್ಯುದಂಶವಿದೆ (nucleus of positive Charge). ಸುತ್ತಲೂ ಋಣವಿದ್ಯುದಂಶವುಳ್ಳ ವಿದ್ಯುತ್ಕಣಗಳು ಗ್ರಹಗಳಂತೆ ತಮ್ಮ ತಮ್ಮ ಪಥದಲ್ಲಿ ಸಂಚರಿಸುತ್ತವೆ. ಪ್ರತಿಯೊಂದು ಪರಮಾಣುವಿನಲ್ಲಿಯೂ ಧನವಿದ್ಯುದಂಶವು (Protons and Neutrons) ಮಧ್ಯದಲ್ಲಿ ಇರುತ್ತದೆ. ಸುತ್ತ ಸಂಚರಿಸುವ ವಿದ್ಯುತ್ಕಣ (Electron)ಗಳ ಸಂಖ್ಯೆಯಲ್ಲಿ ಮಾತ್ರ ವ್ಯತ್ಯಾಸವಿರುತ್ತದೆ. ಆದರೆ ಅವುಗಳ ಒಟ್ಟು ಪರಿಮಾಣವು ಧನವಿದ್ಯುದಂಶದ ಪರಿಮಾಣದಷ್ಟೇ ಇರುತ್ತದೆ. ಜಲಜನಕದಲ್ಲಿ ಈ ರೀತಿಯ ಒಂದು ಕಣವಿದೆ. ಆಮ್ಲಜನಕದಲ್ಲಿ ಎಂಟಿವೆ, ಬಂಗಾರದಲ್ಲಿ ಎಪತ್ತೊಂಬತ್ತಿವೆ. ಯುರೇನಿಯಂನಲ್ಲಿ ತೊಂಬತ್ತೆರಡಿವೆ. ಆದುದರಿಂದ ಮೂಲ ಪದಾರ್ಥಗಳಿಗಿರುವ ಗುಣಭೇದಗಳಿಗೆ ಕಾರಣ ಈ ವಿದ್ಯುತ್ಕಣಗಳು ಮತ್ತು ಅವುಗಳು ವಿವಿಧಪ್ರಮಾಣದಲ್ಲಿ ಸೇರಿಕೊಳ್ಳುವುದು.

**ಫಾನ್‌ಲಾವೆಯ ಸಲಹೆ; ಸಮಸ್ಯೆಯ ಪರಿಹಾರ**—ಭೌತಶಾಸ್ತ್ರದ ಮೂಲತತ್ವಗಳೆಲ್ಲವೂ ಕಳಚಿಕೊಂಡರೂ ಎಕ್ಸ್‌ರೇ ಸಮಸ್ಯೆಯು ಪರಿಹಾರವಾಗಲಿಲ್ಲ. ೧೯೧೨ನೆಯ ಇಸವಿಯಲ್ಲಿ ಮ್ಯೂನಿಕ್ ನಗರದ ಫಾನ್‌ಲಾವೆ ಎಂಬ ಪ್ರಸಿದ್ಧ ವೈಜ್ಞಾನಿಕನು ಅನುಮಾನರೀತಿಯಲ್ಲಿ ಈ ವಿಷಯವನ್ನು ಪರೀಕ್ಷಿಸಿ ಕೆಲವು ಊಹೆಗಳನ್ನು ಪ್ರತಿಪಾದಿಸಿದನು. ಬೆಳಕಿನ ತರಂಗಗಳು ಒಂದು ಅಂಗುಲದಲ್ಲಿ ೩೦,೦೦೦ ದಿಂದ ೬೦,೦೦೦ದ ವರೆಗೂ ಇರುತ್ತವೆ. ವಿಭಜನ ಜಾಲರಿಗಳಲ್ಲಿ ಗುರುತಿಸಿರುವ

ಸಮಾನಾಂತರ ರೇಖೆಗಳೂ ಇದೇ ಪ್ರಮಾಣದಲ್ಲಿ ಅಂದರೆ ಅಂಗುಲಕ್ಕೆ ೨೦ ಅಥವಾ ೨೫ ಸಾವಿರದಷ್ಟಿರುತ್ತವೆ. ಒಂದು ಗೀಟಿಗೂ ಅದರ ಪಕ್ಕದ ಗೀಟಿಗೂ ಇರುವ ಅಂತರದಲ್ಲಿ ತಕ್ಕ ಅಳತೆಯ ಅಲೆಗಳು ಮಾತ್ರ ಅಂದರೆ ಬೆಳಕಿನ ಅಲೆಗಳು ಪ್ರತ್ಯೇಕ ವಾಗುತ್ತವೆ. ಆದರೆ ರಾಂಟ್‌ಜನ್ ಕಿರಣಗಳು ಬೆಳಕಿನ ಅಲೆಗಳಿಗಿಂತ ಬಹಳ ಚಿಕ್ಕವು. ಬೆಳಕಿನ ಅಲೆಗಳು ವಿಭಜನವಾಗುವ ಅಂತರದಲ್ಲಿ ಸಾವಿರಾರು ಎಕ್ಸ್‌ರೇ ಅಲೆಗಳು ಪ್ರವೇಶಿಸಬಲ್ಲವು. ಆದುದರಿಂದ ಅವು ಬೇರ್ಪಡುವುದಿಲ್ಲ. ಗೀಟುಗಳನ್ನು ಇನ್ನೂ ಬಹಳ ಸಮೀಪವಾಗಿ ಅಂದರೆ ಅಂಗುಲಕ್ಕೆ ಹತ್ತು ಕೋಟಿಯಂತೆ ಗುರುತುಮಾಡಲು ಸಾಧ್ಯವಾದರೆ ಅಂಥ ಜಾಲರಿಯಲ್ಲಿ ಅವನ್ನು ವಿಭಜಿಸಬಹುದು. ಈ ರೀತಿ ಗುರುತು ಮಾಡಲು ಸಾಧ್ಯವೆ? ಇಲ್ಲ, ಏಕೆಂದರೆ ಅಂಗುಲಕ್ಕೆ ೬೦,೦೦೦ಕ್ಕಿಂತ ಸಮೀಪ ವಾಗಿರುವ ಗುರುತುಗಳನ್ನು ನಮ್ಮ ಕಣ್ಣುಗಳು ನೋಡಲಾರವು. ಆದುದರಿಂದ ಕಣ್ಣು ಗಳಿಗೆ ಸಹಾಯಕಗಳಾದ ಸೂಕ್ಷ್ಮದರ್ಶಕಗಳೂ ನೋಡಲಾರವು. ಇನ್ನು ಇವನ್ನು ಗುರುತಿಸುವುದು ಹೇಗೆ? ಈ ಸಮಸ್ಯೆಯ ವಿಷಯವಾಗಿ ಯೋಚಿಸುತ್ತಿದ್ದಾಗ ಫಾನ್‌ಲಾವೆಗೆ ಒಂದು ವಿಚಿತ್ರ ಸ್ಫೂರ್ತಿಯು ಹೊಳೆಯಿತು. ನಮಗೆ ಸಾಧ್ಯವಿಲ್ಲದ್ದು ಪ್ರಕೃತಿಗೆ ಸಾಧ್ಯ. ಪ್ರಕೃತಿಯು ನಿರ್ಮಿಸುವ ಹರಳುಗಳಲ್ಲಿ ಪರಮಾಣುಗಳ ಸಾಲುಗಳು ಸ್ವಲ್ಪವೂ ಅಚ್ಚಳಿಯದ ಸಮಾನಾಂತರ ಕ್ರಮದಲ್ಲಿರುತ್ತವೆ. ಈ ಶ್ರೇಣಿಗಳಿಗಿರುವ ಅಂತರವು ಎಕ್ಸ್‌ಕಿರಣಗಳಷ್ಟೇ. ಈ ಅಂತರದಲ್ಲಿ ಎಕ್ಸ್‌ಕಿರಣಗಳನ್ನು ಹಾಯಿಸಿದರೆ ಅವು ಬೇರ್ಪಡಬೇಕು. ಅನುಮಾನಕ್ಕೆ ಬಗೆಹರಿದ ವಿಷಯವು ಪ್ರಯೋಗಪರೀಕ್ಷೆಯ ಕುಲುಮೆಯಲ್ಲಿ ನಿಂತು ಪರಿಪಕ್ವವಾಗದೆ ಮನ್ನಣೆಯನ್ನು ಪಡೆಯಲಾರದು. ಫಾನ್ ಲಾವೆಯ ಊಹೆಯಂತೆ ಪ್ರಯೋಗ ನಡೆಸಿದವರು ಫ್ರೆಡರಿಕ್ ಮತ್ತು ಕ್ನಿಪ್ಪಿಂಗ್ ಎಂಬ ವೈಜ್ಞಾನಿಕರು. ಅವರ ಪ್ರಯೋಗ ಫಲವಾಗಿ ಫಾನ್‌ಲಾವೆಯ ಊಹೆಯು ಸತ್ಯವಾದದ್ದೆಂದು ಪ್ರತಿಷ್ಠಿತವಾಯಿತು. ಎಕ್ಸ್‌ರೇಯೂ ಬೆಳಕಿನ ಜಾತಿಗೆ ಸೇರಿದ ಶಕ್ತಿಯ ಒಂದು ಸ್ವರೂಪವೆಂದು ಸ್ಪಷ್ಟವಾಯಿತು.

## (೨) ಎಕ್ಸ್‌ಕಿರಣಗಳ ಸ್ವರೂಪ ಮತ್ತು ಉತ್ಪತ್ತಿ

**ಅಲೆಗಳು—ಬೆಳಕು ಒಂದು ತರಂಗವಿಶೇಷ.**—ಈ ಕಿರಣಗಳ ಸ್ವರೂಪ ವನ್ನು ಕುರಿತು ಇನ್ನು ಸ್ವಲ್ಪ ಯೋಚಿಸೋಣ. ಇದನ್ನು ತಿಳಿಯಲು ವಿಶ್ವಶಕ್ತಿ ಮತ್ತು ಅಲೆಗಳ ವಿಷಯ ಸರಿಯಾಗಿ ತಿಳಿಯಬೇಕಾಗುತ್ತದೆ. ಗಾಳಿಯ ಸಂಚಾರ ವಿಲ್ಲದೆ, ತಿಳಿಯಾದ ಕೊಳದ ಮೇಲ್ಮೈ ಅಲುಗದಿರುವಾಗ, ಮೇಲೆ ಕಾಣುವ ಗಗನ ಮಂಡಲದ ವಿವಿಧವರ್ಣದ ಮೋಡಗಳೂ ಸುತ್ತಮುತ್ತಲ ಗಿಡಮರಗಳೂ ಅದರಲ್ಲಿ

ಪ್ರತಿಬಿಂಬಿತವಾಗಿ ಪ್ರಕೃತಿಯ ಚೆಂದವು ಇಮ್ಮಡಿಸಿದಂತೆ ಭ್ರಮೆಯಾಗುತ್ತದೆ. ಅಂಥ ಪಾತ್ರದಲ್ಲಿ ಒಂದು ಕಲ್ಲನ್ನು ಎಸೆದರೆ ಕೂಡಲೆ ತರಂಗಗಳು ಎದ್ದು ಸುತ್ತಲೂ ಹರಡಿಕೊಳ್ಳುತ್ತವೆ. ಮಧ್ಯೆ ಒಂದು ಚೂರು ಕಾಗದ ಅಥವಾ ಹುಲ್ಲುಕಡ್ಡಿ ಇದ್ದರೆ ಅದು ಅದೇ ಸ್ಥಳದಲ್ಲಿ ಮೇಲಕ್ಕೂ ಕೆಳಕ್ಕೂ ತೂಗಾಡುತ್ತಿರುತ್ತದೆ. ಮುಂದೆ ಮುಂದೆ ಹರಿದುಬರುವುದು ನೀರೇನು? ನೀರಾದರೆ ಅದರೊಡನೆ ಆ ಕಾಗದದ ಚೂರು ಅಥವಾ ಹುಲ್ಲುಕಡ್ಡಿಯೂ ನುಗ್ಗಿ ಬರಬೇಡವೆ? ಸ್ವಲ್ಪ ಯೋಚಿಸಿ ನೋಡಿದರೆ ಮುಂದೆ ಬರುವುದು ನೀರಲ್ಲವೆಂದು ಸ್ಪಷ್ಟವಾಗುತ್ತದೆ. ಹಾಗಾದರೆ ಹರಡಿಕೊಳ್ಳುವುದು ಯಾವುದು? ಕಲ್ಲನ್ನು ಎಸೆದ ಜೋರಿನಿಂದ ನೀರಿನಲ್ಲಿ ಉದ್ಭವಿಸಿದ ರೂಪಭೇದ. ಈ ರೂಪಭೇದವು (Disburbance) ಅಲೆಯರೂಪದಲ್ಲಿ ನೀರಿನ ಮೂಲಕ ಪ್ರಸರಿಸುತ್ತದೆ. ನೀರು ಶಕ್ತಿಯು ಈ ರೂಪವನ್ನು ಹರಡುವ ಒಂದು ವಾಹಕ, ಅದು ಶಕ್ತಿಯಲ್ಲ, ಅಲೆಯಲ್ಲ. ನೀರಿನಲ್ಲಿ ಒಂದು ಕಡೆ ನಾವು ನಿಂತಿದ್ದರೆ ದೂರದಲ್ಲಿ ಉತ್ಪನ್ನವಾದ ಈ ಅಲೆಯು ಮುಂದೆ ಬರುವುದನ್ನು ನೋಡಬಹುದು. ಅದು ನಮ್ಮ ಮೇಲೆ ಹೊಡೆದಾಗ ನಮ್ಮನ್ನೂ ಸ್ವಲ್ಪ ಅಳ್ಳಾಡಿಸಲು ಯತ್ನಿಸುವುದನ್ನು ಅನುಭವಿಸಬಹುದು. ಬೆಳಕೂ ಇದೇ ರೀತಿ ಶಕ್ತಿಯ ಒಂದು ತರಂಗವಿಶೇಷ. ಸಂಜೆ ಕಾರಂಜಿ ಕೆರೆಯ ಅಂಚಿನಲ್ಲಿ ಕುಳಿತು ತಣ್ಣನೆಯ ಗಾಳಿಯನ್ನು ಸವಿಯುತ್ತಾ, ಸುತ್ತಲಿರುವ ಹಚ್ಚನೆಯ ಮರಗಳ ಚೆಲುವನ್ನೂ, ನೀರಿನಲ್ಲಿ ಕಾಣುವ ನೀಲಾಕಾಶದ ಶುದ್ಧತೆಯನ್ನೂ, ಸೊಬಗನ್ನೂ ಸ್ವಾದಿಸುತ್ತಿರುತ್ತೇವೆ. ಕತ್ತಲು ಮೆಲ್ಲಮೆಲ್ಲನೆ ಎಲ್ಲವನ್ನೂ ಕವಿಯುತ್ತಿರುತ್ತದೆ. ಇದನ್ನು ಹೆಜ್ಜೆಹೆಜ್ಜೆಗೂ ಧಿಕ್ಕರಿಸುವ ವಿದ್ಯುಚ್ಛಕ್ತಿಯ ಸ್ವಚ್ಛ ಸೊಡರುಗಳು ಥಟಕ್ಕನೆ ಹತ್ತಿಕೊಳ್ಳುತ್ತವೆ. ನಾಲ್ಕು ಮೈಲಿಯಾಚೆ ಉರಿಯುವ ಚಾಮುಂಡಿ ದೇವಾಲಯದ ಗೋಪುರದ ಮೇಲಿನ ದಿವ್ಯದೀಪವೂ ನಮ್ಮ ಪಕ್ಕದಲ್ಲಿರುವ ದೀಪವೂ ಏಕಕಾಲದಲ್ಲಿ, ಅವು ಹತ್ತಿಕೊಂಡೊಡನೆ, ನಮಗೆ ಕಾಣುತ್ತವೆ. ಕಾರಣವೇನು? ಬೆಳಕಿಗೆ ಸಂಚರಿಸಲು ಕಾಲ ಬೇಡವೆ? ನಿಜ. ಆದರೆ ಬೆಳಕಿನ ವೇಗವು ವಾಯುವೇಗಕ್ಕಿಂತ ಅತ್ಯಂತ ಅಧಿಕವಾದದ್ದು. ನೀರಿನಲ್ಲಿ ಉಂಟಾದ ಅಲೆಗಳನ್ನು ನೋಡುವಷ್ಟು ಸುಲಭವಾಗಿ ಈ ಅಲೆಗಳನ್ನು ನೋಡಲಾಗುವುದಿಲ್ಲ. ನ್ಯೂಟನ್ ಮೊದಲುಗೊಂಡು ಐನ್‌ಸ್ಟೀನ್‌ವರೆಗೂ ಮೇಧಾವಿಗಳೆನಿಸಿಕೊಂಡಿರುವ ವೈಜ್ಞಾನಿಕರೆಲ್ಲರೂ ಈ ವಿಷಯವಾಗಿ ಚಿಂತಿಸಿ ತಮ್ಮ ಮತಗಳನ್ನು ಸ್ಪಷ್ಟಪಡಿಸಿರುತ್ತಾರೆ. ಬೆಳಕು ಯಾವುದರ ಮೂಲಕ ಸಂಚರಿಸುತ್ತದೆ ಎನ್ನುವುದು ಖಚಿತವಾಗಿ ಇನ್ನೂ ತಿಳಿದಿಲ್ಲ. ಇಂಥ ಒಂದು ವಸ್ತುವಿರಬೇಕು ಎಂದು ಊಹಿಸಿ ಅನುಕೂಲಕ್ಕಾಗಿ ಅದನ್ನು ಈಥರ್ ಎಂದು ಕರೆಯುತ್ತಾರೆ.(ಬೆಳಕು

ಶಕ್ತಿಯ ಸ್ವರೂಪ, ಅದು ಒಂದು ಪದಾರ್ಥವಲ್ಲ ಎನ್ನುವವರು ಕೆಲವರು; ಅದು ಒಂದು ಪದಾರ್ಥ ವಿಶೇಷ ಎನ್ನುವವರು ಕೆಲವರು—ಈ ರೀತಿ ವಿರುದ್ಧವಾದ ಅಭಿಪ್ರಾಯಗಳು ಈಗಲೂ ಇದ್ದೇ ಇವೆ. ಇತ್ತೀಚೆಗೆ ಬೆಳಕಿನ ರೇಣುವಿನ ತೂಕವನ್ನು ಕಂಡುಹಿಡಿದಿರುತ್ತಾರೆ. ಈ ಸಮಸ್ಯೆಗಳು ಇರಲಿ). ಬೆಳಕು ಸಂಚರಿಸುವ ವೇಗವನ್ನು ಖಚಿತವಾಗಿ ಕಂಡುಹಿಡಿಯಬಹುದು. ಅದು ಸೆಕಂಡಿಗೆ ೧,೮೬,೦೦೦ ಮೈಲಿಗಳಂತೆ ಸಂಚರಿಸುತ್ತದೆ. ಸುಮಾರು ಒಂಬತ್ತು ಕೋಟಿ ಮೈಲಿಗಳಲ್ಲಿರುವ ಸೂರ್ಯಮಂಡಲದಿಂದ ಹೊರಟು ಒಂಬತ್ತು ನಿಮಿಷಗಳಲ್ಲಿ ನಮ್ಮ ಲೋಕವನ್ನು ಸೇರುತ್ತದೆ. ಒಂದು ಸೆಕಂಡಿಗಿಂತ ಕಡಮೆ ಕಾಲವನ್ನು ನಾವು ಗಣನೆಗೆ ತೆಗೆದುಕೊಳ್ಳುವುದಿಲ್ಲ. ನಮಗೆ ಒಂದು ಸೆಕಂಡಿನ ದಶಮಾಂಶವೂ, ಸಹಸ್ರಾಂಶವೂ ಒಂದೇ. ಆದರೆ ಬೆಳಕಿಗೆ ಹಾಗಲ್ಲ. ಸಾವಿರ ಮೈಲಿ ಆಚೆ ಹತ್ತಿದ ದೀಪವೂ ತಕ್ಷಣ ನಮಗೆ ಕಂಡಂತೆ ಭಾಸವಾಗುತ್ತದೆ. ಹೀಗಿರುವಾಗ ನಾಲ್ಕು ಮೈಲಿ ದೂರದಲ್ಲಿ ಹತ್ತಿಕೊಳ್ಳುವ ಚಾಮುಂಡಿ ಬೆಟ್ಟದ ದೀಪದ ಕಿರಣಗಳು ನಮ್ಮನ್ನು ಮುಟ್ಟಲು ತೆಗೆದುಕೊಳ್ಳುವ ಕಾಲವನ್ನು ನಾವು ಹೇಗೆ ಗುರುತಿಸುವುದು? ನಮ್ಮ ಪಕ್ಕದಲ್ಲಿರುವ ದೀಪದ ಬೆಳಕು ನಮ್ಮನ್ನು ಸೇರಿದ ಮೇಲೆ ಬೆಟ್ಟದ ಬೆಳಕು ನಮಗೆ ಕಾಣಿಸುತ್ತದೆಂದು ಹೇಗೆ ತಿಳಿದುಕೊಳ್ಳುವುದು? ಒಂದು ಸೆಕಂಡನ್ನು ಒಂದು ವರ್ಷವೆಂದು ಭಾವಿಸಿಕೊಂಡರೆ ಬೆಟ್ಟದ ಬೆಳಕು ನಮಗೆ ಕಾಣುವುದಕ್ಕೆ ಹತ್ತು ನಿಮಿಷಬೇಕು. ಪಕ್ಕದ ಬೆಳಕು ಕಾಣುವುದಕ್ಕೆ ಒಂದು ಸೆಕಂಡೇ ಸಾಕು.

## ವಿಶ್ವಶಕ್ತಿಯ ಬಹುಭಾಗವು ತರಂಗಸ್ವರೂಪ

**ಅಲೆಗಳ ಅಳತೆ ಮತ್ತು ವೇಗ.**—ಪ್ರಪಂಚದಲ್ಲಿರುವ ಶಕ್ತಿಯ ಬಹುಭಾಗವು ವಿದ್ಯುದಯಸ್ಕಾಂತ ತರಂಗಗಳ (Electro-magnetic Waves) ಸ್ವರೂಪ. ಈ ಅಲೆಗಳೆಲ್ಲ ಒಂದೇ ಪ್ರಮಾಣದವುಗಳಲ್ಲ. ಕೆಲವು ಸಣ್ಣವು, ಕೆಲವು ದೊಡ್ಡವು; ವೈರ್‌ಲೆಸ್ ಅಲೆಗಳನ್ನು ಉಪಯೋಗಪಡಿಸಿಕೊಂಡು ಸಂಗೀತವನ್ನೂ, ಸುದ್ದಿ ಸಮಾಚಾರಗಳನ್ನೂ ಕೇಳುವುದು ನಾಗರಿಕತೆಯ ಇತ್ತೀಚಿನ ಹೆಮ್ಮೆ ಮತ್ತು ಕುರುಹು. ಮದರಾಸಿನಿಂದ ಬರುವ ಅಲೆಗಳ ಅಳತೆ ಸುಮಾರು ೬೦ ಗಜ, ತಿರುಚನಾಪಳ್ಳಿಯಿಂದ ಬರುವುದು ಕಾಲುಮೈಲಿ, ಲಂಡನ್ನಿನಿಂದ ಬರುವುದು ೩೫ ಗಜ. ಇವಕ್ಕೂ ದೊಡ್ಡದಾದ, ೪,೦೦೦ ಮೈಲಿ ಅಳತೆಯುಳ್ಳ, ಅಲೆಗಳೂ ಇವೆ. ಬೆಳಕಿನಂತೆಯೇ ಇವೂ ಸೆಕಂಡಿಗೆ ೧೮೬,೦೦೦ ಮೈಲಿಗಳಂತೆ ಸಂಚರಿಸುತ್ತವೆ. ಇಷ್ಟು ದೊಡ್ಡ ಅಲೆಗಳಿದ್ದರೂ ಅನೇಕ ಜಾತಿ ಅಲೆಗಳು ಕೇವಲ ಸಣ್ಣವಾದವು.

ಬೆಳಕಿನ ಅಲೆಗಳು ಈ ಪೈಕಿ ಕೆಲವು. ಇವು ಒಂದು ಅಂಗುಲಕ್ಕೆ ನಲವತ್ತು ಐವತ್ತು ಸಾವಿರ ಇರುತ್ತವೆ. ಆದುದರಿಂದ ಇವುಗಳನ್ನು ಅಳೆಯಲು ವ್ಯವಹಾರದಲ್ಲಿರುವ ಅಂಗುಲ, ಅಡಿ, ಗಜ ಇವು ಉಪಯೋಗವಾಗುವುದಿಲ್ಲ. ಒಂದು ಹೊಸ ಮಾನವು ಅಗತ್ಯ. ಸ್ವೀಡನ್ ದೇಶದ ಆಂಗ್‌ಸ್ಟ್ರಾಂ ಎಂಬವನು ಒಂದು ಸೆಂಟಿಮೀಟರನ್ನು (ಸುಮಾರು ಅರ್ಧ ಅಂಗುಲದ ಅಳತೆ) ಹತ್ತು ಕೋಟಿ ಭಾಗಗಳಾಗಿ ವಿಂಗಡಿಸಿ, ಆ ಒಂದೊಂದು ಭಾಗವೂ ಒಂದು ಮಾನವೆಂದು ಭಾವಿಸಿ ಈ ಅಳತೆಯ ಪ್ರಕಾರ ವಿವಿಧ ಅಲೆಗಳ ಪ್ರಮಾಣವನ್ನು ಕಂಡುಹಿಡಿದನು. ಇದು ಬಹಳ ಅನುಕೂಲವಾಗಿರುವುದರಿಂದ ಎಲ್ಲೆಲ್ಲಿಯೂ ಪ್ರಚಾರಕ್ಕೆ ಬಂದಿದೆ. ಈ ವೈಜ್ಞಾನಿಕನ ಜ್ಞಾಪಕಾರ್ಥವಾಗಿ ಈ ಮಾನವನ್ನು ಆಂಗ್‌ಸ್ಟ್ರಾಂ ಎಂದು ಕರೆಯುತ್ತಾರೆ. ಬೆಳಕಿನ ಅಲೆಗಳ ಅಳತೆಯು ೪೦೦೦ ಆ.ಮಾ. (ಆಂಗ್‌ಸ್ಟ್ರಾಂ ಮಾನ)ದಿಂದ ೭೦೦೦ ಆ.ಮಾ.ದ ವರೆಗೂ ಇರುತ್ತದೆ. ಬೆಳಕಿನ ಅಲೆಯು ಒಬ್ಬ ಮನುಷ್ಯನಷ್ಟು ಬೆಳೆದರೆ ಅದೇ ಪ್ರಮಾಣದಲ್ಲಿ ಬೆಳೆದ ಮನುಷ್ಯನು ಆರು ಹೆಜ್ಜೆಗಳಲ್ಲಿ ಭೂ ಪ್ರದಕ್ಷಿಣೆಮಾಡಬಹುದು. ಮರ, ಕಬ್ಬಿಣ, ತವರ ಮುಂತಾದುವುಗಳಲ್ಲಿ ಅಣುಗಳಿಗಿರುವ ಪರಸ್ಪರ ಅಂತರವು ಹತ್ತು ಆ. ಮಾನದಿಂದ ನೂರೈವತ್ತು ಇನ್ನೂರು ಮಾನದವರೆಗೂ ಇರುತ್ತದೆ. ಅಂದರೆ ಅತಿಸಣ್ಣ ಬೆಳಕಿನ ಅಲೆಯೂ ಈ ಅಣುಗಳಿಗಿರುವ ಅಂತರಕ್ಕಿಂತ ಇಪ್ಪತ್ತು ಮೂವತ್ತರಷ್ಟು ದೊಡ್ಡದಾಗಿರುತ್ತದೆ. ಇದು ಪದಾರ್ಥಗಳ ಒಳಕ್ಕೆ ಹೇಗೆ ನುಸಿಯಬಲ್ಲದು? ಆನೆಯು ಕಿಟಕಿಯ ಸಲಾಕಿಗಳ ಮಧ್ಯೆ ನುಸಿದು ಮನೆಯನ್ನು ಪ್ರವೇಶಿಸುವುದಕ್ಕಾಗುತ್ತದೆಯೆ? ಆದರೆ ಎಕ್ಸ್‌ರೇ ಅಲೆಗಳು ಬೆಳಕಿನ ಅಲೆಗಳಿಗಿಂತ ಚಿಕ್ಕವು. ಗಿಳಿಗಳಂತೆ ಅಲ್ಪದೇಹಿಗಳಾಗಿದ್ದು ಸಲಾಕಿಗಳ ಮೂಲಕ ನುಸಿದು ಪದಾರ್ಥಗಳೆಂಬ ಮನೆಯನ್ನು ಹೊಗಬಲ್ಲವು. ಎಕ್ಸ್‌ರೇಗಳಿಗಿಂತ ಶತ, ಸಹಸ್ರಾಂಶ, ಚಿಕ್ಕದಾದ ಅಲೆಗಳೂ ಇವೆ. ಇವು ರೇಡಿಯಂನಿಂದ ಹೊರಹೊಮ್ಮುತ್ತವೆ. ಎಕ್ಸ್‌ರೇ ಅಲೆಗಳು ಗಿಳಿಗಳಾದರೆ ಇವು ಇರುವೆಗಳು. ಅವು ಹೊಗದ ಸೂಜಿಯ ಮೊನೆಯನ್ನು ಇವು ಪ್ರವೇಶಿಸುತ್ತವೆ. ಇವನ್ನು ಗ್ಯಾಮ ಅಲೆಗಳೆಂದು ಕರೆಯುತ್ತಾರೆ. ಇವುಗಳಷ್ಟೇ ಚಿಕ್ಕದಾದ, ಇವಕ್ಕಿಂತಲೂ ಚಿಕ್ಕದಾದ, ಒಂದು ಹೊಸಜಾತಿಯ ಅಲೆಗಳು ಇತ್ತೀಚೆಗೆ ವಿಜ್ಞಾನಿಗಳ ದೃಷ್ಟಿಗೆ ಗೋಚರವಾಗಿವೆ. ಇವನ್ನು ವಿಶ್ವಕಿರಣಗಳು (Cosmic Rays) ಎಂದು ಕರೆಯುತ್ತಾರೆ. ಇದರ ವಿಷಯವಾಗಿ ಪರೀಕ್ಷೆಗಳು ನಡೆಯುತ್ತಿವೆ. ಹೆಚ್ಚು ವಿಷಯಗಳು ಸ್ಪಷ್ಟವಾಗಿಲ್ಲ. ಈ ಪ್ರತಿಯೊಂದು ಜಾತಿಯ ಅಲೆಯೂ ಸೆಕಂಡಿಗೆ ೧೮೬,೦೦೦ ಮೈಲಿಗಳಂತೆಯೇ ಸಂಚರಿಸುತ್ತದೆ. ದೊಡ್ಡದಾದರೆ ವೇಗ ಕಡಮೆಯಾಗುವುದಿಲ್ಲ, ಚಿಕ್ಕದಾದರೆ ಹೆಚ್ಚುವುದಿಲ್ಲ. ಬೆಳಕಿನ ಅಲೆಗಳನ್ನೂ, ಶಾಖದ ಅಲೆಗಳನ್ನೂ, ಶಬ್ದದ

ಅಲೆಗಳನ್ನೂ ಮಾನವನು ಸಹಸ್ರಾರು ವರ್ಷಗಳಿಂದ ಉತ್ಪತ್ತಿಮಾಡುತ್ತಿದಾನೆ. ಅವುಗಳ ಉಪಯೋಗವು ಅವನ ಬೆಳವಣಿಗೆಗೆ ಅತ್ಯಗತ್ಯವಾಗಿತ್ತು. ಆದರೆ ಅವುಗಳ ಸ್ವರೂಪ ಪರೀಕ್ಷೆಯು ಅವನಿಗೆ ಅನಾವಶ್ಯಕವಾಗಿತ್ತು. ಇದು ಪ್ರಾಮುಖ್ಯತೆಗೆ ಬಂದದ್ದು ವಿಜ್ಞಾನ ಯುಗದಲ್ಲಿ. ಶಕ್ತಿಯ ಸ್ವರೂಪದ ಇತರ ಜಾತಿಗಳು—ಎಕ್ಸ್‌ರೇ, ವೈರ್‌ಲೆಸ್, ಮುಂತಾದವು—ನಮಗೆ ಗೋಚರಿಸಿದ್ದು ನಮ್ಮ ಜೀವಿತಕಾಲದಲ್ಲಿ. ಈಗ ಇವು ನಮ್ಮ ಜೀವನಕ್ಕೆ ಅತ್ಯಗತ್ಯವಾಗಿವೆ. ಇವನ್ನು ಉತ್ಪತ್ತಿಮಾಡುವ ವಿಧಾನಗಳೂ ಅತಿ ಮುಂದುವರಿದಿವೆ.

**ಬೆಳಕಿನ ಅಲೆಗಳಲ್ಲಿ ಒಳಭೇದಗಳು.**—ವಿದ್ಯುದಯಸ್ಕಾಂತ ತರಂಗಗಳನ್ನು ಮೇಲೆ ವಿವರಿಸಿರುವಂತೆ ಏಳೆಂಟು ಜಾತಿಗಳಾಗಿ ಸ್ಥೂಲವಾಗಿ ವಿಂಗಡಿಸಬಹುದು. ಈ ಪ್ರತಿಯೊಂದು ಜಾತಿಯಲ್ಲಿಯೂ ಬೇರೆ ಬೇರೆ ಅಳತೆಯ ಅಲೆಗಳಿವೆಯೆಂದು ಮೊದಲೇ ತಿಳಿಸಿದ್ದೇವೆ. ಬೆಳಕಿನ ಅಲೆಗಳು ೪,೦೦೦ ಆ. ಮಾ. ದಿಂದ ೭,೦೦೦ ಆ. ಮಾ. ದ ವರೆಗೆ ಇರುತ್ತವೆಯೆಂದು ಹೇಳಿದ್ದೇವೆ. ಒಂದು ಅಶ್ರಗ (Prism)ವನ್ನು ತೆಗೆದುಕೊಂಡು ಅದರ ಮೂಲಕ ಸೂರ್ಯಕಿರಣಗಳನ್ನು ಬಿಟ್ಟು ಅವು ಹೊರಗೆ ಬಂದಾಗ ಅವುಗಳ ಪಥಕ್ಕೆ ಸರಿಯಾಗಿ ಒಂದು ಬಿಳಿಯ ತೆರೆಯನ್ನಿಡಿ. ಈ ತೆರೆಯ ಮೇಲೆ ಬೀಳುವುದು ಯಾವುದು? ಬಿಳಿಯ ಬೆಳಕಲ್ಲ. ಕಾಮನ ಬಿಲ್ಲಿನಂತೆ ವಿವಿಧ ವರ್ಣಗಳುಳ್ಳ ಒಂದು ವರ್ಣಪಟ್ಟಿ. ಈ ವಿವಿಧ ಕಿರಣಗಳೆಲ್ಲ ಎಲ್ಲಿದ್ದುವು? ಸೂರ್ಯ ರಶ್ಮಿಯಲ್ಲಿಯೇ ಇದ್ದಿರಬೇಕು. ಮತ್ತು ಅಶ್ರಗಕ್ಕೆ ಈ ಗುಂಪನ್ನು ಪ್ರತ್ಯೇಕಿಸುವ ಶಕ್ತಿಯಿದ್ದು ಇದರ ಫಲವಾಗಿ ಈ ವರ್ಣಪಟ್ಟಿಕೆ (Spectrum) ಉಂಟಾಗಿರಬೇಕು. ಇದರಲ್ಲಿ ನೇರಿಳೆ ಬಣ್ಣದಿಂದ ಪ್ರಾರಂಭವಾಗಿ ನೀಲಿ, ಹಸರು, ಕಿತ್ತಳೆ ಮುಂತಾದ ವರ್ಣಗಳು, ಕೊನೆಯಲ್ಲಿ ಕೆಂಪುವರ್ಣ, ಕಾಣುತ್ತವೆ. ನಾವು ನೋಡಿರುವ ಪ್ರತಿಯೊಂದು ವರ್ಣಭೇದವೂ ಈ ವರ್ಣಪಟ್ಟಿಕೆಯಲ್ಲಿ ಕಾಣುತ್ತದೆ. ಪರೀಕ್ಷಿಸಿ ನೋಡಿದರೆ ಹೊಸ ಹೊಸ ವರ್ಣಗಳೂ ಕಾಣುತ್ತವೆ. ಪ್ರಕೃತಿಯಲ್ಲಿ ನಮಗೆ ಕಾಣುವ ಪ್ರತಿಯೊಂದು ಬಣ್ಣಕ್ಕೂ ನಾವು ಬೇರೆ ಬೇರೆ ಹೆಸರನ್ನು ಕೊಟ್ಟಿಲ್ಲ. ಅವುಗಳನ್ನೆಲ್ಲ ಸ್ಥೂಲವಾಗಿ ಕೆಂಪು, ಹಸರು, ಹಳದಿ, ನೀಲಿ ಎಂಬ ಕೆಲವು ಮುಖ್ಯ ಜಾತಿಗಳಾಗಿ ವಿಂಗಡಿಸುತ್ತೇವೆ. ಆದರೆ ಈ ಒಂದೊಂದು ಜಾತಿಯಲ್ಲಿಯೂ ಅನೇಕ ಉಪಜಾತಿಗಳನ್ನು ಮಾಡುತ್ತೇವೆ. ಹೀಗೆ ಕೆಂಪಿನಲ್ಲಿ ಅಚ್ಚಗೆಂಪು, ನಡುಗೆಂಪು, ಮಾಸಲುಗೆಂಪು, ಎಣ್ಣೆಗೆಂಪು ಮೊದಲಾದ ಭೇದಗಳನ್ನು ಗುರುತಿಸುತ್ತೇವೆ. ಈ ಹೆಸರುಗಳೂ ಸಾಲದೆ ಒಂದು ಕೆಂಪಿಗೂ ಇನ್ನೊಂದು ಕೆಂಪಿಗೂ ಎಷ್ಟು ಬಣ್ಣ ಹೆಚ್ಚು ಕಡಮೆ ಎಂದೂ ಅನೇಕ ವೇಳೆ ಹೇಳುತ್ತೇವೆ. ಆದುದರಿಂದ ನಮ್ಮ ಕಣ್ಣು ಗುರುತಿಸುವ

ಸುಮಾರು ಇಪ್ಪತ್ತು ಜಾತಿ ಕೆಂಪಿಗೆ ಬೇರೆ ಬೇರೆ ಹೆಸರಿಲ್ಲ. ಚಿತ್ರಕಾರನ ಕಣ್ಣು ಸಾಮಾನ್ಯರ ಕಣ್ಣಿಗಿಂತ ಸೂಕ್ಷ್ಮವಾದುದು. ಅವನು ನಮಗಿಂತಲೂ ಹೆಚ್ಚು ವರ್ಣಗಳನ್ನು ಗುರುತಿಸುತ್ತಾನೆ. ತನ್ನ ಮನೋಭಾವಕ್ಕೆ ತಕ್ಕಂತೆ ಬಣ್ಣಗಳನ್ನು ಕೂಡಿಸಿಕೊಂಡು ಚಿತ್ರಿಸುತ್ತಾನೆ. ನಿಜವಾಗಿ ನೋಡಿದರೆ ಪ್ರಕೃತಿಯು ರಚಿಸುವಷ್ಟು ವರ್ಣಭೇದಗಳನ್ನು ಗುರುತಿಸುವುದಾಗಲಿ ರಚಿಸುವುದಾಗಲಿ ಅವನಿಗೂ ಸಾಧ್ಯವಿಲ್ಲ. ಬೆಳಕಿನ ಅಲೆಗಳ ಅಳತೆಯು ೪,೦೦೦ ಆ. ಮಾ. ದಿಂದ ೭,೦೦೦ ಆ. ಮಾ. ದ ವರೆಗೆ ಇದೆಯೆಂದು ಹೇಳಿದೆಯಷ್ಟೆ. ನಾವು ಕೆಂಪು ಎನ್ನುವುದು ಪ್ರಾರಂಭವಾಗುವುದು ಸುಮಾರು ೬,೦೦೦ ಆ. ಮಾ. ದಿಂದ; ಮುಕ್ತಾಯ ೭,೦೦೦ ಆ. ಮಾ. ದಲ್ಲಿ. ೬,೦೦೦ ಆ. ಮಾ. ದ ಅಲೆಯ ಬಣ್ಣ ಬೇರೆ, ೬,೦೦೨ ಆ. ಮಾ. ದ ಬಣ್ಣ ಬೇರೆ. ನಮ್ಮ ಕಣ್ಣು ಈ ವ್ಯತ್ಯಾಸವನ್ನು ಗುರುತಿಸಲಾರದೆ ಎರಡನ್ನೂ ಮಾಸಲಗೆಂಪು ಎಂದು ತಿಳಿಯುತ್ತದೆ. ಇದು ನಮ್ಮ ದೃಷ್ಟಿಯ ದೌರ್ಬಲ್ಯ. ಬಣ್ಣಗಳಲ್ಲಿ ನಿಜವಾಗಿಯೂ ಅಸಂಖ್ಯಾತ ಭೇದಗಳಿವೆ. ನಮ್ಮ ಕಣ್ಣು ಎಲ್ಲವನ್ನೂ ಪ್ರತ್ಯೇಕಿಸದಿದ್ದರೂ ವಿಭಜನ ಜಾಲರಿಯು ಪ್ರತಿಯೊಂದನ್ನೂ ಸರಿಯಾಗಿ ಬೇರೆ ಮಾಡಬಲ್ಲದು.

**ಎಕ್ಸ್‌ರೇಗಳಲ್ಲಿ ಒಳಭೇದ**—ಬೆಳಕಿನಲ್ಲಿರುವಂತೆಯೆ ರಾಂಟ್‌ಜನ್ ಕಿರಣಗಳಲ್ಲಿಯೂ ೧. ೪ ಆ. ಮಾ. ದಿಂದ, ೧೩೬ ಆ. ಮಾ. ದ ವರೆಗೆ ವಿವಿಧ ಅಳತೆಯ ಅಲೆಗಳಿವೆ. ಇವನ್ನು ಆಸ್ಪತ್ರೆ, ಯುದ್ಧಶಾಲೆ, ಗಿರಣಿ ಮುಂತಾದ ಕಡೆಗಳಲ್ಲಿ ಅನೇಕ ವ್ಯವಹಾರಗಳಿಗೆ ಉಪಯೋಗಿಸುತ್ತಾರೆ. ಆದರೆ ಒಂದೊಂದು ಕೆಲಸಕ್ಕೆ ಬೇಕಾದದ್ದು ಒಂದೊಂದು ಅಳತೆಯ ಕಿರಣ. ಎಕ್ಸ್‌ರೇಗಳನ್ನು ಯುಕ್ತ ರೀತಿಯಲ್ಲಿ ಯುಕ್ತ ತೀಕ್ಷ್ಣತೆಯಲ್ಲಿ ಉಪಯೋಗಿಸಬೇಕು. ಇಲ್ಲದಿದ್ದರೆ ರೋಗಪರಿಹಾರಕ್ಕೆ ಬದಲು ರೋಗಿಯೇ ಪರಿಹಾರವಾಗಬಹುದು. ಆದುದರಿಂದ ನಮಗೆ ಬೇಕಾದ ಅಳತೆಯ ಮತ್ತು ಬೇಕಾದಷ್ಟು ಪ್ರಮಾಣದ ಕಿರಣವನ್ನು ತಯಾರಿಸುವ ಯಂತ್ರ ಸಾಧನ ಬೇಕು. ಈ ಅಲೆಗಳ ಅಳತೆಯು ಕಡಮೆಯಾದ ಹಾಗೆಲ್ಲ ಅವುಗಳ ತೀಕ್ಷ್ಣತೆಯು ಹೆಚ್ಚುತ್ತದೆ. ಬಹಳ ತೀಕ್ಷ್ಣವಾದ ಕಿರಣಗಳನ್ನು ಬಲವಾದ ಕಿರಣಗಳೆಂದೂ (Hard Rays), ಕಡಮೆ ಶಕ್ತಿಯುಳ್ಳವುಗಳನ್ನು ಮೃದುವಾದ ಕಿರಣಗಳೆಂದೂ (Soft Rays) ಕರೆಯುತ್ತೇವೆ. ರಾಂಟ್‌ಜನ್ನನು ಮೊದಲು ಕಂಡ ಕಿರಣಗಳು ಬಹು ಮೃದುವಾದವು. ವಿದ್ಯುತ್ಕಣಗಳು ಋಣಧ್ರುವದಿಂದ ಹೊರಟು ಕೊಳವೆಯ ಮೇಲೆ ಒಡೆದು ಇವು ಉತ್ಪನ್ನವಾದವು. ಕಿರಣಗಳ ಶಕ್ತಿಯು ಸ್ವಲ್ಪ ಹೆಚ್ಚಾಗಿದ್ದರೆ ಕೊಳವೆಯೇ ಸಿಡಿದು ಹೋಗುತ್ತಿತ್ತು. ಈ ಕಿರಣಗಳಿಗೆ ಜೀವಾಣುಗಳನ್ನು ನಾಶಮಾಡುವ ಶಕ್ತಿಯಿದೆ. ಇದು ತಿಳಿಯದೆ, ತಕ್ಕ ಭದ್ರತೆಯನ್ನು ಮಾಡಿಕೊಳ್ಳದೆ,

ಮೊದಮೊದಲು ಕೆಲಸ ಮಾಡಿದ ಉತ್ಸಾಹಶೀಲರಿಗೆ ವಿಚಿತ್ರವಾದ ಬೇನೆಗಳು ಪ್ರಾಪ್ತವಾದುವು. ಸರಿಯಾದ ಯಂತ್ರದಲ್ಲಿ ಇದಕ್ಕೆ ಅವಕಾಶವಿರಕೂಡದು; ಎಂದರೆ ಕಿರಣಗಳು ಸಂಶೋಧಕನ ಮೈಮೇಲೆ ಬೀಳಕೂಡದು.

**ಎಕ್ಸ್‌ರೇ ಉತ್ಪತ್ತಿ ಯಂತ್ರ**—ರಾಂಟ್‌ಜನ್ನನು ತಯಾರಿಸಿದ ಕ್ರಮದಲ್ಲಿ ಈ ಸೌಕರ್ಯಗಳಿಗೆ ಅವಕಾಶವಿಲ್ಲ. ಒಂದು ಕ್ರುಕ್ಸ್ ಕೊಳಬೆಯಲ್ಲಿ ಒಂದು ಜಾತಿಯ ಕಿರಣಗಳು ಉತ್ಪನ್ನವಾಗುತ್ತವೆಯಲ್ಲದೆ ಅವನ್ನು ಬಹಳ ಮಟ್ಟಿಗೆ ವ್ಯತ್ಯಾಸ ಮಾಡಲು ಸಾಧ್ಯವಿಲ್ಲ. ಕ್ರಮೇಣ ಎಕ್ಸ್‌ರೇ ತಯಾರಿಕೆಯ ಯಂತ್ರಗಳಲ್ಲಿ ಹೆಚ್ಚು ಮಾರ್ಪಾಡುಗಳಾದವು. ರಾಂಟ್‌ಜನ್ನನು ಒಂದು ಅನಿಲದಿಂದ ಹೊರಡುವ ವಿದ್ಯುತ್ಕಣಗಳನ್ನು ಉಪಯೋಗಿಸಿ ಈ ಕಿರಣಗಳನ್ನು ಉಂಟುಮಾಡಿದನು. ೧೯೧೩ನೆಯ ಇಸವಿಯಲ್ಲಿ ಅಮೆರಿಕ ದೇಶದ ಕೂಲಿಜ್ (W.D. Coolidge) ಎಂಬವನು ಲೋಹಗಳು ಪ್ರಜ್ವಲವಾದಾಗ ಅವುಗಳಿಂದ ಉಕ್ಕುವ ವಿದ್ಯುತ್ಕಣಗಳನ್ನು ಎಕ್ಸ್‌ರೇ ತಯಾರಿಕೆಗೆ ಉಪಯೋಗಿಸಿದನು. ತಾನು ನಿರ್ಮಿಸಿದ ಯಂತ್ರದಲ್ಲಿ ಟಂಗ್‌ಸ್ಟನ್ ಎಂಬ ಲೋಹದ ಒಂದು ಸುರುಳಿಯನ್ನು ಋಣಧ್ರುವದ ಹತ್ತಿರದಲ್ಲಿ ಬೆಸೆದು ಅದರ ಮೂಲಕ ವಿದ್ಯುಚ್ಛಕ್ತಿಯು ವಹಿಸುವಂತೆ ಏರ್ಪಡಿಸಿದನು. ಕ್ರುಕ್ಸ್ ಕೊಳಬೆಯಲ್ಲಿ ಅನಿಲದಿಂದ ವಿದ್ಯುತ್ಕಣಗಳನ್ನು ಉತ್ಪನ್ನಮಾಡಿಕೊಳ್ಳಬೇಕಾಗಿರುವುದರಿಂದ ಕೊಳಬೆಯಲ್ಲಿರುವ ಅನಿಲವನ್ನೆಲ್ಲ ಪೂರ್ತಿಯಾಗಿ ತೆಗೆಯಲಾಗುವುದಿಲ್ಲ. ಕೂಲಿಜ್ ಕೊಳಬೆಯಲ್ಲಿ ಇದರ ಆವಶ್ಯಕತೆಯಿಲ್ಲ. ಏಕೆಂದರೆ ವಿದ್ಯುತ್ಕಣಗಳು ಬೇರೆ ವಿಧದಲ್ಲಿ ದೊರೆಯುತ್ತವೆ. ಆದುದರಿಂದ ಕೊಳಬೆಯಲ್ಲಿರುವ ಗಾಳಿಯನ್ನೆಲ್ಲ ಸಾಧ್ಯವಾದಷ್ಟು ತೆಗೆಯಬಹುದು. ಹೀಗೆ ತೆಗೆಯುವುದರಿಂದ ಒಂದು ಅನುಕೂಲ. ಕೊಳಬೆಯ ಕೊನೆಗಳಿಗೆ ವಿದ್ಯುದುತ್ಪತ್ತಿ ಯಂತ್ರದ ಧ್ರುವಗಳನ್ನು ಸೇರಿಸಿದರೆ ವಿದ್ಯುನ್ಮಟ್ಟದಲ್ಲಿ ಹೆಚ್ಚು ವ್ಯತ್ಯಾಸವನ್ನು ಮಾಡಿಕೊಳ್ಳಬಹುದು. ಕೂಲಿಜ್ ಕೊಳಬೆಯಲ್ಲಿ ವಿದ್ಯುತ್ಕಣಗಳ ಹೊಡೆತಕ್ಕೆ ಟಂಗ್‌ಸ್ಟನ್ನಿನ ಒಂದು ಗುರಿ (Target) ಇರುತ್ತದೆ. ಈ ರೀತಿ ತಯಾರಿಸಿದ ಯಂತ್ರದ ಅನುಕೂಲತೆಗಳನ್ನು ಪುನಃ ಯೋಚಿಸಿ ನೋಡಿ. ವಿದ್ಯುದ್ವೃತ್ತದ (Electric Circuit) ತಡೆಯನ್ನು (Resistance) ಹೆಚ್ಚು ಕಡಮೆ ಮಾಡಿಕೊಂಡು ಟಂಗ್‌ಸ್ಟನ್ ಸುರುಳಿಯ ಮೂಲಕ ವಹಿಸುವ ವಾಹಿನಿಯನ್ನು ಏರಿಸಿಕೊಳ್ಳಬಹುದು, ಇಳಿಸಿಕೊಳ್ಳಬಹುದು. ವಾಹಿನಿಯು ಹೆಚ್ಚಿದರೆ ಸುರುಳಿಯ ಕಾವು ಹೆಚ್ಚಿ ವಿದ್ಯುತ್ಕಣಗಳು ಹೆಚ್ಚು ಹೆಚ್ಚಾಗಿ ಹೊರಹೊಮ್ಮುತ್ತವೆ. ಕಡಮೆಯಾದರೆ ಇವೂ ಕಡಮೆಯಾಗುತ್ತವೆ. ಧನಧ್ರುವದ ಸಮೀಪದಲ್ಲಿರುವ ಟಂಗ್‌ಸ್ಟನ್ ತಗಡಿನ ಮೇಲೆ ಇವು ಬಡಿದು ಎಕ್ಸ್‌ರೇ ಉತ್ಪನ್ನವಾಗುತ್ತದೆ. ಬಡಿಯುವ ಕಣಗಳ ಸಂಖ್ಯೆಯು ಹೆಚ್ಚಾದಷ್ಟೂ ಉತ್ಪನ್ನ



**ಕೂಲಿಜ್ ಕೊಳವೆ**

(ಪಡಿಯಚ್ಚು ಶ್ರೀವರ್ಾ ಯು. ರಾಘವೇಂದ್ರಾಚಾರ್ಯರು
ದಯೆಯಿಟ್ಟು ಕೊಟ್ಟದ್ದು)

ವಾಗುವ ಎಕ್ಸ್‌ರೇಗಳ ಪ್ರಮಾಣವು ಹೆಚ್ಚುತ್ತದೆ. ಆದುದರಿಂದ ವಾಹಿನಿಯನ್ನು ವ್ಯತ್ಯಾಸಮಾಡಿಕೊಂಡು ಬೇಕಾದಷ್ಟು ಪ್ರಮಾಣದ ಎಕ್ಸ್‌ರೇಗಳನ್ನು ತಯಾರಿಸಿ ಕೊಳ್ಳಬಹುದು. ಕೊಳವೆಯ ಕೊನೆಗಳಿಗೆ ಸೇರಿಸುವ ಧ್ರುವಗಳು ಬೇರೆ ವಿದ್ಯು ದ್ವೃತ್ತಕ್ಕೆ ಸಂಬಂಧಿಸಿದವು. ಇದರ ಸಹಾಯದಿಂದ ಕೊಳವೆಯಲ್ಲಿ ವಿದ್ಯುನ್ಮಟ್ಟ ವನ್ನುಂಟುಮಾಡಿಕೊಳ್ಳಬಹುದು. ಈ ವೃತ್ತದ ತಡೆಯನ್ನು ವ್ಯತ್ಯಾಸಮಾಡಿಕೊಂಡು ವಿದ್ಯುನ್ಮಟ್ಟವನ್ನು ಸೂಕ್ತಕಂಡಂತೆ ಏರಿಳಿಸಿಕೊಳ್ಳಬಹುದು. ಕೊಳವೆಯು ವಾಯು ರಹಿತವಾಗಿರುವುದರಿಂದ ಇದಕ್ಕೆ ಬಹಳ ಸಹಾಯ. ಈ ಮಟ್ಟದ ವ್ಯತ್ಯಾಸವು ಹೆಚ್ಚಾದಂತೆಲ್ಲ ಎಕ್ಸ್‌ರೇಗಳ ತೀಕ್ಷ್ಣತೆಯು ಹೆಚ್ಚುತ್ತದೆ. ಆದುದರಿಂದ ತಡೆಯಲ್ಲಿ ತಕ್ಕ ವ್ಯತ್ಯಾಸಮಾಡಿಕೊಂಡು ನಮಗೆ ಬೇಕಾದ ತೀಕ್ಷ್ಣತೆಯ (ಬಲ ಅಥವಾ ಮೃದು) ಅಲೆಗಳನ್ನು ಪಡೆಯಬಹುದು. ಈ ರೀತಿ ಕೂಲಿಜ್‌ಕೊಳವೆಯು ಎಕ್ಸ್‌ರೇ ತಯಾರಿಕೆಗೆ ಬಹಳ ಅನುಕೂಲವಾದದ್ದು. ಇತ್ತೀಚೆಗೆ ಈ ಕೊಳವೆಗಳನ್ನು ತಕ್ಕ ಲೋಹಗಳಲ್ಲಿ ತಯಾರಿಸಿ ಕಿರಣಗಳು ಸುತ್ತಲೂ ಹರಡಿ ಶೋಧಕನನ್ನು ಹಿಂಸಿಸ ದಂತೆ ನೋಡಿಕೊಳ್ಳುತ್ತಾರೆ. ನಾವು ಉಪಯೋಗಪಡಿಸುವ ವಿದ್ಯುಚ್ಛಕ್ತಿಯ ಬಹು ಭಾಗವು ಧನಧ್ರುವದಲ್ಲಿರುವ ಟಂಗ್‌ಸ್ಟನ್ ತಗಡಿನ ಶಾಖವನ್ನು ಹೆಚ್ಚಿಸುವುದರಲ್ಲಿ ವ್ಯಯವಾಗುತ್ತದೆ. ಟಂಗ್‌ಸ್ಟನ್ನಲ್ಲದೆ ಬೇರೆ ಲೋಹಗಳು ಈ ಶಾಖವನ್ನು ತಡೆಯ ಲಾರವು. ಶಾಖವನ್ನುತ್ಪತ್ತಿ ಮಾಡದೆ ಎಕ್ಸ್‌ರೇಗಳನ್ನು ಮಾತ್ರ ತಯಾರಿಸಿಕೊಳ್ಳು ವುದು ನಮಗೆ ಸಾಧ್ಯವಾಗಿಲ್ಲ.

[ಮುಂದುವರಿಯುವುದು]

ಜಿ. ಆರ್. ರಂಗಸ್ವಾಮಿ.

---

# ಸಿನಿಮಾ ನೀತಿ

೧

ಚಿತ್ರಮಂದಿರದಲ್ಲಿ
ರಜತ ಪರದೆಯಮೇಲೆ
ಕೊಲೆಗಳಾದರು ಕೂಡ
ತೆರೆ ಬಿಳುಪೆ! ಕೆಂಪಲ್ಲ.

೨

ಕತ್ತಿ ಎದೆಯಲಿ ನೆಡಲಿ,
ತುಟಿ ತುಟಿಯ ಸಂಧಿಸಲಿ,
ಬೆಳ್ಳಿತೆರೆಗಿನಿತಿಲ್ಲ
ಪಾಪ ಪುಣ್ಯದ ಲೇಪ!

೩

ಸಂಸಾರಸಾಗರದಿ
ಸಂಸಾರಿ ಈಸಿದರು
ಸುಳಿಯಲೆಗೆ ಸಿಕ್ಕದಲೆ
ಇರಬೇಕು "ತೆರೆ" ಯಂತೆ!

"ಶಾಂತಿಸಖ"

---

# ಅರಿಯೆ

೧

ಆವುದಿದು ಭೀಷಣತೆ ಎನ್ನೆದೆಯ ಮುಸುಕುತಿದೆ
ಚೈತ್ರದಲಿ ತಿಳಿಬಾನ ಕರಿಮೇಘ ಕವಿಯುವಂತೆ?
ಏತಕಿದು ಅರಸಿಕತೆ ಮನ್ಮನವ ಸುಳಿಯುತಿದೆ
ತಿಳಿಗೊಳದ ತಟದಲ್ಲಿ ಕರಿನಾಗ ಹರಿಯುವಂತೆ?

೨

ಆವುದಿದು ದುರ್ಬಲತೆ ಉಜ್ಜುಗವ ಕೆಡಿಸುತಿದೆ
ರಂಗದಲಿ ಮರೆವಡಿಸಿ ನಾಟಕವ ಭಂಗಿಪಂತೆ?
ಏತಕಿದು ಬರಿಮೌನ ಉಲ್ಲಸವ ಉಡುಗುತಿದೆ
ಸಂತೆದಿನ ಬರ ಬಂದು ಗದ್ದಲವ ನುಂಗುವಂತೆ?

ವಿ. ಎಚ್. ಭೂಪಾಲಂ.

---

# ಭರತೇಶ ವೈಭವ

## ಕವಿಚರಿತ್ರೆ[1]

ರತ್ನಾಕರ ಸಿದ್ಧ, ರತ್ನಾಕರ ಅಣ್ಣ, ಇತ್ಯಾದಿ ಪರ್ಯಾಯ ನಾಮಗಳಿಂದ ಕರೆಯಲ್ಪಡುವ ರತ್ನಾಕರವರ್ಣಿಯು ಭರತೇಶ ವೈಭವ, ಅಪರಾಜಿತೇಶ್ವರ ಶತಕ, ರತ್ನಾಕರಾಧೀಶ್ವರ ಶತಕ ಮತ್ತು ತ್ರಿಲೋಕ ಶತಕಗಳೆಂಬ ನಾಲ್ಕು ಗ್ರಂಥಗಳನ್ನೂ "ಎರಡುಸಾವಿರ ಗ್ರಂಥದಷ್ಟು ಅಧ್ಯಾತ್ಮಗೀತಗಳನ್ನೂ" ರಚಿಸಿರುವನು. ಇವುಗಳಲ್ಲಿ ಭರತೇಶ ವೈಭವವು ಕವಿಯ ವಿಷಯವಾಗಿ ಹಲವು ಸಂಗತಿಗಳನ್ನು ತಿಳಿಸುತ್ತದೆ. ಆ ಗ್ರಂಥದ ಕೊನೆಯ ಸಂಧಿಯಲ್ಲಿ ತಾನು "ಕ್ಷತ್ರಿಯ ವಂಶಜನೆಂದು, ಕರ್ಣಾಟ ಸುಕ್ಷೇತ್ರಸೆಂದಣ್ಣಗಳೆಂದು ಧಾತ್ರಿ ನುಡಿವುದು" ಎಂದು ಹೇಳಿಕೊಂಡಿರುತ್ತಾನೆ. ಅಲ್ಲದೆ "ಸಿದ್ಧಪದಕೆ ಸೋತೆನಾಗಿ ರತ್ನಾಕರಸಿದ್ಧನೆಂದೆನಲೊಲ್ವೆನೊಮ್ಮೆ" ಎಂದು 'ರತ್ನಾಕರಸಿದ್ಧ'ನೆಂಬ ಹೆಸರು ತನಗೆ ಏಕೆ ಮೆಚ್ಚುಗೆಯಾದುದೆಂಬುದನ್ನೂ ಹೇಳಿರುತ್ತಾನೆ. "ಆಮಯ ಜನನಮರಣವುಳ್ಳ ಜನಕರ ನಾಮವ" ಪೇಳದೆ "ಶ್ರೀ ಮಂದರ ಸ್ವಾಮಿ ನನ್ನಯ್ಯ"ನೆಂದು ಹೇಳಿಕೊಂಡಿರುತ್ತಾನೆ. "ಸುಸಿದ್ಧಾಂತವ ಕಂಡದ ರೊಳಗಾ| ಭ್ರಾಂತಿಯ ಲೋಕಕೆ ಹರುಹದೆ ನಾನೆಯೇ| ಕಾಂತದೊಳಾಚರಿಸುವೆನು" ಎಂಬುದು ಈತನ ವಿನಯಪೂರ್ವಕವಾದ ಆದರ್ಶ. ಜೈನಕವಿಗಳೆಲ್ಲರೂ ಪ್ರಾಯಿಕವಾಗಿ ಸ್ತೋತ್ರಮಾಡುವ ಗುರುಪರಂಪರೆಯನ್ನು ಸಹ ಈತನು ಸ್ಮರಿಸಿಲ್ಲ. ತನ್ನ ಗುರುವಾದ ಚಾರುಕೀರ್ತಿಯನ್ನು ಮಾತ್ರ ಸ್ಮರಿಸಿದ್ದಾನೆ. 'ದೇಶಿಗಣಾಗ್ರಣಿ'ಯಾದ ಈ ಚಾರುಕೀರ್ತಿಯು ಈತನಿಗೆ 'ಶ್ರೀಶುಚಿ ದೀಕ್ಷೆಯನ್ನು' ಕೊಟ್ಟನು. ಮೋಕ್ಷಗುರು ಹಂಸನಾಥನೆಂದು ಹೇಳುವುದು ಚಾರುಕೀರ್ತಿಯನ್ನು ಕುರಿತೇ ಎಂದು ತೋರುತ್ತದೆ ಗುರುಹಂಸನಾಥನ ಆಜ್ಞೆಯಿಂದಲೇ ಆತ್ಮಲೀಲಾರ್ಥವಾಗಿ ಭರತೇಶ ವೈಭವವೆಂಬ ಕಾವ್ಯವನ್ನು ಬರೆದನು. ಕವಿಯು ಬರೆದಿರುವ ತ್ರಿಲೋಕ ಶತಕದಿಂದ ಈತನು ವೇಣುಪುರವೆಂಬ ಪಟ್ಟಣದವನೆಂದು ತಿಳಿದುಬರುತ್ತದೆ. ಇದು ಪಶ್ಚಿಮಸಮುದ್ರ ತೀರದಲ್ಲಿರುವ ಮೂಡಬಿದಿರೆಯಿರಬಹುದೆಂದು ಕೆಲವರು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಅದೇ ಶತಕದ ಕೊನೆಯ ಪದ್ಯದಿಂದ ಇವನ ಕಾಲವು ಸುಮಾರು ಕ್ರಿ. ಶ. ೧೫೫೭ ಎಂದೂ ತಿಳಿದುಬರುತ್ತದೆ.

---

[1] ಈ ಲೇಖನವನ್ನು ಬರೆಯಲು ನನಗೆ ಸಹಾಯಮಾಡಿದ ನನ್ನ ವಿದ್ಯಾಗುರುಗಳಾದ ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್, ಎಂ.ಎ., ಅವರಿಗೆ ನಾನು ತುಂಬ ಕೃತಜ್ಞನಾಗಿದ್ದೇನೆ.

ಕವಿಯ ಜೀವನಚರಿತ್ರೆಯನ್ನರಿಯಲು ಸಹಾಯಮಾಡುವ ಎರಡನೆಯ ಸಾಧನ ದೇವಚಂದ್ರನ ರಾಜಾವಳೀಕಥೆ. ಇದರಿಂದ ಈತನು ಸೂರ್ಯವಂಶದ ರಾಜ ಕುಲದವನೆಂದೂ, ದೇವರಾಜನೆಂಬವನ ಮಗನೆಂದೂ ತಿಳಿದುಬರುತ್ತದೆ. ಈತನು "ಬಾಲಕಾಲದೊಳೆ ಕಾವ್ಯಾಲಂಕಾರ ಲಕ್ಷಣ ಶಾಸ್ತ್ರದೊಳತಿ ನಿಪುಣನಾಗಿ", ಪರಮಾಗಮಗಳನ್ನೆಲ್ಲಾ ಹೃದ್ಗತಮಾಡಿಕೊಂಡು, ಕವೀಶ್ವರನಾಗಿ ಸೋಮವಂಶದ ಭೈರಸ ಒಡೆಯರ ಸಭೆಯಲ್ಲಿ ಶೃಂಗಾರಕವಿಯೆಂದು ಪ್ರಖ್ಯಾತಿಪಡೆದಿದ್ದನು. ಯೋಗರತ್ನಾಕರ ಶಾಸ್ತ್ರಾಭ್ಯಾಸದಿಂದ ದಶವಾಯುಗಳನ್ನೂ ಸಾಧಿಸಿದ್ದನು. ಈತನನ್ನು ಕಂಡ ಭೈರಸ ಒಡೆಯರ ಮಗಳು ಮೋಹಪರವಶಳಾದಳು. ರತ್ನಾಕರನು ತನ್ನ ಯೋಗಾಭ್ಯಾಸಬಲದಿಂದ ಸೌಧಾಗ್ರವನ್ನೇರಿ, ಗವಾಕ್ಷದಿಂದ ಒಳಗಿಳಿದು, 'ಅವಳೊಳೆ ನೇಹಂ ಮಾಡುತ್ತಿ'ದ್ದನು. ಇದನ್ನು ತಿಳಿದ ರಾಜನು ಆತನನ್ನು ಹಿಡಿಯ ಯತ್ನಿಸಲು, ರತ್ನಾಕರನು ಆ ರಾತ್ರಿಯೇ ತನ್ನ ಗುರುವಾದ ಮಹೇಂದ್ರಕೀರ್ತಿಯ ಬಳಿಗೆ ಓಡಿಹೋಗಿ ಅಣುವ್ರತದೀಕ್ಷೆಯನ್ನು ಕೈಕೊಂಡು ಅಧ್ಯಾತ್ಮತತ್ವ ತತ್ಪರ ನಾದನು. ಅಲ್ಲಿ "ವಿಜಯಕೀರ್ತಿಗಳೆಂಬ ಪಟ್ಟಾಚಾರ್ಯರ ಶಿಷ್ಯರಾದ ವಿಜಯಣ್ಣಾಗಳು ದ್ವಾದಶಾನುಪ್ರೇಕ್ಷೆಗಳಂ ಕನ್ನಡದಿಂ ಸಂಗೀತಮಾಗಿ ವೃತ್ತವಚನದಿಂ ಮಾಡಿ ಆನೆಯ ಮೇಲೆ ಪ್ರಭಾವನೆಯಂ" ಮಾಡಿಸಿದರು. ಇದನ್ನು ಕಂಡ ರತ್ನಾಕರನು ಭರತೇಶ್ವರ ಚರಿತ್ರೆಯನ್ನು ಎಂಬತ್ತುನಾಲ್ಕು ಸಂಧಿಗಳಷ್ಟು ಬರೆದು ವಿಜಯಣ್ಣಾನ ಕಾವ್ಯಕ್ಕೆ ದೊರೆತ ಪುರಸ್ಕಾರವನ್ನು ತನ್ನ ಕಾವ್ಯಕ್ಕೂ ದಯಪಾಲಿಸುವಂತೆ ವಿಜಯಕೀರ್ತಿ ಗಳನ್ನು ಬೇಡಿದನು. ಆದರೆ ಪಟ್ಟಾಚಾರ್ಯರು "ಇದರೊಳೆರಡು ಮೂರು ವಾಕ್ಯಂ ಪುರಾಣಕ್ಕೆ ವಿರೋಧಮಿರ್ಪುದರಿಂದ" ಅದಾಗದೆಂದು ಹೇಳಿದರು. ಅದೇ ನೆಪದಿಂದ ಪಟ್ಟಾಚಾರ್ಯರಿಗೂ ರತ್ನಾಕರನಿಗೂ ಸಂವಾದವು ಬೆಳೆದು ಚರ್ಚೆಯಾಯಿತು. ಕುಪಿತರಾದ ಆಚಾರ್ಯರು ಕವಿಯನ್ನು ತಿರಸ್ಕರಿಸಿ ಏಳುನೂರು ಶ್ರಾವಕರಲ್ಲಿ ಆತನಿಗೆ ಭಿಕ್ಷೆ ದೊರೆಯದಂತೆ ಮಾಡಿದರು. ರತ್ನಾಕರನು ತನ್ನ ತಂಗಿಯಿಂದ ಆಹಾರವನ್ನು ಪಡೆಯುತ್ತಾ ಇದ್ದು, ತನಗಾದ ಅನ್ಯಾಯಕ್ಕೆ ಜಿನಧರ್ಮವನ್ನೇ ಗುರಿಮಾಡಿ, ಕೋಪದಿಂದ ವೀರಶೈವಮತಕ್ಕೆ ಸೇರಿದನು. "ಆತ್ಮಜ್ಞಾನಿಗೆ ಜಾತಿಕುಲ ಯಾವು ದಾದೊಡಂ ಸಮಮೆಂದು" ಲಿಂಗಧಾರಣೆ ಮಾಡಿಕೊಂಡು ವೀರಶೈವ ಶಾಸ್ತ್ರಗಳ ಪರಿಚಯವನ್ನು ಪಡೆದನು. ಆದರೆ ಕೆಲವು ದಿನಗಳಲ್ಲಿಯೇ ತನ್ನ ಕೋಪವು ಉಪಶಮನ ವಾಗಲು ಪುನಃ ಜೈನಮತಾವಲಂಬಿಯಾಗಿ ಸನ್ಮಾರ್ಗದಲ್ಲಿ ನಂಬಿ ನಡೆದನು.

ಕವಿಯ ವಿಚಾರವಾದ ಮತ್ತೊಂದು ಕಥೆಯೂ ಪ್ರಚಾರದಲ್ಲಿರುವಂತೆ ಭರತೇಶ ವೈಭವದ ಮುನ್ನುಡಿಯಿಂದ ತಿಳಿದುಬರುತ್ತದೆ. ಚಾರುಕೀರ್ತಿಯೋಗಿಯಿಂದ ಎಳೆ

ವರೆಯುದಲ್ಲಿಯೇ ದೀಕ್ಷೆವಡೆದ ರತ್ನಾಕರನು ದಿನದಿನಕ್ಕೂ ಹೆಚ್ಚುಹೆಚ್ಚು ಕೀರ್ತಿ ಶಾಲಿಯಾಗುತ್ತಾ ತನ್ನ ಶಿಷ್ಯಸಮುದಾಯದಿಂದ ಪರಿವೇಷ್ಟಿತನಾಗಿರಲು, ಕೆಲವು ಕುಹಕಿಗಳು ಮಾತ್ಸರ್ಯದಿಂದ ಆತನು ಮಲಗುವ ಮಂಚದ ಕೆಳಗೆ ಒಬ್ಬ ವೇಶ್ಯೆ ಯನ್ನು ಬೈಚಿಟ್ಟು ಈತನ ಹೆಸರಿಗೆ ಕಳಂಕವನ್ನು ತಂದೊಡ್ಡಲು ಯತ್ನಿಸಿದರು. ಅವಮಾನಿತನಾದ ರತ್ನಾಕರನು ಶಿಷ್ಯರ ಬೇಡಿಕೆಗಳೆಲ್ಲವನ್ನೂ ನಿರಾಕರಿಸಿ ಸೆಟ್ಟನೆ ನಡೆದು ಹೊಳೆಯನ್ನು ಸೇರಿ ಜಿನಧರ್ಮಕ್ಕೆ ತಿಲಾಂಜಲಿಯನ್ನು ಕೊಟ್ಟೆನೆಂದು ಹೇಳಿ ನೀರಿನಲ್ಲಿ ಮುಳುಗಿದನು. ಅಲ್ಲಿಂದ ಮೇಲೆದ್ದು ಘಟ್ಟದ ಮೇಲಕ್ಕೆ ಹೋಗಿ, ಅಲ್ಲಿ ಶೈವಗ್ರಂಥವೊಂದನ್ನು ಆನೆಯಮೇಲೇರಿಸಿ ಮೆರೆಸುತ್ತಿದ್ದುದನ್ನು ಕಂಡನು. ಈತನಿಗೆ ಆ ಗ್ರಂಥವು ನೀರಸವೆಂದು ತೋರಲು ಮುಚ್ಚುಮರೆಯಿಲ್ಲದೆ ಎಲ್ಲರ ಮುಂದೆ ತನ್ನ ಅಭಿಪ್ರಾಯವನ್ನು ಸಾರಿದನು. ಕುಪಿತರಾದ ಜನರು ರಾಜನಲ್ಲಿ ದೂರಿದರು. ರಾಜನು ರತ್ನಾಕರನನ್ನು ಕರೆಸಿ ಪ್ರಶ್ನಿಸಲು, ಆತನು ನಿರ್ಭಯದಿಂದ ಒಂಬತ್ತು ತಿಂಗಳ ಅವಧಿಯೊಳಗಾಗಿ ರಸವೆಂದರೇನೆಂಬುದನ್ನು ಕಾಣಿಸುವುದಾಗಿ ಮಾತುಕೊಟ್ಟು, ಆ ಅವಧಿಯೊಳಗಾಗಿ ಭರತೇಶವೈಭವವೆಂಬ ಹತ್ತುಸಹಸ್ರ ಪದ್ಯಗಳನ್ನೊಳಗೊಂಡ ಮಹಾ ಗ್ರಂಥವನ್ನು ಬರೆದು, ರಾಜನನ್ನೂ ಆತನ ಸಭಾಸದರನ್ನೂ ಮೆಚ್ಚಿಸಿದನು. ಅನಂತರ ರಾಜನ ಬೇಡಿಕೆಯಂತೆ ವೀರಶೈವ ಮತವನ್ನವಲಂಬಿಸಿದನು. ಆದರೂ, ತನ್ನ ಮರಣಾನಂತರ ಉತ್ತರಕ್ರಿಯೆಗಳನ್ನು ಜೈನರೇ ಮಾಡಬೇಕೆಂದು ತಿಳಿಸಿದನು. ಸಾಯುವುದಕ್ಕೆ ಮುಂಚೆಯೇ ತಾನು ಮನಸಾ ಜೈನನಾಗಿಯೇ ಇದ್ದನೆಂಬುದನ್ನೂ, ತಾನು ಕೊರಳಲ್ಲಿ ಕಟ್ಟಿಕೊಂಡಿದ್ದುದು ಒಂದು ಗೋಟಡಿಕೆಯೇ ಹೊರತು ಲಿಂಗವಲ್ಲ ವೆಂಬುದನ್ನೂ, ಎಲ್ಲರಿಗೂ ಕಾಣಿಸಿದನು.

ಈ ಮೇಲಿನ ಎರಡು ಕಥೆಗಳೂ ಜೈನಮತೀಯನಾದ ಈ ಕವಿಯು ಒಮ್ಮೆ ವೀರಶೈವಮತವನ್ನು ಅವಲಂಬಿಸಿದ್ದಿರಬೇಕೆಂದೂ, ಯಾವುದೋ ಒಂದು ಕಾವ್ಯದ ಮೇಲಿನ ಸ್ಪರ್ಧೆಯಿಂದ ಭರತೇಶವೈಭವವನ್ನು ಬರೆದನೆಂದೂ ತಿಳಿಸುವ ವಾಗಿರುತ್ತವೆ.

ಕವಿಯ ಕಾಲದ ವಿಚಾರವಾಗಿ ವಿವಾದಕ್ಕೆ ಆಸ್ಪದವೇನೂ ಇಲ್ಲ. ಮೇಲೆಯೇ ತಿಳಿಸಿರುವಂತೆ, ತ್ರಿಲೋಕಶತಕದ ಕಡೆಯ ಪದ್ಯವು ಕವಿಯ ಕಾಲವನ್ನು ಸ್ಪಷ್ಟ ಪಡಿಸುತ್ತದೆ. ಮಣಿ ಶೈಲಂ ಗತಿಯಿಂದು ಶಾಲಿಶತಕ ಕಾಲಂ ಸಂದಿರಲ್ ಶೌಳವಾಂಗಣ ದೊಳ್ ವೇಣುಪುರಾಂಕದೊಳ್ ಸೃಜಿಸಿದಂ ರತ್ನಾಕರಾರ್ಯ" ಎಂಬ ಪದ್ಯಭಾಗವು ಕವಿಯು ಶಕ ೧೪೭೯ ರಲ್ಲಿ ಎಂದರೆ ಕ್ರಿ. ಶ. ೧೫೫೭ ರಲ್ಲಿ ತ್ರಿಲೋಕಶತಕವನ್ನು ಬರೆದನೆಂದು ಸ್ಪಷ್ಟಪಡಿಸುತ್ತದೆ. ಇವನ ಕಾಲವು ಕ್ರಿ. ಶ. ೧೫೫೭ ರ ಹಿಂದು

ಮುಂದಿನದೂ, ಇವನ ಗ್ರಂಥಗಳು ಆ ಕಾಲಕ್ಕೆ ಸ್ವಲ್ಪ ಹಿಂಚುಮುಂಚೆ ಬರೆದವುಗಳೂ ಆಗಿರಬೇಕು. ಶಕ ೧೫೮೨ ಎಂದರೆ ಕ್ರಿ. ಶ. ೧೬೬೦ ರಲ್ಲಿ ಪ್ರತಿಮಾಡಿಕೊಂಡಿರುವ ಭರತೇಶವೈಭವವು ಮೂಡಬಿದಿರೆಯಲ್ಲಿ ದೊರೆತಿರುವುದರಿಂದ, ಕವಿಯ ಕಾಲವು ಹದಿನಾರನೆಯ ಶತಮಾನದ ಮಧ್ಯ ಮತ್ತು ಅಂತ್ಯಗಳಲ್ಲಿದ್ದಿರಬೇಕೆಂದು ಊಹಿಸುವುದೂ ಹೆಚ್ಚು ತಪ್ಪಾಗಲಾರದು.

ಕವಿಯ ಗ್ರಂಥಗಳ ವಿಷಯವಾಗಿ ಮಾತ್ರ ಬೇಕಾದಷ್ಟು ವಾದವಿವಾದಗಳಿದ್ದಿವೆ. ಶತಕತ್ರಯಗಳಲ್ಲೊಂದಾದ ರತ್ನಾಕರಶತಕವನ್ನು ಬರೆದ ಕವಿಯು, ಉಳಿದ ಎರಡು ಶತಕಗಳನ್ನೂ ಭರತೇಶವೈಭವನನ್ನೂ ಬರೆದ ಕವಿಯಿಂದ ಭಿನ್ನನಾಗಿರಬೇಕೆಂಬುದು ಒಂದು ಮತ. ಈ ಮತದ ಮುಖ್ಯ ಪೋಷಕರು ದಿವಂಗತ ಆರ್. ನರಸಿಂಹಾಚಾರ್ಯರು. ಅವರ ವಾದಸರಣಿಯಿದು:—

i. ಭರತೇಶವೈಭವ, ಅಪರಾಜಿತೇಶ್ವರ ಶತಕ, ತ್ರಿಲೋಕ ಶತಕಗಳನ್ನು ಬರೆದ ರತ್ನಾಕರವರ್ಣಿಯು ತನ್ನ ಗ್ರಂಥಗಳಲ್ಲಿ ಅಪರಾಜಿತೇಶ್ವರ, ಮಂದರಸ್ವಾಮಿಗಳನ್ನು ಸ್ತುತಿಸಿದ್ದಾನೆ. ಅಲ್ಲದೆ ಚಿದಂಬರ ಪುರುಷ, ನಿರಂಜನಸಿದ್ಧ ಎಂಬ ವಿಶೇಷಣಗಳನ್ನು ಪ್ರಯೋಗಿಸಿದ್ದಾನೆ. ಆದರೆ ಶೃಂಗಾರಕವಿ ಹಂಸರಾಜಕೃತವಾದ ರತ್ನಾಕರಾಧೀಶ್ವರ ಶತಕದಲ್ಲಿ ಇವುಗಳು ಕಂಡುಬರುವುದಿಲ್ಲ.

ii. ರತ್ನಾಕರವರ್ಣಿಯ ಗುರು ಚಾರುಕೀರ್ತಿ; ಹಂಸರಾಜನ ಗುರು ದೇವೇಂದ್ರಕೀರ್ತಿ.

iii. ದೇವಚಂದ್ರನು ರತ್ನಾಕರವರ್ಣಿಯ ಗುರು ಮಹೇಂದ್ರಕೀರ್ತಿಯೆಂದು ಹೇಳಿರುವನಾದರೂ ಅವನು ಹೇಳುವಂತೆ ರತ್ನಾಕರವರ್ಣಿಯೂ (1557) ದ್ವಾದಶಾನುಪ್ರೇಕ್ಷೆಯ ಕರ್ತೃ ವಿಜಯಣ್ಣನೂ (1448) ಸಮಕಾಲೀನರು. ಅಲ್ಲದೆ ನುಡಿ ನಂಬಲರ್ಹವಾದುದಲ್ಲ. ರತ್ನಾಕರವರ್ಣಿಯೇ ಹೇಳಿರುವ ಮಾತುಗಳನ್ನು ಬಿಟ್ಟು ದೇವಚಂದ್ರನ ಮಾತುಗಳನ್ನು ನಂಬುವುದೇಕೆ? ಒಂದು ಪಕ್ಷ ನಂಬಿದರೂ ಮಹೇಂದ್ರಕೀರ್ತಿ ದೇವೇಂದ್ರಕೀರ್ತಿ ಎಂಬ ಹೆಸರುಗಳು ಬೇರೆ ಬೇರೆ ವ್ಯಕ್ತಿಗಳನ್ನು ಸೂಚಿಸುತ್ತವೆ, ಎನ್ನುವುದಕ್ಕೆ ಶಾಸನದಲ್ಲಿ ಉದಾಹರಣೆಗಳಿವೆ.

iv. ಶಬ್ದಮಣಿದರ್ಪಣದ ೨೮೯ ನೆಯ ಸೂತ್ರದ ಕೆಳಗೆ ಕೇಶಿರಾಜನು ಹಂಸರಾಜನೆಂಬ ಒಬ್ಬ ಪೂರ್ವಕವಿಯನ್ನು ಸ್ಮರಿಸಿರುತ್ತಾನೆ. ಆ ಹಂಸರಾಜನೆಂಬವನು ಬಹುಶಃ ರತ್ನಾಕರಾಧೀಶ್ವರ ಶತಕದ ಕರ್ತೃವಾಗಿರಬೇಕು.

v. ರತ್ನಾಕರನು ತನ್ನ ಗ್ರಂಥಗಳಲ್ಲಿ ಯಾವ ಕವಿಯನ್ನೂ ಹೆಸರಿಸಿಲ್ಲ. ಆದರೆ ಕವಿರಾಜ ಹಂಸನು ಅಗ್ಗಳ, ಮಧುರ, ಇತ್ಯಾದಿ ಕವಿಗಳ ಹೆಸರನ್ನು ಹೇಳುತ್ತಾನೆ.

vi. ಶತಕತ್ರಯವನ್ನು ಸಂಪಾದಿಸಿರುವ ಶಾಂತಿರಾಜ ಶಾಸ್ತ್ರಿಗಳು ರತ್ನಾಕರಾಧೀಶ್ವರ ಶತಕದ ಕೊನೆಯಲ್ಲಿ ಬರುವ ಗದ್ಯವನ್ನು ಉಳಿದೆರಡು ಶತಕಗಳ ಕೊನೆಯಲ್ಲಿಯೂ ಸೇರಿಸಿದ್ದಾರೆ. ಕವಿಚರಿತೆಕಾರರ ಗಮನಕ್ಕೆ ಬಂದಿರುವ ಯಾವ ಆ ಪ್ರತಿಗಳಲ್ಲಿಯೂ ಆ ಗದ್ಯಭಾಗವು ಕಂಡುಬರುವುದಿಲ್ಲ.

ಆದರೆ ಎದುರು ಪಕ್ಷದವರು ಮೇಲಿನ ಆಕ್ಷೇಪಣೆಗಳಿಗೆಲ್ಲಕ್ಕೂ ಸಮರ್ಪಕವಾಗಿ ಇದುವರೆಗೆ ಯಾವ ಉತ್ತರವನ್ನೂ ಕೊಟ್ಟಿಲ್ಲವಾದರೂ, ಅವರ ಪ್ರತಿವಾದವನ್ನೂ ಒಳಕೊಂಡು ಇಷ್ಟು ಹೇಳಬಹುದು.

i. ಶೃಂಗಾರ ಕವಿ ಹಂಸರಾಜನೆಂಬುದು ರತ್ನಾಕರವರ್ಣಿಯ ಒಂದು ಬಿರುದೇ ಹೊರತು, ಆ ಹೆಸರಿನ ಬೇರೊಬ್ಬ ಕವಿಯಿದ್ದನೆಂದು ಹೇಳುವುದಕ್ಕಾಗುವುದಿಲ್ಲ. ರಾಜಹಂಸ ಅಥವಾ ಹಂಸರಾಜ ಎಂದರೆ ರಾಜಶ್ರೇಷ್ಠನೆಂದು ಅರ್ಥ. ಶೃಂಗಾರಕವಿ ರಾಜಹಂಸನೆಂದರೆ ಶೃಂಗಾರಕವಿಗಳಲ್ಲಿ ಬಹಳ ಶ್ರೇಷ್ಠನಾದವನು ಎಂದಾಗುತ್ತದೆ. ಭರತೇಶವೈಭವವನ್ನು ಓದಿದಲ್ಲಿ ಈ ಕವಿಯು ಈ ಬಿರುದಿಗೆ ಹೇಗೆ ಪಾತ್ರನೆಂಬುದು ಕಂಡುಬರದೆ ಇರಲಾರದು.

ii. ದೇವಚಂದ್ರನ ಕಥೆಯನ್ನು ದಂತಕಥೆಯೆಂದು ಅಲ್ಲಗಳೆಯುವುದು ಸರಿಯಲ್ಲ. ಆ ಕಥೆಯ ಅಂತರಾಳದಲ್ಲಿ ಸತ್ಯವಿದೆ. ಕಥೆಯೆಂದ ಮೇಲೆ ಸತ್ಯದ ಮೇಲೆ ಅಸತ್ಯದ ಬಣ್ಣವನ್ನು ಬಳಿಯಬೇಕಾಗಿರುತ್ತದೆ. ಆದರೆ ರತ್ನಾಕರನ ಗುರುವಿನ ವಿಚಾರದಲ್ಲಿ ಸುಳ್ಳು ಹೇಳಿ ಅವನು ಸಾಧಿಸಬೇಕಾಗಿರುವ ಮಹಾಕಾರ್ಯವೇತರದು? ಕವಿಯು ಸೂರ್ಯವಂಶದ ರಾಜಕುಮಾರನೆಂದು ದೇವಚಂದ್ರನು ಹೇಳಿರುವ ಮಾತು ಸುಳ್ಳೆ? ಕವಿಯೇ ಭರತೇಶವೈಭವದಲ್ಲಿ ತಾನು ಸೂರ್ಯವಂಶಜನೆಂದು ಹೇಳಿಕೊಂಡಿಲ್ಲವೆ? ಮಹೇಂದ್ರಕೀರ್ತಿ, ದೇವೇಂದ್ರಕೀರ್ತಿಗಳೆಂಬವರು ಬೇರೆಬೇರೆ ಕವಿಗಳೆಂದು ಸಾಧಿಸ ಹೊರಟರೆ, ದೇವಸೂರೂ ಸುರಪುರವೂ ಬೇರೆಬೇರೆಯೆಂದು ಹೂಡುವ ವಾದದಂತೆ ಆಗುವುದಿಲ್ಲವೆ?

iii. ಶಬ್ದಮಣಿದರ್ಪಣಕಾರನು ಹೇಳುವ ಹಂಸರಾಜನು ಶೃಂಗಾರಕವಿ ಹಂಸರಾಜನಿಂದ ಪ್ರತ್ಯೇಕವಾಗಿರಬೇಕು. ಹಂಸರಾಜಕವಿಯು ಬರೆದಿರುವ ಗ್ರಂಥವು ಇನ್ನೂ ಬೆಳಕಿಗೆ ಬರದೆ ಗುಪ್ತಸುಪ್ತಿಯಲ್ಲಿರಬಹುದು. ಹೀಗೆ ನಿಶ್ಚಿಂತೆಯಿಂದ ಕಣ್ಮರೆಯಲ್ಲಿ ಕುಳಿತಿರುವ ಗ್ರಂಥವು ಕನ್ನಡದಲ್ಲಿ ಇದೊಂದೇ ಅಲ್ಲ.

iv. ರತ್ನಾಕರಾಧೀಶ್ವರಶತಕದ ಕರ್ತೃವು ರತ್ನಾಕರನೇ ಇರಬೇಕೆನ್ನುವುದಕ್ಕೆ ಮುಖ್ಯವಾದ ಮತ್ತೊಂದು ಕಾರಣ ಗ್ರಂಥದ ಆಂತರಿಕಪ್ರಮಾಣ. ರತ್ನಾಕರನ

ಇತರ ಗ್ರಂಥಗಳಲ್ಲಿ ಕಂಡುಬರುವ ಪದ್ಯಭಾಗಗಳು ರತ್ನಾಕರಶತಕದಲ್ಲಿ ಕಂಡು ಬರುತ್ತವೆ.*

v. ರತ್ನಾಕರನು ವೀರಶೈವನಾಗಿ ಪುನಃ ಜೈನಮತವನ್ನು ಅಂಗೀಕರಿಸಿದ ಮೇಲೆ ಇವನಿಗೆ ಬೇರೊಬ್ಬ ಗುರು ಸಿಕ್ಕಿರಬಹುದು. ಆತನೇ ಮಹೇಂದ್ರ ಕೀರ್ತಿಯಾಗಿರಬಹುದು. ಎರಡನೆಯಬಾರಿ ಜೈನಮತವನ್ನು ಸ್ವೀಕರಿಸಿದ ಮೇಲೆ ರತ್ನಾಕರಾಧೀಶ್ವರಶತಕವನ್ನು ಬರೆದನೆಂದು ನಾವು ಇಟ್ಟುಕೊಳ್ಳುವುದಾದರೆ ಮಹೇಂದ್ರಕೀರ್ತಿಯನ್ನು ಸ್ಮರಿಸಿರುವುದು ನ್ಯಾಯವಾಗಿಯೇ ತೋರುತ್ತದೆ. ಎಂದರೆ ಕವಿಗೆ ಇಬ್ಬರು ಗುರುಗಳಿದ್ದರೆಂದು ಹೇಳಿದಂತಾಗುತ್ತದೆ. ವೀರಶೈವ ಮತಕ್ಕೆ ಸೇರುವುದಕ್ಕೆ ಮೊದಲು ಚಾರುಕೀರ್ತಿ, ಎರಡನೆಯಬಾರಿ ಜೈನನಾದಮೇಲೆ ಮಹೇಂದ್ರಕೀರ್ತಿ.

ಮೇಲಿನ ವಾದವನ್ನು ಒಪ್ಪಿದ ಪಕ್ಷದಲ್ಲಿ ರತ್ನಾಕರವರ್ಣಿಯ ಅಧ್ಯಾತ್ಮ ಜೀವನವನ್ನು ಅವನ ಗ್ರಂಥಗಳಿಂದ ಊಹಿಸಿ ನಿರ್ಧರಿಸಬಹುದು. ಈತನು ಹಲವು ಕಾಲ ಅತ್ಯಂತ ಸುಖಿಯಾದ ಸಂಸಾರಿಯಾಗಿದ್ದು ಅನಂತರ ವರ್ಣಿ ಅಥವಾ ಬ್ರಹ್ಮ

---

### ಶತಕತ್ರಯದ ಪೀಠಿಕೆ

| * ರತ್ನಾಕರಾಧೀಶ್ವರ ಶತಕ | ಭರತೇಶ ವೈಭವ |
| --- | --- |
| ಸಿಲೆಯೊಳ್ ಸುವರ್ಣಮರಲೊಳ್ ಸೌರಭ್ಯಮಾಕ್ಷೀರದೊಳ್ ನರುನ್ಯೆ ಕಾಷ್ಠದೊಳಗ್ನಿಯಿರ್ಪ ತೆರದಿಂದೀಮೆಯ್ಯೊಳೊಂದಿರ್ಪನು. | ಕನಕ ಕಲ್ಲೊಳಗೆ ಕಾಷ್ಠದೊಳಗ್ನಿ ಪಾಲೊಳಗನುವಿಡಿದಾಜ್ಯವಿಪ್ಪಂತೆ ತನುವಿನೊಳಿಹ ನಾತ್ಮಂ. |
| ಬಿಸಿಲಿಂ ಕಂದದ ಬೆಂಕಿಯಿಂ ಸುಡದ ನೀರಿಂ ನಾಂದದುಗ್ರಾಸಿ ಭೇದಿಸಲುಂ ಬಾರದ ಚಿನ್ಮಯಂ ಮರೆದು ತನ್ನೊಳ್ಪಂ ಪರಧ್ಯಾನದಿಂ ಪಸಿವಿಂದೀ ಬಹುಬಾಧೆಯಿಂ ರುಜೆಗಳಿಂ ಕೇಡಾಗುವೀ ಮೈಗೆ ಸಂದಿಸಿದಂ. | ನೀರಿಂದ ನೆನೆಯ ಕಿಚ್ಚಿಂದ ಬೇಯನು ಖಡ್ಗಧಾರೆಗೆ ಸಂದಿಸನಾತ್ಮ, ನೀರು ಕಿಚ್ಚಾಯುಧ ರುಜೆಗಳ ಬಾಧೆ ಶರೀರಕೆ. |
| ಕವಿತಾ ಶಕ್ತಿಯೆ ಕಲ್ಪವಲ್ಲಿ. | ಕವಿತೆಯೆಂಬುದು ಕಲ್ಪತರು. |
| ನಳಿನೀ ನಾಳಕೆ ಮೂಲದಿಂ ತುದಿವರಂ ಸಂಪೂರ್ಣದಿಂ ಸ್ವಚ್ಛದಿಂದೊಳಗೆಂತಿರ್ಪುದು ತಂತುವಂತೆ ನರರ್ಗಂ ಕೆಂಬಜ್ಜೆಯಿಂ ನೆತ್ತಿಮುಟ್ಟಳತೆಂತಪ್ಪದೆ ಮೂರ್ತಿ ತುಂಬಿ ಪಳುಕಿಂಗೆಯ್ಸಿರ್ದ ಸಿಮ್ಮೊಂದು ನಿರ್ಮಳ ಬಿಂಬೋಪಮನಾತ್ಮ ನಿರ್ದಪಂ. | ಅಂಬುಜನಾಳಕೆ ಮೊದಲಿಂದ ತುದಿಮುಟ್ಟ ತುಂಬಿ ನೂಲಿರ್ಪ ರೀತಿಯೊಳು, ಕೆಂಬಜ್ಜೆಯಿಂದ ಮಸ್ತಕಮುಟ್ಟ ಜೀವ ಮೈತುಂಬಿಹನು. |

ಚಾರಿಯಾಗಿದ್ದನೆಂದು ತೋರುತ್ತದೆ. ಭರತೇಶವೈಭವವನ್ನು ಬರೆದಾಗಲಂತೂ ಈತನು ಸನ್ಯಾಸಿಯಾಗಿದ್ದನೆಂದು ಹೇಳುವುದು ಬಹು ಸಾಹಸದ ಮಾತೆಂದೇ ಹೇಳಬೇಕು. ಭರತೇಶವೈಭವವನ್ನು ವಿಸ್ತಾರವಾಗಿ ಪರಿಶೀಲಿಸುವಾಗ ಈ ವಿಷಯ ವನ್ನು ಹೆಚ್ಚಾಗಿ ವಿಮರ್ಶಿಸೋಣ.

ರತ್ನಾಕರನು ಜೈನಾಗಮಗಳಲ್ಲಿ ಹಲವನ್ನು ಓದಿರಬೇಕು. ಅಲ್ಲದೆ ಕವಿಗೆ ಬೇಕಾದ ಎಲ್ಲಾ ಗ್ರಂಥಗಳನ್ನೂ ಇವನು ಅಭ್ಯಾಸಿಸಿರಬೇಕು. ಅಂತೂ ಇವನು ಬಹು ಸುಸಂಸ್ಕೃತನಾದ ಕವಿ. ದೈವದತ್ತವಾದ ಪ್ರತಿಭೆ, ಧರ್ಮಾನುರಾಗ ಇವುಗಳು ಇವನ ಜೀವದ ಉಸಿರು.

## ಭರತೇಶ ವೈಭವ—ಗ್ರಂಥದ ಮೂಲ

ರತ್ನಾಕರನ ಗ್ರಂಥಗಳಲ್ಲಿ ಭರತೇಶವೈಭವವು ಕವಿತಾದೃಷ್ಟಿಯಿಂದ ಅಗ್ರಸ್ಥಾನಾರ್ಹವಾದುದು. ಅದ್ಭುತವಾದ ಈ ದೊಡ್ಡ ಗ್ರಂಥವನ್ನು ವೃಷಭಮಾಸದಲ್ಲಿ ಪ್ರಾರಂಭಿಸಿ ಕುಂಭಮಾಸದಲ್ಲಿ ಎಂದರೆ ಒಂಬತ್ತು ತಿಂಗಳುಗಳ ಅವಧಿಯಲ್ಲಿ ಪೂರೈಸ ಬೇಕಾದರೆ, ಅವನ ಕವಿತಾಶಕ್ತಿಯು ಅಸಾಧಾರಣವಾದುದಾಗಿರಬೇಕು. ಆದರೆ ಕಥೆಯು ಕವಿಯ ಸ್ವಕಪೋಲ ಕಲ್ಪಿತವಾದುದೇನೂ ಅಲ್ಲ. ಭರತನ ಚರಿತ್ರೆಯನ್ನು ಬರೆದಿರುವ ಇತರ ಎಲ್ಲಾ ಜೈನಕವಿಗಳಂತೆ ಇವನಿಗೂ ಜಿನಸೇನನ 'ಜಿನಸೇನ ಪುರಾಣ'ವೇ ಮೂಲ. ಇದಲ್ಲದೆ ಅನಿರ್ದಿಷ್ಟಕರ್ತೃಕವಾದ 'ಬಾಹುಬಲಿ ಪುರಾಣ'ವು ಹದಿನಾಲ್ಕು ಅಥವಾ ಹದಿನೈದನೆಯ ಶತಮಾನದ ಹೊತ್ತಿಗೆ ಸಾಂಗತ್ಯದ ಛಂದಸ್ಸಿನಲ್ಲಿ ಹುಟ್ಟಿಕೊಂಡಿತ್ತು. ಕನ್ನಡದ ಆದಿಕವಿಯಾದ ಪಂಪನು ತನ್ನ 'ಆದಿಪುರಾಣ'ದ 'ದಿಗ್ವಿಜಯ ಪ್ರಕರಣ'ದಲ್ಲಿ ಭರತ-ಬಾಹುಬಲಿಗಳ ಆಖ್ಯಾನವನ್ನು ಸುಂದರವಾಗಿ ಚಿತ್ರಿಸಿದ್ದನು. ಆದರೂ ಭರತನನ್ನೇ ಕಥಾನಾಯಕನನ್ನಾಗಿ ಮಾಡಿಕೊಂಡು ವಿಸ್ತಾರ ವಾಗಿ ಪ್ರತಿಪಾದಿಸಿದ ಕೀರ್ತಿಯು ರತ್ನಾಕರವರ್ಣಿಗೇ ನಿರ್ವಿವಾದವಾಗಿ ಸಲ್ಲತಕ್ಕದ್ದು.

ಕವಿಗೆ ಬೇರೆ ಬೇರೆ ಹೆಸರುಗಳಿರುವಂತೆ ಅವನ ಗ್ರಂಥಕ್ಕೂ ಹಲವು ಹೆಸರುಗಳಿವೆ. ವಾಡಿಕೆಯಲ್ಲಿ ಭರತೇಶ ವೈಭವವೆಂದು ಕರೆದರೂ, ಭರತೇಶ ಸಂಗತಿ, ಅಣ್ಣಾಳ ಚರಿತೆ ಎಂಬ ಹೆಸರುಗಳಿಂದಲೂ ಕೆಲರು ಹೆಸರಿಸುವುದುಂಟು. ಈ ಗ್ರಂಥವು ಭೋಗವಿಜಯ, ದಿಗ್ವಿಜಯ, ಯೋಗವಿಜಯ, ಮೋಕ್ಷವಿಜಯ, ಅರ್ಕಕೀರ್ತಿವಿಜಯ ಎಂದು ಐದು ಭಾಗಗಳಾಗಿದೆ. ರಾಜಾವಳಿಯ ಹೇಳಿಕೆಯಂತೆ ಇದರಲ್ಲಿ ಎಂಬತ್ತುನಾಲ್ಕು ಸಂಧಿಗಳಿರಬೇಕಾಗಿತ್ತು. ಆದರೆ ಕಡೆಯ ನಾಲ್ಕು ಸಂಧಿಗಳು ಶೋಭನಸಂಧಿಗಳಾಗಿ ದ್ದುದರಿಂದ ಅವುಗಳನ್ನು ಬರೆದಿಡುವ ಪರಿಪಾಟಿ ತಪ್ಪಿ ನಷ್ಟವಾಗಿಹೋಗಿವೆ. ಈಗ ೮೦ ಸಂಧಿಗಳು ಮಾತ್ರ ಉಳಿದಿವೆ.

## ಕಥಾಸಾರ

ಭರತಭೂತಳಕ್ಕೆ ಸಿಂಗರವಾದ ಅಯೋಧ್ಯಾಪುರದಲ್ಲಿ ಪುರುಪರಮೇಶ್ವರ ಪ್ರಥಮ ತೀರ್ಥಂಕರನ ಹಿರಿಯ ಕುಮಾರನೂ ಹದಿನಾರನೆಯ ಮನುವೂ, ಪ್ರಥಮ ಚಕ್ರೇಶ್ವರನೂ ಆದ ಭರತಚಕ್ರವರ್ತಿಯು ರಾಜ್ಯವಾಳುತ್ತಿದ್ದನು. ಉದಯದಲ್ಲಿಯೇ ಎದ್ದು ದೇವತಾರ್ಚನೆಯನ್ನು ಮಾಡಿ, ತನ್ನ ಒಡ್ಡೋಲಗವನ್ನು ನೆರಹಿ, ಮಧ್ಯಾಹ್ನದ ವರೆಗೂ ಕವಿಗಾಯಕರ ಗೋಷ್ಠಿಯಲ್ಲಿದ್ದು, ಅನಂತರ ಮುನಿಭುಕ್ತಿ ನಿಯಮವನ್ನು ಪಾಲಿಸಿದ ಮೇಲೆ ತನ್ನ ಸಹಸ್ರಾರು ರಾಣಿಯರೊಂದಿಗೆ ಉಳಿದ ದಿನವನ್ನು ಭೋಗ ಯೋಗಗಳ ಸಾಮರಸ್ಯದಲ್ಲಿ ಕಳೆವುದು ಆತನ ದಿನಚರಿ. ಆತನಿಗೆ ಭೂಭಾರವನ್ನು ತಾಳಿರುವನೆಂಬ ಚಿಂತೆಯಿಲ್ಲ; ಒಂದರ ಮೇಲೂ ಕಾಮವಿಲ್ಲ; ಆಲಸ್ಯವಿಲ್ಲ. ವಿಸ್ತಾರವಾದ ರಾಜ್ಯವನ್ನು ಹೀಗೆ ಸುಕ್ಷೇಮದಿಂದ ಆಳುತ್ತಿರಲು ಒಮ್ಮೆ ದಿಗ್ವಿಜಯ ಸೂಚಕವಾದ ಚಕ್ರರತ್ನವು ಶಸ್ತ್ರಾಲಯದಲ್ಲಿ ಉದಿಸಿತು. ಮಂತ್ರಿಗಳಿಂದ ಇದನ್ನರಿತ ಭರತನು ದಿಗ್ವಿಜಯಕ್ಕಾಗಿ ಹೊರಟು ರಾಜರುಗಳನ್ನೆಲ್ಲಾ ಜಯಿಸಿ ಭೂಚರ ಖೇಚರ ಸ್ತ್ರೀರತ್ನಗಳನ್ನೂ, ಕಪ್ಪಕಾಣಿಕೆಗಳನ್ನೂ ಪಡೆದನು. ಭರತನು ಯುದ್ಧಕಾರ್ಯದಲ್ಲಿ ತೊಡಗಿದ್ದರೂ ಆತನಿಗೆ ಅದರ ಕಾತರತೆಯಾಗಲಿ ಭೀತಿಯಾಗಲಿ ಸ್ವಲ್ಪವೂ ಇಲ್ಲ. ಶೆಟ್ಟಿಯಿಳಿದಲ್ಲಿಯೇ ಪಟ್ಟಣವೆಂಬಂತೆ, ಆತನ ಸಂಸಾರವು ಯುದ್ಧಭೂಮಿಯಲ್ಲಿಯೂ ನಿರಾತಂಕವಾಗಿ ವೃದ್ಧಿಗೊಳ್ಳುತ್ತಾ ಹೋಗುತ್ತದೆ. ಆತನು ಹಲವು ಸ್ತ್ರೀಯರನ್ನು ಲಗ್ನಮಾಡಿಕೊಳ್ಳುತ್ತಾನೆ; ಆತನ ಕುಮಾರರಲ್ಲಿ ಹಲವರಿಗೆ ಲಗ್ನಮಾಡುತ್ತಾನೆ. ಆತನ ತೊಂಬತ್ತಾರುಸಹಸ್ರ ರಾಣಿಯರಲ್ಲಿ ಹಲವರು ಸುಕುಮಾರರನ್ನು ಹೆರುತ್ತಾರೆ. ವಿವಾಹೋತ್ಸವ ಪುತ್ರೋತ್ಸವಗಳ ಮಧ್ಯದಲ್ಲಿ ದಿಗ್ವಿಜಯಕಾರ್ಯವು ಯಶಸ್ವಿಯಾಗಿ ಕೊನೆಗಾಣುತ್ತದೆ. ಷಟ್ಖಂಡಗಳನ್ನು ಸಾಧಿಸಿದ ಭರತನು ಉತ್ಸಾಹಪೂರ್ಣವಾದ ತನ್ನ ಪರಿವಾರದೊಂದಿಗೆ ಅಯೋಧ್ಯೆಗೆ ಹಿಂತಿರುಗುತ್ತಿರುವಾಗ ಮಾರ್ಗವನ್ನು ಸೂಚಿಸುತ್ತಾ ಮುಂದೆ ಹೋಗುತ್ತಿದ್ದ ಚಕ್ರರತ್ನವು ಒಮ್ಮಿಂದೊಮ್ಮೆಗೆ ಮುಂದು ವರಿಯದೆ ನಿಂತುಹೋಗುತ್ತದೆ. ಚಕ್ರವರ್ತಿಯ ತಮ್ಮನಾದ ಭುಜಬಲಿಯು ಆತನ ಚಕ್ರವರ್ತಿತ್ವವನ್ನು ಒಪ್ಪದೆ ಸ್ಪರ್ಧಿಸುತ್ತಾನೆ. ಆದರೆ ದಯಾಳುವಾದ ಭರತನು ತಮ್ಮನೊಡನೆ ಹೋರದೆ, ಮಾತಿನಿಂದಲೇ ಆತನನ್ನು ಸೋಲಿಸುತ್ತಾನೆ. ಆಗ ಬಾಹುಬಲಿಯು ಕೃತಕಾರ್ಯ ಪಶ್ಚಾತ್ತಾಪದಿಂದ ವಿರಕ್ತನಾಗಿ ದೀಕ್ಷೆಯನ್ನು ಪಡೆದು ಯೋಗಿಯಾಗುತ್ತಾನೆ. ಆದರೆ ಘೋರತಪಸ್ಸಿನಿಂದಲೂ ಈತನಿಗೆ ಆತ್ಮಸಿದ್ಧಿ ಯಾಗದಿರಲು, ಭರತನು ತನ್ನ ತಂದೆಯಿಂದ ಅದಕ್ಕೆ ಕಾರಣವನ್ನರಿತು, ಭುಜಬಲಿಯ ಮನಃಕಷಾಯವನ್ನು ತೊಲಗಿಸಿ ಆತ್ಮಸಿದ್ಧಿಯನ್ನು ದೊರಕಿಸಿಕೊಡುತ್ತಾನೆ. ಭರತನ

ತಾಯಿಯಾದ ಯಶಸ್ವತೀ ದೇವಿಯು ದೀಕ್ಷೆ ಪಡೆದು ಕಂತಿಯಾಗುತ್ತಾಳೆ. ಇಲ್ಲಿಂದ ಮುಂದೆ ಭರತನ ಮನಸ್ಸು ಆಮುಷ್ಮಿಕದಕಡೆ ಹೆಚ್ಚಾಗಿ ಬಾಗುತ್ತದೆ. ರಜತಾದ್ರಿಯಲ್ಲಿ ನಿರ್ಮಿಸಿದ್ದ ಜನನಿವಾಸದ ಮುಖವಸ್ತ್ರವನ್ನು ಬಹಳ ವಿಜೃಂಭಣೆಯಿಂದ ಅನಾವರಣ ಗೊಳಿಸಿ ಮಹೋತ್ಸವವನ್ನು ನಡೆಸುತ್ತಾನೆ. ಇದ್ದಕ್ಕಿದ್ದಂತೆ ಭರತನ ನೂರ್ವರು ಮಕ್ಕಳು ಜಿನದೀಕ್ಷೆಯನ್ನು ವಹಿಸಿ ಸನ್ಯಾಸಿಗಳಾಗುತ್ತಾರೆ. ಇದನ್ನು ಕೇಳಿ ಚಿಂತಿತ ನಾದ ಚಕ್ರವರ್ತಿಯು ಸಮವಸರಣದಲ್ಲಿದ್ದ ಅವರ ಬಳಿಗೆ ಹೋಗಿ, ತೀರ್ಥೇಶ ಪೂಜೆಯನ್ನು ಮಾಡುತ್ತಾನೆ. ಮರುದಿನವೇ ಈತನ ತಂದೆಯಾದ ಆದಿ ತೀರ್ಥಂಕರ ವೃಷಭನಾಥನು ಮುಕ್ತನಾಗುತ್ತಾನೆ. ಅನಂತರ ಅಯೋಧ್ಯೆಗೆ ಹಿಂತಿರುಗಿದ ಭರತನು ಒಂದು ದಿನ ಕನ್ನಡಿಯಲ್ಲಿ ತನಗೆ ನರೆಗೂದಲು ಬಂದಿರುವುದನ್ನು ಕಂಡು ವೈರಾಗ್ಯಪರ ನಾಗುತ್ತಾನೆ; ಮಗನಾದ ಅರ್ಕಕೀರ್ತಿಗೆ ಪಟ್ಟಗಟ್ಟಿ ಸ್ವಮಹತ್ವದಿಂದ ತೈಜಸ ಕಾರ್ಮಣ ತನುಗಳನ್ನು ಸುಟ್ಟು ಕೈವಲ್ಯಪದವಿಯನ್ನು ಪಡೆಯುತ್ತಾನೆ. ನ್ಯಾಯವಾಗಿ ಇಲ್ಲಿಗೆ ಮುಗಿಯಬೇಕಾಗಿದ್ದ ಭರತೇಶ ವೈಭವ ಕಾವ್ಯವು, ಹಾಗಾಗದೆ ಇನ್ನು ಸ್ವಲ್ಪ ಮುಂದುವರಿದು ಅರ್ಕಕೀರ್ತಿಯೂ, ಆತನ ತಮ್ಮ ಆದಿರಾಜನೂ ದೀಕ್ಷೆವಡೆದು ಕ್ರಮವಾಗಿ ಮುಕ್ತಿಗೆ ಸಂದ ' ಅರ್ಕಕೀರ್ತಿ ವಿಜಯ 'ದೊಡನೆ ಮುಗಿಯುತ್ತದೆ.

## ಕಥಾವಸ್ತು

ಈ ಕಥೆ ಬಹಳ ಹಳೆಯದು; ಜೈನರಿಗೆ ಅತ್ಯಂತ ಪ್ರಿಯವಾದುದು. ಭರತನು ಆದಿ ತೀರ್ಥಂಕರನ ಮಗ. ಪುರುದೇವನು ಅರವತ್ತುಮೂರು ಶಲಾಕಾಪುರುಷರಲ್ಲಿ ಮೊದಲಿಗ. ಕವಿಗಳೆಲ್ಲರೂ ಪ್ರಥಮ ತೀರ್ಥಂಕರನ ಜೀವನ ಚರಿತ್ರೆಯನ್ನು ದೀರ್ಘ ವಾಗಿ ಬರೆದು, ಉಳಿದ ತೀರ್ಥಂಕರರ ಜೀವನ ಚರಿತ್ರೆಯಲ್ಲಿ ಪ್ರಸ್ತಾವದೇಶವನ್ನು ತರುತ್ತಾರೆ. ಆತನ ಜೀವನ ಚರಿತ್ರೆಯಂತೆಯೇ ಉಳಿದವರ ಚರಿತ್ರೆಯೂ ಇರುವುದು ಹೀಗೆ ಮಾಡುವುದರ ಕಾರಣವೆಂದು ತೋರುತ್ತದೆ. ಹೀಗೆಯೇ ಪ್ರಥಮಚಕ್ರಿಯ ಜೀವನವನ್ನು ವಿಸ್ತಾರವಾಗಿಯೂ, ಉಳಿದ ಚಕ್ರಿಗಳ ಜೀವನವನ್ನು ಮೊಟುಕಾಗಿಯೂ ವರ್ಣಿಸುವುದು ವಾಡಿಕೆ. ಈತನ ಜೀವನವು ಉಳಿದವರ ಜೀವನಕ್ಕೆ ಮಾದರಿ ಯಾಗಿರುತ್ತದೆ.

ಇದುವರೆಗೆ ಸಿಕ್ಕಿರುವವುಗಳಲ್ಲಿ ಭರತೇಶನ ಜೀವನವನ್ನು ತಿಳಿಸುವ ಮೊಟ್ಟ ಮೊದಲನೆಯ ಪುಸ್ತಕವೆಂದರೆ ಜಿನಸೇನನ ಆದಿಪುರಾಣ. ಆದಿತೀರ್ಥಂಕರನು ತನ್ನ ರಾಜ್ಯಾಡಳಿತದ ಅನಂತರ ತನ್ನ ಇಬ್ಬರು ಮಕ್ಕಳಿಗೆ ರಾಜ್ಯವನ್ನು ಹಂಚಿಕೊಡುತ್ತಾನೆ. ಪ್ರಥಮ ಪುತ್ರನಾದ ಭರತನು ಅಯೋಧ್ಯೆಯಲ್ಲೂ, ಎರಡನೆಯವನಾದ ಬಾಹುಬಲಿಯು

ಪೌದನ ಪುರದಲ್ಲಿಯೂ ರಾಜ್ಯವಾಳುತ್ತಿರುತ್ತಾರೆ. ಭರತನು ಚಕ್ರವರ್ತಿ ಪದವಿಯ ಸೌಖ್ಯಗಳೆಲ್ಲವನ್ನೂ ಅನುಭವಿಸುತ್ತಿದ್ದು ಪ್ರಥಮ ಚಕ್ರಿಯೆಂಬ ತನ್ನ ಹೆಸರು ಸಾರ್ಥಕವಾಗುವಂತೆ ಜಗತ್ತನ್ನೆಲ್ಲಾ ಜಯಿಸಿ, ತಮ್ಮನು ಮಾತ್ರ ಪ್ರತಿಭಟಿಸಲು ಅವನನ್ನು ಉಪಾಯದಿಂದ ಗೆದ್ದು, ಅಯೋಧ್ಯೆಯಲ್ಲಿ ರಾಜ್ಯವಾಳುತ್ತಿದ್ದು, ತಂದೆಯ ದರ್ಶನವನ್ನು ಮಾಡಿ ಕಡೆಗೆ ಕನ್ನಡಿಯಲ್ಲಿ ಪ್ರತಿಬಿಂಬಿಸಿದ ತನ್ನ ನರೆಗೂದಲನ್ನು ಕಂಡು ವೈರಾಗ್ಯದಿಂದ ತಪಸ್ಸಿಗೆ ಹೊರಟುಹೋಗುತ್ತಾನೆ. ಜಿನಸೇನನು ಭರತನ ಹಿಂದಿನ ಜೀವನವನ್ನು ವಿವರಿಸಿಲ್ಲ. ದಿಗ್ವಿಜಯದಿಂದ ಹಿಡಿದು ಮುಂದಕ್ಕೆ ಮಾತ್ರ ಅವನ ಜೀವನ ಸಿಕ್ಕುತ್ತದೆ. ಚಕ್ರವರ್ತಿಯಾಗುವುದಕ್ಕೆ ಮೊದಲು ಆತನು ಪಟ್ಟ ಸುಖಗಳನ್ನೂ ಭೋಗ ವಿಲಾಸಗಳನ್ನೂ ಅಲ್ಲಿ ವರ್ಣಿಸಿಲ್ಲ. ಜಿನಸೇನನನಂತರ ಬಂದ ಕವಿಗಳೂ ಅವನನ್ನೇ ಅನುಸರಿಸಿದರು. ಧಾರ್ಮಿಕ ಕಥೆಯಾದುದರಿಂದ ಮನಸ್ಸಿಗೆ ಬಂದಂತೆ ಬದಲಾಯಿಸುವ ಹಕ್ಕು ಯಾರಿಗೂ ಇಲ್ಲ. ಪಂಪನಂತಹ ಪ್ರತಿಭಾ ಶಾಲಿಯೂ ಕೂಡ ಬರಿಯ ಭಾಷಾಂತರಕಾರನಾಗಿಬಿಟ್ಟಿದ್ದಾನೆ. ಭಾರತದಲ್ಲಿ ಬೇಕಾದಷ್ಟು ವ್ಯತ್ಯಾಸಗಳನ್ನು ಮಾಡಿ ವಿಕ್ರಮಾರ್ಜುನ ವಿಜಯವನ್ನು ಬರೆದ ಈ ಕವಿ ತನ್ನ ಧರ್ಮಗ್ರಂಥದಲ್ಲಿ ಮಾತ್ರ ಸ್ವಲ್ಪವೂ ವ್ಯತ್ಯಾಸಗಳನ್ನು ಮಾಡಿಕೊಂಡಿಲ್ಲ. ಅನೇಕ ಕಡೆ ಜಿನಸೇನನ ಮಾತುಗಳನ್ನೇ ಹೆಣೆದು ತನ್ನ ಚಂಪೂವಿನಲ್ಲಿಡಲು ಸಹ ಆತನು ಹಿಂದುಮುಂದು ನೋಡುವುದಿಲ್ಲ. ಚಾವುಂಡರಾಯನೂ ಅಷ್ಟೆ. ಇವನನಂತರ ಬರೆದವನು ರತ್ನಾಕರ. ಈತನೂ ಅಷ್ಟೆ. ಭರತನ ದಿಗ್ವಿಜಯ, ಚಕ್ರರತ್ನದ ನಿಲ್ಲುವಿಕೆ, ಬಾಹುಬಲಿಯ ಉಪಾಖ್ಯಾನ ಇತ್ಯಾದಿಗಳೆಲ್ಲವೂ ಮೂಲದಲ್ಲಿದ್ದವುಗಳೇ. ಧರ್ಮ ಗ್ರಂಥದ ಕಟ್ಟುಪಾಡು ಇವನನ್ನು ಕಟ್ಟಿಹಾಕಿ ಮುಖ್ಯಕಥೆಯನ್ನು ಹಾಗೆಯೇ ಉಳಿಸಿದೆ.

## ಕವಿಯು ಮಾಡಿಕೊಂಡಿರುವ ಬದಲಾವಣೆಗಳು

ಆದರೆ ನಮ್ಮ ಕವಿಗೆ ಒಂದು ಸ್ವಾತಂತ್ರ್ಯವಿದೆ. ಜಿನಸೇನನ ಕಾವ್ಯದಲ್ಲಿ ಚಕ್ರವರ್ತಿಯಾಗುವ ವರೆಗೆ ಭರತನ ಜೀವನವು ಹೇಗೆ ರಸಮಯವಾಗಿತ್ತೆಂಬುದನ್ನು ಹೇಳಿಲ್ಲ. ಈ ಭಾಗವನ್ನು ಪಂಪನೂ ಅನಾವಶ್ಯಕವೆಂದು ಕೈಬಿಟ್ಟಿದ್ದಾನೆ. ಈ ಬಿಟ್ಟ ಸ್ಥಾನದಲ್ಲಿ ರತ್ನಾಕರನು ಸೊಗಸಾದ ಕಾವ್ಯವೊಂದನ್ನು ಕಟ್ಟಿದ್ದಾನೆ. ಇದೇ ಇವನ ಕಾವ್ಯದ ಅತ್ಯುತ್ತಮಭಾಗ; ಕಾವ್ಯದ ಐದು ಭಾಗಗಳಲ್ಲಿ ಮೊದಲನೆಯದಾದ ಈ 'ಭೋಗ ವಿಜಯ'ವನ್ನು ಸ್ವಂತವಾಗಿ ರಚಿಸಹೊರಟಿರುವ ಕವಿಯು ತನ್ನ ಕಾರ್ಯದಲ್ಲಿ ಕೃತಕೃತ್ಯನಾಗಿದ್ದಾನೆ.

ಭರತನ ಕಥೆಯನ್ನು ಹಿಂದಿನವರು ಯಾರೂ ರತ್ನಾಕರನಂತೆ ಐದು ಭಾಗಗಳಾಗಿ ವಿಭಾಗಿಸಿಕೊಂಡು ಬರೆದಿಲ್ಲ. ರತ್ನಾಕರನು ಹೀಗೆ ವಿಭಾಗಿಸಿಕೊಳ್ಳಲು ಒಂದು ಕಾರಣವಿರುವಂತೆ ತೋರುತ್ತದೆ. ಜೈನ ಕವಿಗಳು ಜಿನಪುರಾಣವನ್ನು ಬರೆಯುವುದಕ್ಕೆ ಮುಂಚೆ ಪಂಚಕಲ್ಯಾಣಗಳನ್ನು ಬರೆಯುವ ಸಂಪ್ರದಾಯ. ಭರತನು ತೀರ್ಥಂಕರನಲ್ಲ. ಆದುದರಿಂದ ಸಂಪ್ರದಾಯಬದ್ಧವಾದ ಪಂಚಕಲ್ಯಾಣಗಳನ್ನು ಇಲ್ಲಿ ತರುವಂತಿಲ್ಲ. ಆದರೂ, ಭರತನು ಸಿದ್ಧಜೀವಿ. ಮೋಕ್ಷವನ್ನು ಸಂಪಾದಿಸಿಕೊಂಡವನು. ಆದ್ದರಿಂದ ಪಂಚಕಲ್ಯಾಣಗಳಿಗೆ ಅರ್ಹ. ಇದಕ್ಕಾಗಿ ತನ್ನ ಕಥಾನಾಯಕನಿಗೇ ಪ್ರತ್ಯೇಕವಾದ ಪಂಚಕಲ್ಯಾಣಗಳನ್ನು ಕವಿಯು ಸಾಧಿಸಿಕೊಟ್ಟಿರುವಂತೆ ತೋರುತ್ತದೆ.

ತೀರ್ಥಂಕರನ ಜೀವನಚರಿತ್ರೆಯಲ್ಲಿ ಆತನ ಹಿಂದಿನ ಜನ್ಮದ ಸುಖಭೋಗಗಳನ್ನು ತೋರಿಸುವುದು ಪ್ರಥಮ ಕಲ್ಯಾಣ. ರತ್ನಾಕರನು ಭರತನ ಭೋಗಜೀವನವನ್ನು 'ಭೋಗವಿಜಯ' ದಲ್ಲಿ ಚಿತ್ರಿಸಿ ಇದನ್ನು ಸಾಧಿಸಿದ್ದಾನೆ. ಆದರೆ ತೀರ್ಥಂಕರನು ಭೋಗಿಸುವುದು ಸ್ವರ್ಗದಲ್ಲಿಯಾದರೆ ಚಕ್ರಿಯು ಭೋಗಿಸುವುದು ಭೂಲೋಕದಲ್ಲಿ. ಸುಖಗಳಲ್ಲಿ ಏನೂ ತಾರತಮ್ಯವಿಲ್ಲ. ಭೂಲೋಕದ ಸೌಖ್ಯವು ಸ್ವರ್ಗಸೌಖ್ಯದ ನೆತ್ತಿಯಮೇಲೆ ಮೆಟ್ಟಿದಂತಿದೆ. ಜಿನಸೇನನು ಭರತನ ಜನನ ಕೌಮಾರ ಬಾಲ್ಯಗಳ ವಿಚಾರದಲ್ಲಿ ಸ್ವಲ್ಪಮಟ್ಟಿಗೆ ಸೂಚನೆಗಳನ್ನು ಕೊಡುತ್ತಾನೆ. ಇದನ್ನು ರತ್ನಾಕರನು ತಿಳಿಸುವುದಿಲ್ಲ. ಇದನ್ನು ಖಚಿತವಾಗಿ ತಿಳಿಸಲು ರತ್ನಾಕರನಿಗೆ ತಾಳ್ಮೆ ಇಲ್ಲ. ಜಿನಸೇನ ಪಂಪರಿಂದ ಎಲ್ಲರೂ ಆ ವಿಷಯವನ್ನು ಅರಿತಿದ್ದಾರೆ; ತಾನು ಹೇಳಬೇಕಾದ ಅಗತ್ಯವೇನೂ ಇಲ್ಲ ಎಂಬುದು ಅವನ ಭಾವನೆ; ಆದುದರಿಂದ ಕಥೆಯನ್ನು ಮಧ್ಯದಿಂದ ಪ್ರಾರಂಭಿಸುತ್ತಾನೆ. ನೇರವಾಗಿ ಭರತನ ಭೋಗಸಾಮ್ರಾಜ್ಯಕ್ಕೇ ಧುಮ್ಮಿಕ್ಕುತ್ತಾನೆ. ಈ ಭಾಗಕ್ಕೆ ಯಾವ ಕವಿಯೂ ಕೈಯಿಕ್ಕಿಲ್ಲ; ರತ್ನಾಕರನು ಯಾವ ಹಿಂದಿನ ಕವಿಗೂ ಋಣಿಯಲ್ಲ.

ಎರಡನೆಯದಾದ ದಿಗ್ವಿಜಯಪರ್ವವು ಮುನಿಮಾರ್ಗೋಕ್ತವಾದುದು. ಕವಿಯ ಸ್ವಂತವಾದ ಕಲ್ಪನೆಯಲ್ಲ. ಇದು ದ್ವಿತೀಯ ಕಲ್ಯಾಣ.*

---

* ಇಲ್ಲಿ ಬರುವ ಭರತ—ಬಾಹುಬಲಿಗಳ ಆಖ್ಯಾನದಲ್ಲಿ ಕವಿಯು ಕೆಲವು ವ್ಯತ್ಯಾಸಗಳನ್ನು ಮಾಡಿಕೊಂಡಿದ್ದಾನೆ. ತನ್ನ ಕಥಾನಾಯಕನನ್ನು ಉದಾತ್ತನಾಗಿ ಮಾಡಲು ಇದು ಆವಶ್ಯಕವೆಂದು ಅವನಿಗೆ ತೋರಿರಬೇಕು. ಇತರ ಕಾವ್ಯಭಾಗಗಳಲ್ಲಿ ಭರತನು ಬಾಹುಬಲಿಯೊಡನೆ ಜಲಯುದ್ಧ ದೃಷ್ಟಿಯುದ್ಧ ಇತ್ಯಾದಿ ಯುದ್ಧಗಳನ್ನಾಡಿ ಸೋಲುವನು. ಬಾಹುಬಲಿಯು ಭರತನಿಗಿಂತಲೂ ಹಲವು ಪಟ್ಟು ಹೆಚ್ಚು ಸತ್ವಶಾಲಿಯಾಗಿ ಕಂಡುಬರುತ್ತಾನೆ. ಈತನ ಸತ್ವದ ಪ್ರಭೆಯಲ್ಲಿ ಭರತನು ತೇಜೋಹೀನನಾಗಿ ತೋರುತ್ತಾನೆ. ಆದರೆ ರತ್ನಾಕರ ವರ್ಣಿಯು ತನ್ನ ಕಾವ್ಯದಲ್ಲಿ ಭರತನನ್ನು ಮಹಾನು

ಮೂರನೆಯ ಕಲ್ಯಾಣವೆಂದು ಕವಿ ಭಾವಿಸಿರುವುದು 'ಯೋಗವಿಜಯ.' ದಿಗ್ವಿಜಯವಾದಮೇಲೆ ಭರತನು ಜೈನಶಾಸ್ತ್ರಗಳ ಅಭ್ಯಾಸದಿಂದ ತನ್ನ ಆತ್ಮೋನ್ನತಿಯನ್ನು ಮಾಡಿಕೊಳ್ಳಲು ಪ್ರಯತ್ನಿಸುತ್ತಾನೆ. ಕ್ಲಿಷ್ಟವೂ ಕಷ್ಟಸಾಧ್ಯವೂ ಆದ ಈ ಭಾಗವನ್ನು ಸುಲಿದಬಾಳೆಯ ಹಣ್ಣಿನಂತೆ ಮಾಡಿಟ್ಟಿರುವ ರತ್ನಾಕರನ ಕೈವಾಡವು ಇಲ್ಲಿ ಸ್ಫುಟವಾಗಿ ಕಂಡುಬರುತ್ತದೆ.

ಪಂಚಕಲ್ಯಾಣಗಳನ್ನು ಬರೆಯಬೇಕೆಂಬ ಉದ್ದೇಶವೊಂದನ್ನು ಬಿಟ್ಟರೆ, 'ಅರ್ಕಕೀರ್ತಿ ವಿಜಯ'ವನ್ನು ಭರತೇಶವೈಭವದಲ್ಲಿ ಸೇರಿಸಿದುದರ ಔಚಿತ್ಯಕ್ಕೆ ಸ್ವಲ್ಪವೂ ಎಡೆಯಿಲ್ಲವೆಂದು ತೋರುತ್ತದೆ. ಜಿನಸೇನನ ಪುರಾಣದಲ್ಲಿ ಅರ್ಕಕೀರ್ತಿಯ ಚರಿತ್ರೆಯು ಕಂಡುಬರುವುದಾದರೂ ಅಲ್ಲಿ ಅದಕ್ಕೆ ಅಷ್ಟು ಪ್ರಾಮುಖ್ಯತೆಯಿಲ್ಲ. ರತ್ನಾಕರನು ಈ ಭಾಗಕ್ಕೆ ಕೊಟ್ಟಿರುವ ಪ್ರಾಮುಖ್ಯತೆಯು ಅನುಚಿತವೆಂದು ತೋರುತ್ತದೆ. ಅರ್ಕಕೀರ್ತಿಯ ಮದುವೆ, ಅವನ ಸುಖಭೋಗಗಳು ಮುಂತಾದುವುಗಳು ಇದರಲ್ಲಿ ಸೇರಿಕೊಂಡಿವೆ.

ಕಡೆಯ ಭಾಗವು ಮೋಕ್ಷವಿಜಯ. ಮುಕುರದಲ್ಲಿ ಪಲಿತವನ್ನು ಕಂಡ ಭರತ ಚಕ್ರೇಶ್ವರನು ತನ್ನ ಮಕ್ಕಳು ದೀಕ್ಷೆವಹಿಸಿದುದನ್ನು ಕೇಳಿ ವೈರಾಗ್ಯದಿಂದ ತಪಸ್ಸಿಗೆ ಹೊರಟು ತನ್ನ ತಂದೆಯಿಂದಲೇ ದೀಕ್ಷೆಯನ್ನು ಪಡೆದು, ಮೋಕ್ಷವನ್ನು ಸಾಧಿಸಿದನು.

## ಕವಿಕಾವ್ಯದೃಷ್ಟಿ

'ಗಣನೆಯಿಲ್ಲದ ಸುಖದೊಳೋಲಾಡಿ'ದವನು ಕಥಾನಾಯಕ, ಎಂಬುದನ್ನಿಟ್ಟುಕೊಂಡು ಕವಿಯು ಭೋಗವರ್ಣನೆಯನ್ನು ಬೇಕಾದಷ್ಟು ಮಾಡಿದ್ದಾನೆ. ಈ ವರ್ಣನೆಯ ಬೆಳವಣಿಗೆಗೆ ಬೇಕಾದ ಬಿತ್ತು ಆದಿಪುರಾಣದಲ್ಲಿದೆ. ಪಂಪನು ಭರತನಿಗೆ ತೊಂಬತ್ತುಸಾವಿರ ಹೆಂಡಿರಿದ್ದರೆಂದು ಹೇಳಿದ್ದಾನೆ. ಆದರೆ ಹೆಸರುಗಳನ್ನು ಹೇಳಿಲ್ಲ. ಜಲಕೇಳಿ ಕೌಮುದೀವಿಹಾರಗಳೂ ಪಂಪನ ಕಾವ್ಯದಲ್ಲಿ ಕಂಡುಬರುತ್ತವೆ. ರತ್ನಾಕರನು ಆ ಸುಖಭೋಗಗಳ ವರ್ಣನೆಯನ್ನು ಹೆಚ್ಚು ವಿಸ್ತಾರವಾಗಿ, ರಸವತ್ತಾಗಿ, ಪ್ರತಿಭಾಯುತವಾಗಿ ಪ್ರತಿಪಾದಿಸಿರುತ್ತಾನೆ. ಕವಿಗಳಿಬ್ಬರೂ ಧಾರ್ಮಿಕದೃಷ್ಟಿಯಿಂದಲೇ ಪ್ರಚೋದಿತರಾದವರು. ಇಬ್ಬರ ಆಶಯವೂ ಧರ್ಮತತ್ವಬೋಧನೆ.

---

ಭಾವನಾಗಿ ಮಾಡಿದ್ದಾನೆ. ಈತನ ಬಾಯಿಂದ ಬರುವ ಒಂದು ಸವಿನುಡಿಯೇ ತಮ್ಮನನ್ನು ಕುಗ್ಗಿಸಿ ಕಾಲ್ಗೆರಗುವಂತೆ ಮಾಡುತ್ತದೆ. ತನ್ನ ಆಪ್ತೇಷ್ಟರ ಮಾತುಗಳೆಲ್ಲವನ್ನೂ ಮೀರಿ ಜಗದ್ವಿಖ್ಯಾತನಾದ ತನ್ನಣ್ಣನಿಗೆ ಪ್ರತಿದ್ವಂದ್ವಿಯಾಗಿ ನಿಂತುಕೊಂಡುದಕ್ಕಾಗಿ ತನ್ನನ್ನು ತಾನೇ ನಿಂದಿಸಿಕೊಳ್ಳುತ್ತಾನೆ; ಪಶ್ಚಾತ್ತಾಪದಿಂದ ದಗ್ಧನಾಗಿ ದೀಕ್ಷಾಬದ್ಧನಾಗುತ್ತಾನೆ.

ಆದರೆ ತತ್ವಬೋಧನೆಯನ್ನು ಶಾಸ್ತ್ರರೂಪದಲ್ಲಿ ಹೇಳದೆ ಕಾವ್ಯರೂಪದಲ್ಲಿ ಹೇಳಿದ್ದಾರೆ; ಧರ್ಮದ ಆವರಣಕ್ಕೆ ಭರತ ಚಕ್ರವರ್ತಿಯನ್ನು ಆಧಾರಭೂತವಾಗಿ ಮಾಡಿಕೊಂಡಿದ್ದಾರೆ. ಆದ್ದರಿಂದ ನಾವು ಭರತೇಶವೈಭವವನ್ನು ಓದುವಾಗ, ಅದನ್ನು ಕುರಿತು ಚರ್ಚಿಸುವಾಗ, ಈ ಧರ್ಮದೃಷ್ಟಿಯು ನಮ್ಮ ದೃಕ್ಪಥದಿಂದ ದೂರವಾಗದಂತೆ ನೋಡಿಕೊಳ್ಳಬೇಕಾದುದು ಅತ್ಯಾವಶ್ಯಕ. ಈ ಗ್ರಂಥದಲ್ಲಿ ನಮಗೆ ಕಾವ್ಯ-ಧರ್ಮಗಳ ಸಮನ್ವಯವು ಕಂಡುಬರುತ್ತದೆ. ಭರತನು ಧರ್ಮವೀರ; ಅವನಲ್ಲಿ ಕವಿಗೆ ತುಂಬ ಭಕ್ತಿಯಿದೆ. ತನ್ನ ಕಥಾನಾಯಕನು ಜೈನರಿಗೆಲ್ಲಾ ಆದರ್ಶಪ್ರಾಯನೆಂದು ಅವನು ಭಾವಿಸಿದ್ದಾನೆ. ತನ್ನ ಮತಾನುಯಾಯಿಗಳೆಲ್ಲರೂ ಹಾಗೆಯೇ ಭಾವಿಸಬೇಕೆಂಬುದು ಅವನ ಆಶಯ. ಅದಕ್ಕಾಗಿ ಭರತನ ಚರಿತ್ರೆಯನ್ನು ಜೈನಪುರಾಣವನ್ನನುಸರಿಸಿ ಬರೆದಿದ್ದಾನೆ. ಶುಷ್ಕ ವೇದಾಂತವು ಫಲಕಾರಿಯಾಗದೆಂದು ಬಗೆದು ಇಹಲೋಕದ ಭೋಗೋಪಭೋಗಗಳ ಅಡಿಗಲ್ಲಮೇಲೆಯೇ ತನ್ನ ಆಧ್ಯಾತ್ಮಿಕ ಕಟ್ಟಡವನ್ನು ಭವ್ಯವಾಗಿ ನಿರ್ಮಿಸಿದ್ದಾನೆ. ಪಂಪ ಇತ್ಯಾದಿಗಳ ಮಹಾಕಾವ್ಯಗಳಲ್ಲಿ ಕ್ವಚಿತ್ತಾಗಿ ಬಂದಿರುವ ಕಥಾಭಾಗವನ್ನು ವಿವರಿಸಿದ್ದಾನೆ; ವಿಸ್ತರಿಸಿದ್ದಾನೆ.

ಕವಿಯು "ಕೀರ್ತಿಯ ಬಯಸಿ" ಕಾವ್ಯವನ್ನು ಉಸಿರಿದವನಲ್ಲ. 'ಧ್ಯಾನಕೆ ಬೇಸರಾದಾಗ ನನ್ನಾತ್ಮ ಲೀಲಾನುವೃದ್ಧಿಗೆ ಪೇಳ್ದೆನ್ನೈಸೆ' ಎಂದು ತನ್ನ ಕೃತಿ ನಿರ್ಮಾಣಕ್ಕೆ ಕಾರಣವನ್ನು ಹೇಳಿಕೊಂಡಿದ್ದಾನೆ. ತನ್ನ ಕಾವ್ಯವನ್ನು ಯಾರಾದರೂ ಓದಬೇಕು ಎಂಬ ಆಗ್ರಹವು ಸಹ ಕವಿಗಿಲ್ಲ. 'ಬೇಕಾದರಾಲಿಸುವುದು ಬೇಡವಾಗೆ ಪರಾಕು ಮಾಡುವುದೆನಗಲ್ಲಿ ವ್ಯಾಕುಲವಿಲ್ಲ ಸಂತಸವಿಲ್ಲ ನಾನು ನಿರಾಕಾಂಕ್ಷಿ ಸಾಕದಂತಿರಲಿ' ಎಂದು ಘಂಟಾಘೋಷವಾಗಿ ಹೇಳಿಕೊಂಡಿದ್ದಾನೆ. ಭರತನ ಆತ್ಮವು ಹೇಗೆ ವೃದ್ಧಿಹೊಂದಿ ವಿಕಸಿತವಾಯಿತೆಂಬುದನ್ನು ಹೇಳುವಾಗ ಅದು ತನ್ನ ಆತ್ಮದಲ್ಲಿ ತಕ್ಕಮಟ್ಟಿಗೆ ಪ್ರತಿಬಿಂಬಿತವಾದರೆ ಸಾಕು, ಎಂಬುದೆ ಕವಿಯ ಹೆಬ್ಬಯಕೆ.

ಉದಾತ್ತವ್ಯಕ್ತಿಯ ಸತ್ವೋದ್ರೇಕದಿಂದ ಕೂಡಿದ ಸುಂದರವಾದ ಶೃಂಗಾರ ರಸವನ್ನು ಭವ್ಯವಾಗಿ ವರ್ಣಿಸುವುದು ಸಾಧ್ಯವೆಂದು ತೋರಿಸಹೊರಟಿದ್ದಾನೆ ಕವಿ. ಅಂತಹ ಶೃಂಗಾರಪೂರಿತವಾದ ಸನ್ನಿವೇಶಗಳಿಂದ ತನ್ನ ಕಾವ್ಯವನ್ನು ರಸಮಯವಾಗಿ ಮಾಡಿದ್ದಾನೆ. ಶೃಂಗಾರರಸ ಪ್ರತಿಪಾದನೆಯೆಂಬುದು ಕತ್ತಿಯ ಮೇಲಿನ ಸಾಮಿಗಿಂತಲೂ ಕಷ್ಟ. 'ಅತ್ತ ಪುಲಿ, ಇತ್ತ ದರಿ' ಎಂಬಂತಿರುತ್ತದೆ ಅದಕ್ಕೆ ಕೈಹಾಕಿದವನ ಸ್ಥಿತಿ. ಆದರೆ ರತ್ನಾಕರನು ಈ ಕೆಲಸಕ್ಕೆ ಕೈಹಾಕಿ 'ಸೈ' ಎನ್ನಿಸಿಕೊಂಡಿದ್ದಾನೆ. ಕೆಟ್ಟಜನರ ಶೃಂಗಾರವನ್ನು ಕೇಳಿ ಜನರ ಮನಸ್ಸು ಕೆಡದಿರಲೆಂದು ಮಹಾತ್ಮನಾದ

ತನ್ನ ಕಥಾನಾಯಕನ ಜೀವನದಲ್ಲಿ ಶೃಂಗಾರವನ್ನು ತಂದು ಅದನ್ನು ಇತರರಿಗೆ ಆದರ್ಶವಾಗಿ ಎತ್ತಿ ಹಿಡಿದಿದ್ದಾನೆ. ರತ್ನಾಕರನೇ ಹೇಳುವಂತೆ

"ಶೃಂಗಾರಕಾಗಿ ಕಷ್ಟರ ಕಥೆಗೇಳ್ದು ಜ| ನಂಗಳು ಕೆಡಬೇಡವೆಂದು |
ಅಂಗಸುಖಿಯ ಮೋಕ್ಷ ಸುಖಿಯ ಕಾವ್ಯವನಿಷ್ಟು| ಶೃಂಗಾರ ಕಟ್ಟಿ ಪೇಳಿದೆನು ||
ದುರುಳರ ಪಾದರಿಯರ ನೀಚಸತಿಯರ| ವಿರಚಿಸಿತಿಲ್ಲ ಸಿಂಗರಕೆ |
ಭರತ ಚಕ್ರಿಯ ಪೇಳ್ದಿನವರ ಪೆಂಡಿರ ಪೇಳ್ದೆ| ಸ್ಮರಿಸಿದರೆಲ್ಲರ್ಗೆ ಪುಣ್ಯ ||

ಮಹಾಕಾವ್ಯದಲ್ಲಿ ಸಂಪ್ರದಾಯಕ್ಕೆ ತಕ್ಕಂತೆ ಒಡಮೂಡಬೇಕಾದ ಸೂಳೆಗೇರಿಯ ವರ್ಣನೆ, ಚಂದ್ರಿಕಾವಿಹರಣ, ಲಘುಶೃಂಗಾರ ಇವುಗಳು ಬಾರದೆ "ಪೋಕರು ನಾಲ್ಕೆಂಟು ಮಂದಿ ಚಿತ್ತದೊಳತಿ ವ್ಯಾಕುಲಬಟ್ಟ"ರೂ ಪಡಲಿ. "ಅಳಿದೊಡಂ ಉಳಿದೊಡಂ ಬಟ್ಟೆದೋರಿಪ ರಸಭರಿತಂ ಚರಿತನ್ನೈಸೆ" ಎನ್ನುವಂತಾಗಿದೆ, ರತ್ನಾಕರನ ಕಾವ್ಯರತ್ನ.

ರತ್ನಾಕರನಿಗೆ ಭರತೇಶನಲ್ಲಿ ಗೌರವವಿರುವುದು ಅವನು "ರಾಜರ್ಷಿ" ಎಂಬ ಭಾವನೆಯಿಂದ. ತನ್ನ ಸಮಕಾಲೀನರಾದ ಹಲವು ರಾಜರ ಜೀವನವು ಇವನಿಗೆ ಸರಿಬೀಳದೆ, ಆದರ್ಶರಾಜನೊಬ್ಬನ ಜೀವನ ಚಿತ್ರವನ್ನು ಅವರ ಕಣ್ಣೆದುರಿಗೆ ಕಟ್ಟಬೇಕೆಂಬ ಉದ್ದೇಶದಿಂದ ಚಕ್ರವರ್ತಿ ಜೀವನದ ಪ್ರತಿಪಾದನೆಗೆ ಕೈಹಾಕಿರಬಹುದು. ರತ್ನಾಕರನ ಅಭಿಪ್ರಾಯದಲ್ಲಿ ರಾಜರ್ಷಿಯೆಂದರೆ ಹೀಗಿರಬೇಕು.—

ರಾಜಶ್ರೀಯೊಳನೇಕ ಕಾಮಿನಿಯರುಂಟಾಳಾಪ ನೃತ್ಯಂಗಳುಂ
ಟಾ ಜಿಹ್ವಾರುಚಿಯುಂಟು ಕಾಮಿಸಿದವೆಲ್ಲಾ ವುಂಟು ವುಂಟಾದೊಡಂ
ರಾಜೀವಂ ಕೆಸರಳ್ದಿಯಳ್ದದವೊಲಿರ್ದೂರ್ಧ್ವಕ್ಕೆ ಕಣ್ಣಿಟ್ಟೊಡಾ
ರಾಜಂ ರಾಜನೆ ತಾನೆ ರಾಜರುಷಿಯೈ ರತ್ನಾಕರಾಧೀಶ್ವರಾ ||

—ರತ್ನಾಕರಾಧೀಶ್ವರ ಶತಕ

ಈ ಆದರ್ಶರಾಜರ ಜೀವನವನ್ನು ಭರತೇಶನ ಜೀವನದಲ್ಲಿ ಮೈಮೂಡಿಸಲು ಹೊರಟಿದ್ದಾನೆ, ಕೃತಕೃತ್ಯನಾಗಿದ್ದಾನೆ.

ಶೃಂಗಾರವೂ ವೈರಾಗ್ಯವೂ ಎಣ್ಣೆ ಸೀಗೆಕಾಯಿಗಳಂತೆ. ಒಂದಿದ್ದೆಡೆ ಮತ್ತೊಂದಕ್ಕೆ ಪ್ರವೇಶವಿಲ್ಲ. ಈ ರಾತ್ರಿಹಗಲುಗಳೆರಡನ್ನೂ ಕಟ್ಟಿ ಒಂದೆಡೆ ಇಟ್ಟಿರುವ ಕೀರ್ತಿ ರತ್ನಾಕರನದು. ಭೋಗಯೋಗಗಳ ಸಮನ್ವಯವು ಸಾಧ್ಯವೆಂದು ತನ್ನ ಕಥಾನಾಯಕನ ಜೀವಿತದಲ್ಲಿ ಹೊರಹೊಮ್ಮಿಸಿದ್ದಾನೆ. ಭರತನು ಶೃಂಗಾರದ ಸರಸ್ಸಿನಲ್ಲಿಯೇ ತೇಲಾಡುತ್ತಿರುವ ಕಮಲ. ಶೃಂಗಾರ ಭೋಗಗಳ ಸಾಮಗ್ರಿಗಳು ಸುತ್ತಮುತ್ತಲೂ ಕೋಟೆ ಕಟ್ಟಿಕೊಂಡಿವೆ. ಭರತನೂ ಅವುಗಳ ಸ್ವರ್ಣ ಶೃಂಖಲೆ

ಯಲ್ಲಿ ಬದ್ಧನಾಗಿರುವನೇನೋ ಎಂಬಂತೆ ಕಾಣಿಸಿಕೊಳ್ಳುತ್ತಾನೆ. ಆದರೆ ಯಾವ ನಿಮಿಷದಲ್ಲಿಯೋ ಯೋಗಪರವಶನಾಗಿ ಶೃಂಖಲಾತೀತನಾಗಿ ಬ್ರಹ್ಮಾನಂದದಲ್ಲಿ ತಲ್ಲೀನನಾಗುತ್ತಾನೆ. ಜಗತ್ತಿನ ತೋರಿಕೆಯ ಆಟದಲ್ಲಿ ಚಾಚೂ ತಪ್ಪುತ್ತಿಲ್ಲವಾದರೂ ಇದು ನಶ್ವರವೆಂಬ ಭಾವನೆ ಸದಾ ಸ್ಮರಣೆಯಲ್ಲಿರುತ್ತದೆ. ಈ ನಿಮಿಷದಲ್ಲಿ ಮಡದಿಯೊಡನೆ ಸುಖಭೋಜನ ಮಾಡಿ ವೀಳೆಯವನ್ನು ಸವಿಯುತ್ತಾ, ಸಂಗೀತವನ್ನು ಕೇಳುತ್ತಾ, ತಲ್ಲೀನನಾಗಿರುವಂತೆ ತೋರುವನಾದರೂ ಮರು ನಿಮಿಷದಲ್ಲಿ ಕಣ್ಮುಚ್ಚಿ ಚಿನ್ಮಯರೂಪವನ್ನು ಒಳಗಣ್ಣಿಂದ ನೋಡುತ್ತಾ ಯೋಗಿಯಾಗಿರುತ್ತಾನೆ. ಇವನ ಆಳವನ್ನರಿಯುವುದೇ ಯಾರಿಗೂ ಅಸಾಧ್ಯ. ಓದುವವರಿಗೆ ಶೃಂಗಾರಪೂರಿತವಾಗಿದ್ದರೂ ಕವಿಯ ದೃಷ್ಟಿಯಿಂದ ಇಲ್ಲಿ ಹೆಚ್ಚು ಶೃಂಗಾರವಿಲ್ಲ.

ಕವಿಯ ಮತದಲ್ಲಿ ವೈರಾಗ್ಯವೆಂದು ಹಂಬಲಿಸಿ ಇಹಸೌಖ್ಯವನ್ನು ತ್ಯಜಿಸುವುದು ಮೂಢತನ; ಹೇಡಿತನ. "ಈಸಬೇಕು; ಇದ್ದು ಜೈಸಬೇಕು." ಅದೃಷ್ಯವಾಗಿ ದೊರೆತುದನ್ನು ಅನುಭವಿಸಬೇಕು. ಅನುಭವಿಸುವಾಗ ಉದಾತ್ತದೃಷ್ಟಿಯು ಕಣ್ಮರೆಯಾಗಬಾರದು. ಲೌಕಿಕ ಸುಖತ್ಯಾಗವೆಂಬುದು ಅನುಚಿತ; ಅನಾವಶ್ಯಕ, ಇದನ್ನು ಅನುಭವಿಸದಿದ್ದರೆ ಮನಸ್ಸು ಅವುಗಳ ಪ್ರಲೋಭನಕ್ಕೆ ಒಳಗಾಗಬಹುದು. ಜಗತ್ತಿನ ನಶ್ವರತೆಯನ್ನು ಅನುಭವದಿಂದ ಸಿದ್ಧಾಂತಗೊಳಿಸುವುದು ಹೆಚ್ಚು ಸ್ವಾಭಾವಿಕವಾದುದೇ ಹೊರತು, ಬರಿಯ ಜ್ಞಾನದಿಂದ ವೈರಾಗ್ಯವನ್ನು ಗಳಿಸಹೊರಡುವುದು ಶುದ್ಧ ಕೃತಕ. "ಜ್ಞಾನವಿಡಿದ ಭೋಗಿ ಯೋಗಿ." ಇಹದ ಅಧ್ರುವವೂ ಅಪ್ರಯೋಜಕವಲ್ಲ; ಮಿತಿಯಾದ ಈ ಸುಖವನ್ನು ಗಳಿಸಬೇಕು, ಎಂಬುದು ಇವನ ಮತ. ಪ್ರಪಂಚದ ಸುಖವೆಲ್ಲಾ ನಶ್ವರವೆಂದು ಸರ್ವಸಂಗತ್ಯಾಗಮಾಡಿದವನು ಯೋಗಿ. ಮನುಷ್ಯನ ಜೀವನಕ್ಕೆ ಭೋಗ ಯೋಗಗಳೆರಡೂ ಆವಶ್ಯಕ. ಧರ್ಮಾರ್ಥಕಾಮಮೋಕ್ಷವೆಂಬ ಚತುರ್ವಿಧ ಪುರುಷಾರ್ಥಗಳಲ್ಲಿ ಮೋಕ್ಷವು ಕೊನೆಯ ಹೆಗ್ಗುರಿಯಾದರೂ ಉಳಿದ ಮೂರೂ ಅದಕ್ಕೆ ಪರಿಪೋಷಕಗಳಾಗಿ ಬೇಕೇಬೇಕು; ಈ ಮೂರೂ ಭೋಗಗಳೇ. ಯೋಗವಿಲ್ಲದ ಭೋಗವೂ, ಭೋಗವಿಲ್ಲದ ಯೋಗವೂ ಅಪ್ರಯೋಜಕವೆಂದೂ, ಇವೆರಡರ ಸಾಮರಸ್ಯವೇ ಹೆಚ್ಚು ಆಕರ್ಷಕವೂ ರಮಣೀಯವೂ ಆದ ಪ್ರಯೋಜನವನ್ನು ಕೊಡತಕ್ಕುದೆಂದೂ ರತ್ನಾಕರನ ಅಭಿಪ್ರಾಯ. ಭೋಗಮೂಲವಾದ ಶೃಂಗಾರವನ್ನೂ ಯೋಗಮೂಲವಾದ ತ್ಯಾಗವನ್ನೂ ಪರಸ್ಪರ ವಿರುದ್ಧವಾಗದಂತೆ ಪ್ರದರ್ಶಿಸುವುದೇ ರತ್ನಾಕರನ ಉದ್ದೇಶ. ಭೋಗವು ಯೋಗಕ್ಕೆ ವಿರುದ್ಧವೆಂಬುದು ಎಲ್ಲರ ನಂಬಿಕೆ. ಆದರೆ ರತ್ನಾಕರನ ಹೇಳಿಕೆಯಲ್ಲಿ ಭೋಗವು ಯೋಗದ ಮೊದಲ ಮೆಟ್ಟಲು. ಭೋಗವನ್ನು ಅನುಭವಿಸದವನು ಯೋಗಕ್ಕೆ ಕೈಹಾಕಿದರೆ

'ಅರಿಯದ ಬ್ರಾಹ್ಮಣ ಯಜ್ಞಮಾಡಿ ಗಡ್ಡ ಸುಟ್ಟುಕೊಂಡ' ಎಂಬಂತೆ ಆಗುತ್ತದೆ. ಅಂತಹವನ ಮನಸ್ಸಿನಲ್ಲಿ ಭೋಗಗಳ ಮೇಲಿನ ಬಯಕೆಯು ಸಾಯದೆ ಸಮಯ ಬಂದಾಗ ಕಟ್ಟುಹರಿದ ಪಂಜಾಗುತ್ತದೆ. ಆದರೆ ಭೋಗದ ಅಲ್ಪತೆಯನ್ನು ಅನುಭವ ದಿಂದ ಅರಿತು ಮನಗೊಂಡುದಾದರೆ ಯೋಗಭ್ರಷ್ಟನಾಗುವ ಭಯವಿರುವುದಿಲ್ಲ. ಒಟ್ಟಿನಲ್ಲಿ ರತ್ನಾಕರನ ಸಿದ್ಧಾಂತ ಭೋಗದಲ್ಲಿ ಬೇರನ್ನು ಬಿಟ್ಟು ಮೇಲಕ್ಕೆ ಚಿಮ್ಮಿ ಯೋಗದಲ್ಲಿ ಹೂವಾಗುವ ಬೆಳವಣಿಗೆಯೇ ಅತ್ಯಂತ ಶ್ರೇಷ್ಠವಾದುದು ಎಂದು. ಆದುದರಿಂದಲೇ ಮೊದಲು ಭೋಗಾಂಗಗಳ ವರ್ಣನೆಯನ್ನು ಮನಸಾರ ಮಾಡಿ ಯೋಗಗಳ ಕಡೆಗೆ ಹೊರಳುತ್ತಾನೆ. ಶ್ರೀ ಕೃಷ್ಣನ ಜೀವನದಂತೆ ಭರತನ ಜೀವನವೂ ತಾವರೆಯ ಜಲದಂತೆ ಸಂಸಾರಭೋಗದಲ್ಲಿರುತ್ತದೆ.

ಭೋಗಾಂಗ, ಯೋಗಾಂಗ, ಭೋಗ-ಯೋಗಾಂಗ ಎಂಬ ಅಂಗತ್ರಯಗಳೂ, ಭೋಗ-ಯೋಗಗಳ ಸಾಮರಸ್ಯಸಿದ್ಧಾಂತವೂ ಬಹುಶಃ ವೀರಶೈವ ಮತಪ್ರಭಾವದ ಪ್ರತಿಬಿಂಬವಿರಬಹುದೆಂದು ತೋರುತ್ತದೆ. ಕವಿಯು ವೀರಶೈವಮತವನ್ನು ಒಮ್ಮೆ ಅವಲಂಬಿಸಿದ್ದನೆಂದು ಪ್ರಚಾರದಲ್ಲಿರುವ ಕಥೆಗಳು ಈ ಭಾವನೆಗೆ ಪರಿಪೋಷಕವಾಗಿವೆ.

ರತ್ನಾಕರನು ತನ್ನ ಮನಸ್ಸಿನಲ್ಲಿ ಉಂಟಾದ ಒಂದು ಸಿದ್ಧಾಂತವನ್ನು ಪ್ರತಿಪಾದಿಸುವುದಕ್ಕಾಗಿ ಅನುಸರಿಸಿರುವ ಮಾರ್ಗವಾವುದು? ಇಹಲೋಕದ ಭೋಗಾನುಭವದಿಂದ ಅವನು ತನ್ನ ಕಾವ್ಯವನ್ನು ಪ್ರಾರಂಭಿಸುತ್ತಾನೆ. ಇಹಲೋಕ ಭೋಗಗಳಿಗೆ ಪ್ರಥಮಸೋಪಾನವು ಐಶ್ವರ್ಯ. ಆಗರ್ಭಶ್ರೀಮಂತನಾದ ಭರತನಿಗೆ ಅದು ಬೇಕಾದಷ್ಟಿದೆ. ಷಟ್ಖಂಡಗಳ ಭಂಡಾರಕ್ಕೂ ಈತನು ಒಡೆಯ. ಎರಡನೆಯ ಭೋಗಸಾಧನ ಕಾಮತೃಪ್ತಿ. ಭರತನಿಗೆ ಬಯಸಿದುದೆಲ್ಲವೂ ಹಸ್ತಗತವಾಗಿದೆ. ಆತನ ಇಂದ್ರಿಯಗಳು ಕುಡಿಕುಡಿದು ತೇಗುವಷ್ಟು ಪರಿಕರಗಳು ಸದಾ ಸಿದ್ಧವಾಗಿವೆ. ಆದರೆ ಅರ್ಥಕಾಮಗಳ ಪ್ರಲೋಭನದಿಂದ ಮತ್ತೊಬ್ಬನಿಗೆ ಸೇರಿದುದನ್ನು ಅನುಭವಿಸಲು ಯತ್ನಿಸುವುದು ನ್ಯಾಯವಲ್ಲ; ಧರ್ಮವಲ್ಲ. ಹಾಗೆ ಮಾಡಿದಲ್ಲಿ ಸಮಾಜಕ್ರಾಂತಿ ಸಮಾಜವಿಪ್ಲವಗಳು ಆಗುತ್ತವೆ. ಇದನ್ನು ನಿವಾರಿಸುವ, ನಿವಾರಿಸಬಲ್ಲ, ಮಹಾ ಶಕ್ತಿಯೆಂದರೆ ಧರ್ಮಬಲವೊಂದೆ. ಅದಕ್ಕಾಗಿ ಕವಿಯು ಧರ್ಮಕ್ಕೆ ಪ್ರಥಮಸ್ಥಾನ ವನ್ನು ಕೊಟ್ಟಿದ್ದಾನೆ. ಅರ್ಥಕಾಮಗಳು ಧರ್ಮಸಮ್ರಾಟನ ಅಡಿಯಾಳುಗಳಾಗಿವೆ. ಜೀವದಯೆಯೇ ಈ ಧರ್ಮ. ಪಂಚಾಣುವ್ರತಗಳಾದ ಅಹಿಂಸೆ, ಅಸ್ತೇಯ, ಅಪರಿಗ್ರಹ, ಬ್ರಹ್ಮಚರ್ಯ, ಸತ್ಯಗಳನ್ನು ಅನುಸರಿಸುತ್ತಿರುವ ಕಥಾನಾಯಕನು ಲೋಕದ ಕೋಲಾಹಲಕ್ಕೆ ಒಳಗಾಗಿಲ್ಲ. ಅವನ ಜೀವನದ ವಾತಾವರಣದಲ್ಲಿ ಧರ್ಮಕ್ಕೆ ಬೇಕಾದಷ್ಟು ಅವಕಾಶವಿದೆ. ಕವಿಯು ಆ ಅವಕಾಶಗಳ ಸದುಪಯೋಗದಿಂದ ಭರತನಿಗೆ

ಹಿಂಸಾಕರವಲ್ಲದ ಸಕಲ ಸೌಖ್ಯಗಳನ್ನೂ ಒದಗಿಸಿಕೊಟ್ಟಿದ್ದಾನೆ. ಜೈನಧರ್ಮಾನುಸಾರವಾಗಿ ರಾಜನು ಅನುಭವಿಸಬಹುದಾದ ಇಪ್ಪತ್ತು ಬಗೆಯ ಸೌಖ್ಯಗಳೂ* ಭರತನಿಗೆ ಕರಗತವಾಗಿವೆ. ಸಂಸಾರವಂದಿಗನಾದವನು ಯಾವ ಯಾವ ಸೌಖ್ಯಗಳನ್ನು ಅನುಭವಿಸಬಹುದೋ ಆ ಸೌಖ್ಯಗಳೆಲ್ಲಾವುದರಿಂದಲೂ ಆತನು ವಂಚಿತನಾಗಿಲ್ಲ. ಶ್ರೀಮಂತನಾದ ಸಂಸಾರಸುಖಿ ಭರತ. ಹಲವು ಜನರಿಂದ ಪರಿವೃತನಾದ ಸಂಸಾರಿಯ ಜೀವನವು ಸುಖಮಯವಾಗಬೇಕಾದರೆ, ಆತನನ್ನು ಅವಲಂಬಿಸಿರುವವರು ಚಂದ್ರನನ್ನು ಸುತ್ತುವರಿದಿರುವ ನಕ್ಷತ್ರಗಳಂತಿರಬೇಕು. ಪರಸ್ಪರ ದ್ವೇಷಾಸೂಯೆಗಳಿಲ್ಲದಿರುವುದಷ್ಟೇ ಅಲ್ಲ; ತಮ್ಮ ವ್ಯಕ್ತಿತ್ವವನ್ನು ಬದಿಗೊತ್ತಿ ತಮ್ಮ ಜನ್ಮಸಾರ್ಥಕ್ಯವು ಒಡೆಯನ ಸೇವೆಯಲ್ಲಿಯೇ ಎಂದು ಭಾವಿಸಿರಬೇಕು. ಭರತನ ಹಲವು ಹೆಂಡಿರು, ಮಕ್ಕಳು, ಭಾವಮೈದುನರು, ಅತ್ತೆಮಾವಂದಿರು,—ಇತ್ಯಾದಿ ಗಣನಾತೀತರಾದ ಬಾಂಧವರು ಭರತನ ಸೌಖ್ಯವನ್ನು ಹೆಚ್ಚಿಸಲು ಸಹಾಯಕರಾಗಿದ್ದಾರೆ. ಎಲ್ಲರೂ ಪರಸ್ಪರ ಹೊಂದಿಕೊಂಡಿದ್ದಾರೆ. ಕವಿಯು ಬಹು ಕುಶಲತೆಯಿಂದ ಈ ಸುಖ ಸಂಪತ್ತುಗಳ ಭಂಡಾರವನ್ನು ತನ್ನ ಕಥಾನಾಯಕನ ಕರಗತಮಾಡಿದ್ದಾನೆ.

[ಮುಂದುವರಿಯುವುದು.]

ಟಿ. ಎಸ್. ಶಾಮರಾವ್.

---

* ಗೃಹೋಪಭೋಗ, ಸ್ನಾನೋಪಭೋಗ, ಪಾದುಕೋಪಭೋಗ, ತಾಂಬೂಲೋಪಭೋಗ, ವಿಲೇಪನೋಪಭೋಗ, ವಸ್ತ್ರೋಪಭೋಗ, ಮಾಲ್ಯೋಪಭೋಗ, ಭೂಷೋಪಭೋಗ, ಆಸನೋಪಭೋಗ, ಚಾಮರೋಪಭೋಗ, ಆಸ್ಥಾನೋಪಭೋಗ, ಪುತ್ರೋಪಭೋಗ, ಅನ್ನಭೋಗ, ಪಾನೀಯೋಪಭೋಗ, ಪಾದಾಭ್ಯಂಗೋಪಭೋಗ, ಯಾನೋಪಭೋಗ, ಛತ್ರೋಪಭೋಗ, ಶಯ್ಯೋಪಭೋಗ, ಧೂಪೋಪಭೋಗ, ಯೋಷಿದುಪಭೋಗ.—ಈ ಇಪ್ಪತ್ತು ಜೈನಧರ್ಮಪ್ರಣೀತವಾದ ರಾಜೋಪಭೋಗಗಳು.

# "ಹುಲಿಜಾತಿಗೆ ಸೇರ್ದನೆಂದು . . ."

(ಒಂದು ಪುಟ್ಟ ಕಥೆ)

ನನಗೂ ಅವರಿಗೂ ಯುದ್ಧವಾಗುವುದೆಂದರೆ ಕಾಫಿಯ ರುಚಿಗಾಗಿ. ಹೆಚ್ಚು ಸಕ್ರೆ ಹಾಕ್ತಾಳೆ ಅಂತ ನನ್ನ ಮೇಲೆ ಗುಮಾನಿ. ಮೊದಲು ನಾಲ್ಕು ಚಮಚ ಹಾಕುತ್ತಿದ್ದವಳು ಈಗ ಮಿಜಿಮಿಜಿ ತಡೆಯಲಾರದೆ ಎರಡು ಚಮಚಕ್ಕೆ ಇಳಿಸಿದ್ದೇನೆ. ಹಾಗಾದರೂ ಕೂಡ ಕಾಫಿ ಪಾನಕವಂತೆ.

ಹೋದ ಭಾನುವಾರ ಬೆಳಗ್ಗೆ ಕಾಫಿ ಕೊಟ್ಟೆ. ಸ್ವಲ್ಪ ಕುಡಿದು ಎಂದಿನಂತೆ "ಲೇ ಶಾಂತಾ, ಮತ್ತೆ ಶುರು ಮಾಡ್ಬಿಟ್ಟೆ" ಎಂದರು. ನಿಜ ಹೇಳುವುದಾದರೆ ಆ ದಿನ, ನನಗೇ ನಗು ಬರುತ್ತೆ, ಬೇಕೆಂದು ಸಕ್ರೇನ ಸ್ವಲ್ಪವೂ ಹಾಕಿರಲಿಲ್ಲ!

ನಾನು ಅವರು ಜಗಳಾಡುವುದು ನ್ಯಾಯ ಎನ್ನೋಣ. ಆದರೆ ನಮ್ಮ ಗೃಹ ಕಲಹವನ್ನು ಸ್ನೇಹಿತರ ಮುಂದೆ ಏಕೆ ಹೇಳಬೇಕು ಅಂತ? "ಲೋ ಶಾಮು, ನನ್ನ ಪ್ರೀತಿಯ ಮಹಾರಾಣಿಯವರ ಆಡಳಿತದಲ್ಲಿ ತಿಂಗಳು ಒಂದಕ್ಕೆ ಎರಡು ಮಣ ಸಕ್ರೆ ಬೇಕು ಕಣೋ" ಎಂದು ಹಾಸ್ಯಮಾಡುತ್ತಾರೆ, ನಗುತ್ತಾರೆ.

ಈ ದಿನ ಬೆಳಗ್ಗೆ ಒಂದು ತಮಾಷೆಯಾಯ್ತು. ತಾವೇ ಸ್ವಂತ ಕಾಫಿ ಮಾಡಿದರು. "ಲೇ ಶಾಂತಾ, ನೋಡ್ಕೋ, ಸಕ್ರೆ ಇಷ್ಟೇ ಹಾಕ್ಬೇಕು. ಇನ್ಮೇಲೆ ಪುಡಿ ಸ್ವಲ್ಪ ಜಾಸ್ತಿ ಹಾಕು; ನಿಮ್ಮಪ್ಪನ್ಮನೇ ಗಂಟೇನು ಹೋಗುತ್ತೆ? ಹಾ ನೋಡು, ಕಾಫಿ ರುಚಿಯಾಗಬೇಕಾದರೆ ಸ್ವಲ್ಪ ಉಪ್ಪು ಹಾಕಬೇಕು" ಎಂದು ನನಗೆ ಪಾಠ ಹೇಳಿಕೊಟ್ಟರು. ಕಾಫಿ ಸಿದ್ಧವಾಯಿತು. ಬಿಸ್ಕತ್ತು ತರುವುದಕ್ಕಾಗಿ ಕೋಣೆಗೆ ಹೋದರು. ಇದೇ ಸಮಯ ಎಂದುಕೊಂಡು ಅವರು ಮಾಡಿದ ಕಾಫಿಗೆ ಮತ್ತೆರಡು ಚಮಚ ಸಕ್ಕರೆ ಸುರಿದು, ಉಕ್ಕಿಬಂದ ನಗುವನ್ನು ಪಕ್ಕೆಯಲ್ಲಿಯೇ ಅದುಮಿ ತಡೆದಿಟ್ಟುಕೊಂಡು ಕುಳಿತೆ; ಬಂದರು. ಕಾಫಿಯ ಲೋಟವನ್ನು ಕೈಗೆ ತೆಗೆದುಕೊಂಡು ಸ್ವಲ್ಪ ಸ್ವಲ್ಪ ಕುಡಿಯುತ್ತಾ, ಬಾಯಿ ಚಪ್ಪರಿಸುತ್ತ "ಶಾಂತೂ ನೋಡೇ ಕಾಫಿ ಹೇಗಿದೆ? ನೀನೂ ಮಾಡ್ತೀಯ ಮೂರು ತಿಂಗಳಿಂದ ಪಾಯಸಾನ! ಹೂ, ಕುಡಿದು ನೋಡು ಸ್ವಲ್ಪ. ನಿಮಗೆಲ್ಲ ಬರಬೇಕು, ಆಚಾರ್‍ರ ಮಕ್ಕಳಿಗೆ ಕಾಫಿ ಮಾಡೋಕೆ" ಎಂದು ಹಂಗಿಸಿದರು. ಸಿಟ್ಟಿಗೆ ಬದಲು ನಗು ಬಂತು. ಜೋರಾಗಿ ನಕ್ಕುಬಿಟ್ಟೆ. ಗಂಡಸರ ಶೌರ್ಯವನ್ನು ಕಂಡು ನನಗೇ ನಾಚಿಕೆಯಾಯಿತು.

ಅಲ್ಲ, ಹುಲಿಜಾತಿಗೆ ಸೇರಿದ ಮಾತ್ರಕ್ಕೆ ಹೆಂಡಂದಿರನ್ನು ಹಗಲಿರುಳೂ ಹಂಗಿಸಬೇಕೇ? ಅದೂ ನಿಷ್ಕಾರಣವಾಗಿ!

—ಎಚ್. ಪ್ರಹ್ಲಾದರಾವ್.

# ಅಹಲ್ಯೆ

## ಉತ್ತರಾಂಕ

---

### ದೃಶ್ಯ ೧

(ಮಿಥಿಲೆಯ ಬನದ ಒಂದು ಹಾದಿ. ಮೈತ್ರೇಯನ ಆಶ್ರಮದ ವಟುಗಳು ದರ್ಭೆ ಮತ್ತು ಸಮಿತ್ತಿನ ಹೊರೆಗಳನ್ನು ಹೊತ್ತುಕೊಂಡು ಪ್ರವೇಶಿಸುತ್ತಾರೆ.)

ಒಬ್ಬ

ಹೊಂಗೆಯ ಮರ ಚೆಂದ, ಮಂಗನಾಟವು ಚೆಂದ
ಸಂಗಡವಿರೆ ನೀ ಬಲು ಚೆಂದ—

(ಹೊರೆಯನ್ನು ಎತ್ತಿಹಾಕಿ ಹೊಂಗೆಯ ಮರದ ನೆರಳಿನಲ್ಲಿ ಮಲಗುವುದಕ್ಕೆ ಅಣಿಯಾಗುತ್ತಾ)

ಸಂಗಡವಿರೆ ನೀ ಬಲು ಚೆಂದ—ನೆಳಲೊಳು
ಅಂಗಾತ ಮಲಗೆ ಬಲು ಚೆಂದ.

(ಇನ್ನೊಬ್ಬ ತಾನೂ ಹಾಗೆ ಮಾಡಿ)

ವೇದ ಕಲಿಯಲು ಹೋದ ಹೈದನ ಕತೆ ಕೇಳಾ
ಐದ್ಹಟ್ಟಿ ತುರುವ ಹಳುವೊಳು—ಕಾಯುತ್ತ
ಓದಾಯ್ತು ಎಂದ ವನದೊಳು.

ಒಬ್ಬ

ಹೊಂಗೆಯ ನೆಳಲೊಳು ಅಂಗಾತ ಬಿದ್ದವನೆ
ಹಂಗಿಲ್ಲದೆ ವಿದ್ಯೆ ಕಲಿವನೆ—ನನ ಕೆಳೆಯ
ಸಂಗಡಲೆ ಇಹಳೊ ಸರಸತಿ.

ಇನ್ನೊಬ್ಬ

ಪರರ ಜರೆದೊಡೆ ನಿನಗೆ ನರಕ ತಪ್ಪದು ಕಾಣೊ
ಗುರುವಾಕ್ಯ ನೆನೆಯೊ ನೇಹಿಗನೆ—ದರ್ಭೆಯ
ಹೊರೆಯೆತ್ತಿ ನಡೆಯೋ ಮುನಿದಾರು.

ಒಬ್ಬ

ಹೊತ್ತಾರೆ ತುರುವಟ್ಟಿ ಇತ್ತಲೆ ಹೋದವರು
ನೆತ್ತಿಗೇರಿದರು ದಿನದೇವ—ಗೆಳೆಯರು
ಎತ್ತ ಹೋಗಿಹರೊ ಬರಲಿಲ್ಲ.

ಇನ್ನೊಬ್ಬ

(ಎದ್ದು ಕುಳಿತು)

ಧೌಡುಧೌಡೆನ್ನುತ್ತ ಓಡೋಡಿ ಬಹರಾರು
ಕಾಡ ಹುಲಿ ಬೆಂಬತ್ತಿ ಬಂದಂತೆ—ಬರುವರ
ನೋಡಣ್ಣಾ ನಮ್ಮ ಗೆಳೆಯರ.

(ಮತ್ತಿಬ್ಬರು ವಟುಗಳು ಏದಿಕೊಂಡು ಓಡಿಬರುತ್ತಾರೆ.)

ಬಂದವರು

ಕಂಡೆವು !

ಮೊದಲನೆಯ ವಟು

ಏನನು ?

ಬಂದವರು

ಕಂಡೆವು ಕಂಡೆವು !

ಎರಡನೆಯವನು

ಏನನೊ ?

ಬಂದವರು

ಕಂಡೆವು ಕಂಡೆವು ವಿಶ್ವಾಮಿತ್ರರ
ಆ ಆಶ್ರಮದೆಡೆ ಇದೆ ಈಗ !
ಹವಿ ಹೊಗೆಗೂಡಿದ ಅಗ್ನಿಯ ತೆರದೊಳು
ಜಡೆಗೊಂಡಾತನ ಮೊಗವೀಗ !

ಮೊದಲ ವಟುಗಳು

ಮಹರ್ಷಿ ಕೌಶಿಕರೈತಂದಿಹರೇ,
ಅವರನು ಬಲ್ಲಿರಾ—ಇದು ದಿಟವೇ ?

ಬಂದವರು

ದಿಟ ದಿಟ, ಮುನಿಗಳನರಿಯೆವೆ !—ನಡೆಯಿರಿ
ಗುರುಗಳಿಗರುಹುವ ಈ ಕ್ಷಣವೇ.

(ಎಲ್ಲರೂ ಹೋಗುವರು.)

ತೆರೆ.

## ದೃಶ್ಯ ೨

(ತೆರೆ ಎದ್ದು ಮೈತ್ರೇಯನ ಆಶ್ರಮದ ಒಂದು ಭಾಗವನ್ನು ತೋರಿಸುವುದು. ಮಾಧ್ಯಾಹ್ನಿಕವನ್ನು ಪೂರೈಸಿಕೊಂಡು ಮೈತ್ರೇಯ ಕೌಶಿಕರು ಆಶ್ರಮಕ್ಕೆ ಬರುತ್ತಿರುವಾಗ—)

ಮೈತ್ರೇಯ

ಅಹಹ ದಿನದ ಚೆಲುವೆನಿತು
ಎಂದೂ ಕಾಣೆ ಸೊಗವಿನಿತು || ಪ ||

ರವಿ ಹೊಳೆವನು ತಿಳಿನೀಲವ
ಹೊಸ ಹೊಗರಿಂದಭಿಷೇಚಿಸಿ
ತಳಿರೊಡೆದಿಹ ಮಲರಿಡಿದಿಹ
ಬನದ ಚೆಲುವನವಲೋಕಿಸಿ || ಅಹಹ ದಿನದ . . .

ಸಿರಿಮೌನದ ಕುಸುರಿನಂತೆ
ಖಗದಿಂಚರ ವನದಂಚೊಳು
ನಾನಾಲಿಸೆ ಸವಿ ನೆನಪನೆ
ತರುತಿರುವುದು ಬಗೆಯಂಚೊಳು || ಅಹಹ ದಿನದ . . .

ನನ್ನಾಲಿಗಳರಸುತ್ತಿವೆ
ಈ ದಂಪತಿ ಇಲ್ಲಿಹರೆನೆ
ದೆಸೆದೆಸೆಗಳ ನಿಟ್ಟಿಸುತಲಿ
ಹಿಂದಾದುದು ಬರಿ ಕನಸೆನೆ || ಅಹಹ ದಿನದ . . .

ನೋಡಾ ತರು ನಾಣೇರಿದ
ವಧುವಿನಂತೆ ಅದರಡಿಯೊಳು
ಭ್ರಮಿಸುವೆ ನಾ ನವದಂಪತಿ
ನುಡಿದಾಡುವರೆನ್ನುವವೊಲು || ಅಹಹ ದಿನದ . . .

ಚಣ ಚಣಕೂ ಕಿವಿ ತೆರೆವುದು
ಗೌತಮನಿವನೆಂದಾಲಿಸಿ
ಬರಿ ಭ್ರಮೆ ಇದು ಹುಸಿ ಎನ್ನುವ
ನಂಬಿಕೆಯನೆ ಹುಸಿ ಎನ್ನಿಸಿ || ಅಹಹ ದಿನದ . . .

ಅದೆ ಬಾನದೆ ಬೆಳಕಾ ರಸ-
ದನುಭೂತಿಯು ಪಡೆದಿದೆ ಮನ
ಮೊದಲೊಲಿದರ ಮುದಮುದ್ರಿತ-
ವಾದಾ ದಿನದಂತೀ ದಿನ || ಅಹಹ ದಿನದ . . .

ಕೌಶಿಕ

ಪ್ರಿಯದರ್ಶನವಾದೀ ಜಗ
ಪ್ರಿಯದರ್ಶನಕಾಗದಿಹುದೆ
ಶಾಪಾಂತದ ಪುನರಾಗಮ-
ನಾಕಾಂಕ್ಷೆಯೊಳಿದೆ ನನ್ನೆದೆ || ಅಹಹ ದಿನದ . . .

ಮಾಧವಿ

(ಸಂಭ್ರಮದಿಂದ ಪ್ರವೇಶಿಸಿ)

ಆಲಿಸು ಕೌಶಿಕ, ಹಳುವಿಂದೈತಂ-
ದೀ ವಟುಗಳ ಬೇಹ.
ಶುಭಶುಭವೆನ್ನುತೆ ನನ್ನೆದೆ ನುಡಿಯಿತು—
ಆಲಿಸಿರೀ ಬೇಹ.

ಮೈತ್ರೇಯ

ಏನದು ವಟುಗಳೆ?

ವಟುಗಳು

ಕ್ಷಮಿಸಿರಾರ್ಯ. ತುಸವೆಚ್ಚರ ತಪ್ಪಿರೆ
ತುರು ಹಿಡಿದುವು ಹಳುವಿನ ದಾರಿ;
ಅವಸರಸುತ ನಾವೈದಿದೆವಲ್ಲಿಗೆ
ನಿಮ್ಮಂಕೆಯು ಏರಿ.

ಕೌಶಿಕ

(ಆ ಹುಡುಗನನ್ನು ಬೆನ್ನುತಟ್ಟಿ ನಗುತ್ತ)

ಆಟದ ಹಂಬಲು ನಿಮಗಿರೆ, ಓಟದ
ಹಂಬಲು ತುರುಗಾಯ್ತು.
ಕ್ಷಮಿಸಿಹರಿದ ಗುರು; ಹಳುವೊಳು ಏನಂ
ಕಂಡಿರಿ, ಏನಾಯ್ತು ?

ವಟುಗಳು

ತರುವೇರಿರೆ ನಾವಡಿಯೊಳೆ ಕಂಡೆವು
ವಿಶ್ವಾಮಿತ್ರರ ಇದೆ ಈಗ;
ಹವಿಹೊಗೆಗೂಡಿದ ಅಗ್ನಿಯ ತೆರದೊಳು
ಜಡೆಗೊಂಡಾತನ ಮೊಗವೀಗ.

(ಎಲ್ಲರೂ ಸಂಭ್ರಾಂತರಾಗುವರು.)

ಅವರೊಡನಿದ್ದರು ಇಬ್ಬರು ವಟುಗಳು,
ಏನೆಂದೊರೆವೆವು ಅವರಂದ !—
ತಾವರೆಯೆಸಳಿನ ನೀಟದ ಮಾಟದ
ಕಂಗಳು, ಚಂದ್ರಗು ಮೊಗ ಚೆಂದ;

ಗೂಳಿಯ ಹಿಣಿಲಂತಿರೆ ಹೆಗಲವರಿಗೆ,
ಮಂಡಿಯ ಮುಟ್ಟುವ ತೋಳ್‌ದಿಂಡು,
ಆ ಎದೆಹರಹೋ ವಿಧಿ ಮಾಡಿದನೆನೆ
ನಿಲ್ಲಲು ಪೌರುಷವೆಡೆಗೊಂಡು;

ಸಿಂಹದ ಠೀವಿಯ ಗಜಗಾಂಭೀರ್ಯದ
ನಡೆ, ಕಣ್ತುಂಬುವ ಮೈಕಟ್ಟು,
ಎಳಹರೆಯದ ನಿಗಿನಗುವೊಗ; ಆಹಾ
ಕಂಡೆವೆ ? ಉಹು—ಇದು ಕಣ್ಕಟ್ಟು !

ಕಂಡೆವು ಕಂಡೆವು ಕೌಶಿಕತವಸಿಯು
ಆ ಆಶ್ರಮದೆಡೆ ಇದೆ ಈಗ !
ಅವರುರುತಪವೇ ನಡೆಗೊಂಡುದೊ ಎನೆ
ಸೋಜಿಗದಾ ವಟುಗಳನೀಗ !

ಮೈತ್ರೇಯ

ಮಿಥಿಲಾನಗರಕೆ ಹಾದಿ ಇದಲ್ಲವು
ಕೌಶಿಕರೈತಹ ಪರಿ ಏನೋ.
ಗೌತಮನೊರೆದಾ ಶಾಪದ ಮುಗಿವಿಗೆ
ಇವರೀ ಬರವೇ ಹದನೇನೋ.

ಎಂತಿರಲೀ ಪರಿ—ಮಂಗಳವೆನ್ನಿರಿ;
ತಮ್ಮಾ ಕೌಶಿಕ, ನಡೆ ಮುಂದೆ.
ನಮ್ಮಾಶ್ರಮದೊಳು ಆತಿಥ್ಯವ ಕೊಳೆ
ಅಭ್ಯರ್ಥಿಪ ನಾವವರಿಂದೆ.

ತೆರೆ.

## ದೃಶ್ಯ ೩

(ಗೌತಮಾಶ್ರಮ. ರಾಮಲಕ್ಷ್ಮಣ ಸಮೇತನಾಗಿ ವಿಶ್ವಾಮಿತ್ರನು ಪ್ರವೇಶಿಸುತ್ತಾನೆ.)

ವಿಶ್ವಾಮಿತ್ರ

ವತ್ಸ ರಾಮಾ ವತ್ಸ ಲಕ್ಷ್ಮಣ,
ಬಂದೆವೆಮ್ಮಯ ಪಯಣದಂತಕೆ.
ಅತ್ತ ನೋಡಿರಿ, ಪಡುವ ದೆಸೆಯೆಡೆ
ಸುತ್ತಣಾಶ್ರಮವನದ ನಡುಗಡೆ
ನಿಯಮರಕ್ಷಿತ ಧರ್ಮದಂದದಿ
ಮೆರೆವ ಹೊಳಲೇ ಮಿಥಿಲೆಯು.

ರಾಮ

ಜನಕರಾಯನ ನಗರ ಇದುವೆ?
ಅಯ್ಯನಾಳುವ ನಮ್ಮಯೋಧ್ಯೆಯ
ಕಂಡ ತೆರದೊಳು ಮನಕೆ ಸಂತಸ-
ವಾಗುತಿರುವುದು ಲಕ್ಷ್ಮಣ!

ಲಕ್ಷ್ಮಣ

ಅಹುದು ಅಣ್ಣಾ ಅಹುದು! ನನಗೂ
ನೂರು ಕಳಸವ ಮೆರೆಸುತಿರುವೀ

ಹೊಳಲು ಹರುಷವ ಬೀರುತಿಹುದೈ
ನಮ್ಮ ನಗರದ ತೆರದೊಳು.

ವಿಶ್ವಾಮಿತ್ರ

ಕುಲದಿಂ ಶೀಲದಿ ಧರ್ಮದಾಳ್ವೆಯೊಳು
ಅಂತೆಯೆ ಜಸದೊಳು ದಶರಥಗೆ
ಸಾಟಿಯೆನಿಸುವೀ ರಾಜರ್ಷಿಯ ಪುರ
ತಕ್ಕುದು ನಿಮ್ಮಯ ಭಾವನೆಗೆ.
ದಣಿದಿರಿ ಮಕ್ಕಳೆ, ಹಳುವಿನ ಹಾದಿಯ
ಸರಿಹೊತ್ತಿನವರೆ ನಡೆನಡೆದು;
ತೋಪೊಳು ಬಿಡುವಂ ಕೊಳ್ಳಿರಿ ಬರುವೆನು
ಧ್ಯಾನದ ನೇಮವ ನಾ ನಡೆದು.

(ಹೋಗುವನು.)

ಲಕ್ಷ್ಮಣ

ದಿನದಿನ ನಾವಲೆದಾಡಿದ ಕುರುಚಲ ಕಾಡೆತ್ತ,
ನಿಡು ಬೆಳೆದಿಹ ಹೆಮ್ಮರದೀ ತೋಪಿನ ತೆರನೆತ್ತ !
ನೋಡೈ ಅಣ್ಣಾ, ಬಾನನೆ ವಾಮನನಡಿಯಂತೆ
ಅಳೆದಿಹುದೀ ತರುವೊಂದೇ ನೋಟವೆ ಸೋಲ್ವಂತೆ—

ನೀನೆನ್ನುತ ತಾನೆನ್ನುತ ಹೋರದೆ ಅನುವರಿತು
ಗಿಡುಮರಗಳು ಬಾಳುತ್ತಿವೆ ನಲ್ಮೆಯ ಹವಣರಿತು;
ಮೆಳೆಗುತ್ತಿಯ ಸ್ಪೈರ್ಧ್ಯದ ಜೀವನವಿಲ್ಲಿಲ್ಲಿ;
ತುಂಬಿದ ಬಾಳ್ವೆಯ ಸಂತಸ ಹೊರಹೊಮ್ಮಿದೆ ಇಲ್ಲಿ.

ನಡುಗಿಡದೊಳು ನಡುಗುತ್ತಿಹ ಹೂಗಭಯವ ನೀಡಿ
ನೆಲದಗಲಕು ಹರಡಿರುವೀ ಗರುಕೆಯ ಕಣ್ಮೋಡಿ,
ಬನದೆಲೆಯೀ ಕಿವಿಸವಿದನಿ, ಕುಂಜದ ಖಗದುಲಿವು
ಬಗೆಗಾವುದೊ ವಿಶ್ರಾಂತಿಯ ಭಾವವ ತಂದಿಹುವು.

ಕಣ್ಮನಗಳ ತರ್ಪಿಸುವೀ ಬನದೇವಿಯ ಸಿರಿಗೆ
ಮಣಿಯಿತು ಬಗೆ; ಅಳಲಾಯಿತು ಸೆಸಪಿನ ತೆರೆಮರೆಗೆ.

ಆದೊಡೆ ಅಣ್ಣಾ, ನೀನೋ ನನ್ನು ತ್ಸಾಹದೊಳು
ಬೆರೆಯದೆ ದೂರದ ಮನದಿಂ ನಿಂತಿಹೆ ಚಿಂತೆಯೊಳು !

ರಾಮ

ದಿಟ ತಮ್ಮಾ ದಿಟ ಲಕ್ಷ್ಮಣ, ಬನ ಸುಂದರವಹುದು;
ದಣಿದಿಹ ದಾರಿಗಮಂದಿಗೆ ಸೊಗವಂ ತರಲಹುದು.
ಆದೊಡೆ ನನಗಿದು ಸೋಜಿಗ—ನಿರ್ಜನವೀ ತಾಣ
ಧ್ಯಾನಾಧ್ಯಯನಾಸಕ್ತ ಜನಾವಾಸವಿಹೀನ !

ಸ್ನಾನಕು ನೇಮಕು ತಕ್ಕುದು ನೆರೆಯೀ ತಿಳಿವೊನಲು,
ಪಾಠಪ್ರವಚನಕಾದುದು ತೋಪಿನ ತಣ್ನೆಳಲು,
ಮೇಣಿದದೂರಗ್ರಾಮ, ತೃಣಕಾಷ್ಠಸಮೃದ್ಧ ;
ಇಂತಿದ್ದರು ಏ ಕತಮಾಯ್ತಿದು ವಿಪ್ರನಿಷಿದ್ಧ ?

ಅಗೊ ಆ ಎಡೆ ಬಿಟ್ಟೆಲೆವನೆ ಎಂತಿಳೆಗೊರಗಿಹುದು?
ತರುತಲದೀ ವೇದಿಕೆಯೂ ನೆಲಸಮ ಕುಸಿದಿಹುದು!
ಪಿಂತಿದು ಮುನಿಜನಸೇವಿತಮಿದು ನಿಸ್ಸಂದೇಹ;
ಇಂದಾದೊಡೆ ಎನಗೆಸಿಪುದು ಇದು ಗಾಳಿಯ ಗೇಹ.

ತಪ್ಸಾತ್ಮರ ನಿಡುಸುಯ್ಯಲು ಈ ಬನದೆಲೆಹುಯಿಲು,
ದುಃಖಿಗಳಾರ್ತಾಕ್ರಂದನವೀ ಕೋಕಿಲ ಕುಕಿಲು;
ಈ ಹಳುವಿನ ಮರೆಗಾರೋ ಪೊರೆ ಪೊರೆ ಶರಣೆಂದು
ಮೌನದೊಳೆನ್ನೆರೆವಂತಿದೆ ನನ್ನಯ ಕಿವಿಗಿಂದು.

ಲಕ್ಷ್ಮಣ
(ಹುಸಿನಗೆಗೊಂಡು)

ತಾಟಕೆಯನು ಕೊಂದಾಮೊದಲಣ್ಣಾ, ನಿನ್ನ ಮನ
ಸ್ವಾಸ್ಥ್ಯವನುಳಿದಿಂತಾಯಿತು ದುಶ್ಚಿಂತಾಸದನ.
ಕುಸಿದೆಲೆವನೆ ಈ ಕಾಡೊಳದೇಂ ನಿತ್ಯದ ನೋಟ,
ಅದಕೀ ಪರಿ ಪರಿಭಾವಿಸೆ ಅದು ಹುಸಿಬಗೆಯಾಟ.

ಇದಮಂಗಳವಾಗಿದ್ದೊಡೆ ಎಚ್ಚರಿಕೆಯ ಕೊಡದೆ-
ಕರೆತರುತಿದ್ದರೆ ನಮ್ಮನು ಮುನಿವರರೀ ತೆರದೆ ?

ಎಂತಿದ್ದರು ಇರಲೀ ಪರಿ ; ಈ ಬನದೇವತೆಗೆ
ಶರಣೆಂದೆನ್ನುತೆ ಬಿಡುವಂ ಕೊಳುವುದೆ ತರವೆಮಗೆ.

ರಾಮ

ನಿನ್ನಿಚ್ಛೆಯ ತೆರನಾಗಲಿ ಲಕ್ಷ್ಮಣ, ಮಚ್ಚಿತ್ತ
ವಿಭ್ರಾಂತಿಗೆ ಸಿಲುಕಿರಬಹುದಾ ದುಗುಡ ನಿಮಿತ್ತ.
ಬಿಡುವಂ ಕೊಳ್ಳುವ ನೆಳಲೊಳು ಮುನಿಯೈತಹವರೆಗೆ
ಮಲರರ್ಘ್ಯವ ಸಲಿಸುತಲೀ ಬನಸಿರಿ ದೇವತೆಗೆ.

(ಪುಷ್ಪವನ್ನು ಆರಿಸುತ್ತಿರುವರು.)

(ತೆರೆಯ ಮರೆಯಲ್ಲಿ ಅದೃಶ್ಯಳಾದ ಅಹಲ್ಯೆ ಅಮಾನುಷವೂ ದೀನವೂ ಸ್ಪಷ್ಟಾಸ್ಪಷ್ಟವೂ ಆದ ವಾಣಿಯಿಂದ ಹಾಡುವಳು.)

ಅಹಲ್ಯೆ

ಕೆಟ್ಟೆನೆಲಾ ಕೆಟ್ಟೆನೆಲಾ ಒಲವೇ ಒಲವೇ
ಸುಟ್ಟೆಯೆಲಾ ಸುಟ್ಟೆಯೆಲಾ ನಲವೇ ನಲವೇ
ಗಾಳಿಯ ತೆರನಾದೆನೆಲಾ
ಈ ಬಾಳಂ ಬಾಳೆನೆಲಾ
ಹಾ ನಲವೇ ಒಲವೇ—

ರಾಮ

(ಆಲಿಸಿ, ಭ್ರಾಂತನಾಗಿ)

ಲಕ್ಷ್ಮಣಾ,
ಅತ್ತಗುತ್ತಿಯ ಸನಿಯ
ಆಲಿಸಾಲಿಸು ದನಿಯ!

ಲಕ್ಷ್ಮಣ

ಏನು ದನಿಯದು, ಎತ್ತ ?

ಅಹಲ್ಯೆ

ರವಿ ಬೆಳಗದ ತಿರೆ ಧರಿಸದ
ಎಲರೂ ಸೋಕದ ಬದುಕು
ಇರವಿಲ್ಲದ ಸಾವೊಲ್ಲದ
ಬರಿಬರಿ ಅಳಲಿನ ನಸುಕು

ವಿಶ್ವಕೆ ನಾನೇಕಾಕಿನಿ
ಪಾತಕಿ ಅಯ್ಯೋ ಶಾಕಿನಿ
ಅಸತಿ ಅನಾತ್ಮೆ ಭ್ರಷ್ಟೆ ಹೇಸಿಕೆ ಎಲ್ಲರ ಮನಕು || ಕೆಟ್ಟೆನೆಲಾ . . .

ರಾಮ

ಕೇಳಿತೇ ಲಕ್ಷ್ಮಣ?

ಲಕ್ಷ್ಮಣ

ಏವೇಳ್ವೆನೀ ಭ್ರಮೆಗೆ! ಗಾಳಿ ಕಿರುಗುಟ್ಟಿದರೆ
ಏನನೋ ಭಾವಿಸುತ ಇಂತಳಲಿಗಪ್ಪರೆ?

(ರಾಮನು ಲಕ್ಷ್ಮಣನ ಮಾತನ್ನು ಆಲಿಸದವನಂತೆ ಕಿವಿಯನ್ನು ಅತ್ತ ತೆರೆಯುವನು.)

ಅಹಲ್ಯೆ




ಇಂಧನವುಳಿದಳಿಪೊಗೆಯನೆ
ನೆಮ್ಮುವ ಉರಿಯಂತೆ
ಕಾಮುಕ ದೇವನ ವಿಭ್ರಮ-
ಕಾದೆನು ನಾನಿಂತೆ
ಹೂವೆಂದುದೆ ಹಾವಾಯಿತು
ಕಾವುದೆ ನನ್ನಂ ಕೊಂದಿತು
ಪಳಿ ಒಲವೇ ಹುಸಿ ನಲವೇ ಹಾ ನಿರಂತ ಚಿಂತೆ || ಕೆಟ್ಟೆನೆಲಾ . . .

ಲಕ್ಷ್ಮಣ

ಕೌತುಕದ ನಾದಗಳ ಬೀಡಣ್ಣ ಈ ಕಾಡು;
ಮನುಜರಳುವನೆ ಪೋಲ್ಸುದೀ ಬಿದಿರಮೆಳೆ ಹಾಡು!

ಅಹಲ್ಯೆ

ನನ್ನೆದೆಯನೆ ನಾನರಿಯದೆ
ನಡೆಯಂ ಮೀರಿದೆನೇ
ಹುಲುಬಯಕೆಯ ತುಸ ರಾಗಕೆ
ನನ್ನನೆ ಮಾರಿದೆನೇ
ನಾ ಬೆಂದೆನೆ ಬಯಲಾದೆನೆ
ನೆನೆದೆಡೆ ಮೈಲಿಗೆಯಾದೆನೆ
ಮಾಮುನಿಸತಿಗೀ ಬಾಳೇ ಹಾ ಮುಂಗತಿ ಕಾಣೆ || ಕೆಟ್ಟೆನೆಲಾ . . .

ಲಕ್ಷ್ಮಣ

ಕಣ್ ಕಾಣದು ಕಿವಿಯಾಲಿಪು-
ದೇನೀ ಭ್ರಾಂತಿ ಇದು?
ನಮ್ಮನು ವಂಚಿಸಲೀತೆರ
ರಕ್ಕಸಮಾಯೆಯಿದು.
ಏನೋ ಹುಯಿಲೇನೋ ದನಿ,
ಅರಿಯದು ಇದರೊಳಗು.

(ರಾಮನು ಪರವಶತೆಯಿಂದ ಧ್ವನಿಯ ಕಡೆ ತೆರೆಯ ಮರೆಗೆ ಹೋಗುವನು.)

ತುಸ ತಡೆ ರಾಮಾ, ಮಾಮುನಿ
ಐತಹವರೆಗು.

ವಿಶ್ವಾಮಿತ್ರ

(ಪ್ರವೇಶಿಸಿ)

ಏನಾಯಿತು ಸೌಮಿತ್ರಿ?

ಲಕ್ಷ್ಮಣ

ಗಾಳಿ ಗೋಳಿಡುತಿಹುದು ಈ ಹಳುವಿನೊಳಗೆ,
ಬೇಡವೆಂದರು ಹೋದ ರಾಮನತ್ತೆಡೆಗೆ.
ಆಲಿಸಿರಿ ಮುನಿವರಾ, ಹೃದ್ವಿದಾರಿಣಿ ವಾಣಿ
ಶ್ರೋತ್ರಗೋಚರಮಾಗಲಿಲ್ಲವೇ ಈ ವಾಣಿ?

ಅಹಲ್ಯೆ

ಉಸಿರೆಳೆಯುವೆ ನಾನೆಂದಿಗೆ
ಮಾನಿಸರಂತೆ
ಪಳಿಯಳಿಯುವೆ ನಾನೆಂದಿಗೆ
ನೀಗುತ ಚಿಂತೆ
ಕೊನೆ ಎಂದಿಗೆ ಈ ಶಾಪಕೆ
ತಂಪೆಂದಿಗೆ ಈ ತಾಪಕೆ
ಸೊಗವಡೆವಳು ಇನ್ನೆಂದಿಗೆ ಗೌತಮ ಕಾಂತೆ || ಕೆಟ್ಟೆನೆಲಾ . . .

ವಿಶ್ವಾಮಿತ್ರ

ನನ್ನ ಸಖ ಗೌತಮನ ಪುಣ್ಯಮಯಿ ಸತಿ ಈಕೆ
ಕೃತಕರ್ಮನಿಷ್ಕೃತಿಗೆ ಪರಿತಪಿಪಳಿಂತು ;
ಅನುತಾಪವರಸುತ್ತ ಕಾಡಲೆಯುವೀ ಗೋಳ-
ನಾಲಿಸುತ ನನ್ನೆದೆಯು ಕರಗುತಿಹುದೆಂತು !
ಕಳವಳವ ಕೊಳ್ಳದಿರು ಸೌಮಿತ್ರಿ, ಶುಭವಹುದು.

(ರಾಮ ಹೋದ ಕಡೆಯನ್ನು ನೋಡಿ)

ನಡೆ ರಾಮ, ಮರುಕದಿಂ ಸ್ನಾತಾಂತರಂಗದಿಂ-
ದಾರ್ತರುತ್ತರಣಕ್ಕೆ ತಕ್ಕನಾದೆ.
ತೇಜೋಭಿರಾಮನೇ—ನಡೆ, ವೇಳೆಯೊದಗಿಹುದು
ಧೂತಕಲ್ಮಷೆ ತನ್ನ ತನುವನೈದೆ.

(ವಿಶ್ವಾಮಿತ್ರನು ಅಂತರ್ಮುಖನಾಗಿ ಆವುದೋ ಮಂತ್ರವನ್ನು ಜಪಿಸುತ್ತ ತೆರೆಯ ಮರೆಗೆ ಹೋಗುವನು. ಲಕ್ಷ್ಮಣನು ಆತನನ್ನು ಹಿಂಬಾಲಿಸುವನು. ಅವರು ಅತ್ತ ಹೋಗಲು ಇತ್ತ ರಂಭೆ ಮೊದಲಾದ ಅಪ್ಸರೆಯರು ಬರುವರು. ಕರುಣಾಜನಕವಾದ ಮೇಳದ ಸಂಗೀತವು ಕ್ರಮೇಣ ಗೆಲವಿನ ರಾಗಕ್ಕೆ ತಿರುಗುವುದು).

ರಂಭೆ

ನೋಡಿ ಸಖಿಯರೆ ನೋಡಿರೇ ಅಹ
ಕೂಡುತಿರುವಚ್ಚರಿಯನು—ಅಹ
ಮೂಡಿ ಬರುವಚ್ಚರಿಯನು
ದನಿಯನಾಲಿಸಿ ನಿಲ್ವನೊಮ್ಮೆಗೆ
ಧೀರ ಮುಂದಕೆ ನಡೆವನು—ನೆನೆ-
ದಿಷ್ಟ ದೈವವನೆರೆವನು
ಕಾಳಮೇಘವ ಹೊಗುವ ರವಿಯೊಲು
ಪಾಳುಗುಡಿಸಲ ಹೊಗುವನು—ಮೇ-
ಣೆಮ್ಮ ದೃಷ್ಟಿಯ ಮಿಗುವನು.

ಮತ್ತೊಬ್ಬಳು

ಮುಗಿಲಿನೊಳತೆರೆ ತೆರೆದ ರೀತಿಗೆ
ಗುಡಿಸಲೊಳಗೆಂತಾಯಿತೇ—ಆ
ಕಾಳವೆಂತಹ ಮಾಗಿತೇ

ಇರುಳ ಹಳುವೊಳು ನಸುಕು ಸಮೆವಾ
ಹಗಲ ಹಾದಿಯೊಲಾಯಿತೇ—ಅಗೊ
ಬಲಿವ ಬೆಳಕದು ತೋರಿತೇ !

ಮತ್ತೊಬ್ಬಳು

ಏನು ಸೋಜಿಗ ಮೂಡಿ ಬರುವೀ
ರೂಪವೊಂದನು ನೋಡಿರೇ—ಎಂ-
ದಿಲ್ಲದದ್ಭುತ ಕಾಣಿರೇ
ಹೊಗೆಯ ಮುಸುಕಿಂದೊಗೆವ ಅಗ್ನಿಯ
ಶಿಖೆಯ ತೆರದೊಳು ಜ್ವಲಿಸುವೀ—ನಸ
ನೇತ್ರಜಾಡ್ಯವ ಹರಿಸುವೀ.

ಇನ್ನೊಬ್ಬಳು

ಹರಿವ ಹೊನಲೊಳು ಕಣ್ಣುಕುಕ್ಕುವ
ರವಿಯ ನೀಟದ ಬಿಂಬದೊಲ್—ಬರಿ
ಬೆಳಕೆ ಮೈಯನು ತುಂಬಿದೊಲ್
ದೇವದೇವರೆ ನೋಡೆ ಹಿಂಜರಿ-
ವಂಥ ಚೆಲುವಿನ ಓಜದೊಳ್—ಬಲ್
ತಪದ ದುರ್ಭರ ತೇಜದೊಳ್.

ರಂಭೆ

ದಿವ್ಯದರ್ಶನ ದಿವ್ಯದರ್ಶನ
ಬನ್ನಿರೇ ಸಖಿ ಬನ್ನಿರೇ—ಸೋ-
ಬಾನೆ ಎನ್ನಿರಿ ಬನ್ನಿರೇ
ಬನ್ನಿ ಹೂಮಳೆಗರೆದು ಮರಳುವ
ದಿವಕೆ ಸುದ್ದಿಯ ಸಾರುವ—ನ-
ಮ್ಮರಸರುಬ್ಬೆಗ ಕಳೆಯುವ.

(ಹೊರಡುವರು.)

ತೆರೆ.

## ದೃಶ್ಯ ೪

(ಜೀರ್ಣಪರ್ಣಶಾಲೆಯ ಹೊರಗೆ ತಪಸ್ಸಿನಿಂದ ತೇಜಸ್ವಿನಿಯೂ ದಗ್ಧಕಾಮೆಯೂ ಶುದ್ಧೆಯೂ ಆದ ಅಹಲ್ಯೆ ಹೊರಟುಬರುತ್ತಾಳೆ. ರಾಮನು ದೂರದಲ್ಲಿ ಬೆರಗುಗೊಂಡವನಂತೆ ಸ್ತಬ್ಧನಾಗಿ ನಿಂತಿದ್ದಾನೆ.)

ಅಹಲ್ಯೆ

ಇದೆ ಕನಸೋ ಅದೆ ಕನಸೋ
ನಾನರಿಯೆ—ಅಚ್ಚರಿಯೇ ॥ ಪ ॥

ತಮವಿಡಿದಾ ಯಾಮಿನಿಯೊಳ್
ಬಾನಲೆವಾ ಗಾಳಿಯವೊಲ್
ನನ್ನಳಿದಿನ್ನೊಂದಿರದ
ಬಾಳ್ಮಗಿಯಿತೆ ಗೋಳ್ತನದ ॥ ಇದೆ ಕನಸೋ . . .

ಬತ್ತಲ ಬಾನಿನ ಬಿಲವಂ
ತುಳುಕಿರುವೀ ಬೆಳಕಂತೆ
ಥಟ್ಟನೆ ಬಾಳುಕ್ಕಿ ಬರೆ
ಕನಸೆನ್ನದೆ ನಂಬುವರೆ ॥ ಇದೆ ಕನಸೋ . . .

ಇನಿದನಿಗಳ ಕಿವಿ ಕೊಂಡಿದೆ
ಬಾನ್ ವರೆಗೂ ಕಣ್ ಹರಡಿದೆ
ಬನದೆಲರಿನ ನರುಗಂಪಂ
ನಾಸಿಕವರಿತಿದೆ ಸೊಂಪಂ ॥ ಇದೆ ಕನಸೋ . . .

ಕರ್ಣಿಕೆ ನಾ ಜಗವರಳು
ಅರಳಿದೆನೋ ಇಂತೆನಲು
ಹೊರವಾಯಿತು ನನ್ನಿರವು
ಕೊರಗಳಿಯಿತು ನನ್ನರಿವು ॥ ಇದೆ ಕನಸೋ . . .

ಮಾಂತ್ರಿಕನೊಂದಾಟದವೊಲ್
ಕ್ರಾಂತಿಯಾಯಿತೆನ್ನಿರವೊಳ್
ತಣಿದಿಂದ್ರಿಯ ತಣಿದೊಳಗು
ಬೆಳಬೆಳಕೇ ಒಳಹೊರಗು ॥ ಇದೆ ಕನಸೋ . . .

(ರಾಮನನ್ನು ನೋಡಿ ಮುಂದುವರಿದು)

ನನ್ನಿದಿರೊಳು ನಿಂತಿಹ ಹೇ
ಮಂಗಳಸುಂದರ ರೂಹೇ
ನಿನ್ನದೆಯೇ ಈ ಮಾಟಂ
ಮರಳಿಯು ನಾನಿರುವಾಟಂ || ಇದೆ ಕನಸೋ . . .

ರಾಮ

ಈ ತಿರೆಯೇ ಗೋಳಿಡುವೊಲ್
ದನಿ ಮೊಳಗಿತು ಈ ಬನದೊಳ್
ನಾ ಬಂದೆಂ ಹದನರಿಯೆ
ಕಾಂಬೆನದೇನಚ್ಚರಿಯೇ || ಇದೆ ಕನಸೋ . . .

ಪಂಚಭೂತವೊಗ್ಗೂಡಿ
ಇದಿರೇ ಆಯ್ತೀ ಮೋಡಿ
ಎನೆ ಬಯಲಿಂ ಮೂಡಿ ಬಹೆ
ಮನಕೆ ಬೆರಗ ತರುತಲಿಹೆ || ಇದೆ ಕನಸೋ . . . .

ದೇವತೆಯೊಲು ಕಂಗೊಳುವೆ
ಮಾತೆಯವೊಲು ಬಗೆಗೊಳುವೆ
ಹೇ ಮಂಗಳೆ ಶರಣಾದೆಂ
ಹರಸವ್ವಾ ಮಗನಾದೆಂ || ಇದೆ ಕನಸೋ . . .

ಅಹಲ್ಯೆ

ಸುಂದರ ಶುಭಕರ ಮೃತಸಂಜೀವಕ
ಪತಿತೋದ್ಧಾರಕ ಚೇತನಮೇ
ಏಳೇಳ್ಗೆ ಮಹಿಮಾನ್ವಿತ ಬಾಲಕ
ನಮೋ ನಮೋ ನಿನಗೋ ಶಿವಮೇ !

ಇರುಳಿನ ಕುರುಡನು ಕಳೆವ ಸುಧಾಕರ-
ಸಮಮುಖಮಂಡಲ ಚೆನ್ನಿಗನೇ
ತಿರೆಮುಗುಳರಳಿಸಿ ಆಗಸದರಕೆಯ
ತುಂಬುವ ದಿನಕರದರ್ಶನನೇ,

ಕಾಮುಹತಳು ನಾನಕಾಮೆಯಾದೆನು,
ಬಿದ್ದವಳೆದ್ದೆನು ಹಗುರಾಗಿ;
ಆಸೆಯ ಋಣ ತೀರಿತು ಹೊರೆ ಇಳಿಯಿತು,
ನಿನಗೊಪ್ಪಿಪೆನಿದ ತಲೆಬಾಗಿ.

(ರಾಮನಿಗೆ ನಮಿಸುವಾಗ ವಿಶ್ವಾಮಿತ್ರ ಲಕ್ಷ್ಮಣರು ಪ್ರವೇಶಿಸುವರು.)

ವಿಶ್ವಾಮಿತ್ರ

ಒಳ್ಳಿತು ವತ್ಸ—ಒಳ್ಳಿತಾಯಿತ್ತೈ,
ಒಳ್ಳಿತಾಯಿತೌ ಕಲ್ಯಾಣಿ.
ಎಲರನುಕೂಲಿಸೆ ಇಧ್ಮಗತಾಜ್ಯವು
ಜ್ವಲಿಸುವ ತೆರನಿರವಾಂತೆಯೆ ನೀ.
ದಗ್ಧಕಾಮೆ ಓ ದುಗ್ಧತಪಃಫಲೆ
ಶುದ್ಧೆ ನಿರ್ಮುಕ್ತೆ ಓ ತಾಯೆ
ತ್ರಿಜಗದ್ವಂದಿತೆ ನಾಮಪಾವನೆ
ಇಂದಹಲ್ಯೆ ಗೌತಮಜಾಯೆ.

(ಹೂಮಳೆಗರೆಯುವುದು. ಅಹಲ್ಯೆ ಹರಕೆಯನ್ನು ಸೂಡಿ ತನಗೆರಗಿದ ಲಕ್ಷ್ಮಣನನ್ನು ಎತ್ತಿ ಸಂತೈಸಿ—)

ಅಹಲ್ಯೆ

ಧನ್ಯಳಾದೆನ್ನೈ ಮೌನಿವರೇಣ್ಯಾ
ಧನ್ಯಳಾದೆ ನಾ ಬಾಲಕರೆ!

(ತನಗೆ ತಾನು ಹೇಳಿಕೊಳ್ಳುವಂತೆ)

ದಿಟ ನಾ ಶುದ್ಧಳು;—ಆರೊಪ್ಪಿಗೆಯಿಂ?
ಅಳಿಸುವರಾರೀ ಬಾಳ ಕರೆ!

ತನುವೆನಗೊಪ್ಪಿಸಿ ಮನವೆನಗೊಪ್ಪಿಸಿ
ತಪವಂ ಗಳಿಸೆನ್ನೊಪ್ಪಿತಕೆ
ಒಲಿದ ಮಹಾತ್ಮನ ಸರ್ವಸ್ವವನೂ
ವಿಕ್ರಯಿಸಿದೆ ಹಾ ವಿಭ್ರಮಕೆ!

ಯಾಚಿಪೆ ಕ್ಷಮೆಯಂ ಸರ್ವಭೂತಗಳೆ
ಓ ವನದೇವತೆ ಓ ಎಲರೇ

ತಿರೆಯಧಿದೇವತೆ ಜಲದಧಿದೇವತೆ
ಓ ಮಜ್ಜೀವನಕಾರಣರೇ !—
ಕರುಣೆಯ ಹೊನಲೇ ಒಯ್ಯಿಂದೆನ್ನಯ
ಮೊರೆಯನು ಸಕಲರ ಹೃದಯಕ್ಕೆ
ಮಜ್ಜೀವೇಶನ ನಿಗೂಢವಾಸಕೆ.
ಈ ಬಾಳೆನಗೂ ಲೇಸಕ್ಕೆ !

ಗೌತಮ

(ಪ್ರವೇಶಿಸಿ)

ಕ್ಷಮಿಸುವರಾರ್, ಆರ್ ಕ್ಷಮೆಗೆ ?—
ದುಗುಡವ ಬಿಡು ಕಾಂತೆ.
ಭವಿತವ್ಯತೆಗೇಕೀ ವ್ಯಥೆ
ಓ ಪರಿತಾಪಶ್ರಾಂತೆ !

ತನ್ನರಿವನು ತಾ ಪಡೆಯುವ
ಚೇತನಕೀ ಕ್ರಾಂತಿ
ಸಾಜಮೆ ಸರಿ, ತತ್ಫಲವೀ
ವಿಪಾಕ ವಿಶ್ರಾಂತಿ.

ಭವಶುಕ್ತಿಯ ಮುಕ್ತಾಫಲ-
ವೆನೆ ನಲ್ಕಳೆಗೊಂಡು
ಹೊರಬರೆ ನೀ ಕೊಳೆಯುಳಿಯುತ
ಮುದವಾಂತೆನು ಕಂಡು.

ಇನ್ನಾಯಿತು ನಮಗೀ ಜಗ
ತಾವರೆಯೆಲೆಯಂತೆ
ಋತವರಿಯುತ ನಿಸ್ಪೃಹತೆಯೊ-
ಳಿರಬಲ್ಲೆವು ಕಾಂತೆ.

ವಿಶ್ವಾಮಿತ್ರ

ಅಹಹ—ಗೌತಮನೇ ಬಂದನಿಗೊ
ಮಂಗಳಪೂರ್ಣತೆಗೆ

ಸಲ್ಪಾತಿನ ಸೊದೆಗರೆಯುತ
ನಮ್ಮೆಲ್ಲರ ಕಿವಿಗೆ!

(ಕೌಶಿಕ ಗೌತಮರು ಆಲಿಂಗಿಸುವರು. ರಾಮಲಕ್ಷ್ಮಣರು ಮಣಿವರು.)

ಅಹಲ್ಯೆ

(ಪತಿಯ ಆಗಮನದಿಂದ ಬೆರಗುಗೊಂಡು, ತನಗೆ ತಾನೆ)

ಇದೆ ಕನಸೋ ಅದೆ ಕನಸೋ
ನಾನರಿಯೆ—ಅಚ್ಚರಿಯೇ!

ರುದ್ರನ ಕಂಡಾ ಅಳಿವು!
ಭದ್ರನ ಕಾಂಬೀ ಉಳಿವು!
ಅಂದು ಬಯಕೆ ಸಂದಾ ತೆರ!
ಇಂದು ಬಯಕೆ ಸಲುವೀ ತೆರ!

ಅಂದಿನ ಅಳಲೇ ದಿಟವೋ!
ಇಂದಿನ ನಲವೇ ದಿಟವೋ!

(ಹತ್ತಿರ ಬಂದ ಗೌತಮನ ಪದತಲಕ್ಕೆ ಕುಸಿಯುತ್ತಾ)

ಕುಸಿಯಿತಂದು ಪೊಲ್ಲಮೆ ಹೊರೆ
ಕುಸಿವುದಿಂದು ನಲ್ಮೆಯ ಹೊರೆ.

ಗೌತಮ

(ಆಕೆಯನ್ನು ಸಂತೈಸಿ)

ಏಳೌ ಸಖಿ—ದುಸ್ಸ್ವಪ್ನಕೆ
ಬೆಚ್ಚುತಲೆಚ್ಚತ್ತಂತೆ
ನಾವೆದ್ದೆವು ನಲ್ತಿಳಿವಿಗೆ.
ಏಳೌ ಬಾ, ಬಿಡು ಚಿಂತೆ.

ನಮ್ಮಾಶ್ರಮವೈದಿರುವೀ
ಮಹಿಮರ ನಾವಾದರಿಸೆ
ಅರ್ಘ್ಯಾದಿಗಳನಣಿಗೈಯಲು
ಸಹಚರಿ ಸಮಯವಿದೈಸೆ.

ಅಹಲ್ಯೆ

(ಮೆಲ್ಲನಿಯಲ್ಲಿ)

ಬಯಸುವೆನಾ ಗಂಗೆಯ ತೆರ
ಪದದಿ ಕರಗಿ ಹರಿಯೆ,
ಇಲ್ಲದಿರಲು ಹಗುರವಾಗಿ
ಕಂಪಿಸಂತೆ ಸರಿಯೆ.

ಮೈಯೆ ಭಾರ ಮನವೆ ಭಾರ
ಬದುಕೆ ಭಾರವೆಂಬ
ಆಸರೆಯೇ ಬೇಡದಂಥ
ನಲವೆ ಸನ್ನ ತುಂಬ.

ಗೌತಮ

ಧರ್ಮರತಿಗು ಕರ್ಮಗತಿಗು
ಮಿಕ್ಕು ಸ್ವಚ್ಛಂದ
ಇನ್ನು ಮುನ್ನ ನನ್ನ ನಿನ್ನ
ಆತ್ಮದಾನಂದ!

ವಿಶ್ವಾಮಿತ್ರ

ಸತಿಯು ಪೂರ್ಣ ಪತಿಯು ಪೂರ್ಣ
ಜೋಡಿಯೊಂದಿ ಪೂರ್ಣ;
ಆತ್ಮರತಿಗೆ ಆತ್ಮವಾಯ್ತು
ಕಾಮವಾಯ್ತು ತೀರ್ಣ.

ಇದೆ ಮಂಗಳ ಇದೆ ಮಧುರ
ಈ ವಿಪಾಕ ಸುಂದರ;
ಅರಿವು ಇರಿವು ಸ್ವಸ್ಥವಿರುವ
ಆನಂದ ಮಂದಿರ!

ಅಹಲ್ಯೆ

ಇರುಳದೆತ್ತ ಬೆಳಕಿದೆತ್ತ
ಸಾವುಜೀವವೆತ್ತ!

ಒಂದೆ ಬಾಳಿನಲ್ಲಿ ಇವನು
ಕೋದ ಮರ್ಮವೆತ್ತು!

ಗೌತಮ

ಹಣ್ಣೊಳು ಸಿಹಿ ಕಾಯೊಳು ಕಹಿ
ಮರದ ರಸವದೆಂತು
ಅರೆಬಳವಿಯೊಳಾನಂದವೆ
ನೋವೆನಿಸುವುದಿಂತು!

ಅಹಲ್ಯೆ

ಅಂತೊ ಎಂತೊ!—ಅಂತು ಕಂಡೆ
ಭವಸಾಗರ ಪಾರವಂ;
(ಪತಿಯನ್ನು ನೋಡಿ ಮುಗುಳ್ನಗೆಗೂಡಿ)
ನಮ್ಮ ನಮ್ಮ ಮಾತಿನಲ್ಲಿ
ಮರೆತೆವತಿಥಿಕಾರ್ಯವಂ!

(ಎಂದು ತೆರೆಯ ಮರೆಗೆ ಹೋಗುವಳು.)

(ದೂರದಲ್ಲಿ ಆಶ್ರಮವಾಸಿಗಳು ಸ್ವಾಗತಗೀತವನ್ನು ಹಾಡಿಕೊಂಡು ಬರುತ್ತಿರುವ ಗೀತದ ಪಲ್ಲವಿಯಾದ "ಸ್ವಾಗತ ಸ್ವಾಗತ ಮುನಿಗೆ—ವರವಿಶ್ವಾಮಿತ್ರನಿಗೆ" ಎಂಬ ಚರಣವು ಸ್ಫುಟವಾಗಿ ಕೇಳಿಬರುತ್ತದೆ. ಮಿಕ್ಕವು ಮಂಕಾಗಿ ಕೇಳಿಬರುತ್ತವೆ.)

ಗೌತಮ

ಮರೆತ ಕಾರ್ಯವೆಚ್ಚರಿಸುತ
ಸ್ವಾಗತವನು ಮಾಡುತ
ನಮ್ಮ ಮಂದಿಯೈತಂದರು
ಮುನಿನುತಿಯನೆ ಹಾಡುತ!

(ಒಂದು ಕಡೆಯಿಂದ ಕೌಶಿಕ ಮೈತ್ರೇಯರೊಡಗೂಡಿ ಆಶ್ರಮವಾಸಿಗಳು ಪ್ರವೇಶಿಸುವರು.)

ಸ್ವಾಗತ ಸ್ವಾಗತ ಮುನಿಗೆ
ವರ ವಿಶ್ವಾಮಿತ್ರನಿಗೆ || ಪ ||

ಮೈತ್ರೇಯ

ಶಾಂತಸುಗುಣ ಗಂಭೀರಗೆ
ಭವದ ಪಾರ ಕಂಡವನಿಗೆ

ಬಾಳ ಕಡಲ ಕಡೆದು ದಿವ್ಯ
ವೋದಾಮೃತವುಂಡವನಿಗೆ
ಸ್ವಾಗತ . . .

ಕೌಶಿಕ

ಧರ್ಮದ ಗತಿ ಗಹನವೆಂದು
ಒಂದೇ ಹಾದಿಯೊಲ್ಲದವಗೆ
ಹಲವು ತೆರದಿ ಬಾಳ ತುಳಿದು
ಚಿತ್ರಚರಿತನಾದ ಋಷಿಗೆ
ಸ್ವಾಗತ . . .

(ವಿಶ್ವಾಮಿತ್ರನು ರಾಮಲಕ್ಷ್ಮಣರೊಡನೆ ಮುಂದೆ ಬಂದು ಆಶ್ರಮವಾಸಿಗಳ ಪ್ರಣಾಮಗಳನ್ನು ಸ್ವೀಕರಿಸುವಾಗ, ಹಿಂದಿನಿಂದ)

ಗೌತಮ

ಬ್ರಹ್ಮತೇಜೋಬಲದ ಮುಂದು
ಧಿಕ್ ಕ್ಷತ್ರಿಯಬಲವೆಂದಗೆ
ಹತಕಾಮಗೆ ಜಿತಮನ್ಯುಗೆ
ಚಿರಬ್ರಹ್ಮವಿಹಾರಿಗೆ
ಸ್ವಾಗತ . . .

(ಮೈತ್ರೇಯ ಕೌಶಿಕರೂ ಆಶ್ರಮವಾಸಿಗಳೂ ಕೇಳಿ ಕಂಡು ಸಂಭ್ರಾಂತರಾಗುವರು.)

ಅಹಲ್ಯೆ

(ಅಷ್ಟುಹೊತ್ತಿಗೆ ಪಾದ್ಯವನ್ನು ತಂದು)
ಕ್ಷಮಾದಯಾ ಬಾಹಿರಮಾ-
ದೊಂದುಮಿರದ ಹಿರಿಯ ಮತಿಗೆ
ಕೃತಸಂಕಲ್ಪಗೆ ಯತಿಗೆ
ಸುಸ್ವಾಗತ ಓಜಸ್ವಿಗೆ
ಸ್ವಾಗತ . . .

(ಆಶ್ರಮವಾಸಿಗಳು ಆಶ್ಚರ್ಯದಿಂದ ತುಸಕಾಲ ಸ್ತಬ್ಧರಾಗುವರು. ಒಬ್ಬ ಹಿರಿಯ ವಟುವು ಮೆಲ್ಲನೆ ನುಸುಳಿ ಮರೆಯಾಗುವನು, ಮಾಧವಿಗೆ ತಿಳಿಸಲೆಂದು.)

ಮೈತ್ರೇಯ

(ಮೊದಲ ಬೆರಗು ಕಳೆದ ಮೇಲೆ)

ಅಕ್ಕೊ ನನ್ನ ಅಣ್ಣ—ನಾ
ನೆಂಜಿಸೇ ನನ ಕಣ್ಣ!

ಕೌಶಿಕ

ಓ ಪಕ್ಕದಲ್ಲೆ ತಾಯಿ—
ನಂಬಿ ಕಣ್ಣೆ ಮೀಯಿ!

(ಇಬ್ಬರೂ ಮುಂದೆ ಓಡಿ ಗೌತಮ ಅಹಲ್ಯೆಯರ ಸನಿಯದಲ್ಲಿ, ಮೈತ್ರೇಯನು ಗೌತಮನ ಹತ್ತಿರ ಕೌಶಿಕನು ಅಹಲ್ಯೆಯ ಹತ್ತಿರ ಅನಿವಾರ್ಯವಾಗಿ ಮಣಿಯುವರು.)

| ಗೌತಮ | ಅಹಲ್ಯೆ |
|---|---|
| ಬಾರ ತಮ್ಮ ಬಾರ. | ಬಾರ ವತ್ಸ ಬಾರ. |
| ಮೈತ್ರೇಯ | ಕೌಶಿಕ |
| ಇಂದು ನಲವಪಾರ! | ಈ ಪುಣ್ಯವಪಾರ! |

(ಹೀಗೆ ಒಬ್ಬರನ್ನೊಬ್ಬರು ಯಥೋಚಿತವಾಗಿ ಮನ್ನಿಸುತ್ತಿರುವಲ್ಲಿ ಆಶ್ರಮವಾಸಿಗಳೆಲ್ಲರೂ ಕುಶಲವನ್ನು ಕೇಳುತ್ತಿರುವಾಗ ಸಂತೋಷವು ಹೊಮ್ಮಲು, ಇತ್ತ ವಿಶ್ವಾಮಿತ್ರನು ಈ ಸಂತೋಷದ ಸೆಳವಿಗೆ ಸಿಕ್ಕಿ ಇವಕ್ಕೆ ಕಾರಣನಾದ ರಾಮನನ್ನು ಕುರಿತು)

ವಿಶ್ವಾಮಿತ್ರ

ನಲವಿನ ಕಡಲಿದು ಉಕ್ಕುತಿದೆ—ಅಹ
ಆವ ಹಿಡಿತಕೂ ದಕ್ಕದಿದೆ!

(ಇದು ಮೇಳ ಸಂಗೀತವಾಗುತ್ತದೆ.)

ಈ ಕಡಲುಕ್ಕಿಗೆ ರಾಮನೆ ಚಂದ್ರ.
ಜಯ ದಾಶರಥೇ ಜಯ ರಾಮ!

(ರಾಮನೀಗ ಎಲ್ಲರ ಗಮನವನ್ನೂ ಸೆಳೆದು ಮಧ್ಯಗತನಾಗುತ್ತಾನೆ.)

ಗೌತಮ

ಒಮ್ಮನರೊಕ್ಕೂಟದ ಆನಂದ
ಪ್ರೇಮಯೋಗದ ಸ್ವತಂತ್ರಬಂಧ;
ಈ ನಲ್ಮೆಗಾದ ದಶರಥಕಂದ
ಜಯ ದಾಶರಥೇ ಜಯ ರಾಮ!

ಮೈತ್ರೇಯ

ಇಂದೆಮ್ಮೆಣಿಕೆಯೆ ದೇವರ ಎಣಿಕೆ;
ಕೂಡಿತು ಪುಣ್ಯ, ಸಂದಿತು ಸಲಿಕೆ
ಕೌಸಲ್ಯಾಸುತ ಬರಲೀ ಬನಕೆ.
ಜಯ ದಾಶರಥೇ ಜಯ ರಾಮು!

ಅಹಲ್ಯೆ

ಹಾಲ್ಗಡಲೊಳು ಸೊದೆಯೊಗೆದಾ ರೀತಿ
ಭವ ಕೊಟ್ಟಿತು ಕೊನೆಗಿಂತೀ ಪ್ರೀತಿ;
ಧನ್ವಂತರಿ ನಮ್ಮಿಮ್ಮಾ ದಾಶರಥಿ.
ಜಯ ದಾಶರಥೇ ಜಯ ರಾಮು!

ರಾಮು

ಏಗೈದೆನು ನಾನೇಗೈದುದಕೆ
ಹುಲುನರರಪ್ಪರೆ ಕತವಿಾ ಶಿವಕೆ!
ಫಲಿಸಿತಿಂತಿಂದು ಹಿರಿಬಾಳೆರಕೆ
ಜಯ ಗುರುದೇವ ಜಯ ಗುರುವೆ!

ಲಕ್ಷ್ಮಣ

ಜಯಜಯ ಗುರುವೆ ಜಯ ಗುರುದೇವ
ಜಯ ದಾಶರಥೇ ಜಯ ರಾಮು!

ವಿಶ್ವಾಮಿತ್ರ

ಸಕಲಾರ್ತಿಶಮನ ದುರಿತೌಘದಮನ
ಜಯಮಂಗಳ ಶುಭ ಜಯ ರಾಮಾ!

ಎಲ್ಲರೂ

ಜಯಮಂಗಳ ಶುಭ ಜಯ ರಾಮಾ!

(ದೇವತೆಗಳು ಮೇಲಿಂದ ಪುಷ್ಪವನ್ನು ವರ್ಷಿಸುವರು.)

(ಈ ಮಧ್ಯದಲ್ಲಿ ಮಾಧವಿ ಗುಂಪಿನಲ್ಲಿ ನುಸುಳಿ ಬಂದು ಅಹಲ್ಯೆಯನ್ನು ಆಲಿಂಗಿಸುವಳು.)

ಎಲ್ಲರೂ

ಜಯ ರಘುನಂದನ ನರಕುಲಮಂಡನ
ಜಯಜಯ ರಾಮಾ ದಾಶರಥೇ

ಜಯ ವನಿತಾವನ ಜಯಜಯ ಪಾವನ
ಜಯ ರಘುರಾಮಾ ದಾಶರಥೇ !

ತೆರೆ.

## ದೃಶ್ಯ ೫

(ನಂದನವನ.—ಮನ್ಮಥನೊಡಗೂಡಿದ ಸುರರೂ ಸುರಸುಂದರಿಯರೂ ನೃತ್ತಗೀತದಲ್ಲಿ ತೊಡಗಿದ್ದಾರೆ.)

ವಾದ್ಯಮೇಳ

ತಿರೆಯತ್ತಣಿಂ ಚಿಮ್ಮಿದ
ಸೊದೆಯ ವಿಾರಿತೀ ಮುದ !

ಒಬ್ಬಳು

ಸ್ವರ್ಗಕಾಯ್ತು ನವ ಸುಷಮ

ಒಬ್ಬ

ಅರಳಿತು ಮಂದಾರಸುಮ

ಮತ್ತಿಬ್ಬರು

ಇಂದೆಣೆಯಾರೆಮಗಮಮ
ಬಾಳಿಗೇರಲೀ ಮುದ !

ಮೇಳ

ತಿರೆಯತ್ತಣಿಂ ಚಿಮ್ಮಿದ
ಸೊದೆಯ ವಿಾರಿತೀ ಮುದ !

ಒಬ್ಬಳು

ಮಾಗಿ ಮುಗಿಯೆ ಮೊದಲ ಮಳೆಗೆ
ಸೂಸಿ ಬರುವ ಸೂಸಲಿನೊಲು

ಮತ್ತೊಬ್ಬ

ಬೇಸಗೆಯೊಳು ಬೀಸಿ ಬರುವ
ತೆಂಗಾಳಿಯ ತೆಳು ಸುಳಿಯೊಲು

ಮೇಳ

ತಿರೆಯತ್ತಣಿಂ ಚಿಮ್ಮಿದ
ಸೊದೆಯು ವಿಾರಿತೀ ಮುದ!

ಒಬ್ಬಳು

ದಿವದ ಬುಡವೆ ತಿರೆಯೊಳಿನೆ

ಮತ್ತೊಬ್ಬಳು

ಅವಳ ಬದುಕೆ ಸಮ್ಮದೆಸೆ

ಒಬ್ಬ

ಅವಳು ಬೀಳೆ ಬಿದ್ದೆವೆಸೆ

ಮತ್ತೊಬ್ಬ

ಅವಳೇಳ್ಗೆಯೊಳೆದ್ದೆವೆನೆ

ಮೇಳ

ತಿರೆಯತ್ತಣಿಂ ಚಿಮ್ಮಿದ
ಸೊದೆಯು ವಿಾರಿತೀ ಮುದ!

ಒಬ್ಬ

ಮನಮನ ವಿರಸದಿ ಮುಗಿಯೆ

ಮತ್ತೊಬ್ಬ

ಕಾಮವೆ ಎದೆ ಎದೆ ಸುಗಿಯೆ

ಮತ್ತಿಬ್ಬರು

ಮರತುಹೋದ ಮರದಂತೆ
ಹೊಮ್ಮುಳಿಯಿತು ಬಾಳಿಂತೆ.

ಮೇಳ

ತಿರೆಯತ್ತಣಿಂ ಚಿಮ್ಮಿದ
ಸೊದೆಗು ಮಿಕ್ಕಿತೀ ಮುದ!

ಒಬ್ಬ

ಮನಮನ ಪ್ರೇಮಕೆ ತೆರೆಯೆ

ಒಬ್ಬಳು

ನಲ್ಮೆಯೆ ಇರವೊಳು ನೆರೆಯೆ

ಮತ್ತಿಬ್ಬರು

ಬಂದ ಬನದಿ ಬಂಡುಣಿಯೊಲು
ನಲಿವೆವಲಾ ನಂದನದೊಳು.

ಮೇಳ

ತಿರೆಯತ್ತಣಿಂ ಚಿಮ್ಮಿದ
ಸೊದೆಗು ಮಿಕ್ಕಿತೀ ಮುದ!

ಒಂದು ತಂಡ

ಓ ನಂದನವನವಾಸೀ!

ಮತ್ತೊಂದು ತಂಡ

ಓವೋ ಹೃದಯವಿಕಾಸೀ!

ಒಂದು ತಂಡ

ಒಲವರಸೇ!

ಮತ್ತೊಂದು ತಂಡ

ಚೆಲುವರಸೇ!

ಎಲ್ಲರೂ

ಜಯ ಜಯ ಓ ಮುದದರಸೇ!

ಮೇಳ

ತಿರೆಯತ್ತಣಿಂ ಚಿಮ್ಮಿದ
ಸೊದೆಗು ಮಿಕ್ಕಿತೀ ಮುದ!

ತೆರೆ.

ಕವಿಯ ಹರಕೆ

ಸನ್ನಿಗಾಗಲಿ ಸಕಲಜೀವರ ಚಿತ್ತವುನ್ನತಿಗಾಗಲಿ,
ತಾಳ್ಮೆಗಾಗಲಿ ಬಾಳ್ವೆ, ಅಂತೆಯೆ ಶಿವಕೆ ಸಮ್ಮುಖವಾಗಲಿ.
ಮೋದಸುರಭಿಯ ನಿರುತ ಬೀರುತ ಸುಹೃನ್ಮಾನಸಸರದಲಿ
ಕವಿ ಪುರೋಹಿತನೀತಮಾದೀ ಗೀತರೂಪಕವರಳಲಿ!

---

# ಲಿಂಗಜಾತಿಗಳ ಪರಸ್ಪರ ಪರಿಮಾಣ (Sex Ratio)

## (ಹೆಣ್ಣುಗಂಡುಗಳ ಬಲಾಬಲತೆಗಳು)

೧

ಜೀವದಿಂದಿರುವ ವಸ್ತುಗಳೆಲ್ಲವೂ ಕಣ್ಣಿಗೆ ಕಾಣದಷ್ಟು ಚಿಕ್ಕವಾಗಿರುವ ಕೋಟ್ಯನುಕೋಟಿ ಜೀವಕೋಶಗಳಿಂದ ತಯಾರಾಗಿವೆ. ಈ ಜೀವಕೋಶದಲ್ಲಿ 'ಜೀವರಸ'ವೆಂಬ ಒಂದು ಬಗೆಯ ದ್ರವವು ತುಂಬಿಕೊಂಡಿರುತ್ತ ಅದರಲ್ಲಿ ದಾರದ ಉಂಡೆಯಂತಿರುವ 'ಅಂತರ್ಬೀಜ'ವೆಂಬ ವಸ್ತುವು ತೇಲಾಡುತ್ತಿರುತ್ತದೆ. ಇವೆರಡು ವಸ್ತುಗಳೂ ಸಜೀವವಾದವುಗಳು, ಜೀವದ ತಳಹದಿ; ಅಂತರ್ಬೀಜವು ಕೆಲವು ಕೃತಕ ಬಣ್ಣಗಳನ್ನು ಸುಲಭವಾಗಿ ಹೀರಿಕೊಳ್ಳುತ್ತದೆ; ಅದರ ದಾರದ ಮೇಲೆ ಶೇಖರವಾಗಿರುವ 'ವರ್ಣಗ್ರಾಹಿ' ಎಂಬ ವಸ್ತುವೇ ಇದಕ್ಕೆ ಕಾರಣ. ಈ ಉಂಡೆಯಲ್ಲಿನ ದಾರವು ಕೆಲವು ವೇಳೆ ಉದ್ದವಾಗಿದ್ದರೂ, ಅನೇಕ ವೇಳೆಗಳಲ್ಲಿ ಸಣ್ಣಸಣ್ಣ ಚೂರುಗಳಾಗಿ ಕಿತ್ತುಹೋಗಿರುತ್ತದೆ. ಈ ಚೂರುಗಳೇ 'ವರ್ಣರೇಖೆ'ಗಳು. ಇವುಗಳ ವಿಷಯವಾಗಿ ದಿನದಿನವೂ ಹೊಸ ಹೊಸ ಸಂಗತಿಗಳು ಬೆಳಕಿಗೆ ಬರುತ್ತಿವೆ. ಜೀವವಿಜ್ಞಾನದಲ್ಲಿ ವರ್ಣರೇಖೆಗಳ ಪಾತ್ರವು ಬಹು ಮುಖ್ಯವಾದುದು. ಒಂದು ವ್ಯಕ್ತಿಯ ವ್ಯಕ್ತಿತ್ವ, ಹುಟ್ಟುಗುಣ, ಜಾಯಮಾನಗಳೆಲ್ಲವೂ ಆ ವ್ಯಕ್ತಿಯ ವರ್ಣರೇಖೆಗಳಲ್ಲಿ ಅಡಕವಾಗಿದೆ. ವ್ಯಕ್ತಿಗೆ 'ಜೀವಿ' ಎಂದು ಕರೆಸಿಕೊಳ್ಳಲು ಯೋಗ್ಯತೆ ಕೊಡುವುದು ವರ್ಣರೇಖೆ; ಅದರ ಗುಣಾವಗುಣಗಳನ್ನು ನಿರ್ದೇಶಿಸುವುದು ವರ್ಣರೇಖೆ; ಅದಕ್ಕೆ ದೇಹಶಕ್ತಿ, ಮನಶ್ಶಕ್ತಿಗಳನ್ನು ಕರುಣಿಸುವುದು ವರ್ಣರೇಖೆ; ಅದನ್ನು ಗಂಡಾಗಿಯೋ ಹೆಣ್ಣಾಗಿಯೋ ಮಾಡುವುದು ವರ್ಣರೇಖೆ; ಅದರ ತಾಯಿ ತಂದೆಗಳಿಂದ ಅವರ ಗುಣಗಳನ್ನು ಇದಕ್ಕೆ ಒಯ್ಯುವುದು ವರ್ಣರೇಖೆ; ಇದಕ್ಕೆ ಹೊಸ ಗುಣಗಳನ್ನು ಸಂಪಾದಿಸಿಕೊಳ್ಳಲು ಯೋಗ್ಯತೆಯನ್ನು ದಯಪಾಲಿಸುವುದು ವರ್ಣರೇಖೆ. ಒಂದು ಮಾತಿನಲ್ಲಿ, ಜೀವಿಯ ಹಣೆಬರಹವನ್ನು ನಿರ್ಧರಿಸುವುದು ವರ್ಣರೇಖೆ. ಈ ವರ್ಣರೇಖೆಯ ಉದ್ದಕ್ಕೂ ವ್ಯಕ್ತಿಗುಣ ನಿರ್ಧಾರಕಗಳಾದ 'ಜೀನು'ಗಳೆಂಬ ವಸ್ತುಗಳು ಗುಂಪುಗುಂಪಾಗಿ ಚದುರಿರುತ್ತವೆ.

ಪ್ರಾಣಿಗಳಲ್ಲಾಗಲಿ ಸಸ್ಯಗಳಲ್ಲಾಗಲಿ ಅದರ ಪ್ರತಿಯೊಂದು ಪಂಗಡದಲ್ಲಿಯೂ ವರ್ಣರೇಖೆಗಳ ಸಂಖ್ಯೆ ನಿಯತವಾಗಿರುತ್ತದೆ. ಉದಾಹರಣೆಗಾಗಿ, ಡ್ರಾಸೊಫೈಲ

ಎಂಬ ನೊಣದ ಪಂಗಡದಲ್ಲಿ ೪ ಜೋಡಿ, ಎಂದರೆ ೮; ಸೇವಂತಿಗೆ ಪಂಗಡದಲ್ಲಿ ೧೦ ಜೋಡಿ, ಎಂದರೆ ೨೦; ಮನುಷ್ಯ ಪಂಗಡದಲ್ಲಿ ೨೪ ಜೋಡಿ, ಎಂದರೆ ೪೮, (ಚಿತ್ರ ೩) ಇತ್ಯಾದಿ. ಯಾವ ಜೀವಿಯಲ್ಲಾದರೂ ಸರಿಯೆ, ವರ್ಣರೇಖೆಗಳೆಲ್ಲವೂ ಎರಡೆರಡಾಗಿರುತ್ತವೆ. ಜೋಡಿಯು ಒಟ್ಟಿಗೇ ಇರಬೇಕೆಂದಾಗಲಿ, ಒಂದರೊಡನೊಂದು ಸೇರಿಕೊಂಡೇ ಇರಬೇಕೆಂಬುದಾಗಲಿ, ನಿಯಮವಿಲ್ಲ. ಜೀವಕೋಶದೊಳಗೆ ವರ್ಣರೇಖೆಗಳು ಎಷ್ಟು ಚಲ್ಲಾಪಿಲ್ಲಿಯಾಗಿದ್ದರೂ, ಒಂದೇ ಗುಣವುಳ್ಳ, ಒಂದೇ ವಿಧವಾದ ಎರಡೆರಡು ವರ್ಣರೇಖೆಗಳನ್ನು ಕಾಣುವುದು ಕಷ್ಟವಲ್ಲ. ಎಂದರೆ ಈ ಎರಡು ಸಂಗತಿಗಳನ್ನು ಗಮನಿಸಬೇಕು :—

೧. ಜೀವಿಯ ಪ್ರತಿಯೊಂದು ಪಂಗಡದಲ್ಲಿಯೂ ವರ್ಣರೇಖೆಗಳ ಸಂಖ್ಯೆಯು ನಿರ್ದಿಷ್ಟವಾದುದು.

೨. ಜೀವಿಯ ಪ್ರತಿಯೊಂದು ಅಂತರ್ಬೀಜದಲ್ಲಿಯೂ ಒಂದೇ ಆಕಾರದ, ಒಂದೇ ಗುಣದ ವರ್ಣರೇಖೆಗಳು ಎರಡೆರಡಿರುತ್ತವೆ.

ಈ ಎರಡನೆಯ ಸೂತ್ರಕ್ಕೆ ಅನೇಕ ಪ್ರತಿಷೇಧಗಳಿವೆ. ಉದಾಹರಣೆಗಾಗಿ, ಕೆಲವು ರೆಕ್ಕೆ ಹುಳುಗಳಲ್ಲಿ ಹೆಣ್ಣುಹುಳುಗಳ ವರ್ಣರೇಖೆಗಳೆಲ್ಲವನ್ನೂ ಜತೆಜತೆಗಳಾಗಿ ವಿಭಾಗಿಸಬಹುದು; ಗಂಡಿನ ವರ್ಣರೇಖೆಗಳು ಈ ವಿಭಾಗಕ್ಕೆ ಒಗ್ಗುವುದಿಲ್ಲ. ಇದೇಕೆಂದರೆ, ಗಂಡಿನಲ್ಲಿ ಹೆಣ್ಣಿನಲ್ಲಿರುವುದಕ್ಕಿಂತಲೂ ಒಂದು ವರ್ಣರೇಖೆಯು ಕಡಮೆಯಾಗಿದೆ; ಆದುದರಿಂದ ಗಂಡಿನ ವರ್ಣರೇಖೆಗಳನ್ನು ಜತೆಜತೆಯಾಗಿ ಆರಿಸಿದ ಮೇಲೆ ಒಂದು ವರ್ಣರೇಖೆಯು ಮಾತ್ರ ಒಂಟಿಯಾಗಿ ನಿಲ್ಲುವುದು. ಈ ತೆರದ ವರ್ಣರೇಖೆಯನ್ನು ಬಹುಕಾಲದಿಂದಲೂ X ವರ್ಣರೇಖೆ ಎಂದು ಸಂಕೇತಮಾಡಿದ್ದಾರೆ. ಹೆಣ್ಣಿನಲ್ಲಿ ಈ X ವರ್ಣರೇಖೆಗಳು ೧ ಜತೆ, ಎಂದರೆ ಎರಡಿರುತ್ತವೆ. ಈ ವರ್ಣರೇಖೆಗಳಿಗೆ ಲಿಂಗಜಾತಿಯ ವರ್ಣರೇಖೆಗಳೆಂದು ಹೆಸರಿಡಬಹುದು. ಏಕೆಂದರೆ ಇವು ಲಿಂಗಜಾತಿಯನ್ನು ನಿರ್ದೇಶಮಾಡುತ್ತವೆ. ಹೆಣ್ಣು, ಮೊಟ್ಟೆಯನ್ನು ಇಡುವ ಸಮಯದಲ್ಲಿ ಜನನೇಂದ್ರಿಯಗಳ ಪ್ರಜನನ ಕಣಗಳು ವಿಭಾಗವಾಗುತ್ತವೆ. ಈ ವಿಭಾಗಕ್ರಮವು ದೇಹದ ಇತರ ಭಾಗಗಳಲ್ಲಿ ಸಾಧಾರಣವಾಗಿ ನಡೆಯುವ ಕ್ರಮಕ್ಕೊಳಪಡುವುದಿಲ್ಲ. ಒಂದು ಜೀವಕಣವು ಸಾಮಾನ್ಯವಿಭಾಗವಾದಾಗ (ಚಿತ್ರ ೧) ಅದರಿಂದ ಬರುವ ಎರಡು ಮರಿಕಣಗಳಲ್ಲಿಯೂ ತಾಯಿಕಣದಲ್ಲಿದ್ದ ವರ್ಣರೇಖೆಗಳ ಸಂಖ್ಯೆಯು ಅದೇ ಸಂಖ್ಯೆಯಲ್ಲಿರುತ್ತದೆ; ಹೆಚ್ಚುಕಡಮೆಗಳಾಗುವುದಿಲ್ಲ. ಆದರೆ ಜನನೇಂದ್ರಿಯವು ತತ್ತಿಯನ್ನು ತಯಾರುಮಾಡುವುದಕ್ಕೆ ಒಂದು ಬೇರೆ ಬಗೆಯ ವಿಭಾಗಕ್ರಮವನ್ನು ಅನುಸರಿಸುತ್ತದೆ (ಚಿತ್ರ ೨). ಈ ಕ್ರಮದಿಂದ ತಯಾರಾದ ಎರಡು ಮರಿಕಣಗಳಲ್ಲಿಯೂ ತಾಯಿ




ಚಿತ್ರ ೧. **ದೇಹದಲ್ಲಿ ಜೀವಕೋಶವು ವಿಭಾಗವಾಗುವುದು ಹೀಗೆ**

—"ಸಾಮಾನ್ಯವಿಭಾಗ"

೧. ತಾಯಿ ಜೀವಕೋಶ. (ನಾಲ್ಕು ಜತೆ ವರ್ಣರೇಖೆಗಳನ್ನು ಮಾತ್ರ ತೋರಿಸಿದೆ.)

೨. ಪ್ರತಿಯೊಂದು ವರ್ಣರೇಖೆಯೂ ಉದ್ದುದ್ದವಾಗಿ ಸೀಳುತ್ತದೆ.

೩. ಅರ್ಧವಾದ ವರ್ಣರೇಖೆಗಳು ಎದುರುಬದರಾಗಿ ದೂರದೂರ ಸರಿಯುತ್ತವೆ; ಅವುಗಳ ಮಧ್ಯೆ ಒಂದು ಗೋಡೆಯು ನಿರ್ಮಿತವಾಗುತ್ತದೆ.

೪. ಅರ್ಧವಾದ ವರ್ಣರೇಖೆಗಳು ತಮ್ಮ ಪೂರ್ವ ಗಾತ್ರವನ್ನು ತಾಳಿ ಎಲ್ಲ ವಿಷಯಗಳಲ್ಲೂ ತಮ್ಮ ತಾಯಿಕೋಶವನ್ನೇ ಹೋಲುವ ಮರಿಕೋಶಗಳಾಗುತ್ತವೆ.

ಕಣದಲ್ಲಿದ್ದ ವರ್ಣರೇಖೆಯ ಜತೆಗಳ ಒಂದೊಂದು ಒಂಟಿಯೂ ಒಂದೊಂದು ಕಣಕ್ಕೆ ಬಂದುಬಿಡುತ್ತದೆ; ಎಂದರೆ ವರ್ಣರೇಖೆಯ ಸಂಖ್ಯೆಯು ಅರ್ಧವಾಗುತ್ತದೆ; ಈ ಬಗೆಯನ್ನು "ವಿಂಗಡ ವಿಭಾಗ" ಎಂದು ಕರೆಯೋಣ. (ಹೀಗೆ ತಯಾರಾದ ಕಣಗಳು, ಇಲ್ಲಿಂದ ಮುಂದಕ್ಕೆ "ಅಂಡಾಣು"ಗಳೆಂಬ ನಾಮಕರಣಕ್ಕೆ ಒಳಗಾಗುತ್ತವೆ.) ಇದರಿಂದ ಒಂದು ಸಂಗತಿ ಸ್ಪಷ್ಟವಾಗುವುದು. ತಾಯಿಯಲ್ಲಿರುವ ಎರಡು X ವರ್ಣರೇಖೆಗಳೂ ಒಂದೊಂದು ಅಂಡಾಣುವನ್ನು ಸೇರಿದುವು. ಅಥವಾ ಅಂಡಾಣುಗಳೆಲ್ಲದರಲ್ಲಿಯೂ ಒಂದೊಂದು X ವರ್ಣರೇಖೆಯಿರುವುದು. ಗಂಡಿನ ಜನನೇಂದ್ರಿಯಗಳು ಪುರುಷಾಣುಗಳನ್ನು ಉತ್ಪತ್ತಿಮಾಡುವ ಸಮಯದಲ್ಲಿಯೂ ಇದೇ ತೆರನಾದ ವಿಂಗಡವಿಭಾಗವಾಗಿ, ಪುರುಷಾಣುಗಳಲ್ಲಿ ತಂದೆಯಲ್ಲಿದ್ದ ವರ್ಣರೇಖೆಗಳ




ಚಿತ್ರ ೨. **ಪ್ರಜನನಕೋಶಗಳಲ್ಲಿ ವಿಭಾಗವಾಗುವುದು ಹೀಗೆ**—"ಏಂಗಡವಿಭಾಗ"

೧. ತಾಯಿಪ್ರಜನನ ಜೀವಕೋಶ (ಇದರಲ್ಲೂ ನಾಲ್ಕು ಜತೆಗಳನ್ನು ಮಾತ್ರ ತೋರಿಸಿದೆ.)

೨. ಜತೆಯ ಒಂಟಿಗಳು ಒಂದನ್ನೊಂದು ಹತ್ತಿರ ಹತ್ತಿರ ಸೇರುತ್ತವೆ.

೩. ಒಂದೊಂದು ಗುಂಪೂ ಎದುರುಬದರಾಗಿ ದೂರದೂರ ಸರಿಯುತ್ತವೆ; ಮಧ್ಯೆ ಗೋಡೆ ನಿರ್ಮಿತವಾಗುತ್ತದೆ.

೪. ಬೇರೆಯಾದ ವರ್ಣರೇಖೆಗಳು ಮರಿಜೀವಕೋಶಗಳಾಗಿ ಪರಿಣಮಿಸುತ್ತವೆ. ಇದರಲ್ಲಿ ವರ್ಣರೇಖೆಗಳ ಸಂಖ್ಯೆ, ತಾಯಿಕೋಶದಲ್ಲಿದ್ದುದರಲ್ಲಿ ಅರ್ಧ. (ಎಂದರೆ ಇಲ್ಲಿ ನಾಲ್ಕು ಮಾತ್ರ.)

ಸಂಖ್ಯೆಯು ಅರ್ಧವಾಗುವುದು. ಇಲ್ಲಿ ಗಮನಿಸಬೇಕಾದ ವಿಷಯ ಇದು. ಜತೆಜತೆಯಲ್ಲಿರುವ ವರ್ಣರೇಖೆಗಳೇನೊ ಮರಿಕಣಗಳಿಗೆ ತೆರಳಿಬಿಡುವುವು; ಆದರೆ ತಂದೆ ಕಣದಲ್ಲಿರುವುದು ಒಂದೇ ಒಂದು X ವರ್ಣರೇಖೆ; ಅದರ ಪಾಡೇನು? ಇದು ಇನ್ನರ್ಧವಾಗಿ ಎರಡು ಮರಿಕೋಶಗಳಿಗೂ ಹೋಗುವುದಿಲ್ಲ. ಆದರೆ ಯಾವುದಾದರೊಂದು ಕೋಶಕ್ಕೆ ಹೋಗಿ ಸೇರುವುದು. ಆದುದರಿಂದ ಗಂಡಿನಲ್ಲಿ ಎರಡು ಬಗೆಯ ಪುರುಷಾಣುಗಳು ಉತ್ಪತ್ತಿಯಾಗುತ್ತವೆ. ಒಂದು ಬಗೆಯದರಲ್ಲಿ X ವರ್ಣರೇಖೆಯಿರುವುದಿಲ್ಲ (ಚಿತ್ರ ೪. d.); ಇನ್ನೊಂದು ಬಗೆಯದರಲ್ಲಿ X ವರ್ಣರೇಖೆಯಿರುತ್ತದೆ (ಚಿತ್ರ ೪. c.).

೧ ಈಗ ಅಂಡಾಣುವನ್ನು X ವರ್ಣರೇಖೆಯಿರುವ ಶುಕ್ಲಾಣು ಸೇರಿತೆನ್ನಿ. ಆದರಿಂದ ಉದ್ಭವಿಸುವ ವ್ಯಕ್ತಿಯು ಹೆಣ್ಣಾಗಿ ಸಂಭವಿಸಿತು (ಚಿತ್ರ ೪. e.);

ಹೇಗೆಂದರೆ ಅಂಡಾಣುವಿನಲ್ಲಿರುವ X ವರ್ಣರೇಖೆಯೊಡನೆ ಶುಕ್ಲಾಣುವಿನ X ವರ್ಣರೇಖೆಯು ಸೇರುವುದರಿಂದ ಹೊಸ ಜೀವಿಯಲ್ಲಿ ಎರಡು X ವರ್ಣರೇಖೆಗಳಾದುವು.

೨. ಈಗ ಅಂಡಾಣುವನ್ನು X ವರ್ಣರೇಖೆಯಿಲ್ಲದ ಶುಕ್ಲಾಣುವು ಸಂಧಿಸಿತೆನ್ನಿ. ಇದರಿಂದ ಉದ್ಭವಿಸುವ ವ್ಯಕ್ತಿಯು ಗಂಡಾಯಿತು. (ಚಿತ್ರ ೪. f.) ಏಕೆಂದರೆ ಕೂಡುವಿಕೆಯಿಂದ ಉದ್ಭವಿಸುವ ಜೀವಿಯಲ್ಲಿರುವುದು ಒಂದೇ ಒಂದು X ವರ್ಣರೇಖೆ.

ಮನುಷ್ಯ ಪಂಗಡದಲ್ಲಿ ಈ ಪದ್ಧತಿಯು ಸ್ವಲ್ಪ ಮಾರ್ಪಾಡಾಗಿದೆ. ಪಂಗಡದ ವರ್ಣರೇಖೆಗಳ ಸಂಖ್ಯೆ ೨೪ ಜೋಡಿ. ಹೆಂಗಸಿನಲ್ಲೇನೊ ಎರಡು X ವರ್ಣರೇಖೆಗಳಿವೆ. (ಚಿತ್ರ ೪. a.) ಗಂಡಸಿನಲ್ಲಿ ಒಂದು X ವರ್ಣರೇಖೆಯಿರುವುದಕ್ಕೆ ಬದಲು ಒಂದು ಜೋಡಿ ಲಿಂಗವರ್ಣರೇಖೆಗಳಿವೆ. ಇದರಲ್ಲಿ ಒಂದು ವರ್ಣರೇಖೆಯು ಹೆಣ್ಣಿನ X ವರ್ಣರೇಖೆಯನ್ನೇ ಹೋಲುವುದು. ಆದರೆ ಇನ್ನೊಂದು ಗಾತ್ರದಲ್ಲಿ ವಿಪರೀತ ಚಿಕ್ಕದು. ಈ ಎರಡನೆಯದನ್ನು Y ವರ್ಣರೇಖೆಯೆಂದು ಕರೆದಿದ್ದಾರೆ. (ಚಿತ್ರ ೪. b.) ಎಂದರೆ ಇಲ್ಲಿಯೂ ಅಂಡಾಣುಗಳೆಲ್ಲದರಲ್ಲಿಯೂ ಒಂದೊಂದು X ವರ್ಣರೇಖೆ

(೭೪ ನೆಯ ಪುಟದಲ್ಲಿ ಮುಂದುವರಿದಿದೆ,)

ಚಿತ್ರ ೩. **ಮನುಷ್ಯಪಂಗಡದಲ್ಲಿ (ಗಂಡಸಿನಲ್ಲಿ)ರುವ ವರ್ಣರೇಖೆಗಳು**

(೧) ಜೀವಕೋಶದಲ್ಲಿ ಚದರಿರುವಂತೆ (ಸೂಕ್ಷ್ಮದರ್ಶಕದಲ್ಲಿ) ಕಾಣುವ ನೋಟ



(೨) ಜತೆಜತೆಗಳಾಗಿ ವಿಗಂಡಿಸಿ ಜೋಡಿಸಿದ ನೋಟ

ಚಿತ್ರ ೪. ಗಂಡು ಹೆಣ್ಣುಗಳಿಗಿರುವ ವ್ಯತ್ಯಾಸ



### ಚಿತ್ರ ೪. ಗಂಡು ಹೆಣ್ಣುಗಳಿಗಿರುವ ವ್ಯತ್ಯಾಸ: (ವಿವರಣೆ)

(a) ಹೆಂಗಸಿನ ಪ್ರತಿಯೊಂದು ಜೀವಕೋಶದಲ್ಲೂ ಈ ತೆರನಾದ ಎರಡು ವರ್ಣರೇಖೆಗಳಿರುತ್ತವೆ; ಇವುಗಳನ್ನು X ವರ್ಣರೇಖೆಗಳೆಂದು ಕರೆದಿದ್ದಾರೆ.

(b) ಗಂಡಸಿನ ಪ್ರತಿಯೊಂದು ಜೀವಕೋಶದಲ್ಲೂ ಒಂದೇ ಒಂದು X ವರ್ಣರೇಖೆಯಿದೆ. ಅದರ ಜತೆ ವರ್ಣರೇಖೆಯು ಬಹು ಸಣ್ಣದು, ಇದನ್ನು Y ವರ್ಣರೇಖೆಯೆಂದು ಕರೆದಿದ್ದಾರೆ.

ಸಂತಾನವನ್ನು ಉತ್ಪತ್ತಿಮಾಡುವಾಗ ಹೆಂಗಸು ಅಂಡಾಣುಗಳನ್ನೂ, ಗಂಡಸು ಶುಕ್ಲಾಣುಗಳನ್ನೂ ಉತ್ಪತ್ತಿಮಾಡುತ್ತಾರೆ. ಈ ಸಮಯದಲ್ಲಿ ವರ್ಣರೇಖಾ ಸಮುದಾಯವು ಅರ್ಧವಾಗಿ ಪ್ರತಿಯೊಂದು ಅರ್ಧವೂ ಒಂದೊಂದು ಅಣುವಿಗೆ ತೆರಳುತ್ತದೆ; ಪ್ರತಿಯೊಂದು ಜತೆಯ ಒಂಟಿಯೂ ಬೇರೆಯಾಗಿ ತೆರಳುತ್ತದೆ. (h)

ಹೆಂಗಸಿನಲ್ಲಿ ಎರಡು ವರ್ಣರೇಖೆಗಳಿರುವುದರಿಂದ ಪ್ರತಿಯೊಂದು ಅಂಡಾಣುವಿಗೂ ಒಂದೊಂದು X ವರ್ಣರೇಖೆಯು ತೆರಳುತ್ತದೆ; ಆದುದರಿಂದ ಎಲ್ಲ ಅಂಡಾಣುಗಳೂ ಒಂದೇ ವಿಧವಾದವು. (g)

ಆದರೆ ಗಂಡಸಿನಲ್ಲಿ ಹೀಗಲ್ಲ; ಅವನಲ್ಲಿರುವುದು ಒಂದೇ ಒಂದು X ವರ್ಣರೇಖೆ ಮತ್ತು ಇದರ ಜತೆಗಿರುವುದು ಒಂದು Y ವರ್ಣರೇಖೆ. ಆದುದರಿಂದ ಕೆಲವು ಶುಕ್ಲಾಣುಗಳಿಗೆ X ವರ್ಣರೇಖೆಯೂ, ಮತ್ತೆ ಕೆಲವಕ್ಕೆ Y ವರ್ಣರೇಖೆಯೂ ತೆರಳುವುವು. ಎಂದರೆ ಎರಡು ಬಗೆಯ ಶುಕ್ಲಾಣುಗಳು ಉತ್ಪತ್ತಿಯಾಗುವುವು.—

X ವರ್ಣರೇಖೆಯನ್ನು ಹೊತ್ತಿರುವ ಶುಕ್ಲಾಣುಗಳು. (c)

Y ವರ್ಣರೇಖೆಯನ್ನು ಹೊತ್ತಿರುವ ಶುಕ್ಲಾಣುಗಳು. (d)

X ವರ್ಣರೇಖೆಯನ್ನು ಹೊತ್ತಿರುವ ಶುಕ್ಲಾಣು ಅಂಡಾಣುವನ್ನು ಹೊಕ್ಕಿತೆನ್ನಿ; ಇದರಿಂದ ಉದಿಸುವ ವ್ಯಕ್ತಿಯಲ್ಲಿ ಎರಡು X ವರ್ಣರೇಖೆಗಳಾದವು, ಎಂದರೆ ಮಗುವು ಹೆಣ್ಣು. (e)

Y ವರ್ಣರೇಖೆಯನ್ನು ಹೊತ್ತಿರುವ ಶುಕ್ಲಾಣು ಅಂಡಾಣುವನ್ನು ಹೊಕ್ಕಿತೆನ್ನಿ; ಇದರಿಂದ ಉದಿಸುವ ವ್ಯಕ್ತಿಯಲ್ಲಿ ಒಂದು X ವರ್ಣರೇಖೆಯೂ ಮತ್ತು ಒಂದು Y ವರ್ಣರೇಖೆಯೂ ಆದುವು, ಎಂದರೆ ಮಗುವು ಗಂಡು. (f)

ಇರುತ್ತದೆ, ಮತ್ತು ಶುಕ್ಲಾಣುಗಳೂ ಎರಡು ಬಗೆಯವು. ಒಂದನೆಯ ಬಗೆಯಲ್ಲಿ X ವರ್ಣರೇಖೆ ಇರುತ್ತದೆ; ಎರಡನೆಯದರಲ್ಲಿ Y ವರ್ಣರೇಖೆ ಇರುತ್ತದೆ. ಆದುದರಿಂದ

X ಅಂಡಾಣು + X ಶುಕ್ಲಾಣು = XX → ಹೆಣ್ಣು ಶಿಶು

X ಅಂಡಾಣು + Y ಶುಕ್ಲಾಣು = YX → ಗಂಡು ಶಿಶು

ಇದೇನೊ ಸರಿಯೆ. ಶುಕ್ಲಾಣು ಅಂಡಾಣುವನ್ನು ಹೊಕ್ಕೊಡನೆಯೇ ಹುಟ್ಟುವ ಜೀವಿಯು ಗಂಡೋ ಅಥವಾ ಹೆಣ್ಣೋ ಎಂಬುದು ನಿರ್ಧಾರವಾಗಿ ಬಿಟ್ಟಿತು. ಇದರಿಂದೇನೊ ಗಂಡು ಅಥವಾ ಹೆಣ್ಣಿನ ವರ್ಣರೇಖಾ ನಿಯಮವು ಸಿದ್ಧಿಸಿತೆಂಬುದರಲ್ಲಿ ಸಂಶಯವೇ ಇಲ್ಲ. ಆದರೂ ಗರ್ಭಾಶಯದಲ್ಲಿ ನಾವೆಲ್ಲರೂ ಮೊದಲನೆಯ ಮೂರು ತಿಂಗಳು ಗಂಡಸರೂ ಹೌದು, ಹೆಂಗಸರೂ ಹೌದು. ಆ ಕಾಲದಲ್ಲಿ ಎರಡು ಲಿಂಗಜಾತಿಗಳ ಅಂಗಗಳೂ ಕಾಣಿಸಿಕೊಂಡು ಸ್ವಲ್ಪ ಕಾಲದ ವರೆಗೂ ಬೆಳವಣಿಗೆ ಹೊಂದುವುವು. ಮೂರು ತಿಂಗಳು ಮುಗಿದ ಮೇಲೆ ಅದರ ನಿಜವಾದ ಲಿಂಗವು ಅಭಿವ್ಯಕ್ತವಾಗುವುದು. ಅದು ಗಂಡಾಗುವುದಾದರೆ ಅದುವರೆಗೂ ಬೆಳೆದಿದ್ದ ಗಂಡು ಲಿಂಗದ ಅಂಕುರಗಳು ಅಭಿವೃದ್ಧಿ ಹೊಂದುವುವು, ಹೆಣ್ಣುಲಿಂಗದ ಅಂಕುರಗಳು ಮುಂದಿನ ಬೆಳವಣಿಗೆಯನ್ನು ನಿಲ್ಲಿಸುವುವು; ಹೆಣ್ಣಾಗುವುದಾದರೆ ಹೆಣ್ಣುಲಿಂಗದ ಅಂಕುರಗಳು ಮುಂದಕ್ಕೆ ಬೆಳೆಯುವುವು, ಗಂಡುಲಿಂಗದ ಅಂಕುರಗಳು ಅಂತೆಯೇ ಉಳಿಯುವುವು. ಅಂಡಾಶಯ ಮತ್ತು ಗಂಡು ಪ್ರಜನನಾಂಗಗಳು ಲಿಂಗದ ಬೆಳವಣಿಗೆಯನ್ನು ನಿರ್ಧರಿಸುವ "ಹಾರ್ಮೋನ್" ಎಂಬ ಒಂದು ಬಗೆಯ ಸ್ರವವನ್ನು ರಕ್ತದೊಳಕ್ಕೆ ಸುರಿಸುತ್ತವೆ. ಇದರಿಂದ ಗಂಡು ಮತ್ತು ಹೆಣ್ಣುಗಳ ಬೆಳವಣಿಗೆಯು—ಮುಖ್ಯವಾಗಿ ಅವರ ಲಿಂಗದ ಅಂಗಗಳಲ್ಲಿ—ಅಧಿಕವಾಗಿ ಒದಲಾವಣೆ ಹೊಂದುವುದೆಂದು ಈಚಿನ ಪ್ರಯೋಗಗಳಿಂದ ಬೆಳಕಿಗೆ ಬಂದಿದೆ. X ಅಂಡಾಣುವನ್ನು Y ಶುಕ್ಲಾಣುವು ಹೊಕ್ಕರೆ ಗಂಡುಮಗು ಹುಟ್ಟುವುದೆಂದು ಹಿಂದೆ ತಿಳಿಸಿದೆ. ಆದರೆ ಅದರ ಬೆಳವಣಿಗೆಗೆ ಅಗತ್ಯವೆನಿಸಿರುವ ಹಾರ್ಮೋನು ಆವಶ್ಯಕವಾದ ಪರಿಮಾಣದಲ್ಲಿ ಸ್ರವಿಸದೆ ಹೋದರೆ, ಗಂಡಾಗಿ ಬೆಳೆಯಬೇಕಾಗಿದ್ದ ಶಿಶುವು ಹೆಣ್ಣುಲಿಂಗದ ಅಂಗಗಳನ್ನೂ ಮತ್ತು ಆ ಲಿಂಗವನ್ನು ಪ್ರತ್ಯೇಕಿಸುವ ಕೆಲವು ಉಪಾಂಗಗಳನ್ನೂ (ಸ್ತನ, ತಲೆಗೂದಲು, ಇತ್ಯಾದಿ) ಬೆಳೆಸಿಕೊಳ್ಳುವುದೆಂದು ಈಚೆಗೆ ತಿಳಿದುಬಂದಿದೆ. ಮತ್ತು ಅದರಲ್ಲಿ ಗಂಡುತನವನ್ನು ವ್ಯಕ್ತಪಡಿಸುವ ಅನೇಕ ಕುರುಹುಗಳೂ ಮಾಯವಾಗುತ್ತವೆ.

ಎಚ್. ಜಿ. ವೆಲ್ಸ್‌ರ ಮಾತಿನಲ್ಲಿ ಮೇಲೆ ಹೇಳಿದವುಗಳನ್ನು ಹೀಗೆ ಸಂಗ್ರಹಿಸಬಹುದು.—

"ಲಿಂಗ ನಿರ್ದೇಶದ ಬೀಗವು ಎರಡು ಬೀಗದ ಕೈಗಳಿಂದ ತೆರೆಯಲ್ಪಡುತ್ತದೆ; (೧) ವರ್ಣರೇಖೆಗಳು ಮತ್ತು ಅವುಗಳ ಮೇಲೆ ಚದರಿರುವ ಜೀನುಗಳು. ಇವುಗಳ ಜೋಡಣೆಯು ಒಂದು ಬಗೆಯಲ್ಲಿ ಆದರೆ ಗಂಡುಲಿಂಗದ ಅಂಗಗಳು ಉತ್ಪತ್ತಿಯಾಗುವುವು; ಇನ್ನೊಂದು ಬಗೆಯಲ್ಲಾದರೆ ಹೆಣ್ಣುಲಿಂಗದ ಅಂಗಗಳು ಉತ್ಪತ್ತಿಯಾಗುವುವು. (೨) ಗಂಡು ಜನನೇಂದ್ರಿಯದಲ್ಲಿ ಗಂಡುಲಿಂಗದ ಅಂಗಗಳ ಬೆಳವಣಿಗೆಗೆ ಆವಶ್ಯಕವಾಗಿರುವ ಹಾರ್ಮೋನು ಸಾಮಾನ್ಯವಾಗಿ ಉತ್ಪತ್ತಿಯಾಗುತ್ತದೆ. ಇದರ ಪ್ರೇರಣೆಯಿಂದ—ವರ್ಣರೇಖೆಯ ಪ್ರೇರಣೆಯಿಂದಲ್ಲ—ಅದು ಗಂಡು ಗುಣಗಳನ್ನು ತಾಳುತ್ತದೆ. ಹೆಣ್ಣುಲಿಂಗದ ಬೆಳವಣಿಗೆಗೂ ಇದೇ ತೆರನಾದ ಕಾರ್ಯಕ್ರಮವು ನಡೆಯುತ್ತದೆ. ಈ ಹಾರ್ಮೋನು ಉತ್ಪತ್ತಿಯಾಗುವ ಪರಿಮಾಣವು ಆ ಲಿಂಗವು ಎಷ್ಟರಮಟ್ಟಿಗೆ ಬೆಳವಣಿಗೆ ಹೊಂದಿದೆಯೆಂಬುದನ್ನು ನಿರ್ಧರಿಸುತ್ತದೆ."

ಈ ಲೇಖನದಲ್ಲಿ ಲಿಂಗದ ಹಾರ್ಮೋನುಗಳ ವಿಷಯವಾಗಿ ಹೆಚ್ಚು ಬರೆಯುವುದು ಅಪ್ರಕೃತ ಮತ್ತು ಅದರ ವಿಷಯವೇ ಒಂದು ದೊಡ್ಡ ಗ್ರಂಥವಾಗುವುದಕ್ಕೆ ತಕ್ಕಷ್ಟಿದೆ. ಇಲ್ಲಿ ಓದುಗರು ವರ್ಣರೇಖೆಗಳಿಂದ ಲಿಂಗವು ಹೇಗೆ ನಿರ್ಧಾರವಾಗುತ್ತದೆ ಎಂಬ ಭಾಗಕ್ಕೆ ಹೆಚ್ಚು ಗಮನಕೊಡಬೇಕು. ಏಕೆಂದರೆ ಲಿಂಗವನ್ನು ಮೊದಲು ನಿರ್ದೇಶಮಾಡುವುದು ವರ್ಣರೇಖೆ. ಹಾರ್ಮೋನು ವ್ಯಕ್ತಿಯಲ್ಲಿ ಕಾಣಬಹುದಾದ ಲಿಂಗದ ಗುಣಗಳನ್ನು ಹಿರಿದು ಮಾಡಬಹುದು ಅಥವಾ ಕಡಮೆ ಮಾಡಬಹುದು ಅಥವಾ ಬಹು ಅಪರೂಪವಾಗಿ ಆ ಲಿಂಗದ ಬೆಳವಣಿಗೆಯನ್ನೇ ನಿಲ್ಲಿಸಿಬಿಡಬಹುದು.

## ೨

ಹೆಂಗಸರು ಅಬಲೆಯರೆಂದೂ ಗಂಡಸರು ಬಲಿಷ್ಠರೆಂದೂ ಅನಾದಿಕಾಲದಿಂದಲೂ ಪ್ರಖ್ಯಾತರಾಗಿದ್ದಾರೆ. ಆದರೆ ಹೆಣ್ಣುಕುಲವು ಒಂದು ದೃಷ್ಟಿಯಿಂದ ಬಲಯುತವಾದದ್ದು; ಗಂಡು ಕುಲವನ್ನು ಸೋಲಿಸಿ ಮೆಟ್ಟಿ ನಿಂತಿರುವಂಥಾದ್ದು. ಗಂಡಸು ಬಲವಿಲ್ಲದವನು; ನವಿರು; ಅನಾದರವುಳ್ಳ ಸನ್ನಿವೇಶದಲ್ಲಿ ಬಾಳಲು ಸಾಮರ್ಥ್ಯವಿಲ್ಲದವನು. ಈ ಅಭಿಪ್ರಾಯವನ್ನು ಸಮರ್ಥಿಸುವುದಕ್ಕೆ ಅವನ ಅಧಿಕವಾದ ಮರಣಸಂಖ್ಯೆಯೇ ಬಹು ಮುಖ್ಯವಾದ ಆಧಾರ. ಹುಟ್ಟಿದ ಹೊಸದರಲ್ಲಂತೂ ಹೆಣ್ಣು ಶಿಶುಗಳಿಗಿಂತಲೂ ಗಂಡು ಶಿಶುಗಳೇ ವಿಪರೀತವಾಗಿ ಸಾವಿಗೆ ಬಲಿಯಾಗುವುವು. ವಯಸ್ಸಾದಂತೆಲ್ಲಾ ಈ ವೈಪರೀತ್ಯವು ಕಡಮೆಯಾಗುವುದಾದರೂ ಸತ್ಯಾಂಶವಂತೂ ಸತ್ಯವಾಗಿಯೇ ಇರುವುದು. ಇದು ಪ್ರಪಂಚದ ಎಲ್ಲ ಜನಾಂಗಗಳಲ್ಲಿಯೂ ಜೀವಶಾಸ್ತ್ರಜ್ಞರಿಗೆ ಕಂಡುಬಂದಿರುವ ಸತ್ಯಾಂಶ. ಉದಾಹರಣೆಗಾಗಿ ಪ್ರಪಂಚದ

ಒಂದು ಜನಾಂಗವನ್ನು ತೆಗೆದುಕೊಂಡು ಅದರಲ್ಲಿ ಸಾವಿನ ಪರಿಮಾಣವನ್ನು ಲೆಕ್ಕಿಸೋಣ. ಅಮೇರಿಕಾದ ಸಂಯುಕ್ತಸಂಸ್ಥಾನಗಳಲ್ಲಿ ಹುಟ್ಟುವುದಕ್ಕೆ ಮುಂಚೆ (ಎಂದರೆ ಗರ್ಭದಲ್ಲಿಯೇ) ಪ್ರತಿ ೧೦೦ ಹೆಣ್ಣುಶಿಶುಗಳಿಗೆ ೧೫೦ ಗಂಡುಶಿಶುಗಳು ಸಾಯುತ್ತವೆ. ಗರ್ಭಪಾತವಾದಾಗ—ಪ್ರತಿ ೧೦೦ ಹೆಣ್ಣು ಶಿಶುಗಳಿಗೆ ೧೩೫ ಗಂಡುಶಿಶುಗಳು ಸಾಯುತ್ತವೆ. ಮೊದಲನೆಯ ವರ್ಷದಲ್ಲಿ—೧೦೦ ಹೆಣ್ಣುಶಿಶುಗಳಿಗೆ ೧೨೦ ಗಂಡುಶಿಶುಗಳು ಸಾಯುತ್ತವೆ.

ಸಾವನ್ನು ಪ್ರತಿಭಟಿಸುವುದಕ್ಕೆ ಹೆಂಗಸರಿಗಿರುವಷ್ಟು ಶಕ್ತಿಸಾಮರ್ಥ್ಯಗಳು ಗಂಡಸಿಗಿಲ್ಲ. ಅವನು ಅತ್ಯಂತ ಬಲಹೀನ. ಮೇಲೆ ಕೊಟ್ಟಿರುವ ಅಂಕಿಗಳು ಈ ಬಲಹೀನತೆಯ ಫಲಿತಾಂಶಗಳಲ್ಲಿ ಒಂದು. ತಾಯಿಗೆ ವಯಸ್ಸಾಗುತ್ತ ಆಗುತ್ತ ಮತ್ತು ಆಕೆಯ ಗರ್ಭಧಾರಣೆಗಳ ಸಂಖ್ಯೆಯು ಹೆಚ್ಚುತ್ತ ಹೆಚ್ಚುತ್ತ ಹೋದಹಾಗೆಲ್ಲ ಹೆಣ್ಣುಶಿಶುಗಳ ಪ್ರಸವವು ಹೆಚ್ಚುತ್ತದೆ. ಇದು ಗಂಡಸರ ಬಲಹೀನತೆಯ ಇನ್ನೊಂದು ಫಲಿತಾಂಶ. ಇದಕ್ಕೆ "ಆಕೆಯು ಹೆರುವ ಅಂಡಾಣುವಿನ ಗುಣವು ಪದೇ ಪದೇ ಬದಲಾಗುವುದು" ಎಂಬ ಸಾಮಾನ್ಯವಾಗಿ ಕೊಡುವ ಕಾರಣವು ಅಷ್ಟು ಸಮಂಜಸ ವಾದುದಲ್ಲ. ಆಕೆಯ ಹಿಂದಿನ ಹೆರಿಗೆಗಳಿಂದಲೂ, ಆಕೆಯು ವಯಸ್ಸಾಗುತ್ತಿರುವುದ ರಿಂದಲೂ ಆಕೆಯ ಬಸುರಿನಲ್ಲಿ ಮುಂದೆ ಬೆಳೆಯಲಿರುವ ಶಿಶುಗಳಿಗೆ ಆವಶ್ಯಕವಾದ ಸನ್ನಿವೇಶವು ಅಸಮರ್ಪಕವಾಗುತ್ತದೆ. ಈ ಅಸಮರ್ಪಕವಾದ ಸನ್ನಿವೇಶದಲ್ಲಿ ಬೆಳೆಯುವ ಶಿಶುಗಳಲ್ಲಿ ಗಂಡು ಶಿಶುಗಳು ಸ್ವತಸ್ಸಿದ್ಧವಾಗಿಯೇ ಅಬಲರಾಗಿರುವುದ ರಿಂದ ಸುಲಭವಾಗಿ ಮೃತ್ಯುವಶವಾಗುತ್ತವೆ; ಇಂಥ ಶಿಶುಗಳು ಗರ್ಭಪಾತಕ್ಕೆ ಒಳಗಾಗುತ್ತವೆ. ಹೆಣ್ಣುಶಿಶುವಾಗಿದ್ದಿದ್ದರೆ ಆ ಅಸಮರ್ಪಕವಾದ ಸನ್ನಿವೇಶದಲ್ಲೂ ತನ್ನ ಪ್ರತಿಭಟನಶಕ್ತಿಯನ್ನು ಪ್ರದರ್ಶಿಸಿ, ಜೀವಂತವಾಗಿ ಪ್ರಪಂಚಕ್ಕೆ ಕಾಲಿಡು ತ್ತದೆ. ಗರ್ಭಪಾತವಾದ ಶಿಶುಗಳಲ್ಲಂತೂ ಮೇಲೆ ಹೇಳಿರುವಂತೆ ಗಂಡುಶಿಶುಗಳ ಸಂಖ್ಯೆಯೇ ಹೆಚ್ಚು.

ಗಂಡಸರು ಸ್ವಾಭಾವಿಕವಾಗಿಯೇ ಅಬಲರೆಂಬುದಕ್ಕೆ ಇನ್ನೊಂದು ನಿಜಾಂಶ ವನ್ನು ನೋಡಿ: ಜನನ ಪೂರ್ವಸಮಯದಲ್ಲಿ, ಎಂದರೆ ಗರ್ಭಿಣಿಯಾಗಿರುವಾಗ, ತಾಯಿಯ ಆರೈಕೆಯೂ ಆರೋಗ್ಯವೂ ಉತ್ಕೃಷ್ಟವಾಗಿದ್ದರೆ, ಆಗ ಗಂಡು ಶಿಶುಗಳ ಸಂಖ್ಯೆಯು ಏರುವುದು. ಈ ಆರೈಕೆ ಮೊದಲಾದವುಗಳು ಒಳಗೆ ಅರಳುತ್ತಿರುವ ಶಿಶುವಿಗೆ ಅಗತ್ಯವಾದ ಸನ್ನಿವೇಶ ಸೌಲಭ್ಯಗಳನ್ನು ಒದಗಿಸುತ್ತವೆಯಾದುದರಿಂದ ಗಂಡು ಶಿಶುಗಳಿಗೆ ಪೋಷಣೆಯು ಲಭಿಸಿದಂತಾಗುತ್ತದೆ; ಗಂಡಸರು ಹೆಚ್ಚು ಸಂಖ್ಯೆಯಲ್ಲಿ ಬೆಳಕನ್ನು ಕಾಣುತ್ತಾರೆ. ಇನ್ನೊಂದು ಸಂಗತಿ; ಔರಸ ಸಂತಾನಗಳು ಅನ್ಯಾಯದ

ಸಂತಾನಕ್ಕಿಂತಲೂ ಜಯಪ್ರದವಾಗಿ ಬಾಳುತ್ತವೆ. ಇದು ಲೋಕದ ಎಲ್ಲ ಜನಾಂಗಗಳಲ್ಲಿಯೂ ಕಂಡುಬರುವ ನಿಯಮ. ಔರಸ ಗರ್ಭವನ್ನು ಅಧರ್ಮದ ಗರ್ಭಕ್ಕಿಂತಲೂ ಹೆಚ್ಚು ನಿಷ್ಠೆ, ಹೆಚ್ಚು ಶ್ರದ್ಧೆ, ಹೆಚ್ಚು ಆರೈಕೆಗಳಿಂದ ನೋಡಿಕೊಳ್ಳುವುದರ ಫಲವಿದು. ಯೆಹೂದ್ಯರಲ್ಲಿ ಗಂಡುಶಿಶು ಪ್ರಸವಗಳ ಸಂಖ್ಯೆಯೇ ಹೆಚ್ಚು; ಏಕೆಂದರೆ ಯೆಹೂದ್ಯ ತಾಯಿಯು ಬಸುರಾಗಿರುವಾಗ ತನ್ನ ಆರೋಗ್ಯವನ್ನು ತನ್ನ ಹಿಂದೂ ಸೋದರಿಗಿಂತಲೂ ಹೆಚ್ಚು ಜಾಗರೂಕತೆಯಿಂದ ಕಾಪಾಡಿಕೊಳ್ಳುವಳು. ಅಮೆರಿಕದ ಬಿಳಿ ಜನಾಂಗಗಳಲ್ಲಿ ಗಂಡು ಪ್ರಸವಗಳೇ ಹೆಚ್ಚು; ಅದೇ ಖಂಡದ ನೀಗ್ರೊ ಜನಾಂಗದಲ್ಲಿ ಯಥಾಪ್ರಕಾರ ಹೆಣ್ಣು ಪ್ರಸವಗಳೇ ಹೆಚ್ಚು. ಈ ವ್ಯತ್ಯಾಸಕ್ಕೂ ತಾಯಿಯು ಪಡೆಯುವ ಆರೈಕೆ ಶುಶ್ರೂಷೆಗಳೇ ಕಾರಣ. ಈ ಉದಾಹರಣೆಗಳಿಂದ 'ಗಂಡು ಕುಲವು ನೈಜವಾಗಿ ಬಲಹೀನ ಕುಲ; ಅದರ ಜಯಪ್ರದವಾದ ಬಾಳುವೆಯು ಸಮರ್ಪಕವಾದ ಸನ್ನಿವೇಶದ ಮೇಲೆ ನಿಂತಿದೆ' ಎಂಬುದು ಸ್ಪಷ್ಟವಾಗುವುದು.

ಯುದ್ಧಕಾಲದಲ್ಲಿ ಗಂಡು ಪ್ರಸವದ ಸಂಖ್ಯೆಯು ಏರುತ್ತದೆಂಬುದು ಬಹು ಕಾಲದಿಂದಲೂ ಪ್ರಚಾರದಲ್ಲಿದೆ. ಹೌದು, ಏರುತ್ತದೆ; ಕಳೆದ ಮಹಾಯುದ್ಧದ ಅಂಕಿಗಳು ಇದನ್ನು ಸಮರ್ಥಿಸುತ್ತವೆ. ಆದರೆ ಶೇಕಡ ಒಂದಕ್ಕಿಂತ ಕಡಮೆಯಷ್ಟು ಏರುತ್ತದೆ, ಅಷ್ಟೆ. ಇದು ಹೆಚ್ಚು ಗಂಡಸರು ಯುದ್ಧದಲ್ಲಿ ಭಾಗಿಗಳಾಗಿ ರಣರಂಗಕ್ಕೆ ತೆರಳಿದ ಜನಾಂಗಗಳಲ್ಲಿ ಮಾತ್ರ ಕಂಡುಬಂದಿತು. ಇದಕ್ಕೆ ಶಾಸ್ತ್ರಜ್ಞರು ಕೊಡುವ ಕಾರಣ ಇದು: "ಯುದ್ಧವೇ ಹೆಂಗಸರ ಆರೈಕೆ ಆರೋಗ್ಯಗಳಿಗೆ ಒಂದು ಆಸರೆ ಕೊಟ್ಟಿತು. ಹೇಗೆಂದರೆ, ಗಂಡಸರೆಲ್ಲರೂ ಯೋಧರಾಗಿ ಸೈನ್ಯವನ್ನು ಸೇರಿ ಸಮರಾಂಗಣಕ್ಕೆ ಹೊರಟುಹೋದರು. ಹೆಂಗಸರಿಗೆ ವಿರಾಮವೂ ವಿಶ್ರಾಂತಿ ಸೌಕರ್ಯವೂ ದೊರೆಯಿತು; ಇದಕ್ಕಿಂತಲೂ ಹೆಚ್ಚಾಗಿ ಪತಿಸಂಗವು ಕಡಮೆಯಾದುದರಿಂದ ಒಂದು ಬಗೆಯ ಸ್ವಾತಂತ್ರ್ಯ ಲಭಿಸಿತು; ಈ ಸ್ವಾತಂತ್ರ್ಯವು ತಮ್ಮ ಬಸುರಿನಲ್ಲಿ ಅಭಿವ್ಯಕ್ತವಾಗುತ್ತಿದ್ದ ಶಿಶುಗಳು ಬದುಕಿ, ಹೊರಬರುವುದಕ್ಕೆ ಕಾರಣವಾಯಿತು."

ಗರ್ಭಪಾತಗಳ ಸಂಖ್ಯೆಯನ್ನು ಗಮನಿಸಿದರೆ ಈ ಊಹೆಯು ಹೊಳೆಯುತ್ತದೆ:— ಗರ್ಭಧಾರಣವು ನಡೆಯುವಾಗ ೧೦೦ ಅಂಡಾಣುಗಳು ಹೆಣ್ಣು ಗರ್ಭವಾದರೆ ೧೨೦ ಅಂಡಾಣುಗಳಾದರೂ ಗಂಡುಗರ್ಭವಾಗಿದ್ದಿರಬೇಕು. ಇಷ್ಟು ಹೆಚ್ಚು ಅಂಡಾಣುಗಳು ಗಂಡಾದರೂ ಹುಟ್ಟುವ ಮುಂಚಿತವಾಗಿಯೇ ಅವುಗಳಲ್ಲಿ ಅನೇಕವು ಸತ್ತುಹೋಗುವುವೆಂಬ ಅಂಶವನ್ನು ಹಿಂದೆಯೇ ವ್ಯಕ್ತಪಡಿಸಿದೆ. ಗಂಡಸಿನ ಈ ಪ್ರಾಬಲ್ಯಕ್ಕೆ ಅವನ ಲಿಂಗ ನಿರ್ಧಾರಕ್ರಮವೇ ಕಾರಣವಾಗಿದೆಯೆನ್ನಬಹುದು. Y ವರ್ಣರೇಖಾಧಾರಿಗಳಾದ ಶುಕ್ಲಾಣುಗಳಿಗೆ, X ವರ್ಣರೇಖಾಧಾರಿಗಳಾದ ತಮ್ಮ ಸಹೋದರರಿ

ಗಿಂತಲೂ, ಹೆಚ್ಚು ಅಂಡಾಣುಗಳನ್ನು ಗರ್ಭಧರಿಸುವಂತೆ ಮಾಡುವ ಒಂದು ಶಕ್ತಿಯು ದತ್ತವಾಗಿರುವಂತೆ ಕಾಣುತ್ತದೆ. ಇದರಿಂದ

X ಅಂಡಾಣು + Y ಶುಕ್ಲಾಣು → ಗಂಡುಶಿಶು.

ಗಂಡುಗರ್ಭವನ್ನು ಉತ್ಪನ್ನ ಮಾಡುವ Y ಶುಕ್ಲಾಣುಗಳಿಗೆ, ಹೆಣ್ಣು ಗರ್ಭವನ್ನು ಉತ್ಪನ್ನ ಮಾಡುವ X ಶುಕ್ಲಾಣುಗಳಿಗಿಂತಲೂ, ಕಷ್ಟಸಹಿಷ್ಣುತಾಗುಣವು ಹೆಚ್ಚಾಗಿದೆಯಾದುದರಿಂದ, ಅವು ಅಂಡಾಣುನಾಳದಲ್ಲೂ ಗರ್ಭಾಶಯದಲ್ಲೂ ಕಷ್ಟತರವಾದ ಪ್ರಯಾಣಮಾಡುವುದರಲ್ಲಿ ವಿಜಯಿಗಳಾಗುವುವು. ಶಾಸ್ತ್ರಜ್ಞರು ಶೇಖರಿಸಿರುವ ಅಂಕಿಗಳಿಂದ, ಆರು ಗಂಡು ಉತ್ಪಾದಕ ಶುಕ್ಲಾಣುಗಳು ಅಂಡಾಣುನಾಳದ ಕೊನೆಯನ್ನು ಮುಟ್ಟಿದರೆ ಐದು ಹೆಣ್ಣು ಉತ್ಪಾದಕ ಶುಕ್ಲಾಣುಗಳು ಮಾತ್ರ ಅಂಡಾಣುನಾಳದ ಕೊನೆಯನ್ನು ಮುಟ್ಟುವುವೆಂದೂ; ಅಂಡಾಣುನಾಳದಲ್ಲಿ ಕಡುತರವಾದ ಪ್ರಯಾಣಮಾಡಿ ಅಲ್ಲಿಯ ಎಡರುಗಳನ್ನು ಎದುರಿಸಲು ಶಕ್ತಿಸಾಮರ್ಥ್ಯಗಳಿಲ್ಲದೆ ಸಾಯುತ್ತಿರುವ ಕೋಟ್ಯನುಕೋಟಿ ಶುಕ್ಲಾಣು ಯಾತ್ರಿಕರಲ್ಲಿ ಪ್ರತಿ ಹನ್ನೊಂದು ಶುಕ್ಲಾಣುಗಳಿಗೂ ಆರು ಹೆಣ್ಣು ಉತ್ಪಾದಕರಿರುವರೆಂದೂ ಧಾರಾಳವಾಗಿ ಊಹಿಸಬಹುದಾಗಿದೆ.

ವರ್ಣರೇಖೆಗಳ ವಿನ್ಯಾಸಕ್ರಮವು ಗಂಡು ಉತ್ಪಾದನೆ ಮಾಡುವ ಮತ್ತು ಹೆಣ್ಣು ಉತ್ಪಾದನೆಮಾಡುವ ಶುಕ್ಲಾಣುಗಳನ್ನು ಸಮಸಂಖ್ಯೆಯಲ್ಲಿಯೇ ಉತ್ಪನ್ನ ಮಾಡುತ್ತದೆ. ಹೆಣ್ಣು ಉತ್ಪಾದಕಗಳಿಗೆ ಅದೇನೊ ಒಂದುಬಗೆಯ ನ್ಯೂನತೆಯು ಅಡ್ಡಿಬರುವುದರಿಂದ ಅಂಡಾಣುಗಳು ಹೆಚ್ಚಾಗಿ ಗಂಡುಗರ್ಭವಾಗುತ್ತವೆ. ಆದರೆ ಗಂಡಸರು ಕೈಲಾಗದಿರುವವರು, ಬಲಹೀನರು, ಪ್ರತಿಭಟನಶಕ್ತಿಯಿಲ್ಲದವರು; ಆದುದರಿಂದ ಕ್ರಮೇಣ ಹೆಣ್ಣುಶಿಶುಗಳು ಪ್ರಾಮುಖ್ಯತೆಗೆ ಬಂದು ಪ್ರಬಲರಾಗುತ್ತಾರೆ. ಈ ಪ್ರಾಬಲ್ಯವು ಜೀವನದ ಆದ್ಯಂತವೂ ಇರುತ್ತದೆ. ೮೦ ವರ್ಷವಾಗಿರುವಾಗ ಕೂಡ, ಇಬ್ಬರು ಗಂಡಸರಿಗೆ ಮೂವರು ಹೆಂಗಸರು! ಗರ್ಭಾಶಯದಲ್ಲಿ ಶಿಶುವು ವಿಕಾಸವಾಗುತ್ತಿರುವಾಗಲೂ, ಪ್ರಸವವಾದಾಗಲೂ, ಉತ್ಕೃಷ್ಟತರವಾದ ಆರೈಕೆ, ಶುಶ್ರೂಷೆಗಳಿಂದ ಗಂಡಸರ ಮರಣವು ಕಡಮೆಯಾಗುತ್ತದೆ. ಈಗ ಇಂಗ್ಲೆಂಡಿನಲ್ಲಿ ಗರ್ಭಗ್ರಹಣವಾದ ಪ್ರತಿ ೫ ಅಂಡಾಣುಗಳಿಗೆ ಒಂದು ಅಂಡಾಣುವು ಬೆಳೆದು ಶಿಶುವಾಗುತ್ತದೆ; ಶೇಕಡ ಮೂರಕ್ಕಿಂತಲೂ ಹೆಚ್ಚಾಗಿಯೇ ಪ್ರಸವಕಾಲದಲ್ಲಿ ಅಳಿಯುತ್ತವೆ; ಮೊದಲನೆಯ ವರ್ಷದೊಳಗಾಗಿ ಶೇಕಡ ಇನ್ನೊಂದು ಹದಿನೈದು ಸತ್ತುಹೋಗುತ್ತವೆ. ಎಂದರೆ ಗರ್ಭವಾದ ಒಂದು ವರ್ಷದೊಳಗಾಗಿಯೇ ಶೇಕಡ ೪೦ರಷ್ಟು ಜೀವಗಳು ದುರ್ವ್ಯಯವಾದುವು. ಈ ಮರಣಗಳಲ್ಲಿ ಗಂಡಸರ ಸಂಖ್ಯೆಯೇ ಅಧಿಕವೆಂದು

ಹೇಳಬೇಕಾಗಿಲ್ಲ. ತಾಯಿಯ ಆರೋಗ್ಯವೂ ಶುಶ್ರೂಷೆಯೂ ಗಂಡಸರ ಮೇಲಿರುವ ಹೆಂಗಸರ ಪ್ರಾಬಲ್ಯವನ್ನು ಸರಿಸಮನಾಗಿಸುವುದೆಂಬುದರಲ್ಲಿ ಸಂದೇಹವಿಲ್ಲ.

೩

ಗಂಡಸರ ಕುಲವೇ ಏತಕ್ಕೆ ಅಬಲವಾಗಬೇಕು? ಅವರ ಮರಣ ಸಂಖ್ಯೆಯೇ ಏತಕ್ಕೆ ಹೆಚ್ಚಬೇಕು? ಹೆಂಗಸರದು ಏಕಾಗುವುದಿಲ್ಲ? ಎಂಬ ಪ್ರಶ್ನೆಗಳಿಗೆ ಶಾಸ್ತ್ರಜ್ಞರು ಬಹು ಸಮಂಜಸವಾದ ಉತ್ತರಗಳನ್ನು ಕೊಟ್ಟಿದ್ದಾರೆ. ಇವುಗಳನ್ನು ಎರಡು ವಾಕ್ಯಗಳಲ್ಲಿ ಸಂಗ್ರಹಿಸಬಹುದು:—(೧) ಮನುಷ್ಯನಲ್ಲಿ ಲಿಂಗನಿರ್ದೇಶವು XY ಕ್ರಮವನ್ನು ಅನುಸರಿಸಿರುವುದು. (೨) ಅವನ ಬದುಕನ್ನು ಊನಮಾಡುವಂಥ ಕೆಲವು ಮರಣಕಾರಕ ವಿಮುಖಜೀನುಗಳು ಅವನಲ್ಲಿರುವುದು.

ಮೊದಲನೆಯ ಕಾರಣವನ್ನು ಮೊದಲು ಅರ್ಥಮಾಡಿಕೊಳ್ಳೋಣ. ಈ XY ಕ್ರಮದ ಲಿಂಗನಿರ್ದೇಶವನ್ನು ಈ ಬರಹದ ಮೊದಲಿನಲ್ಲಿಯೇ ಸ್ವಲ್ಪಮಟ್ಟಿಗೆ ವಿವರಿಸಿದೆ. ಮನುಷ್ಯಪಂಗಡದಲ್ಲಿ ಗಂಡಸರೆಲ್ಲರೂ ತಮ್ಮಲ್ಲಿರುವ ಒಂದೇ ಒಂದು X ವರ್ಣರೇಖೆಯನ್ನು ತಮ್ಮ ತಾಯಿಯಿಂದ ಪಡೆಯುವರೆಂದೂ, ಹೆಂಗಸರೆಲ್ಲರೂ ತಮ್ಮಲ್ಲಿರುವ ಎರಡು X ವರ್ಣರೇಖೆಗಳಲ್ಲಿ ತಾಯಿಯಿಂದ ಒಂದನ್ನೂ ತಂದೆಯಿಂದ ಇನ್ನೊಂದನ್ನೂ ಪಡೆಯುವರೆಂದೂ ಹಿಂದೆಯೇ ಹೇಳಿದೆ. (ಮುಕ್ಕಾಲು ಪಾಲು ವಿಷಯಗಳಲ್ಲಿ ತಾಯಿಗೂ ಮಗನಿಗೂ ಹೆಚ್ಚು ಸಾಮ್ಯವಿರುವುದೇ ವಿನಾ ತಂದೆಗೂ ಮಗನಿಗೂ ಅಷ್ಟಿರುವುದಿಲ್ಲ. ಇದಕ್ಕೆ ಮಗನು ತನ್ನ X ವರ್ಣರೇಖೆಯನ್ನು ತಾಯಿಯಿಂದ ಪಡೆದುಕೊಳ್ಳುವುದೇ ಬಹುಶಃ ಕಾರಣವಾಗಿರಬಹುದು.)

ಇನ್ನೊಂದು ಸಂಗತಿ,—ಅನೇಕ ಅನುವಂಶೀಯಗುಣಗಳು ವಿಮುಖಗುಣಗಳಾಗಿರುವುವು; ಎಂದರೆ, ತಮ್ಮ ಪ್ರತಿಗಳಾದ ಪ್ರಮುಖಗುಣಗಳು ಎದ್ದುನಿಂತು ವಿಮುಖಗುಣಗಳನ್ನು ತುಳಿದರೆ, ಪ್ರಮುಖಗುಣಗಳೇ ವ್ಯಕ್ತಿಯಲ್ಲಿ ಎದ್ದು ಕಾಣುತ್ತವೆ. ನೀಲಿ ಕಣ್ಣುಗಳು ವಿಮುಖಗುಣ, ಕಪ್ಪು ಕಣ್ಣುಗಳು ಪ್ರಮುಖಗುಣ; ಬಿಳುಪು ವಿಮುಖಗುಣ, ಬಣ್ಣವು ಪ್ರಮುಖಗುಣ; ದನದ ಕೊಂಬು ವಿಮುಖಗುಣ, ಕೊಂಬಿಲ್ಲದ್ದು ಪ್ರಮುಖಗುಣ; ಬಟಾಣಿಗಿಡದಲ್ಲಿ ಕುಳ್ಳು ವಿಮುಖಗುಣ, ಎತ್ತರ ಪ್ರಮುಖಗುಣ; ಇತ್ಯಾದಿ.

ಅನೇಕವೇಳೆ ಹೆಂಗಸು ತನ್ನ ಲಿಂಗವರ್ಣರೇಖೆಗಳೊಂದರಲ್ಲಿ ವಿಮುಖಗುಣವನ್ನು ಧರಿಸಿರುತ್ತಾಳೆ. ಉದಾಹರಣೆಗಾಗಿ ಕೆಲವು ವಂಶಗಳಲ್ಲಿ ಹೀಮೋಫಿಲಿಯ ಎಂಬ ರಕ್ತಸಂಬಂಧವಾದ ಜೇನೆಯ ಗುಣದ ಜೀನುಗಳು ಸಾಮಾನ್ಯವಾಗಿ ಅವಳ ಎಂದರೆ X ವರ್ಣರೇಖೆಯೊಂದರ ಮೇಲೆ ಚದರಿರುತ್ತವೆ. ಈ ರೋಗದಿಂದ ನರಳು

ವವರಲ್ಲಿ ರಕ್ತಕ್ಕೆ "ಹೆಪ್ಪುಗಟ್ಟುವ" ಗುಣವಿಲ್ಲದಿರುವುದರಿಂದ ಅದು ಒಂದೇ ಸಮನಾಗಿ ಸ್ರವಿಸುತ್ತಿರುವುದು. ಇಂಥವಳು ಆರೋಗ್ಯಶಾಲಿಯಾದೊಬ್ಬನನ್ನು ಮದುವೆಯಾದರೆ ಆಗುವುದೇನು ? ಉತ್ತರವನ್ನು ಈ ಕೆಳಗಿನ ನಕ್ಷೆಯು ಹೇಳುವುದು :—

| | ತಾಯಿ | ತಂದೆ | |
|---|---|---|---|
| | XX′ | XY | |
| ತಾಯಿಯ ಅಂಡಾಣುಗಳು | (1) X | X (1) | ಶುಕ್ಲಾಣುಗಳು |
| | (2) X′ | Y (2) | |

ಮಕ್ಕಳು: XX, X′X, XY, X′Y.

ತಾಯಿಯ ಎರಡು ಲಿಂಗ ವರ್ಣರೇಖೆಗಳಲ್ಲಿ ಒಂದು ರಕ್ತಸ್ರಾವದ ಗುಣವನ್ನು (ಅಥವಾ ಜೀನುಗಳನ್ನು) ಧರಿಸಿದೆ. ಈ ವರ್ಣರೇಖೆಯನ್ನು X′ ಎಂದು ಗುರುತು ಮಾಡಿದೆ. ತಾಯಿಯು ಅಂಡಾಣುಗಳನ್ನು ಸೃಜಿಸುವಾಗ ಎರಡು ಬಗೆಯ ಅಂಡಾಣುಗಳಾಗುತ್ತವೆ. (೧) X ವರ್ಣರೇಖೆಯನ್ನು ತಳೆದಿರುವವು. (೨) X′ ವರ್ಣರೇಖೆಯನ್ನು ತಳೆದಿರುವವು. ತಂದೆಯಲ್ಲಿ ಯಥಾಪ್ರಕಾರ X ಮತ್ತು Y ಗಳನ್ನು ಬೇರೆ ಬೇರೆಯಾಗಿ ತಳೆದಿರುವ ಶುಕ್ಲಾಣುಗಳು ಉತ್ಪತ್ತಿಯಾಗುತ್ತವೆ. ಈ ಅಂಡಾಣು ಶುಕ್ಲಾಣುಗಳ ಸಂಯೋಗವು ನಾಲ್ಕು ತೆರನಾಗಿ ಸಂಭವಿಸಬಹುದು:

Xಅಂಡಾಣು + Xಶುಕ್ಲಾಣು = XX. X′ಅಂಡಾಣು + Xಶುಕ್ಲಾಣು = XX′
Xಅಂಡಾಣು + Yಶುಕ್ಲಾಣು = XY. X′ಅಂಡಾಣು + Yಶುಕ್ಲಾಣು = X′Y

ಇದರಿಂದ ಒಂದು ಸಂಗತಿಯು ವ್ಯಕ್ತವಾಗುತ್ತದೆ. "ಎರಡು ಲಿಂಗಗಳಲ್ಲೂ ಸರಾಸರಿ ಶೇಕಡ ೫೦ ಮಕ್ಕಳಲ್ಲಿ ಈ ರೋಗವು ಕಾಣಿಸಿಕೊಳ್ಳುತ್ತದೆ. ಇನ್ನು ಶೇಕಡ ೫೦ರಲ್ಲಿ ಕಾಣಿಸಿಕೊಳ್ಳುವುದಿಲ್ಲ." ಹೆಂಗಸರಲ್ಲಿ ಯಾವಾಗಲೂ ಈ ಗುಣದ ಪ್ರತಿಪ್ರಮುಖಗುಣವು ಇನ್ನೊಂದು X ವರ್ಣರೇಖೆಯಲ್ಲಿ ಅಡಗಿರುವುದರಿಂದ, ಆ ಪ್ರಮುಖಗುಣವು ವಿಮುಖಗುಣವಾದ ಈ ರಕ್ತಸ್ರಾವದ ಗುಣವನ್ನು ತುಳಿದು, ಅವರಲ್ಲಿ ಅದು ತಲೆಯೆತ್ತದಂತೆ ಧ್ವಂಸ ಮಾಡಿಬಿಡುತ್ತದೆ. ಆದುದರಿಂದ ಹೆಂಗಸರಲ್ಲಿ ಈ ರೋಗವು ಪ್ರತ್ಯಕ್ಷವಾಗುವುದಿಲ್ಲ. ಗಂಡಸರಲ್ಲಿಯಾದರೋ, ಈ ವಿಮುಖಗುಣವನ್ನು ಮರೆಮಾಡುವಂಥ ಒಂದು ಪ್ರಮುಖಗುಣವಾಗಲಿ, X ವರ್ಣರೇಖೆಯಾಗಲಿ ಇರುವುದಿಲ್ಲ; ಅವರಲ್ಲಿರುವುದು ಅಪ್ರಯೋಜಕವಾದ Y ವರ್ಣರೇಖೆ. ಆದುದರಿಂದ ರಕ್ತಸ್ರಾವ ರೋಗಕ್ಕೆ ಬಲಿಯಾಗುವುದೇ ಅವರ ಹಣೆಬರಹ.

ಗಂಡುಕುಲವು ಅನೇಕ ಕಾಯಿಲೆ ಕಸಾಲೆಗಳಿಗೆ ತುತ್ತಾಗಬೇಕು. ಇದೇನೊ ಅವನ ಹಣೆಬರಹವೆಂದರೆ, ಅವನಿಗೆ ಜೀವನ ಯಾತ್ರೆಯನ್ನು ಸಾಗಿಸಲು ತೆರೆದಿರುವ

ದಾರಿಯೂ ಕಠಿಣವಾದುದು; ತೊಡರು ಎಡರುಗಳಿಂದ ನಿಬಿಡವಾದುದು; ಗರ್ಭಾಶಯ ದಲ್ಲಿನ ಈ ವಿರೋಧ ಸನ್ನಿವೇಶದಲ್ಲಿ ಅವನು ಬದುಕಿ ಬಾಳಬೇಕು. ಅವನ ಈ ಬಾಳು ಹೇಗೆತಾನೆ ಜಯಪ್ರದವಾದೀತು?

ಈಗ ಉತ್ತರದ ಎರಡನೆಯ ವಾಕ್ಯವನ್ನು ಪರಿಶೀಲಿಸೋಣ. ಒಂದೇ ಹೆರಿಗೆಯಲ್ಲಿ ಹುಟ್ಟಿದ ವ್ಯಕ್ತಿಗಳ ಬದುಕುವ ಶಕ್ತಿ ಎಂದರೆ ದೇಹದ ಮತ್ತು ಮನಸ್ಸಿನ ದೃಢತೆಗಳು ಎಲ್ಲರಲ್ಲೂ ಒಂದೇ ಸಮನಾಗಿರುವುದಿಲ್ಲವೆಂಬ ಅಂಶವು ಬಹುಕಾಲದಿಂದಲೂ ಸಾಮಾನ್ಯವಾಗಿ ತಿಳಿದಿದೆ. ಹಲವು ವೇಳೆ ಈ ಕುಂದುಗಳು ವ್ಯಕ್ತಿಯ ಇರುವಿಕೆಯನ್ನೇ ಅಸಾಧ್ಯವನ್ನಾಗಿ ಮಾಡುತ್ತವೆ. ಈ ಕುಂದುಗುಣಗಳನ್ನೇ ಹಿಂದೆ "ಮರಣಕಾರಕ" ಗಳೆಂದು ಕರೆದಿದ್ದೇವೆ. ಈ ಮರಣಕಾರಕಗಳು ಕಡಮೆ ಪರಿಮಾಣದಲ್ಲಿರುವಾಗ ವ್ಯಕ್ತಿಯು ಅನೇಕ ದೇಹಸಂಬಂಧವಾದ ತೊಂದರೆಗಳಿಗೆ ಈಡಾಗುತ್ತದೆ; ಅವು ಹಿರಿಯ ಪರಿಮಾಣದಲ್ಲಿರುವಾಗ ವ್ಯಕ್ತಿಯ ದೇಹದ ಮೇಲೆ ಅದರ ಹಾವಳಿಯು ಇನ್ನೂ ಹೆಚ್ಚಾಗಿ, ಅದರ ಆಯುಸ್ಸಿಗೆ ತಡೆಗಳನ್ನು ತಂದೊಡ್ಡುತ್ತವೆ; ಇನ್ನೂ ವಿಷಮ ಪರಿಸ್ಥಿತಿಯಲ್ಲಿ ವ್ಯಕ್ತಿಯನ್ನು ನಿರ್ಮೂಲಮಾಡುತ್ತವೆ.

ಈ ಮರಣಕಾರಕಗಳ ಹಾವಳಿಯನ್ನಂತೂ ಹೇಳತೀರದು. ಇವುಗಳ ಜೀನು ಗಳು ಅನೇಕ ವ್ಯಕ್ತಿಗಳ ವರ್ಣರೇಖೆಗಳಲ್ಲಿರುವುದೆಂದು ಈಚಿನ ಪರಿಶೋಧನೆಗಳಿಂದ ವ್ಯಕ್ತವಾಗಿದೆ. ಮರಣಕಾರಕಗಳು ಅಣೋರಣೀಯವಾದ ಜೀವಿಗಳನ್ನೂ ಬಿಟ್ಟಿಲ್ಲ, ಮಹತೋಮಹೀಯವಾದವುಗಳನ್ನೂ ಬಿಟ್ಟಿಲ್ಲ. ತೃಣಮಾತ್ರವಾದ ಹುಲ್ಲಿನಿಂದ ಹಿಡಿದು ಮುಗಿಲು ಮಟ್ಟವನ್ನು ಮುಟ್ಟಿರುವ ಮರಗಳಲ್ಲೂ, ಕ್ರಿಮಿಯಿಂದ ಮೊದ ಲ್ಗೊಂಡು ಆನೆಯಂಥ ಅಗಾಧ ಪ್ರಾಣಿಗಳಲ್ಲೂ ತನ್ನ ಹಾವಳಿಯನ್ನು ನಡೆಸುತ್ತದೆ. ಈಚೆಗೆ ಅನುವಂಶೀಯಶಾಸ್ತ್ರ ಪ್ರವೀಣರಲ್ಲೊಬ್ಬರಾದ ಎಫ್. ಎ. ಇ. ಕ್ರ್ಯೂ ಅವರು ಡೆಕ್ಸ್‌ಟರ್—ಕೆರ್‍ರಿ ಜಾತಿಯ ಜಾನುವಾರುಗಳಲ್ಲಿ ಮರಣಕಾರಕಗಳ ಉಪ ದ್ರವವನ್ನು ತೋರಿಸಿರುವರು. ಇಲ್ಲಿ ಮರಣಕಾರಕ ಜೀನುಗಳು ಒಂದು ಬಗೆಯ ವಿಕಾರರೂಪದ ಭ್ರೂಣವನ್ನು ಗರ್ಭಾಶಯದಲ್ಲಿ ಬೆಳಸಿ, ಅದನ್ನು ಹೊರಬರುವುದಕ್ಕೆ ಮುಂಚೆಯೇ ಮೃತಿಹೊಂದುವಂತೆ ಮಾಡುತ್ತವೆ.

ಇಂಥ ಮರಣಕಾರಕ ಜೀನುಗಳು ಲಿಂಗ ವರ್ಣರೇಖೆಗಳ ಮೇಲೆ ಚದುರಿ ದ್ದರೆ, ಗತಿಯೇನು? ಈ ಗುಣವು ವಿಮುಖವಾಗಿರುವುದರಿಂದ ಮೇಲೆ ಹೇಳಿರುವ ಪ್ರಕಾರ ಹೆಂಗಸರಿಗಿಂತ ಗಂಡಸರಲ್ಲಿಯೇ ಹೆಚ್ಚಾಗಿ ತಮ್ಮ ಆಳಿಕೆಯನ್ನು ಪ್ರದರ್ಶಿಸು ವುವು; ಸರಿ, ಅವನ ಬದುಕಿಗೆ ಪೆಟ್ಟು ತಗಲಿತು. ಈ ಕೆಳಗಿನ ಅಂಕಿಗಳು ಕತೆಯನ್ನು ಹೇಳುತ್ತವೆ:—

ಗರ್ಭಗ್ರಹಣವಾದಾಗ ೧೦೦ ಹೆಂಗಸರಿಗೆ ೧೩೦ ಗಂಡಸರು ಸಾಯುವರು.
ಗರ್ಭಪ್ರಸವವಾದಾಗ ೧೦೦ ಹೆಂಗಸರಿಗೆ ೧೦೦ಕ್ಕಿಂತಲೂ ಸ್ವಲ್ಪ ಹೆಚ್ಚು.
(೧೦೩ರಿಂದ ೧೦೭ರ ವರೆಗೆ, ವಿವಿಧ ಜನಾಂಗಗಳಲ್ಲಿ)
ಐದು ಅಥವಾ ಆರನೆಯ ವಯಸ್ಸಿನಲ್ಲಿ ೧೦೦ ಹೆಂಗಸರಿಗೆ ೧೦೦ ಗಂಡಸರು.

ಹೀಗೆ ಗಂಡಸರ ಸಂಖ್ಯೆಯು ಮರಣಕಾರಕಗಳಿಂದ ಕ್ರಮೇಣ ಕ್ಷಯಿಸುತ್ತ ಬಂದು ವಯಸ್ಕರಾದ ಹೆಂಗಸರ ಸಂಖ್ಯೆಯೇ ಗಂಡಸರದನ್ನು ಮೀರಿಸುತ್ತದೆ.

ಹೀಗೆ ಗಂಡು ಹೆಣ್ಣು ಕುಲಗಳ ಸಾವಿನ ಪರಿಮಾಣವನ್ನು ಗಮನಿಸಿದರೆ, "ಅಬಲೆಯರೆಂದು ಪ್ರಖ್ಯಾತವಾಗಿರುವ ಹೆಂಗಸರದೇ ಸ್ವಭಾವತಃ ಬಲಿಷ್ಠಕುಲ, ವೀರ್ಯವತ್ತಾದ ಕುಲ; ಬಲಯುತರೆಂದು ಬಿರುದುಗಳಿಸಿರುವ ಗಂಡಸರದು ಅಬಲಕುಲ, ಬಲಹೀನಕುಲ, ಕೈಲಾಗದವರ ಕುಲ, ಊನಾಪಿ ಕುಲ" ಎಂಬುದು ದೃಢಪಡುತ್ತದೆ.

ಬಿ. ಜಿ. ಎಲ್. ಸ್ವಾಮಿ.

## ಪ್ರಮಾಣಲೇಖನಾವಳಿ

*Science of Life*—H. G. Wells, G. P. Wells, J. Huxley.
*Essays in Popular Science*—J. Huxley.
*The Dominant Sex*—Mathilde and Mathias Vaerting.
(Translated into English by E. & C. Paul.)
*Sex*—F. A. E. Crew.
*Heredity and Sex*—T. A. Morgan.
A Lecture Delivered by Prof. F. A. E. Crew in Central College, Bangalore, in January, 1939.

**ಪಾರಿಭಾಷಿಕ ಪದಗಳು**—ಅಂಡಾಣು = Ovum. ಅಂಡಾಣುನಾಳ = Oviduct. ಅಂತರ್ಬೀಜ = Nucleus. ಜೀನು = Gene. ಜೀವಕೋಶ = Living Cell. ಜೀವರಸ = Protoplasm. ಪ್ರಮುಖ = Dominant. ಮರಣಕಾರಕ = Lethal. ಲಿಂಗಜಾತಿ = Sex. ಲಿಂಗ ವರ್ಣರೇಖೆ = Sex Chromosome. ವರ್ಣಗ್ರಾಹಿ = Chromatin. ವರ್ಣರೇಖೆ = Chromosome. ಇಂಗಡ ವಿಭಾಗ = Reduction Division. ವಿಮುಖ = Recessive. ಶುಕ್ಲಾಣು, ಪುರುಷಾಣು = Sperm. ಸಾಮಾನ್ಯ ವಿಭಾಗ = Mitotic Division.

# ನನ್ನ ಕಾಗದಗಳು :—ವಿಶಾಲಾಕ್ಷಿಗೆ

## (೧)

ವಿಶಾಲಾಕ್ಷೀ—

ನಾನು ನಿನ್ನನ್ನು ನೋಡಿರುವುದು ಎರಡೇಸಲ; ಮೊದಲು ಮದುವೆಗೆ ಮುಂಚೆ, ನಮ್ಮ ತಂದೆಯವರೊಡನೆ ಬಂದಾಗ; ಎರಡನೆಯಸಲ ಮದುವೆಯಲ್ಲಿ; ನಾಲ್ಕು ದಿನ ನಿಮ್ಮ ಮನೆಯಲ್ಲಿದ್ದಾಗ. ಆದರೂ ನಿಮ್ಮ ಮನೆಯನ್ನು ಬಿಟ್ಟು ಹೊರಟಮೇಲೆ ನನಗೆ ಏನೋ ಬಿಟ್ಟುಬಂದಂತೆ ಕಂಡುಬಂತು.

ಇದು ಹಾಗಿರಲಿ; ಇಷ್ಟಾದರೂ, "ನಿನ್ನನ್ನು ನಾನು ಸರಿಯಾಗಿ ನೋಡಲಿಲ್ಲವಲ್ಲ; ಒಂದುಬಾರಿ ಹತ್ತಿರ ನಿಂತು ನೋಡಿ, ಮನಬಿಚ್ಚಿ ಎರಡು ಮಾತನಾಡಿ ಸಲಿಗೆಯಿಂದ ಒಂದು ಕಡೆ ಇಬ್ಬರೂ ಕುಳಿತುಕೊಳ್ಳಲಿಲ್ಲವಲ್ಲ" ಎನ್ನಿಸುತ್ತದೆ. ಅದು ಯಾರೊಬ್ಬರ ತಪ್ಪೂ ಅಲ್ಲ.

ನಾನು ನಿನ್ನನ್ನು ನೋಡುವುದಕ್ಕೆ ಬಂದಾಗ, ನಿನಗೆ ಜ್ಞಾಪಕವಿರಬಹುದು, ನಾನು ಒಂದುಕಡೆ ಗೋಡೆಯನ್ನೊರಗಿಕೊಂಡು ಚಾಪೆಯ ಮೇಲೆ ಕುಳಿತಿದ್ದೆ. ನಿಮ್ಮ ತಂದೆ ನಿಮ್ಮ ತಾಯಿಗೆ, "ವಿಶಾಲಿಯನ್ನು ಕಳುಹಿಸು" ಎಂದರು. ನಾನೂ ಆಸೆಯಿಂದ ನಡುಮನೆಯ ಬಾಗಿಲ ಕಡೆ ಅರ್ಧ ಎತ್ತಿದ ಕತ್ತಿನಿಂದ ನೋಡಿಯೂ ನೋಡದಂತೆ ನೋಡುತ್ತಿದ್ದೆ. ಸ್ವಲ್ಪ ಹೊತ್ತಿನ ಮೇಲೆ ನೀನು ಕಷ್ಟದಿಂದ ಬಂದೆ. ನಿನ್ನ ಬಳೆಯ ಸದ್ದು, ನಿನ್ನ ಹೊಸ ಸೀರೆಯ ಸರಸರ ಶಬ್ದ ಇದೆಲ್ಲ ನೀನು ಬಂದೆಯೆಂದು ತಿಳಿಸಿದವು. ಆದರೂ ನಾನು ಕತ್ತೆತ್ತಿ ನೋಡಲಾಗಲಿಲ್ಲ. ನಿಮ್ಮ ತಾಯಿ ಎಷ್ಟು ಕಷ್ಟಪಟ್ಟು ಅಲಂಕಾರ ಮಾಡಿದ್ದರೋ ಏನೋ ಪಾಪ! ನನ್ನ ಮನಸ್ಸಿನಲ್ಲಿ ನಿನಗೆ ನಾನು ಅನ್ಯಾಯವಾಗಿ ತೊಂದರೆ ಕೊಡುತ್ತಿದ್ದೇನಲ್ಲಾ ಎಂದೂ, ಮನೆಯವರು ಹುಡುಗಿ ಚೆನ್ನಾಗಿದೆಯೆಂದು ಹೇಳಿದರೂ ಅವರ ಮಾತನ್ನು ನಂಬಲಿಲ್ಲವಲ್ಲ ಎಂದೂ, ಎರಡೂ ತೋರಿದುದರಿಂದ ಹಾಗೆ ಆಯಿತು.

ಮದುವೆಯಲ್ಲಂತು ನೀನು ಬಗ್ಗಿಸಿದ ಕತ್ತು ಎತ್ತಲೇ ಇಲ್ಲ. ಹೋಮದ ಬೆಂಕಿಗೂ ನನ್ನ ಮೇಲೆ ಕೋಪ. ನಿನ್ನನ್ನು ನೋಡಬೇಕೆಂದು ಬಯಸಿದಾಗ ಕಣ್ಣುತುಂಬ ಹೊಗೆ, ಆಮೇಲೆ ನೀನು ಅಡಿಗೆ ಮನೆಯಲ್ಲಿ; ನಾನು ರೂಮಿನಲ್ಲಿ; ಆದರೂ ನೀನು ನನ್ನವಳು.

ಇನ್ನು ಮುಂದೆ ನಾವಿಬ್ಬರೂ ಒಂದೆ. ಎಂಟು ದಿನಗಳ ಹಿಂದೆ ನೀನು ನನಗೆ ಯಾರೋ! ನಾನು ನಿನಗೆ ಯಾರೋ! ಆದರೆ ಈಗ ನಾವಿಬ್ಬರೂ ಒಂದೆ. ನಮಗೆ

ಮದುವೆಯ ಮಂತ್ರಗಳು ಅರ್ಥವಾಗದೆ ಇರಬಹುದು; ಇಲ್ಲವೇ ಜೋಯಿಸರು ತಪ್ಪು ಹೇಳಿಸಿರಬಹುದು; ಅಥವಾ ಬಿಟ್ಟಿರಬಹುದು. ಆ ಮಂತ್ರಗಳು ತಿಳಿಯದೆಯೂ ನಮ್ಮೆರಡು ಹೃದಯಗಳೂ ಅವುಗಳನ್ನು ಅರ್ಥಮಾಡಿಕೊಂಡಿವೆಯೆಂದು ನನಗೆ ಅನ್ನಿಸುತ್ತದೆ. ಸ್ವಲ್ಪ ದಿನಗಳ ಮೇಲೆ ನಾವಿಬ್ಬರೂ ಕಲೆತು ಸಂಸಾರವನ್ನು ನಡೆಸಬೇಕಾಗುತ್ತದೆ. ಇಬ್ಬರ ಮನಸ್ಸೂ ಒಂದಾದರೆ ಇಬ್ಬರಿಗೂ ಆನಂದವೂ ಸುಖವೂ ಉಂಟು. ಹಾಗಾಗಬೇಕಾದರೆ ಒಬ್ಬರನ್ನೊಬ್ಬರು ತಿಳಿದುಕೊಳ್ಳಬೇಕು. ಸಲಿಗೆ ಹೆಚ್ಚಬೇಕು.

ಅದಕ್ಕೋಸ್ಕರವೇ, ನೀನು ಕಾಗದ ಬರೆಯಬೇಕೆಂದು ನಾನು ಬರುವಾಗ ನಿನಗೆ ತಿಳಿಸಿದುದು; ನಾನು ಬರೆಯಲು ಪ್ರಾರಂಭಿಸಿರುವುದು. ಪ್ರತಿ ಗುರುವಾರವೂ ಒಂದೊಂದು ಕಾಗದ ಬರೆಯುತ್ತೇನೆ. ನೀನು ಅದಕ್ಕೆ ಆದಷ್ಟು ಬೇಗ, ಕೊನೆಯ ಪಕ್ಷ ಬುಧವಾರವಾದರೂ ಇಲ್ಲಿಗೆ ಬರುವಂತೆ, ಕಾಗದಗಳನ್ನು ಬರೆಯಬೇಕು.

ಇದರೊಳಗೆ ನನ್ನ ವಿಳಾಸವನ್ನು ಬರೆದಿರುವ ಒಂದು ಕವರು ಇಟ್ಟಿದ್ದೇನೆ. ಇದು ನಿನ್ನ ತೊಂದರೆ ಕಡಮೆಮಾಡುವುದಕ್ಕಾಗಿ.

ಇತಿ ನಿನ್ನ ಪ್ರಿಯಪತಿ.

(೨)

ಮುದ್ದು ವಿಶಾಲೀ—

ನಿನ್ನ ಕಾಗದ ಬರುವುದೆಂದು ನೆನ್ನೆ ಅಂಚೆಯ ಮನೆಗೆ ಹೋಗಿದ್ದೆ; ಕಾಗದ ಬರಲಿಲ್ಲ. ಬಹಳ ಕೋಪ ಬಂತು. ಕೂಡಲೆ ಈ ಕಾಗದ ಬರೆದಿದ್ದೇನೆ. ಇದಕ್ಕೂ ಉತ್ತರ ಬರದಿದ್ದರೆ ಕಾಗದ ಬರೆಯುವುದನ್ನು ನಿಲ್ಲಿಸುತ್ತೇನೆ. ವಿಳಾಸ ಬರೆದಿದ್ದ ಒಂದು ಕವರನ್ನಿಟ್ಟು ಕಳುಹಿಸಿದರೂ ಒಂದು ಕಾಗದ ಬರೆಯುವುದಕ್ಕಾಗಲಿಲ್ಲವೇ?

ಪಾಪ! ಬಹಳ ಕೆಲಸವೇನೋ? ಅಡಿಗೆ ಮಾಡಬೇಕೆ? ಮಕ್ಕಳನ್ನು ನೋಡಿಕೊಳ್ಳಬೇಕೆ? ಈಗಲೇ ಹೀಗಾದರೆ ಮುಂದೆ ಹೇಗೋ? ಏನಾದರೂ ಆಗಲಿ, ಬೇಗ ಕಾಗದ ಬರೆಯುತ್ತೀ ಎಂದು ತಿಳಿದುಕೊಂಡಿರುವ

ನಿನ್ನನ್ನು ಪ್ರೀತಿಸುವವ.

(೩)

ಎನ್ನೊಲವಿನ ವಿಶಾಲೀ—

ನಿನ್ನ ಕಾಗದ ಬಂದು ತಲಪಿತು. ಇಷ್ಟುಬೇಗ ಬರುವುದೆಂದು ತಿಳಿದಿರಲಿಲ್ಲ. ಉತ್ತರ ತರಿಸಿಕೊಳ್ಳುವುದಕ್ಕೆ ಕಡೆಯಪಕ್ಷ ಇನ್ನು ಎರಡಾಣೆಗಳನ್ನಾದರೂ ಸ್ಟಾಂಪಿಗೆ ಖರ್ಚುಮಾಡಬೇಕಾಗಬಹುದೆಂದು ತಿಳಿದುಕೊಂಡಿದ್ದೆ. ಏಕೆಂದರೆ ಹೆಂಗಸರಿಗೆ

ಉದಯನಾಚಾರ್ಯ .... ಆತ್ಮತತ್ವವಿವೇಕ (ಮೂರು ವ್ಯಾಖ್ಯಾನಗಳೊಡನೆ: ನಾರಾಯಣೀಯ, ದೀಧಿತಿ, ಮತ್ತು ಬೌದ್ಧಾಧಿಕಾರ ವಿವೃತಿ) (ಚೌಖಾಂಬಾ ಸಂಸ್ಕೃತ ಗ್ರಂಥಮಾಲಾ.)

ಗದಾಧರಭಟ್ಟಾಚಾರ್ಯ .... ಸಾಮಾನ್ಯನಿರುಕ್ತಿಪ್ರಕರಣ (ಶಿವದತ್ತಮಿಶ್ರ ವಿರಚಿತ ಗಂಗಾ ವ್ಯಾಖ್ಯಾನದೊಡನೆ) ಸಂಸ್ಕೃತ ಗ್ರಂಥಮಾಲಾ ಕಾಶೀ, ನಂ. ೧೩೧.

ಧರ್ಮಕೀರ್ತಿ .... ವಾದನ್ಯಾಯ (ಶಾಂತರಕ್ಷಿತ ವಿರಚಿತ ವಿಪಂಚಿಕಾರ್ಥ ಟೀಕೆಯೊಡನೆ) [೩.

ಮಧುಸೂದನ ಸರಸ್ವತಿ .... ಅದ್ವೈತಸಿದ್ಧಿ. (ಗುರುಚಂದ್ರಿಕಾ ವ್ಯಾಖ್ಯಾನದೊಡನೆ) ಭಾಗ

ರಾಜಮಲ್ಲ ಪಂಡಿತ .... ಜಂಬುಸ್ವಾಮಿಚರಿತ ಮತ್ತು ಅಧ್ಯಾತ್ಮ ಕಮಲಮಾರ್ತಾಂಡ.

ರಾಮಾನುಜಾಚಾರ್ಯ .... ಶ್ರೀಭಾಷ್ಯ (ಹತ್ತು ವ್ಯಾಖ್ಯಾನಗಳೊಡನೆ, ಭಾಗ ೨, ಪುಟಗಳು ೪೫೧-೯೩೫.)

ವೇದಾಂತದೇಶಿಕ .... ನ್ಯಾಯಸಿದ್ಧಾಂಜನ (ಶ್ರೀ ರಂಗರಾಮಾನುಜರ ವ್ಯಾಖ್ಯಾನದೊಡನೆ.)

ಶ್ರೀಪತಿ ಪಂಡಿತಾಚಾರ್ಯ .... ಶ್ರೀಕರಭಾಷ್ಯ (ಚತುಸ್ಸೂತ್ರಿ) ಮೈಸೂರು.

ಚಿದಂಬರಶಾಸ್ತ್ರಿ .... ಶ್ರೀ ಕೃಷ್ಣರಾಜಾಭ್ಯುದಯ.

ತಿರುಮಲಾಂಬಾ .... ವರದಾಂಬಿಕಾಪರಿಣಯ ಚಂಪೂ.

ಬಾಣಭಟ್ಟ .... ಕಾದಂಬರೀ (ಎರಡು ವ್ಯಾಖ್ಯಾನಗಳೊಡನೆ) ಬೊಂಬಾಯಿ.

ಭಾಸಕವಿ (ವಿ. ವೆಂಕಟರಾಮ ಶರ್ಮ, ಸಂಪಾದಕ.) .... ಅಭಿಷೇಕನಾಟಕಂ (ಸಂಸ್ಕೃತ ವ್ಯಾಖ್ಯಾನ ಉಪೋದ್ಘಾತ ಮತ್ತು ಆಂಗ್ಲ ಭಾಷಾ ಪರಿವರ್ತನಗಳೊಡನೆ.)

ರಾಜ ಚೂಡಾಮಣಿದೀಕ್ಷಿತ .... ರುಕ್ಮಿಣೀ ಕಲ್ಯಾಣಂ.

ಲೀಲಾಶುಕಕವಿ .... ಕೃಷ್ಣಕರ್ಣಾಮೃತಂ (ಮೂರು ವಾಖ್ಯಾನಗಳೊಡನೆ.)

## ಕನ್ನಡ

ವಿಮರ್ಶೆ ಚರ್ಚೆ ಮುಂತಾದ್ದು—ಕರ್ನಾಟಕ ಕವಿಕುಲಾಗ್ರಣಿ ಪಂಪಮಹಾಕವಿ. ನಾಟಕ ಕಲೆ. ಕುಮಾರವ್ಯಾಸಪ್ರಶಸ್ತಿ. ಶ್ರೀಹರ್ಷನ ನಾಟಕಗಳು. ಕನ್ನಡ ಸಾಹಿತ್ಯವಾಹಿನಿ. ಕರ್ನಾಟಕ ಜನಜೀವನ. ಕನ್ನಡದ ನೆಲೆ. ಶಿವರಹಸ್ಯ. ನಾಡೋಜ ಪಂಪ. ಕರ್ನಾಟಕ ಸಂಸ್ಕೃತಿ. ಕರ್ನಾಟಕ ಸಾಹಿತ್ಯ ಸಂಸ್ಕೃತಿ ಮತ್ತು ದರ್ಶನ. ಕಾಲಿದಾಸ ಮಹಾಕವಿಯು ಶೃಂಗಾರರಸವನ್ನು ಚಿತ್ರಿಸಿರುವ ಬಗೆ. ಆದಿಕವಿ ವಾಲ್ಮೀಕಿ. ವಿಮರ್ಶೆ, ಭಾಗ ೪.

ಪದ್ಯಕಾವ್ಯ—ಕೀರ್ತನ ಕಂಠಾಭರಣ. ಮಾಂದಳಿರು. ಹಣತೆ. ನವಿಲು, ಭಾಗ ೧-೨. ಪಾಂಚಜನ್ಯ. ತೊರವೆರಾಮಾಯಣಸಾರ ಸಂಗ್ರಹ. ನಾದಲೀಲೆ. ಕಾವ್ಯರತ್ನಾಕರ. ಕರ್ಣಾಟಕ ಹರಿದಾಸ ಕೀರ್ತನತರಂಗಿಣಿ. ಭಾಗ ೧-೨, ಪುರಂದರದಾಸರ ಕೃತಿಗಳು ಭಾಗ ೩, ಶ್ರೀ ಕನಕ

ದಾಸರ ಮತ್ತು ಶ್ರೀ ಜಗನ್ನಾಥರಾಯರ ಕೃತಿಗಳು. ಭಾಗ ೪. ಶ್ರೀ ವಿಜಯದಾಸರ ಕೃತಿಗಳು. ಭಾಗ ೫. ಶ್ರೀ ವಾದಿರಾಜಸ್ವಾಮಿಗಳ ಕೃತಿಗಳು. ಭಾಗ ೬. ಶ್ರೀಪಾದರಾಯರ ಮತ್ತು ವ್ಯಾಸರಾಯರ ಕೃತಿಗಳು. ಭಾಗ ೭. ಶ್ರೀ ಗೋಪಾಲದಾಸರ ಮತ್ತು ಮೋಹನದಾಸರ ಕೃತಿಗಳು. ಭಾಗ ೮. ಶ್ರೀ ಹರಿಕಥಾಮೃತಸಾರ. ಒಲುಮೆ. ನಲ್ಮೆ. ಹಣ್ಣುಕಾಯಿ. ನೆಳಲು ಬೆಳಕು. ಸಖೀಗೀತೆ.

ಚಂಪೂಕಾವ್ಯ—ಶಾಂತೀಶ್ವರ ಪುರಾಣ. ಲೀಲಾವತೀ ಪ್ರಬಂಧ (ಕಾವ್ಯಕಲಾನಿಧಿ ಗ್ರಂಥಮಾಲಾ.)

ನಾಟಕ—ಮ್ಯಾಕ್ಬೆತ್. ಚಾರುದತ್ತ (ಭಾಸನ ನಾಟಕದ ಅನುವಾದ.) ಪ್ರತಿಜ್ಞಾಯೌಗಂಧರಾಯಣ. ಮಹಾತ್ಮಾ ಕಬೀರದಾಸ್. ದೂತವಾಕ್ಯ (ಭಾಸನ ನಾಟಕದ ಅನುವಾದ.) ಕರ್ನಾಟಕ ಚಂಡಕೌಶಿಕ ನಾಟಕ. ಭೀಷ್ಮ. ಸಾಮುಧಾರಿ. ಅಂತಿಗೊನೆ. ನಚಿಕೇತ. ತಿರುಪಾಣಿ. ಕರ್ನಾಟಕ ಬಾಲಚರಿತ.

ಅಲಂಕಾರಶಾಸ್ತ್ರ—ಕಾವ್ಯಾವಲೋಕನ (ಓ. ಲೈ. ಕನ್ನಡ ಗ್ರಂಥಮಾಲೆ.)

ಭಾಷಾಶಾಸ್ತ್ರ—ಶಬ್ದಮಯ ಸಂಸಾರ ಅಥವಾ ಭಾಷಾಶಾಸ್ತ್ರ.

ವಿಜ್ಞಾನ—ಎಕ್ಸ್-ರೇ. ಕೈಗನ್ನಡಿ. ಹಸ್ತಸಾಮುದ್ರಿಕ. ವಿದ್ಯುಚ್ಛಕ್ತಿಯ ಪ್ರಭಾವ. ಜೀವದ ಉತ್ಪತ್ತಿ ಮತ್ತು ಪರಿವರ್ತನೆ. ಮನಶ್ಶಾಸ್ತ್ರದ ಪರಿಚಯ.

ಜೀವನಚರಿತ್ರೆ—ನಾಗಮಹಾಶಯ. ನೆಪೋಲಿಯನ್ ಬೋನಾಪಾರ್ಟ್. ಕನ್ನಡನಾಡಿನ ಮಿಂಚಿದ ಮಹಿಳೆಯರು. ಶ್ರೀ ಯಾಜ್ಞವಲ್ಕ್ಯ ಮಹಾಮುನಿಗಳ ಚರಿತ್ರೆ ಮತ್ತು ಸಕಲ ವೇದಗಳ ಶಾಖೋಪಶಾಖೆಗಳ ಪರಿಚಯ. ಶ್ರೀ ಹರ್ಷ. ತರುಣ ತುರ್ಕಸ್ಥಾನ ಅಥವಾ ಕಮಾಲ್‌ಪಾಷಾ. ಬುದ್ಧ. ಹರ್ಷವರ್ಧನ.

ಪುರಾಣಕಥೆ—ಕರ್ನಾಟಕ ಭಕ್ತವಿಜಯ, ಭಾಗ ೧-೩. ಶ್ರೀ ವಿಷ್ಣುಪುರಾಣ (ವಚನಕಾವ್ಯ.)

ಗೀತೆ—ಗೀತಾಪ್ರಕಾಶ. ಗೀತಾಸಂದೇಶ.

ವೀರಶೈವ ಗ್ರಂಥಗಳು—ಶಿವಾಚಾರ ನವರತ್ನ ಅಥವಾ ಭಕ್ತ ಮಾಹೇಶ್ವರರ ಕೈಪಿಡಿ. ಗುರುಧರ್ಮ ನಿರೂಪಣೆ. ಪ್ರಭುಲಿಂಗಲೀಲೆ (ಗದ್ಯ.) ಅರವತ್ತುಮೂರು ಪುರಾತನರು. ಶಿವಮಹಾಪುರಾಣ ಅಥವಾ ನವಮೋಹನತರಂಗಿಣಿ. ಬಸವರಾಜದೇವರ ರಗಳೆ, ಎರಡನೇ ಆವೃತ್ತಿ. ವಚನಶಾಸ್ತ್ರಸಾರ, ಭಾಗ ೩.

ದರ್ಶನ—ಮೀಮಾಂಸಾದರ್ಪಣ. ನೈಷ್ಕರ್ಮ್ಯಸಿದ್ಧಿ (ಸುರೇಶ್ವರಾಚಾರ್ಯ ಕೃತಿ) ಕನ್ನಡ ಅನುವಾದ.

ಜೈನಗ್ರಂಥ—ಚತುರ್ವಿಂಶತಿತೀರ್ಥಕರ ಆರಾಧನ.

ಉಪನ್ಯಾಸಾದಿ—ರೈತನ ಪ್ರಪಂಚ. ಟಾಲ್‌ಸ್ಟಾಯರ ಕಥೆಗಳು. ಕರ್ನಾಟಕದ ದಿಗ್ದರ್ಶನ. ಕುಟಿ ವಿಹಾರಿಮುದು. ಭಾರತಮಾರ್ಗ (ಅನುವಾದ.) ಸುಳುವು ಹೊಳವು. ಮುಂದುವರಿದ ಜಪಾನ್. ಬುದ್ಧನ ಕಥೆಗಳು. ಶ್ರೀ ಗೋಮಟೇಶ್ವರ. ಸಾಮ್ಯವಾದ.

ಟೀಕಿರುವ ಸಂಸ್ಕೃತ ಗ್ರಂಥ—ಕರ್ನಾಟಕ ಹಂಸಸಂದೇಶ.

## ಇಂಗ್ಲೀಷು

BARUA, BENIMADHAB.—*Gaya and Buddha Gaya.* Vol. 1. Book 1. 'Early History of the Holy land.' Books 2-5. 'Old Shrines at Bodha Gaya.'

BARUA, BENIMADHAB.—*Barhut.* Book 1. 'Stone as Story-teller.' 2. 'Jataka Scenes.' 3. 'Aspects of Life and Art.'

BHAGAVAN DAS.—*The Essential Unity of All Religions.*

GHOSH, BATAKRISHNA.—*Linguistic Introduction to Sanskrit.*

KUPPUSVAMY SASTRY, S. and P. P. S. SASTRY.—*Descriptive Catalogue of the Sanskrit Manuscripts in the Government Oriental MSS Library, Madras.* Vol. XXVIII. (Supplemental), D. Nos. 15,693 to 16,200.

LAHIRI, NIRMALACHANDRA.—*The Indian Ephemeris of Planets' Positions According to the Nirayana or Indian System for the Year A.D. 1939.* (Indian Research Institute, Calcutta.)

PAUL, PRAMODA LAL.—*The Early History of Bengal.* Vol. I. (From the earliest times to the Muslim Conquest.)

RAJAVADE, V. K. (Ed.)—*Yaska's Nirukta.* Vol. I with Introduction. Full Texts of *Nighantu* and *Nirukta*, cursory examination of *Nighantu* and notes on Chapters 1-3 of Niruka. (B.O.R.I., Poona.)

SITARAMA SASTRY. (Ed.)—*Ṛgveda Samhita.* Parts 1-6, with English, Hindi and Bengali translations. (Indian Research Institute, Calcutta.)

---

## ೧೯೪೦ನೆಯ ಜನವರಿ ತಿಂಗಳಿಂದ ಜೂನ್ ಕೊನೆಯ ವರೆಗೆ ಮೈಸೂರು ವಿಶ್ವವಿದ್ಯಾ ನಿಲಯ ಪುಸ್ತಕ ಭಂಡಾರಕ್ಕೆ ಸೇರಿದ ಪ್ರಾಚ್ಯವಿಷಯಕ ಪುಸ್ತಕಗಳು

### ಇಂಗ್ಲೀಷು

BRITTON, K.—*Communication: A Philosophical Study of Language.*

BURTT, E.A.—*The Metaphysical Foundations of Modern Physical Science:* A Historical and Critical Essay.

KARMARKAR, A.P. AND KALAMDANI, N.B.—*Mystic Teachings of Haridasas of Karnatak.*

— *The Gospel of Zoroaster.*

SARMA, D.S.—*What is Hinduism?*

PARULEKAR, R.V.—*Literacy in India.*

SIQUEIRA, T.N.—*The Education of India: History and Problems.*

EDDINGTON, A.S.—*The Philosophy of Physical Science.*

ABERCROMBIE, L.—*The Idea of Great Poetry.*

DAVIES, H.S.—*Realism in the Drama.*

ELIOT, T.S.—*The Use of Poetry and the Use of Criticism.*

RICHARDS, I.A.—*The Philosophy of Rhetoric.*

LAHIRI, P.C.—*Concepts of Riti and Guna in Sanskrit Poetics in Their Historical Development.*

PANDEY, K.C.—*Abhinavagupta : An Historical and Philosophical Study.*

AJAZ.—*Short History of Urdu Literature.*

IBN BATTUTA.—*Travels in Asia and Africa.*

MARSHALL, J.—*The Monuments of Sanchi.*

WALSH, E.H.C.—*Punch-Marked Coins from Taxila.*

PAREKH, M.C.—*Keshab Chandra Sen.*

MATSCHOSS, C.—*Great Engineers.*

PAREKH, M.C.—*Ram Mahan Roy, Raja.*

DIKSHIT, K.N.—*Prehistoric Civilization of the Indus Valley.*

NILAKANTA SASTRY, K.A.—*Foreign Notices of South India.*

PAUL, P.L.—*The Early History of Bengal.*

BAIJ NATH PURI.—*India as Described by Early Greek Writers.*

BHANDARKAR, D.R.—*Some Aspects of Ancient Indian Culture.*

CHOCKKALINGAM PILLAI, V.—*The Origin of Indo-European Races and Peoples, Vol. I.*

DE. SUSIL KUMAR.—*Treatment of Love in Sanskrit Literature*

HUNTER, G.R.—*The Script of Harappa and Mohenjodaro and It's Connection with Other Scripts.*
JAIN, BANARSI DAS.—*Phonology of Panjabi.*
— *Ludhiani Phonetic Reader.*
KASHI NATH PANDIT.—*Ideals of Hinduism.*
KRAMRISCH, S.—*The Vishnudharmottara.* Pt. III.
*A Descriptive Catalogue of the Sanskrit Manuscripts in the Government Oriental Library, Madras.*
MACDONALD, J.A.—*An Easy Introduction to Colloquial Bengali in the Roman Character.*
MAHADEVAN, T.M.P.—*The Philosophy of Advaita with Special Reference to Bharathitirta Vidyaranya.*
MAJUMDAR, R.C.—*Ancient Indian Colonies in the Far East.* Vol. II, SUVARNADVIPA. Pt. I. *Political History.*
MALLIK, B.K.—*The Real and the Negative.*
MANKAD, D.R.—*Types of Sanskrit Drama.*
— *Nautical Almanac and Astronomical Ephemeris*, 1941.
PANIKKAR, K.M.—*Origin and Evolution of Kingship in India.*
— *Phaladeepika.* (In Sanskrit.)
PHILLOTT, D.C.—*An English-Hindustani Dictionary.*
— *Colloquial English-Persian Dictionary in the Roman Character.*
RAGHU VIRA.—*The Buddha and the Bodhisattva in Indian Sculpture.* Pt. 1.
RAJAVADE, V.K. (ed.)—*Yaska's Nirukta.* Vol. I.
RAJA RUDRA DEVA OF KUMAON.—*Syainika Sastra or a Book on Hawking.*
RANGACHARYA, M.—*The Hindu Philosophy of Conduct.* Vols. II and III.
SCHNITGER, F.M.—*The Archæology of Hindu Sumatra.*
SPALDING, H.N.—*Civilization in East and West: An Introduction to the Study of Human Progress.*
SURYAKANTA SHASTRI. (ed.)—*The Pedumavati of Malik Mohammed Jaisis.* Vol. I.
VIJAYADEVJI (MAHARANA OF DHARMAPUR).—*Sangit Bhava.*
SAUNDERS, K.—*A Pageant of India.*
WOOLNER, A.C.—*Languages in History and Politics.*
ELWIN, V.—*The Baiga.*
COUSINS, M.E.—*The Music of Orient and Occident.*
CLARK, G.—*Archæology and Society.*

SHARMA, W.D.—*Jainism and Karnataka Culture.*
SUBRAHMANYA SASTRI, V.—*Uttarakalamrita.*
BHASKARARAYA.—*Varivasyarahasyam.*
KATRE, S.M. (ed.)—*A Volume of Eastern and Oriental Studies.* Presented to Prof. F. W. Thomas.
DNYANESHWAR MAHARAJ.—*Gita Explained.* (English Tr.)
APTE, V.M.—*Social and Religious Life in the Grihya Sutras.*
RAY, P.C.—*Islamic Culture and National Education.*
RANGASWAMY IYENGAR, K.V.—*Commemoration Volume.*
TREVER, A.A.—*History of Ancient Civilization.* Vol. I. *The Ancient Near East and Greece.*
SWARUP, B.—*Theory of Indian Music.*
*The Jaina Iconography.*

## ಕನ್ನಡ

ವಚನ ಶಾಸ್ತ್ರಸಾರ (೩ನೆಯ ಭಾಗ), ಬಸವರಾಜದೇವರ ರಗಳೆ, ಕನ್ನಡದ ನೆಲೆ, ಕರ್ನಾಟಕ ಜನಜೀವನ, ಜೀವದ ಉತ್ಪತ್ತಿ ಮತ್ತು ಪರಿವರ್ತನೆ, ಆಹಾರ, ಕರ್ನಾಟಕ ಸಾಹಿತ್ಯ-ಸಂಸ್ಕೃತಿ ದರ್ಶನ, ರಸಾಯನ ಶಾಸ್ತ್ರಸಾರ, ಮಧ್ಯಕಾಲದ ಇಂಡಿಯಾ, ಜೀವವಿಜ್ಞಾನ, ಶ್ರೀ ಚೆಲುವನಾರಾಯಣಶತಕಂ, ಶ್ರೀಮತೀಪರಿಣಯ ನಾಟಕಂ, ಶ್ರೀಮದ್ರಾಮಾಯಣ (ಉತ್ತರಕಾಂಡ), ಶ್ರೀ ಕೃಷ್ಣಚರಿತಾಮೃತ, ವಿಕ್ರಮೋರ್ವಶೀಯ ನಾಟಕಂ, ಶೇಷರಾಮಾಯಣಂ, ನಮ್ಮ ಬದುಕು, ಸಚಿತ್ರ ಭಾರತಯಾತ್ರೆ (ಮೊದಲ ಭಾಗ), ಮುಕ್ಕುಜೀಲಿ, ಸುಳುವು ಹೊಳವು, ಶ್ರೀ ವಿದ್ಯಾರಣ್ಯವಿಜಯ, ಸಾಲುದೀಪ, ಕೋಲ್ಮಿಂಚು, ಷೇಕ್ಸ್ಪಿಯರ್ ನಾಟಕ ಕಥೆಗಳು, ಕಾಳರಾತ್ರಿ, ನಮ್ಮ ಕವಿತೆಗಳು, ಕಾವ್ಯಾವಲೋಕನಂ, ಕರ್ಣಾಟಕ ಕವಿಚರಿತೆ (೩ನೆಯ ಸಂಪುಟ), ಮಯೂರ, ಅಂತರಂಗ, ಪಂಚಭಾಷಾ ಪ್ರಹಸನಂ, ಮಾಡಿದ್ದುಣ್ಣೋ ಮಹಾರಾಯ, ಕುಣಿಗಲ್ ರಾಮಾಶಾಸ್ತ್ರಿಗಳ ಚರಿತ್ರೆ, ಸೇಟಿಮಾತೀಸಜ್ಜಿ, ಪಾಳೆಯಗಾರರು, ಶ್ರೀ ಚಾಮರಾಜೇಂದ್ರ ಒಡೆಯರವರ ಚರಿತ್ರೆ, ದೌಲತ್ (ಮೊದಲ ಭಾಗ), ಭವಾಸಿಬಾಳು, ಪ್ರಮೀಳಾರ್ಜುನೀಯಂ, ಸೀತಾ ಸ್ವಯಂವರಂ, ಹಳ್ಳಿಗಳ ಆರ್ಥಿಕ ಸ್ಥಿತಿ ಮತ್ತು ಸಮಾಜಶಾಸ್ತ್ರ, ಹಿತೋಪದೇಶ, ಶೂದ್ರಕ, ಭಾರತ ಮಹಿಳಾ, ಆನಂದಮಠ, ದೇವೀಚೌಧುರಾಣಿ, ರಾಜಸಿಂಹ, ಮಾಯಾವಿ, ತಿರುಪಾಣಿ, ಪಯಣ, ಕುಮಾರವ್ಯಾಸ ಪ್ರಶಸ್ತಿ, ಶಬ್ದಮಣಿ ದರ್ಪಣ.

---

# ಕಾವ್ಯಾವಲೋಕನ

**ಶ್ರೀ ಪ್ರಭುದೇವರ ಪುರಾಣ** (ಎಳಂದೂರು ಹರೀಶ್ವರಕೃತ)—ಸಂಪಾದಕರು ಮತ್ತು ಪ್ರಕಾಶಕರು: ಶ್ರೀ ಬುದ್ಧಯ್ಯಾಸ್ವಾಮಿ ಮ. ಪುರಾಣೀಕ; ಉಳವಿ ಬಸಪ್ಪನಗುಡ್ಡ, ಧಾರವಾಡ; ಡೆಮಿ ಅಷ್ಟ ೪+೨೬+೧೨+೪೪೩; ಬೆಲೆ, ರೂ. ೨-೦-೦; ಸಚಿತ್ರ.

ಶ್ರೀ ಅಲ್ಲಮ ಪ್ರಭುದೇವರಿಗೆ ಸಂಬಂಧಿಸಿದ ಹಲವು ಗ್ರಂಥಗಳನ್ನು ಪ್ರಸಿದ್ಧಪಡಿಸಿರುವ ಶ್ರೀಮಾನ್ ಬುದ್ಧಯ್ಯಾಸ್ವಾಮಿ ಮ. ಪುರಾಣೀಕರು ಈಗ 'ಪ್ರಭುದೇವರ ಪುರಾಣ'ವನ್ನು ಪ್ರಕಾಶಪಡಿಸಿರುವುದು ಸ್ತುತ್ಯವಾಗಿದೆ. ಪ್ರಸ್ತಾವನೆ, ಕಥಾಸಾರಾಂಶ, ಟೀಕೆ, ಶಬ್ದಕೋಶ—ಇವುಗಳಿಂದ ಪುಸ್ತಕದ ಉಪಯೋಗ ಹೆಚ್ಚಿದೆ. ಈ ಗ್ರಂಥವನ್ನು 'ಸಾಂಗ್ಲಿಯ ರಾಜಾ ಸಾಹೇಬರವರ ಪ್ರಜಾನುರಾಗದ ಕುರುಹಿಗಾಗಿ' ಸಂಪಾದಕರು ಅರ್ಪಿಸಿದ್ದಾರೆ. ಗ್ರಂಥ ಪ್ರಕಾಶನಕ್ಕೆ ತನು ಮನ ಧನಗಳಿಂದ ಸಹಾಯಮಾಡಿದವರು ಹನಗಂಡಿಯ ದೇಸಾಯರಾದ ಶ್ರೀಮಂತ ಅಪ್ಪಾ ಸಾಹೇಬರವರು. ತೇರದಾಳದ ಶ್ರೀಮದನಾದಿ ಅಲ್ಲಮ ಪ್ರಭುದೇವರ ಬೃಹನ್ಮಠದಲ್ಲಿ ಈ ಗ್ರಂಥವನ್ನು ಪುರಾಣ ಹೇಳುವ ಸುಯೋಗ ಸಂಪಾದಕರಿಗೆ ಲಭಿಸಿ ಪುಸ್ತಕದ ಪ್ರಕಟನೆಗೆ ಕಾರಣವಾಯಿತು. ಭಕ್ತಿಯಿಂದಲೂ ಶ್ರದ್ಧೆಯಿಂದಲೂ ಸಂಪಾದಕರು ಈ ಕೆಲಸವನ್ನು ಕೈಕೊಂಡು, ನಡುವೆ ಬಂದ ತೊಂದರೆಗಳಿಂದ ಎದೆಗೆಡದೆ, ಸಾಂಗವಾಗಿ ನೆರವೇರಿಸಿದ್ದಾರೆ. ಮೂರು ಕೈ ಬರೆಹದ ಪ್ರತಿಗಳ ಆಧಾರದ ಮೇಲೆ ಗ್ರಂಥವನ್ನು ಅಚ್ಚುಹಾಕಿಸುವ ಕೆಲಸ ನಡೆದಿದೆ. ಕಠಿನವಾದ ನಾಂದ್ಯದ ಪದ್ಯಗಳಿಗೆ ಟೀಕೆಯೂ ಇದೆ. ಇದರ ಸಂಪಾದನೆಗಾಗಿ ಶ್ರೀಮಾನ್ ಪುರಾಣೀಕರು ಪಟ್ಟಿರುವ ಶ್ರಮ ಮಿಗಿಲಾಗಿದೆ. ಕನ್ನಡಿಗರ ಹೊಗಳಿಕೆಗೆ ಅವರು ಪಾತ್ರರಾಗಿದ್ದಾರೆ. ಇದುವರೆಗೂ ಅಚ್ಚಾಗದೆ ಇದ್ದ ಈ ಪುರಾಣವನ್ನು ಬೆಳಕಿಗೆ ತಂದದ್ದು ಪ್ರಭುದೇವರ ಸಾಹಿತ್ಯವನ್ನು ಅಭ್ಯಾಸ ಮಾಡುವವರಿಗೆ ತುಂಬ ಸಹಾಯವಾಗಿದೆ.

ಶ್ರೀ ಪ್ರಭುದೇವರ ಚರಿತ್ರೆಗಳಲ್ಲಿ ಬೇರೆ ಬೇರೆ ಸಂಪ್ರದಾಯಗಳಿವೆ. ಹಂಪೆಯ ಹರೀಶ್ವರನು ಹೇಳಿರುವ ಕತೆ ಒಂದು ರೀತಿ; ಚಾಮರಸನು ಹೇಳಿರುವ 'ಪ್ರಭುಲಿಂಗ ಲೀಲೆ' ಮತ್ತೊಂದು ರೀತಿ. ಬೇರೆ ಬೇರೆ ಸಂಕಲನಕಾರರು ಮಾಡಿರುವ 'ಶೂನ್ಯ ಸಂಪಾದನೆ' ಗ್ರಂಥಗಳಲ್ಲಿ ಕಾಣುವ ಪ್ರಭುದೇವರ ಚರಿತೆ ಒಟ್ಟಿನ ಮೇಲೆ 'ಪ್ರಭುಲಿಂಗ ಲೀಲೆ'ಯ ಕತೆಯನ್ನು ಹೋಲುತ್ತದೆಂದು ಹೇಳಬಹುದು. ಈ ಎರಡನೆಯ

ಸಂಪ್ರದಾಯಕ್ಕೆ ಪ್ರಕೃತ ವಿಮರ್ಶೆಗಿರುವ 'ಪ್ರಭುದೇವರ ಪುರಾಣ'ವೂ ಸೇರಿದೆ. ಚಾಮರಸನು ಪ್ರಭುದೇವರ ಕತೆಯ ನಡುವೆ ಉಪಕಥೆಗಳನ್ನು ಸೇರಿಸಿಲ್ಲ; ಎಳಂದೂರ ಹರೀಶ್ವರನು ಹಲವು ಶಿವಭಕ್ತರ ಕಥೆಗಳನ್ನು ಅಲ್ಲಲ್ಲಿ ಅವಕಾಶ ಕಲ್ಪಿಸಿಕೊಂಡು ಹೇಳಿದ್ದಾನೆ. ಇದರಿಂದ ಅವನ ಗ್ರಂಥವು 'ಲೀಲೆ'ಯಾಗದೆ 'ಪುರಾಣ'ವಾಗಿದೆ. ಅಲ್ಲಮನ ಕತೆ ಕಾಲಕಾಲಕ್ಕೆ ಹೊಂದಿದ ರೂಪಾಂತರವೂ ಸ್ವಲ್ಪಮಟ್ಟಿಗೆ ತಿಳಿದುಬರುತ್ತದೆ. ಇದರಿಂದ ಈ ಗ್ರಂಥಕ್ಕೆ ಪ್ರಾಶಸ್ತ್ಯವುಂಟಾಗಿದೆ.

ಪ್ರಸ್ತಾವನೆಯಲ್ಲಿ ಸಂಪಾದಕರು ಕವಿಯ ಕಾಲ, ಕವಿಯ ನಿಸ್ಪೃಹತೆ, ನವರಸಗಳು, ಕವಿಯ ಸ್ಫೂರ್ತಿ—ಇವೇ ಮುಂತಾದ ವಿಷಯಗಳನ್ನು ಕುರಿತು ವಿಸ್ತಾರವಾಗಿ ಚರ್ಚಿಸಿದ್ದಾರೆ. ಇವುಗಳಲ್ಲಿ ಕವಿಯ ಕಾಲದ ವಿಚಾರವಾಗಿ ಅವರು ಮಾಡಿರುವ ನಿರ್ಣಯವೂ ಅದಕ್ಕೆ ಕೊಟ್ಟಿರುವ ಕಾರಣಗಳೂ ಬಹು ಮುಖ್ಯವಾದುವು. 'ಕರ್ಣಾಟಕ ಕವಿಚರಿತೆ'ಯಲ್ಲಿ ನಿಶ್ಚಯಿಸಿರುವಂತೆ ಕವಿಯ ಕಾಲ ಕ್ರಿ. ಶ. ೧೬೦೬; ಶ್ರೀಮಾನ್ ಪುರಾಣೀಕರು ಗ್ರಂಥ ರಚನೆಯ ಕಾಲ ಕ್ರಿ. ಶ. ಸುಮಾರು ೧೪೮೬ ಆಗಿರಬೇಕೆಂದು ಅಭಿಪ್ರಾಯವುಳ್ಳವರಾಗಿದ್ದಾರೆ. ಈ ವಿಷಯವಾಗಿ ಪ್ರಕೃತ ಹೇಳಬೇಕಾಗಿರುವುದು ಕೊಂಚ ಇದೆ.

ಎಳಂದೂರ ಸಿಂಹಾಸನಾಧಿಷ್ಠನಾದ ಗುರುಹರೀಶ್ವರ, ಅವನ ಮಗ ಪ್ರಭುದೇವ, ಮಗ ತೋಂಟದಾಚಾರ್ಯ, ಮಗ ಕವಿಹರೀಶ್ವರ—ಇದು ವಂಶಪರಂಪರೆ. ಆಗಮಜ್ಞಾನಿಯಾದ ವೃಷಭಪುರದ ಸಿದ್ಧವೀರ ಕವಿಯ ಗುರು. ಸ್ತುತರಾಗಿರುವ ಹಿಂದಿನ ಕವಿಗಳಲ್ಲಿ ಗುಬ್ಬಿಯ ಮಲ್ಲಣ ಒಬ್ಬ. ವಿಶ್ವಾವಸು ಸಂವತ್ಸರದ ಜ್ಯೇಷ್ಠ ಶುದ್ಧ ಪಾಡ್ಯದಲ್ಲಿ ಗ್ರಂಥರಚನೆ ಪ್ರಾರಂಭವಾಗಿ ಪರಾಭವ ಜ್ಯೇಷ್ಠ ಬಹುಳ ದಶಮಿಯಂದು ಪೂರ್ಣವಾಯಿತು. ಕವಿಯ ಕಾಲನಿರ್ಣಯಕ್ಕೆ ಅವನ ಹೇಳಿಕೆಯಂತೆ ಇರುವ ಆಧಾರಗಳು ಇವಿಷ್ಟು.

ಕವಿಯ ಗುರು ವೃಷಭಪುರದ ಸಿದ್ಧವೀರನ ಹೊಲಬನ್ನು ಕಂಡುಹಿಡಿಯಲು ಕವಿಚರಿತೆಕಾರರು ಪ್ರಯತ್ನಪಟ್ಟಿಲ್ಲ. ಗುಬ್ಬಿಯ ಮಲ್ಲಣ ಗಣಭಾಷ್ಯ ರತ್ನಮಾಲೆಯನ್ನು ಬರೆದವನೊ (ಸು. ೧೪೭೫) ಅಥವಾ ವೀರಶೈವಾಮೃತ ಪುರಾಣದ ಕರ್ತೃವೊ (೧೫೩೦) ಎಂಬ ಸಂದೇಹವಿದೆಯೆಂದೂ ಎಳಂದೂರ ಹರೀಶ್ವರ ಅವರಿಬ್ಬರಿಗಿಂತಲೂ ಈಚಿನವನಾಗಿರಬಹುದೆಂದೂ ಊಹಿಸಿ ಕ್ರಿ. ಶ. ೧೬೦೬ಕ್ಕೆ ಸಲ್ಲುವ ಪರಾಭವ ಸಂವತ್ಸರವೇ ಗ್ರಂಥ ಸಮಾಪ್ತಿಯ ಕಾಲವೆಂದು ಅವರು ಗ್ರಹಿಸಿದ್ದಾರೆ. ಗ್ರಂಥ ರಚನೆಯ ಕಾಲವನ್ನು ಕೊಡುವಾಗ ಕವಿ ಶಕ ಸಂವತ್ಸರವನ್ನು ತಿಳಿಸದೆ ಬಿಟ್ಟಿರುವುದು ಈ ಸಂದೇಹಕ್ಕೆ ಮುಖ್ಯಕಾರಣ. ಆದ್ದರಿಂದ ಅದರಲ್ಲಿ ಯಾರಿಗಾದರೂ ಶಂಕೆ ತಲೆ

ದೋರುವುದು ಸಹಜ. ಶ್ರೀಮಾನ್ ಪುರಾಣೀಕರಿಗೆ ಗ್ರಂಥರಚನೆಯ ಈ ಕಾಲವನ್ನು ಮಾರ್ಪಡಿಸಲು ಅವಕಾಶವಿದೆ. ಅವರು ಕೊಡುವ ಕಾರಣಗಳು ಹೀಗಿವೆ:

(೧) ೧೪೮೬, ೧೫೪೬—ಈ ಎರಡು ಇಸವಿಗಳಲ್ಲಿಯೂ ಪರಾಭವ ಸಂವತ್ಸರ ಬರುವುದರಿಂದ ಗ್ರಂಥ ಸಮಾಪ್ತಿಯ ಕಾಲ ಇವೆರಡರಲ್ಲಿ ಯಾವುದಾದರೂ ಒಂದಿರ ಬಹುದು; ಅಂತೆಯೇ ೧೬೦೬ ರಿಂದ ಮುಂದಕ್ಕೆ ೬೦ ವರ್ಷಗಳಿಗೊಮ್ಮೆ ಬರುವ ಯಾವ ಪರಾಭವ ವರ್ಷವಾದರೂ ಆಗಬಹುದು.

(೨) 'ಪ್ರಭುದೇವರ ಪುರಾಣ'ದ ಒಂದು ಕಾಗದದ ಪ್ರತಿಯ ಕೊನೆಯಲ್ಲಿ ಅದನ್ನು ಸಿಂಧೂಪುರದ ವಿರಕ್ತಮಠಕ್ಕೆ ಒಡೆಯನಾಗಿದ್ದ ಚರಮೂರ್ತಿ ಹಾವಿಗೀ ಸ್ವಾಮಿಯು ಪ್ಲವಸಂವತ್ಸರ ಭಾದ್ರಪದ ಕೃಷ್ಣ ರವಿವಾರ ಪಂಚಮಿಯ ದಿವಸ ಬರೆದು ಮುಗಿಸಿದಂತೆ ಹೇಳಿದೆ. ಈ ಪ್ಲವ ಸಂವತ್ಸರ ಕ್ರಿ. ಶ. ೧೬೦೧ರಲ್ಲಿ ಬಂದ ವರ್ಷವೇ ಆಗಿರಬೇಕು. ಪ್ರತಿಮಾಡಿದ ಕಾಲವೇ ಕ್ರಿ. ಶ. ೧೬೦೧. ಆದರೆ ಮೂಲ ಅದಕ್ಕಿಂತಲೂ ಬಹಳ ಹಿಂದೆಯೇ ಹುಟ್ಟಿರಬೇಕು. ಇದರಿಂದ ಕವಿಚರಿತಕಾರರು ಕ್ರಿ. ಶ. ೧೬೦೬ ಎಂದು ಕೊಟ್ಟಿರುವ ಕಾಲ ತಪ್ಪಾಗಿದೆಯೆಂದು ವ್ಯಕ್ತವಾಗುತ್ತದೆ.

(೩) ಕವಿ ಹೇಳಿರುವ ಗುಬ್ಬಿಯ ಮಲ್ಲಣ ಯಾರು? ಸು. ೧೪೭೫ರಲ್ಲಿ ಜೀವಿಸಿದ್ದವನೇ ಅಥವಾ ೧೫೧೩, ೧೫೩೦ರಲ್ಲಿ ಜೀವಿಸಿದ್ದವನೇ? ಮೊದಲನೆಯವನು ಎರಡನೆಯವನಿಗೆ ಅಜ್ಜನಾಗಬೇಕು. ಎಳಂದೂರ ಹರೀಶ್ವರ ಹೇಳಿರುವ ಮಲ್ಲಣ ಮೊದಲನೆಯವನಾಗಿದ್ದ ಪಕ್ಷದಲ್ಲಿ ೧೪೮೬ಕ್ಕೆ ಬರುವ ಪರಾಭವ ವರ್ಷವೇ ಪ್ರಕೃತ ಗ್ರಂಥದ ಸಮಾಪ್ತಿಯ ಕಾಲವಾಗಿರಬಹುದು. ಕವಿ ಕ್ರಿ. ಶ. ಸುಮಾರು ೧೪೭೦ರಲ್ಲಿದ್ದ ತೋಂಟದ ಸಿದ್ಧಲಿಂಗನನ್ನು ಹೊಗಳುವುದರಿಂದ ಅವನ ಗ್ರಂಥ ಆ ಕಾಲಕ್ಕಿಂತ ಈಚೆಗೆ ಹುಟ್ಟಿರಬೇಕು.

(೪) ವೃಷಭಪುರದ ಆಗಮಜ್ಞಾನಿ ಸಿದ್ಧವೀರನು ಗೂಳೂರಿನ ಸಿದ್ಧವೀರನೇ; ಗೂಳೂರು ಎಂಬುದರ ಸಂಸ್ಕೃತ ಭಾಷಾಂತರವೇ ವೃಷಭಪುರ. ಇವನ ಗುರು ತೋಂಟದ ಸಿದ್ಧಲಿಂಗ ಯತಿಯ ಶಿಷ್ಯನಾದ ಬೋಳಬಸವ. ಗೂಳೂರು ಸಿದ್ಧವೀರನು ತನ್ನ 'ಶೂನ್ಯಸಂಪಾದನೆ'ಯನ್ನು ರಚಿಸುವಾಗ ಗುಮ್ಮಳಾಪುರದ ಸಿದ್ಧಲಿಂಗ ಯತಿಯ ಸಹಾಯವನ್ನು ಪಡೆದಿದ್ದನು. ಈ ಸಿದ್ಧಲಿಂಗ ಬೋಳಬಸವನ ಶಿಷ್ಯ ನೆಂದೂ ಅವನು ಸಮಾರು ಕ್ರಿ. ಶ. ೧೪೮೦ರಲ್ಲಿ ಜೀವಿಸಿದ್ದನೆಂದೂ ಕವಿಚರಿತ ಕಾರರೇ ಹೇಳುತ್ತಾರೆ. ಆದ್ದರಿಂದ ಗೂಳೂರು ಸಿದ್ಧವೀರನೂ ಗುಮ್ಮಳಾಪುರದ ಸಿದ್ಧಲಿಂಗನೂ ಸಮಕಾಲಿಕರು. ತನ್ನ ಗುರುವಾದ ಸಿದ್ಧವೀರನ ಅಪ್ಪಣೆಯಂತೆ ಎಳಂದೂರು ಹರೀಶ್ವರ ತನ್ನ ಪುರಾಣವನ್ನು ಬರೆದಂತೆ ತಿಳಿಯುವುದರಿಂದ ಆ ಗ್ರಂಥ

ಪೂರ್ತಿಯಾದ ಪರಾಭವವತ್ಸರ ಕ್ರಿ. ಶ. ೧೪೮೬ರಲ್ಲಿ ಬಂದ ಆ ವರ್ಷವೇ ಎಂದು ನಿರ್ಧರಿಸಬಹುದು.

ಬೋಳಬಸವ, ಗುಮ್ಮಳಾಪುರದ ಸಿದ್ಧಲಿಂಗ, ಗೂಳೂರು ಸಿದ್ಧವೀರ ಮತ್ತು ಅವನ ಶಿಷ್ಯ ಕವಿಹರೀಶ್ವರ—ಇವರೆಲ್ಲರೂ ಸಮಕಾಲಿಕರು. ವಯಸ್ಸಿನಲ್ಲಿ ಕೆಲವರು ಹಿರಿಯರು, ಕೆಲವರು ಕಿರಿಯರು.

ಈಗ ಈ ಆಧಾರಗಳನ್ನು ವಿಚಾರಿಸಿ ನೋಡಬೇಕಾಗಿದೆ. ಕ್ರಿ. ಶ. ೧೪೭೦ ರಿಂದ ಈಚೆಗೆ ಪರಾಭವ ಸಂವತ್ಸರ ೧೪೮೬, ೧೫೪೬, ೧೬೦೬, ೧೬೬೬, ೧೭೨೬, ೧೭೮೬, ೧೮೪೬—ಈ ಇಸವಿಗಳಲ್ಲಿ ಬರುತ್ತದೆ. ಇಂಥ ಇಸವಿಯೇ ಎಂದು ನಿಶ್ಚಯಿಸುವುದು ಕಷ್ಟ; ಅದಕ್ಕೆ ತಕ್ಕ ಸಲಕರಣೆ ಕವಿಕಾಲದ ವಿಷಯವನ್ನು ಹೇಳು ವಾಗ ಕೊಟ್ಟಿಲ್ಲ. ಆದ್ದರಿಂದ ಬೇರೆ ಆಧಾರಗಳನ್ನು ಹುಡುಕಬೇಕಾಯಿತು. ಹಾವಿಗೀ ಸ್ವಾಮಿಯು ನಕಲುಮಾಡಿದ ಕಾಗದದ ಪ್ರತಿಯ ಕಾಲ ಕ್ರಿ. ಶ. ೧೬೦೧ ಎಂದು ಶ್ರೀಮಾನ್ ಪುರಾಣೀಕರು ಹೇಳುತ್ತಾರೆ. ಇದು ನಿಜವಿದ್ದರೆ ಮೂಲಗ್ರಂಥ ಸಮಾಪ್ತಿ ಯಾದ ಪರಾಭವವತ್ಸರ ಕ್ರಿ. ಶ. ೧೪೮೬ ಅಥವಾ ೧೫೪೬ ರಲ್ಲಿ ಬರುವ ವರ್ಷವೆಂದು ನಿಸ್ಸಂದೇಹವಾಗಿ ಹೇಳಬಹುದು. ಈ ವಿಷಯದಲ್ಲಿ ಒಂದೆರಡು ಶಂಕೆಗಳು ತಲೆದೋರು ತ್ತವೆ. ಕ್ರಿ. ಶ. ೧೬೦೧ ರಲ್ಲಿ ಕಾಗದದ ಮೇಲೆ ಬರೆಯುವ ವಾಡಿಕೆಯಿತ್ತೆ? ಈ ಕಾಗದದ ಪ್ರತಿ ಪ್ಲವಸಂವತ್ಸರ ಭಾದ್ರಪದ ಕೃಷ್ಣಪಂಚಮಿ ರವಿವಾರ ಹುಟ್ಟಿತೆಂದು ಹೇಳಿದೆ. ಅದು ಕ್ರಿ. ಶ. ೧೬೦೧ ರಲ್ಲಿ ಬರುವ ಪ್ಲವಸಂವತ್ಸರವೇ ಏಕಾಗಬೇಕು? ಸಿಂಧೂಪುರದ ವಿರಕ್ತಮಠ ಯಾವಾಗ ಸ್ಥಾಪಿತವಾಯಿತು? ಆ ಮಠಾಧಿಪತಿಗಳ ಪೀಳಿಗೆಯೂ ಅವರ ಕಾಲಗಳೂ ತಿಳಿದುಬಂದಿವೆಯೆ? ಚರಮೂರ್ತಿ ಹಾವಿಗೀಸ್ವಾಮಿ ಆ ಪೀಳಿಗೆಯಲ್ಲಿ ಎಷ್ಟನೆಯವನು ಮತ್ತು ಆತನ ಕಾಲಯಾವುದು? ಈ ವಿಷಯಗಳನ್ನು ಖಚಿತವಾಗಿ ಗೊತ್ತುಪಡಿಸಿ ಹಾವಿಗೀಸ್ವಾಮಿ ಕ್ರಿ. ಶ. ೧೬೦೧ ರ ಸುಮಾರಿನಲ್ಲಿದ್ದ ನೆಂದು ತೋರಿಸಿದರೆ ಆಗ ಮಾತ್ರ ಕ್ರಿ. ಶ. ೧೬೦೧ ರ ಪ್ಲವವತ್ಸರವೇ ಪ್ರಕೃತ ಕಾಗದದ ಪ್ರತಿ ಲಿಖಿತವಾದ ಕಾಲವೆಂದು ಒಪ್ಪಲಾದೀತು. ಇದಾವುದೂ ಇಲ್ಲದೆ ಬರಿ ಹೇಳಿಕೆಯಿಂದ ಕಾರ್ಯಸಾಧನೆ ಆಗುವುದಿಲ್ಲ. ಕ್ರಿ. ಶ. ೧೮೪೧ ನೆಯ ಇಸವಿ ಪ್ಲವಸಂವತ್ಸರವಾಗಿದ್ದು ಸೆಪ್ಟಂಬರ್ ೫ ನೆಯ ತಾರೀಕು ಪಂಚಮಿ ರವಿವಾರವಾಗು ತ್ತದೆ. ಆದ್ದರಿಂದ ಈ ಕಾಗದದ ಪ್ರತಿ ಕ್ರಿ. ಶ. ೧೮೪೧ ರಲ್ಲಿ ಹುಟ್ಟಿತೆಂದು ಹೇಳಲು ಅವಕಾಶವಿದ್ದೇ ಇದೆ. ಇದರಿಂದ ಕ್ರಿ. ಶ. ೧೮೪೧ ಕ್ಕಿಂತ ಹಿಂದೆ ಹರೀಶ್ವರನ ಪುರಾಣ ರಚಿತವಾಗಿರಬೇಕೆಂದು ಹೇಳಲು ಮಾತ್ರ ಸಾಧ್ಯ. ಹೀಗೆ ಶ್ರೀ ಪುರಾಣೀಕರು ಕೊಟ್ಟಿರುವ ಈ ಆಧಾರದಿಂದ ಹೆಚ್ಚು ಪ್ರಯೋಜನವಿಲ್ಲ.

ಕವಿ ಸ್ಮರಿಸಿರುವ ಗುಬ್ಬಿಯ ಮಲ್ಲಣ ಕ್ರಿ. ಶ. ಸುಮಾರು ೧೪೭೫ ರಲ್ಲಿದ್ದವನೇ ಎಂಬ ಭಾವನೆ ಶ್ರೀಮಾನ್ ಪುರಾಣೀಕರಿಗೆ ಉಂಟಾಗಿರುವಂತೆ ಕಾಣುತ್ತದೆ. ಇದು ಸರಿ ಎಂದು ನಮಗೆ ಕಾಣುವುದಿಲ್ಲ. ಕ್ರಿ. ಶ. ೧೫೧೩ ರಲ್ಲಿ 'ಭಾವಚಿಂತಾರತ್ನ'ವನ್ನೂ ಕ್ರಿ. ಶ. ೧೫೩೦ ರಲ್ಲಿ 'ವೀರಶೈವಾಮೃತ ಪುರಾಣ'ವನ್ನೂ ಬರೆದ ಎರಡನೆಯ ಗುಬ್ಬಿಯ ಮಲ್ಲಣನೇ ಕವಿ ಸ್ತುತಿಸಿರುವ ವ್ಯಕ್ತಿಯೆಂದು ಹೇಳಲು ಆಧಾರವಿದೆ. 'ಭಾವ ಚಿಂತಾರತ್ನ'ದಲ್ಲಿ ಹೇಳಿರುವ ಸತ್ಯೇಂದ್ರ ಚೋಳನ ಕಥೆಯನ್ನು ಎಳಂದೂರು ಹರೀಶ್ವರ ತನ್ನ ಪುರಾಣದಲ್ಲಿ ಸಂಗ್ರಹಿಸಿರುವಂತೆ ಕಾಣುತ್ತದೆ. ೭ನೆಯ ಸಂಧಿ ೧೪೧ನೆಯ ಪದ್ಯದಿಂದ ಹಿಡಿದು ೧೪೭೮ ವರೆಗೆ ಈ ಕಥೆ ಹೇಳಿದೆ. ತಮಿಳಿನಲ್ಲಿದ್ದ ಈ ಕಥೆಯನ್ನು ಗುಬ್ಬಿಯ ಮಲ್ಲಣ ಕನ್ನಡಿಸಿರುವನು. ಎಳಂದೂರ ಹರೀಶ್ವರ ಇದನ್ನೇ ಅನುಸರಿಸಿದ್ದಾನೆ ಎಂದು ಹೇಗೆ ಹೇಳುವುದು, ತಮಿಳಿನ ಕಥೆಯನ್ನೇ ಆತನು ಏಕೆ ಓದಿದ್ದಿರಬಾರದು? ಎಂದು ಆಕ್ಷೇಪಿಸಬಹುದು. ಆತನಿಗೆ ತಮಿಳುಭಾಷೆಯ ಪರಿಚಯವಿದ್ದಿತೆಂದು ಆಧಾರವಿಲ್ಲದೆ ನಂಬುವುದಕ್ಕಿಂತ 'ಭಾವಚಿಂತಾರತ್ನ'ವನ್ನೇ ಓದಿದ್ದನೆಂದು ಹೇಳುವುದು ಹೆಚ್ಚು ಸಂಗತವಾಗಿದೆ. ಷಡಕ್ಷರ ಕವಿ 'ಭಾವಚಿಂತಾರತ್ನ'ದ ಆಧಾರದ ಮೇಲೆ ತನ್ನ 'ರಾಜಶೇಖರ' ವಿಲಾಸವನ್ನು ಬರೆದಂತೆ ಎಳಂದೂರ ಹರೀಶ್ವರನೂ ಆ ಗ್ರಂಥದ ಕಥೆಯನ್ನು ಸಂಗ್ರಹಿಸಿದ್ದಾನೆ. ಅಲ್ಲದೆ ಆ ಇಬ್ಬರು ಗುಬ್ಬಿಯ ಮಲ್ಲಣರಲ್ಲಿ ಎರಡನೆಯವನೇ ಹೆಚ್ಚು ಖ್ಯಾತಿವಂತನಾಗಿದ್ದಾನೆ. ಈ ಕಾರಣಗಳಿಂದ 'ಪ್ರಭುದೇವರ ಪುರಾಣ' ಎರಡನೆಯ ಗುಬ್ಬಿಯ ಮಲ್ಲಣನ ಕಾಲಾನಂತರ ಎಂದರೆ ಕ್ರಿ. ಶ. ೧೫೧೩, ೧೫೩೦ ರಿಂದ ಈಚೆಗೆ ರಚಿತವಾಯಿತೆಂದು ಹೇಳಬಹುದು. ಅದು ಸಮಾಪ್ತಿಯಾದ ಪರಾಭವ ವರ್ಷ ಕ್ರಿ. ಶ. ೧೫೩೦ ರಿಂದ ಈಚೆಗೆ ಬಂದ ಪರಾಭವ ವತ್ಸರಗಳಲ್ಲಿ ಯಾವುದಾದರೂ ಒಂದಾಗಿರಬೇಕು.

ವೃಷಭಪುರ ಎಂಬುದು ಗೂಳೂರು ಎಂಬ ಹೆಸರಿನ ಸಂಸ್ಕೃತ ಭಾಷಾಂತರವೆಂದು ಒಪ್ಪಬಹುದು. ಆದರೆ ಅದು ಆ ಹೆಸರಿನ ಊರೇ ಆಗಿರಬೇಕೆಂದು ಶ್ರೀ ಪುರಾಣೀಕರು ಸಪ್ರಮಾಣವಾಗಿ ಸ್ಥಾಪಿಸಿಲ್ಲ. ಬಸವಾಪುರ, ಬಸವಾಪಟ್ಟಣ—ಎಂಬಿವೇ ಮೊದಲಾದ ಊರುಗಳು ಹಲವಿವೆ. ಪ್ರಕೃತದ ವೃಷಭಪುರ ಇಂಥ ಬಸವಪುರಗಳಲ್ಲಿ ಯಾವುದಾದರೂ ಒಂದು ಆಗಿರಬಹುದು ತಾನೇ. ವೃಷಭಪುರ ಎಂಬ ಹೆಸರನ್ನೇ ಉಳ್ಳ ಊರೊಂದಿದ್ದಿತು. ರಾಯಮುರಾರಿ ಸೋವಿದೇವ ಅಟ್ಟಿಕೊಂಡು ಬಂದಾಗ ಬಸವಣ್ಣನವರು ಉಳಿವೆ ಅಥವಾ ವೃಷಭಪುರಕ್ಕೆ ಓಡಿಹೋದರೆಂದು ರೈಸ್ ಅವರು ಹೇಳಿದ್ದಾರೆ (*Mysore and Coorg from the Inscriptions*, page 80). ಈ ಕಾರಣಗಳಿಂದ ಗೂಳೂರೇ ವೃಷಭಪುರವೆಂದು ನಂಬುವುದು ಕಷ್ಟವಾಗಿದೆ. ಆದ್ದರಿಂದ ವೃಷಭಪುರದ

ಸಿದ್ಧವೀರನು ಗೂಳೂರಿನ ಸಿದ್ಧವೀರನೇ ಎಂಬ ವಾದ ನಿಲ್ಲಲಾರದು. ಬೋಳಬಸವ, ಅವನ ಶಿಷ್ಯ ಗುಮ್ಮಳಾಪುರದ ಸಿದ್ಧವೀರ—ಇವರಿಗೂ ಈ ವೃಷಭಪುರದ ಸಿದ್ಧವೀರ ನಿಗೂ ಯಾವ ಸಂಬಂಧವೂ ಇರಲಿಲ್ಲವೆಂದು ವಾದಿಸಬಹುದು. ಅಲ್ಲದೆ ಸಿದ್ಧವೀರ ಎಂಬ ಹೆಸರಿನ ಕವಿಗಳೂ ಗುರುಗಳೂ ಒಬ್ಬಿಬ್ಬರಿದ್ದಾರೆ. ಒಬ್ಬನು ಸು. ಕ್ರಿ. ಶ. ೧೬೦೦ ರಲ್ಲಿದ್ದ ಸಂಪಾದನೆಯ ಸಿದ್ಧವೀರ; ಇನ್ನೊಬ್ಬನು ಸು. ಕ್ರಿ. ಶ. ೧೭೦೦ ರಲ್ಲಿದ್ದ ಸಂಜಕವಿಯ ಗುರು. ಹೀಗೆಯೇ ಇನ್ನೂ ಹಲವರು ಸಿದ್ಧವೀರರಿದ್ದಿರಬಹುದು. ಅವರಲ್ಲಿ ವೃಷಭ ಪುರದ ಸಿದ್ಧವೀರನೂ ಒಬ್ಬ, ಇಷ್ಟೆ.

ಹೀಗೆ 'ಪ್ರಭುದೇವರ ಪುರಾಣ' ಸಮಾಪ್ತಿಗೊಂಡ ಕಾಲ ಕ್ರಿ. ಶ. ೧೪೮೬ ಎಂಬ ಸಿದ್ಧಾಂತಕ್ಕೆ ಶ್ರೀಮಾನ್ ಪುರಾಣೀಕರು ಒದಗಿಸಿರುವ ಆಧಾರಗಳಲ್ಲಿ ಅನೇಕ ಸಂದಿಗ್ಧ ವಿಷಯಗಳಿವೆಯೆಂದೂ ಆದ್ದರಿಂದ ಅವರು ಕೊಟ್ಟಿರುವ ಕಾಲ ಸರಿಯಾಗಿರ ಲಾರದೆಂದೂ ತಿಳಿದಹಾಗಾಯಿತು. ಕವಿ ಹೊಗಳಿರುವ ಗುಬ್ಬಿಯ ಮಲ್ಲಣನು ೧೫೧೩, ೧೫೩೦ ರಲ್ಲಿದ್ದ ಎರಡನೆಯ ಗುಬ್ಬಿಯ ಮಲ್ಲಣನಿರಬೇಕೆಂದು ಮೇಲೆ ತೋರಿಸಿದೆ. ಆದ್ದರಿಂದ ೧೫೩೦ ರಿಂದ ಈಚೆಗೆ ಎಳಂದೂರ ಹರೀಶ್ವರ ತನ್ನ ಪುರಾಣ ವನ್ನು ಬರೆದನೆಂಬುದು ಸ್ಪಷ್ಟವಾಗಿದೆ. ಇದಕ್ಕೆ ಪೋಷಕವಾಗಿ ಒಂದು ಸಣ್ಣ ಅಂಶವನ್ನು ಇಲ್ಲಿ ಸೂಚಿಸಬಹುದು. 'ಪರಂಗಿಯರು' ಎಂಬ ಪದವನ್ನು ಹರೀಶ್ವರ ತನ್ನ ಕಾವ್ಯದಲ್ಲಿ (೬-೧೨೦) ಬಳಸಿದ್ದಾನೆ. ಈ ಶಬ್ದ ಪೋರ್ಚುಗೀಸ್ ಭಾಷೆಯ Frank ಎಂಬುದರ ರೂಪಾಂತರ. ಪೋರ್ಚುಗೀಸರು ಭರತಖಂಡಕ್ಕೆ ಕ್ರಿ.ಶ. ೧೪೯೮ ರಲ್ಲಿ ಮೊದಲನೆಯ ಸಲ ಬಂದು ಆಮೇಲೆ ಕ್ರಿ.ಶ. ೧೫೧೦ ರಲ್ಲಿ ಗೋವೆ ಪಟ್ಟಣವನ್ನು ಆಕ್ರಮಿಸಿ ಇಲ್ಲಿ ರಾಜ್ಯ ಹೂಡಿದರು. ಇದಾದ ಮೇಲೆ ತಾನೆ Frank ಎಂಬ ಪದ ಕನ್ನಡಿಗರಿಗೆ ಪರಿಚಯವಾಗಿ ಪರಂಗಿ ಎಂದು ರೂಪಾಂತರಗೊಂಡು ಸಾಹಿತ್ಯ ದೊಳಕ್ಕೂ ಕಾಲಿಟ್ಟಿರಬೇಕು. ಪರ್ವತ ಶಿವಯೋಗಿ ಸು ೧೬೫೦ ರಲ್ಲಿದ್ದನೆಂದೂ ಅವನು 'ಬಾಲೇಂದುಪುರದ ಹರೀಶ್ವರ ಶಾಂತವೀರೇಶ್ವರ ಕರಸರಸಿಜಜಾತ'ನೆಂದೂ ಕವಿಚರಿತೆಯಿಂದ ತಿಳಿದುಬರುತ್ತದೆ (II-397). ಇಲ್ಲಿರುವ ಬಾಲೇಂದುಪುರದ ಹರೀ ಶ್ವರ ಪ್ರಕೃತ ಪುರಾಣಕರ್ತನಾದ ಎಳಂದೂರ ಹರೀಶ್ವರನೆಂಬುದು ಮನವರಿಕೆ ಯಾಗದಿರದು. ಆದ್ದರಿಂದ ಆ ಕವಿ ಕ್ರಿ.ಶ. ೧೫೩೦ ರಿಂದ ಈಚೆಗೂ ಸು ೧೬೫೦ ರಿಂದ ಹಿಂದಕ್ಕೂ ಇರುವ ಅಂತರದಲ್ಲಿ ಯಾವಾಗಲೋ ಬಾಳಿರಬೇಕು. ಈ ಅವಧಿ ಯಲ್ಲಿ ಪರಾಭವವರ್ಷ ೧೫೪೬, ೧೬೦೬—ಈ ಎರಡು ವರ್ಷಗಳಲ್ಲಿ ಬರುತ್ತದೆ. ಈ ಎರಡರಲ್ಲಿ ಯಾವುದೋ ಒಂದು ಹರೀಶ್ವರ ತನ್ನ ಗ್ರಂಥ ಮುಗಿಸಿದ ವರ್ಷವಾಗಿರ ಬೇಕು; ಅಲ್ಲದೆ ಅದು ಪರ್ವತ ಶಿವಯೋಗಿಯ ಕಾಲಕ್ಕೆ ಸಮೀಪತರವಾದದ್ದು

ಆಗಿರಬೇಕು. ಈ ಕಾರಣಗಳಿಂದ ಕವಿಚರಿತಕಾರರು ಕೊಟ್ಟಿರುವ ಕಾಲವನ್ನು ಶತಮಾನಗಳಷ್ಟು ಹಿಂದಕ್ಕಾಗಲಿ ಮುಂದಕ್ಕಾಗಲಿ ಕದಲಿಸಲು ಇನ್ನೂ ಬಲವತ್ತರವಾದ ಆಧಾರಗಳು ದೊರೆತ ಹೊರತು ಸಾಧ್ಯವಾಗದು. ಶ್ರೀಮಾನ್ ಪುರಾಣೀಕರು ತಾವು ಕವಿಗೆ ಕೊಟ್ಟಿರುವ ಕಾಲವನ್ನು ಸಪ್ರಮಾಣವಾಗಿ ಸಾಧಿಸುವುದರಲ್ಲಿ ಕೃತಕೃತ್ಯರಾಗಿಲ್ಲವೆಂದು ಹೇಳಬೇಕಾಗಿದೆ.

ಈ ಗ್ರಂಥದ ಪಾಠಶೋಧನೆಯ ವಿಷಯವಾಗಿ ಸಂಪಾದಕರು ನಮ್ರತೆಯಿಂದಲೂ ಪ್ರಾಮಾಣಿಕತೆಯಿಂದಲೂ ಕೂಡಿದ ಮಾತುಗಳನ್ನು ಹೇಳಿದ್ದಾರೆ. "ಸುಮಾರು ಮೂರು ಶತಮಾನಗಳ ವರೆಗೆ ಕನ್ನಡ ಭಾಷೆಯ ಗ್ರಂಥ ಸಹವಿಲ್ಲದ . . . ಗ್ರಾಮಗಳಲ್ಲಿ ದೊರೆತ ಮೂರೇ ಪ್ರತಿಗಳ ಆಧಾರವನ್ನು ತೆಗೆದುಕೊಂಡಿರುವೆವು; ಅಲ್ಲದೆ ಅವುಗಳ ಮೇಲಿಂದ ಅಚ್ಚು ಮಾಡಲಿಕ್ಕೆ ಕೊಡುವ ಪ್ರತಿಯೊಂದನ್ನು ತಯಾರಿಸುವಾಗ್ಗೆ ನಮ್ಮ ದೃಷ್ಟಿ ಹಾಗು ಹಸ್ತದೋಷಗಳಾದರೂ ಆಗಿರಬಹುದು. ಮೇಲಾಗಿ ಇದು ವ್ಯಕ್ತಿಯ ಪ್ರಯತ್ನವು." ಇದರ ಮೇಲೆ ಇಲ್ಲಿ ಹೇಳಬೇಕಾದದ್ದು ಏನೂ ಇಲ್ಲ. ". . . ಪಂಡಿತರು ಕೂಡಿಕೊಂಡು ಎಲ್ಲರಿಗೂ ಯೋಗ್ಯಕಂಡ ಪ್ರಯೋಗಗಳನ್ನು ಮೇಲೆ ಇಟ್ಟು, ಉಳಿದ ಪಾಠಾಂತರಗಳನ್ನು ಕೆಳಗೆ ಟಿಪ್ಪಣಿಗಳಲ್ಲಿ ಕೊಟ್ಟು, ಕೆಲವು ಪುಸ್ತಕಗಳನ್ನು ಈಚೆಗೆ ಅಚ್ಚು ಹಾಕಿಸಿದಂತೆ ಈ ಗ್ರಂಥವನ್ನೂ ಅಚ್ಚು ಮಾಡಿಸಿದರೆ ಕವಿಯ ನಿಜವಾದ ಬಣ್ಣವು ಹೊರಬೀಳುವುದು" ಎಂದು ಸಂಪಾದಕರು ಹೇಳಿರುವ ಮಾತು ಯಥಾರ್ಥವಾಗಿದೆ.

ಗ್ರಂಥದ ಕೊನೆಯಲ್ಲಿರುವ ಶಬ್ದಕೋಶದಿಂದ ಓದುವವರಿಗೆ ಉಪಕಾರವಾಗಿದೆ. ಆ ಪದಗಳು ದೊರೆಯುವ ಸಂಧಿ ಮತ್ತು ಪದ್ಯಗಳ ಸಂಖ್ಯೆಗಳನ್ನೂ ಕೊಟ್ಟಿದ್ದರೆ ಇನ್ನೂ ಹೆಚ್ಚು ಪ್ರಯೋಜನವಾಗುತ್ತಿತ್ತು.

ಪ್ರಸ್ತಾವನೆಯಲ್ಲಿ ಸಂಪಾದಕರು ಹೇಳಿರುವ ಇತರ ವಿಷಯಗಳು ಯೋಗ್ಯವಿವೆ. ಕವಿಯ ಸ್ಫೂರ್ತಿ, ಅವನ ವೈಶಿಷ್ಟ್ಯ, ಆತನ ನಿಸ್ಪೃಹತೆ—ಇವೇ ಮುಂತಾದ ವಿಮರ್ಶೆಗಳೂ ಟೀಕೆಗಳೂ ಗ್ರಂಥದ ಗೌರವಕ್ಕೆ ತಕ್ಕುವಾಗಿವೆ. ಇದುವರೆಗೂ ಬೆಳಕನ್ನು ಕಾಣದಿದ್ದ ಈ ಪುರಾಣವನ್ನು ಬಯಲಿಗೆ ತಂದು ಶ್ರೀ ಪುರಾಣೀಕರು ಕೀರ್ತಿಶಾಲಿಗಳಾಗಿದ್ದಾರೆ. ಅವರ ಪರಿಶ್ರಮದಿಂದ ಇನ್ನೂ ಮುದ್ರಿತವಾಗದೆ ನಿಂತಿರುವ ಹಲವು ಉದ್ಗ್ರಂಥಗಳಲ್ಲಿ ಕೆಲವಾದರೂ ಅಚ್ಚಾಗಿ ಹೊರಬೀಳುವುವೆಂದು ನಿರೀಕ್ಷಿಸಬಹುದು.

ಡಿ. ಎಲ್. ಎನ್.

———

**ಎಕ್ಸ್-ರೇ**—ಲೇಖಕರು: ಶ್ರೀಮಾನ್ ಯು. ರಾಘವೇಂದ್ರಾಚಾರ್ಯ, ಬಿ.ಎಸ್‌ಸಿ. (ಆನರ್ಸ್), ಫಿಸಿಕ್ಸ್ ಲೆಕ್ಚರರ್, ಲೊಯೋಲಾ ಕಾಲೇಜು, ಮದ್ರಾಸು. ಪುಟಗಳು xvii + ೯೨. ಮುದ್ರಣಕಾರರು: ಮದರಾಸ್ ಆಂಟಿಸೆಪ್ಟಿಕ್ ಪ್ರೆಸ್. ಬೆಲೆ ?

ಇದು ದೇಶಭಾಷೆಗಳಲ್ಲಿ ನವೀನಶಾಸ್ತ್ರ ಪುಸ್ತಕಗಳ ಪ್ರಚಾರವನ್ನು ಅಭಿವೃದ್ಧಿಗೊಳಿಸುವುದಕ್ಕಾಗಿ ಮದರಾಸ್ ವಿಶ್ವವಿದ್ಯಾನಿಲಯದ ೧೯೩೯-೪೦ನೆಯ ಇಸವಿಯ ಬಹುಮಾನವನ್ನು ಪಡೆದ ಪುಸ್ತಕ. ಮದರಾಸ್ ಲೆಜಿಸ್ಲೇಟಿವ್ ಕೌನ್ಸಿಲ್ ಪ್ರೆಸಿಡೆಂಟರಾದ ಡಾ|| ಯು. ರಾಮರಾಯರು ಪುಸ್ತಕಕ್ಕೆ ಮುನ್ನುಡಿಯನ್ನು ಬರೆದಿದ್ದಾರೆ.

ವಿಜ್ಞಾನಶಾಸ್ತ್ರದ ವಿಷಯವಾಗಿ ಕನ್ನಡ, ತೆಲುಗು, ಹಿಂದೂಸ್ತಾನಿ ಮುಂತಾದ ದೇಶೀಯ ಭಾಷೆಗಳಲ್ಲಿ ಪುಸ್ತಕಗಳನ್ನು ಬರೆಯುವುದೂ ಉಪನ್ಯಾಸಮಾಡುವುದೂ ಸ್ವಲ್ಪ ಶ್ರಮಸಾಧ್ಯವಾದ ಕೆಲಸವೇ. ಇದಕ್ಕೆ ವಿಜ್ಞಾನಶಾಸ್ತ್ರದಲ್ಲಿ ಪ್ರತಿಯೊಂದು ಹೆಜ್ಜೆಗೂ ಬರುವ ಜನಸಾಮಾನ್ಯದ ಅನುಭವಗಳಿಗೆ ದೂರವಾದ, ವಿಷಯಗಳ ನಿರೂಪಣೆಯ ಆವಶ್ಯಕತೆ ಮತ್ತು ಶಾಸ್ತ್ರೀಯ ಪದಗಳಿಗೆ ಸರಿಯಾದ ಪಾರಿಭಾಷಿಕ ಪದಗಳ ಅಭಾವ—ಇವೇ ಮುಖ್ಯಕಾರಣಗಳು. ಶಾಸ್ತ್ರೀಯ ಪದಗಳಿಗೆ ಸರಿಯಾದ ಪಾರಿಭಾಷಿಕ ಪದಗಳನ್ನು ಇತ್ಯರ್ಥಮಾಡಿ ಎಲ್ಲರಿಗೂ ಸಮ್ಮತವಾದ ಒಂದು ಕೋಶವನ್ನು ಪ್ರಚುರಪಡಿಸುವ ವರೆಗೂ ವಿಷಯ ಪ್ರತಿಪಾದನೆಯ ಕಷ್ಟದ ಜೊತೆಗೆ ಅನಿರ್ಣೀತ ಪಾರಿಭಾಷಿಕ ಶಬ್ದಗಳ ತೊಂದರೆಯೂ ಉಂಟಾಗುವುದು. ಉದಾಹರಣೆಗಾಗಿ ಈ ಪುಸ್ತಕದಲ್ಲಿ Alternative Current ಎಂಬುದನ್ನು ಆವರ್ತಕ ಪ್ರವಾಹ ಎಂದು ಭಾಷಾಂತರಮಾಡಿರುವರು. ಇನ್ನು ಕೆಲವರು ಇದನ್ನು ಪರ್ಯಾಯ ಪ್ರವಾಹ, ವ್ಯತ್ಕ್ರಮ ಪ್ರವಾಹ ಎಂದು ವ್ಯವಹರಿಸಿರುವರು.

ಈ ಪುಸ್ತಕದ ಲೇಖಕರು ಸಾಧ್ಯವಾದ ಕಡೆಗಳಲ್ಲೆಲ್ಲಾ ಸುಲಭವಾಗಿ ಗೊತ್ತಾಗುವ ಪಾರಿಭಾಷಿಕ ಪದಗಳನ್ನು ಉಪಯೋಗಿಸಿ, ಅಸಾಧ್ಯವಾದ ಕಡೆಗಳಲ್ಲಿ ರೂಢಿಯಲ್ಲಿರುವ ಆಂಗ್ಲೇಯ ಶಬ್ದಗಳನ್ನೇ ಉಪಯೋಗಿಸಿರುವರು. Transformer ಎಂಬುದನ್ನು ಪರಿವರ್ತಕ (ಪು. ೩೧) ಎಂದು ಕರೆದ ಮೇಲೆ, Induction Coil ಎಂಬುದನ್ನು ಇಂಡಕ್ಷನ್ ಕಾಯಿಲ್ (ಪು. ೩೦) ಎಂಬುದರ ಬದಲಾಗಿ 'ಪ್ರೇರಕ ಯಂತ್ರ' ಎಂದು ಕರೆಯಬಹುದಾಗಿತ್ತು. Helium (ಪು. ४೮) ಎಂಬುದನ್ನು ಅರ್ಕಾನಿಲ (ಸೂರ್ಯನಲ್ಲಿ ಮೊದಲು ಕಂಡುಹಿಡಿಯಲ್ಪಟ್ಟಿದ್ದರಿಂದ) ಎಂದು ಭಾಷಾಂತರಿಸಬಹುದು. ಸಿಲ್ಕು (ಪು. ೫೪) ಎಂಬುದನ್ನು ರೇಷ್ಮೆ ಎಂದೂ, ಮಮ್ಮಿಗಳು (ಪು. ೫೬) ಎಂಬುದನ್ನು ಸುಗಂಧ ದ್ರವ್ಯಪೋಷಿತ ಶವಗಳೆಂದೂ ವ್ಯವಹರಿಸಬಹುದು. Organic ಎಂಬುದನ್ನು ಸಚೇತನ (ಪು. ೬೮) ಎಂದು ಭಾಷಾಂತರಿಸಿರುವುದು

ಚೇತನಾಚೇತನಗಳ ವಿಚಾರವಾಗಿ ಹೆಚ್ಚು ವಿಚಾರಮಾಡುವ ನಮ್ಮ ದೇಶದವರಿಗೆ ಭ್ರಮೆಯನ್ನುಂಟುಮಾಡುವುದು. Organic ಎಂಬುದು ಅಚೇತನದ ರೂಪಾಂತರವೇ ಹೌದು.

ಮುನ್ನುಡಿಯಲ್ಲಿ ಡಾ|| ರಾಮರಾಯರು ಹೇಳಿರುವಂತೆ ಗ್ರಂಥಕರ್ತರು ತಮ್ಮದೇ ಒಂದು ನವೀನಮಾರ್ಗದಲ್ಲಿ ಗ್ರಂಥವನ್ನು ಬರೆದಿರುವರು. ಎಕ್ಸ್-ರೇ ಎಂಬುದನ್ನು ಯಾರು ಹೇಗೆ ಕಂಡುಹಿಡಿದರು ಎಂದು ತಿಳಿಸುವುದಕ್ಕೆ ಪೂರ್ವದಲ್ಲಿಯೇ ಎಕ್ಸ್-ರೇ ಎಂಬುದು ಒಂದು ಪ್ರಕಾಶ ವಿಶೇಷ ಎಂದು ತಿಳಿಸಿ ಪ್ರಕಾಶ ಎಂದರೇನು ಎಂಬುದನ್ನು ಪ್ರಥಮ ಪ್ರಕರಣದಲ್ಲಿ ಬಹಳ ಸುಲಭವಾದ ರೀತಿಯಲ್ಲಿ ತಿಳಿಸಿರುವರು. ಎಕ್ಸ್-ರೇಯ ಪ್ರಥಮ ಶೋಧನೆ ಎಂಬುದಾಗಿ ಎರಡನೆಯ ಪ್ರಕರಣದಲ್ಲಿ ಈ ನೂತನ ಕಿರಣಗಳು ಹೇಗೆ ಕಂಡುಹಿಡಿಯಲ್ಪಟ್ಟುವೆಂಬುದನ್ನು ವಿವರಿಸಿದೆ. ಮೂರನೆಯ ಪ್ರಕರಣದಲ್ಲಿ ಎಕ್ಸ್-ರೇಯ ಉಪಕರಣಗಳಾದ ಎಕ್ಸ್-ರೇ ನಳಿಗೆಗಳು, ಪ್ರೇರಕ ಯಂತ್ರಗಳು ಮತ್ತು ಪರಿವರ್ತಕ ಯಂತ್ರಗಳು—ಇವೇ ಮುಂತಾದುವುಗಳು ಹೇಗೆ ಕೆಲಸಮಾಡುವುವು ಎಂಬ ವಿಷಯವು ಪ್ರಸ್ತಾಪಿಸಲ್ಪಟ್ಟಿದೆ. ಪರಿವರ್ತಕ ಯಂತ್ರಗಳ ತತ್ವನಿರೂಪಣೆಯಲ್ಲಿ ವಿದ್ಯುಚ್ಛಕ್ತಿಗೂ ಆಕರ್ಷಕಶಕ್ತಿಗೂ ಇರುವ ಅನ್ಯೋನ್ಯವಾದ ನಿಕಟ ಸಂಬಂಧವು ಪ್ರಾಮುಖ್ಯವಾದುದು. ಆಕರ್ಷಕ ರೇಖೆಗಳಿಗೂ (Magnetic lines of force) ಮತ್ತು ಒಂದು ಲೋಹದ ತಂತಿಯ ಸುರುಳಿಗೂ ಪರಸ್ಪರ ಚಲನೆ (Relativc motion) ಯುಂಟಾದಾಗ ವಿದ್ಯುತ್ಪ್ರವಾಹವು ಪ್ರೇರಿತವಾಗುವುದೆಂಬ ಮುಖ್ಯಪ್ರಮೇಯವು ಈ ಭಾಗದಲ್ಲಿ ಪ್ರತಿಪಾದಿತವಾಗಿದ್ದಿದ್ದರೆ ಚೆನ್ನಾಗಿರುತ್ತಿತ್ತು. ಎಕ್ಸ್-ರೇಯಿಂದ ರೋಗಪರೀಕ್ಷೆ ಮತ್ತು ಚಿಕಿತ್ಸೆ ಎಂಬವುಗಳು ಕ್ರಮವಾಗಿ ನಾಲ್ಕನೆಯ ಮತ್ತು ಐದನೆಯ ಪ್ರಕರಣಗಳಲ್ಲಿ ವಿಚಾರಪೂರಿತವಾಗಿ ತಿಳಿಸಲ್ಪಟ್ಟಿವೆ. ಪ್ರಾಸಂಗಿಕವಾಗಿ ಈ ಪ್ರಕರಣಗಳಲ್ಲಿ ಫೋಟೋಗ್ರಾಫಿಕ್ ಪ್ಲೇಟ್‌ಗಳ ತಯಾರಿಕೆಯ ವಿಷಯವೂ ಹೇಳಲ್ಪಟ್ಟಿರುವುದು. Fluorescent screen ಎಂಬುದನ್ನು (ಪು. ೩೩) ಅದೃಶ್ಯಕಿರಣ ದರ್ಶಕ ಎಂದು ಭಾಷಾಂತರಿಸಿರುವುದು ತಪ್ಪು ಭಾವನೆಗೆ ಅವಕಾಶಕೊಡುವುದು. Fluorescence ಎಂದರೆ ಅದೃಶ್ಯಕಿರಣಗಳು ದೃಶ್ಯವಾದ ಬೇರೆ ಕಿರಣಗಳನ್ನು ಉಂಟು ಮಾಡುವಿಕೆ. ಅದೃಶ್ಯಕಿರಣಗಳು ದೃಶ್ಯವಾಗುವುದಿಲ್ಲ; ದೃಶ್ಯವಾದ ಕಿರಣಗಳನ್ನುಂಟು ಮಾಡುವುದರಿಂದ ಅದೃಶ್ಯಕಿರಣಗಳ ಇರುವಿಕೆಯು ಸೂಚಿತವಾಗುವುದು. ಆದುದರಿಂದ 'ದರ್ಶಕ' ಎಂಬುದನ್ನು 'ಸೂಚಕ' ಎಂದು ಬದಲಾಯಿಸಬಹುದು. ಈಗಿನ ಕಾಲದ ಅನೇಕ ಕೈಗಾರಿಕೆಗಳಲ್ಲಿ ಎಕ್ಸ್-ರೇ ಛಾಯಾ ಚಿತ್ರದ (Shadowgraph) ಉಪಯೋಗವು ಬಹಳ. ಈ ವಿಷಯವು ಆರನೆಯ ಪ್ರಕರಣದಲ್ಲಿ ಹೇಳಲ್ಪಟ್ಟಿರುವುದು.

ಏಳನೆಯ ಪ್ರಕರಣದಲ್ಲಿ ಹರಳಿನ ರಚನೆಯ ವಿಚಾರವಾಗಿ ಎಕ್ಸ್-ರೇ ಮೂಲಕವಾಗಿ ನಮಗೆ ಜ್ಞಾನವು ಹೇಗೆ ಅಭಿವೃದ್ಧಿಹೊಂದಿದೆ ಎಂಬುದು ವಿಚಾರಮಾಡಲ್ಪಟ್ಟಿರುವುದು. ಹತ್ತಿಯನೂಲು, ತಲೆಕೂದಲು, ಗರಿ, ನಾರು ಮುಂತಾದುವುಗಳೂ ಹರಳಿನ ಜಾತಿಗೆ ಸೇರಿದವುಗಳೆಂಬ ವಿಷಯವು ಈ ಪ್ರಕರಣದಲ್ಲಿ ಹೇಳಲ್ಪಟ್ಟಿರುವುದು. ಎಕ್ಸ್‌ರೇ ಎಂದರೇನು ಎಂದು ಪ್ರಥಮ ಪ್ರಕರಣದಲ್ಲಿ ಸೂಕ್ಷ್ಮವಾಗಿ ತಿಳಿಸಿರುವುದನ್ನು ಎಕ್ಸ್-ರೇಯ ಭೌತಿಕಶಾಸ್ತ್ರವೆಂಬ ಎಂಟನೆಯ ಪ್ರಕರಣದಲ್ಲಿ ವಿಸ್ತಾರವಾಗಿ ತಿಳಿಸಿರುವರು, ಎಕ್ಸ್-ರೇ ಭೌತಶಾಸ್ತ್ರದಲ್ಲಿನ ಕಠಿಣ ವಿಷಯಗಳನ್ನು ಒಂದನ್ನೂ ಬಿಡದೆ ಕೂಲಂಕಷವಾಗಿಯೂ ಸುಲಭವಾಗಿಯೂ ತಿಳಿಸಿರುವರು.

ಪುಸ್ತಕವು ಅಂದವಾಗಿ ಅಚ್ಚುಹಾಕಲ್ಪಟ್ಟು ಅನೇಕ ಚಿತ್ರಗಳಿಂದಲೂ ಭಾವಚಿತ್ರಗಳಿಂದಲೂ ಕೂಡಿ ಆದರಣೀಯವಾಗಿಯೂ ಉಪಯುಕ್ತವಾಗಿಯೂ ಇರುವುದು.

ಈಗಿನ ಕಾಲದಲ್ಲಿ ಎಕ್ಸ್-ರೇ ಎಂಬ ಹೆಸರನ್ನು ಕೇಳದವರೂ, ಅದರಿಂದ ಯಾವುದಾದರೂ ಒಂದು ರೀತಿಯಲ್ಲಿ ಉಪಯೋಗವನ್ನು ಹೊಂದದವರೂ ಅಪರೂಪ. ಆದುದರಿಂದ ಜನಸಾಮಾನ್ಯರಿಗೂ ಸುಲಭವಾಗಿ ಎಕ್ಸ್-ರೇ ಎಂದರೇನು ಎಂಬುದನ್ನು ಸರಳವಾದ ರೀತಿಯಲ್ಲಿ ಅರ್ಥವಾಗುವಂತೆ ಬರೆದಿರುವ ಈ ಗ್ರಂಥಕರ್ತರಿಗೆ ನಮ್ಮ ನಾಡಿನವರೆಲ್ಲರೂ ಋಣಿಗಳು. ಇಂಥ ಒಳ್ಳೆಯ ಗ್ರಂಥವನ್ನು ಬರೆದಿರುವುದಕ್ಕಾಗಿ ಅವರನ್ನು ನಾವು ಈ ಮೂಲಕ ಮನಃಪೂರ್ವಕವಾಗಿ ಅಭಿನಂದಿಸುತ್ತೇವೆ.

ಬಿ. ಎ. ಕೃ.

---

**ಗ್ರಾಮಪಂಚಾನನ**—(ಸಾಮಾಜಿಕ ಕಾದಂಬರಿ, ಮನೋಹರ ಗ್ರಂಥಮಾಲೆಯ ೪೧ನೆಯ ಕುಸುಮ)—ಲೇಖಕರು : ಶ್ರೀಮಾನ್ ಬಾ. ಕೃ. ಲಕ್ಷ್ಮೀಶ್ವರ; ಪ್ರಕಾಶಕರು : ಮನೋಹರ ಗ್ರಂಥಪ್ರಕಾಶನ ಸಮಿತಿ, ಧಾರವಾಡ; ಕ್ರೌನ್. ಅ. ೫ + ೩ + ೧೧೨; ಬೆಲೆ, ೧೨ ಆಣೆ.

ಇದು ಒಂದು ಸಾಮಾಜಿಕ ಕಾದಂಬರಿ. ಸಜ್ಜನರ ಸಂಸಾರದಲ್ಲಿ ಕುಟಿಲ ತಂತ್ರದ ಕಳಿಂಗರು ಸೇರಿ ಹೇಗೆ ಅವರ ಸೌಖ್ಯದ ಸರ್ವನಾಶವನ್ನೆಸಗುತ್ತಾರೆಂಬುದು ಈ ಕಾದಂಬರಿಯ ಕಥಾವಸ್ತು.

ಬೊಮ್ಮಗೇರಿಯ ದೇಸಗತ್ತಿಯು ಶ್ರೀಪತಿರಾಯರಿಗೆ ಸೇರಿದುದು. ಅವರು ಶ್ರೀಮಂತರೂ, ವಿನಯಶೀಲರೂ, ಧರ್ಮಿಷ್ಠರೂ, ಧಾರಾಳಿಗಳೂ ಆಗಿದ್ದು ಆ ಊರಿನ ಜನರಿಗೆ ಅಚ್ಚುಮೆಚ್ಚಾಗಿದ್ದರು. ಅವರಿಗೆ ಮಕ್ಕಳಿಲ್ಲದುದರಿಂದ ವಿದ್ಯಾಭ್ಯಾಸ ಮಾಡಲು ಆಸೆಯಿರುವ ಹುಡುಗರನೇಕರು ಅವರ ಮನೆಯಲ್ಲಿರುತ್ತಿದ್ದರು. ದೇಸಾಯರ ಹೆಂಡತಿ ಚಂದ್ರಾವತೀಬಾಯಿಯವರು ಅನೇಕ ವ್ರತ, ನಿಯಮ ನಿಷ್ಠೆಗಳನ್ನು ಮಾಡಿದ್ದರೂ ಯಾವ ಪ್ರಯೋಜನವೂ ಆಗಿರಲಿಲ್ಲ. ಆದುದರಿಂದಲೆ ಇತರರ ಮಕ್ಕಳನ್ನು

ಕಂಡರೆ ಅವರಿಗೂ ಅಷ್ಟು ಪ್ರೀತಿ. ದೇಸಾಯರಿಗೆ ಸ್ನೇಹಿತರಾದ ಗೋಪಾಳರಾಯರು ತಮ್ಮ ಮಗನಾದ ಒಡಕಣ್ಣನನ್ನು ಮುಂದಲ ವಿದ್ಯಾಭ್ಯಾಸಕ್ಕೆಂದು ಬೊಮ್ಮಗೇರಿಗೆ ತಂದುಬಿಟ್ಟರು. ಇದು ಕಥೆಗೆ ಮೂಲ. ತನ್ನ ಹೆಸರಿಗೆ ತಕ್ಕಂತೆ ದೇಸಾಯರ ಮನೆಯನ್ನು ಒಡಕಣ್ಣನು ಹೇಗೆ ಒಡೆದ ನೆಂಬುದೇ ಮುಂದಿನ ಕಥೆ.

ಒಡಕಣ್ಣನು ಮನೆಗೆಲಸವನ್ನು ಮಾಡುವುದರಲ್ಲಿ ತತ್ಪರನಾಗಿದ್ದನು. ಅದರಲ್ಲೂ ಚಂದ್ರಾವತೀ ಬಾಯಿಯವರ ಉಪಚಾರವನ್ನಂತೂ ಕೈಕಟ್ಟಿಕೊಂಡು ಮಾಡುತ್ತಿದ್ದನು; ಆದುದರಿಂದ ಅವರಿಗೆ ಒಡಕಣ್ಣನು ಅಚ್ಚುಮೆಚ್ಚಾದನು. ಹದಿನಾಲ್ಕು ವರ್ಷ ವಯಸ್ಸಿನವನಾದರೂ ಹಳ್ಳಿಯ ಕುಟಿಲ ತಂತ್ರದಲ್ಲಿ ಬಲು ನಿಪುಣನಾಗಿದ್ದನು ಒಡಕಣ್ಣ. ಶಾಲೆಯನ್ನು ಸೇರಿದ್ದಾಯಿತು. ಒಡಕಣ್ಣ ಸ್ವಲ್ಪ ದಿನಗಳಲ್ಲಿಯೇ ಊರಿನ ತುಂಟ ಹುಡುಗರನ್ನೆಲ್ಲಾ ಸೇರಿಸಿ ಉಪಾಧ್ಯಾಯರ ಕುರ್ಚಿಗೆ ಮುಳ್ಳು ಚುಚ್ಚುವುದು, ಮೂಕರ್ಜಿ ಬರೆಯುವುದು ಮುಂತಾದುವುಗಳಿಂದ ಇಬ್ಬರು ಉಪಾಧ್ಯಾಯರಿಗೆ ತೊಂದರೆಯುಂಟಾಯಿತು. ಒಬ್ಬರು ಊರನ್ನೇ ಬಿಡಬೇಕಾಯಿತು. ಈ ರೀತಿಯಲ್ಲಿ ಪ್ರಾರಂಭ ವಾಯಿತು ಒಡಕಣ್ಣನ ದಿಗ್ವಿಜಯ.

ಹೊಸ ಉಪಾಧ್ಯಾಯರು ಶಾಲೆಯಿಂದ ತುಂಟ ಹುಡುಗರನ್ನು ಓಡಿಸಿದರು. ಚಂದ್ರಾವತೀ ಬಾಯಿಯವರು ಒಡಕಣ್ಣನನ್ನು ಅವನ ಊರಿಗೆ ಕಳುಹಿಸದೆ ತಮ್ಮ ಮನೆಯಲ್ಲೇ ಉಳಿಸಿಕೊಂಡರು. ತನ್ನ ಕುಟಿಲತಂತ್ರ ಪ್ರದರ್ಶನಕ್ಕೆ ಒಳ್ಳೆಯ ಅವಕಾಶ ಸಿಕ್ಕಿತು ಒಡಕಣ್ಣನಿಗೆ. ಚಂದ್ರಾವತೀ ಬಾಯಿಯವರಿಗೆ ದೇವರು ದಿಂಡರೆಂದರೆ ಭಕ್ತಿ. ಮದ್ದೂರ ದುರ್ಗವ್ವನ ಸತ್ಯವನ್ನು ಕೇಳಿ ಅವಳಿಗೆ ಕಾಣಿಕೆಯನ್ನರ್ಪಿಸಲು ಅವರು ಹೊರಟರು.

ಹಳ್ಳಿಯ ದೇವರುಗಳ ವಿಷಯವನ್ನು ಸಂಪೂರ್ಣವಾಗಿ ಅರಿತಿದ್ದ ಒಡಕಣ್ಣನು ಈ ಸಮಯವನ್ನು ತನ್ನ ಅನುಕೂಲ್ಯಕ್ಕೆ ಅಳವಡಿಸಿಕೊಂಡನು. 'ದೇವರನ್ನು ಹೇಳುವವ'ನಿಗೆ ದುಡ್ಡುಕೊಟ್ಟು ಚಂದ್ರಾವತೀಬಾಯಿಯವರಿಗೆ ಹೀಗೆ ಹೇಳಿಸಿದನು: 'ಮಕ್ಕಳಿಲ್ಲಾ ಎನ್ನುವುದು ನಿನ್ನ ಚಿಂತೆ. ನೀನು ಬಂಜೆಯಲ್ಲ. ನಿನ್ನ ಗಂಡನು ಷಂಡ. ನನ್ನ ಭಕ್ತನನ್ನು ನಿನ್ನ ಮನೆಯಲ್ಲಿಟ್ಟಿದ್ದೀನಿ. ಅವನನ್ನು ನಂಬಿದರೆ ನಿನಗೆ ಒಳ್ಳೆಯದಾಗುತ್ತದೆ.' ಈ ಹೇಳಿಕೆಯು ಅವರ ಜೀವನವನ್ನೇ ಮಾರ್ಪಡಿಸಿಬಿಟ್ಟಿತು. ಶ್ರೀಪತಿರಾಯರಿಗೆ ಹೊತ್ತಿಗೆ ಸರಿಯಾಗಿ ಊಟ ಕೂಡ ಸಿಗದು. ಮನೆಗೆ ಬಂದ ಅತಿಥಿಗಳಿಗೆ ಊಟ ಉಪಚಾರಗಳಿಲ್ಲ. ಯಾರಿಗೂ ಇಲ್ಲದ ಉಪಚಾರ ಒಡಕನಿಗೆ. ದೇಸಾಯರಿಗಿಂತಲೂ ಸುಖಮಯ ವಾಯಿತು ಅವನ ಜೀವನ.

ಒಡಕನ ಕಾರ್ಯಭಾರವು ಇಲ್ಲಿಗೇ ನಿಲ್ಲಲಿಲ್ಲ. "ಅವನಿಗೆ ದೇಸಗತ್ತಿಯ ಆಸೆ, ದುಡ್ಡಿನ ಸಹಾಯ ಮತ್ತು ಹೆಣ್ಣಿನ ಮೋಹ" ಇಷ್ಟೂ ಇದ್ದುವು. ಯಂತ್ರಮಂತ್ರಗಳಲ್ಲಿ ಪ್ರಸಿದ್ಧನಾದ ಸಿದ್ದಯ್ಯನೆಂಬವನ ಹತ್ತಿರ ಹೋಗಿ, ಅವನು ಮಾಟಮಾಡಿಸಲು ಹವಣುಮಾಡಿದನು. ಚಂದ್ರಾವತೀ ಬಾಯಿಯವರು ಹೆದರಿದರು. ಆದರೆ ಒಡಕನು 'ನೀವು ಈ ಸಮಯದಲ್ಲಿ ಕೆಚ್ಚೆದೆಯನ್ನು ತೋರಿಸಿದರೆ ನಿಮಗೂ ನನಗೂ ಕೂಡಿಯೇ ಕಲ್ಯಾಣವಾಗುವುದು' ಎಂದು ಹುರಿದುಂಬಿಸಿದನು. ದೇಸಾಯರ ಮನಸ್ಸನ್ನು ಒಲಿಸಿಕೊಳ್ಳಲು 'ಮೆಚ್ಚುಮದ್ದು' ಕೊಟ್ಟದ್ದಾಯಿತು. ಆದರೆ ಚಂದ್ರಾವತೀ ಬಾಯಿಯವರು ಹೆದರಿದ್ದಂತೆಯೇ, ಕೆಲವು ದಿನಗಳಲ್ಲಿಯೇ, ದೇಸಾಯರು ಹಾಸಿಗೆ ಹಿಡಿದರು. ಸ್ನೇಹಿತರನ್ನು ಕರೆಸಿ 'ಒಡಕನಂಥ ರಾಕ್ಷಸರು ಭೂಮಿಯಲ್ಲಿ ಹುಟ್ಟಿರುವರೆಂದು ನನಗೆ

ಹೋಗಿದ್ದಿಲ್ಲ' ಎಂದು ಹೇಳಿದರು. ತಮ್ಮ ದೂರದ ಸಂಬಂಧಿಯಾದ ವೆಂಕಟರಾಯರ ಹೆಸರಿನಲ್ಲಿ ಮರಣಶಾಸನವನ್ನು ಬರೆದದ್ದಾಯಿತು. ಅನೇಕರಿಗೆ ದಾನಮಾಡಿ ದೇಸಾಯರು ಇಹಲೋಕದ ವ್ಯಾಪಾರವನ್ನು ಬಿಟ್ಟರು. 'ಮೆಚ್ಚುಮದ್ದು ಮರಣವನ್ನು ತಂದಿತು.' 'ಜನರು ಕುಲಕಂಟಕನಾದ ಒಡಕಣ್ಣನನ್ನೂ, ಪತಿಘಾತಕಿಯಾದ ಚಂದ್ರಾವತೀ ಬಾಯಿಯವರನ್ನೂ ಮನಬಂದಂತೆ ಹಳಿದರು.'

ದೇಸಾಯರ ಸಾವಿನಿಂದ ಚಂದ್ರಾವತಿಯವರ ಪಾಡು ನಾಯಿಪಾಡಾಯಿತು. ಒಡಕಣ್ಣನನ್ನು ದತ್ತು ತೆಗೆದುಕೊಳ್ಳಬೇಕಾಯಿತು. ಒಡಕನಿಗೂ ವೆಂಕಟರಾಯರಿಗೂ ದೇಸಗತ್ತಿಗಾಗಿ ವ್ಯಾಜ್ಯ ನಡೆದು ಮೊದಲನೆಯ ನ್ಯಾಯಸ್ಥಾನದಲ್ಲಿ, ಲಂಚದ ಮಹಿಮೆಯಿಂದ, ಒಡಕನಿಗೆ ಗೆಲುವಾಯಿತು. ವ್ಯಾಜ್ಯವನ್ನು ಮುಂದುವರಿಸಲು ವೆಂಕಟರಾಯನ ಹತ್ತಿರ ದುಡ್ಡಿರಲಿಲ್ಲ. ಹೀಗಾಗಿ ದೇಸಗತ್ತಿಯು ಒಡಕನಿಗೆ ಸುಲಭವಾಗಿ ದೊರೆಯಿತು. ಚಂದ್ರಾವತೀ ಬಾಯಿಯವರ ಅಣ್ಣನ ಮಗಳನ್ನು ಮದುವೆಯಾಗಿ ಮೆರೆಯಲು ಮೊದಲುಮಾಡಿದನು.

ಈ ಕಾದಂಬರಿಯ ಕಥೆ ಇದು. ಕಥೆಯನ್ನು ಓದಿ ಮುಗಿಸಿದರೂ ಇನ್ನೂ ಕೆಲವು ಪ್ರಶ್ನೆಗಳು ಮನಸ್ಸಿನಲ್ಲಿ ಏಳುತ್ತವೆ. ಒಡಕನು ಹೇಗೆ ಜೀವನವನ್ನು ಮುಂದುವರಿಸಿದನು? ವೆಂಕಟರಾಯರ ಗತಿಯೇನಾಯಿತು? ಚಂದ್ರಾವತಿಯವರಿಗೆ ಜೀವನದಲ್ಲಿ ತಲೆತಾಕಿದ ಮೇಲಾದರೂ ಬುದ್ಧಿ ಬಂದಿತೆ? ಇತ್ಯಾದಿ ಪ್ರಶ್ನೆಗಳು ಉತ್ತರವನ್ನು ಎದುರುನೋಡುತ್ತಿವೆ. ಗ್ರಂಥಕರ್ತರೂ ಕೂಡ 'ಒಡಕಣ್ಣನ ಗೃಹಸ್ಥಾಶ್ರಮವನ್ನು ಕುರಿತು ಇನ್ನೊಂದು ಕಾದಂಬರಿಯಲ್ಲಿ ಓದಬಹುದು' ಎಂದು ನುಡಿದಿದ್ದಾರೆ.

ಈ ಗ್ರಂಥದ ಶೈಲಿ ಉತ್ತರ ಕರ್ಣಾಟಕದ್ದಾಗಿದೆ. ಬರೆಹಗಾರರು ಮನೆಮಾತುಗಳನ್ನು ಹೆಚ್ಚಾಗಿ ಉಪಯೋಗಿಸಿಕೊಂಡಿದ್ದಾರೆ. ಕೆಲವು ಪದಗಳ ಅರ್ಥವು ಎಲ್ಲ ಕನ್ನಡಿಗರಿಗೂ ಖಚಿತವಾಗಿ ಗೊತ್ತಾಗುವುದಿಲ್ಲ. ಉದಾಹರಣೆಗೆ: ಮಾಮಲೇತಿ, ಹಂಡಬಂಡ, ಗಡಚ, ತೊರವಟಿಗ, ಟೋಳಿ, ಕಾತಿ, ಉಲಕೋಚಿತನ, ಧಳಿ, ಜಕ್ಕಣೆ, ಕಾಯಾಸ, ಹುಟ್ಟಿಗೆ, ಮೇಜವಾನಿ, ಭೋಳೆ, ಖೊಟ್ಟಿ, ಉಸಾಬರಿ, ಕಬಲಾಯತಿ, ಪೋಚೆ. ಈ ಪದಗಳ ಅರ್ಥವನ್ನು ತಿಳಿಯಪಡಿಸುವುದರಿಂದ ಓದುಗರಿಗೆ ಹೆಚ್ಚು ಸಹಾಯಮಾಡಿದಹಾಗಾಗುತ್ತದೆ.

ಬರಹಗಾರರು ತಮ್ಮ ಬಿನ್ನಹದಲ್ಲಿ 'ಈ ಕೃತಿಯು ಪಟ್ಟಣವಾಸಿಗಳಿಗೆ ಮನೋರಂಜಕವೂ, ಹಳ್ಳಿಗರಿಗೆ ಮರ್ಮಭೇದಕವೂ, ಹಳ್ಳಿಯ ಸುಧಾರಣೆಗೆ ಹೆಣಗುವವರಿಗೆ ಮಾರ್ಗದರ್ಶಕವೂ ಆಗಬಹುದು' ಎಂದು ಆಶಿಸಿದ್ದಾರೆ. ಮುನ್ನುಡಿಯಲ್ಲಿ ಶ್ರೀಮಾನ್ ಗೋಕಾಕರು ಹೇಳಿರುವಂತೆ "ಗ್ರಾಮಪಂಚಾನನವು ವಾಸ್ತವಿಕತೆಯ ಹಾದಿಯನ್ನು ತುಳಿದು ಧ್ಯೇಯವಾದಿತ್ವವನ್ನು ಸಾಧಿಸುತ್ತದೆ."

ಜಿ. ವೆಂ.

———

**ಮಾರ್ಗದರ್ಶಕ**—ಬರೆದವರು : ಮ|| ಎಂ. ವಿ. ಸೀತಾರಾಮಯ್ಯ, ಎಂ.ಎ., ಅವರು. ಪ್ರಕಾಶಕರು : ಮನೋಹರ ಗ್ರಂಥಮಾಲೆ, ಧಾರವಾಡ ; ಬೆಲೆ, ೧೪ ಆಣೆ, ಕ್ರೌನ್ ಅ. ಪುಟ ೧೪೩.

ಇದು ಹದಿಮೂರು ಸಣ್ಣ ಕಥೆಗಳನ್ನೊಳಗೊಂಡ ಪುಸ್ತಕ. ಈ ಕಥಾಗುಚ್ಛದ ಮೊದಲ ಕಥೆಯೇ 'ಮಾರ್ಗದರ್ಶಕ.' ಅದರ ಹೆಸರೇ ಗ್ರಂಥಕ್ಕೂ ಬಂದಿದೆ. ಇದರಲ್ಲಿ ಒಬ್ಬ ಯುವಕನು ಮಗುಹೋದ ದುಃಖಕ್ಕಾಗಿ ಆತ್ಮಹತ್ಯೆಯ ಪ್ರಯತ್ನದಲ್ಲಿರುತ್ತಾನೆ. ಮರ್ಸಣದಲ್ಲಿ ಮಲಗಿದ್ದ ಆ ಯುವಕನಿಗೆ ಒಬ್ಬ ವೃದ್ಧನು ಕಾಣಿಸಿಕೊಂಡು ಅವನ ಯೋಗಕ್ಷೇಮವನ್ನು ವಿಚಾರಿಸುತ್ತಾನೆ. ಯುವಕನಿಗೆ ಅವನೊಂದಿಗೆ ಮಾತನಾಡಲೂ ಸಹನೆಯಿಲ್ಲ. ಮನಸ್ಸಿಲ್ಲದಿದ್ದರೂ ಅವನು ಯತ್ನವಿಲ್ಲದೆ ತನ್ನ ದುಃಖವನ್ನೆಲ್ಲ ಆ ವೃದ್ಧನಿಗೆ ಹೇಳಿಕೊಳ್ಳುತ್ತಾನೆ. ಎಲ್ಲವನ್ನೂ ಕೇಳಿಯಾದ ಮೇಲೆ ಆ ವೃದ್ಧನು ಅವನನ್ನು ಒಂದು ಕೊಳದ ಬಳಿಗೆ ಕರೆದುಕೊಂಡು ಹೋಗಿ "ಈ ಕೊಳದಲ್ಲಿ ಮುಳುಗಿ ನಿನ್ನ ದುಃಖವನ್ನು ನೀಗಿಕೊಳ್ಳಬಹುದು. ಆದರೆ ಪುನಃ ನೀನು ನಿನ್ನ ಮಗುವನ್ನು ಪಡೆಯಲಾರೆ. ಆತ್ಮಹತ್ಯೆಯ ಯೋಚನೆಮಾಡದೆ ಸ್ವಾಭಾವಿಕವಾದ ಮರಣ ಬರುವವರೆಗೆ ಬದುಕು. ಸ್ವರ್ಗದಲ್ಲಿ ನಿನ್ನ ಮಗುವನ್ನು ಸೇರುವೆ" ಎಂದು ಹೇಳಿದನು. ವೃದ್ಧನ ಈ ಉಪದೇಶವನ್ನು ಲಕ್ಷಿಸದೆ ಕೊಳದಲ್ಲಿ ಧುಮುಕುವ ಪ್ರಯತ್ನಮಾಡಿದಾಗ ಆ ಯುವಕನಿಗೆ ಅದರಲ್ಲಿ ಸರ್ವಗ್ರಾಸಿಯಾದ, ಅಕ್ಷಯವಾದ ಅಂಧಕಾರವೇ ಇರುವಂತೆ ತೋರಿತು. ಆ ಕತ್ತಲೆಯಲ್ಲಿ ಕೊಳೆಯುವುದಕ್ಕಿಂತ ಬದುಕೇ ವಾಸಿಯೆನ್ನಿಸಿತು. ಆಗ ಅವನು ಮುದುಕನ ಮಾತಿನಂತೆ ಮನೆಯ ಹಾದಿ ಹಿಡಿದನು. ಒಂದು ವರ್ಷದ ಹಿಂದೆ ಅವನು ತನ್ನ ಹೆಂಡತಿಯನ್ನು ಕಳೆದುಕೊಂಡಿದ್ದಾಗಲೂ ಹೀಗೆಯೇ ಆಗಿತ್ತು. ಯುವಕನು ಇದನ್ನೆಲ್ಲ ಸ್ಮರಿಸಿಕೊಂಡನು. ಇದೇ ವೃದ್ಧನೇ ಆಗಲೂ ಈ ಕೊಳದ ಬಳಿಗೆ ಕರೆತಂದಿದ್ದನು. ಅಂತು ಯುವಕನು ಮನೆ ಸೇರಿ ವೃದ್ಧನಾಗುವವರೆಗೆ ಶಾಂತಿಯಿಂದ ಬಾಳಿದನು. ಕೊನೆಗೆ ಅದೇ ವೃದ್ಧನೇ ಕಾಣಿಸಿಕೊಂಡು "ನಿನ್ನ ಹೆಂಡತಿ ಮಗು ನಿನಗಾಗಿ ಕಾದಿದ್ದಾರೆ. ಬೇಗ ಬಾ. ನಿನ್ನನ್ನು ಅಲ್ಲಿಗೆ ಕರೆದೊಯ್ಯುವೆನು" ಎಂದು ಹೇಳಿ ಅವನನ್ನು ಕರೆದುಕೊಂಡು ಹೋದನು.

"ಮನುಷ್ಯನು ದುಃಖದ ವೇಳೆಯಲ್ಲಿ ಜೀವ ಕಹಿಯೆಂದು ತಿಳಿದು ಆತ್ಮಹತ್ಯೆಯ ಯೋಚನೆಮಾಡುವುದು ಹೇಡಿತನ; ಬದುಕಲು ಹೆಚ್ಚಿನ ಧೈರ್ಯಬೇಕು. ಆ ಧೈರ್ಯವನ್ನು ಪಡೆದವನು ಕೊನೆಗೆ ಸುಖಶಾಂತಿಗಳನ್ನು ಹೊಂದುವನು" ಎಂಬುದೇ ಈ ಕಥೆಯ ಭಾವವಾಗಿ ಕಾಣುತ್ತದೆ. ಆದರೆ ಆತ್ಮಹತ್ಯೆಯನ್ನು ಬಿಟ್ಟದ್ದು ಅಧೈರ್ಯ (ಹೇಡಿತನ)ದಿಂದಲೋ ವಿವೇಕದಿಂದಲೋ ?

'ಕಳ್ಳರಂಗ' ಎಂಬ ಕಥೆಯು ನಮ್ಮ ಸಮಾಜದ ಒಂದು ದೋಷವನ್ನು ಕುರಿತದ್ದಾಗಿದೆ. ಭಿಕ್ಷುಕರ ಸಮಸ್ಯೆ ಬಹಳ ಕಠಿನವಾದ ಸಮಸ್ಯೆಯಾಗಿದೆ. ಆದರೆ ನಮ್ಮಲ್ಲನೇಕರಿಗೆ ಇದರ ಯೋಚನೆಯೇ ಹೊಳೆಯುವುದಿಲ್ಲ. ದೃಢಕಾಯನಾದ ಭಿಕ್ಷುಕನನ್ನು ಕಂಡರೆ 'ಕಡಿದರೆ ನಾಲ್ಕಾಳಾಗುವ ಹಾಗಿದ್ದೀ, ಕೂಲೀ ಮಾಡು ಎಲ್ಲಾದರೂ ಹೋಗಿ. ಭಿಕ್ಷವಂತೆ ಭಿಕ್ಷ ಇವನಿಗೆ' ಎನ್ನಲು ನಾವು ಹಿಂತೆಗೆಯುವುದಿಲ್ಲ. ಈ ಕಥೆಯಲ್ಲಿಯೂ ಹೀಗೇ ಆಗುತ್ತದೆ. ಹಳ್ಳಿಯಲ್ಲಿದ್ದ ಭೂಮಿ ಕಾಣಿ ಕಳೆದುಕೊಂಡು ನಿರ್ಗತಿಕನಾಗಿ ದೊಡ್ಡಪಟ್ಟಣಕ್ಕೆ ಬಂದು ಕೂಲಿ ಸಿಕ್ಕದೆ ಭಿಕ್ಷಕ್ಕೆ ಹೊರಟ 'ಕಳ್ಳ'ರಂಗನಿಗೂ ಒಬ್ಬ ಮನೆಯ ಯಜಮಾನರಿಗೂ ಹೀಗೆಯೇ ಸಂಭಾಷಣೆ ನಡೆಯುತ್ತದೆ. ಆದರೆ ಅಲ್ಲಿಗೆ ನಿಲ್ಲುವುದಿಲ್ಲ. ರಂಗನ ಪ್ರಶ್ನೆಗಳಿಗೆ ಸರಿಯಾದ ಉತ್ತರ ಹೇಳಲಾರದೆ ಆ ರಾಯರು 'ಎಲ್ಲಾದರೂ ಕಳ್ಳತನ ಮಾಡು ಹೋಗು' ಎನ್ನುವರು. ರಂಗನು 'ಆ ಬುದ್ಧಿ ದೇವರು ಕೊಡ್ಲಿಲ್ಲ; ಕೊಟ್ಟಾಗ ನಿಮ್ಮನೆಗೇ ಮೊದಲು ಬೀಳ್ತೀನಿ' ಎಂದ. ರಾಯರು ಎರಡು ಬಿಸಿಯಾಗಿ ಕೊಟ್ಟರು. ರಂಗನು ಅವರ ಕೈ ಹಿಡಿದುಕೊಂಡ. ಸರಿ, ಸೇರಿತು ಗುಂಪು. ರಂಗನನ್ನು ಹಿಡಿದು ಹೊಡೆದು ಪೊಲೀಸಿಗೆ ಹಿಡಿದುಕೊಟ್ಟರು; ಕಳ್ಳತನಕ್ಕೆ ಹೊಂಚುಹಾಕುತ್ತಿದ್ದನೆಂದು ಸುಳ್ಳು ಬೇರೆ ಹೇಳಿದರು. ಕೊನೆಗೆ ಕೋರ್ಟಿನಲ್ಲಿ ರಂಗನಿಗೆ ೧೫ ದಿನಗಳ ಶಿಕ್ಷೆಯಾಯಿತು. ಜೈಲಿನಿಂದ ಬಂದ ಮೇಲೆ ಕಳ್ಳರಂಗನೆಂದೇ ಹೆಸರಾಯಿತು. ಭಿಕ್ಷವೂ ಇಲ್ಲ, ಕೂಲಿಯೂ ಇಲ್ಲ. ಕಳ್ಳತನವೇ ಗತಿಯಾಯಿತು. ಕಳ್ಳನೇ ಆದ. ಆ 'ವೃತ್ತಿ'ಯಿಂದ ಅವನಿಗೆ ತಕ್ಕಮಟ್ಟಿಗೆ ಸುಖಜೀವನವೇ ನಡೆಯುತ್ತಿತ್ತು. ಆದರೆ ದುರ್ದೈವದಿಂದ ಒಂದು ಸಲ ಕಳ್ಳತನಕ್ಕೆ ಹೋಗಿದ್ದಾಗ ಗೋಡೆ ಹಾರಿ ಬಿದ್ದು ಕಾಲು ಕುಂಟಾಯಿತು. ಕಳ್ಳತನ ಅಸಾಧ್ಯವಾಯಿತು. ವಿಕಲಾಂಗನಾದರೂ ಈಗ ಭಿಕ್ಷ ಸಿಕ್ಕಲೊಲ್ಲದು. ಈ ಕಥೆಯನ್ನು ಕೇಳಿದ ನಮಗೆ ರಂಗನು ಹೇಳುವ 'ಏನ್ಜನಾನೋ ನಮ್ ಜನ' ಎಂಬ ಮಾತು ನಿಜವೆನ್ನಿಸಿದರೆ ಆಶ್ಚರ್ಯವೇನಿದೆ?

'ಬಗೆದಂತೆ ಬಾಳು' ಎಂಬ ಕಥೆಯು ತೊನ್ನುಹಿಡುಕನೊಬ್ಬನು, ಮಾವ ಅತ್ತೆ ಹೆಂಡತಿಯರ ತಿರಸ್ಕಾರಕ್ಕೆ ಗುರಿಯಾಗಿ—ತೊನ್ನುಹಿಡಿದಿದೆಯೆಂಬ ಒಂದೇ ಕಾರಣಕ್ಕಾಗಿ—ಮಿತ್ರ ಸ್ನೇಹವಂಚಿತನಾಗಿ, ಜೀವ ಬಹಳ ಕಹಿಯಾಗಿ, ನೀರಿಗೆ ಬಿದ್ದು ಸತ್ತ ಚರಿತ್ರೆಯನ್ನು ವರ್ಣಿಸುತ್ತದೆ.

ಇವಲ್ಲದೆ ಈ ಕಥಾಗುಚ್ಛದಲ್ಲಿ ಪ್ರಣಯ ಜೀವನದ ಹಲವು ಸುಂದರ ಚಿತ್ರಗಳಿವೆ. 'ಅವಳ ನೆನಪು', 'ಪ್ರೇಮ ಪರೀಕ್ಷೆ', ಮೊದಲಾದ ಕಥೆಗಳು ಹೃದಯಂಗಮವಾಗಿವೆ.

ಕೆ. ವಿ.

---

# ಸಾದರ ಸ್ವೀಕಾರ

## I. ಪದ್ಯ

**೧. ಸತ್ಯದೇವ ಚರಿತೆ**—ಲೇಖಕರು: ಶ್ರೀಮಾನ್ ಗಮಕಿ ಎಂ. ರಾಘವೇಂದ್ರರಾವ್, ಟೀಚರ್, ಪಿ.ಬಿ.ಎಸ್., ನಗರ್ತಪೇಟೆ; ಬೆಂಗಳೂರು ಸಿಟಿ; ಕ್ರೌನ್ ಅ. ೬೬; ಬೆಲೆ, ೬ ಆಣೆ.

**೨. ಶ್ರೀ ಪ್ರಭುದೇವರ ಪುರಾಣ**—(ಎಳಂದೂರು ಹರೀಶ್ವರಕೃತ) ಸಂಪಾದಕರು: ಶ್ರೀಮಾನ್ ಬುದ್ಧಯ್ಯಾಸ್ವಾಮಿ ಪುರಾಣೀಕ, ಕಿಲ್ಲೆ, ಧಾರವಾಡ; ಶ್ರೀಮನ್ನಿರಂಜನ ಜಗದ್ಗುರು ಗ್ರಂಥಮಾಲೆಯ ೧೩ನೆಯ ಪುಷ್ಪ; ಸಚಿತ್ರ; ಡೆ. ಅ. ೪+೨೬+೧೨+೪೪೩; ಬೆಲೆ, ರೂ. ೨-೦-೦.

**೩. ನವನೀತ ರಾಮಾಯಣ**—ಲೇಖಕರು: ಶ್ರೀಮಾನ್ ಮುಳಿಯ ತಿಮ್ಮಪ್ಪಯ್ಯ; ಪ್ರಕಾಶಕರು: ಕನ್ನಡ ಸೇವಾ ಸಂಘ, ಅಮ್ಮೆಂಬಳ; ಕ್ರೌನ್ ಅ. ೧೦೨; ಬೆಲೆ, ರೂ. ೧-೦-೦.

**೪. ಕಂದನ ಹಾಡುಗಳು**—ಸಂಪಾದಕರು: ಶ್ರೀಮಾನ್ ದೊಡ್ಡೇರಿ ವೆಂಕಟ ರಾಯರು; ಪ್ರಕಾಶಕರು: ಸತ್ಯಶೋಧನ ಪುಸ್ತಕ ಭಂಡಾರ, ಕೋಟೆ, ಬೆಂಗಳೂರು ನಗರ; ಪುಟ ೨೦; ಬೆಲೆ, ೨ ಆಣೆ.

**೫. ಸಖೀಗೀತ**—ಲೇಖಕರು: ಶ್ರೀಮಾನ್ ದ. ರಾ. ಬೇಂದ್ರೆ; ಮನೋಹರ ಗ್ರಂಥ ಪ್ರಕಾಶನ ಸಮಿತಿ, ಧಾರವಾಡ; ಕ್ರೌನ್ ಅ. ೬+೧೦೪; ಬೆಲೆ, ರೂ. ೧-೦-೦.

**೬. ಕಂದನಕೂಗು**—ಬರೆದವರು: ಶ್ರೀ ಯೋಗನರಸಪ್ಪ, ಹಾಸನ; ಪ್ರಕಾಶಕರು: ಮನೋಹರ ಗ್ರಂಥಭಂಡಾರ, ಧಾರವಾಡ; ಕ್ರೌನ್ ಅ. ೨೪; ಬೆಲೆ, ೧ ಆಣೆ.

## II. ಕಥೆ, ಕಾದಂಬರಿ

**೭. ಪಾರ್ವತೀಬಾಯಿ ಆಠವ್ಳೆ**—ಲೇಖಕರು: ಶ್ರೀಮತಿ ಎಚ್. ವೈ. ಸರಸ್ವತಮ್ಮ; ಪ್ರಕಾಶಕರು: ಸತ್ಯಶೋಧನ ಮಂದಿರ, ಕೋಟೆ, ಬೆಂಗಳೂರು ನಗರ; ಸಚಿತ್ರ; ಕ್ರೌನ್ ಅ. ೬+೧೧೬; ಬೆಲೆ, ೧೦ ಆಣೆ.

**೮. ಹಿತಸಾಧಕರ ಕಥೆಗಳು**—ಲೇಖಕರು: ಶ್ರೀಮಾನ್ ಡಿ. ಆರ್. ರಾಮಯ್ಯ, ಬಿ.ಎ.; ಸುಜನ ಸಾಹಿತ್ಯಮಾಲೆ ೩; ಕ್ರೌನ್ ಅ. ೮೮; ಸಚಿತ್ರ; ಬೆಲೆ, ೬ ಆಣೆ.

**೯. ಮಾರ್ಗದರ್ಶಕ**—ಲೇಖಕರು: ಶ್ರೀಮಾನ್ ಎಂ. ವಿ. ಸೀತಾರಾಮಯ್ಯ, ಎಂ.ಎ.; ಮನೋಹರ ಗ್ರಂಥಪ್ರಕಾಶನ ಸಮಿತಿ, ಧಾರವಾಡ; ಕ್ರೌನ್ ಅ. ೮+೧೪೨; ಬೆಲೆ, ೧೪ ಆಣೆ.

**೧೦. ಗ್ರಾಮ ಪಂಚಾನನ**—ಲೇಖಕರು: ಶ್ರೀಮಾನ್ ಬಾ. ಕೃ. ಲಕ್ಷ್ಮೇಶ್ವರ; ಮನೋಹರ ಗ್ರಂಥ ಪ್ರಕಾಶನ ಸಮಿತಿ, ಧಾರವಾಡ; ಕ್ರೌನ್ ಅ. ೫+೩+೧೧೨; ಬೆಲೆ, ೧೨ ಆಣೆ.

**೧೧. ಭಾರತವರ್ಮಾರ್ಗ**—ಅನುವಾದಕರು: ಶ್ರೀಮಾನ್ ಗುರುರಾಜ, ಭಿ. ಜೋಶಿ, ಎಂ.ಎ., ಬಿ.ಟಿ.; ಮನೋಹರ ಗ್ರಂಥಪ್ರಕಾಶನ ಸಮಿತಿ, ಧಾರವಾಡ; ಕ್ರೌನ್ ಅ. ೭+೪೧೩; ಬೆಲೆ, ರೂ. ೨-೮-೦.

**೧೨. ಗಾಂಧೀಜಿಯ ಹಾಸ್ಯಪ್ರವೃತ್ತಿ**—ಲೇಖಕರು: ಶ್ರೀಮಾನ್ ಕಂದಾಡೆ ಕೃಷ್ಣಯ್ಯಂಗಾರ್, ಬಿ.ಎ.; ಪ್ರಕಾಶಕರು: ಸ್ಟ್ಯಾಂಡರ್ಡ್ ಬುಕ್ ಡಿಪೋ, ಅವೆನ್ಯೂ ರೋಡ್, ಬೆಂಗಳೂರು ಸಿಟಿ; ಕ್ರೌನ್ ಅ. ೬೪; ಬೆಲೆ, ೬ ಆಣೆ.

**೧೩. ಲಹರಿ**—(ಆರು ಕತೆಗಳು): ಕತೆಗಾರರು; ಶ್ರೀಮಾನ್ ಕಲಮದಾನಿ ಗುರು ರಾಯರು; ಪ್ರಕಾಶಕರು: ಪಿ. ವ್ಹಿ. ಕುಲಕರ್ಣಿ, ಮನೋಹರ ಗ್ರಂಥಭಂಡಾರ, ಧಾರವಾಡ, ೧೯೪೦; ಕ್ರೌನ್ ಅ. ೬+೭೩; ಬೆಲೆ, ೬ ಆಣೆ.

**೧೪. ಗಾಳಿಗೋಪುರ**—ಮನೋಹರ ಗ್ರಂಥಮಾಲೆಯ ೪೩ನೆಯ ಕುಸುಮ; ಆಗಸ್ಟು, ೧೯೪೦. ಕಟ್ಟಿದವರು: ನಾ. ಕಸ್ತೂರಿ, ಎಂ.ಎ., ಬಿ.ಎಲ್. ಕ್ರೌನ್ ಅ. ೧೬+೧೭೯; ಬೆಲೆ, ರೂ. ೧-೪-೦.

## III. ಶಾಸ್ತ್ರ

**೧೫. ಎಕ್ಸ್-ರೇ**—ಲೇಖಕರು: ಶ್ರೀಮಾನ್ ಯು. ರಾಘವೇಂದ್ರ ಆಚಾರ್ಯ, ಬಿ.ಎಸ್‌ಸಿ (ಆನರ್ಸ್), ಲೆಕ್ಚರರ್, ಲೊಯೊಲಾ ಕಾಲೇಜು, ಮದ್ರಾಸ್; ಸಚಿತ್ರ: ಕ್ರೌನ್ ಅ. xii+೯೨; ಬೆಲೆ, ರೂ. ೧-೦-೦.

**೧೬. ಕೈಗನ್ನಡಿ**—ಲೇಖಕರು: ಶ್ರೀಮಾನ್ ಕಲಮದಾನಿ ಗುರುರಾಯರು; ಪ್ರಕಾಶಕರು: ಸಮಾಜ ಕಾರ್ಯಾಲಯ, ಧಾರವಾಡ; ಸಚಿತ್ರ; ಕ್ರೌನ್ ಅ. ೪+೧೫೨; ಬೆಲೆ, ರೂ. ೧-೦-೦.

**೧೭. ಪ್ರಬಂಧಪ್ರಕಾಶ**—ಲೇಖಕರು: ಶ್ರೀಮಾನ್ ಮ. ದೇಶಪಾಂಡೆ, ಎಂ.ಎ., ಎಸ್.ಟಿ.ಸಿ; ವಿಕ್ರಮಪುರ, ಅಥಣಿ; ಕ್ರೌನ್ ಅ. ೮+೨೨೬: ಬೆಲೆ, ರೂ. ೧-೦-೦.

**೧೮. ನಮ್ಮ ಆರ್ಥಿಕ ದೃಷ್ಟಿ**—ಲೇಖಕರು: ಎಸ್. ಗೋಪಾಲಸ್ವಾಮಿ, ಎಂ.ಎ.; ಮೈಸೂರು ವಿಶ್ವವಿದ್ಯಾನಿಲಯ ಪ್ರಚಾರ ಪುಸ್ತಕಮಾಲೆ—೧೪; ಫು. ಸೋ. vi+೬೪; ಸಚಿತ್ರ; ಬೆಲೆ, ೨ ಆಣೆ. ಉತ್ತಮ ಪ್ರತಿ, ೩ ಆಣೆ.

**೧೯. ವಾಯುಗುಣ**—ಲೇಖಕರು: ಕೆ. ಶೇಷಾದ್ರಿ ಅಯ್ಯಂಗಾರ್, ಎಂ.ಎಸ್‌ಸಿ.; ಮೈಸೂರು ವಿಶ್ವವಿದ್ಯಾನಿಲಯ ಪ್ರಚಾರ ಪುಸ್ತಕಮಾಲೆ—೧೫; ಫು. ಸೋ vi+೬೪; ಸಚಿತ್ರ; ಬೆಲೆ, ೨ ಆಣೆ. ಉತ್ತಮ ಪ್ರತಿ, ೩ ಆಣೆ.

**೨೦. ಭಾರತದ ರಾಜಕೀಯ ಸಮಸ್ಯೆ**—ಅನುವಾದಕರು: "ಸ್ವಾತಂತ್ರ್ಯ ಪ್ರಿಯ"; ಸಂಪಾದಕರು: ಶ್ರೀಮಾನ್ ಬಿಂದುಮಾಧವ ಬುರ್ಲಿ, ಮಿಂಚಿನಬಳ್ಳಿ ಗ್ರಂಥಮಾಲೆ, ಧಾರವಾಡ; ಕ್ರೌನ್ ಅ. ii+ii+ii+೨೦೩+೨೧; ಬೆಲೆ, ರೂ. ೧-೦-೦.

**೨೧. ಶರೀರ ಶಿಕ್ಷೆ**—ಲೇಖಕರು: ಶ್ರೀಮಾನ್ ಜ. ಬಾಪಟ್, ಮದಿಹಾಳ, ಧಾರವಾಡ; ಸಚಿತ್ರ; ಡೆಮಿ. ಅ. ೧೪೮+೩೬+೧೬; ಬೆಲೆ, ರೂ. ೩-೦-೦.

**೨೨. ಪೌರುಷ**—ಲೇಖಕರು: ಡಾ|| ಗೋಪಾಲಕೃಷ್ಣರಾಯರು; ಸಮಾಜ ಪುಸ್ತಕ ಮಾಲೆ, ಧಾರವಾಡ; ಪ್ರಕಾಶಕರು: ಬಾಲಚಂದ್ರ ಘಾಣೇಕರ; ಕ್ರೌನ್ ಅ. ೧೦೩; ಬೆಲೆ, ರೂ. ೧-೦-೦.

## IV. ಇತರ

**೨೩. ದ್ವೈತದರ್ಶನ**—ಲೇಖಕರು: ಶ್ರೀ ಶೀರೂರು ಮಠದ ಶ್ರೀ ಲಕ್ಷ್ಮೀಂದ್ರತೀರ್ಥ ಶ್ರೀ ಪಾದಂಗಳವರು; ಪ್ರಕಾಶಕರು: ಎಂ. ಆರ್. ರಾವ್, ಉಡುಪಿ; ಕ್ರೌನ್ ಅ. ೧೪+೪೮; "ಭಕ್ತರ ಜ್ಞಾನೋದಯವೇ ಬೆಲೆ."

**೨೪. ಓಷಧಿಕೋಶ**—(ಮದ್ರಾಸ್ ಯೂನಿವರ್ಸಿಟಿ ಕರ್ಣಾಟಕ ಗ್ರಂಥಮಾಲಾ ಸಂಖ್ಯೆ—೭); ಸಂಪಾದಕರು: ಎ. ವೆಂಕಟರಾವ್, ಬಿ.ಎ., ಎಲ್.ಟಿ.; ಮತ್ತು ಪಂಡಿತ ಎಚ್. ಶೇಷಯ್ಯಂಗಾರ್, ರಾ. ಅ. viii+೧೭೪; ಬೆಲೆ, ರೂ. ೨-೦-೦.

**೨೫. ಲಘುಬೋಧಾಮೃತಸಾರ**—(ಮಹರ್ಷಿ ಕುಂಥುಸಾಗರ ವಿರಚಿತ): ಕ್ರೌನ್ ಅ. ೧೨; ಬೆಲೆ, ಸದುಪಯೋಗ.

**೨೬. ಸಿದ್ಧಾಂತ ಶಿಖಾಮಣಿ**—(ಶ್ರೀ ಶಿವಯೋಗಿ ಶಿವಾಚಾರ್ಯ ವಿರಚಿತ): ತೆಲುಗು ಲಿಪಿ; ಕಾಶೀವೀರಶೈವ ವಿದ್ವತ್ಸಂಗ ಪ್ರಕಾಶಿತ; ಮೇನೇಜರ್, ಶಿವಧರ್ಮ ಗ್ರಂಥಮಾಲಾ, ೪೨೬೮ ಸರ್ಜನ್‌ಲಾಲ್ ವೀಧಿ, ಸಿಕಂದರಾಬಾದ್ (ಡೆಕ್ಕನ್); ಸೂ. ರಾ. ೧೭೬; ಬೆಲೆ, ೪ ಆಣೆ.

**೨೭. ಅಕ್ಕಿ**—"ಮೈಸೂರು ಆರೋಗ್ಯ"ಕಾಂಡ ೫, ಸಂಖ್ಯೆ ೩, ಆರೋಗ್ಯತತ್ವಪ್ರಚಾರ ಶಾಖೆಯಿಂದ.

## V. ವರದಿ

**೨೮. ಅಕ್ಷರತಾ ಪ್ರಚಾರ**—ಅಕ್ಷರತಾ ಪ್ರಚಾರದ ವಿಷಯವಾಗಿ: ಶ್ರೀಮಾನ್ ಜೆ. ಬಿ. ಮಲ್ಲಾರಾಧ್ಯ, ಎಂ.ಎ., ಅವರು ತಯಾರಿಸಿರುವ ವಿವರಣೆ; ಪುಟ ೧೩+೪.

**೨೯. ಕನ್ನಡ ಸಾಹಿತ್ಯ ಮಂದಿರ, ಹೈದರಾಬಾದು**—ನಾಲ್ಕನೆಯ ವಾರ್ಷಿಕ ವರದಿ.

**೩೦. ಕನ್ನಡ ಸಾಹಿತಿಗಳ ಸಂಘದ ವರದಿ**—ಬೆಂಗಳೂರು.

---

# ವಸ್ತುಕೋಶ

## ಕೀರ್ತಿಶೇಷರಾದ ಶ್ರೀಮನ್ನಾಲ್ವಡಿ ಕೃಷ್ಣರಾಜವೊಡೆಯರ್ ಬಹದ್ದೂರ್ ಜಿ.ಸಿ.ಎಸ್.ಐ., ಜಿ.ಬಿ.ಇ., ಮಹಾ ಪ್ರಭುಗಳವರು

ಕಂಬನಿ

ಇನ್ನೂ ಆರು ತಿಂಗಳ ಕೆಳಗೆ, ಕಳೆದ ಸಂಚಿಕೆಯಲ್ಲಿತಾನೆ, ಶ್ರೀಮದ್ಯುವರಾಜ ಕಂಠೀರವ ನರಸಿಂಹರಾಜವೊಡೆಯರವರು ಮೃತಿಪಟ್ಟರೆಂದು "ಕಂಬನಿ" ಯನ್ನಿಡಲಾಯಿತು. ಅದಕ್ಕೆ ಮುಂದಿನ ಸಂಚಿಕೆಯಲ್ಲಿಯೂ ಹಿಂದಕ್ಕಿಂತ ಹೆಚ್ಚಾಗಿ ಕಣ್ಣೀರು ಸುರಿಸಿ "ಕಂಬನಿ" ಬರಹವನ್ನು ಬರೆಯುವ ಈ ಶೋಕ ಕರ್ತವ್ಯ ಒದಗುವುದೆಂದು ನಾವು ಕನಸು ಮನಸಿನಲ್ಲಿಯೂ ನೆನಸಿರಲಿಲ್ಲ. ಈಗ ಮುವ್ವತ್ತೆಂಟು ವರ್ಷಗಳಿಂದ ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರಾಗಿಯೂ, ಮೈಸೂರು ವಿಶ್ವವಿದ್ಯಾನಿಲಯವು ಹುಟ್ಟಿದಂದಿನಿಂದ ಅದರ ಛಾನ್ಸೆಲರವರಾಗಿಯೂ ಇದ್ದ ಶ್ರೀ ನಾಲ್ವಡಿ ಕೃಷ್ಣರಾಜವೊಡೆಯರ್ ಬಹದ್ದೂರ್, ಜಿ.ಸಿ.ಎಸ್.ಐ., ಜಿ.ಬಿ.ಇ., ಮಹಾಸ್ವಾಮಿಯವರು ನಮ್ಮನ್ನು ಅಗಲಿ ಹೋಗಿ ಆಗಲೇ ಒಂದು ತಿಂಗಳಾಗುತ್ತ ಬಂತು. ಕನ್ನಡನಾಡಿನ ಎರಡು ರತ್ನ ಕಲಶಗಳಂತಿದ್ದ ರಾಜಸೋದರರು ಇಬ್ಬರೂ ಹೀಗೆ ಆರು ತಿಂಗಳೊಳಗಾಗಿ ಪ್ರಜಾವರ್ಗವನ್ನು ತಬ್ಬಲಿಮಾಡಿ ಸ್ವರ್ಗಸ್ಥರಾಗುವರೆಂದು ಯಾರು ನಂಬಬಹುದಾಗಿತ್ತು? ದಿವಂಗತರಾದ ನಮ್ಮ ಮಹಾಪ್ರಭುಗಳವರು ಕೆಲವು ಕಾಲದಿಂದ ಅಸ್ವಸ್ಥರಾಗಿದ್ದರೂ, ಅಶಕ್ತರಾಗಿದ್ದರೂ, ತಕ್ಕಮಟ್ಟಿಗೆ ಚೇತರಿಸಿಕೊಂಡು ರಾಜಕಾರ್ಯಗಳನ್ನು ಎಂದಿನಂತೆ ನಡಸಿಕೊಂಡು ಹೋಗುತ್ತಿದ್ದರು. ಚಿಂತಾವ್ಯಾಕುಲಗಳಿಗೆ ಸಿಕ್ಕಿದ್ದ ಅವರ ಮನಸ್ಸು, ಧೀರಪ್ರಕೃತಿಯಿಂದ ಶಾಂತವಾಗಿ ಉಳಿದಿದ್ದರೂ, ಕಳೆದ ಮಾರ್ಚಿ ತಿಂಗಳಲ್ಲಿ ಏಕಮಾತ್ರ ಸೋದರರಿಂದ ವಿರಹಿತವಾದಾಗ ಜರ್ಝರಿತವಾಗಿ ಊರೆತಪ್ಪಿ ಸೊರಗಿಹೋಯಿತು. ಆದರೂ ಅವರು ಕರ್ತವ್ಯಕಾರ್ಯಗಳಲ್ಲಿ ತೊಡಗಿಯೇ ಇರುತ್ತಿದ್ದರು; ರಾಜಕಾರ್ಯ ಪ್ರಜಾಕಾರ್ಯ ದೇಶಕಾರ್ಯ ಭಾಷಾ ಸಾಹಿತ್ಯಕಾರ್ಯಗಳಲ್ಲಿ ನಿರತರಾಗಿಯೇ ಇರುತ್ತಿದ್ದರು; ಅಂಥ ಅಶಕ್ತಸ್ಥಿತಿಯಲ್ಲಿಯೂ ಕನ್ನಡ ಸಾಹಿತ್ಯ ಪರಿಷತ್ತಿನ ಬೆಳ್ಳಿಯ ಹಬ್ಬದಲ್ಲಿ ಭಾಗಿಗಳಾಗಿ ಅದನ್ನು ಆರಂಭಿಸಿ ಹರಸಿದರು. "ಸಿರಿಗನ್ನಡಂ ಗೆಲ್ಗೆ" ಎಂಬುದು ಅವರು ಕನ್ನಡಿಗರ ಆ ಮಹಾ ಸಭೆಯಲ್ಲಿ ಆಡಿದ



ಕೀರ್ತಿಶೇಷರಾದ ಶ್ರೀಮನ್ನಾಲ್ವಡಿ ಕೃಷ್ಣರಾಜವೊಡೆಯರ್
ಬಹದ್ದೂರ್, ಜಿ. ಸಿ. ಎಸ್. ಐ., ಜಿ. ಬಿ. ಇ. ಮಹಾಪ್ರಭುಗಳವರು

ಜನನ : ೪—೬—೧೮೮೪ ಮರಣ : ೩—೮—೧೯೪೦

(ಪಡಿಯಚ್ಚು ವೆಸ್ಲಿ ಪ್ರೆಸ್ಸಿನ ಅಧಿಕಾರಿಗಳು ದಯವಿಟ್ಟು ಕೊಟ್ಟದ್ದು)

ಕೊನೆಮಾತು ; ಆ ಮಾತನ್ನು ಅವರ ಬಾಯಿಂದ ಕೊನೆಯದಾಗಿ ಹೇಳಿಸುವ ಭಾಗ ಪರಿಷತ್ತಿನದಾಯಿತು. ಈಗ ಸುಮಾರು ೨೫ ವರ್ಷಗಳ ಕೆಳಗೆ ಮೈಸೂರು ವಿಶ್ವ ವಿದ್ಯಾನಿಲಯವನ್ನು ಆರಂಭಿಸಿದಾಗ ಅವರು ತಮ್ಮ ಕನ್ನಡದ ಅಭಿಮಾನವನ್ನು ವ್ಯಕ್ತಪಡಿಸಿದರು ; ಆ ಅಭಿಮಾನವು ಸಂತತವೂ ಅವರ ನಡೆನುಡಿಗಳಲ್ಲೆಲ್ಲಾ ಕಂಡು ಬರುತ್ತ ಕನ್ನಡದ ಮುನ್ನಡೆಗೆ ಪ್ರೋತ್ಸಾಹಕವಾಯಿತು. ಕನ್ನಡದಲ್ಲಿ ನಾಲ್ಕು ಪಂಕ್ತಿಗಳನ್ನು ಬರೆದು ಮಹಾಸ್ವಾಮಿಯವರಿಗೆ ಅರ್ಪಿಸಲಿ, ಬರೆದವರಿಗೆ ಒಂದು ಪ್ರೋತ್ಸಾಹ ದೊರೆಯದೆ ಇರುತ್ತಿರಲಿಲ್ಲ. ಆದರೆ ಇದು ಎಷ್ಟು ಸದ್ದಿಲ್ಲದೆ ನಡೆಯು ತ್ತಿತ್ತೆಂದರೆ ಅವರ ಆ ಅಭಿಮಾನ ಔದಾರ್ಯಗಳು ಅವುಗಳ ಫಲವನ್ನು ಪಡೆದವರಿ ಗಲ್ಲದೆ ಹೊರಗೆ ಪ್ರಕಾಶಕ್ಕೆ ಬರುತ್ತಿರಲಿಲ್ಲ. ಕನ್ನಡಭಾಷಾ ಸಾಹಿತ್ಯಗಳ ಚರಿತ್ರೆ ಯಲ್ಲಿ ಸಂಪ್ರದಾಯವಾಗಿ ಬಂದ ರಾಜಾಶ್ರಯವು ಅವರ ಮೂಲಕ, ಅವರ ಸರ್ಕಾರದ ಮೂಲಕ, ಸರ್ಕಾರದ ಅಧಿಕಾರಿಗಳ ಮತ್ತು ಅವರ ಕಾರ್ಯನೀತಿಗಳ ಮೂಲಕ ಈಚೆಗೆ ಎಷ್ಟುಮಟ್ಟಿಗೆ ಪ್ರಸರಿಸಿತೆಂಬುದನ್ನು ತಿಳಿಯಬೇಕಾದರೆ, ಸುಮಾರು ಐವತ್ತು ವರ್ಷಗಳ ಕೆಳಗೆ ಮೈಸೂರಲ್ಲಿ ಕನ್ನಡ ಹೇಗಿತ್ತು ಈಗ ಹೇಗಿದೆ ಎಂಬುದನ್ನು ಹೋಲಿಸಿ ನೋಡಬೇಕು. ಅಂದಿಗೂ ಇಂದಿಗೂ ಅಜಗಜಾಂತರ! ಅವರಿಗೆ ಕನ್ನಡದಲ್ಲಿ ಎಷ್ಟು ಅಭಿಮಾನವೋ ಸಂಸ್ಕೃತದಲ್ಲಿಯೂ ಸಂಗೀತದಲ್ಲಿಯೂ ಅಷ್ಟೇ ಅಭಿಮಾನ; ಹೀಗೆ ಕನ್ನಡ ಸಂಸ್ಕೃತಗಳ ಪೋಷಕರೆಂದು, ಸನಾತನ ಧರ್ಮದ ಏಕಾವಲಂಬನವೆಂದು, ಗಾನರಸಿಕರೆಂದು, ಪ್ರಜಾವತ್ಸಲರಾದ ರಾಜರೆಂದು ಅವರು ಸರ್ವಜನಸಂಮಾನ್ಯರಾಗಿದ್ದರು ; ಪ್ರೀತಿಪಾತ್ರರಾಗಿದ್ದರು ; ಶೀಲ ಘನತೆ ಗೌರವ ಗಾಂಭೀರ್ಯ ಸರಳತೆ ಇವುಗಳಲ್ಲಿ ಲೋಕಕ್ಕೆ ಮೇಲ್ಪಂಕ್ತಿಯಾಗಿದ್ದರು. ಅವರಲ್ಲಿ ಪ್ರಾಚೀನ ನವೀನ ಸಂಸ್ಕೃತಿಗಳೆರಡರ ಸಾರಸರ್ವಸ್ವವೂ ಸಮರಸವಾಗಿ ಸೇರಿತ್ತು. ಭರತಖಂಡದ ಪುಣ್ಯಕ್ಷೇತ್ರ ತೀರ್ಥಗಳಲ್ಲಿ ಯಾತ್ರೆಮಾಡಿಕೊಂಡು ಬಂದಿ ದ್ದಂತೆಯೇ ಅವರು ಯೂರೋಪಿನ ಪ್ರವಾಸವನ್ನೂ ಮಾಡಿಕೊಂಡು ಬಂದಿದ್ದರು. ಪೂಜೆ ಪುರಸ್ಕಾರ ವ್ರತ ಆಚಾರಗಳಲ್ಲಿ ನಿರತರಾಗಿರುವಂತೆಯೇ ಆಟ ಪಾಟ ವಿನೋದ ವಿಹಾರ ಸಾಮು ಕುಸ್ತಿಗಳಲ್ಲಿಯೂ ಆಸಕ್ತರಾಗಿದ್ದರು.

ಅವರು ರಾಜರಾಗಿ ಪ್ರಜೆಗಳಲ್ಲಿ ಎಷ್ಟು ವಾತ್ಸಲ್ಯವನ್ನಿಟ್ಟಿದ್ದರೋ ಅಷ್ಟೇ ಸ್ನೇಹವನ್ನು ತಮ್ಮ ಮಂತ್ರಿಗಳಲ್ಲಿಟ್ಟಿದ್ದು ರಾಜ್ಯರಥವು ಸುಸೂತ್ರವಾಗಿಯೂ ವಿಚಕ್ಷಣವಾಗಿಯೂ ನಡೆಯುವಂತೆ ನೋಡಿಕೊಂಡರು. ಅದೂ ಎಷ್ಟು ಜನ, ಎಂಥೆಂಥ, ಮಂತ್ರಿಗಳು! ಸರ್ ಕೆ. ಶೇಷಾದ್ರಿ ಅಯ್ಯರ್, ಅವರಿಂದ ಮೊದಲುಮಾಡಿಕೊಂಡು ಸರ್ ಮಿರ್ಜಾ ಎಂ. ಇಸ್ಮಾಯಿಲ್‌ರವರವರೆಗೆ! ಇಂಥ ಅನುಕೂಲರಾದ ಸಮರ್ಥ

ಮಂತ್ರಿ ಪರಂಪರೆಯ ಕಾಲದಲ್ಲಿ ದೇಶವು ಎಷ್ಟು ವಿಧವಾಗಿ, ಎಷ್ಟು ಮುಖವಾಗಿ, ಮುಂದಕ್ಕೆ ಬಂದು! ಮಾದರಿ ಸಂಸ್ಥಾನವೆನ್ನಿಸಿಕೊಂಡಿತು! ರಾಜಕೀಯ, ಸಾಮಾಜಿಕ, ಆರ್ಥಿಕ, ವಿದ್ಯಾಭ್ಯಾಸ ಯಾವ ವಿಚಾರವನ್ನು ತೆಗೆದುಕೊಂಡರೂ, ಹಿಂದಿನ ಮೈಸೂರಿಗೆ ಹೋಲಿಸಲಿ ಇಂದಿನ ಇಂಡಿಯಕ್ಕೆ ಹೋಲಿಸಲಿ, ಮೈಸೂರಿನವರು ಈಗ ನ್ಯಾಯವಾಗಿ ಹೆಮ್ಮೆಪಟ್ಟುಕೊಳ್ಳಬಹುದಾಗಿದೆ.

ಈಗ ಸುಮಾರು ಅರ್ಧಶತಮಾನದಿಂದಲೂ ರಾಜರೆಂದರೆ ನಮ್ಮ ಮಹಾರಾಜರು, ರಾಜರ್ಷಿಗಳೆಂದರೆ ನಮ್ಮ ಮಹಾರಾಜರು, ಆದರ್ಶ ವ್ಯಕ್ತಿಗಳೆಂದರೆ ನಮ್ಮ ಮಹಾರಾಜರು ಎಂದು ಆನಂದಪಡುತ್ತಿದ್ದೆವು. ಮಹಾರಾಜರೆಂದರೆ ಅವರ ಚಿತ್ರವೇ ನಮ್ಮ ಮುಂದೆ ಬಂದು ನಿಲ್ಲುತ್ತಿತ್ತು; ಇಂದು ಜೀವಿಸಿರುವವರಲ್ಲಿ, ಶ್ರೀ ಚಾಮರಾಜೇಂದ್ರವೊಡೆಯರವರನ್ನು ನೋಡಿದ್ದವರು ಬಹು ಸ್ವಲ್ಪ ಜನ. ಮುಮ್ಮಡಿ ಕೃಷ್ಣರಾಜವೊಡೆಯರವರನ್ನು ನೋಡಿದ್ದವರು ಇದ್ದಾರೋ ಇಲ್ಲವೋ! ಆದ್ದರಿಂದ ಮೈಸೂರಿನ ಪ್ರಜೆಗಳಿಗೆ ದೊರೆಗಳೆಂದರೆ ಶ್ರೀಮನ್ನಾಲ್ವಡಿ ಕೃಷ್ಣರಾಜವೊಡೆಯರವರೇ ಆಗಿದ್ದರು. ಅವರನ್ನು ಈಗ ನಾವು ಕಳೆದುಕೊಂಡೆವೆಂದರೆ ನಂಬಿಕೆ ಬರುವ ಹಾಗಿಲ್ಲ; ಅವರ ಭವ್ಯಮೂರ್ತಿ ಮನಸ್ಸಿನಿಂದ ಮರೆಯಾಗುವ ಹಾಗಿಲ್ಲ.

ಸರ್ವೇಶ್ವರನು ಈ ಶಾಂತಾತ್ಮರ ಆತ್ಮಕ್ಕೆ ಶಾಂತಿಯನ್ನು ಕೊಡಲಿ! ಶ್ರೀಮನ್ಮಹಾರಾಣಿಯವರಿಗೂ ಶ್ರೀಮದ್ಯುವರಾಜರವರಿಗೂ ರಾಜವರ್ಗಕ್ಕೂ ಈ ತೀವ್ರ ಶೋಕವನ್ನು ಸಹಿಸಲು ಭಗವಂತನು ಧೈರ್ಯವನ್ನು ಅನುಗ್ರಹಿಸಲಿ!

---

ಶುಭಾಶಂಸನ

ಈಗ ದೇಶದ ಆಶೆಯೆಲ್ಲ ಶ್ರೀಜಯಚಾಮರಾಜೇಂದ್ರವೊಡೆಯರವರಲ್ಲಿ ಕೇಂದ್ರೀಕೃತವಾಗಿದೆ. ಇನ್ನು ಅವರೇ ನಮ್ಮ ಮಹಾರಾಜರು. ಅವರು ಶ್ರೀಮನ್ನಾಲ್ವಡಿ ಕೃಷ್ಣರಾಜವೊಡೆಯರವರ ಸನ್ನಿಧಿಯಲ್ಲಿ ಬೆಳೆದು ಅವರ ಸತ್ವವನ್ನೂ ಶಾಂತಿಯನ್ನೂ ತೇಜಸ್ಸನ್ನೂ ತುಂಬಿಕೊಂಡಿದ್ದಾರೆ; ಹಿರಿಯರ ಆಶೀರ್ವಾದ ಅವರ ಮೇಲೆ ಪೂರ್ಣವಾಗಿದೆ; ಅವರನ್ನು ನೋಡಿದಾಗ

ಯಾತ್ಯೇಕತೋಽಸ್ತಶಿಖರಂ ಪತಿರೋಷಧೀನಾಂ
ಆವಿಷ್ಕೃತಾರುಣಪುರಸ್ಸರ ಏಕತೋಽರ್ಕಃ

ಎಂಬ ಕಾಳಿದಾಸೋಕ್ತಿಯು ಜ್ಞಾಪಕಕ್ಕೆ ಬರುತ್ತದೆ. ರಾತ್ರಿಯೆಲ್ಲಾ ಸ್ನಿಗ್ಧ ಶಾಂತವಾದ, ಇಂಪು ತಂಪಾದ, ಬೆಳಕಿನಿಂದ ಲೋಕವನ್ನು ಬೆಳಗಿ ಚಂದ್ರನು



ಉಪಾಧ್ಯಕ್ಷರೂ ಗೌರವ ಕಾರ್ಯದರ್ಶಿಗಳೂ ಸ್ವಾಗತಸಮಿತಿಯ ಸದಸ್ಯರೂ
ಮಹಾಸ್ವಾಮಿಯವರ ಆಗಮನವನ್ನು ನಿರೀಕ್ಷಿಸುತ್ತಿರುವುದು

ಪಡಿಯಚ್ಚು "ಕನ್ನಡ ನುಡಿ"ಯ ಕೃಪೆಯಿಂದ ಬಂದದ್ದು



ದಿವಾನ್ ಸಾಹೇಬರವರನ್ನೂ ಐರೋಪ್ಯ ಆಹ್ವಾನಿತರನ್ನೂ ಉಪಾಧ್ಯಕ್ಷರು
ಸ್ವಾಗತಿಸುತ್ತಿರುವುದು

ಪಡಿಯಚ್ಚು "ಕನ್ನಡ ನುಡಿ"ಯ ಕೃಪೆಯಿಂದ ಬಂದದ್ದು

ಅಸ್ತನಾಗುತ್ತಿರುವಾಗ, ಪೂರ್ವದಲ್ಲಿ ತೇಜೋಮಯನಾದ ಬಾಲಸೂರ್ಯನು ಉದಯಿಸಿದ್ದಾನೆ; ಇದು ಒಂದು ದೊಡ್ಡ ಸಮಾಧಾನ; ಪುಣ್ಯ. ಈ ಸೂರ್ಯನು ಕ್ಷಣಕ್ಷಣಕ್ಕೆ ತೇಜೋವಂತನಾಗಿ, ಲೋಕಕ್ಕೆ ತೇಜಸ್ಸನ್ನೂ ಶ್ರೇಯಸ್ಸನ್ನೂ ಕೊಡಲಿ!

ಇಂಗ್ಲಿಷರು ಹೇಳುವಂತೆ, "ಮಹಾರಾಜರು ಸ್ವರ್ಗಸ್ಥರಾದರು! ಮಹಾರಾಜರು ದೀರ್ಘಾಯುಷ್ಮಂತರಾಗಲಿ!"

ತೇಜೋದ್ವಯಸ್ಯ ಯುಗಪದ್ವ್ಯಸನೋದಯಾಭ್ಯಾಂ
ಲೋಕೋ ನಿಯಮ್ಯತ ಇವಾತ್ಮದಶಾಂತರೇಷು ||

ಕಾಳಿದಾಸ.

***

**ಕನ್ನಡ ಸಾಹಿತ್ಯ ಪರಿಷತ್ತಿನ ಬೆಳ್ಳಿಯ ಹಬ್ಬ**

ಕಳೆದ ಜೂನ್ ೩೦, ಜುಲೈ ೧ನೆಯ ತಾರೀಖುಗಳಲ್ಲಿ ಜರುಗಿದ ಕನ್ನಡ ಸಾಹಿತ್ಯ ಪರಿಷತ್ತಿನ ಬೆಳ್ಳಿಯ ಹಬ್ಬವನ್ನು ನೋಡಲು ಬೆಂಗಳೂರಿಗೆ ಹೋಗದಿದ್ದ ಕನ್ನಡಿಗರು ಕಣ್ಣಿನ ಹಬ್ಬವೊಂದನ್ನು ಕಳೆದುಕೊಂಡರು. ಕನ್ನಡ ನುಡಿಯ ಏಳಿಗೆಗಾಗಿ, ಕನ್ನಡಿಗರ ಒಕ್ಕೂಟಕ್ಕಾಗಿ, ಕಳೆದ ಇಪ್ಪತ್ತೈದು ವರ್ಷಗಳಿಂದಲೂ ಪರಿಷತ್ತು ನಡಸಿದ ವ್ಯವಸಾಯವು ಅಂದು ಹೂವು ಬಿಟ್ಟು ಪರಿಮಳಿಸಿತು. ಕನ್ನಡದ ಈ ಕೇಂದ್ರಸಂಸ್ಥೆಯ ಮಹೋತ್ಸವಕ್ಕೆ ಕರ್ಣಾಟಕ ಸಿಂಹಾಸನಾಧೀಶ್ವರರು ದಯಮಾಡಿಸಿ, ಮುಖ್ಯವಾಗಿ ತಮ್ಮ ಸರ್ಕಾರದ ಪೋಷಣೆಯಲ್ಲೇ ಬೆಳೆದುಬಂದ ಅದರ ಕಾರ್ಯಕಲಾಪಗಳನ್ನೂ ಗುರಿಹಾರೈಕೆಗಳನ್ನೂ ಲಾಲಿಸಿ ಕೇಳಿದರು; ಅದರ ಮುನ್ನಡೆಗೆ ಸಂತೋಷವನ್ನು ಸೂಚಿಸಿ ಹಿತವಚನಗಳನ್ನು ಆಡಿದರು; 'ಸಿರಿಗನ್ನಡಂ ಗೆಲ್ಗೆ' ಎಂಬ ಕನ್ನಡಿಗರ ಒಕ್ಕೊರಲಿನ ಕೂಗಿಗೆ ತಮ್ಮ ದನಿಯನ್ನೂ ಕೂಡಿಸಿ, ಕನ್ನಡದ ಚಳವಳಿಗೆ ರಾಜಮುದ್ರೆಯನ್ನೊತ್ತಿದರು.

ಬೆಳ್ಳಿಯ ಹಬ್ಬವು ನಿಜವಾಗಿಯೂ ಒಂದು ಹಬ್ಬವೇ ಆಗಿತ್ತು. ಹಬ್ಬದ ಸಡಗರ, ಉಲ್ಲಾಸ, ದೂರದ ಊರುಗಳಿಂದ ಬಂದು ಸೇರಿದ ಬಾಂಧವರ ಸ್ನೇಹಸಲ್ಲಾಪ, ಊಟ, ಪಾಟ, ಸೋಟ—ಎಲ್ಲವೂ ಇದ್ದುವು. ಉತ್ಸವದ ಮುಖ್ಯಾಂಗವೇ ಇವು. ಪ್ರಸಿದ್ಧಗಮಕಿಗಳ ಕಾವ್ಯವಾಚನ, ಸುಶ್ರಾವ್ಯವಾದ ಗಾಯನ, ಪ್ರೇಕ್ಷಕರನ್ನು ಮರುಳುಗೊಳಿಸಿದ ನೃತ್ಯಗಳು, ನಾಡಿನ ಬೇರೆ ಬೇರೆ ಭಾಗಗಳ ಅಭಿನಯಕೋವಿದರು ಪ್ರದರ್ಶಿಸಿದ ಹಳೆಯ ಮತ್ತು ಹೊಸ ಮಾದರಿಯ ನಾಟಕ ದೃಶ್ಯಗಳು, ಸುರಿತ

ಚತುರರು ನಡಸಿದ 'ತಾಳಮದ್ದಲೆ'— ಕನ್ನಡಕಲೆಗಳ ಈ ಮಂಜುಳನಿನಾದಕ್ಕೆ ಕೋಲಾಹಲವನ್ನು ಬೆರಸಿ, ಪರಿಷತ್ತಿನ ಸಭಾಮಂದಿರವು ಹಿಡಿಸಲಾರದಂತೆ ನೆರೆಯುತ್ತಿದ್ದ ಪ್ರೇಕ್ಷಕ ಸಮುದಾಯ. ನೃತ್ಯಗೀತಗಳು ನಡೆಯುವ ಹೊತ್ತಿನಲ್ಲಂತೂ, ಮಂದಿರದೊಳಗಡೆ ತುಂಬಿದ್ದವರಿಗಿಂತ, ಪ್ರವೇಶಕ್ಕೆ ಮಾರ್ಗವಿಲ್ಲದೆ ಹೊರಗೆ ಕಾದು ನಿಂತಿದ್ದವರ ಸಂಖ್ಯೆಯೇ ಹೆಚ್ಚಾಗಿತ್ತೆಂದು ಹೇಳಬಹುದು. ಇದರ ಮೇಲೆ, ಸಭೆಗೆ ಗೆಲುವನ್ನೂ ಕಳೆಯನ್ನೂ ಬೀರುತ್ತಾ ತಮ್ಮ ಉತ್ಸಾಹ ಸಹನೆಗಳಿಂದ ಗಂಡಸರನ್ನು ನಾಚಿಸುತ್ತಾ ಗುಂಪುಗುಂಪಾಗಿ ಬಂದು ಕುಳಿತುಕೊಳ್ಳುತ್ತಿದ್ದ ಮಹಿಳೆಯರು; ಒಂದೊಂದು ಸಲ ಸಭಾಮಂದಿರದ ತುಂಬ ಅವರೇ ಆಗಿಬಿಡುತ್ತಿದ್ದರು. ಮಹಿಳೆಯರಿಗೆ ಇಷ್ಟು ಮಮತೆ ಹುಟ್ಟಿದ ಮೇಲೆ ಕನ್ನಡಕ್ಕೆ ಯಾವ ಭಯವೂ ಇಲ್ಲ! ಮರೆಯಲಾಗದ ಇನ್ನೊಂದು ಸಂಗತಿ: ಮೊದಲನೆಯ ದಿನ ಮಧ್ಯಾಹ್ನ, ಸಜ್ಜನರಾಯರ ವಿಶಾಲವಾದ ಛತ್ರದಲ್ಲಿ ಕನ್ನಡಿಗರು ಕಿಕ್ಕಿರಿದು ಕುಳಿತು ಕನ್ನಡ ತಾಯಿ ಪ್ರಸಾದವನ್ನು ಸವಿಯುತ್ತಿದ್ದ ದೃಶ್ಯ ಯಾರ ಹೊಟ್ಟೆಯನ್ನಾದರೂ ಆನಂದದಿಂದ ತುಂಬಿಸುತ್ತಿತ್ತು.

ಈ ಸಮಾರಂಭಗಳ ನಡುವೆ ಅವಕಾಶ ಕಲ್ಪಿಸಿಕೊಂಡು ಗ್ರಂಥ ಪ್ರದರ್ಶನೋತ್ಸವ, ಮಹಿಳಾಸಭೆ, ವಿದ್ವತ್ಸಭೆ ಮೊದಲಾದುವು ಯಶಸ್ವಿಯಾಗಿ ನಡೆದುವು. ಪರಿಷತ್ತು ಮೊದಲ ಬಾರಿ ಏರ್ಪಡಿಸಿದ್ದ ಕನ್ನಡ ಸಾಹಿತ್ಯಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿದವರಿಗೆ ಪ್ರಶಸ್ತಿಪತ್ರಗಳನ್ನು ಕೊಡುವ ಕಾರ್ಯವೂ ಇದೇ ವೇಳೆಯಲ್ಲಿ ಜರುಗಿತು. ಪರಿಷತ್ತು ತನ್ನ ಕಾರ್ಯಕ್ಷೇತ್ರವನ್ನು ವಿಸ್ತರಿಸಿಕೊಳ್ಳುತ್ತಿದೆ. ಕನ್ನಡ ನುಡಿಯ ರಕ್ಷಾಮಣಿಯಾಗಿರುವುದರ ಜೊತೆಗೆ ಕನ್ನಡ ಜನದ ಸರಸ್ವತೀ ಪೀಠವಾಗಬೇಕೆಂದೂ ಹಾರೈಸುತ್ತಿದೆ. ಅದರ ಬಹುಮುಖವಾದ ಪ್ರಯತ್ನಗಳಿಗೆ ಜನರ ಮತ್ತು ಸರ್ಕಾರಗಳ ಒತ್ತಾಸೆ ಹೆಚ್ಚು ಹೆಚ್ಚಾಗಿ ದೊರೆಯಲಿ. ಇಂದಿನ ಕನಸು ಕಣಸುಗಳು ಚಿನ್ನದ ಹಬ್ಬದ ವೇಳೆಗೆ ನೆನಸಾಗಿ ಕೈಗೂಡಲಿ.

ತೀ. ನಂ. ಶ್ರೀ.

***

ಈಗಾಗಲೇ ಹಬ್ಬದ ವಿವರವು 'ಕನ್ನಡ ನುಡಿ' ಮುಂತಾದ ಹಲವು ಕನ್ನಡ ಪತ್ರಿಕೆಗಳಲ್ಲಿ ಬಂದಿದೆ. ಆದರೂ "ಪ್ರಬುದ್ಧ ಕರ್ಣಾಟಕ"ದಲ್ಲಿ ಶೇಖರಿಸಿಡಬೇಕೆಂಬ ಆಸೆಯಿಂದ ಮುಂದೆ 'ಬಿನ್ನವತ್ತಳೆ' ಮತ್ತು 'ಮಹಾಸ್ವಾಮಿಯವರ ಉತ್ತರ'ಗಳಿಂದ ತಿರುಳಾದ ಭಾಗವನ್ನು ಎತ್ತಿಕೊಟ್ಟಿದ್ದೇವೆ:—



ಮಹಾಸ್ವಾಮಿಯವರಿಗೆ ಬೆಳ್ಳಿಯ ಕರಂಡವನ್ನೂ ಹಬ್ಬದ ಪ್ರಕಟನೆಗಳನ್ನೂ ಅರ್ಪಿಸುತ್ತಿರುವುದು

ಪಡಿಯಚ್ಚು "ತಾಯಿನಾಡು" ಕೃಪೆಯಿಟ್ಟು ಕೊಟ್ಟದ್ದು



ಬೆಳ್ಳಿಯ ಕರಂಡ—ಮುಂಭಾಗ



ಬೆಳ್ಳಿಯ ಕರಂಡ—ಹಿಂಭಾಗ

ಪಡಿಯಚ್ಚುಗಳು "ಕನ್ನಡ ನುಡಿ"ಯ ಕೃಪೆಯಿಂದ ಬಂದವು

“ಕನ್ನಡ ನುಡಿಯು ಮತ್ತು ಸಾಹಿತ್ಯದ ಅಭಿವೃದ್ಧಿಗೆ ಮೈಸೂರು ಸಂಸ್ಥಾನದ ಅರಮನೆಯಿಂದ ಅಮೋಘವಾದ ಸಹಾಯ ಪ್ರೋತ್ಸಾಹಗಳು ದೊರೆತಿವೆ. ಕನ್ನಡ ಭಾಷೆ ಹಿಂದೆ ಬೆಳೆದುಬಂದದ್ದು ಅರಮನೆ ಗುರುಮನೆಗಳ ಕೃಪಾಶ್ರಯದಲ್ಲಿ. ಕನ್ನಡಸಾಹಿತ್ಯವನ್ನು ವೃದ್ಧಿಗೊಳಿಸುವ ಹೆಮ್ಮೆಯ ಕಾರ್ಯದಲ್ಲಿ, ನೃಪತುಂಗ ತೈಲಪ ವೀರಬಲ್ಲಾಳ ಕೃಷ್ಣದೇವರಾಯ ಮುಂತಾದ ಅನೇಕ ರಾಜವಂಶಗಳ ಪ್ರಸಿದ್ಧ ಮಹಾರಾಜರುಗಳೂ ಅನೇಕ ಮಠಾಧಿಪತಿಗಳೂ ಉತ್ತೇಜನಕೊಡುತ್ತ ಬಂದಿದ್ದಾರೆ. ಕನ್ನಡಕ್ಕೆ ವಿಜಯನಗರ ಸಾಮ್ರಾಜ್ಯದ ಆಶ್ರಯ ತಪ್ಪಿದ ಮೇಲೆ ಮೈಸೂರು ಸಂಸ್ಥಾನದ ರಾಜಮನೆತನದ ನೆರಳಿನಲ್ಲಿ ಕನ್ನಡ ಸರಸ್ವತಿ ನಿಶ್ಚಿಂತಳಾಗಿ ನೆಲಸಿದ್ದಾಳೆ. ಆರನೆಯ ಶ್ರೀ ಚಾಮರಾಜ ಒಡೆಯರವರೂ, ಶ್ರೀ ಚಿಕ್ಕದೇವರಾಜ ಒಡೆಯರವರೂ, ಶ್ರೀ ಚಲುವಾಂಬಾ ಮಹಾರಾಣಿಯವರೂ, ಸ್ವಂತವಾಗಿ ಗ್ರಂಥರಚನೆ ಮಾಡಿ, ಸಾಹಿತಿಗಳಿಗೆ ಪ್ರೋತ್ಸಾಹಕೊಟ್ಟು, ಕರ್ನಾಟಕ ಸರಸ್ವತೀ ಭಂಡಾರವನ್ನು ಅಲಂಕರಿಸಿದ್ದಾರೆ. ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರು ಅನೇಕ ಗ್ರಂಥಗಳನ್ನು ಬರೆದು, ಮಹಾಭಾರತ ಮುಂತಾದ ಪವಿತ್ರ ಗ್ರಂಥಗಳನ್ನು ಕನ್ನಡಕ್ಕೆ ಭಾಷಾಂತರ ಮಾಡಿಸಿ ಪರವೋಪಕಾರ ಮಾಡಿರುವರು. ಆಳಿದ ಮಹಾಸ್ವಾಮಿಯವರಾದ ಶ್ರೀ ಚಾಮರಾಜೇಂದ್ರ ಒಡೆಯರವರ ಕಾಲ ಕನ್ನಡದಲ್ಲಿ ಒಂದು ಹೊಸಯುಗದ ಅರುಣೋದಯವೆನ್ನಬಹುದು. ಇಂಗ್ಲಿಷ್ ವಿದ್ಯಾಪ್ರಚಾರದಿಂದ, ಇಂಗ್ಲಿಷ್ ಸಾಹಿತ್ಯಶಾಸ್ತ್ರ ಸಂಸ್ಕೃತಿಗಳ ಪ್ರಭಾವದಿಂದ, ಸ್ತ್ರೀಯರೂ ಪುರುಷರೂ ದೇಶಾಭಿಮಾನಿಗಳೂ ಭಾಷಾಭಿಮಾನಿಗಳೂ ಆಗಿ, ಕನ್ನಡದ ಪುನರುಜ್ಜೀವನದ ದೀಕ್ಷೆಯನ್ನು ಕೈಕೊಂಡಾಗ, ಶ್ರೀಮನ್ಮಹಾರಾಜರವರೇ ಮಾರ್ಗದರ್ಶಿಗಳಾಗಿ, ಮೈಸೂರಿನಲ್ಲೇ ಅಲ್ಲದೆ ಉತ್ತರ ಕರ್ನಾಟಕದ ಕೇಂದ್ರವಾದ ಧಾರವಾಡದ ವಿದ್ಯಾವರ್ಧಕ ಸಂಘಕ್ಕೆ ಉದಾರಾಶ್ರಯವನ್ನಿತ್ತು, ಎಲ್ಲಾ ಕನ್ನಡಿಗರ ಬಾಂಧವ್ಯವನ್ನು ಬೆಳಸಿದವರಲ್ಲಿ ಅಗ್ರಗಣ್ಯರಾಗಿದ್ದಾರೆ.

ಬಿನ್ನವತ್ತಳೆ

ಪೂಜ್ಯರಾದ ಪೂರ್ವಿಕರ ಪುಣ್ಯಪ್ರಭಾವಗಳೆಲ್ಲಾ ಮೂರ್ತೀಭವಿಸಿದಂತಿರುವ ಮಹಾಸ್ವಾಮಿಯವರು ಸಾಹಿತ್ಯ, ಸಂಗೀತ, ಶಾಸ್ತ್ರ, ಕಲೆ, ಸಂಸ್ಕೃತಿ, ಸುಧಾರಣೆಗಳನ್ನು ಪೋಷಿಸುತ್ತಿರುವ ಕೃಪಾಕಟಾಕ್ಷವೂ ಸತ್ಪ್ರೇರಣೆಯೂ ಭರತಖಂಡಕ್ಕೆಲ್ಲ ಮಾದರಿಯಾಗಿವೆ. ಪ್ರಜಾವತ್ಸಲರಾದ, ಸಂಯಮಶೀಲರಾದ, ಆದರ್ಶಪ್ರಭುಗಳಾದ ರಾಜರ್ಷಿಗಳಾದ ತಮ್ಮ ಧವಳಕೀರ್ತಿ ಕನ್ನಡಿಗರೆಲ್ಲರ ಹೆಮ್ಮೆಗೂ ಸುಮ್ಮಾನಕ್ಕೂ ಆಧಾರವಾಗಿದೆ. ತಮ್ಮ ಪ್ರಜಾಪಾಲನೆಯ ವೈಭವವನ್ನೂ ಸರ್ವಸಮದೃಷ್ಟಿಯನ್ನೂ ನೋಡಿ, ಮಹಾತ್ಮಾ ಗಾಂಧಿ, ಲಾರ್ಡ್‌ಸ್ಯಾಂಕಿ ಮುಂತಾದ ಮಹನೀಯರು

ತಮ್ಮ ರಾಜ್ಯವನ್ನು ರಾಮರಾಜ್ಯವೆಂದೂ ಆದರ್ಶ ಸಂಸ್ಥಾನವೆಂದೂ ಶ್ಲಾಘಿಸಿದ್ದಾರೆ. ಎಚ್ಚೆತ್ತ ಹೊಸ ಮೈಸೂರಿನ ಸರ್ವಮುಖವಾದ ಮುನ್ನಡೆಯ ಚಿಹ್ನೆಗಳಲ್ಲಿ, ನಮ್ಮ ಸಾಹಿತ್ಯಪರಿಷತ್ತಿನ ಸ್ಥಾಪನೆಯೂ ಒಂದು. ಪರಿಷತ್ತಿಗೆ ಮಹಾಸ್ವಾಮಿಯವರು ಮೊದಲಿಂದಲೂ ಮಹಾಪೋಷಕರಾಗಿದ್ದುಕೊಂಡು ಎಲ್ಲಾ ಬಗೆಯ ಉತ್ತೇಜನಗಳನ್ನೂ ದಯಪಾಲಿಸುತ್ತಿರುತ್ತೀರಿ. ತಮ್ಮ ಕೃಪಾವಲಂಬನದಿಂದಲೂ, ತಮ್ಮ ಸರ್ಕಾರದ ಆಶ್ರಯ ಸಹಾಯಗಳಿಂದಲೂ ಪರಿಷತ್ತು ಬಹಳ ಉಪಕಾರ ಹೊಂದಿರುತ್ತದೆ. . . . ಈ ಎಲ್ಲ ಪಾಲನೆಗಳಿಂದ ಪರಿಷತ್ತು ಬೆಳೆದು ಚೈತನ್ಯಪೂರಿ ನಾಡುನುಡಿಗಳ ಸೇವೆಯನ್ನು ಹೆಚ್ಚುಹೆಚ್ಚಾಗಿ ಮಾಡಲು ತವಕಿಸುತ್ತ ಮಹಾಜನರ ಅಭಿಮಾನಾದರಗಳನ್ನೂ, ಪೋಷಣೆಯನ್ನೂ ಆಕರ್ಷಿಸುತ್ತಿದೆಯೆಂದು ಅರಿಕೆಮಾಡಲು ಸಂತೋಷಿಸುತ್ತೇವೆ, ಮಹಾಸ್ವಾಮಿ. . . .”

* * *

“ಈ ಪರಿಷತ್ತಿನ ರಜತಮಹೋತ್ಸವವನ್ನು ಸಮಾರಂಭಣಗೊಳಿಸಬೇಕೆಂಬ ಆಹ್ವಾನವನ್ನು ವಿಶೇಷ ಸಂತೋಷದಿಂದ ಅಂಗೀಕರಿಸಿ, ನಾವು ಇಲ್ಲಿಗೈತಂದಿರುವೆವು.

ಮಹಾಸ್ವಾಮಿಯವರ ಪ್ರತ್ಯುತ್ತರ

ಮೈಸೂರು ಸಂಸ್ಥಾನದಲ್ಲಿ ಮಾತ್ರವೇ ಅಲ್ಲದೆ, ವಿಸ್ತೀರ್ಣದಲ್ಲಿ ಅದಕ್ಕೆ ಸಮಾನವೆನಿಸಿ, ಅಧಿಕಭಾಗವು ಅದರ ಉತ್ತರ ದಿಕ್ಕಿನಲ್ಲಿ ಪಸರಿಸಿರುವ ಅಖಿಲ ಕನ್ನಡನಾಡಿನಲ್ಲಿ ಕನ್ನಡ ಭಾಷಾಸಂಸ್ಕೃತಿಗಳ ಪ್ರಚಾರ ಮಾಡುವುದು ಪರಿಷತ್ತಿನ ಉದ್ದೇಶವಾಗಿದೆ. ಆ ಪ್ರದೇಶವೂ, ಮೈಸೂರು ಸಂಸ್ಥಾನವೂ, ಕನ್ನಡ ಭಾಷೆಯನ್ನುಪಯೋಗಿಸುವ ೧ ಕೋಟಿ ೩೧ ಲಕ್ಷ ಜನರಿಗೆ ಆಶ್ರಯಕೊಟ್ಟಿವೆ. . . .

ಜೀವಕಳೆಯಿಂದ ತುಂಬಿ ಪರಿಶೋಭಿಸುತ್ತಿರುವುದೇ ಭಾಷೆಗಳ ಲಕ್ಷಣ. ನೂತನ ಶಬ್ದಗಳೂ ನೂತನ ಪದಗುಂಫನ ವಿನ್ಯಾಸ ಸಂಪತ್ತಿಯೂ ಬಂದು ಸೇರಿದಂತೆಲ್ಲ, ಭಾಷೆಗಳು ಬಳೆವಣಿಗೆ ಹೊಂದುವುವು. . . .

ಕನ್ನಡ ಭಾಷಾಭಿವೃದ್ಧಿಯು ಏಕಪ್ರಕಾರವಾಗಿ ಮುಂದುವರಿಯದೆ ಸ್ವಲ್ಪಮಟ್ಟಿಗೆ ಅದಕ್ಕೆ ಅಭ್ಯಂತರ ಒದಗಿದ್ದಿತೆಂದು ಹೇಳಬಹುದಾಗಿದೆ. ಕರ್ಣಾಟಕವು ಕಾವೇರಿಯಿಂದ ಗೋದಾವರಿ ವರೆಗೆ ವಿಸ್ತೃತವಾಗಿದ್ದ ಅವಧಿಯಲ್ಲಿ, ಹಳಗನ್ನಡದ ರೂಪಗಳೂ ಹಳಗನ್ನಡದ ಸಾಹಿತ್ಯವೂ ವೃದ್ಧಿಹೊಂದಿದುವು. ಆಗಿನ ಕಾಲದ ಸಾಹಿತ್ಯದಲ್ಲಿ ಕಾಣಬಹುದಾದ ಶಬ್ದಜಾಲವನ್ನು ನೋಡಿದರೆ, ಕನ್ನಡಿಗರ ಪ್ರಾಚೀನ ಸಂಸ್ಕೃತಿ ಚಿತ್ರವು ಹೃದಯಂಗಮವಾಗಿ ವ್ಯಕ್ತವಾಗುತ್ತದೆ. ಆದರೆ, ಅಲ್ಲಿಂದ

ಮುಂದಿನ ಅಭಿವೃದ್ಧಿದಶೆಯು ಪ್ರಾರಂಭವಾಗಿ, ಆಧುನಿಕ ಪ್ರಪಂಚದ ಜ್ಞಾನ ಭಂಡಾರ ಪರಿಚಯ ಮಾಡಿಕೊಡುವ ನೂತನ ಶಬ್ದಗಳೂ, ನೂತನ ಪದ ಗುಂಫನ ವಿನ್ಯಾಸಗಳೂ ಸೇರಬೇಕಾಗಿದ್ದ ಕಾಲವು ಒದಗಿದ್ದಾಗ್ಗೆ, ಇಂಗ್ಲಿಷ್ ಭಾಷಾ ವ್ಯಾಸಂಗವು ಉಪಕ್ರಮವಾಗುವ ವ್ಯವಸ್ಥೆಯು ನಡೆಯಿತು. ಯಥೇಷ್ಟವಾಗಿ ಶಬ್ದ ಸಂಪತ್ತಿಯುಳ್ಳ ಇಂಗ್ಲಿಷ್ ಭಾಷೆಯ ಪರಿಚಯಹೊಂದಿ ಆಧುನಿಕ ಕಲಾವಿಜ್ಞಾನ ಗಳನ್ನು ಸ್ವಾಧೀನಪಡಿಸಿಕೊಂಡ ಭಾಗ್ಯಶಾಲಿಗಳು, ತಾವು ಕರಗತಮಾಡಿಕೊಂಡಿದ್ದ ಜ್ಞಾನಸಂಪತ್ತನ್ನು ಇಂಗ್ಲಿಷ್ ಭಾಷಾ ಪರಿಚಯವಿಲ್ಲದವರಿಗೆ ದೊರೆಯಿಸುವಂತಾಗು ವುದೆಂಬುದು, ಆ ರೀತಿ ಇಂಗ್ಲಿಷ್ ಭಾಷೆಯ ವ್ಯಾಸಂಗ ವ್ಯವಸ್ಥೆಯು ನಡೆದುದರ ಉದ್ದೇಶ. ಆದರೆ, ಅದಕ್ಕೆ ಅವಶ್ಯವಾದ ನೂತನ ಶಬ್ದಜಾಲವನ್ನೇ ಅವರು ಕನ್ನಡ ಭಾಷೆಯಲ್ಲಿ ನಿರ್ಮಿಸಿಕೊಂಡು, ಇಂಗ್ಲಿಷ್ ಭಾಷಾ ವ್ಯಾಸಂಗದಿಂದ ತಾವು ಪಡೆದ ಜ್ಞಾನದ ಫಲವನ್ನು ಇಂಗ್ಲಿಷ್ ಭಾಷಾ ಪರಿಚಯವಿಲ್ಲದ ತಮ್ಮ ದೇಶಬಾಂಧವರಿಗೆ ಸ್ವಭಾಷೆಯಲ್ಲಿ ದೊರೆಯಿಸುವರೆಂದು ನಿರೀಕ್ಷಿಸಿದುದರಲ್ಲಿ, ಅವರು ನಿರ್ವಹಿಸಬೇಕಾದ ಕಾರ್ಯವೆಷ್ಟು ಕಷ್ಟಸಾಧ್ಯವೆಂಬುದು ಬಹುಶಃ ಮನವರಿಕೆಯಾಗಲಿಲ್ಲವೆಂದು ತೋರು ತ್ತದೆ. ಪರಿಣಾಮದಲ್ಲಿ, ಅವರು ಆ ಮಹತ್ತರ ಕಾರ್ಯವನ್ನು ನಿರ್ವಹಿಸಲಾರದೆ ಹೋದರು. ಅವರು ಅದನ್ನು ನಿರ್ವಹಿಸಲು ಅವಶ್ಯವಾಗಿದ್ದ ಶಬ್ದಗಳ ಅಭಾವವೇ ಬಹುಶಃ ಅದಕ್ಕೊಂದು ಕಾರಣವಾಗಿರಬಹುದು. ಅದೆಲ್ಲದರ ಪರಿಣಾಮವಾಗಿ, ಪರಸ್ಪರ ಸ್ಪರ್ಧಿಗಳೋ ಎಂದು ಭಾಸವಾಗುವಂತೆ, ಕನ್ನಡದ ಎರಡು ರೂಪಗಳು ಇಂದು ನಮ್ಮೆದುರಿಗೆ ನಿಂತಿವೆ: ಕರ್ಣಾಟಕದ ಪ್ರಾಚೀನ ಸಾಹಿತ್ಯವನ್ನೊಳಗೊಂಡಿರುವ ಹಳಗನ್ನಡದ ಪ್ರಾಚೀನ ರೂಪವು ಅವುಗಳಲ್ಲಿ ಮೊದಲನೆಯದು. ಆಧುನಿಕ ಸನ್ನಿವೇಶಗಳಲ್ಲಿ ಪ್ರತ್ಯಹದ ಜೀವನ ವ್ಯವಹಾರ ಸಂಬಂಧವಾಗಿ ಅತ್ಯವಶ್ಯವಾಗಿ ರುವ ಹೊಸಗನ್ನಡ ಸಾಹಿತ್ಯದ ನೂತನ ರೂಪವು ಅವುಗಳಲ್ಲೆರಡನೆಯದು. ನಿಮ್ಮ ಪರಿಷತ್ತು ಕಾರ್ಯರಂಗಕ್ಕಿಳಿದು ಹೊಸಗನ್ನಡದ ಪುರೋಭಿವೃದ್ಧಿ ಸಾಧನೆಯಲ್ಲಿ ಭಾಗವಹಿಸಲಾರಂಭಿಸಿದ ಕಾಲದವರೆಗೂ, ಹೊಸಗನ್ನಡದ ಪ್ರಗತಿಯು ಸ್ವಲ್ಪ ಮಟ್ಟಿಗೆ ಅನಿಶ್ಚಿತರೀತಿಯಲ್ಲಿ ಮುಂದುವರಿಯುತ್ತಿದ್ದಿತೆಂದೇ ಹೇಳಿದರೂ ಹೇಳ ಬಹುದು.

ನೀವುಗಳು ಉದ್ಯುಕ್ತರಾಗಿರುವ ಭಾಷಾಭಿವೃದ್ಧಿ ಪ್ರಯತ್ನವು ಬಹುಮುಖ ವಾಗಿದೆ. ಹೊಸಗನ್ನಡವು ಆಧುನಿಕ ಪರಿಸ್ಥಿತಿಯಲ್ಲಿ ಉಪಯೋಗಕ್ಕೆ ಅವಶ್ಯವೆನಿ ಸುವಮಟ್ಟಿಗೂ ಒದಗುವಂತೆ ಅದನ್ನು ನವೀನ ರೀತಿಯಲ್ಲಿ ಪರಿಪುಷ್ಟಿಗೊಳಿಸುವು ದೊಂದು ; ಆಧುನಿಕ ಕಲಾವಿಜ್ಞಾನಗಳ ಸಂಬಂಧದ ನವೀನ ವಿಚಾರ ಧೋರಣೆಗಳ

ನ್ನೆಲ್ಲ ಸ್ಪಷ್ಟವಾಗಿ ನಿರೂಪಿಸಿ ಬೋಧಿಸುವುದು ಸಾಧ್ಯವಾಗುವಮಟ್ಟಿಗೂ ಅದನ್ನು ವಿಕಾಸಗೊಳಿಸುವುದೊಂದು; ಆ ರೀತಿ ಯಾವ ಸಂದರ್ಭಕ್ಕೆಂದರೆ ಆ ಸಂದರ್ಭಕ್ಕೆ ಸಮೃದ್ಧವಾಗಿ ಒದಗಿ ಅಳವಡುವಂತೆಯೂ ಉಪಯುಕ್ತವಾಗಿರುವಂತೆಯೂ ವ್ಯವಸ್ಥೆಗೊಳಿಸಿದ ಹೊಸಗನ್ನಡದಲ್ಲಿ ನೂತನ ಸಾಹಿತ್ಯ ಭಂಡಾರವೊಂದನ್ನೇ ನಿರ್ಮಿಸಿ ಒದಗಿಸಿಕೊಳ್ಳುವುದೊಂದು; ಇವೇ ಮುಂತಾದ ಮಾರ್ಗಗಳಲ್ಲಿ ನೀವುಗಳು ಭಾಷಾಭಿವೃದ್ಧಿ ಸಾಧನೆಗಾಗಿ ಶ್ರಮಿಸುತ್ತಿದ್ದೀರಿ. ಹೀಗೆ ನೀವುಗಳು ಉದ್ಯುಕ್ತರಾಗಿ ಶ್ರಮಿಸುತ್ತಿರುವ ಈ ಮಹತ್ತರ ಕಾರ್ಯವೇನೂ ಸುಲಭಸಾಧ್ಯವಾದುದಲ್ಲ. . . .

ಮಹಿಳೆಯರೇ, ಮತ್ತು ಮಹಾಶಯರೇ, ಈ ಪರಿಷತ್ತು ಉದ್ಯುಕ್ತವಾಗಿ ನೆರವೇರಿಸಿಯೂ ಇರುವ ಸಾಹಿತ್ಯಾಭಿವೃದ್ಧಿ ಪ್ರಯತ್ನಗಳು, ಕನ್ನಡವೇ ಮಾತೃಭಾಷೆಯಾಗಿರುವ ನಮ್ಮ ನಾಡಿನ ಸಮಸ್ತ ಭಾಗಗಳಿಗೂ ವ್ಯಾಪಿಸಿರುವ ಅಂಶವನ್ನು ಮನಗಂಡು, ನಮಗೆ ಮಹತ್ತರವಾದ ಹರ್ಷವುಂಟಾಗಿದೆ. ಕನ್ನಡಿಗರ ಸಂಸ್ಕೃತಿಯ ಮೇಲ್ಮೆಯನ್ನು ಸಾಧಿಸುವ ಮಹತ್ತರವಾದ ಕಾರ್ಯವನ್ನು ಕೈಕೊಂಡಿರುವ ಈ ಪರಿಷತ್ತು ಅನುದಿನವೂ ಪುರೋಭಿವೃದ್ಧಿ ಹೊಂದುತ್ತ ಬರಲೆಂದೂ, ಅದರ ಪ್ರಯತ್ನಗಳು ಮುಂದಿನ ವರ್ಷಗಳಲ್ಲಿ ಇತೋಪ್ಯಧಿಕವಾಗಿ ವೃದ್ಧಿಹೊಂದಿ ಮತ್ತಷ್ಟು ಅಧಿಕತರವಾಗಿ ಸಫಲವಾಗಲೆಂದೂ, ಮನಃಪೂರ್ವಕವಾಗಿ ನಾವು ಹಾರೈಸುವೆವು. ಸಿರಿಗನ್ನಡಂ ಗೆಲ್ಗೆ!"

***

ವಿಶ್ವವಿದ್ಯಾನಿಲಯದ ಹೊಸ ರಿಜಿಸ್ಟ್ರಾರರವರಿಗೆ ಅಭಿನಂದನ

ಕಳೆದ ಹತ್ತು ವರ್ಷಗಳಿಂದ ರಿಜಿಸ್ಟ್ರಾರರಾಗಿ ದಕ್ಷತೆಯಿಂದ ಕೆಲಸಮಾಡಿದ ಶ್ರೀಮಾನ್ ವಿ. ಗೋಪಾಲಸ್ವಾಮಯ್ಯಂಗಾರ್, ಎಂ.ಎ., ಅವರು ವಿಶ್ರಾಂತಿ ಪಡೆಯುವುದಕ್ಕೆ ಮುನ್ನ ರಜ ತೆಗೆದುಕೊಂಡಿರುತ್ತಾರೆ. ಅವರ ಸ್ಥಾನದಲ್ಲಿ ಇದೇ ಆಗಸ್ಟ್ ತಿಂಗಳು ಮೊದಲನೆಯ ತಾರೀಖಿನಿಂದ ಡಾ|| ಚಾರಲ್ಸ್ ಪಿಚ್ಚಮುತ್ತು, ಬಿ.ಎಸ್‌ಸಿ., ಪಿಎಚ್.ಡಿ. (ಗ್ಲಾಸ್ಗೊ), ಎಫ್.ಆರ್.ಎಸ್.ಇ., ಎಫ್.ಇ.ಎಸ್., ಇವರು ಮೈಸೂರು ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರರಾಗಿದ್ದಾರೆ. ಇವರಿಗೆ ನಮ್ಮ ಹೃತ್ಪೂರ್ವಕವಾದ ಅಭಿನಂದನಗಳು!

***

ಈ ವರ್ಷ ಹೊಸದಾಗಿ ಆರಂಭವಾದ ಶಿವಮೊಗ್ಗ ಮತ್ತು ತುಮಕೂರು ಇಂಟರ್ ಮೀಡಿಯಟ್ ಕಾಲೇಜುಗಳಲ್ಲಿ ಆಗಲೇ ಕರ್ಣಾಟಕ ಸಂಘಗಳು ಸ್ಥಾಪಿತವಾಗಿವೆ



ಕಳೆದ ೧೦ ವರ್ಷಗಳಿಂದ
ಮೈಸೂರು ವಿಶ್ವವಿದ್ಯಾನಿಲಯದ
ರಿಜಿಸ್ಟ್ರಾರರಾಗಿದ್ದು ವಿಶ್ರಾಂತಿ
ಪಡೆಯುವ ಮುನ್ನ ರಜ ತೆಗೆದು
ಕೊಂಡಿರುವ

**ಶ್ರೀ|| ವಿ. ಗೋಪಾಲ
ಸ್ವಾಮಿ ಅಯ್ಯಂಗಾ
ರ್ಯರು, ಎಂ.ಎ.**



ಅವರ ಸ್ಥಾನದಲ್ಲಿ ೧-೮-೧೯೪೦
ರಿಂದ ರಿಜಿಸ್ಟ್ರಾರರಾಗಿರುವ

**ಶ್ರೀಮರ್ವಾ
ಡಾ|| ಚಾರಲ್ಸ್
ಪಿಚ್ಚಮುತ್ತು,
ಬಿ.ಎಸ್‌ಸಿ., ಪಿಎಚ್.ಡಿ.
(ಗ್ಲಾಸ್ಗೋ),
ಎಫ್.ಆರ್.ಎಸ್.ಇ.,
ಎಫ್.ಜಿ.ಎಸ್.**

ಯೆಂದೂ ಅವುಗಳು ಕಾರ್ಯಕಲಾಪವನ್ನು ಬಹು ಶ್ರದ್ಧೆಯಿಂದ ಮೊದಲುಮಾಡಿರುವುವೆಂದೂ ತಿಳಿಸಲು ಸಂತೋಷಿಸುತ್ತೇವೆ. ಶಿವಮೊಗ್ಗದಲ್ಲಿ ಶ್ರೀಮಾನ್ ಬಿ. ಪುಟ್ಟನಂಜಪ್ಪ, ಎಂ.ಎ., ಎಲ್‌ಎಲ್.ಬಿ. ಅವರೂ ತುಮಕೂರಿನಲ್ಲಿ ಡಿ|| ಬೋರ್ಡು ಅಧ್ಯಕ್ಷರಾದ ಶ್ರೀಮಾನ್ ಎನ್. ಚನ್ನಪ್ಪ, ಬಿ.ಎ., ಬಿ.ಎಲ್. ಅವರೂ ಆರಂಭ ಭಾಷಣಗಳನ್ನು ಮಾಡಿ ಸಂಘದ ಕಾರ್ಯಗಳಿಗೆ ಉತ್ತೇಜನಕೊಟ್ಟರು.

ಹೊಸ ಕರ್ಣಾಟಕ ಸಂಘಗಳು: ಅವುಗಳಲ್ಲಿ ಮಹಾಜನರ ಆಸಕ್ತಿ

ಶ್ರೀಮಾನ್ ಚನ್ನಪ್ಪನವರು ಭಾಷಣಮಾಡುತ್ತ (೨೬–೭–೧೯೪೦) ಮುಂದೆ ಹೇಳುವಂತೆ ಅಪ್ಪಣೆಕೊಡಿಸಿದರು—"ಕನ್ನಡ ಭಾಷೆಯು ಉದ್ಧಾರವಾಗಬೇಕಾದರೆ ಅದಕ್ಕೆ ವಿದ್ಯಾಭ್ಯಾಸದಲ್ಲಿರುವ ಸ್ಥಾನವು ಮುಖ್ಯವೆಂದೂ ಇಲ್ಲಿನವರಿಗಿದ್ದ, ಸುಮಾರು ೧೦೦ ವರುಷಗಳ ಹಿಂದೆ ರಚಿಸಿದ್ದ, ವಿದ್ಯಾಭ್ಯಾಸಕ್ರಮದಿಂದ ನಮ್ಮ ಭಾಷೆಗೆ ಉತ್ತೇಜನವಿಲ್ಲದೆ ಸರ್ಕಾರಿ ನೌಕರಿ ದೃಷ್ಟಿಯಿಂದ ಪರಭಾಷೆಗೆ ಹೆಚ್ಚಿಗೆ ಪ್ರಾಶಸ್ತ್ಯವಿದ್ದಿತೆಂದೂ ಈಗ ಪಾಶ್ಚಾತ್ಯ ದೇಶಗಳನ್ನನುಸರಿಸಿ ಹಿಂದೂಸ್ಥಾನದ ನಾನಾ ಭಾಗಗಳಲ್ಲಿಯೂ ದೇಶಭಾಷೆಯಲ್ಲಿಯೇ ಮುಖ್ಯವಾದ ಎಲ್ಲಾ ಪಾಠಪ್ರವಚನಗಳೂ ನಡೆಯುತ್ತಿರುವಂತೆ ನಮ್ಮ ಸಂಸ್ಥಾನದಲ್ಲಿಯೂ ಸಹ ಕನ್ನಡ ಭಾಷೆಯಲ್ಲಿಯೇ ಎಲ್ಲಾ ಪಾಠಗಳು ನಡೆಯುವಂತೆ ಏರ್ಪಡಿಸಿರುವುದು ಸಂತೋಷಕರವಾಗಿದೆಯೆಂದೂ ಇದರಿಂದ ಪರಭಾಷೆಯಲ್ಲಿ ವಿಷಯ ತಿಳಿದುಕೊಳ್ಳಲು ಉಂಟಾಗುತ್ತಿದ್ದ ಕಷ್ಟವೂ ಕಾಲಹಾನಿಯೂ ಕಮ್ಮಿಯಾಗಿ ಮಾತೃಭಾಷೆಯಲ್ಲಿ ಸುಲಭವಾಗಿಯೂ ಚೆನ್ನಾಗಿಯೂ ವಿಷಯ ತಿಳಿದುಕೊಳ್ಳಲು ಅನುಕೂಲವಾಗಿದೆಯೆಂದೂ ತಿಳಿಸಿದರು. ಸ್ವರಾಜ್ಯಸಾಧನೆಗೆ ಭಾಷಾಸ್ವರಾಜ್ಯವು ಪ್ರಧಾನ ಸೋಪಾನ. . . ."

ಇಂಥ ಅಭಿಮಾನಿಗಳಾದ ಕನ್ನಡಿಗ ಮಹಾಜನರ ಮಧ್ಯದಲ್ಲಿ ಈ ಸಂಘಗಳು ಬೆಳೆದು ಮುಂದಕ್ಕೆ ಬಂದು ಫಲಕಾರಿಗಳಾಗುವುದರಲ್ಲಿ ಸಂಶಯವೇನು?

---

## ಪ್ರಾಚ್ಯಲೇಖನಾವಳಿ

**A.B.O.R.S.**—Vol. XX, Parts iii—iv (20-6-40), April—July, 1939.

(1) The Script of Mohenjo Daro and Easter Island—N. M. Bellimoria.

(2) New Lines of Investigation in Indian Linguistics—S. M. Katre.

(3) New Light on the Vedic God Savitṛ—R. N. Dandekar.

(4) Nicula and Kalidasa—D. R. Mankad.

["Meghadutha Stanza 14 has only one sense and that one is natural; it has no historical reference to either Nicula or Dinnaga. Dakshinavarthanatha or a commentator earlier than him but later than Bhoja has confounded Kalidasa of ನಾನಾರ್ಥ ಶಬ್ದರತ್ನ with Kalidasa of Meghadutha and with his fertile brain has dragged Dinnaga also into the story."]

**ಜಯಕರ್ನಾಟಕ,** XVII—೭ (ಪುಟ ೪೪೯-೪೫೩).

ರನ್ನನ ಗದಾಯುದ್ಧದ ಕಾಲನಿರ್ಣಯ—ಶ್ರೀ ವೆಂ. ಬಿ. ಲೋಕಾಪೂರ, ಬಿ.ಎ.

ಕ್ರಿ. ಶ. ೯೮೨ ರಲ್ಲಿಯೇ ರನ್ನನು ತನ್ನ ಗದಾಯುದ್ಧವನ್ನು ಬರೆದನೆಂದು ಸಿದ್ಧಮಾಡಿರುವ ಶ್ರೀ ನಾ ಶ್ರೀ ರಾಜಪುರೋಹಿತರ ಲೇಖನಕ್ಕೆ ಪ್ರತ್ಯುತ್ತರವಾಗಿ ಈ ಲೇಖನ ಬಂದಿದೆ.

'ಒಟ್ಟಿನಲ್ಲಿ ಹೇಳುವುದಾದರೆ ಗದಾಯುದ್ಧವು ಅಜಿತಪುರಾಣದನಂತರವೇ ಬರೆಯಲ್ಪಟ್ಟಿರುತ್ತದೆ. ಅಜಿತಪುರಾಣವು ತೈಲಪನ ಆಳಿಕೆಯಲ್ಲಿ ಬರೆಯಲ್ಪಟ್ಟದ್ದು. ಗದಾಯುದ್ಧವು ತೈಲಪನ ಮಗನಾದ ಸತ್ಯಾಶ್ರಯನ ಆಳಿಕೆಯಲ್ಲಿ (ಕ್ರಿ.ಶ. ೯೯೭-೧೦೦೯) ಬರೆಯಲ್ಪಟ್ಟದ್ದು. ಒಂದುವೇಳೆ ಗದಾಯುದ್ಧದಲ್ಲಿ ಉಲ್ಲೇಖಿಸಿದ ಸತ್ಯಾಶ್ರಯನ ಕಳಿಂಗನೆಂಬ ಅರಸನ ಮೇಲೆ ಆದ ವಿಜಯವು ಸತ್ಯಾಶ್ರಯನು ಚೋಳರ ಕೂಡ ಹೋರಾಡಿ ಗೆದ್ದ ಕಲಿಂಗ ದಿಗ್ವಿಜಯವೇ ಆದಲ್ಲಿ ಗದಾಯುದ್ಧವು ಸುಮಾರು ಕ್ರಿ. ಶ. ೧೦೦೭ ಅಥವಾ ೧೦೦೮ ರಲ್ಲಿ ಬರೆಯಲ್ಪಟ್ಟಿರಬೇಕು.'

**ಶರಣಸಾಹಿತ್ಯ**—ಮೇ, ೧೯೪೦.

೧. ಶೈವಾಗಮಗಳ ವಿಕಾಸ—ಶ್ರೀಮಾನ್ ಎಸ್. ಜಿ. ಸಾಖರಪೇಕರ್.

೨. ವೀರಶೈವ ಸಿದ್ಧಾಂತದಲ್ಲಿ ಬ್ರಹ್ಮದ ಕಲ್ಪನೆ—ಶ್ರೀಮಾನ್ ಎಂ. ಎಸ್. ಬಸವಲಿಂಗಯ್ಯ, ಎಂ.ಎ., ಬಿ.ಎಲ್.

೩. ಕರ್ಣಾಟಕದಲ್ಲಿ ಪಾಶುಪತ ಮತ್ತು ಶೈವಮತಗಳು—ಶ್ರೀಮಾನ್ ಕೆ. ಜಿ. ಕುಂದಣಗಾರ್, ಎಂ.ಎ.

(ಬೆಳಗಾವಿ ಮತ್ತು ಬಿಜಾಪುರ ಜಿಲ್ಲೆಗಳಲ್ಲಿ, ಪಾಶುಪತ ಮತ್ತು ಕಾಶ್ಮೀರ ಶೈವಮತಗಳಿಗೆ ಸಂಬಂಧಿಸಿದ ಅಂಶಗಳುಳ್ಳ ಕೆಲವು ಶಾಸನಗಳು ದೊರೆತಿವೆ. ಅವುಗಳ ಸಹಾಯದಿಂದ ಕರ್ಣಾಟಕದಲ್ಲಿ ಈ ಎರಡು ಮತಗಳೂ ಹೊಂದಿದ್ದ ಸ್ವರೂಪವನ್ನು ನಿಶ್ಚಯಿಸಲು ಪ್ರಯತ್ನಪಡಲಾಗಿದೆ.)

೪. ವೀರಶೈವ ಅಥವಾ ಲಿಂಗಾಯತ ಧರ್ಮ—ಶ್ರೀಮಾನ್ ಎಂ. ಆರ್. ಸಾಖರೆ, ಎಂ.ಎ., ಟಿ.ಡಿ.

**ಶರಣಸಾಹಿತ್ಯ**—ಜೂನ್, ೧೯೪೦.

೧. ಆಗಮೋಕ್ತ ವೀರಶೈವ ಧರ್ಮ—ಶ್ರೀಮಾನ್ ಎಸ್. ಜಿ. ಸಾಖರಪೇಕರ್.

೨. ವೀರಶೈವರೂ ಪಂಚಾಚಾರ್ಯರೂ—ಶ್ರೀಮಾನ್ "ಶೂಲಪಾಣಿ."

**ಶರಣಸಾಹಿತ್ಯ**—ಜುಲೈ, ೧೯೪೦.

೧. ಪಂಪನ ಆದಿಪುರಾಣ ರಚನಾಕಾಲ—ಶ್ರೀಮಾನ್ ಎಂ. ಗೋವಿಂದ ಪೈ. (ಕ್ರಿ.ಶ. ೯೪೨ ನೆಯ ಅಕ್ಟೋಬರ್ ೧೬ ನೆಯ ತಾರೀಖು ರವಿವಾರ.)

೨. ವೀರಶೈವ ವಾಙ್ಮಯಾವತಾರವೂ ಡಾ|| ನಾರಾಯಣರಾಯರೂ.—(ಲೇಖಾಂಕ ೧.)—ಕೀರ್ತನಕೇಸರಿ ಬಿ. ಶಿವಮೂರ್ತಿಶಾಸ್ತ್ರಿಗಳು.

(ಸಿದ್ಧಾಂತ ಶಿಖಾಮಣಿಯ ಕರ್ತೃ ಶಿವಯೋಗಿ ಶಿವಾಚಾರ್ಯ, ರೇವಣ ಸಲ್ಲ. ಸೋಸಲೆ ರೇವಣಾರಾಧ್ಯನು ಬರೆದಿರುವುದು ಶಿವಾಧಿಕ್ಯ ಶಿಖಾಮಣಿ.)

**ಸದ್ಧರ್ಮದೀಪಿಕೆ**—ಸಂಚಿಕೆ ೪೯–೫೧.

೧. ಶಿವಾನುಭಾವದೀಪಿಕೆ.

೨. ನಿರಂಜನವಂಶ ರತ್ನಾಕರ—೨ ನೆಯ ಭಾಗ.

**ಶಿವಾನುಭವ**—ಮಾರ್ಚಿ—ಜುಲೈ, ೧೯೪೦.

೧. ವಚನವಾಙ್ಮಯ—ಡಾ|| ಎಸ್. ಸಿ. ನಂದಿಮಠ.

೨. ವೀರಶೈವ ವಚನಕಾರರ ಕಾಲ—ರಾ. ಸಾ. ಫ. ಗು. ಹಳಕಟ್ಟಿ.

೩. ಭವಿಭಕ್ತರು; ಭಕ್ತಜಂಗಮರು—ಶ್ರೀಮಾನ್ ಬ. ಚೆ. ಪಟ್ಟೇದ.

೪. ಶಿವಲೆಂಕ ಮಂಚಣ್ಣಗಳ ವಚನಗಳು; ಉರಿಲಿಂಗದೇವನ ವಚನಗಳು.

೫. ಹರಿಹರನ ರಗಳೆಗಳು, ಭಾಗ ೭.

೬. ಶೂನ್ಯಸಂಪಾದನೆಯ ರಹಸ್ಯ—ಶ್ರೀಮಾನ್ ಕಲ್ಯಾಣಪ್ಪ ಬ್ಯಾಳಿ.

೭. ಬಸವೇಶ್ವರನು ಚಾರಿತ್ರಿಕ ಪುರುಷನೋ ಹೇಗೆ—ರಾ. ಸಾ. ಪಿ. ಜಿ. ಹಳಕಟ್ಟಿ.

೮. ಹರಿಹರ ಕವಿಯ ಲಿಂಗವಂತಿಕೆಯ ಐತಿಹ್ಯ—ಶ್ರೀಮಾನ್ ಪಂ. ಶಿವಮೂರ್ತಿ.

೯. ಶಿವಾನುಭವ ಶಬ್ದಕೋಶ.

---

# ಪ್ರೊ॥ ಟಿ. ಎಸ್. ವೆಂಕಣ್ಣಯ್ಯನವರ ಸ್ಮಾರಕ ನಿಧಿ

## ವಾಗ್ದಾನದ ಪಟ್ಟಿ—೪

| | | |
|---|---|---|
| ೧. ಆಸ್ಥಾನ ಮಹಾವಿದ್ವಾನ್ ಧರ್ಮಾಧಿಕಾರಿ ಬ್ರ॥ ಶ್ರೀ॥ ತಿರುವಳ್ಳೂರು ಶ್ರೀನಿವಾಸ ರಾಘವಾಚಾರ್ಯರು | ರೂ. | ೧೮೦— ೦—೦ |
| ೨. ಮ॥ ಎಂ. ಎಸ್. ಬಸವಲಿಂಗಯ್ಯ, ಎಂ.ಎ., ಬಿ.ಎಲ್. | ,, | ೧೫— ೦—೦ |
| ೩. ಮ॥ ಜಿ. ವೆಂಕಟಸುಬ್ಬಯ್ಯ, ಎಂ.ಎ., ಬಿ.ಟಿ. | ,, | ೫— ೦—೦ |
| | ರೂ. | ೨೦೦— ೦—೦ |
| ಹಿಂದೆ ವಾಗ್ದಾನವಾಗಿದ್ದದ್ದು | ರೂ. | ೩,೧೧೪—೧೨—೦ |
| ಇದುವರೆಗೆ ಒಟ್ಟು ವಾಗ್ದಾನವಾಗಿರುವುದು | ,, | ೩,೩೧೪—೧೨—೦ |
| ಪಾವತಿ ಬಂದು ಮೈಸೂರು ಬ್ಯಾಂಕಿನಲ್ಲಿ ಶೇಖರಿಸಿ ಇಟ್ಟಿರುವ ಹಣ (ಕಮಿಾಷರ್ ಜಾತಾ) | ರೂ. | ೨,೬೬೯— ೬—೦ |
| ಬಡ್ಡಿ | ,, | ೫೨— ೫—೦ |
| ಒಟ್ಟು | ರೂ. | ೨,೭೨೧—೧೧—೦ |

**ಎ. ಆರ್. ಕೃಷ್ಣಶಾಸ್ತ್ರೀ,**
ಕೋಶಾಧ್ಯಕ್ಷ.
ಪ್ರೊ॥ ಟಿ. ಎಸ್. ವೆಂಕಣ್ಣಯ್ಯನವರ ಸ್ಮಾರಕ ನಿಧಿ.

೧೯—೮—೧೯೪೦,
ಮೈಸೂರು.

---

# ಪ್ರಕಟನೆ

**"ಪ್ರಬುದ್ಧ ಕರ್ಣಾಟಕ"ದ ೧೭ರಿಂದ ೨೦ರ ವರೆಗಿನ ಸಂಪುಟಗಳು, ಪೂರ್ತಿ ಸಂಪುಟ ಒಂದಕ್ಕೆ (ನಾಲ್ಕು ಸಂಚಿಕೆಗಳು) ಎಂಟಾಣೆಯಂತೆಯೂ, ಬಿಡಿ ಸಂಚಿಕೆ ಒಂದಕ್ಕೆ ಮೂರಾಣೆಯಂತೆಯೂ ದೊರೆಯುತ್ತವೆ.**

**ವಿ.ಪಿ. ಮುಂತಾದ ಅಂಚೆ ವೆಚ್ಚ ಬೇರೆ.**

ಕಾರ್ಯದರ್ಶಿ,
**ಪ್ರಚಾರ ಪುಸ್ತಕಮಾಲೆ,**
ಮಹಾರಾಜರವರ ಕಾಲೇಜು, ಮೈಸೂರು.

# ಕನ್ನಡ ಸಾಹಿತ್ಯ ಪರಿಷತ್ತು

---

## ದಿವಂಗತ ಶ್ರೀ|| ಇ. ಎ. ಭಾಸ್ಕರರಾಯರ ಜ್ಞಾಪಕ ಸ್ಪರ್ಧೆ

ದಿವಂಗತ ಶ್ರೀ|| ಇ. ಎ. ಭಾಸ್ಕರರಾಯರ ಹೆಸರಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಕನ್ನಡ ಸಾಹಿತ್ಯ ಪ್ರೋತ್ಸಾಹದ ಒಂದು ಏರ್ಪಾಟನ್ನು ನಡಸಬೇಕೆಂಬ ಉದ್ದೇಶದಿಂದ ಶ್ರೀ|| ಭಾಸ್ಕರರಾಯರ ತಾಯಿಯವರಾದ ಶ್ರೀಮತಿ ಎ. ಶೇಷಮ್ಮನವರು ಒಂದು ಜ್ಞಾಪಕನಿಧಿಯನ್ನು ಪರಿಷತ್ತಿಗೆ ಕೊಟ್ಟಿರುವುದು ಸರಿಯಷ್ಟೆ. ಈ ಜ್ಞಾಪಕನಿಧಿಯ ಸಂಬಂಧದಲ್ಲಿ ಈ ವರ್ಷ (೧೯೪೦) ಒಂದು ಪ್ರಬಂಧ ಸ್ಪರ್ಧೆಯನ್ನು ನಡಸಬೇಕೆಂದು ನಿಶ್ಚಯಿಸಿದೆ.

ಪ್ರಬಂಧದ ವಿಷಯ: **"ಕನ್ನಡ ಸಾಹಿತ್ಯದಲ್ಲಿ ಸಣ್ಣ ಕತೆಯ ಸ್ಥಾನ."**

## ಸ್ಪರ್ಧೆಯ ನಿಯಮಗಳು

೧. ಪ್ರಬಂಧ ಸ್ವತಂತ್ರವಾಗಿರಬೇಕು ಮತ್ತು ಇದುವರೆಗೆ ಅಚ್ಚಾಗಿರಬಾರದು.

೨. ಪ್ರಬಂಧ ಫೂಲ್ಸ್‌ಕ್ಯಾಪ್ ಆಕಾರದ ೨೦ ಪುಟಗಳ ಪರಿಮಿತಿಯಲ್ಲಿ ಇರಬೇಕು; ಮತ್ತು ಇದನ್ನು ಕಾಗದದ ಒಂದೇ ಪಕ್ಕದಲ್ಲಿ ಶಾಯಿಯಲ್ಲಿ ಸ್ಪಷ್ಟಾಕ್ಷರಗಳಲ್ಲಿ ಬರೆದಿರಬೇಕು.

೩. ೧೯೪೦ನೆಯ ಇಸವಿ **ಸೆಪ್ಟಂಬರ್ ತಿಂಗಳು ೩೦ನೆಯ ತಾರೀಖಿನೊಳಗಾಗಿ** ಪ್ರಬಂಧ ಪರಿಷತ್ತಿನ ಕಚೇರಿಗೆ ತಲಪಬೇಕು.

೪. ಅತ್ಯುತ್ತಮವೆಂದು ಪರೀಕ್ಷಾ ಸಮಿತಿ ತೀರ್ಮಾನಿಸಿದ ಪ್ರಬಂಧಕ್ಕೆ ೨೦ರೂಪಾಯಿಗಳ ಬೆಲೆಯುಳ್ಳ ಬಹುಮಾನವನ್ನು ಕೊಡಲಾಗುವುದು.

೫. ಬಹುಮಾನ ಪಡೆದ ಪ್ರಬಂಧವನ್ನು ಪ್ರಕಟಿಸಲು ಪರಿಷತ್ತಿಗೆ ಹಕ್ಕು ಇರುತ್ತದೆ.

೬. ಸ್ಪರ್ಧೆಗೆ ಬಂದ ಪ್ರಬಂಧಗಳು ಬಹುಮಾನಕ್ಕೆ ಅರ್ಹವಾದುವುಗಳಲ್ಲವೆಂದು ಕಂಡುಬಂದರೂ ಮತ್ತು ಸಾಕಷ್ಟು ಸಂಖ್ಯೆಯಲ್ಲಿ ಪ್ರಬಂಧಗಳು ಬರದಿದ್ದರೂ ಸ್ಪರ್ಧೆಯನ್ನು ನಿಲ್ಲಿಸಬಹುದು.

೭. ಹಿಂದಿನ ವರ್ಷಗಳ ಸ್ಪರ್ಧೆಯಲ್ಲಿ ಬಹುಮಾನ ಪಡೆದವರು ಈ ಸ್ಪರ್ಧೆಗೆ ನಿಲ್ಲಬಾರದು.

[ವಿ. ಸೂ.—ಸ್ಪರ್ಧೆಗೆ ಬಂದ ಪ್ರಬಂಧವನ್ನು ಹಿಂದಿರುಗಿಸುವುದಿಲ್ಲವಾದ್ದರಿಂದ ಸ್ಪರ್ಧಿಗಳು ತಮ್ಮ ಪ್ರಬಂಧದ ಒಂದು ಪ್ರತಿಯನ್ನು ತಮ್ಮಲ್ಲಿ ಉಳಿಸಿಕೊಳ್ಳಬೇಕೆಂದು ಪ್ರಾರ್ಥನೆ.]

ಸ್ಪರ್ಧೆಗೆ ಸಂಬಂಧಿಸಿದ ಪತ್ರವ್ಯವಹಾರವನ್ನು ಪರಿಷತ್ತಿನ ಕಾರ್ಯದರ್ಶಿಯವರೊಂದಿಗೆ ನಡಸತಕ್ಕದ್ದು.

ಬೆಂಗಳೂರು,
೨೬—೭—೧೯೪೦

**ಬಿ. ವೆಂಕೋಬರಾವ್,**
ಕಾರ್ಯದರ್ಶಿ

# ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

## ಮೈಸೂರು ಪ್ರಾಂತಸಮಿತಿ

### ಅಭಿನಯ ಆಶುಭಾಷಣ ಮತ್ತು ಪ್ರಬಂಧರಚನಾಸ್ಪರ್ಧೆಗಳು

ಕನ್ನಡ ಸಂಸ್ಕೃತಿಯ ಪೋಷಣೆಗೂ, ಕಲಾಭ್ಯಾಸಿಗಳ ಪ್ರೋತ್ಸಾಹಕ್ಕೂ ನೆರವಾಗುವ ಉದ್ದೇಶದಿಂದ ಹೋದ ವರ್ಷದಂತೆ ಈ ವರ್ಷವೂ ಮೇಲ್ಕಂಡ ಸ್ಪರ್ಧೆಗಳನ್ನು ಏರ್ಪಡಿಸಲಾಗಿದೆ.

**೧. ಅಭಿನಯ ಸ್ಪರ್ಧೆ:** ಹೈಸ್ಕೂಲು ಮತ್ತು ಕಾಲೇಜುಗಳಲ್ಲಿ ಓದುತ್ತಿರುವ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಮಾತ್ರ.

ಸ್ಪರ್ಧೆಯ ವಿಷಯಗಳನ್ನು ಸ್ಪರ್ಧೆ ನಡೆಯುವದಕ್ಕಿಂತ ಸುಮಾರು ಒಂದು ತಿಂಗಳ ಮುಂಚಿತವಾಗಿ, ಪರಿಷತ್ತಿನ ಮತ್ತು ಶಾಲೆ ಕಾಲೇಜುಗಳ ನೋಟೀಸ್ ಬೋರ್ಡ್‌ಗಳ ಮೂಲಕವೂ, "ಕನ್ನಡ ನುಡಿ" ಮತ್ತು ಇತರ ಪತ್ರಿಕೆಗಳಲ್ಲಿಯೂ ಪ್ರಕಟಿಸುವ ಏರ್ಪಾಟು ಮಾಡಲಾಗುವುದು.

**೨. ಆಶುಭಾಷಣ ಸ್ಪರ್ಧೆ:** ಮೈಸೂರು ಮಾಧ್ಯಮಿಕ ಶಾಲಾಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಇಪ್ಪತ್ತೈದು ವರ್ಷಕ್ಕೆ ಮೀರದವರಿಗೆ ಮಾತ್ರ. ಸ್ಪರ್ಧೆಯ ವಿಷಯವನ್ನು ಸ್ಪರ್ಧೆ ನಡೆಯುವ ದಿನ ಪ್ರಾತಃಕಾಲ ಪರಿಷನ್ಮಂದಿರದಲ್ಲಿ ಪ್ರಕಟಿಸಲಾಗುವುದು.

### ಈ ಎರಡು ಸ್ಪರ್ಧೆಗಳು ಪರಿಷನ್ಮಂದಿರದಲ್ಲಿ ನಡೆಯುವುವು

**೩. ಪ್ರಬಂಧ ರಚನಾಸ್ಪರ್ಧೆ:** ಈ ಸ್ಪರ್ಧೆ ಬೆಂಗಳೂರಿನಲ್ಲಿ ಪರಿಷನ್ಮಂದಿರದಲ್ಲಿ ನಡೆಯುವುದು. ಇತರ ಸ್ಥಳಗಳಲ್ಲಿ ಹೈಸ್ಕೂಲು ಕಾಲೇಜುಗಳಿರುವ ಸಂಸ್ಥಾನದ ಎಲ್ಲಾ ಊರುಗಳಲ್ಲಿಯೂ ಶಾಲೆಯ ಮುಖ್ಯೋಪಾಧ್ಯಾಯರ ಸಹಕಾರದೊಡನೆ ನಡಸುವ ಏರ್ಪಾಟು ಮಾಡಲಾಗುವುದು. ಆಶುಭಾಷಣ ಸ್ಪರ್ಧೆಗೆ ಇಟ್ಟಿರುವ ನಿರ್ಬಂಧ ಈ ಸ್ಪರ್ಧೆಗೂ ಅನ್ವಯಿಸುವುದು. ಸ್ಪರ್ಧೆಯ ವಿಷಯವನ್ನು ಆಯಾ ಸ್ಥಳಗಳಲ್ಲಿ ಸ್ಪರ್ಧೆ ನಡೆಯುವ ದಿನ ಪ್ರಾತಃಕಾಲ ಪ್ರಕಟಿಸಲಾಗುವುದು.

ಈ ಸ್ಪರ್ಧೆಗಳನ್ನು ಸೆಪ್ಟೆಂಬರ್ ತಿಂಗಳ ಎರಡನೆಯ ವಾರದಲ್ಲಿ ನಡಸಲಾಗುವುದು.

## ನಿಯಮಗಳು

ಸ್ಪರ್ಧೆಗಳಿಗೆ ಸೇರಲಿಚ್ಛಿಸುವವರು **ಪ್ರತಿಯೊಂದು ಸ್ಪರ್ಧೆಗೂ** ನಾಲ್ಕು ಆಣೆ ಪ್ರವೇಶಧನ ಸಹಿತ ತಮ್ಮ ಪ್ರವೇಶ ಪತ್ರಿಕೆಗಳನ್ನು **೧೯೪೦ನೆಯ ಆಗಸ್ಟ್ ೩೧ನೆಯ** ತಾರೀಖಿನೊಳಗಾಗಿ ಕೆಳಗಿನ ವಿಳಾಸಕ್ಕೆ ಕಳಿಸತಕ್ಕದ್ದು. ಕಾಲವಿಾರಿ ಬಂದ ಪತ್ರಿಕೆಗಳನ್ನು ಗಮನಕ್ಕೆ ತಂದುಕೊಳ್ಳಲಾಗುವುದಿಲ್ಲ.

ಪ್ರವೇಶ ಪತ್ರಿಕೆಯಲ್ಲಿ (i) ಸ್ಪರ್ಧಿಯ ಹೆಸರು; (ii) ತಂದೆಯ ಹೆಸರು; (iii) ವಯಸ್ಸು; (iv) ಶಾಲೆ ಅಥವಾ ಕಾಲೇಜಿನ ಹೆಸರು; (v) ತರಗತಿ; (vi) ವಿಳಾಸ—ಈ ವಿವರಗಳಿರಬೇಕು.

**ಸೂಚನೆ:** ೧. ಒಂದಕ್ಕಿಂತ ಹೆಚ್ಚು ಸ್ಪರ್ಧೆಗೆ ಸೇರಲಿಚ್ಛಿಸುವವರು ಪ್ರತಿಯೊಂದಕ್ಕೂ ಪ್ರತ್ಯೇಕವಾಗಿ ಪ್ರವೇಶ ಪತ್ರಿಕೆಯನ್ನೂ ಪ್ರವೇಶ ಧನವನ್ನೂ ಸಲ್ಲಿಸಬೇಕು. ೨. ಆಶುಭಾಷಣ ಮತ್ತು ಪ್ರಬಂಧರಚನಾಸ್ಪರ್ಧೆಗಳಲ್ಲಿ ಭಾಗವಹಿಸುವವರಲ್ಲಿ ೧೪ ರಿಂದ ೧೮ ವಯಸ್ಸಿನವರನ್ನು **ಕಿರಿಯರೆಂದೂ** ೧೮ಕ್ಕೆ ಮೇಲ್ಪಟ್ಟವರನ್ನು **ಹಿರಿಯರೆಂದೂ** ಪರಿಗಣಿಸಲಾಗುವುದು.

ಯಾವ ಕಾರಣದಿಂದಾಗಲಿ ಸ್ಪರ್ಧೆಯನ್ನು ನಿಲ್ಲಿಸುವ ಅಥವಾ ಈ ನಿಯಮಗಳನ್ನು ಸಂದರ್ಭಾನುಸಾರ ಹೆಚ್ಚು ಕಡಮೆ ಮಾಡುವ ಹಕ್ಕು ಸಮಿತಿಯ ಅಧಿಕಾರಿಗಳಿಗೆ ಇರುತ್ತದೆ.

ಸ್ಪರ್ಧೆ ನಿಂತುಹೋಗುವ ಸಂದರ್ಭದಲ್ಲಿ ಮಾತ್ರ ಪ್ರವೇಶಧನವನ್ನು ಹಿಂದಿರುಗಿಸಲಾಗುವುದು.

ಪ್ರತಿಯೊಂದು ಸ್ಪರ್ಧೆಯಲ್ಲೂ ಒಂದು ಅಥವಾ ಹೆಚ್ಚಿನ ಬಹುಮಾನವನ್ನು ಕೊಡಲಾಗುವುದು.

## ಶ್ರೀ|| ಶಾಮಯ್ಯನವರ ಪರ್ಯಾಯ ಪಾರಿತೋಷಕ

ಅಭಿನಯ ಸ್ಪರ್ಧೆ ಹೆಚ್ಚು ಆಕರ್ಷಣೀಯವಾಗುವಂತೆ ಮಾರುತಿ ಜ್ಯೂಯಲರಿ ಹಾಲಿನ ಮಾಲೀಕರಾದ ಶ್ರೀ|| ಶಾಮಯ್ಯನವರ ಕೃಪೆಯಿಂದ ಒಂದು ಪರ್ಯಾಯ ಪಾರಿತೋಷಕ ಏರ್ಪಟ್ಟಿರುವುದು. ಈ ಪಾರಿತೋಷಕ (Rolling Cup)ವನ್ನು ಪಡೆಯಲು ಸಂಸ್ಥೆಗಳಿಗೆ ಮಾತ್ರ ಅಧಿಕಾರವುಂಟು. ಪ್ರತಿಯೊಂದು ಸಂಸ್ಥೆಯಿಂದಲೂ ಕನಿಷ್ಠಪಕ್ಷ ನಾಲ್ಕು ಸ್ಪರ್ಧಿಗಳು ಬಂದಿರಬೇಕು. ಪರೀಕ್ಷಕರ ಅಭಿಪ್ರಾಯದಲ್ಲಿ ಪ್ರಥಮ ಸ್ಥಾನವನ್ನು ಪಡೆದ ಸಂಸ್ಥೆಗೆ ಈ ಪಾರಿತೋಷಕವನ್ನು ಒಂದು ವರ್ಷ ಪರ್ಯಂತ ಕೊಡಲಾಗುವುದು.

ಬೆಂಗಳೂರು,
ತಾ. ೧-೮-೪೦.

**ಎನ್. ಎಸ್. ರಾಮಚಂದ್ರಯ್ಯ, ಎಂ.ಎ.,**
ವ್ಯವಸ್ಥಾಪಕ, ಸ್ಪರ್ಧೆಗಳ ಸಮಿತಿ.

# ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರ ಪುಸ್ತಕಮಾಲೆ

## ೧೯೩೮–೩೯ರಲ್ಲಿ ಅಚ್ಚಾಗಿರುವ ಪುಸ್ತಕಗಳು

ಬೆಲೆ: ಸಾಧಾರಣ ಪ್ರತಿಗೆ ೨ ಆಣೆ; ಉತ್ತಮ ಪ್ರತಿಗೆ ೩ ಆಣೆ

೧. ಖಗೋಳಶಾಸ್ತ್ರಪ್ರವೇಶ—ಸಿ. ಎನ್. ಶ್ರೀನಿವಾಸ ಅಯ್ಯಂಗಾರ್, ಡಿ.ಎಸ್‌ಸಿ.
೨. ಸಮಾಜದ ರೋಗರುಜಿನಗಳು—ಜಿ. ಹನುಮಂತರಾವ್, ಎಂ.ಎ.
೩. ತೆರಿಗೆ—ಬಿ. ಆರ್. ಸುಬ್ಬರಾವ್, ಎಂ.ಎ.
೪. ನವರತ್ನಗಳು—ಎಚ್. ಸುಬ್ಬಾಜೋಯಿಸ್, ಎಂ.ಎಸ್‌ಸಿ.
೫. ನಮ್ಮ ಹಳ್ಳಿಗಳು—ಜಿ. ಎನ್. ಕೃಷ್ಣಮೂರ್ತಿ, ಎಂ.ಎ.

## ೧೯೩೯–೪೦ರಲ್ಲಿ ಅಚ್ಚಾಗಿರುವ ಪುಸ್ತಕಗಳು

೬. ಕುಮಾರವ್ಯಾಸ—ಎಸ್. ವಿ. ರಂಗಣ್ಣ, ಎಂ.ಎ.
೭. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್, ಎಂ.ಎ.
೮. ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ, ಎಂ.ಎ.
೯. ವಿದ್ಯುಚ್ಛಕ್ತಿಯ ವೈಭವ—ಬಿ. ಎ. ಕೃಷ್ಣಸ್ವಾಮಿರಾವ್, ಎಂ.ಎಸ್‌ಸಿ.
೧೦. ಪಂಪ—ಟಿ. ಎನ್. ಶ್ರೀಕಂಠಯ್ಯ, ಎಂ.ಎ.
೧೧. ಪ್ರಾಣಿಜೀವನ—ಎ. ನಾರಾಯಣರಾವ್, ಎಂ.ಎಸ್‌ಸಿ.
೧೨. ಕನಸುಗಳು—ಎನ್. ಎಸ್. ನಾರಾಯಣಶಾಸ್ತ್ರಿ, ಎಂ.ಎ.
೧೩. ಮದುವೆಯ ಇತಿಹಾಸ—ಎನ್. ಕಸ್ತೂರಿ, ಎಂ.ಎ., ಬಿ.ಎಲ್.
೧೪. ನಮ್ಮ ಆರ್ಥಿಕ ದೃಷ್ಟಿ—ಎಸ್. ಗೋಪಾಲಸ್ವಾಮಿ, ಎಂ.ಎ.
೧೫. ವಾಯುಗುಣ—ಕೆ. ಶೇಷಾದ್ರಿ ಅಯ್ಯಂಗಾರ್, ಎಂ.ಎಸ್‌ಸಿ., ಎಲ್‌ಎಲ್.ಬಿ.
೧೬. ಬೆಳಕು—ಟಿ. ಎಸ್. ಸುಬ್ಬರಾಯ, ಎಂ.ಎಸ್‌ಸಿ.
೧೭. ಕನ್ನಡ ಕಾದಂಬರಿ—ವಿ. ಸೀತಾರಾಮಯ್ಯ, ಎಂ.ಎ.

೧೯೪೦–೪೧ರಲ್ಲೂ ೧೨ ಪುಸ್ತಕಗಳನ್ನು ಪ್ರಕಟಿಸಲಾಗುವುದು

ವಾರ್ಷಿಕ ಚಂದಾ—ಸಾಧಾರಣ ಪ್ರತಿ ರೂ. ೧—೪—೦
ಉತ್ತಮ ಪ್ರತಿ ರೂ. ೨—೦—೦

**ಜಿ. ಹನುಮಂತರಾವ್, ಎಂ.ಎ.,**
ಸಂಪಾದಕ, ಪ್ರಚಾರ ಪುಸ್ತಕಮಾಲೆ,
ಮಹಾರಾಜರವರ ಕಾಲೇಜು, ಮೈಸೂರು.

## ಮೈಸೂರು ಮಹಾರಾಜರವರ ಕಾಲೇಜಿನ

# ಕರ್ಣಾಟಕ ಸಂಘದ ಪ್ರಕಟನೆಗಳು

---

### ೧. ಕುಮಾರವ್ಯಾಸ ಪ್ರಶಸ್ತಿ

ಬೆಲೆ, ಕ್ಯಾಲಿಕೊ ಪ್ರತಿ ರೂ. ೨-೮-೦; ಸಾದಾ ಪ್ರತಿ ರೂ. ೨-೦-೦

ದೊರೆಯುವ ಸ್ಥಳ:

ಕರ್ಣಾಟಕ ಸಂಘ,
ಸೆಂಟ್ರಲ್ ಕಾಲೇಜು, ಬೆಂಗಳೂರು

ಕರ್ಣಾಟಕ ಸಂಘ,
ಶಿವಮೊಗ್ಗ

---

೨. ಕಿರಿಯಕಾಣಿಕೆ (ಎರಡನೆಯ ಮುದ್ರಣ)—ಕ್ಯಾಲಿಕೊ ಪ್ರತಿ ರೂ. ೧- ೮-೦
ಸಾದಾ ಪ್ರತಿ ,, ೧- ೦-೦

೩. ತಳಿರು— ಕ್ಯಾಲಿಕೊ ಪ್ರತಿ ,, ೧- ೪-೦
ಸಾದಾ ಪ್ರತಿ ,, ೦-೧೨-೦

ಮಾರಾಟಗಾರರು:

**ಪ್ರೋಗ್ರೆಸ್ ಬುಕ್ ಸ್ಟಾಲ್, ಮೈಸೂರು**

---

೪. ಆಷಾಢಭೂತಿ (ಶ್ರೀ. ಎ. ಎನ್. ಮೂರ್ತಿರಾವ್, ಎಂ.ಎ. ಅವರಿಂದ)—
ಕ್ಯಾಲಿಕೊ ಪ್ರತಿ ರೂ. ೧-೮-೦
ಸಾದಾ ಪ್ರತಿ ,, ೧-೦-೦

೫. ಸಾವಿನ ಸಮಸ್ಯೆ (ಶ್ರೀ. ವೆಂಬಾರ್ ವೆಂಕಟಾಚಾರ್ಯ, ಎಂ.ಎ., ಬಿ.ಕಾಮ್., ಎಲ್‌ಎಲ್.ಬಿ. ಅವರಿಂದ)— ಕ್ಯಾಲಿಕೊ ಪ್ರತಿ ರೂ. ೧-೪-೦

ಮಾರಾಟಗಾರರು:

**ಕೃಷ್ಣ ಮತ್ತು ಕಂಪನಿ, ಮೈಸೂರು**

---

ಕಾರ್ಯದರ್ಶಿ, ಕರ್ಣಾಟಕ ಸಂಘ, ಮಹಾರಾಜರವರ ಕಾಲೇಜು,
ಮೈಸೂರು

# ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ

ಪ್ರಧಾನಸಂಪಾದಕರು : ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್.

೧. **ಹರಿಶ್ಚಂದ್ರಕಾವ್ಯ ಸಂಗ್ರಹ** (ತೃತೀಯ ಮುದ್ರಣ)—ಸಂಪಾದಕರು : ಟಿ. ಎಸ್. ವೆಂಕಣ್ಣಯ್ಯ, ಎಂ.ಎ. ಮತ್ತು ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ.; ಬೆಲೆ : ೦—೧೨—೦.

೨. **ಕರ್ಣಾಟಕ ಕಾದಂಬರೀ ಸಂಗ್ರಹ**—ಸಂಪಾದಕರು : ಟಿ. ಎಸ್. ವೆಂಕಣ್ಣಯ್ಯ, ಎಂ.ಎ. ; ಬೆಲೆ : ೦—೧೨—೦.

೩. **ಪ್ರಭುಲಿಂಗಲೀಲೆಯ ಸಂಗ್ರಹ** (ಸಚಿತ್ರ)—ಸಂಪಾದಕರು : ಎಂ. ಎಸ್. ಬಸವಲಿಂಗಯ್ಯ, ಎಂ.ಎ., ಬಿ.ಎಲ್. ಮತ್ತು ಎಂ. ಆರ್. ಶ್ರೀನಿವಾಸ ಮೂರ್ತಿ, ಬಿ.ಎ. ; ಬೆಲೆ : ೦—೧೨—೦.

೪. **ಸಾಕ್ರೆಟೀಸನ ಕೊನೆಯ ದಿನಗಳು** (ಸಚಿತ್ರ)—ಅನುವಾದಕರು : ಎ. ಎನ್. ಮೂರ್ತಿರಾವ್, ಎಂ.ಎ.; ಬೆಲೆ : ಕ್ಯಾಲಿಕೊ ರೂ. ೧; ಸಾದಾ ೧೨ ಆಣೆ.

೫. **ಶ್ರೀರಾಮಕೃಷ್ಣ ಪರಮಹಂಸ**—ಲೇಖಕರು : ಕೆ. ವಿ. ಪುಟ್ಟಪ್ಪ, ಎಂ.ಎ. ; ಬೆಲೆ : ಕ್ಯಾಲಿಕೊ ರೂ. ೧—೪—೦, ಸಾದಾ ೧೨ ಆಣೆ.

೬. **ರವೀಂದ್ರನಾಥ ಠಾಕೂರರು** (ಸಚಿತ್ರ)—ಲೇಖಕರು : ಮಾಸ್ತಿ ವೆಂಕಟೇಶ ಐಯಂಗಾರ್, ಎಂ.ಎ. ; ಬೆಲೆ : ಕ್ಯಾಲಿಕೊ ಪ್ರತಿ, ರೂ. ೧—೪—೦ ; ಸಾದಾ ಪ್ರತಿ, ೦—೧೨—೦.

೭. **ಆರೋಗ್ಯ ಅದರ ಜ್ಞಾನ ಮತ್ತು ಸಾಧನ** (ಸಚಿತ್ರ)—ಲೇಖಕರು : ಜೆ. ಎ. ಈಶ್ವರ ಮೂರ್ತಿ, ಬಿ.ಎ., ಎಲ್.ಎಂ.ಎಸ್., ಬಿ.ಎಸ್.ಎಸ್‌ಸಿ. ; ಬೆಲೆ : ಕ್ಯಾಲಿಕೊ ಪ್ರತಿ, ರೂ. ೧—೪—೦ ; ಸಾದಾ ಪ್ರತಿ, ೦—೧೨—೦.

೮. **ಪಂಪರಾಮಾಯಣ ಸಂಗ್ರಹ**—ಸಂಪಾದಕರು: ಆಸ್ಥಾನಮಹಾವಿದ್ವಾನ್ ತಿರುವಳ್ಳೂರ್ ಶ್ರೀನಿವಾಸರಾಘವಾಚಾರ್ ಮತ್ತು ಡಿ. ಎಲ್. ನರಸಿಂಹಾಚಾರ್, ಎಂ.ಎ. ; ಬೆಲೆ : ಕ್ಯಾಲಿಕೊ ರೂ. ೧ ; ಸಾದಾ ೧೨ ಆಣೆ.

೯. **ಹಣ ಪ್ರಪಂಚ**—ಲೇಖಕರು : ವಿ. ಸೀತಾರಾಮಯ್ಯ, ಎಂ.ಎ. ; ಬೆಲೆ : ಕ್ಯಾಲಿಕೊ ಪ್ರತಿ, ರೂ. ೧—೪—೦ ; ಸಾದಾ ಪ್ರತಿ, ೦—೧೨—೦.

೧೦. **ಸಂಸ್ಕೃತ ನಾಟಕ**—ಲೇಖಕರು : ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ. ; ಬೆಲೆ : ಕ್ಯಾಲಿಕೊ ಪ್ರತಿ, ರೂ. ೧—೪—೦ ; ಸಾದಾ ಪ್ರತಿ, ೦—೧೨—೦.

೧೧. **ಜೀವವಿಜ್ಞಾನ**—ಲೇಖಕರು : ಬಿ. ವೆಂಕಟನಾರಾಯಣಪ್ಪ, ಎಂ.ಎ. ; ಕ್ಯಾಲಿಕೊ ಪ್ರತಿ ರೂ. ೧—೪—೦ ; ಸಾದಾ ಪ್ರತಿ ೦—೧೨—೦.

೧೨. **ಹಿಂದೂದರ್ಶನಸಾರ**—ಲೇಖಕರು : ಮ|| ಪಂಡಿತರತ್ನಂ ಲಕ್ಷ್ಮೀಪುರಂ ಶ್ರೀನಿವಾಸಾಚಾರ್ಯರು ; ಬೆಲೆ : ಸಾದಾ ಪ್ರತಿ ೧೨ ಆಣೆ ; ಕ್ಯಾಲಿಕೊ ರೂ. ೧—೪—೦.

**ಕ್ಯೂರೇಟರ್, ಓರಿಯೆಂಟಲ್ ಲೈಬ್ರೆರಿ, ಮೈಸೂರು.**




ವಿಕ್ರಮ ಸಂವತ್ಸರ] — ೬೪ — [ದೀಪಾವಳಿಯ ಸಂಚಿಕೆ






ಮೈಸೂರು :

ಮೈಸೂರು ವಿಶ್ವವಿದ್ಯಾನಿಲಯ

೧೯೪೦

ಸಂಪುಟ ೨೨] [ಸಂಚಿಕೆ ೨

# ವಿಷಯ ಸೂಚಿಕೆ

ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ — ೧೧

ಪ್ರಧಾನ ಸಂಪಾದಕ:

ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್.

# ಜೀವ ವಿಜ್ಞಾನ







ಲೇಖಕ:

ಬೆಳ್ಳಾವೆ ವೆಂಕಟನಾರಾಯಣಪ್ಪ, ಎಂ.ಎ.

ಮೈಸೂರು:

ಮೈಸೂರು ವಿಶ್ವವಿದ್ಯಾನಿಲಯ

೧೯೩೫

"ಈ ಗ್ರಂಥವು ಯಾವುದೊಂದು ಇಂಗ್ಲಿಷ್ ಪುಸ್ತಕದ ಭಾಷಾಂತರ ವಲ್ಲ. ಅನೇಕ ಪುಸ್ತಕಗಳ ಸಹಾಯಪಡೆದು, ಪಾರಿಭಾಷಿಕ ಶಬ್ದಗಳನ್ನು ತಕ್ಕಮಟ್ಟಿಗೆ ಕಡಮೆಮಾಡಿ, ಜನಸಾಮಾನ್ಯರಿಗೆ ಅರ್ಥವಾಗುವಂತೆ ಸುಲಭವಾದ ಭಾಷೆಯಲ್ಲಿ ಈ ಗ್ರಂಥವನ್ನು ಬರೆಯಲು ಪ್ರಯತ್ನಿಸಿದ್ದೇನೆ. * * * * ಈ ಗ್ರಂಥದಲ್ಲಿಯ ವಿಷಯಗಳನ್ನು ಅರ್ಥಮಾಡಿಕೊಳ್ಳಲು ಸಹಾಯವಾಗುವಂತೆ ಹಲವು ಚಿತ್ರಗಳನ್ನು ಕೊಟ್ಟಿದೆ."

---

**ಪುಸ್ತಕ ದೊರೆಯುವ ಸ್ಥಳ:**
**ಕರ್ಣಾಟಕ ಪ್ರಕಟನಾಲಯ, ಕೋಟೆ, ಬೆಂಗಳೂರು ಸಿಟಿ**
**ಬೆಲೆ:** (ಕಾಗದದ ರಟ್ಟಿನ ಪ್ರತಿಗೆ) **೧೨ ಆಣೆ**

ವಾಸಿಸುತ್ತಿದ್ದಿರಬೇಕೆಂದು ಊಹೆ. ಕಡೆಗೆ, ಈ ಕುಲವೂ ಕ್ರಮೇಣ ನಷ್ಟವಾಗಿಹೋಯಿತು. ಇದಾದಮೇಲೆ, ಬುದ್ಧಿಶಕ್ತಿಯಲ್ಲಿ ಇವನನ್ನು ಮಿೀರಿಸಿದ ಕುಲದವರು ಏಷ್ಯಾದಿಂದ ಹೊರಟು ಯೂರೋಪ್ ಮೊದಲಾದ ಪ್ರಾಂತಗಳನ್ನು ಆಕ್ರಮಿಸಿಕೊಂಡರು. ಇವರ ವಂಶಜರೇ ಈಗಿರುವ ಆಧುನಿಕ ಪ್ರಮುಖ ವಂಶಗಳವರು. ಕ್ರೋಮ್ಯಾಗ್ನಾನ್ ಜನರ ಕಾಲದಿಂದೀಚೆಗೆ ಮನುಷ್ಯದೇಹದ ರಚನೆಯಲ್ಲಿ ವ್ಯತ್ಯಾಸಗಳೇನೂ ಕಾಣಬರುವುದಿಲ್ಲ; ಇರಬಹುದಾದ ವ್ಯತ್ಯಾಸಗಳೆಲ್ಲವೂ ಬುದ್ಧಿಶಕ್ತಿಯಲ್ಲಿಯೇ. ದೇಹರಚನೆಯ ಮಾರ್ಪಾಡುಗಳು ನಿಂತುಹೋದಂತೆ ಕಾಣುವುದು. ಇಷ್ಟೇ ಅಲ್ಲ; ರಚನೆಯ ಮಾರ್ಪಾಡುಗಳು ಮುಂದುವರಿಯುವುದಕ್ಕೆ ಬದಲಾಗಿ ಹಿಂದು ಹಿಂದಕ್ಕೆ ಸರಿಯುತ್ತಿರುವಂತೆ ತೋರುವುದು: ಕೂದಲೂ ಹಲ್ಲೂ ಹ್ರಸ್ವವಾಗುತ್ತಿರುವುವು; ಕೈಚಳಕ ಕಡಮೆಯಾಗುತ್ತಿರುವುದು; ಕಣ್ಣು, ಕಿವಿ, ಮೂಗು — ಇವು ಮಾಂದ್ಯಹೊಂದುತ್ತಿರುವುವು. ಮುಖ್ಯವಾಗಿ, ಇತರ ಪ್ರಾಣಿಗಳನ್ನು ಬಲಿಹಾಕುವ ದೇಹಶಕ್ತಿಯುಳ್ಳವನಾಗಿ ತಾನೇ ತಾನಾಗಿರಬೇಕೆಂಬ ಆಶೆ ದಿನೇ ದಿನೇ ಕ್ಷಯಿಸುತ್ತಿರುವುದು. ಆದಕಾರಣ, ಮನುಷ್ಯಪ್ರಾಣಿಯ ವಿಕಸನವು ಮುಂದಕ್ಕೆ ಬುದ್ಧಿಶಕ್ತಿಯ ಮಾರ್ಗವಾಗಿ ಪರಿಯುವಂತೆ ತೋರುವುದೇ ಹೊರತು ಕಾಯಶಕ್ತಿಯ ಮಾರ್ಗವಾಗಿ ಹೋಗುವಂತೆ ತೋರುವುದಿಲ್ಲ.







**ಚಿತ್ರ ೬೮. ವಾನರದಿಂದ ನರ**
(ಮೇಲಿನಿಂದ ೧ನೆಯದು ಜಾವಾ ದ್ವೀಪದ ಕಪಿಮನುಷ್ಯ, ೫ನೆಯದು ಕ್ರೋಮ್ಯಾಗ್ನಾನ್ ಮನುಷ್ಯ)

ತಿಳಿದ ವಿಷಯ. ವಿಜ್ಞಾನ ಪ್ರಭಾವದಿಂದ ಸಮಾಜಕ್ಕೆ ಭಾರವಾದ ಮತ್ತು ಕೇಡನ್ನುಂಟುಮಾಡುವ ಪ್ರಜೆಗಳ ಸಂಖ್ಯೆ ದಿನೇ ದಿನೇ ಕಡಮೆಯಾಗುತ್ತ ಹೋಗಬಹುದು. ಮಕ್ಕಳನ್ನು ಸಲಹುವುದು ತೊಂದರೆಯೆಂದು ತಿಳಿದು ಹೆಚ್ಚು ಹೆಚ್ಚು ಮಂದಿ ಒಂಟಿಗರಾಗಿಯೇ ಉಳಿಯಬಹುದು. ಮುಂದಿನ ಸಂತತಿ ಅತ್ಯುತ್ತಮವಾದುದಾಗಿರಬೇಕೆಂಬ ಅಭಿಲಾಷೆ ಪ್ರಜೆಗಳಲ್ಲಿ ಮೂಡಿ ಅದಕ್ಕೆ ಬೇಕಾದ ಪ್ರಯತ್ನಗಳು ನಡೆಯುತ್ತಹೋಗಬಹುದು.

ಸತ್ಸಂತಾನ ಶಾಸ್ತ್ರವು ಕೇವಲ ಈಚೆಗೆ ಹುಟ್ಟಿದುದು. ಇದು ಮುಂದೆ ಎಷ್ಟು ಕೆಲಸ ಮಾಡಬಹುದೆಂಬುದನ್ನು ಈಗ ಹೇಳಲು ಸಾಧ್ಯವಿಲ್ಲ. ಮನುಷ್ಯನು ಗೋಧಿ, ಜೋಳ, ಮೊದಲಾದುವನ್ನು ಕೇವಲ ಉತ್ತಮ ಸ್ಥಿತಿಗೆ ತಂದಿರುವಂತೆಯೇ ತನ್ನನ್ನೂ ಏಕೆ ಉತ್ತಮಗೊಳಿಸಿಕೊಳ್ಳಬಾರದು? ಯೋಗ್ಯರಾಗಿಯೂ ಎಲ್ಲ ವಿಧಗಳಲ್ಲಿ ಶಕ್ತರಾಗಿಯೂ ಇರುವ ಕೆಲವರ ಜೊತೆಗೆ ಅಯೋಗ್ಯರಾಗಿಯೂ ಅಶಕ್ತರಾಗಿಯೂ ಇರುವವರು ಅನೇಕಾನೇಕ ಮಂದಿ ಏಕೆ ಹುಟ್ಟಬೇಕು? ಸತ್ಸಂತಾನ ಶಾಸ್ತ್ರ ಅಭಿವೃದ್ಧಿಹೊಂದಿದಂತೆಲ್ಲ ಇಂತಹ ಅನುಪಯೋಗ ವ್ಯಕ್ತಿಗಳು ಹುಟ್ಟದಂತೆ ಮಾಡಬಹುದಲ್ಲವೆ? ಪ್ರಮುಖ ಗುಣಗಳನ್ನೂ ವಿಮುಖ ಗುಣಗಳನ್ನೂ ಬೇಕಾದಂತೆ ಹತೋಟಿಯಲ್ಲಿಟ್ಟುಕೊಳ್ಳುವ ಶಕ್ತಿಯನ್ನು ಜೀವ ವೈಜ್ಞಾನಿಕರು ಸಂಪಾದಿಸಬಹುದಲ್ಲವೆ?

ಗಿಡಗಳಿಗೆ ಕಸಿ ಕಟ್ಟುವುವೆಂದರೆ ಒಂದು ಗಿಡದ ದೇಹಭಾಗವನ್ನು ಮತ್ತೊಂದು ಗಿಡದಲ್ಲಿ ಸೇರಿಸಿ ಬೆಳಸುವುದಲ್ಲವೆ? ನಿಂಬೆಯ ಗಿಡದ ದೇಹದೊಳಗೆ ಕಿತ್ತಿಲೆಯ ಗಿಡದ ಭಾಗವನ್ನು ಸೇರಿಸಿ ಎರಡೂ ಒಂದೇ ಗಿಡವಾಗಿ ಬೆಳೆದು ಫಲಕೊಡುವಂತೆ ಕಸಿಗಾರನು ಮಾಡುತ್ತಿಲ್ಲವೆ? ಹೀಗೆಯೇ ಮನುಷ್ಯ ವ್ಯಕ್ತಿಗಳಿಗೂ ಕಸಿ ಕಟ್ಟುವುದು ಸಾಧ್ಯವಾಗಬಹುದಲ್ಲವೆ? ಇಂತಹ ಕಾರ್ಯಗಳು ಈಗಾಗಲೇ ಸ್ವಲ್ಪಮಟ್ಟಿಗೆ ಆರಂಭವಾಗಿವೆ: ಮನುಷ್ಯದೇಹದ ಕಸಿಗಾರನು ಒಂದು ವ್ಯಕ್ತಿಯಿಂದ ತೆಗೆದ ಸ್ನಾಯುವಿನ ತುಂಡನ್ನೊ ಚರ್ಮದ ತುಂಡನ್ನೊ ಇತರ ದೇಹಭಾಗವನ್ನೊ ತನ್ನ ಪರೀಕ್ಷಾಲಯದಲ್ಲಿ ಕೆಲವುಕಾಲ ಜೀವದಿಂದಿಟ್ಟಿದ್ದು ಅದನ್ನು ಇತರ ವ್ಯಕ್ತಿಗಳಲ್ಲಿ ಉಪಯೋಗಿಸುತ್ತಿರುವನು; ಒಂದು ಭಾಗದಿಂದ ತೆಗೆದ ಎಲುಬಿನ



ತನ್ನ ಕಾವ್ಯಕೆ ತಾನೆ ಮಣಿಯುವಂತೆ

ಪ್ರಬುದ್ಧ

ಕರ್ಣಾಟಕ

ವಿಕ್ರಮ ಸಂವತ್ಸರ — ೬೪ — ದೀಪಾವಳಿಯ ಸಂಚಿಕೆ

# ತನ್ನ ಕಾವ್ಯಕೆ ತಾನೆ ಮಣಿಯುವಂತೆ

ಕೆಲದಿನಕೆ
ಮಿಥಿಲೆಯಿಂ ಯಾತ್ರೆಬಂದುದು ಮುನಿಗಳಾಶ್ರಮಕೆ
ಧರಣಿಪತಿ ಜನಕನ ಮಹಾಕ್ರತು ಸುಕೃತವಾರ್ತೆ.
ಪೊರಮಟ್ಟನಾಯೆಡೆಗೆ ಮುನಿಪುಂಗವಂ ರಾಮ
ಲಕ್ಷ್ಮಣರೊಡನೆ, ವಿಧಿನಿಯಂತ್ರದಿಂ. ಹಾದಿಯೊಳ್
ಹೇಳ್ದನಾ ಜನಕರಾಜಗೆ ದಿವಿಜಕೃಪೆಯಿಂದೆ
ದೊರಕಿದಾ ಶಿವಧನುಸ್ಸಿನ ಕಥಾಚಿತ್ರಮಂ,
ಕೇಳ್ದ ರಾಮಂಗೆ ಮೆಯ್ ರೋಮಾಂಚನಂಗೊಳ್ಳೆ
ಮನದಲಂಪಿಂದೆ; ಮೇಣ್ ಶಿವಶಕ್ತಿ ಸಂಚರಿಸೆ
ಕಾಯದಂಗೋಪಾಂಗಮಂ, ಧಮನಿಧಮನಿಯಂ.
ಕಣಿವೆಗಳನಿಳಿದದ್ರಿಗಳನಡರಿ ಬರುತಲಿರೆ,
ಜಟಿಲಕಾನನ ಕುಟಿಲಪಥದಲಿ, ಹಠಾತ್ತಿನಿಂ
ಭ್ರಷ್ಟಮಾದುದು ಮಾರ್ಗಮತಿಕಷ್ಟದಸ್ಪಷ್ಟ

ಕ್ಲಿಷ್ಟಸರಣಿಯಲಿ. ತಪ್ಪಿದುದೆ ಚೋದ್ಯಮೆನುತ್ತೆ
ಪರಿಚಿತಾಧ್ವಂ, ಸೋಜಿಗಂಗೊಂಡು, ಕೌಶಿಕಂ
ಪೆರ್ಮರನ ತುದಿಗೇರ್ದು, ತಾರಾಗಣಂಗಳಂ
ಸಂವೀಕ್ಷಣಂಗೆಯ್ದು, ದಿಕ್ಕರಿತು, ಕಳ್ತಲೊಳೆ
ನಡೆದನತಿಸಾಹಸದ ಕಣ್ಣೂಹೆಯಿಂ. ರಾತ್ರಿ
ಪೂರೈಸುತುಷೆ ಮೂಡಿಬರಲ್ಕಾ ಪಾಂಥರಿಗೆ
ಗೋಚರಿಸಿತೊಂದು ಋಷಿವಸ ಸದೃಶ ಕಾನನಂ
ಪೊಕ್ಕರದನೇಸೆಂಬೆನಾ ಮಹಾಮೌನಮಂ,
ಶಕುನ ಸಂಪೂರ್ಣತೆಯುಮಂ : ಹಾಡದಿವೆ ಹಕ್ಕಿ ;
ನಲಿದಾಡದಿವೆ ಮಿಗಂ ; ತೀಡದಿದೆ ತಂಬೆಲರ್
ಮರಗೋಡಿನೊಳ್ ; ಮಲರ್ ತನಿಗಂಪನೀಯದಿವೆ ;
ಚಲಿಸದಿವೆ ಪರ್ಣಾಳಿ ; ದುಃಖದ ನಿರೀಕ್ಷಣೆಯ
ಅನಂತ ತಪಭಾರದಿಂ ಬಾಗಿ, ಯೋಗಿನಿಯಂತೆ
ಮೂಗುವಟ್ಟಿರ್ದ ಬನಮೆಸೆದುದಾ ಪಥಿಕರಿಗೆ
ಬರೆದಂತೆ ನೀರವಂ, ಕೊರೆದಂತೆ ನಿಶ್ಚಲಂ,
ಮತ್ತೆ ನಿಶ್ಶಬ್ದತೆಯ ಕುಂಭಕಸ್ಥಿತಿಯಂತೆವೋಲ್ !

ರಾಮಾಯಣದೊಳತಿಮನೋಹರದ ಸಂಘಟನೆ
ಸಂಭವಿಸಲಿರ್ಪ ತಾಣಮ್ ಅದೆಂದರಿಯರಲಾ :
ಗೌತಮ ಮಹಾಮುನಿಯ ಶಾಪದಿನಹಲ್ಯೆ, ಸತಿ,
ವರ್ಷ ಶತಮಾನಂಗಳಿಂದೆ ಜಡವೇಷದಿಂ
ನಿಷ್ಠುರ ಶಿಲಾತಪಸ್ವಿನಿಯಾಗಿ, ಕನಿಕರದ
ಕಣ್ಗೆ ಬಾಹಿರೆಯಾಗಿ, ಜಗದ ನಿರ್ದಾಕ್ಷಿಣ್ಯ
ವಿಸ್ಮೃತಿಗೆ ತುತ್ತಾಗಿ, ವಜ್ರಮೌನದ ಶಿಲಾ
ನಿದ್ರೆಯಿಂದೆಳ್ಚರುವ ಬಯಕೆಯಿಂದೊರಗಿರ್ದ
ಕ್ಷೇತ್ರಮೆಂದರಿಯದಿರ್ಪರೆ ಘಳಿಗೆಯೊಂದರೊಳೆ ?
ಕರಗಿದುದು ರಾಮನೆರ್ದೆ ಅನಿಮಿತ್ತ ಮರುಕದಿಂ ;
ನೀರು ಹರಿದುದು ಕಂಗಳಿಂ ; ತಾಯಿ, ಕೌಸಲ್ಯೆ,
ರಾಮ ರಾಮೆಂದು ಪೆಸರಂ ಪಿಡಿದು ಕರೆವವೋಲ್
ದನಿಗೇಳಿದಂತಾಯ್ತುಲಾ ರಾಮನೊರ್ವನಿಗೆ.

ಕುಳಿರ್ಗಾಳಿ ಬೀಸಲ್ಕೆ ತಳಿರ ತುದಿಯೊಳಗಿರ್ಪ
ಪೊಳೆಯುವಿರ್ಪನಿ ಥರಥರನೆ ಕಂಪಿಪಂದದಿಂ
ಸ್ಪಂದಿಸಿತ್ತವನ ತನು, ಮೈಮೇಲೆ ಬಂದವೋಲ್ :
ಪಿಡಿದ ಬಿಲ್ ನಡುಗಿದುದು ಕೈಯಲ್ಲಿ ; ಬೆನ್ನ ಮೇಲ್
ಬತ್ತಳಿಕೆ ಕುಣಿದತ್ತು ; ಕಾಕಪಕ್ಷದ ಕುರುಳ್
ತಲೆಯ ಮೇಲಾಡಿದುದು, ಗಾಳಿಗೊಲೆಯುವ ಬಳ್ಳಿ
ಜೋಲ್ವಂತೆ ; ವಕ್ಷಮೇದಿತ್ತು ನಿಡುಸುಯ್ಲಿನಿಂ ;
ಚೆಲ್ಲಿದುದು ತೇಜಂ ವದನದಿಂದೆ !

ನೋಡುತಿರೆ,
ಬಾಹ್ಯ ಸಂಜ್ಞಾಶೂನ್ಯನಾಗಿ ರಘುನಂದನಂ
ತೊಡಗಿದನು ಕುಣಿಯಲ್ಕೆ, ಭಾವದ ಸಮಾಧಿಯಿಂ
ಮಧುಮತ್ತನಂತೆ. ಪೇಳೇನೆಂಬೆನದ್ಭುತಂ :
ಸ್ತಬ್ಧ ಗಿರಿವನಧರಣಿ ಸಪ್ರಾಣಿಸಿತು ಕೂಡೆ
ಚೈತ್ರ ಲಕ್ಷ್ಮೀ ಸ್ಪರ್ಶಮಾದಂತೆ. ಬೀಸಿದನು
ಪುಣ್ಯಪವನಂ, ತರುಹೃದಯನಾಳದೊಳ್ ಶಕ್ತಿ
ಸಂಚಾರಗೈದು ; ತುಂಬಿತು ಕೊಂಬೆಕೊಂಬೆಯಂ
ಫುಲ್ಲಪಲ್ಲವ ರಾಶಿರಾಶಿ ; ಪರಿಮಳಮಯಂ
ನವರುಚಿರ ಕುಸುಮತತಿ, ಪೊಣ್ಮಿತೊ ಪವಾಡಮೆನೆ,
ಮೆರೆದತ್ತು, ಸೊಬಗಿನೋಲಗಸಾಲೆ ಸಮೆದಂತೆ.
ಕಾಜಾಣಮುಲಿದತ್ತು ; ನಲಿದುದು ನವಿಲ್ ; ಪಿಕಂ
ಪಾಡಿದುದು ; ಗಾನಗೈದತ್ತೆನಿತೊ ಖಗಕುಲಂ ;
ಸುಳಿದುವೈ ಚಿನ್ನ ಚುಕ್ಕಿಯ ಚಿಗರೆ ಚೆಲ್ವಾಗಿ.
ಪ್ರಾಣಮಯಮಾದನ್ನಮಯ ಜಗಂ, ಭೋಂಕನೆ
ಮನೋಮಯುತೆವೆತ್ತು, ವಿಜ್ಞಾನಮಯವನ್ನಡರಿ,
ಧುಮುಕಿತಾನಂದಮಯದೊಳ್, ಕೋಶಕೋಶಮಂ
ಮಿಾಂಟಿ ನೆಗೆನೆಗೆದುತ್ತರಿಸಿ ದಾಂಟಿ : ತಗುಳ್ದುದೈ
ನೋಳ್ಪರೆಲ್ಲರ್ಗಮಾ ಅನುಭೂತಿ ! ನೋಡುತಿರೆ,
ಕುಣಿಯುತಂ ಮುಂದುಮುಂದಕೆ ಚರಿಸಿ ನಡೆದನಾ
ರಾಮ. ಹಿಂಬಾಲಿಸಿದರುಳಿದವರ್, ಮಂತ್ರದಿಂ

ಮುಗ್ಧರಾದಂತೆ. ತುಂಬಿತು ಚೈತ್ರರಮ್ಯತೆಗೆ
ವಾಯುಮಂಡಲದಲ್ಲಿ ಗಂಧರ್ವಗಾಯನಂ,
ತನುರಹಿತ ಲಕ್ಷವೀಣಾ ತಂತ್ರಿಯಂ ಮಿಡಿದು
ಮೇಳಗೈದಂತೆ.
ತೋರ್ದುದು ಮುಂದೆ ಪಳುವಿನೊಳ್,
ವನಭಿತ್ತಿಗೆದುರಾಗಿ, ಸುತ್ತಣೊರಲೆಯ ಹುತ್ತು
ಮುತ್ತಿರ್ದ ಕಲ್ಬಂಡೆ, ಹಸುರು ಹಾವಸೆ ಹಬ್ಬಿ,
ಬಿದಿರ ಮೆಳೆಯೆಡೆ, ಸರಳಸಾಮಾನ್ಯ ಶೈಲಿಯಲಿ.
ಆ ಶಿಲೆಯ ತಲೆಯಮೇಲೊರಗಿ, ಕಿಚ್ಚುಗಣ್ಣಿಂ
ನಿಚ್ಚಮುಂ ಕಾಪಿರ್ದ ಕರಿಹಳದಿ ಪಟ್ಟೆಯಾ
ಪೆರ್ಬುಲಿಯದೊಂದು ಬರ್ಪವರ ಕಾಣಲೊಡಮಾ
ತಾಣದಿಂದೆದ್ದು ಮಿಂಚಿತು ಕಣ್ಗೆ ಮರೆಯಾಗಿ
ಮಿಂಚೋಟದಿಂ. ರಾಮನೇರಿದನು ಬಂಡೆಯಂ,
ತಾಂಡವಂ ತೊಡಗಿ: ಒಯ್ಯನೆ, ಚರಣಚುಂಬನಕೆ,
ಕಲ್ಲೆ ಮಿದುವಾದುದೋ ಎನೆ, ಕಂಪಿಸಿತು ಬಂಡೆ;
ಸ್ವಾಮಿಯ ಸಮೀಪದಿಂ, ಸಾನ್ನಿಧ್ಯದಿಂ, ಮತ್ತೆ
ಸಂಸರ್ಗದಿಂ ತಲ್ಲಣಿಪ ವಕ್ಷದಬಲೆಯಂ
ಪೋಲ್ದು. ನೆರೆದವರೆಲ್ಲಮಿಕ್ಷಿಸಿರೆ ಬಾಯ್ದೆರೆದು,
ಬೆಂಗದಿರನುರಿಗೆ ಕರ್ಪೂರಶಿಲೆಯಂತೆವೋಲ್
ಕರಗಿದುದು ಕರ್ಬಂಡೆ: ದಿವ್ಯಮಾಯಾಶಿಲ್ಪಿ
ಮಿಂಚುಜವದಿಂ ಮಂತ್ರಬಲದಿಂದರೆಯ ಕೊರೆದು
ತನ್ನಿಷ್ಟದೇವಿಯಂ, ಬಿಡಿಸಿ ಕಲ್‌ಸೆರೆಯಿಂದೆ,
ಚಿತ್ರಿಸಿದನೆನೆ, ರಘುತನೂಜನಡಿದಾವರೆಗೆ
ಹಣೆಮಣಿದು ನಿಂದುದೊರ್ವ ತಪಸ್ವಿನಿಯ ಮೂರ್ತಿ,
ಪಾಲ್ಬೆಳ್ಳನೆಯ ನಾರುಡೆಯ ಕರಿಯ ಸೋರ್ಮುಡಿಯ
ಪೊಳೆವ ಸೊಂಪಿಯ ಮೊಗದ ಮಂಜುಮಾಂಗಲ್ಯದಿಂ;
ನಮಿಸಿದನೊ ರಘುಜನುಂ ಗೌತಮಸತಿಯ ಪದಕೆ
ತನ್ನ ಕಾವ್ಯಕೆ ತಾಂ ಮಹಾಕವಿ ಮಣಿಯುವಂತೆ! *

ಕೆ. ವಿ. ಪುಟ್ಟಪ್ಪ.

* ರಾಮಾಯಣ ಮಹಾಕಾವ್ಯದ ಒಂದು ಭಾಗ.



ಪ್ರೊಫೆಸರ್ ಬಿ. ಸಾನಿ, ಎಂ.ಎ., ಎಸ್‌ಸಿ.ಡಿ., ಡಿ.ಎಸ್‌ಸಿ.,
ಎಫ್.ಆರ್.ಎಸ್.

# ದಖನಿನ ಶಿಲಾಪದರಗಳು:
ಖ ೩
# ತೃತೀಯ ಜೀವಯುಗದ ಒಂದು ಅಂಕ*

[ಈ ಸಲ ಮದರಾಸಿನಲ್ಲಿ ನಡೆದ ಇಂಡಿಯನ್ ಸೈನ್ಸ್ ಕಾಂಗ್ರೆಸಿನ ಅಧ್ಯಕ್ಷರಾದ ಪ್ರೊಫೆಸರ್ ಬೀರಬಲ್ ಸಾನಿ, ಎಂ.ಎ., ಡಿ.ಎಸ್‌ಸಿ., ಎಸ್‌ಸಿ.ಡಿ., ಎಫ್.ಆರ್.ಎಸ್. ಅವರ ಅಧ್ಯಕ್ಷಭಾಷಣದ ಸಾರಾಂಶ.]

### ಛಿದ್ರಪ್ರಪಂಚ

ವೈಜ್ಞಾನಿಕನ ಪ್ರಪಂಚವು ಛಿದ್ರವಾದುದು. ಪ್ರಕೃತಿಯಲ್ಲಿ ನಮಗೆ ಗೋಚರವಾಗುವ ಅಸಂಖ್ಯಾತವಸ್ತುಗಳು ನಮ್ಮ ಅಲ್ಪವಾದ ದೃಷ್ಟಿಗೆ ಪೂರ್ಣಚಿತ್ರದಂತೆ ಕಾಣುವುದಿಲ್ಲ. ಸೃಷ್ಟಿಕಲಾ ಕರ್ತನು ಒಂದೇಸಲ ತನ್ನ ಕಲಾರಚನೆಯನ್ನೆಲ್ಲ ತೋರುವುದಿಲ್ಲ. ಹರಿದು ಚೂರಾದ ಕಾಗದವನ್ನು ಪುನಃ ಜೋಡಿಸುವಂತೆ ನಾವು ಆ ಚಿತ್ರವನ್ನು ಜೋಡಿಸಲು ಯತ್ನಿಸುತ್ತೇವೆ.

ಮಗುವಿನ ಮನೋರೀತಿಯಂತೆ ವೈಜ್ಞಾನಿಕನಿಗೂ ಹಲವು ಮನೋಭಾವಗಳಿರುವುವು. ನಾವು ಒಂದುಸಲ ಬ್ರಹ್ಮಾಂಡದ ಅಂಚಿನಲ್ಲಿರುವ ವೈವಿಧ್ಯಗಳ ಕಡೆ ನೋಡುತ್ತೇವೆ; ಇನ್ನೊಂದುಸಲ ಪರಮಾಣುಗಳ ಕಡೆ ಲಕ್ಷ್ಯವಿಡುತ್ತೇವೆ. ಇವು ಅನಂತವೂ ಗಭೀರವೂ ಆದವು. ನಾವು ದೃಷ್ಟಿಸಿ ಗಮನಿಸಿದಷ್ಟೂ ಬ್ರಹ್ಮಾಂಡದೊಳಗೆ ಬ್ರಹ್ಮಾಂಡಗಳು ನಮ್ಮ ಕಣ್ಣೆದುರಿಗೆ ತೆರೆತೆಗೆದು ವಿಭಜಿಸಿ ಕಾಣುವುವು. ಮತ್ತೊಂದು ಸಲ ಇದಕ್ಕೆ ವ್ಯತಿರಿಕ್ತಮಾರ್ಗದಲ್ಲಿ ನಡೆಯುತ್ತೇವೆ: ಸಣ್ಣಸಣ್ಣ ಛಿದ್ರಾಂಶಗಳಿಂದ ಸರ್ವವನ್ನೂ ಒಳಗೊಂಡ ಪೂರ್ಣಚಿತ್ರವನ್ನು ಜೋಡಿಸಲು ಯತ್ನಿಸುತ್ತೇವೆ. ಇವೆಲ್ಲದರಿಂದ ಪರಮಸತ್ಯಸ್ವರೂಪವನ್ನು ಕಾಣುತ್ತೇವೆಂದಾಗಲಿ ಅಥವಾ ಎಂದೋ ಕಾಣುವೆವೆಂದಾಗಲಿ ಅಲ್ಲ. ಏಕೆಂದರೆ ನಮಗಾರಿಗೂ ಆ ಪೂರ್ಣಚಿತ್ರದ ಅಂಶಗಳೆಲ್ಲವೂ ದೊರಕುವಂತಿಲ್ಲ. ಅಲ್ಲದೆ ಪ್ರತಿ ವೈಜ್ಞಾನಿಕನಿಗೂ ತನಗೆ ತಿಳಿದಿರುವ ಅಂಶಗಳಿಂದ ಸೃಷ್ಟಿಚಿತ್ರವನ್ನು ರಚಿಸಲು ತನ್ನದೇ ಆದ ಒಂದು ರೀತಿಯಿರುತ್ತದೆ.

---

* ಈ ಉಪನ್ಯಾಸವನ್ನು ಕನ್ನಡದಲ್ಲಿ ಪ್ರಕಟಿಸಲು ಅನುಮತಿಕೊಟ್ಟದ್ದಕ್ಕಾಗಿ ಪ್ರೊಫೆಸರ್ ಸಾನಿಯವರಿಗೂ ಚಿತ್ರಗಳ ಪಡಿಯಚ್ಚುಗಳನ್ನು ಕೊಟ್ಟು ಅನುವಾದಕ್ಕೆ ಒಪ್ಪಿಗೆ ಕೊಟ್ಟದ್ದಕ್ಕಾಗಿ ಕಲ್ಕತ್ತದ ಇಂಡಿಯನ್ ಸೈನ್ಸ್ ಕಾಂಗ್ರೆಸ್ ಅಸೋಸಿಯೇಷನ್ ಅಧಿಕಾರಿಗಳಿಗೂ ನಾನು ಕೃತಜ್ಞನಾಗಿದ್ದೇನೆ.—

ಎಚ್. ಸೀತಾರಾಮರಾವ್.

ನಮ್ಮ ಈ ಅಲ್ಪಪ್ರಯತ್ನಗಳು ವಿಶ್ವರೂಪದ ದರ್ಶನವುಳ್ಳವನಿಗೆ ಅಯ್ಯೋ ಪಾಪ ಎನ್ನುವಂತಿರಬಹುದು. ಏಕೆಂದರೆ ಸತ್ಯಕ್ಕೆ ಒಂದೇ ಅಖಂಡ ರೂಪವಿರಬೇಕು. ನಮ್ಮಲ್ಲಿ ಕೆಲವರು ತಮಗೆ ಆ ಸತ್ಯದ ದರ್ಶನವಾಗಿದೆಯೆಂದು ಕೊಚ್ಚಿಕೊಳ್ಳಬಹುದು. ಅದೆಲ್ಲ ಭ್ರಮೆ. ಆದರೂ ನಮ್ಮ ಕುತೂಹಲವು ನಮ್ಮನ್ನು ಮುಂದೊಯ್ಯುವುದು. ಏಕೆಂದರೆ ಈ ಛಿದ್ರಾಂಶಗಳನ್ನರಿಯುವ ದಾರಿಯೇ ವಿಜ್ಞಾನ; ಅದರಂತೆ ಮನವನ್ನಾಕರ್ಷಿಸುವುದು ಮತ್ತೊಂದಿಲ್ಲ.

ಒಂದೊಂದುಸಲ ಸತ್ಯಶೋಧನೆಯಲ್ಲಿ ಪ್ರಾಪಂಚಿಕ ವ್ಯವಹಾರಕ್ಕೆ ಉಪಯುಕ್ತವಾದ ವಸ್ತುಗಳು ಸಿಕ್ಕಬಹುದು; ಅವುಗಳಲ್ಲಿ ಕೆಲವನ್ನು ಒಳ್ಳೆಯದಕ್ಕಾಗಲಿ ಕೆಟ್ಟದಕ್ಕಾಗಲಿ ಉಪಯೋಗಿಸಬಹುದು. ಆದರೆ ನಾವು ಸತ್ಯಾನ್ವೇಷಣೆಯಲ್ಲೇ ನಿರತರಾಗಿರುವೆವಾದರೆ ಅದನ್ನು ಲೌಕಿಕವಾದ ಉಪಯೋಗಗಳಿಗೆ ತಿರುಗಿಸುವುದಕ್ಕೆ ಬೇರೆಯವರಿಗೆ ಬಿಡುವೆವು. ಸ್ವಾರ್ಥರಹಿತವಾದ ಈ ಮಾರ್ಗದಿಂದ ಒಳ್ಳೆಯದಾದ, ಹಿರಿದಾದ, ಸುಂದರವಾದ ಪರಿಣಾಮಗಳಾಗುವುವು. ಆದರೆ ಕೆಲವುಸಲ ದುರಾಶೆಯು ಸತ್ಯಕ್ಕೆ ಅಡಚಣೆಮಾಡಿ, ಹೇಯವಾದ ಉದ್ದೇಶಗಳಿಗೆ ವಿಜ್ಞಾನವನ್ನು ಅಡಿಯಾಳು ಮಾಡುವುದು. ವಿಜ್ಞಾನವು ಮನುಷ್ಯನನ್ನು ಎಷ್ಟೇ ನಾಗರಿಕನನ್ನಾಗಿ ಮಾಡಿದ್ದರೂ ಅವನಿನ್ನೂ ಕೆಲವುವೇಳೆ ದುಷ್ಟಮೃಗದಂತೆಯೇ ಇರುವನೆಂದು ಕಾಣುತ್ತದೆ. ಇತ್ತೀಚೆಗೆ ಪ್ರಪಂಚದಲ್ಲಿ ನಡೆಯುತ್ತಿರುವುದನ್ನು ನೋಡಿದರೆ ನಾವು ಯಾವುದನ್ನು ನಾಗರಿಕತೆಯೆನ್ನುವೆವೋ ಅದು ನಿಜವಾಗಿಯೂ ಸಂಸ್ಕೃತಿಯಲ್ಲವೆಂದು ಕಂಡುಬರುವುದು.

ಇದು ವಿಷಾದಕರವಾದ ಅಂಶ; ಇದರ ವಿಷಯ ಇಲ್ಲಿ ಹೆಚ್ಚು ಹೇಳಬಯಸಿಲ್ಲ. ಇಲ್ಲಿನ ಉದ್ದೇಶವು ಪ್ರಕೃತಿಯ ಧ್ಯಾನದಲ್ಲಿ ಸ್ವಲ್ಪಕಾಲವನ್ನು ಕಳೆಯಬೇಕೆಂಬುದು ಮಾತ್ರ.

## ತೃತೀಯ ಜೀವಯುಗದ ಆದಿ

ತೃತೀಯ ಜೀವಯುಗವು ಪ್ರಾರಂಭವಾಗಿ ಆರು ಅಥವಾ ಏಳು ಕೋಟಿ ವರ್ಷಗಳಾದುವೆಂದು ವೈಜ್ಞಾನಿಕರಲ್ಲಿ ಬಹುಮತವಾದ ಅಭಿಪ್ರಾಯವಿದೆ. ಈ ಯುಗದ ಆದಿಯಲ್ಲಿ ಅತ್ಯದ್ಭುತವಾದ ಭೂಗರ್ಭದೊಳಗಿನ ಶಕ್ತಿಯು ಉಬ್ಬಿ ಭೂಮಿಯ ಮೇಲ್ಮೈಯಲ್ಲಿ ಅನೇಕ ಬಿರುಕುಗಳಾದವು. ಅವೇ ಸಾಗರಗಳು. ಸಣ್ಣಸಣ್ಣ ಬಿರುಕುಗಳಿಂದ ಕರಗಿದ ಶಿಲೆಯು ಉಕ್ಕಿ ಹರಿದು ಕೋಟ್ಯಂತರ ಚದರಮೈಲಿಗಳಷ್ಟು ಭೂಭಾಗಗಳನ್ನು ಮುಚ್ಚಿತು. ಜ್ವಾಲಾಮುಖಿಗಳು ಎರಚಿದ ಬೂದಿಯಿಂದ ಅನೇಕ ಭಾಗಗಳು ಮರುಭೂಮಿಗಳಾದವು. ಉಕ್ಕಿ ಹರಿದ ಶಿಲೆಯು ಉನ್ನತವಾದ

ಪ್ರಸ್ಥಭೂಮಿಗಳಾಯಿತು. ಭೂಮುಖದ ಮೇಲೆ ಬದಲಾವಣೆಗಳು ಕಂಡುಬಂದುವು. ಹೊಸ ಸಸ್ಯಜಾತಿಗಳೂ ಪ್ರಾಣಿವರ್ಗಗಳೂ ಜನಿಸಿದುವು; ಇವು ಹೆಚ್ಚುಕಡಮೆ ಈಗಿರುವಂಥವು. ಆದರೆ ಇನ್ನೂ ಮನುಷ್ಯನ ಸುಳಿವಿಲ್ಲ. ಅವನು ಬರುವುದಕ್ಕೆ ರಂಗ ಸ್ಥಳವೆಲ್ಲ ಸಿದ್ಧವಾಗಿದೆ. ಭೂಗರ್ಭ ದಿಂದ ಉಬ್ಬಿ ಮೇಲೆದ್ದು ಅತ್ಯುನ್ನತ ವಾದ ಪರ್ವತಶ್ರೇಣಿಗಳು ಉದ್ಭವಿ ಸುವಿವೆ. ಇಂಡಿಯಾದೇಶದ ಉತ್ತರ ದಲ್ಲೆಲ್ಲೋ ಒಂದೆಡೆ ಮನುಷ್ಯನ ಜನನವಾಗಬೇಕು.




1. ಕಲ್ಲಿದ್ದಲಿನ ಕಾಲದ ಕೊನೆಯಲ್ಲಿದ್ದ ''ಪ್ಯಾಂಜಿಯ'' ಎಂಬ ಹೆಸರಿಟ್ಟಿರುವ ಅಖಂಡ ಭೂಖಂಡ.
2. ತೃತೀಯಜೀವಯುಗದ ಆದಿಭಾಗದಲ್ಲಿದ್ದ ಭೂವಿಭಾಗಗಳು.
3. ಈಗಿರುವ ಭೂಖಂಡಗಳು.

ಇದೇ ನವೀನಜೀವಿಗಳ ಆದಿಯ ಅಂಕ.

## ದಖ್ಖನ್ನಿನ ಮೂಲ

ತೃತೀಯ ಜೀವಯುಗದ ಪ್ರಾರಂಭದಲ್ಲಿ ಇಂಡಿಯಾ ದೇಶದ ದೃಶ್ಯವೊಂದು ಹೇಗಿದ್ದಿತೆನ್ನುವ ಮೊದಲು ಅದಕ್ಕೂ ಹಿಂದಿನ ಕಾಲವು ಹೇಗಿತ್ತೆಂದು ಸ್ವಲ್ಪ ನೋಡೋಣ. ಆ ಕಾಲವೆಂದರೆ ಮೂವತ್ತುಕೋಟಿ ವರ್ಷಗಳ ಹಿಂದಕ್ಕೆ ಹೋಗಬೇಕು. ಆಗ ಅಟ್ಲಾಂಟಿಕ್ ಸಾಗರವಾಗಲಿ ಹಿಂದೂಸಾಗರವಾಗಲಿ ಹುಟ್ಟಿರಲಿಲ್ಲ.

ತೃತೀಯ ಜೀವಯುಗದ ಮೊದಲು ಭೂ-ಸಾಗರ ಭಾಗಗಳು ಹೇಗಿದ್ದವೆಂಬ ವಿಚಾರವಾಗಿ ಸರ್ವಾನುಮತವಾದ ಅಭಿಪ್ರಾಯವಿಲ್ಲ. ಆದರೆ ಪ್ರೊಫೆಸರ್ ವೆಗನರ್ ಎಂಬ ವೈಜ್ಞಾನಿಕನ ಪ್ರಸಿದ್ಧವಾದದಂತೆ ಹಿಂದೊಂದು ಸಲ ಭೂಮಿಯ ಮೇಲಿನ ಭೂಭಾಗವೆಲ್ಲ ಒಂದೇಕಡೆ ಇದ್ದಿತು. ಆಗಿದ್ದುದು ಒಂದೇ ಅಖಂಡ ಭೂಖಂಡ. ಆಗ ಉತ್ತರ ದಕ್ಷಿಣ ಅಮೆರಿಕಗಳು ಯೂರೋಪ್ ಆಫ್ರಿಕಗಳಿಗೆ ಅಂಟಿಕೊಂಡಿದ್ದುವು. ಅವೆರಡರ ನಡುವೆ ಬ್ರಿಟಿಷ್ ದ್ವೀಪಗಳೂ ಗ್ರೀನ್‌ಲೆಂಡ್ ಮತ್ತು ಐಸ್‌ಲೆಂಡ್‌ಗಳೂ ಪಕ್ಕಪಕ್ಕಗಳಲ್ಲಿ ಜೋಡಿಸಿಕೊಂಡಿದ್ದುವು. ಇಂಡಿಯಾ ದೇಶವು ಆಗ ಪಶ್ಚಿಮಕ್ಕೆ

ಮಡಗಾಸ್ಕರ್, ಪೂರ್ವಕ್ಕೆ ಆಸ್ಟ್ರೇಲಿಯಾಗಳೊಂದಿಗೆ ಕೂಡಿಕೊಂಡಿತ್ತು. ಆಗಿನ ದಕ್ಷಿಣಧ್ರುವವು ಕೇಪ್‌ಕಾಲೊನಿ ಪ್ರಾಂತದಲ್ಲಿತ್ತು.

ಅದಾದಮೇಲೆ ಭೂಗರ್ಭದೊಳಗಿನ ಬಿರಿಯುವ ಶಕ್ತಿಯಿಂದ ಭೂಭಾಗಗಳಲ್ಲೆಲ್ಲ ಬಿರುಕುಗಳಾಗಿ ದೂರದೂರವಾಗಿ 'ತೇಲಿ' ಹೋಗಲು ಪ್ರಾರಂಭವಾಯಿತು. ಅಂಥ ಬಿರುಕುಗಳಲ್ಲಿ ಈಗಿನ ಕೆಂಪುಸಮುದ್ರವೊಂದು ಇನ್ನೂರು ಮೈಲಿಯಷ್ಟು ಅಗಲವಾಗಿದೆ; ಅಟ್ಲಾಂಟಿಕ್ ಬಿರುಕಂತೂ ಮಹಾಸಾಗರವಾಗಿಬಿಟ್ಟಿದೆ.

ಹೀಗೆ ದಕ್ಷಿಣ ಇಂಡಿಯವು ಇನ್ನೂ ಈಶಾನ್ಯದಕಡೆಗೆ ಕ್ರಮೇಣ ಸಾಗುತ್ತಿದೆಯೆಂದು ವೆಗನರ್‌ನ ಮತ. ಹಿಂದೆ ವಿಂಧ್ಯಪರ್ವತದ ಉತ್ತರಪ್ರದೇಶದಲ್ಲಿ "ಟೀಥಿಸ್" ಸಮುದ್ರವೆಂಬುದು ಏಷ್ಯದ ಇತರ ಭೂಪ್ರದೇಶಗಳಿಗೂ ಇಲ್ಲಿಗೂ ಮಧ್ಯೆ ಇತ್ತು. ಆಮೇಲೆ ಏಷ್ಯವೂ ಇಂಡಿಯಾದಕಡೆ 'ಅಲೆಯುತ್ತ' ಬಂದು ಮಧ್ಯಸಮುದ್ರದ ತಳದ ಪ್ರಸ್ತರಗಳು ಒತ್ತಲ್ಪಟ್ಟು ಮಡಿಕೆಗಳಾಗಿ ಈಗಿನ ಹಿಮಾಲಯ ಪರ್ವತವಾದುವು.

## ಆದಿಯಲ್ಲಿನ ದೃಶ್ಯ

ದಕ್ಷಿಣ ಇಂಡಿಯದ ಬಹುಭಾಗವೆಲ್ಲ ಆದಿಯಲ್ಲಿ ಕರಗಿ ನೀರಾಗಿದ್ದ ಅಗ್ನಿಶಿಲೆಯಿಂದಾದದ್ದು.—ಅದು ಒಂದೇ ಸಲವಲ್ಲ, ಹಲವು ಸಲ ಮೇಲುಕ್ಕಿ ಶಿಲೆಯಾದದ್ದು. ದಕ್ಷಿಣ ಇಂಡಿಯದ ಪೂರ್ವದಕ್ಷಿಣ ಭಾಗಗಳು ಭೂಮಿಯಮೇಲಿನ ಪ್ರದೇಶಗಳೆಲ್ಲಕ್ಕಿಂತಲೂ ಪುರಾತನವಾದವು. ಅವು ಭೂಗ್ರಹ ಹಿಂದೆ ಜ್ವಾಲೆಯ ಗೋಳದಂತಿದ್ದು ತಣ್ಣಗಾದ ಮೇಲೆ ಮೊದಲು ಶಿಲೆಯಾದ ಭೂಪ್ರದೇಶದ ಭಾಗಗಳು. ಹೀಗೆ ಮೊದಲು ಹೆಪ್ಪುಕಟ್ಟಿದ 'ಕೆನೆ'ಯಲ್ಲಿ ಬಿರುಕುಗಳಾಗಿ ಮತ್ತಷ್ಟು ದ್ರವರೂಪವಾದ ಶಿಲೆ ಉಕ್ಕಿ ಬಂದು ಘನಿಸಿತು.

ಇಂಥ ರಂಗಸ್ಥಳದಲ್ಲಿ ಜೀವಾಣುವು ಮೊದಲು ಬಹುಶಃ ನೀರಿನಲ್ಲಿ ಅವತಾರವೆತ್ತಿತು. ಆಗಿನ ಸಮುದ್ರಕ್ಕೆ ಕೊಚ್ಚಿಕೊಂಡು ಹೋದ ಶಿಲೆಗಳೆಲ್ಲ ಪ್ರಸ್ತರಗಳಾಗಿ ಮತ್ತೆ ಅನೇಕಕಡೆ ಮೇಲಕ್ಕೆತ್ತಲ್ಪಟ್ಟು ಪುನಃ ಭೂಭಾಗಗಳಾಗಿವೆ. ಇಂಥ ಶಿಲಾ ಪ್ರಸ್ತರಗಳು ಮಹಾನದಿ, ಗೋದಾವರಿ ಮತ್ತು ನರ್ಮದಾ, ಈ ನದಿಗಳ ಪಾತ್ರ ಪ್ರದೇಶದಲ್ಲಿಯೂ, ಪೂರ್ವತೀರದಲ್ಲಿ ತಿರುಚನಾಪಲ್ಲಿಯಿಂದ ಕಟಕ್ ವರೆಗೂ ವಿಸ್ತರಿಸಿವೆ. ಈ ಪ್ರಸ್ತರಗಳು ಹೆಚ್ಚಾಗಿ ನದಿಗಳು ಮತ್ತು ಸರೋವರಗಳಲ್ಲಿ ತುಂಬಿದ ಮೆಕ್ಕಲು. ಕೆಲವೆಡೆಗಳಲ್ಲಿ ಆಳವಿಲ್ಲದ ತೀರದಬಳಿಯ ಸಮುದ್ರಭಾಗಗಳಾಗಿದ್ದುವು.

ಈ ಪ್ರಸ್ತರಗಳಲ್ಲಿ ಸಿಕ್ಕಿರುವ ಪಳೆಯುಳಿಕೆಗಳಿಂದ ಆಗಿನಕಾಲದ ವಾಯುಗುಣದ ವ್ಯತ್ಯಾಸಗಳೂ, ಸಸ್ಯ ಮತ್ತು ಪ್ರಾಣಿಸಂಕುಲಗಳ ಪರಂಪರೆಗಳೂ ವಿದಿತವಾಗಿವೆ.

ದಖ್ಖನ್ ಪ್ರದೇಶವು ಎಲ್ಲೋ ಕೆಲವು ಸಣ್ಣ ಪ್ರದೇಶಗಳ ವಿನಾ ಉಳಿದ ಭಾಗವೆಲ್ಲ ಆದಿಯಿಂದಲೂ ನೆಲಪ್ರದೇಶವಾಗಿಯೇ ಇದೆ. ಕೆಲವು ಪ್ರದೇಶಗಳು ಮಾತ್ರ ಸಮುದ್ರದ ತಳದಲ್ಲಿದ್ದುವು.




**ಶಿಲಾಪದರಗಳ ಕಾಲವಿಭಾಗಗಳು**

(ತೃತೀಯ ಜೀವಯುಗದ ಮೊದಲಂಕದ (Eocene) ಸ್ಥಾನವನ್ನು ನೋಡಿ. ಒಂದು ಸೆಂಟಿಮೀಟರ್ ದಪ್ಪವು ೨೦೦,೦೦೦,೦೦೦ ವರ್ಷಗಳಿಗೆ ಸಮ.)

## ದಖ್ಖನ್ 'ಟ್ರ್ಯಾಪ್' ಪ್ರದೇಶ

ದಖ್ಖನ್ನಿನ ಮಧ್ಯ ಮತ್ತು ಪಶ್ಚಿಮಪ್ರದೇಶಗಳಲ್ಲಿನ ಶಿಲೆಗಳು ಅಗ್ನಿಶಿಲೆಗಳಾದರೂ ಬೇರೆ ಬಗೆಯುವು. ಪೂರ್ವ ಮತ್ತು ದಕ್ಷಿಣ ಪ್ರದೇಶದವು ಮೇಲೆ ಹೇಳಿದಂತೆ ಅನಾದಿ

ಕಾಲದ ಶಿಲೆಗಳು. ಇವೆರಡಕ್ಕೂ ವಯಸ್ಸಿನಲ್ಲಿ ಬಹಳ ಅಂತರವಿದೆ. ಮೊದಲನೆಯ ತರದವು ತೃತೀಯ ಜೀವಯುಗದ ಕಾಲದವು. ಅವು ಭೂಮಿಯ ನೂರಾರು ಮೈಲಿ ಉದ್ದವಾದ ಬಿರುಕುಗಳಿಂದ ಉಕ್ಕಿಬಂದ ಕರಗಿದ ಶಿಲೆಗಳು; ಈಗಲೂ ಜ್ವಾಲಾಮುಖಿಗಳಿಂದ ಉಕ್ಕುವಂಥ ಶಿಲೆಗಳು.

ಬೊಂಬಾಯಿಸಿಂದ ನಾಗಪುರಕ್ಕೆ ಹೋಗುವಾಗ ಸಿಕ್ಕುವುದು ಇಂಥ ಶಿಲಾಪ್ರದೇಶ. ಎಲ್ಲೆಲ್ಲಿಯೂ ದೊಡ್ಡ ಜಗಲಿಗಳಂತೆ ಮಟ್ಟವಾದ ಬೆಟ್ಟಗಳು, ಇದೇ ಬಗೆಯ ದೇಶಲಕ್ಷಣವು ಕಾಥೆವಾರ್, ಕಚ್‌ವರೆಗೂ ಪ್ರಸರಿಸಿದೆ. ಬೊಂಬಾಯಿನಿಂದ ಪೂನಾಕ್ಕೆ ಬರುವಾಗ ಸಿಕ್ಕುವ ಪಶ್ಚಿಮಘಟ್ಟ ಪ್ರಾಂತವೂ ಇಂತಹದೇ. ಇವು ತೃತೀಯ ಜೀವಯುಗದ ಆದಿಯಲ್ಲಿ ಒಮ್ಮಿಂದೊಮ್ಮೆ ಉಕ್ಕಿಬಂದು ಕೆಲವೆಡೆಗಳಲ್ಲಿ ಆರುಸಾವಿರದಿಂದ ಹತ್ತುಸಾವಿರ ಅಡಿಗಳಷ್ಟು ಪೇರಿಸಿದಂಥ ಶಿಲೆಗಳು.

## ಜ್ವಾಲಾಮುಖಪ್ರಕರಣದ ಹಿಂದಿನ ಕಾಲ

ಮೇಲೆ ಹೇಳಿದುದಕ್ಕಿಂತ ಹಿಂದಿನ ಎಂದರೆ 'ಕ್ರಿಟೇಷಿಯಸ್' ಕಾಲದ ದಖ್ಖನ್ನಿನ ಭೂವಿವರಣೆಯನ್ನು ಚಿತ್ರಿಸಿಕೊಳ್ಳೋಣ. ನೈರುತ್ಯಪ್ರಾಂತದಲ್ಲಿ ಎಂದರೆ ತಿರುಚನಾಪಲ್ಲಿಯಿಂದ ಪಾಂಡಿಚೆರಿಯ ವರೆಗಿನ ಪ್ರದೇಶವು ಸಮುದ್ರದ ತಳವಾಗಿತ್ತು. ಅಲ್ಲಿನ ಪ್ರಸ್ತರಗಳು ಜೀವಾವಶೇಷಗಳಿಂದ ತುಂಬಿತುಳುಕುತ್ತಿವೆ. ಅದೇ ಸಮುದ್ರವು ಈಶಾನ್ಯಕ್ಕೆ ಅಸ್ಸಾಂ ಪ್ರಾಂತದ ವರೆಗೂ ಹಬ್ಬಿತ್ತು. ತಿರುಚನಾಪಲ್ಲಿಯ ಬಳಿ ಇರುವ ಊಟತೂರ್ ಹತ್ತಿರ ಶಿಲೆಯಾಗಿ ಪರಿಣಮಿಸಿರುವ ಮರದ ಚೂರುಗಳು ಸಿಕ್ಕಿವೆ. ಅವುಗಳಲ್ಲಿ ಸಮುದ್ರದಲ್ಲಿ ಸಿಕ್ಕುವ ಮರ ಕೊರೆಯುವ ಹುಳುಗಳಿಂದ ಮಾಡಲ್ಪಟ್ಟ ರಂಧ್ರಗಳಿವೆ. ಆ ಹುಳುಗಳ ಚಿಪ್ಪುಗಳೂ ಮರದೊಳಗೆ ಸಿಕ್ಕಿವೆ. ಆಗಿನ ಕಾಲದಲ್ಲಿ ಮರದ ತುಂಡುಗಳು ಆಗಿನ ಹೊಳೆಗಳಲ್ಲಿ ತೇಲಿಹೋಗಿ ತೀರಸಮುದ್ರಗಳೊಳಗೆ ಮುಳುಗಿಹೋಗಿರಬೇಕು.

ದಖ್ಖನ್ನಿನ ಉತ್ತರಕ್ಕಿದ್ದ ಆಗಿನ ಸಮುದ್ರ ನರ್ಮದಾನದಿಯ ಒಂದು ಪ್ರಾಂತದಲ್ಲಿ ಸ್ವಲ್ಪ ಚಾಚಿಕೊಂಡಿತ್ತು. ಆದರೆ ಇಲ್ಲಿನ ಪ್ರಾಣಿಜಾತಿಗಳೇ ಬೇರೆ. ಏಕೆಂದರೆ ಉತ್ತರ ಮತ್ತು ದಕ್ಷಿಣಸಮುದ್ರಗಳನ್ನು ಮಧ್ಯವಿದ್ದ ಪ್ರಸ್ಥಭೂಮಿಯು ವಿಭಾಗಿಸಿತ್ತು. ಉತ್ತರಸಮುದ್ರದ ಜೀವಜಂತುಗಳು ಯೂರೋಪಿನವುಗಳ ಬಂಧುಗಳು. ಅಷ್ಟೇಕೆ, ಆಗಿನ "ಟೀಥಿಸ್" ಸಮುದ್ರವು ಯೂರೋಪಿನಿಂದ ಟಿಬೆಟ್ ಮತ್ತು ಚೈನಾಗಳವರೆಗೆ ಪ್ರಸರಿಸಿತ್ತು.

ಆಗ ನಮ್ಮ ಪಶ್ಚಿಮತೀರ ಹೇಗಿದ್ದಿತೆಂಬುದಕ್ಕೆ ನಿದರ್ಶನಗಳಿಲ್ಲ. ಇಂಡಿಯವು




**ಡೆಕ್ಕನ್ ಟ್ರ್ಯಾಪ್‌ಗಳಿಗೂ ಆದಿಶಿಲೆಗಳಿಗೂ (Archaean) ಇರುವ ಸಂಬಂಧ**

ಡೆಕ್ಕನ್ ಟ್ರ್ಯಾಪ್ ಹಸುರು, ಆದಿಶಿಲೆಗಳು ಕೆಂಪು ; ಇತರ ಶಿಲಾಪ್ರದೇಶವನ್ನು ಹಾಗೇ ಬಿಟ್ಟಿದೆ.

ಆಗ ಪ್ರಾಯಶಃ ಆಫ್ರಿಕಾಕ್ಕೆ ಅಂಟಿಕೊಂಡೇ ಇತ್ತು ; ಅಥವಾ ಆಗಿದ್ದ ಪಶ್ಚಿಮ ಪ್ರದೇಶದ ಕೆಲವು ಭೂಭಾಗಗಳು ಅರಬ್ಬಿ ಸಮುದ್ರದಲ್ಲಿ ಮುಳುಗಿಹೋಗಿವೆ.

ಆಗಿನ ನೆಲದ ಮೇಲಿನ ಪ್ರಾಣಿಗಳೆಂದರೆ ಡೈನೊಸಾರ್‌ಗಳೆಂಬ ಪೆಡಂಭೂತಗಳು. ಅವು ಮಧ್ಯಪ್ರಾಂತಗಳ ಕಾಡುಗಳಲ್ಲಿದ್ದುವು. ಅವುಗಳಲ್ಲಿ ಅನೇಕ ಪ್ರಾಣಿಗಳು ಇಂಡಿಯಾ, ಮಡಗಾಸ್ಕರ್ ಮತ್ತು ದಕ್ಷಿಣ ಅಮೆರಿಕಗಳಿಗೆ ವೈಶೇಷಿಕವಾದವು. ಈ ಪ್ರಾಣಿಗಳು ಹರಡುವುದಕ್ಕೆ ಈಗ ದೂರವಾಗಿರುವ ಈ ದೇಶಗಳನ್ನು ಸಂಬಂಧಿಸುತ್ತಿದ್ದ ನೆಲದ ಭಾಗವಿದ್ದಿರಬೇಕು. ಆದರೆ ಈ ಪೆಡಂಭೂತಗಳು ಹೆಚ್ಚು ಕಾಲವಿರಲಿಲ್ಲ. ತೃತೀಯ ಜೀವಯುಗ ಪ್ರಾರಂಭವಾದಾಗ ಇವು ನಿರ್ನಾಮವಾಗಿದ್ದುವು.

## ತೃತೀಯ ಜೀವಯುಗದ ಉದಯ

ಮಧ್ಯಜೀವಯುಗ ಮುಗಿಯುತ್ತ ಬಂತು. ಪ್ರಾಚೀನಕಾಲದ ದಕ್ಷಿಣ ಭೂಭಾಗವು ಒಡೆದು ಖಂಡಗಳಾದುವು. ಇವುಗಳ ಅಂತರದ ಸಮುದ್ರಗಳು ಅಗಲವಾದುವು. ದಖ್ಖನ್ನಿನ ಉತ್ತರದಲ್ಲಿದ್ದ ಭೂಮಧ್ಯ ಸಮುದ್ರಕ್ಕೆ ಈಜಿಪ್ಟ್, ಫ್ರಾನ್ಸ್, ಬೆಲ್ಜಿಯಂ ಮತ್ತು ಇಂಗ್ಲೆಂಡ್ ದೇಶಗಳ ನದಿಗಳು ಮೆಕ್ಕಲನ್ನು ತಂದುಹಾಕುತ್ತಿದ್ದುವು. ಪಶ್ಚಿಮಕ್ಕೆ ಮೆಕ್ಸಿಕೋವರೆಗೂ, ಪೂರ್ವಕ್ಕೆ ಬೋರ್ನಿಯೋದ ಆಚೆಯವರೆಗೂ ಇದೇ ಸಮುದ್ರವು ವಿಸ್ತರಿಸಿತ್ತು. ಇದೇ ಆಗಿನ ಸಮಭಾಜಕವೃತ್ತದ ಮಹಾಸಾಗರ. ಇದರ ತಳದಿಂದಲೇ ಮುಂದೆ ಹಿಮಾಲಯ ಮತ್ತು ಆಲ್ಪ್ಸ್ ಪರ್ವತ ಶ್ರೇಣಿಗಳು ಉದ್ಭವಿಸಿದುವು.

ಜ್ವಾಲಾಮುಖಿಗಳ ರೌದ್ರ ರಭಸಗಳೊಂದಿಗೆ ತೃತೀಯ ಜೀವಯುಗ ಪ್ರಾರಂಭವಾಯಿತು. ಜ್ವಾಲಾಮುಖಿಗಳೆಂದರೆ ಈಗಿನ ವೆಸೂವಿಯಸ್‌ನಂತಹವಲ್ಲ : ಭೂಮಿಯಲ್ಲಿನ ಬಿರುಕುಗಳಿಂದ ಕರಗಿದ ಶಿಲೆಯು ಆಟೋಪವಿಲ್ಲದೆ ಉಕ್ಕುವುದು. ಈ ಬಿರುಕುಗಳು ನೂರಾರು ಗಜಗಳಷ್ಟು ಅಗಲವಾಗಿಯೂ ಹತ್ತಾರು ಮೈಲಿಗಳಷ್ಟು ಉದ್ದವಾಗಿಯೂ ಇದ್ದು ಎಡಬಲಗಳಲ್ಲಿ ಅಲ್ಲಲ್ಲಿ ಸೀಳಾಗಿ ಭಯಂಕರ ಜ್ವಾಲಾದ್ರವಗಳಿಂದ ಕೂಡಿರುತ್ತಿತ್ತು. ಕಾಥೆವಾರ್ ಮುಂತಾದ ಕೆಲವೆಡೆಗಳಲ್ಲಿ ಈ ಬಿರುಕುಗಳನ್ನು ಈಗಲೂ ಕಾಣಬಹುದು. ಅವುಗಳಲ್ಲಿ ಶಿಲೆಯು ಗೋಡೆಗಳಂತೆ ಘನಿಸಿದೆ.

ದಖ್ಖನ್ನಿನ ಈ ಶಿಲೆಗಳಲ್ಲಿ ಕಬ್ಬಿಣದ ಪರಿಮಾಣವು ಹೆಚ್ಚಾಗಿದ್ದು ಅವು ಘನಿಸುವ ಮೊದಲು ಧಾರಾಳವಾಗಿ ಹರಿಯುತ್ತಿದ್ದುವು. ಈ ಅಗ್ನಿಪ್ರಳಯದಲ್ಲಿ ಸಸ್ಯವೃಕ್ಷಗಳೆಲ್ಲವೂ ಸುಟ್ಟು ಭೂಮಿಯೇ ಹತ್ತಿಕೊಂಡು ಉರಿಯುತ್ತಿದ್ದಂತಿತ್ತು. ಅದು ಹರಿದ ಕಡೆ ನೆಲವೆಲ್ಲಾ ಸೀದು ಹುಸಿಮಣ್ಣೆಲ್ಲ ರೊಟ್ಟಿಕಟ್ಟಿಕೊಂಡಿತು.

ನೀರಿನಿಂದ ತುಂಬಿದ ಹಳ್ಳಗಳೆಲ್ಲ ಶಿಲೆಯ ಪ್ರವಾಹಕ್ಕೆ ಸಿಕ್ಕಿ ಕ್ಷಣಮಾತ್ರದಲ್ಲಿ ಹಬೆಯಾಗಿ ಶಿಲೆಯನ್ನು ಸಿಡಿಸಿ ಎರಚಿರಬೇಕು. ಪ್ರವಾಹವು ಅಡ್ಡಗಟ್ಟಿ ಹೊಸ ಸರೋವರಗಳನ್ನು ಮಾಡಿತು. ದೊಡ್ಡ ಹೊಳೆಗಳು ಕಾಲಕ್ರಮೇಣ ತಮ್ಮ ಪಾತ್ರಗಳನ್ನು ಹೊಸದಾಗಿ ಕೊರೆದುಕೊಂಡವು. ಅಗ್ನಿಪ್ರಳಯಗಳು ಪುನಃ ಪುನಃ ಆಗುತ್ತಿದ್ದುವು—ಒಂದೊಂದು ಸಲ ಒಂದೊಂದು ಕಡೆ. ಮೊದಲು ಬಹುಶಃ ಐದು ಲಕ್ಷ ಚದರ ಮೈಲಿಗಳಷ್ಟು ಸ್ಥಳವನ್ನು ಅವು ಆಕ್ರಮಿಸಿರಬೇಕು. ಈಗ ಲಕ್ಷಾಂತರ ವರ್ಷಗಳಿಂದ ಮಳೆಗಾಳಿ ಬಿಸಿಲುಗಳ ಹೊಡೆತಕ್ಕೆ ಸಿಕ್ಕಿದ್ದರೂ ಇನ್ನೂ ಕರಗದೆ ನಿಂತಿರುವ ಈ ದಕ್ಖನ್ 'ಟ್ರ್ಯಾಪ್' (ಮೆಟ್ಟಲು ಮೆಟ್ಟಲಾಗಿರುವುದೆಂದು ಅರ್ಥ—ಸ್ವೀಡಿಷ್ ಪದ) ಈಗ ಸುಮಾರು ಎರಡುಲಕ್ಷ ಚದರಮೈಲಿಗಳಷ್ಟು ವಿಸ್ತೀರ್ಣವುಳ್ಳದಾಗಿದೆ. ಅದರ ವಿಸ್ತೀರ್ಣವು ಪಶ್ಚಿಮ ತೀರದಲ್ಲಿ ಹಟಾತ್ತನೆ ಕೊನೆಗಂಡಿದ್ದರೂ, ಅರಬ್ಬಿ ಸಮುದ್ರದಲ್ಲಿ ಎಷ್ಟು ಭಾಗವು ಮುಳುಗಿದೆಯೆಂದು ಹೇಳಲು ಕಷ್ಟವಾಗಿದೆ.

ಇಷ್ಟೊಂದು ವಿಸ್ತಾರ ಪ್ರದೇಶದಲ್ಲಿ ಅಗ್ನಿಪ್ರವಾಹವು ಎಲ್ಲಿ ಪ್ರಾರಂಭವಾಯಿತೆಂದು ಹೇಳುವುದು ಕಷ್ಟ. ಅಂತೂ ನಾಗಪುರದ ಬಳಿಯಿರುವ ಶಿಲೆಗಳು ಮೊದಲು ಉಕ್ಕಿ ಬಂದವಾಗಿರಬಹುದು. ಕಟ್ಟಕಡೆಯದೆಂದರೆ ಬೊಂಬಾಯಿನಲ್ಲಿ ಈಗ ಮಲಬಾರ್ ಹಿಲ್ ಎನ್ನಿಸಿಕೊಂಡಿರುವ ಶ್ರೀಮಂತ ಗುಡ್ಡವೊಂದು. ಅಗ್ನಿಪ್ರಳಯಗಳು ಪೂರ್ವ ಪ್ರದೇಶದಲ್ಲಿ ಪ್ರಾರಂಭವಾಗಿ ಪಶ್ಚಿಮದ ಕಡೆ ಹಬ್ಬಿದಂತೆ ಕಾಣುತ್ತದೆ.

ಈ ಪ್ರವಾಹಗಳು ಕೆಲವು ಅಡಿಗಳಿಂದ ಒಂದುನೂರು ಅಡಿಗಳಷ್ಟು ದಪ್ಪವಾಗಿವೆ. ಒಂದು ಸಲ ಉಕ್ಕಿದ ಕಡೆ ಮತ್ತೊಂದು ಸಲ ಉಕ್ಕಿ ಮೊದಲಿನ ಬಿರುಕುಗಳು ಕಾಣದಾಗಿವೆ. ಆ ಕಾಲದಲ್ಲಿ ಭೂಮಿಯ ಮೇಲೆ ಪ್ರಚಂಡ ಆರ್ಭಟಗಳೆದ್ದಿರಬೇಕು. ಆಕಾಶವೆಲ್ಲ ಅನೇಕ ಮೈಲಿಗಳಷ್ಟು ಎತ್ತರಕ್ಕೆ ಜ್ವಾಲೆ, ಹಬೆ, ಹೊಗೆ, ಬೂದಿಗಳಿಂದ ತುಂಬಿರಬೇಕು. ಶಾಂತಭೂತಾಯಿಯು ರೌದ್ರವನ್ನು ಮುಗಿಲಿಗೆರಚುತ್ತಿದ್ದಿರಬೇಕು.

ಮೇಲಕ್ಕೆ ಅಡರಿದ ಬೂದಿಯು ಪುನಃ ಭೂಮಿಯ ಮೇಲೆ ವೃಷ್ಟಿಯಾಯಿತು. ಇಂಥ ಬೂದಿಯಿಂದಲೇ ಆದ ಪ್ರಸ್ತರಗಳನೇಕವು ಪಶ್ಚಿಮ ಇಂಡಿಯದಲ್ಲಿ ಸಿಕ್ಕಿವೆ. ಪೂನಾ ಮಹಾಬಲೇಶ್ವರಗಳ ಬಳಿ ಇಂಥವಿವೆ. ಇಲ್ಲೊಂದು ರಭಸಯುಕ್ತವಾದ ಜ್ವಾಲಾಮುಖಿಯಿದ್ದಿರಬೇಕು.

ನದಿ ಅಥವಾ ಸರೋವರದ ಮೇಲೆ ಇಂಥ ಬೂದಿಯ ವೃಷ್ಟಿಯಾಯಿತೆಂದರೆ ಅದರಲ್ಲಿನ ಜೀವವರ್ಗವೆಲ್ಲ ಅಲ್ಲಿಯೇ ಸಮಾಧಿಗತವಾದುವು.

ಸಮಾಧಿಯೆಂದರೆ ಅವಕ್ಕೆ ಶಾಶ್ವತ ರೂಪವನ್ನೇ ಕೊಟ್ಟಂತಾಯಿತು. ಅದಾವ ಗುಣವಿಶೇಷದಿಂದಲೋ ನಾವರಿಯೆವು, ಆ ಸಸ್ಯಗಳು ಪ್ರಾಣಿಗಳೆಲ್ಲ ಸೊಗಸಾದ

ಸ್ಥಿತಿಯಲ್ಲಿ ಶಿಲಾಂತರ್ಗತವಾದ ಅವಶೇಷಗಳಾಗಿ ಉಳಿದುವು. ಸಸ್ಯಗಳ ಅಣು ಪರಮಾಣುಗಳೆಲ್ಲ ಒಂದರ ಸ್ಥಾನಕ್ಕೆ ಇನ್ನೊಂದರಂತೆ ಶಿಲಾಪದಾರ್ಥದ ಅಣುಗಳಿಂದ ರೂಪಾಂತರಗೊಂಡುವು. ಬೆಣಚುಕಲ್ಲಿನ ಪದಾರ್ಥವಾದ ಈ ಶಿಲೆಯಿಂದ ಹಿಂದಿದ್ದ ಜೀವಿತವಸ್ತುಗಳ ಅಚ್ಚುಗಳು ಅಳಿಯದೆ ನಿಂತುವು.

ಹೀಗೆ ಶಿಲಾಂತರ್ಗತ ಅವಶೇಷಗಳೆಂದರೆ ಶಿಲೆಯಲ್ಲಿ ಉಳಿದ ಅಚ್ಚುಗಳಲ್ಲ. ಸಸ್ಯರಚನೆಯ ಸೂಕ್ಷ್ಮಾಂಶಗಳೆಲ್ಲವೂ ಶಿಲೆಯಾಗಿ ಪರಿಣಮಿಸಿದುವು. ಇವನ್ನು ಸೂಕ್ಷ್ಮದರ್ಶಕದ ಕೆಳಗೆ ಕಾಣಬಹುದು. ಈ ರೂಪಾಂತರದ ಅಚ್ಚರಿಯೇನೆಂದರೆ ಅವನ್ನು ನೋಡುತ್ತಿರುವಾಗ ಈಗಿನ ಕಾಲದ ಸಸ್ಯವಿಶೇಷಗಳನ್ನೇ ಪರೀಕ್ಷಿಸು ತ್ತಿದ್ದೇವೋ ಎನ್ನುವಂತೆ ಭಾಸವಾಗುವುದು.

ಶಿಲಾಪ್ರವಾಹಕ್ಕೆ ಸಿಕ್ಕಿದುದರಿಂದ ಅದರ ಶಾಖದಿಂದಲೋ ಅಥವಾ ಘನೀ ಭೂತವಾದಮೇಲೂ ಶಿಲೆಗಳಲ್ಲಿ ಹರಿಯುವ ಸೂಕ್ಷ್ಮ ಶಿಲಾದ್ರವಗಳಿಂದಲೋ, ಅಂತೂ ಆ ಸರೋವರಗಳ ಮೆಕ್ಕಲು ಮಣ್ಣೆಲ್ಲ ಗಟ್ಟಿಯಾಗಿ ಸುತ್ತಿಗೆಯ ಬಡಿತಕ್ಕೆ ಉಕ್ಕಿನಂತೆ ಶಬ್ದವಾಗುವುದು. ಮೆಕ್ಕಲಿನಲ್ಲಿ ಹೂತಿದ್ದ ಸಸ್ಯಗಳ, ಮತ್ತು ಪ್ರಾಣಿಗಳ ಭಾಗ ಗಳೆಲ್ಲವೂ ಅಲ್ಲೇ ಉಳಿದುವು. ಹೀಗೆ ಆಗಿನ ಕಾಲದ ಸಸ್ಯ ಮತ್ತು ಪ್ರಾಣಿಗಳ ದೊಡ್ಡ ಸಂಕುಲಗಳೇ ನಮಗೆ ಸಿಕ್ಕಿವೆ.

## ದಖ್ಖನ್ ಟ್ರ್ಯಾಪ್ ಕಾಲದ ಜೀವಿಗಳು

ಮೇಲೆ ತಿಳಿಸಿದಂತೆ ಅಳಿಯದೆ ಉಳಿದಿರುವ ಅವಶೇಷಗಳಿಂದ ಆ ಜೀವಜಾತಿಗಳ ಐತಿಹಾಸಿಕನಿಗೆ ಎಂಥ ಬೆಲೆಯಾದ ಸಾಮಗ್ರಿಗಳು ಸಿಕ್ಕಿವೆಯೆಂದು ಗೊತ್ತಾಗುವುದು. ಶಿಲಾರಾಶಿಗಳ ವಿಭಜನೆಗೆ ಈ ಅವಶೇಷಗಳು ಬಹು ಬೆಲೆಯಾದವು. ಅವುಗಳಲ್ಲಿನ ಜೀವಜಾತಿಗಳಿಂದ ಅವು ಯಾವ ಕಾಲದವೆಂದು ತಿಳಿಯಬಹುದು.

ದಖ್ಖನ್ ಟ್ರ್ಯಾಪ್ ಪ್ರಸ್ತರಗಳ ಕಾಲನಿರ್ದೇಶವು ಭೂಮಿಶಾಸ್ತ್ರಜ್ಞರಿಂದ ಈಗ ಎಪ್ಪತ್ತು ವರ್ಷಗಳಿಂದಲೂ ಚರ್ಚಿಸಲ್ಪಡುತ್ತಿದೆ. ಮುಖ್ಯವಾದ ವಾದವೇನೆಂದರೆ ಶಿಲಾಪ್ರವಾಹವು ಮಧ್ಯಜೀವಯುಗದ ಕಡೆಯಲ್ಲಿಯೇ ಪ್ರಾರಂಭವಾಯಿತೇ ಅಥವಾ ತೃತೀಯ ಜೀವಯುಗದ ಆದಿಯಲ್ಲಾಯಿತೇ ಎಂಬುದು. ಒಂದು ಪ್ರಸ್ತರದ ಕಾಲನಿರ್ದೇಶಕ್ಕೆ ಭೂಮಿಶಾಸ್ತ್ರಜ್ಞರಲ್ಲಿ ಇಷ್ಟೊಂದು ವಾದಗಳೇಳಬೇಕೇ ಎಂದೆನಿಸ ಬಹುದು. ಆದರೆ ತೀರ ವೈಜ್ಞಾನಿಕ ದೃಷ್ಟಿಯಿಂದ ಮಾತ್ರವಲ್ಲದೆ ಶಿಲಾಪ್ರಸ್ತರಗಳ ಸ್ಥಾನ ಮತ್ತು ಕಾಲನಿರ್ದೇಶವು ಮನುಷ್ಯನಿಗೆ ಖನಿಜಸಂಪತ್ತಿನ ಅನ್ವೇಷಣೆಯಲ್ಲಿ ಸಹಾಯಕವಾಗುವುದು.

ದಖ್ಖನ್ನಿನ ಶಿಲೆಯ ಪ್ರವಾಹಗಳಲ್ಲಿ ಮಧ್ಯೆ ಸಿಕ್ಕಿರುವ ಮೆಕ್ಕಲು ಮಣ್ಣಿನ ಪ್ರಸ್ತರಗಳೇ ಆ ಪ್ರವಾಹಗಳ ಕಾಲನಿರ್ದೇಶಕ್ಕೆ ನಿದರ್ಶನಗಳನ್ನು ಕೊಡುವುವು. ಅವುಗಳಲ್ಲಿನ ಸಸ್ಯಾವಶೇಷಗಳು ಸ್ಪಷ್ಟವಾದ ಉತ್ತರವನ್ನು ಕೊಡುವುವೆಂದು ನನ್ನ ಮತ. ಮೊದಲು ಅವುಗಳಲ್ಲಿನ ಕೆಲವು ಜೀವಾವಶೇಷಗಳನ್ನು ಪರೀಕ್ಷಿಸೋಣ.

ನಮಗೆ ತಿಳಿದಿರುವ ಸಸ್ಯಾವಶೇಷಗಳು ಹೆಚ್ಚಾಗಿ ನಾಗಪುರ ಡಿಸ್ಟ್ರಿಕ್ಟಿನವು. ಅಲ್ಲೇ ದಖ್ಖನ್ನಿನ ಶಿಲಾಪ್ರಸ್ತರಗಳಲ್ಲೆಲ್ಲ ಪುರಾತನವಾದ ಪದರಗಳು ಸಿಕ್ಕಿರುವುದು. ಇವುಗಳ ಕಾಲವನ್ನು ಗೊತ್ತುಮಾಡಿತೆಂದರೆ ಅಗ್ನಿ ಶಿಲೆಯ ಪ್ರವಾಹಗಳೂ ಯಾವಾಗ ಪ್ರಾರಂಭವಾದುವೆಂಬುದನ್ನು ಗೊತ್ತುಮಾಡಿದಂತಾಗುವುದು. ಇಲ್ಲಿ ನಮಗೆ ಅನೇಕ ವಿಧವಾದ ಬೀಜಗಳು ಕಾಯಿಗಳು ಮುಂತಾದುವು ಸಿಕ್ಕಿವೆ. ನೀರಿನಲ್ಲಿ ಬೆಳೆಯುವ ಸಸ್ಯಜಾತಿಗಳು ಹೇರಳವಾಗಿ ದೊರೆತಿವೆ. ಅಣಬೆಯ ಸಂಬಂಧವಾದ ಸೂಕ್ಷ್ಮ ಸಸ್ಯಗಳನೇಕ ಸಿಕ್ಕಿವೆ. ಶಿಲೆಯಾದ ಅನೇಕ ದೊಡ್ಡ ಮರದ ತುಂಡುಗಳು ಸಿಕ್ಕಿವೆ. ತೆಂಗಿನ ಮರದಂತಾಗುವ ಅನೇಕ ಜಾತಿಯ ಮರಗಳು ಸಿಕ್ಕಿವೆ. ಇವುಗಳೊಂದಿಗೆ ಕೆಲವು ಪ್ರಾಣಿಗಳ ಚಿಪ್ಪುಗಳೂ ಇವೆ. ಶಂಖದ ಹುಳು, ಮೀನಿನ ಮೈಸಿಪ್ಪೆ, ಕೀಟಗಳ ರೆಕ್ಕೆಗಳು ಮತ್ತು ಅನೇಕ ನೀರಿನ ಮತ್ತು ನೆಲದ ಮೇಲಿನ ಪ್ರಾಣಿಗಳ ಅಸ್ಥಿಪಂಜರಗಳು ಸಿಕ್ಕಿವೆ. ಇವುಗಳೆಲ್ಲವೂ ಒಂದೇ ಸಮಾಧಿಯಲ್ಲಿ ಅಡಕವಾಗಿವೆ.

ಈ ಸಸ್ಯಾವಶೇಷಗಳಲ್ಲಿ ಕೆಲವು ಸುಮಾರು ನೂರು ವರ್ಷಗಳ ಹಿಂದೆ ಈಸ್ಟ್ ಇಂಡಿಯಾ ಕಂಪೆನಿಯ ಸೈನ್ಯದ ಅಧಿಕಾರಿಗಳಿಂದಲೂ, ಕ್ರೈಸ್ತ ಪಾದ್ರಿಗಳಿಂದಲೂ, ಇನ್ನೂ ಇತರರಿಂದಲೂ ಸಂಗ್ರಹವಾದವು. ಅದರಲ್ಲಿ ಹೆಚ್ಚುಭಾಗ ಲಂಡನ್ನಿನ ಬ್ರಿಟಿಷ್ ಮ್ಯೂಸ್ಲಿಯಮನ್ನು ಸೇರಿದುವು. ಅಲ್ಲಿಂದ ತರಿಸಿದವಲ್ಲದೆ ಇಂಡಿಯಾದ ಭೂಮಿಶಾಸ್ತ್ರದ ಸರ್ವೆ ಇಲಾಖೆಯವರಿಂದಲೂ ಮತ್ತು ಇತರರಿಂದಲೂ ಸಂಗ್ರಹಿಸಿದವೂ ಇವೆ.

ರಾಜಮಹೇಂದ್ರಿ ಬಳಿಯ ಪ್ರಸ್ತರಗಳು ಸ್ವಲ್ಪ ಉಪ್ಪುನೀರಿನ ಅಳಿವೆ ಪ್ರದೇಶದಂತಹ ಕಡೆ ಶೇಖರವಾದವು. ಇವೂ ನಾಗಪುರದ ಪ್ರಾಂತದವುಗಳಂತೆಯೇ ಬಹು ಪುರಾತನ ಪ್ರಸ್ತರಗಳು. ಇವುಗಳನ್ನು ಬೆಂಗಳೂರಿನ ಪ್ರೊ|| ಎಲ್. ರಾಮರಾಯರು ಮುಂತಾದವರು ಸಂಶೋಧಿಸುತ್ತಿದ್ದಾರೆ.

ಸಸ್ಯಗಳ ಪೈಕಿ 'ಗೈರ್‌ಗೊನೈಟಿಸ್' ಎಂಬುದು ಇಂಗ್ಲೆಂಡ್, ಫ್ರಾನ್ಸ್ ಮುಂತಾದ ದೇಶಗಳಲ್ಲಿ ತೃತೀಯ ಜೀವಯುಗದ ಆದಿಕಾಲದ ಪ್ರಸ್ತರಗಳಲ್ಲಿ ಸಿಕ್ಕಿವೆ. ಇವುಗಳಲ್ಲಿ ಕೆಲವು ಒಂದಕ್ಕೊಂದು ವ್ಯತ್ಯಾಸವೇ ಇಲ್ಲದಂತೆ ಹೋಲುವುವು.

ಅಣಬೆಯ ಜಾತಿಯ ಸೂಕ್ಷ್ಮ ಸಸ್ಯಗಳ ಎಳೆಗಳು ನಾಗಪುರ ಪ್ರಾಂತದಲ್ಲಿ ಸಿಕ್ಕಿವೆ.

'ಅಸ್ಟೊಲಾ' ಎಂಬ ಒಂದು ಬಗೆಯ, ನೀರಿನ ಮೇಲೆ ತೇಲಿಕೊಂಡೇ ಜೀವಿಸುವ, ಜರಿಸಸ್ಯದ ಹಲವು ಭಾಗಗಳು ಸಿಕ್ಕಿವೆ. ಇವಕ್ಕೆ ಸಂಬಂಧಪಟ್ಟ, ಆದರೆ ಈಗಿನ ಕಾಲದಲ್ಲಿರುವವುಗಳಿಗಿಂತ ಸ್ವಲ್ಪ ಭಿನ್ನವಾಗಿರುವ, ಸಸ್ಯವಿಶೇಷಗಳೂ ಸಿಕ್ಕಿವೆ. ಮುಖ್ಯವಾಗಿ ಈ ಜಾತಿಯ ಸಸ್ಯಗಳು ತೃತೀಯ ಜೀವಯುಗದ ಹಿಂದಿನ ಕಾಲದ ಪ್ರಸ್ತರಗಳಲ್ಲೆಲ್ಲೂ ಸಿಕ್ಕಿಲ್ಲ.*

ಹಿಮಾಲಯ ಪ್ರಾಂತಗಳಲ್ಲಿ ಬೆಳೆಯುವ ಈಗಿನ ದೇವದಾರು ವೃಕ್ಷಕ್ಕೆ ಸಂಬಂಧ ಪಟ್ಟ ಜಾತಿಯ ಬೀಜಗಳೂ ಕಾಯಿಗಳೂ ನಾಗಪುರದ ಬಳಿ ಸಿಕ್ಕಿವೆ.

'ಸಾಸರೋಸ್ಪರ್ಮಂ' ಎಂಬ ಹೆಸರಿಡಲ್ಪಟ್ಟ ಬೀಜವು ಕಲ್ಲಿದ್ದಲಿನ ಕಾಲದ ಕೆಲವು ಗಿಡಗಳ ಬೀಜಗಳನ್ನು ನೆನಪಿಗೆ ತರುತ್ತದೆ. ಏಲಕ್ಕಿಯಂತಹ ಕಾಯಿಗಳು ಈಗ ಸುಮಾರು ನೂರು ವರ್ಷಗಳ ಹಿಂದೆಯೇ ಸಂಗ್ರಹಿಸಲ್ಪಟ್ಟುವು. ಈಗ ಅವು ಬ್ರಿಟಿಷ್ ಮ್ಯೂಸ್ಸಿಯಂನಲ್ಲಿವೆ.

ಇವೆಲ್ಲಕ್ಕಿಂತಲೂ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದ ಸಸ್ಯಾವಶೇಷವೆಂದರೆ 'ನೈಪಡೈಟಿಸ್' ಎಂಬುದು. ಇದು ಒಂದು ಬಗೆಯ ತೆಂಗಿನ ಜಾತಿಯ ವೃಕ್ಷದ ಕಾಯಿ. ಈ ವೃಕ್ಷವು ಸ್ತಂಬದಂತಹ ಮರವಾಗುವುದಿಲ್ಲ. ನೆಲದ ಮಟ್ಟದಿಂದಲೇ ಗರಿಗಳು ಮೇಲೇಳುವುವು. ಇವು ಸಮುದ್ರದ ಬಳಿ ಅಳಿವೆ ಪ್ರದೇಶಗಳಲ್ಲಿ ಮಾತ್ರ ಬೆಳೆಯುವುದು. ಈ ಜಾತಿಯ ಕಾಯಿಗಳು ಲಂಡನ್ನಿನ ಪ್ರದೇಶದಲ್ಲಿಯೂ ಸಿಕ್ಕಿವೆ. ಅಲ್ಲಿನ ಪ್ರಸ್ತರಗಳು ತೃತೀಯ ಜೀವಯುಗದ ಆದಿಕಾಲದವೆಂದು ಎಲ್ಲರೂ ಒಪ್ಪಿದ್ದಾರೆ. ಅದೇ ಜಾತಿಯ ಕಾಯಿಗಳು ಬೆಲ್ಜಿಯಂ, ಪ್ಯಾರಿಸ್, ಮಿಸಿಸಿಪಿ ನದಿಯ ಪಾತ್ರಪ್ರಾಂತ, ದಕ್ಷಿಣ ರಷ್ಯ, ಈಜಿಪ್ಟ್ ಮತ್ತು ಬೋರ್ನಿಯೋಗಳಲ್ಲಿ ಅದೇ ಕಾಲದ ಪ್ರಸ್ತರಗಳಲ್ಲಿ ಸಿಕ್ಕಿವೆ. ಈ ಒಂದು ಸಸ್ಯಾವಶೇಷದಿಂದ ಹಿಂದಿದ್ದ "ಟೇಥಿಸ್" ಸಮುದ್ರದ ತೀರವು ಎಲ್ಲಿಯವರೆಗಿದ್ದಿತೆಂದು ತಿಳಿಯುವುದು; ಎಂದರೆ ಮಧ್ಯಪ್ರಾಂತದಲ್ಲಿರುವ ಛಿಂದ್ವಾರ ಎಂಬ ಊರಿನ ಬಳಿಯಿತ್ತು. ಈ ಸಸ್ಯವು ತೃತೀಯ ಜೀವಯುಗದ ಹಿಂದಿರಲಿಲ್ಲ.

ಸಮುದ್ರದ ಉಪ್ಪುನೀರು ಮಿಶ್ರವಾದ ಅಳಿವೆ ಪ್ರದೇಶವು ಅಲ್ಲಿತ್ತು ಎಂಬುದಕ್ಕೆ ಕೆಲವು ಪ್ರಾಣಿಗಳ ಅವಶೇಷಗಳೂ ನಿದರ್ಶನವಾಗಿವೆ. ಅಳಿವೆ ಪ್ರದೇಶಗಳಲ್ಲಿಯೇ ಇರುವಂಥ ಮೀನಿನ ಮೈಸಿಪ್ಪೆಗಳೂ ದೊರಕಿವೆ. ಈ ಪ್ರಸ್ತರಗಳು ತೃತೀಯ ಜೀವ ಯುಗದವೆಂಬುದಕ್ಕೆ ಈ ಮೀನಿನ ಜಾತಿಗಳೂ ನಿದರ್ಶನಗಳು.

---

* ಈ ಮೇಲೆ ಹೇಳಿರುವ ಸಸ್ಯಾವಶೇಷಗಳಲ್ಲದೆ ಮತ್ತೆ ಕೆಲವುಗಳ ಮೇಲಿನ ಸಂಶೋಧನೆಯಲ್ಲಿ ಈ ಭಾಷಣದ ಅನುವಾದಕರದೂ ಭಾಗವಿದೆ.

ಮುಖ್ಯವಾಗಿ ತೆಂಗಿನ ಜಾತಿಯ ಮರಗಳ ಶಿಲಾರೂಪಾಂತರಗಳು ಹೇರಳವಾಗಿ ಸಿಕ್ಕಿವೆ. ಈ ಜಾತಿಯ ಮರಗಳ ವೈವಿಧ್ಯವು ಚೆನ್ನಾಗಿ ಕಂಡುಬಂದುದು ತೃತೀಯ ಯುಗವು ಪ್ರಾರಂಭವಾದ ಮೇಲೆಯೇ. ನಮಗೆ ಸಿಕ್ಕಿರುವ ಸಸ್ಯಾವಶೇಷಗಳೆಲ್ಲವೂ ಈ ಕಾಲನಿರ್ದೇಶಕ್ಕೆ ಹಿರಿತರವಾದ ನಿದರ್ಶನಗಳನ್ನು ಒದಗಿಸಿವೆ.

## ದಖ್ಖನ್ನಿನ ಶಿಲಾಪ್ರವಾಹಗಳ ಕಾಲ

ದಖ್ಖನ್ನಿನ ಈಶಾನ್ಯ ಪ್ರದೇಶದ ಪ್ರಸ್ತರಗಳಲ್ಲಿನ ಸಸ್ಯಾವಶೇಷಗಳ ವಿಷಯವನ್ನು ಸಂಕ್ಷೇಪವಾಗಿ ತಿಳಿಸಿದಂತಾಯಿತು. ಈ ಸಸ್ಯಗಳ ಸಹಾಯದಿಂದ ಶಿಲಾಪ್ರವಾಹಗಳ ಕಾಲನಿರ್ದೇಶಮಾಡುವುದರಲ್ಲಿ ಸ್ವಲ್ಪ ಕಷ್ಟವಿದೆ. ಏಕೆಂದರೆ ಅವುಗಳಲ್ಲನೇಕವು ಹೊಸದಾಗಿ ಸಿಕ್ಕಿದವು, ಬೇರೆ ದೇಶಗಳಲ್ಲಿ ಸಿಕ್ಕಿರುವಂಥವುಗಳಲ್ಲ. ಅಂತೂ ಒಟ್ಟಿನಲ್ಲಿ ಮೇಲೆ ವಿವರಿಸಿದ ಸಸ್ಯ ಜಾತಿಗಳೆಲ್ಲ ಬಹುವಾಗಿ ತೃತೀಯ ಜೀವಯುಗದವು. ಪ್ರಾಣಿಗಳ ಅವಶೇಷಗಳೂ ಇದೇ ಕತೆಯನ್ನು ಹೇಳುವಂತೆ ತೋರುವುದು.

ಇದಿಷ್ಟು ನಾಗಪುರ—ಛಿಂದ್ವಾರ ಪ್ರಾಂತದ ಮಾತಾಯಿತು. ಇವೇ ದಖ್ಖನ್ನಿನ ಪ್ರಸ್ತರಗಳ ಪೈಕಿ ಬಹಳ ಹಿಂದಿನವೆಂದು ಭೂಮಿಶಾಸ್ತ್ರಜ್ಞರು ಹೇಳುತ್ತಾರೆ. ಛಿಂದ್ವಾರ ಪ್ರಾಂತದ ಶಿಲಾಪ್ರವಾಹಗಳು ಹತ್ತಿರದಲ್ಲೇ ಇದ್ದ ಉತ್ತರ ಸಮುದ್ರದೊಳಕ್ಕೆ ಹರಿದು ತುಂಬಿರಬಹುದು. ಪೂರ್ವತೀರದ ಶಿಲಾಪ್ರವಾಹಗಳೂ ಬಹಳ ಹಳೆಯವೆಂದು ಕಾಣುವುವು. ರಾಜಮಹೇಂದ್ರಿಯ ಬಳಿಯೂ ಮತ್ತು ಗೋದಾವರಿಯ ಮುಖಜ ಭೂಮಿಯಲ್ಲಿಯೂ ತೃತೀಯ ಜೀವಯುಗದ ಆದಿಭಾಗದ ಪ್ರಸ್ತರಗಳು ಸಿಕ್ಕಿವೆ.

ನಾಗಪುರದ ಪ್ರಾಂತವನ್ನು ಬಿಟ್ಟಮೇಲೆ ಬೊಂಬಾಯಿನ ವರೆಗೂ ಬೇರಾವ ಪ್ರಸ್ತರಗಳೂ ಸಿಕ್ಕಿಲ್ಲ. ಬೊಂಬಾಯಿ ದ್ವೀಪದಲ್ಲಿ ಇವೆಲ್ಲಕ್ಕಿಂತಲೂ ಈಚಿನ ಕಾಲದ ಪ್ರಸ್ತರಗಳು ಸಿಕ್ಕಿವೆ. ಆ ಮಧ್ಯಪ್ರದೇಶದಲ್ಲಿ ಪ್ರಸ್ತರಗಳು ಸಿಕ್ಕದಿರುವುದಕ್ಕೆ ಕಾರಣ ಬಹುಶಃ ಒಂದಾಗುತ್ತಲೊಂದು ಶಿಲಾಪ್ರವಾಹಗಳು ಹರಿದುದರಿಂದಿರಬೇಕು. ಪ್ರವಾಹಗಳ ನಡುವಿನ ಕಾಲವು ಸಸ್ಯಗಳ ಪ್ರಸರಣೆಗೆ ಸಾಕಷ್ಟು ದೀರ್ಘವಾಗಿಲ್ಲದಿರಬೇಕು. ಆದರೂ ಪೂನಾ ಪ್ರದೇಶದಲ್ಲಿ ಜೀವಾವಶೇಷಗಳನ್ನೊಳಕೊಂಡ ಪ್ರಸ್ತರಗಳಿಗಾಗಿ ಹುಡುಕುವುದು ಉಚಿತವೆಂದು ಕಾಣುತ್ತದೆ.

ಇವುಗಳೆಲ್ಲಕ್ಕಿಂತಲೂ ಅತ್ಯಂತ ನವೀನ ಕಾಲದವಾದ ಮಲಬಾರ್ ಹಿಲ್ ಮತ್ತು ಓರ್ಲಿಯ ಪ್ರಸ್ತರಗಳಲ್ಲಿ ಸಣ್ಣಸಣ್ಣ ಕಪ್ಪೆಗಳ ಅಸ್ಥಿಪಂಜರಗಳು ಸಿಕ್ಕಿವೆ. ಆದರೆ ಸಸ್ಯಾವಶೇಷಗಳಾವುವೂ ಸಿಕ್ಕಿಲ್ಲ.

ಅಂತೂ ಒಟ್ಟಿನಲ್ಲಿ ಈ ಸಾವಿರಾರು ಅಡಿಗಳಷ್ಟು ದಪ್ಪನಾದ ಶಿಲಾಪ್ರವಾಹಗಳು ತೃತೀಯ ಜೀವಯುಗದ ಆದಿಭಾಗದಲ್ಲೇ ಉಕ್ಕಿ ಹರಿದಿರಬೇಕು.

ಪ್ರವಾಹಗಳ ನಡುವಿನ ಕಾಲಗಳಲ್ಲಿ ಜೀವಾವಶೇಷಗಳನ್ನೊಳಕೊಂಡ ಪ್ರಸ್ತರಗಳು ಶೇಖರವಾದುವು.

ದಖ್ಖನ್ನಿನ ಶಿಲಾಪ್ರವಾಹಗಳು ತೃತೀಯ ಯುಗದವು, ಅದಕ್ಕಿಂತ ಹಿಂದಿನವಲ್ಲ ಎನ್ನುವುದಕ್ಕೆ ಮತ್ತೊಂದು ನಿದರ್ಶನವೆಂದರೆ ಪ್ರಪಂಚದ ಬೇರೆ ಭಾಗಗಳಲ್ಲೂ ಇದೇ ಕಾಲದಲ್ಲಿ ಆದ ಅನೇಕ ಶಿಲಾಪ್ರವಾಹಗಳು. ಅಮೆರಿಕದ ಸಂಯುಕ್ತ ಸಂಸ್ಥಾನಗಳಲ್ಲಿ ಎರಡುಲಕ್ಷ ಚದರಮೈಲಿಗಳಷ್ಟು ಪ್ರದೇಶವು ಅದರಿಂದ ಆಚ್ಛಾದಿಸಲ್ಪಟ್ಟಿದೆ. ಹೀಗೆಯೇ ಇನ್ನೂ ಕೆಲವೆಡೆಗಳಲ್ಲಿವೆ.

ದಖ್ಖನ್ನಿನ ಪ್ರಸ್ತರಗಳು ತೃತೀಯ ಜೀವಯುಗದವೆಂಬುದು ಹೊಸದಾದ ವಾದವಲ್ಲ. ನೂರು ವರ್ಷಗಳ ಹಿಂದಿನ ಭೂಮಿಶಾಸ್ತ್ರಜ್ಞರೂ ಅದೇ ಮಾತನ್ನು ಹೇಳಿದ್ದರು. ಆದರೆ ಕಾರಣಾಂತರಗಳಿಂದ ಅನೇಕ ವಾದಗಳಾಗಿ ದಿಕ್ಕು ಕಾಣದಂತಾಗಿದ್ದಿತು. ಈಗ ಸಸ್ಯಜಾತಿಗಳ ಅವಶೇಷಗಳ ನಿದರ್ಶನಕ್ಕೆ ನ್ಯಾಯವಾದ ತೂಕ ಕೊಟ್ಟು ಪರೀಕ್ಷಿಸಿದುದರಲ್ಲಿ ಮೇಲೆ ಹೇಳಿದ ಕಾಲನಿರ್ದೇಶಕ್ಕೆ ಸಹಾಯವಾಯಿತು.

## ಕೊನೆಮಾತು

ದಖ್ಖನ್ನಿನ ಪ್ರಸ್ತರಗಳಿಗೂ ಶಿಲಾಪ್ರವಾಹಗಳಿಗೂ ಮತ್ತು ದಕ್ಷಿಣ ಇಂಡಿಯದ ಈಶಾನ್ಯ ಮತ್ತು ದಕ್ಷಿಣ ಪ್ರದೇಶಗಳಲ್ಲಿನ ಶಿಲೆಗಳಿಗೂ ಬಹಳ ಕಾಲದ ಅಂತರವಿದೆ. ಆ ಅಂತರವು ಇನ್ನೂರು ಕೋಟಿ ವರ್ಷಗಳಿರಬಹುದು. ಆದರೆ ಮನುಷ್ಯನೋ ಇತ್ತೀಚಿನ ಒಂದೆರಡು ಘಳಿಗೆಗಳ ಪ್ರಾಣಿ. ಅವನು ಈ ಕಾಲದ ಅಂತರಗಳನ್ನೆಲ್ಲ ಒಂದುಗೂಡಿಸಿ ಸೃಷ್ಟಿಕರ್ತನಿಗೆ ತನ್ನ ಧನ್ಯತೆಯನ್ನು ಅರ್ಪಿಸುತ್ತಾನೆ. ಅವನು ದಕ್ಷಿಣ ಇಂಡಿಯದ ಪ್ರಾಚೀನ ಶಿಲೆಗಳಿಂದ ಮಹಾಬಲಿಪುರದ ದೇವಾಲಯಗಳನ್ನು ಕೊರೆದರೆ, ದಖ್ಖನ್ನಿನ ಅಗ್ನಿಶಿಲೆಗಳಿಂದ ಎಲ್ಲೋರ ಅಜಂತ ಗುಹೆಗಳನ್ನು ಕೊರೆದು ಚಿತ್ರಿಸಿದ್ದಾನೆ.

ಎಚ್. ಸೀತಾರಾಮರಾವ್, ಡಿ.ಎಸ್‌ಸಿ.

## ಚಿತ್ರಗಳ ವಿವರ

(ಪಳೆಯುಳಿಕೆಗಳ ಅಳತೆಯನ್ನು ಅಂಕಿಗಳ ಪಕ್ಕದಲ್ಲಿ '×' ಆದಮೇಲೆ ಸೂಚಿಸಿದೆ)

1. ಮಧ್ಯಪ್ರಾಂತದ ಸಾಸರ್ ಬಳಿ ಇರುವ ಡೆಕ್ಕನ್ ಟ್ರ್ಯಾಪ್ ಗುಡ್ಡಗಳು. ಇದರ ಬಳಿ ಅನೇಕ ಜೀವಾವಶೇಷಗಳು ಸಿಕ್ಕಿದುವು.
2. ವಾರ್ಧಾ ಡಿಸ್ಟ್ರಿಕ್ಟಿನಲ್ಲಿರುವ ನವರ್‌ಗಾಂವ್ ಬಳಿಯ ದೃಶ್ಯ.
3. ಮಹಾಬಲೇಶ್ವರದ ಬಳಿ ಪಶ್ಚಿಮಘಟ್ಟಗಳಲ್ಲಿನ ಕೊರಕಲು. ಚಿತ್ರದಲ್ಲಿ ಡೆಕ್ಕನ್ ಟ್ರ್ಯಾಪ್ ಪದರಗಳನ್ನು ಕಾಣಬಹುದು.
4. ಸಾಸರ್ ಬಳಿ ಸಿಕ್ಕಿದ ಬೆಣಚುಕಲ್ಲಿನ ರೂಪಾಂತರವಾದ ಕೆರೆಮೆಕ್ಕಲು. ಪದರಗಳ ನಡುವೆ ಗೈರೊಗೊನೈಟಿಸ್ ಕಾಯಿಗಳಿವೆ. ಅಜ್ಜೊಲಾದ ಭಾಗಗಳೂ, ಮೀನಿನ ಮೈಸಿಪ್ಪೆಯೂ (ಚಿತ್ರ 29) ಇದರಲ್ಲಿ ಸಿಕ್ಕಿದುವು.
5. ಪೆರಿಸ್ಪೋರಿಯಸೈಟಿಸ್ ವೇರಿಯಾನ್ಸ್, ಸಾನಿ ಮತ್ತು ರಾವ್. ಅಣಬೆ ಸಸ್ಯದ ವೃದ್ಧೀಕರಣಾಂಗಗಳು ಮತ್ತು ಎಳೆಗಳು.
6. ಪೇಲಿಯೋಸಾರ್ಡೀರಿಯ ಲ್ಯಾಗಿನ, ಸಾನಿ ಮತ್ತು ರಾವ್. ಸೋರೆಕಾಯಿಯಾಕಾರದ ಅಣಬೆ ಸಸ್ಯದ ವೃದ್ಧೀಕರಣಾಂಗ.
7. ಅಜ್ಜೊಲಾ ಇಂಟರ್‌ಟ್ರ್ಯಾಪಿಯ, ಸಾನಿ ಮತ್ತು ರಾವ್. "ಮ್ಯಾಸುಲ" ಎಂಬ ಅಂಗ.
8. ಅಂಥದೇ ಇನ್ನೊಂದು: ಅದಕ್ಕೆ ಸೇರಿದ ಅಂಬಿನ ತುದಿಯಂತಿರುವ ಕೊಕ್ಕೆಗಳನ್ನು ಬಲಗಡೆ ನೋಡಬಹುದು.
9. ಅದೇ ಸಸ್ಯದ ವೃದ್ಧೀಕರಣಾಂಗ. ಹಿಂದಿನ ಚಿತ್ರದಲ್ಲಿ ಕಾಣುವ ಕೊಕ್ಕೆಗಳು ಇದಕ್ಕೆ ತಗುಲಿಕೊಳ್ಳುತ್ತವೆ.
10. ಮ್ಯಾಸುಲೈಟಿಸ್ ಸೀಲೇಟಸ್, ಸಾನಿ ಮತ್ತು ರಾವ್, ಅಜ್ಜೊಲಾ ಸಂಬಂಧದ ಮತ್ತೊಂದು ಸಸ್ಯದ "ಮ್ಯಾಸುಲ" ಎಂಬ ಅಂಗ.
11. ಅಂಥವುಗಳ ಗುಂಪೊಂದು, ಬಹುಶಃ ಒಂದೇ ಸಸ್ಯಕ್ಕೆ ಸೇರಿದವಿರಬೇಕು.
12. ಸಾಸರೊಸ್ಪರ್ಮಂ ಫರ್ಮರೈ, ಸಾನಿ ಮತ್ತು ಶ್ರೀವಾಸ್ತವ. ಸಾಸರ್ ಬಳಿ ಸಿಕ್ಕಿದ ಒಂದು ಬೀಜ
13. ವೀರಾಕಾರ್ಪಾನ್ ಹೆಕ್ಸಾಸ್ಪರ್ಮಂ, ಸಾನಿ. ಹಿಪ್ಪಲಿನೇರಳೆಯಂಥ ಒಂದು ಕಾಯಿ.
14. ಎನಿಗ್ಮೊಕಾರ್ಪಾನ್ ಪರಿಜಾಯ್ಯೆ, ಸಾನಿ. ಅಡ್ಡಲಾಗಿ ಕತ್ತರಿಸಿರುವ ಒಂದು ಕಾಯಿ.
15. ಅವೋಮೊಕಾರ್ಪಂ ಅಫಿನಿ, ಸಾನಿ. ಏಲಕ್ಕಿಯಂತಹ ಒಂದು ಕಾಯಿ. ಪಳೆಯುಳಿಕೆಯ ಜೇಡಿಮಣ್ಣಿನ ಪ್ರತಿಯಿಂದ ತೆಗೆದ ಚಿತ್ರ.
16. ನೈಪ (ನೈಪಡೈಟಿಸ್) ಹಿಂದಿ, ರೋಡೆ. ಮೋಗಾಂವ್ ಕಲಾನ್ ಬಳಿಯಿಂದ.
17. ಅದನ್ನೇ ಅಡ್ಡಲಾಗಿ ಕತ್ತರಿಸಿರುವುದು.
18. ಪಾಲ್ಮೊಕಾರ್ಪಾನ್ (ಇರಿಯಾರ್ಟೈಟಿಸ್) ಟಾಕ್ಲಿಯೆನ್‌ಸಿಸ್, ಸಾನಿ. ತೆಂಗಿನಜಾತಿಯ ಮರದ ಕಾಯಿ. ನಾಗಪುರದ ಬಳಿಯಿರುವ ಟಾಕ್ಲಿಯಿಂದ.
19. ಟ್ರೈಕಾಕ್ಕೈಟಿಸ್ (ಪಾಲ್ಮೊಕಾರ್ಪಾನ್) ಟ್ರೈಗೊನಂ, ರೋಡೆ. ಹೊರಸಿಪ್ಪೆಯು ಅಲ್ಲಲ್ಲಿ ಸವೆದುಹೋಗಿದೆ.

20. ಅದನ್ನೇ ಅಡ್ಡಲಾಗಿ ಕತ್ತರಿಸಿರುವುದು.
21. ಪಾಲ್ಮಾಗ್ಸಿಲಾನ್ ಇನ್‌ಟರ್‌ಟ್ರ್ಯಾಪಿಯಂ. ತೆಂಗಿನಜಾತಿಯ ಮರದ ಭಾಗ, ಉದ್ದ ೨೧ ಅಂಗುಲ, ವಾರ್ಧಾದ ಬಳಿಯಿಂದ.
22. ಪಾಲ್ಮಾಗ್ಸಿಲಾನ್ ಸುಂದರಂ, ಸಾನಿ. ಅಡ್ಡಲಾಗಿ ಕತ್ತರಿಸಿರುವ ತೆಂಗಿನಜಾತಿಯ ಮರದ ಭಾಗ. ಕಪ್ಪಾಗಿರುವುದು ನಾರು, ಗುಂಡಾಗಿರುವ ರಂಧ್ರಗಳು ವೃಕ್ಷದ ನಾಳಗಳು.
23. ರೈಸ್ಲೊಪಾಲ್ಮಾಗ್ಸಿಲಾನ್. ಅದೇ ಜಾತಿಯ ವೃಕ್ಷದ ಬೇರನ್ನು ಅಡ್ಡಲಾಗಿ ಕತ್ತರಿಸಿರುವುದು.
24. ಟಾಕ್ಸಿಯಾಸ್ಟ್ರೊಬಸ್ ಆಲೇಟಸ್, ಸಾನಿ. ದೇವದಾರುಜಾತಿಯ ವೃಕ್ಷದ ಕಾಯಿ.
25. ಅದನ್ನೇ ಅಡ್ಡಲಾಗಿ ಕತ್ತರಿಸಿರುವುದು.
26. ಅದೇ ಜಾತಿಯ ಮತ್ತೊಂದು ಕಾಯಿ.
27. ಇಂಡಾಸ್ಟ್ರೊಬಸ್ ಬೈಫಿಡೊಲೆಪಿಸ್, ಸಾನಿ. ಮತ್ತೊಂದು ಅದೇ ಜಾತಿ ಗಿಡದ ಕಾಯಿ.
28. ಮತ್ತು 29. ಮೀನಿನ ಮೈಸಿಪ್ಪೆ. ಈಗಿನ ಮತ್ತು ಪ್ರಾಚೀನತರದವನ್ನು ಹೋಲಿಸಿದೆ. (28, ಈಗಿನ ಪ್ರಿಸ್ಟೊಲೆಪಿಸ್ ಫ್ಯಾಸಿಯೇಟಸ್ ಎಂಬ ಮೀನಿನದು).
30. ಬೊಂಬಾಯಿಯ ಹತ್ತಿರವಿರುವ ಓರ್ಲಿಯಲ್ಲಿ ಸಿಕ್ಕುವ ಸಣ್ಣ ಕಪ್ಪೆಗಳ (ಇಂಡೊಬಟ್ರ್ಯಾಕಸ್) ಎರಡು ಅಸ್ಥಿಪಂಜರಗಳು.

---

# ಆ ನೋಟದ ಹೇಳಿಕೆ

ತೊಳಗುವ ಸೂರ್ಯನ ಕಿರಣಾವಳಿಯಿಂ
ಪಸದನಗೊಂಡಿದೆ ಬಾಂದಳವು.
ಮೌನವು ನೆಲಸಿಹ ಮುದ್ದಿನ ಹೊಲಗಳು
ಜಲಧಿಯ ತೆರದಲಿ ಹಬ್ಬಿಹುವು.
ಚೆಲುವಿನ ನಿಲಯದ ಪಡಿಯರರಂದದಿ
ತಳಿತಿಹ ತರುಗಳು ನಿಂದಿಹುವು.
ಮೆಲುದನಿಯಿಂದಲಿ ಸೃಷ್ಟಿಯ ಮಹಿಮೆಯ
ಪೊಗಳುತ ಖಗತತಿ ಹಾರುತಿದೆ.
ಸುಮಗಳ ಹೃದಯದ ಕಂಪನು ಕದಿಯುತ
ತಣ್ಣೆಲರೊಯ್ಯನೆ ತೀಡುತಿದೆ.
ಬೆಡಗನು ಬೀರುತಲಿಹುದೀ ತಾಣವು
ಕಂಗಳ ಮೋಹಿಪ ಚಿತ್ರದೊಲು.
ಶಾಂತಿಯ ಸಾರುವ ಬಯಸುವ ಮನುಜನೆ,
ತಳುವದೆ ಬಾರೈ ಎನ್ನೆಡೆಗೆ !
ಬಗೆಯನು ದಹಿಸುವ ಚಿಂತೆಯ ಚಿತೆಯನು
ಮೋದದ ಜಲದಿಂ ನದಿಪುವೆನು !
ದುಃಖವ ಮುಗ್ಗಿಸಿ ಅಗ್ಗದ ಸೌಖ್ಯವ
ಪಡೆವಾ ಹದನನು ನಿರವಿಪೆನು !
ನುಣ್ಬಸಲೆಯ ಪರ್ಯಂಕದಿ ಪವಡಿಸಿ
ಸುಳಿಯುವ ಗಾಳಿಗೆ ಮೈಯೊಡ್ಡು !
ಸೇದೆಯ ಕಳೆಯುತ, ಶಾಂತಿಯ ಸವಿಯುತ
ವಾರಿಸು ಬಾಳಿನ ಬವಣೆಯನು !
ಚೆಂದದ ನುಡಿಯೊಳು ಸೊಬಗನು ಬಣ್ಣಿಸ-
ಲೇತಕೆ ತೊಡಗುವೆ ಕಬ್ಬಿಗನೆ ?
ನಾಕದ ಗಾಡಿಯು ಜರೆವೀ ನೋಟವ
ಪಡಿಯಿಡಲರಿದೈ ನಿನ್ನಿಂದ !
ಮೂಕನ ತೆರದಲಿ ಪ್ರಕೃತಿಯ ಸಿರಿಯನು
ದಿಟ್ಟಿಸಿ ನಲಿಯೈ ಮೈಮರೆತು !
ಒಸರುವ ಹರ್ಷದ ಕಂಬನಿ ಸುಮದಿಂ-
ದೆನ್ನನು ಪೂಜಿಸು ಭಕ್ತಿಯಲಿ !

—ಎ. ಸಿ. ಶಂಕರಭಾರತಿ.

# "ವೀರಶೈವ ವಾಙ್ಮಯಾವತಾರ"ವನ್ನು ಕುರಿತು

"ಪ್ರಬುದ್ಧಕರ್ಣಾಟಕ"ದ ಗತಸಂಚಿಕೆಯಲ್ಲಿ ಶ್ರೀಮಾನ್ ಸಿ. ನಾರಾಯಣ ರಾವ್, ಎಂ.ಎ., ಪಿಎಚ್.ಡಿ. ಅವರ "ವೀರಶೈವ ವಾಙ್ಮಯಾವತಾರ"ವೆಂಬ ಭಾಷಣವನ್ನು ಪ್ರಕಟಿಸಲಾಗಿದೆ. ಅದರಲ್ಲಿರುವ ಅನೇಕ ವಿಧಾನಗಳು ತರ್ಕಶುದ್ಧವಾಗಿಲ್ಲದುದರಿಂದ ಅವುಗಳ ಬಗ್ಗೆ ನನ್ನ ಅಭಿಪ್ರಾಯವನ್ನು ಪ್ರಕಟಿಸುತ್ತಿರುವೆನು.

". . . . ವೀರಶೈವ ಮತಕ್ಕೆ ಪ್ರಮಾಣವೆಂದು ಹೇಳಲ್ಪಡುವ 'ಶೈವಸಿದ್ಧಾಂತ ಶಿಖಾಮಣಿ' ಎಂಬ ಗ್ರಂಥದಲ್ಲಿ ಬರೆಯಲ್ಪಟ್ಟಿದೆ. ಈ ಗ್ರಂಥವು ಈಚೆಯದು . . . . ಇದನ್ನು ವೀರಣಾರಾಧ್ಯನ ಪೌತ್ರನೂ ಸಿದ್ಧಯ್ಯನ ಪುತ್ರನೂ ಆದ ರೇವಣನೆಂಬವನು ರೇಣುಕಕೃತಗ್ರಂಥಕ್ಕೆ ಟೀಕಾರೂಪವಾಗಿ ರಚಿಸಿದ್ದಾನೆ" ಎಂಬುದು ರಾಯರ ಮೊದಲನೆಯ ವಿಧಾನವಾಗಿದೆ. ಇದು ತುಂಬಾ ಪ್ರಾಮಾದಿಕವಾಗಿದೆ. ವೀರಶೈವವನ್ನು ಶೈವವೆಂದು ಸಾಮಾನ್ಯವಾಗಿ ಹೇಳಬಹುದಾದರೂ ಉದ್ದೇಶ್ಯಪೂರ್ವಕವಾಗಿ ಶೈವವೆನಲಾಗದು. ತೆಲುಗು ದೇಶದ 'ಆರಾಧ್ಯರು' ತಮ್ಮನ್ನೂ ಕೆಲವು ವೀರಶೈವ ಗ್ರಂಥಗಳನ್ನೂ 'ಶೈವ' ಶಬ್ದದಿಂದ ವ್ಯವಹಾರಮಾಡುವುದುಂಟು. ಇದನ್ನು ವಿಮರ್ಶಿಸದೆ ಅವರು ಪ್ರಕಟಿಸಿದ ಹಾಗೆ 'ಶೈವಸಿದ್ಧಾಂತಶಿಖಾಮಣಿ' ಎಂದು ಬರೆದಿದ್ದಾರೆ. ಇದರ ರೂಢನಾಮವು 'ಸಿದ್ಧಾಂತಶಿಖಾಮಣಿ'ಯೇ ಆಗಿದೆ. ಗ್ರಂಥಕರ್ತನೇ ಪುಸ್ತಕದ ಅಂತ್ಯದಲ್ಲಿ "ಶ್ರೀ ವೇದಾಗಮ ವೀರಶೈವಸರಣಿಂ . . . . ಶ್ರೀ ಸಿದ್ಧಾಂತಶಿಖಾಮಣಿಂ" ಎಂಬ ಶ್ಲೋಕದಿಂದ "ವೀರಶೈವ ಸಿದ್ಧಾಂತ ಶಿಖಾಮಣಿ"ಯನ್ನಾಗಿಯೇ ಸ್ಪಷ್ಟಪಡಿಸಿದ್ದಾನೆ, ಶೈವವಲ್ಲ. ಈ ಗ್ರಂಥವನ್ನು ಸಿದ್ಧಯ್ಯನ ಮಗನಾದ ರೇವಣನು ರಚಿಸಿದ್ದಾನೆಂದು ಶ್ರೀ ನಾರಾಯಣರಾವ್ ಅವರಂತಹ ವಿದ್ವಾಂಸರು ಬರೆದಿದ್ದಾರೆಂಬುದು ವ್ಯಸನಕರವಾದ ವಿಷಯ. ಗ್ರಂಥಾದಿಯ

"ಆಸೀದ್ . . . . ಶಿವಯೋಗೀತಿ ವಿಖ್ಯಾತಃ ॥ ೧೩ ॥
ತಸ್ಯ ವಂಶೇ . . . . ಮುದ್ದದೇವಾಭಿಧಾಚಾರ್ಯಃ ॥ ೧೫ ॥
ತಸ್ಯಾಸೀನ್ನಂದನಃ . . . . ಸಿದ್ಧನಾಥಾಭಿಧಃ ॥ ೧೭ ॥
ತಸ್ಯ ನಂದನಃ . . . . ಅಭವಚ್ಛಿವಯೋಗೀಶಿ ॥ ೨೦ ॥
ನಾಮ್ನಾ ಪ್ರತೀಯತೇ ಲೋಕೇ ಯತ್ಸಿದ್ಧಾಂತಶಿಖಾಮಣಿಃ ॥ ೩೧ ॥

ಈ ಶ್ಲೋಕಗಳಿಂದ ಶಿವಯೋಗಿಯ ಪ್ರಪೌತ್ರನೂ ಮುದ್ದದೇವನ ಪೌತ್ರನೂ ಸಿದ್ಧನಾಥನ ಪುತ್ರನೂ ಆದ ಶಿವಯೋಗಿ ಶಿವಾಚಾರ್ಯನೇ ಸಿದ್ಧಾಂತಶಿಖಾಮಣಿ

ಯನ್ನು ವಿರಚಿಸಿದ್ದಾನೆಂಬುದು ನಿರ್ವಿವಾದವಾಗಿದೆ. ರಾಯರ ಪ್ರಮಾದಕ್ಕೆ ಕಾರಣವೇನೆಂದರೆ ಯೇಲೂರಿನ ಶ್ರೀ ಮಲ್ಲಮಪಲ್ಲಿ ಮಲ್ಲಿಕಾರ್ಜುನ ಶಾಸ್ತ್ರಿಗಳು ೧೮೬೭ರಲ್ಲಿ ತೆಲುಗಕ್ಷರಗಳಿಂದ ಸಿದ್ಧಾಂತಶಿಖಾಮಣಿಯೊಂದನ್ನು ಮುದ್ರಿಸಿದ್ದಾರೆ. ಅವರು ಸೊಸಲೆ ರೇವಣಾರಾಧ್ಯನ ಕನ್ನಡ ಟೀಕೆಯಿಂದ ಕೂಡಿದ ಸಂಸ್ಕೃತ ಪ್ರತಿಯನ್ನು ಆಧಾರವಾಗಿರಿಸಿಕೊಂಡು ತೆಲುಗು ಪ್ರತಿಯನ್ನು ಸಿದ್ಧಗೊಳಿಸುವಾಗ ಕನ್ನಡ ಟೀಕೆಯನ್ನು ಬಿಟ್ಟರೂ ಸೊಸಲೆ ರೇವಣಾರಾಧ್ಯನ ಟೀಕೆಯ ಆದಿಯಲ್ಲಿರುವ ಕೆಲವು ಶ್ಲೋಕಗಳನ್ನು ಪ್ರಮಾದದಿಂದ ಮೂಲಸಿದ್ಧಾಂತಶಿಖಾಮಣಿಯ ಆದಿಯಲ್ಲಿ ಸೇರಿಸಿ ಮುದ್ರಿಸಿರುವರು. ಆದರೂ ಸಿದ್ಧಾಂತಶಿಖಾಮಣಿಗೆ ಟೀಕೆಯನ್ನು ರಚಿಸುತ್ತೇನೆಂತಲೇ ಆತನು ಹೇಳಿದನೇ ಹೊರತು ಸಿದ್ಧಾಂತಶಿಖಾಮಣಿಯನ್ನು ಆತನೇ ರಚಿಸಿರಬಹುದೆಂಬ ಭ್ರಮೆಗೆ ಅವಕಾಶವಿಲ್ಲ. ಸಿದ್ಧಾಂತಶಿಖಾಮಣಿಯನ್ನು ಮೊಟ್ಟಮೊದಲು ಪ್ರಕಟಿಸಿದ ಕೈ. ವಾ. ವೀರಸಂಗಪ್ಪನವರ ಪ್ರತಿಯನ್ನಾಗಲಿ ವಾರದವರ ಪ್ರತಿಯನ್ನಾಗಲಿ ಆಮೇಲೆ ಮುದ್ರಿತವಾದ ವಿವಿಧಭಾಷೆಯ ಪ್ರತಿಗಳನ್ನಾಗಲಿ ಪ್ರಾಚೀನವಾದ ತಾಳದೋಲೆಯ ಪ್ರತಿಗಳನ್ನಾಗಲಿ ನೋಡಿದರೆ ಈ ಭ್ರಮೆಗೆ ಅವಕಾಶವಿಲ್ಲ. ತಮ್ಮ ಪ್ರತಿಯನ್ನಾದರೂ ರಾಯರು ಸರಿಯಾಗಿ ನೋಡಬಹುದಾಗಿದ್ದಿತು. "ತ್ರೈಲೋಕ್ಯಸಂಪದಾಲೇಖ್ಯ" ಎಂಬ ಶ್ಲೋಕದಿಂದ ಸಿದ್ಧಾಂತಶಿಖಾಮಣಿಯ ಆರಂಭ. ಮಲ್ಲಿಕಾರ್ಜುನಶಾಸ್ತ್ರಿಗಳು ಮುದ್ರಿಸಿದ "ಯಸ್ಯೋಮೇಶ್ವರಲಿಂಗ—" ದಿಂದ "ಮಯಾ ಟೀಕಾ ಕಾರಯತೇ ಶ್ರೀ ಸಿದ್ಧಾಂತಶಿಖಾಮಣೇಃ" ಎಂಬವರೆಗಿರುವ ಶ್ಲೋಕಗಳು ಸೊಸಲೆ ರೇವಣಾರಾಧ್ಯನವೆಂಬುದನ್ನು ಸುಲಭವಾಗಿ ತಿಳಿಯಬಹುದು.

ಈ ಗ್ರಂಥವು ಈಚೆಯದೆಂಬ ವಾಕ್ಯದಲ್ಲಿ ರಾಯರ ಅಭಿಪ್ರಾಯವು ಸ್ಪಷ್ಟವಾಗಿ ತಿಳಿಯದಿದ್ದರೂ ಸೊಸಲೆ ರೇವಣಾರಾಧ್ಯನ ಸಮಕಾಲಿಕ ಗ್ರಂಥವ (೧೭ ನೆಯ ಶತಮಾನದಲ್ಲಿ ಹುಟ್ಟಿದುದು) ನ್ನಾಗಿ ಅವರು ಊಹಿಸಿದಂತೆ ತೋರುತ್ತದೆ. ಇದೂ ಸಮಂಜಸವಲ್ಲ. ಮಲ್ಲಿಕಾರ್ಜುನ ಪಂಡಿತಾರಾಧ್ಯನಿಗಿಂತಲೂ ಪೂರ್ವದಲ್ಲಿ ಕ್ರಿ. ಶ. ೧೧ ನೆಯ ಶತಮಾನದಲ್ಲಿ ಪ್ರಸಿದ್ಧನಾಗಿದ್ದ ಶ್ರೀಪತಿ ಪಂಡಿತಾರಾಧ್ಯನು ವಿರಚಿಸಿದ ಶ್ರೀಕರಭಾಷ್ಯದಲ್ಲಿ ಅನೇಕಸಲ ಈ ಸಿದ್ಧಾಂತಶಿಖಾಮಣಿಯು ಸಗೌರವವಾಗಿ ಉದಾಹೃತವಾಗಿರುವದರಿಂದ ಶ್ರೀಪತಿ ಪಂಡಿತನಿಗಿಂತಲೂ ಆ ಗ್ರಂಥವು ಪ್ರಾಚೀನವೆಂದು ನಿಸ್ಸಂದೇಹವಾಗಿ ಸ್ವೀಕರಿಸಬಹುದು. ಶ್ರೀಕರ ಭಾಷ್ಯವನ್ನು ಸಂಪಾದನೆ ಮಾಡಿದ ಶ್ರೀ ಸಿ. ಹಯವದನರಾಯರು ಆ ಭಾಷ್ಯದ ಕಾಲವನ್ನು ೧೪ನೆಯ ಶತಮಾನದವರೆಗೆ ಬಲಾತ್ಕಾರವಾಗಿ ಎಳದಿರುವರೆ ಹೊರತು ಅದರಲ್ಲಿ ತಥ್ಯಾಂಶ

ವೇನೂ ಇಲ್ಲ. ಯಾರಿಂದಲೋ ಅನ್ಯರಿಂದ ಇತ್ತೀಚೆಗೆ ಸೇರಿಸಲ್ಪಟ್ಟ ಮಧ್ವಶಬ್ದ ವನ್ನು ಬಹಳವಾಗಿ ನಂಬಿಕೊಂಡು ಶ್ರೀಕಂಠಾಚಾರ್ಯ ಭಾಸ್ಕರಾಚಾರ್ಯರ ಕಾಲವನ್ನೂ ಅಸಮಂಜವಾಗಿ ನಿರ್ಣಯಿಸಿ ಶ್ರೀಕರಭಾಷ್ಯದ ಶ್ರೀಪತಿ ಪಂಡಿತನ ಸಮಯವನ್ನೂ ಕೆಳಕ್ಕೆ ತಳ್ಳಿದ್ದಾರೆ. ಹಯವದನರಾಯರ ಶ್ರೀಕರಭಾಷ್ಯ ಪ್ರತಿಗೆ ಮೂಲವಾದ ದೇವಿಡೀ ಜಮೀಂದಾರ್ ಶ್ರೀ ಕಂದುಕೂರು ಬಾಲಸೂರ್ಯ ಪ್ರಸಾದ ಮಹಾಶಯರ ಪ್ರಾಚೀನ ಪ್ರತಿಯಲ್ಲಾಗಲಿ ಸಿಕಿಂದ್ರಾಬಾದಿನ ಪ್ರಾಚೀನ ಬರಹದ ಪ್ರತಿಯಲ್ಲಾಗಲಿ ಮಧ್ವಶಬ್ದವಿಲ್ಲ. ಶ್ರೀಕಂಠಾಚಾರ್ಯನ ಕಾಲವಾದರೂ ಮದ್ರಾಸು ಯೂನಿವರ್ಸಿಟಿಯ "Sivadwaita of Sreekantha" (ಶ್ರೀಕಂಠನ ಶಿವಾದ್ವೈತ) ಎಂಬ ಪುಸ್ತಕದಲ್ಲಿ ಹತ್ತನೆಯ ಶತಾಬ್ದಿಯೆಂದು ನಿರ್ಣೀತವಾಗಿದೆ. ಹಯವದನರಾಯರು ಮಾಡಿದ ಕಾಲಸೂಚನೆಗಳೆಲ್ಲವೂ "ಶ್ರೀಪತಿ ಪಂಡಿತಾರಾಧ್ಯರ ಕಾಲನಿರ್ಣಯ"ವೆಂಬ ಪುಸ್ತಕದಲ್ಲಿ ಸಪ್ರಮಾಣವಾಗಿ ನಿರಾಕರಿಸಲ್ಪಟ್ಟಿವೆ. ಇವರ ಇಂಗ್ಲೀಷು ಪೀಠಿಕೆಯನ್ನು ನೋಡಿ ಸಿದ್ಧಾಂತಶಿಖಾಮಣಿಗೆ ಸೊಸಲೆ ರೇವಣಾರಾಧ್ಯನು ಕರ್ತನೆಂಬುದನ್ನೂ ನಾರಾಯಣರಾಯರು ನಂಬಿರಬಹುದು. ಹಯವದನರಾಯರೇನೋ ಮದ್ರಾಸು ಓರಿಯಂಟಲ್ ಲೈಬ್ರರಿಯ ಕೇಟಲಾಗನ್ನು ನೋಡಿ ಕರ್ತೃನಿರ್ಣಯಮಾಡಿಕೊಂಡಿರುವರು. ಮೂಲಗ್ರಂಥವನ್ನು ನೋಡದೆ ಪರಪ್ರತ್ಯಯಮಾಡಿದರೆ ಇದಕ್ಕೂ ಹೆಚ್ಚಿನ ಫಲವಾಗಲಾರದೆಂಬುದು ಸರಿಯೇ! ಶ್ರೀಕಂಠಶಿವಾಚಾರ್ಯನೂ ತನ್ನ ಬ್ರಹ್ಮಸೂತ್ರಭಾಷ್ಯದ ಚತುರ್ಥಾಧ್ಯಾಯ ೪ನೆಯ ಪಾದದ "ಅವಿಭಾಗೇನ ದೃಷ್ಟತ್ವಾತ್" ಎಂಬ ಸೂತ್ರವ್ಯಾಖ್ಯಾನದಲ್ಲಿ ಸಿದ್ಧಾಂತ ಶಿಖಾಮಣಿಯ (೯-೧೪) "ಮುಕ್ತಃ ಶಿವಸಮೋ ಭವೇತ್" ಎಂಬ ಪ್ರಮಾಣ ವನ್ನುದ್ಧರಿಸಿದ್ದಾನೆ. ಇದರಿಂದ ಸಿದ್ಧಾಂತಶಿಖಾಮಣಿಯು ಹತ್ತನೆಯ ಶತಮಾನದಲ್ಲಿ ಪ್ರಸಿದ್ಧವಾಗಿದ್ದಿತೆಂಬುದು ಸ್ಪಷ್ಟವಾಗುತ್ತಿದೆ. ಅದರ ರಚನೆ ಪ್ರತಿಪಾದನೆ ಮೊದ ಲಾದವುಗಳು ಕೂಡ ಅದರ ಪ್ರಾಚೀನತ್ವವನ್ನು ಸೂಚಿಸಲು ಸಮರ್ಥವಾಗಿವೆ.

ಶ್ರೀ ಸಿ. ನಾರಾಯಣರಾಯರೇ ಇತ್ತೀಚೆಗೆ ಪ್ರಕಟಿಸಿದ ತೆಲುಗು ಪಂಡಿತಾ ರಾಧ್ಯ ಚರಿತ್ರೆಯ ಪೀಠಿಕೆಯಲ್ಲಿಯೂ ಪ್ರಬುದ್ಧ ಕರ್ಣಾಟಕದ ಲೇಖದಲ್ಲಿಯೂ ಹಯವದನರಾಯರ ಶ್ರೀಕರಭಾಷ್ಯ ಶ್ರೀಪತಿ ಪಂಡಿತ ಕಾಲನಿರ್ಣಯವನ್ನು ಸರಿಯಾದುದಲ್ಲವೆಂದು ಹೇಳಿ ಶ್ರೀಪತಿ ಪಂಡಿತನು ೧೧ನೆಯ ಶತಮಾನದಲ್ಲಿದ್ದ ನೆಂಬುದನ್ನು ಸ್ವೀಕರಿಸಿದ್ದಾರೆ. ಅವನು ರಚಿಸಿದ ಭಾಷ್ಯದಲ್ಲಿಯೇ ಸಗೌರವವಾಗಿ ಉದ್ಧರಿಸಲ್ಪಟ್ಟ ಸಿದ್ಧಾಂತಶಿಖಾಮಣಿಯ ವಿಷಯವಾಗಿ "ಈ ಗ್ರಂಥವು ಈಚೆ ಯದು" ಎಂದು ಹೇಳುವದಾದರೆ ಹಯವದನರಾಯರ ಪೀಠಿಕೆಯು ಹೊರತು ಶ್ರೀಕರ

ಭಾಷ್ಯವನ್ನಾಗಲಿ ಸಿದ್ಧಾಂತಶಿಖಾಮಣಿಯನ್ನಾಗಲಿ ನಾರಾಯಣರಾಯರು ಅವಲೋಕನೆ ಮಾಡಿಲ್ಲವೆಂತಲೇ ಭಾವಿಸಬೇಕಾಗುವುದು.

ಶ್ರೀ ತೋಂಟದಾರ್ಯರು ಸಿದ್ಧಾಂತಶಿಖಾಮಣಿಗೆ ತತ್ತ್ವದೀಪಿಕೆಯೆಂಬ ಸಂಸ್ಕೃತಟೀಕೆಯನ್ನು ರಚಿಸಿದ್ದಾರೆ. ಅವರು ೧೬ನೆಯ ಶತಮಾನದವರು ಅಂದರೆ ಬಹಳ ಆಧುನಿಕರಾದುದರಿಂದ ಸಿದ್ಧಾಂತಶಿಖಾಮಣಿಯಲ್ಲಿರುವ "ಮುದ್ದದೇವ" ಎಂಬ ಶಬ್ದವನ್ನು ನೋಡಿ ತಮ್ಮ ಕರ್ಣಾಟಕದ ಸೋಲಾಪುರದ ಮುದ್ದನ ಗೌಡನೆಂದು ಭ್ರಮಿಸಿ "ಸಿದ್ಧನಾಥ"ನೆಂಬ ಹೆಸರಿಗೆ ಸಿದ್ಧರಾಮನೆಂಬ ವಿಪರೀತಾರ್ಥವನ್ನು ಬರೆದಿದ್ದಾರೆ. ಇದು ಸಹಜವಾಗಿ ಜರುಗಿದ ಪಂಡಿತಪ್ರಮಾದವಾಗಿದೆ. ಇದನ್ನೇ ಪರಮಾರ್ಥವೆಂದು ನಂಬಿ ಸಿದ್ಧಾಂತಶಿಖಾಮಣಿಯ ಕಾಲವನ್ನು ೧೨ನೆಯ ಶತಾಬ್ದಿಯೆಂದು ತಿಳಿದವರೂ ಕೆಲವರುಂಟು. ಇದರಲ್ಲಿ ಎಷ್ಟೂ ಸತ್ಯಾಂಶವಿಲ್ಲ. ತೆಲುಗು ದೇಶದ ಕೊಲನುಪಾಕೆ (ಕುಲ್ಯಪಾಕ)ಯಲ್ಲಿ ಅವತರಿಸಿದ ರೇಣುಕನ ಮಹಿಮೆ ವಿಶೇಷಗಳನ್ನು ಪರಂಪರೆಯಾಗಿ ತನ್ನ ಆಚಾರ್ಯ ವಂಶಪುರುಷರಿಂದ ತಿಳಿದ ಆಂಧ್ರದೇಶದವನೇ ಆದ ಶಿವಯೋಗಿ ಶಿವಾಚಾರ್ಯನು ಸಿದ್ಧಾಂತಶಿಖಾಮಣಿಯನ್ನು ರಚಿಸಿರುವನು. ಸಿದ್ಧಾಂತಶಿಖಾಮಣಿಯ ಶ್ಲೋಕಗಳಲ್ಲಿ ಅನೇಕಕಡೆ ಆಂಧ್ರಭಾಷೆಯ ಸಂಪ್ರದಾಯಂತೆ ಯತಿಸ್ಥಾನವನ್ನು ಸಮಾಕ್ಷರ ಮೈತ್ರಿಯಿಂದ ರಚಿಸಿದ ಪಾದಗಳಿರುವದರಿಂದ ಆತನು ಆಂಧ್ರದೇಶದ ಕವಿಯೆಂದು ಸುಲಭವಾಗಿ ತಿಳಿಯಬಹುದು. ಯತಿಸ್ಥಾನದಲ್ಲಿ ಅಕ್ಷರಮೈತ್ರಿಯ ಪದ್ಧತಿಯು ಕನ್ನಡ ಭಾಷೆಯದಲ್ಲ. ಇದರ ವಿಸ್ತಾರವು ಮತ್ತೊಮ್ಮೆ ಪ್ರಕಟಿಸಲಾಗುವುದು. ಸಿದ್ಧರಾಮನಿಗೆ ಶಿವಯೋಗಿಯೆಂಬ ಮಗನಿದ್ದಂತೆಯೂ ಪೌರಾಣಿಕ ಪ್ರತೀತಿಯಿಲ್ಲ. ಸಿದ್ಧಾಂತಶಿಖಾಮಣಿಯಲ್ಲಿಯ ಸಿದ್ಧನಾಥನು ಸೊನ್ನಲಿಗೆಯ ಸಿದ್ಧರಾಮನೆಂದಿಗೂ ಅಲ್ಲ. ಸಿದ್ಧರಾಮನೇ ಆದ ಪಕ್ಷದಲ್ಲಿ ಆ ಹೆಸರನ್ನು ಸ್ಪಷ್ಟವಾಗಿ ಬರೆಯಲು ಛಂದೋಭಂಗಾದಿ ಯಾವ ಪ್ರತಿಬಂಧಕವೂ ಇರಲಿಲ್ಲ. ಮುದ್ದದೇವನು ಮುದ್ದನಗೌಡನೂ ಆಗಲಾರ. ಸೊನ್ನಲಿಗೆಯ ಮುದ್ದನಗೌಡನು ಲಿಂಗಾಂಗಿಯಲ್ಲ. ಸಿದ್ಧಾಂತಶಿಖಾಮಣಿಯ ಮುದ್ದದೇವನು ಅನೂಚಾನವಾಗಿ ಬಂದ ವೀರಶೈವಾಚಾರ್ಯಕುಲದಲ್ಲಿ ಹುಟ್ಟಿದವನೆಂತಲೂ ಇವರೆಲ್ಲರೂ ವೇದಾಗಮವಿಶಾರದರೂ ತಪಸ್ಸಂಪನ್ನರೂ ಆಗಿದ್ದರೆಂತಲೂ ಗ್ರಂಥಕರ್ತೃವಂಶಪರಿಚಯದಿಂದ ಸುಲಭವಾಗಿ ತಿಳಿಯತಕ್ಕ ಮಾತಾಗಿದೆ. ಶಿವಯೋಗಯ್ಯ ಮುದ್ದಯ್ಯ ಸಿದ್ಧನಾಥಯ್ಯ ಎಂಬ ಹೆಸರುಗಳು ಕುಲ್ಯಪಾಕದ ಪ್ರಾಚೀನ ಮಾಹೇಶ್ವರರಲ್ಲಿ ಹೆಚ್ಚಾಗಿಯೂ ಈಗ ಸ್ವಲ್ಪವಾಗಿಯೂ ಇವೆ. ರೇಣುಕನಿಗೆ ಸಿದ್ಧನಾಥನೆಂಬ ವಿಶೇಷಣವಿದ್ದಂತೆಯೂ (೨೧-೫೦) ಕುಲ್ಯಪಾಕವೆಂಬ ಕ್ಷೇತ್ರವು ರೇಣುಕನಿಗೆ

ಸ್ವಸ್ಥಲವಾಗಿದ್ದಂತೆಯೂ (೨೧–೩೯) ಸಿದ್ಧಾಂತಶಿಖಾಮಣಿಯಿಂದ ಸ್ಪಷ್ಟವಾಗಿ ತಿಳಿಯುತ್ತಿರುವದರಿಂದ ಈ ಗ್ರಂಥವು ಆಂಧ್ರದೇಶದಿಂದ ಅವತರಿಸಿತೆಂದು ನಿರ್ಣಯಿಸುವದೇ ಸಮಂಜಸವಾಗಿದೆ. ಇದು ಸ್ವಲ್ಪ ಸೂಕ್ಷ್ಮಾಂಶವಾದುದರಿಂದ ಆಧುನಿಕರಾದ ಪೌರಾಣಿಕರೂ ಕೆಲವು ಕರ್ಣಾಟಕ ಲೇಖಕರೂ ರೇಣುಕ ರೇವಣಸಿದ್ಧ ಎಂಬ ಹೆಸರುಗಳುಳ್ಳ ಅನೇಕ ವ್ಯಕ್ತಿಗಳನ್ನು ತಿಳಿಯದೆ ತದ್ದೇವಾಡೆಯ ರೇವಣಸಿದ್ಧನಿಗೆ ಗಂಟುಹಾಕಿಕೊಂಡು ರೇಣುಕಾಚಾರ್ಯನ ಕಾಲವನ್ನು ೧೨ನೆಯ ಶತಾಬ್ದವೆಂದು ಬರೆದುಕೊಳ್ಳುತ್ತಿದ್ದಾರೆಯೇ ಹೊರತು ಇದು ಐತಿಹಾಸಿಕ ಸತ್ಯವಲ್ಲ. ರೇಣುಕನ ಉಪದೇಶರೂಪವಾಗಿ ಶಿವಯೋಗಿ ಶಿವಾಚಾರ್ಯನಿಂದ ರಚಿತವಾದ ಸಿದ್ಧಾಂತ ಶಿಖಾಮಣಿಯು ೧೦ನೆಯ ಶತಾಬ್ದದಲ್ಲಿಯೇ ಪ್ರಸಿದ್ಧವಾಗಿದ್ದು ವಿದ್ವದಾದರವನ್ನು ಪಡೆದಿದ್ದಿತೆಂಬುದಕ್ಕೆ ಶ್ರೀಕಂಠ ಶ್ರೀಕರಭಾಷ್ಯಗಳೇ ಸಾಕ್ಷಿಯಾಗಿವೆ.

ಶ್ರೀಕರಭಾಷ್ಯದಲ್ಲಿಯ ಸಿದ್ಧಾಂತವು "ಬಸವನ ಅನಂತರದಲ್ಲಿ ವಿಸ್ತರಿಸಿದ ವೀರಶೈವಸಿದ್ಧಾಂತದಿಂದ ಭೇದಿಸುತ್ತದೆ" ಎಂಬ ವಿಚಿತ್ರಧೋರಣೆಯನ್ನು ಅವರು ಬೈಲಿಗೆ ಹಾಕಿದ್ದಾರೆ. ಶ್ರೀಮಾನ್ ನಾರಾಯಣರಾಯರು ದಯಮಾಡಿ ಮೂಲ ಗ್ರಂಥಗಳಾದ ಶಿವಾಗಮ ಸಿದ್ಧಾಂತಶಿಖಾಮಣಿಗಳನ್ನೂ ಶ್ರೀಕರಭಾಷ್ಯವನ್ನೂ ಸ್ವತಃ ನೋಡಿ ಉಭಯಸಿದ್ಧಾಂತಗಳಿಗೆ ಇರುವ ವಿರೋಧವನ್ನು ಆಯಾ ಗ್ರಂಥಗಳ ಸ್ಥಲ ನಿರ್ದೇಶಪೂರ್ವಕವಾಗಿ ಪ್ರತಿಪಾದಿಸುವದಾದರೆ ತಕ್ಕ ಸಮಾಧಾನವನ್ನು ಬರೆಯಬಹುದು. ಹಯವದನರಾಯರ ಉಪೋದ್ಘಾತವನ್ನೇ ಅನುಸರಿಸಿ ಬರೆಯುತ್ತ ಹೋದರೆ ಪ್ರಯೋಜನವಾಗಲಾರದು. ಶ್ರೀಕರಭಾಷ್ಯದಲ್ಲಿ ಹೇಳಲ್ಪಟ್ಟ ಸೃಷ್ಟಿ, ಸ್ಥಿತಿ, ಲಯ, ವಾಚಿಕ, ಕಾಯಿಕ, ಮಾನಸಿಕ, ಎಂಬ ಷಟ್‌ಸ್ಥಲಗಳು ವೀರಶೈವ ಗ್ರಂಥಗಳಲ್ಲಿ ದೊರೆಯದೆ 'ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ' ಎಂಬ ಷಟ್‌ಸ್ಥಲಗಳು ಹೇಳಲ್ಪಟ್ಟಿರುವದರಿಂದ ಪ್ರಾಚೀನ ವೀರಶೈವ ಮತಕ್ಕಿಂತಲೂ ಅರ್ವಾಚೀನ ವೀರಶೈವಮತವು ಬೇರೆ ಇದೆಯೆಂದು ನಾರಾಯಣರಾಯರು ಬರೆದಿದ್ದಾರೆ. ಇದು ಅತ್ಯದ್ಭುತವಾದ ಪೂರ್ವಪಕ್ಷವೆಂದು ಅವರು ನಂಬಿರಬಹುದು. ಭಾಷ್ಯದಲ್ಲಿ ನಿರೂಪಿಸತಕ್ಕ ವಿಷಯಗಳಾವುವೆಂಬುದು ಅವರಿಗೆ ಬೇಕಾಗಿಲ್ಲ. ತಾವು ಕೇಳಿದ ಪ್ರಶ್ನೆಗಳಿಗೆ ಭಾಷ್ಯದಲ್ಲಿ ಉತ್ತರ ದೊರೆತರೆ ಅದನ್ನು ವೀರಶೈವ ಗ್ರಂಥವನ್ನಾಗಿ ಸ್ವೀಕರಿಸಲು ಅವರು ಸಂಸಿದ್ಧರಾಗಿರುವರು. ಇದು ಸಾಮಾನ್ಯವಾದ ಉಪಕಾರವಲ್ಲ. ಮನುಸ್ಮೃತಿಯಲ್ಲಿರುವ ಸ್ಮಾರ್ತಪ್ರಕ್ರಿಯೆಗಳೆಲ್ಲ ಶಂಕರಭಾಷ್ಯದಲ್ಲಿಯೂ ಪಾಂಚರಾತ್ರಾಗಮಪ್ರಕ್ರಿಯೆಗಳೆಲ್ಲ ರಾಮಾನುಜಭಾಷ್ಯದಲ್ಲಿಯೂ ಪ್ರತಿಪಾದಿಸಲ್ಪಟ್ಟಿವೆ ಎಂಬ ನಂಬಿಕೆಯಿಂದ ಶಿವಾಗಮದ ಪ್ರಕ್ರಿಯೆಗಳಾದ ಏಕೋತ್ತರ ಶತಸ್ಥಲ

ಗಳೂ ಲಿಂಗಧಾರಣವಿಧಾನವೂ ಪಾದಪೂಜಾಪದ್ಧತಿಯೂ ಸಮಾಧಿಮಾಡುವ ಸಲಕರಣಗಳೂ ಶ್ರೀಕರಭಾಷ್ಯದಲ್ಲಿ ವಿವರಿಸಲ್ಪಡದಿರುವದರಿಂದ ಅದು ಅರ್ವಾಚೀನ ವೀರಶೈವರ ಗ್ರಂಥವಲ್ಲವೆಂದು ನಿರ್ಣಯಿಸತಕ್ಕ ಮಹಾನುಭಾವರಿಗೆ ಹೇಳತಕ್ಕುದಿಲ್ಲ. ಶ್ರೀಕರಭಾಷ್ಯವು ಶಿವತತ್ತ್ವ, ಭೇದಾಭೇದ (ಶಕ್ತಿವಿಶಿಷ್ಟಾದ್ವೈತ), ಲಿಂಗಧಾರಣ, ಶಿವಜಗತ್ಕಾರಣತ್ವ, ಶಿವಾಗಮ ಪ್ರಾಮಾಣ್ಯಗಳೆಂಬ ಮುಖ್ಯವಾದ ವಿಷಯಗಳನ್ನು ಸಿದ್ಧಾಂತಗೊಳಿಸಲು ಹುಟ್ಟಿರುವದೇ ಹೊರತು ವೀರಶೈವರ ಎಲ್ಲ ವಿಷಯಗಳನ್ನೂ ಸಂಗ್ರಹಿಸುವದಕ್ಕಲ್ಲ. ಶಿವಪರಬ್ರಹ್ಮನ ಸವಿಶೇಷತ್ವವನ್ನೂ ಸರ್ವಕರ್ತೃತ್ವವನ್ನೂ ಸಿದ್ಧಾಂತಗೊಳಿಸುವ ಪ್ರಸಂಗದಲ್ಲಿ ಅವನಿಗೆ ಸೃಷ್ಟಿಸ್ಥಿತಿಲಯವಾಚಕ ಕಾಯಕ ಮಾನಸಿಕ (ಇಚ್ಛಾ ಕ್ರಿಯಾ ಜ್ಞಾನ)ಗಳೆಂಬ ಷಟ್‌ಸ್ಥಲಗಳು ಹೇಳಲ್ಪಟ್ಟಿವೆ. ಅಂದರೆ ಶಿವನ ವಿವಿಧ ಶಕ್ತಿಗಳೇ ಜಗತ್ತಿಗೆ ಉಪಾದಾನಕಾರಣವೆಂಬುದು ನಿರೂಪಿಸಲಾಗಿದೆ. ಇವು ಆರೂ ಶಿವನ ಶಕ್ತಿಗಳೇ ಹೊರತು ಬೇರಲ್ಲ. ಇವು ಸಹಜವಾಗಿ ಸೃಷ್ಟಿ ಸ್ಥಿತಿಲಯ ತಿರೋಧಾನ ಅನುಗ್ರಹಗಳೆಂಬ ಶಿವಾಗಮಗಳ ಪಂಚಕೃತ್ಯಗಳಲ್ಲಿ ಅಂತರ್ಗತವಾಗಿವೆ. ಇವನ್ನೇ ಶ್ರೀಕರ ಭಾಷ್ಯಕಾರನು ಸ್ಥಲಗಳೆಂದು ಹೇಳಿದ್ದಾನೆ. ಇದು ಆತನಿಗೆ ಬಹಳ ಇಷ್ಟವಾದ ವಿಷಯವಾದುದರಿಂದ ಶಿವನಿಗೆ "ಅದ್ವಿತೀಯ ಷಟ್‌ಸ್ಥಲ ಪರಶಿವಬ್ರಹ್ಮ" ಎಂಬ ವಿಶೇಷಣವನ್ನು ಅನೇಕಸಲ ಉಪಯೋಗಿಸಿದ್ದಾನೆ. ಈ ವಿಶೇಷಣವು ಶಿವನ ಹೊರತು ಮತ್ತಾರಿಗೂ ಸಲ್ಲತಕ್ಕುದಲ್ಲವೆಂಬ ಅಭಿಪ್ರಾಯವನ್ನು "ಅದ್ವಿತೀಯ" ಶಬ್ದದಿಂದ ಶ್ರೀಕರಭಾಷ್ಯಕಾರನು ಸಾರಿದ್ದಾನೆ. ಈ ಪ್ರಸಂಗದಲ್ಲಿ ಜೀವನು ಭಕ್ತಾದಿ ಷಟ್‌ಸ್ಥಲಕ್ರಮವನ್ನು ಅನುಸರಿಸಿ ದೇವತ್ವವನ್ನು ಸಂಪಾದಿಸುವ ಪದ್ಧತಿಯು ಶ್ರೀಕರ ಭಾಷ್ಯಕಾರನಿಂದ ನಿರೂಪಿತವಾಗಿಲ್ಲ. ಆದರೆ ಭಾಷ್ಯಕಾರನು ಈ ವಿಷಯವನ್ನೇ ಹೇಳಿಲ್ಲವೆಂಬುದು ಅಸಂಬದ್ಧ ವಿಧಾನವಾಗಿದೆ. ಶ್ರೀಕರ ಭಾಷ್ಯದ ಪ್ರಥಮಾಧ್ಯಾಯ ದ್ವಿತೀಯ ಸೂತ್ರದ ಕಡೆಯ ಭಾಷ್ಯದಲ್ಲಿ—

"ಯದ್ಭಕ್ತಸ್ಥಲಮಿತ್ಯಾಹುಸ್ತತ್ಸರ್ವಜ್ಞತ್ವಮುಚ್ಯತೇ |
ಯನ್ಮಾಹೇಶ್ವರಕಂ ನಾಮ ಸಾ ತೃಪ್ತಿರ್ಮಮ ಶಾಂಕರಿ ||
ಯತ್ಪ್ರಸಾದಾಭಿಧಂ ನಾಮ ತದ್ಬೋಧೋ ಮೇ ನಿರಂಕುಶಃ |
ಯತ್ಪ್ರಾಣಲಿಂಗಕಂ ನಾಮ ತತ್ಸ್ವಾತಂತ್ರ್ಯಮುದಾಹೃತಂ ||
ಯದಸ್ತಿ ಶರಣಂ ನಾಮ ಹ್ಯಲುಪ್ತಾ ಶಕ್ತಿರುಚ್ಯತೇ |
ಯದೈಕ್ಯಸ್ಥಲಮೂರ್ಧ್ವಸ್ಥಂ ಹ್ಯನಂತಾ ಶಕ್ತಿರುಚ್ಯತೇ ||"

(ಇತಿ ಜನ್ಮಾದ್ಯಧಿಕರಣಾಂತೇ)

ಎಂದು ಭಕ್ತ, ಮಾಹೇಶ್ವರ, ಪ್ರಸಾದ, ಪ್ರಾಣಲಿಂಗ, ಶರಣ, ಐಕ್ಯ, ಸ್ಥಳಗಳನ್ನು ಭೇರೀನಿನಾದದಿಂದ ಹೇಳಿರುವುದು ಪುಸ್ತಕ ಸೋಡದವರಿಗೆ ಗೋಚರವಾಗುವುದಿಲ್ಲವಷ್ಟೆ!

ವೀರಶೈವನಿಗೆ ಆರು ಸ್ಥಲಗಳೇ ಅಲ್ಲ. ತದಂತರ್ಗತಗಳಾದ ನೂರೊಂದು ಸ್ಥಲಗಳಿವೆ. ಇವೆಲ್ಲವೂ ಶಿವಾಗಮಗಳಲ್ಲಿಯೂ ಸಿದ್ಧಾಂತಶಿಖಾಮಣಿಯಲ್ಲಿಯೂ ಹೇಳಿರುವದನ್ನು ತಿಳಿಯದೆ "ಈ ವಿವರಣವು ಎಂದಿನಿಂದ ಬರುತ್ತಿದೆಯೋ ಹೇಳಲಿಕ್ಕೆ ಆಧಾರಗಳಿಲ್ಲ" ವೆಂದು ನಾರಾಯಣರಾಯರು ಚಿಂತಿಸುತ್ತಿದ್ದಾರೆ. ಅವರ ಈ ಬರಹವು ಕೇವಲ ನಿರಾಧಾರವಾಗಿದೆ. ವೀರಶೈವಮತದ ಗ್ರಂಥಗಳನ್ನು ಅವಲೋಕಿಸದೆ ಕೇವಲ ಊಹೆಗಳಿಂದಲೇ ಮತಚರಿತ್ರೆಯನ್ನೂ ತತ್ತ್ವಗಳನ್ನೂ ನಿರೂಪಿಸುವುದು ಸುಲಭವಲ್ಲ.

ಶಿವತತ್ತ್ವಸಾರವನ್ನು ಮಲ್ಲಿಕಾರ್ಜುನ ಪಂಡಿತಾರಾಧ್ಯನು ರಚಿಸಿರುವುದು ಆಂಧ್ರದೇಶದಲ್ಲಿ ಸುಪ್ರಸಿದ್ಧವಾದ ವಿಷಯ. ಅದನ್ನು ಪ್ರಕಟಿಸಿದ ಆಂಧ್ರಸಾಹಿತ್ಯ ಪರಿಷತ್ತಿನವರೂ ಶ್ರೀ ಕೊ|| ಲಕ್ಷ್ಮಣರಾಯರಂತಹ ಉದ್ದಾಮ ಪರಿಶೋಧಕರೂ ಅದನ್ನು ಪಂಡಿತಾರಾಧ್ಯರ ಕೃತಿಯೆಂದೇ ನಿರ್ಣಯಿಸಿದ್ದಾರೆ. ಆ ಗ್ರಂಥದಲ್ಲಿ ಸ್ವತಃ ಮಲ್ಲಿಕಾರ್ಜುನ ಪಂಡಿತನೇ—

ಒಂಡೇಮಿ ಮಲ್ಲಿಕಾರ್ಜುನ
ಪಂಡಿತುಡನ ನುಂಡುಕಂಟಿ ಪ್ರಮುಖುಲಲೋ ನೆ
ನ್ನಂಡೊಕೊ ನೀ ಯಾಜ್ಞೋನ್ನತಿ
ನುಂಡಂ ಗಾಂತು ನನಿ ಕೋರುಚುಂಡುದು ರುದ್ರಾ

ಎಂಬ ಪದ್ಯದಿಂದ ತಾನೇ ಈ ಶಿವತತ್ತ್ವಸಾರವನ್ನು ರಚಿಸಿದ್ದಾನೆಂಬುದನ್ನು ಸ್ಪಷ್ಟಗೊಳಿಸಿದ್ದಾನೆ. ಆತನ ಅನಂತರದಲ್ಲಿದ್ದ ಪಾಲ್ಕುರಿಕಿ ಸೋಮನಾಥನು ತನ್ನ ಪಂಡಿತಾರಾಧ್ಯ ಚರಿತ್ರೆಯ ದೀಕ್ಷಾಪ್ರಕರಣದಲ್ಲಿ—

ಅಂತ ಬಂಡಿತಮಲ್ಲಿಕಾರ್ಜುನಪ್ರಭುವು. . . .
ಶಿವತತ್ತ್ವಸಾರ ಸಂಚಿತ ಮಹಾಮಹಿಮ
'ಶಿವತತ್ತ್ವಸಾರ'ಮ್ಮ ಶಿವಕೃತಿ ಬೊಗಡು

ಎಂಬ ಅಂಶದಿಂದಲೂ ಚತುರ್ವೇದಸಾರದಲ್ಲಿಯ ಮತ್ತೊಂದು ಪದ್ಯದಿಂದಲೂ ಮಲ್ಲಿಕಾರ್ಜುನ ಪಂಡಿತಾರಾಧ್ಯನೇ ಆ ಗ್ರಂಥವನ್ನು ರಚಿಸಿದ್ದಾನೆಂದು ಹೇಳಿದ್ದಾನೆ. ಆಂಧ್ರಲೋಕವೆಲ್ಲವೂ ಇದನ್ನೇ ನಿಜವೆಂದು ತಿಳಿದಿದೆ. ಇದೇ ಡಾ|| ನಾರಾಯಣರಾಯರೂ ಇತ್ತೀಚೆಗೆ ತಾವು ಪ್ರಕಟಿಸಿದ ಆಂಧ್ರ ಪಂಡಿತಾರಾಧ್ಯ ಚರಿತ್ರೆಯ ಪೀಠಿಕೆಯಲ್ಲಿ (ಪುಟ ೭೯) ಶಿವತತ್ತ್ವಸಾರವನ್ನು ಪಂಡಿತಾರಾಧ್ಯನ ಕೃತಿಯೆಂತಲೇ ಬರೆದಿದ್ದಾರೆ. ಆದರೆ ಪ್ರಬುದ್ಧ ಕರ್ಣಾಟಕದ ಗತ ಲೇಖದಲ್ಲಿ "ಮಲ್ಲಿಕಾರ್ಜುನ ಪಂಡಿತಾರಾಧ್ಯನು ಶಿವತತ್ತ್ವಸಾರವನ್ನು ಬರೆಯಲಿಲ್ಲವೆಂದೇ ನನ್ನ ಅಭಿಪ್ರಾಯ" ವೆಂದು ಸಾರಿದ್ದಾರೆ. ೧೨ನೆಯ ಶತಾಬ್ದಿಯ ಇಷ್ಟು ಸುಪ್ರಸಿದ್ಧವಾದ ಗ್ರಂಥವನ್ನು ೧೪ನೆಯ

ಶತಮಾನದ ವರೆಗೆ ಎಳೆಯುವದಕ್ಕಾಗಿ ಅವರು ತೋರಿಸಿದ ಯುಕ್ತಿಯು ಹೀಗಿದೆ— "ಸೋಮನಾಥನ ಪಂಡಿತಾರಾಧ್ಯ ಚರಿತ್ರದಲ್ಲಿ ಶಿವತತ್ತ್ವಸಾರವೆಲ್ಲಾ ಪ್ರತ್ಯಕ್ಷರವೂ ಸೇರಿದೆ. ಸೋಮನಾಥನಂತಹ ಮಹಾತ್ಮರಿಗೆ ಗ್ರಂಥಚೌರ್ಯವನ್ನು ಆಪಾದಿಸುವದು ನ್ಯಾಯವಲ್ಲ. . . . ತಾನೇ ತನ್ನ ಗ್ರಂಥದಿಂದ ಕೆಲವು ಭಾಗಗಳನ್ನು ತೆಗೆದು ಪಂಡಿತಾ ರಾಧ್ಯನ ಹೆಸರಿನಿಂದ ಪ್ರಕಟಿಸಿರಬಹುದೆಂದು ನನಗೆ ತೋರುತ್ತದೆ".

ಸೋಮನಾಥನಂತಹ ಮಹಾತ್ಮನು ಗ್ರಂಥಚೌರ್ಯಮಾಡುವುದು ಅನುಚಿತ ವಾಗಿದ್ದರೆ, ತಾನು ಸೃಷ್ಟಿಸಿದ ಗ್ರಂಥವನ್ನು ಸುಪ್ರಸಿದ್ಧ ಪಂಡಿತಶಿರೋಮಣಿಯಾದ ಮಲ್ಲಿಕಾರ್ಜುನ ಪಂಡಿತನ ಹೆಸರಿನಿಂದ ಪ್ರಕಟಿಸಿದನೆಂಬುದು, "ಮದ್ಯಪಾನ ಮಾಡಿಲ್ಲ, ಮಾಂಸಭಕ್ಷಣ ಮಾಡಿದ್ದಾನೆ" ಎಂಬ ಹಾಗಿದೆ. ಅಖಂಡ ಪಂಡಿತನಾದ ಮಲ್ಲಿಕಾರ್ಜುನ ಪಂಡಿತಾರಾಧ್ಯನಿಂದ ಅನೇಕ ಗ್ರಂಥಗಳು ರಚಿಸಲ್ಪಟ್ಟಿದ್ದರೂ ಸೌಭಾಗ್ಯವಶದಿಂದ ಶಿವತತ್ತ್ವಸಾರವೊಂದು ಮಾತ್ರ ಲಭಿಸಿದೆ. ಅದು ಶೈಲಿ ಯಲ್ಲಿಯೂ ವಿಷಯನಿರೂಪಣ ಪದ್ಧತಿಯಲ್ಲಿಯೂ ಪ್ರತ್ಯೇಕತೆಯುಳ್ಳದ್ದಾಗಿ ಸೋಮ ನಾಥನ ಕವಿತೆಗಿಂತಲೂ ಭಿನ್ನತೆಯನ್ನು ಸ್ಪಷ್ಟಗೊಳಿಸಲು ಸಮರ್ಥವಾಗಿದೆ. ಅದನ್ನು ಸೋಮನಾಥನು ರಚಿಸಿರುವನೆಂಬುದು ಕೇವಲ ಸಾಹಸದ ಮಾತು. ಅದನ್ನು ನೋಡಿಯೇ ಸೋಮನಾಥನು ಅನುಭವಸಾರವನ್ನೂ ಕಾಕತಿ ಗಣಪತಿ ದೇವನು ಶಿವಯೋಗಸಾರವನ್ನೂ ರಚಿಸಿದ್ದಾರೆ. ಅನುಭವಸಾರವೆಂಬ ಕೃತಿಯಲ್ಲಿಯೇ ಶಿವತತ್ತ್ವಗಳನ್ನು ಸೋಮನಾಥನು ನಿರೂಪಿಸಿರುವಾಗ ಮತ್ತೊಂದು "ಶಿವತತ್ತ್ವ ಸಾರ"ವನ್ನು ಬರೆದು ಪಿಷ್ಟಪೇಷಣಮಾಡುವ ಆವಶ್ಯಕತೆಯೇ ಇಲ್ಲ. ಸೋಮ ನಾಥನು ಆಂಧ್ರಭಾಷಾ ಪಾರಂಗತನೂ ವೇದವೇದಾಂತಾಭಿಜ್ಞನೂ ಆದ ಪ್ರೌಢಕವಿ ಯಾಗಿದ್ದಾನೆ. ಅವನು ವೇದೋಪನಿಷತ್ಸಾರಗಳನ್ನು ಹೇಳುವಾಗ ತನ್ನ ಕವಿತೆಯಲ್ಲಿ ಆಯಾ ವೇದವಾಕ್ಯಗಳನ್ನೇ ಹೊಂದಿಸಿದ್ದಾನೆ. ಇಂತಹ ಪ್ರಚಂಡ ಪ್ರತಿಭೆಯಿಂದ ಆತನ ದ್ವಿಪದಕಾವ್ಯವು ತುಂಬಿತುಳುಕುತ್ತಿದೆ. ಅದರಂತೆಯೇ ತನ್ನ ಪಂಡಿತಾರಾಧ್ಯ ಚರಿತ್ರೆಯಲ್ಲಿ ಶ್ರೀ ಮಲ್ಲಿಕಾರ್ಜುನ ಪಂಡಿತಾರಾಧ್ಯನ ಉಪದೇಶ ವಿಶೇಷಗಳನ್ನು ತಿಳಿಸುವದಕ್ಕಾಗಿ ಆತನ ಶಿವತತ್ತ್ವಸಾರವನ್ನೆ ಆಯಾ ವಾಕ್ಯಗಳಲ್ಲಿ ಸಂಗ್ರಹಿಸಿ ಸೋಮನಾಥನು ನಿರೂಪಿಸುತ್ತ ಗ್ರಂಥರಚನೆ ಮಾಡಿರುವುದು ಸಯುಕ್ತಿಕವಾಗಿಯೂ ಸಂಪ್ರದಾಯಶುದ್ಧವಾಗಿಯೂ ಇದೆ. ಪಂಡಿತಾರಾಧ್ಯನ ಸಿದ್ಧಾಂತವನ್ನು ಪಂಡಿತಾ ರಾಧ್ಯನ ವಾಕ್ಯಗಳಿಂದಲೇ ಹೇಳಿರುವ ಪದ್ಧತಿಯು ಪ್ರಶಂಸನೀಯವಾದುದಲ್ಲವೆ? ಇದನ್ನೇ ಗ್ರಂಥಚೌರ್ಯವೆಂದು ಹೇಳುವದಾದರೆ ಸುಪ್ರಸಿದ್ಧ ಆಚಾರ್ಯರ ಗ್ರಂಥ ಗಳನ್ನೆಲ್ಲ ಆಧುನಿಕಕಲ್ಪಿತಗಳೆನ್ನಬಹುದು. ವಿದ್ಯಾರಣ್ಯರ ಪಂಚದಶ್ಯಾದಿ ಗ್ರಂಥಗಳಲ್ಲಿ

ಶಾಂಕರಭಾಷ್ಯದ ಅನೇಕ ಸಿದ್ಧಾಂತವಾಕ್ಯಗಳು ತುಂಬಿರುವದರಿಂದ ವಿದ್ಯಾರಣ್ಯರೇ ಶಂಕರಭಾಷ್ಯವನ್ನು ಹುಟ್ಟಿಸಿರಬಹುದಲ್ಲವೆ! ಅಪ್ಪಯ್ಯದೀಕ್ಷಿತರ ರತ್ನತ್ರಯಪರೀಕ್ಷೆ, ಶಿವಾದ್ವೈತನಿರ್ಣಯ, ಶಿಖರಿಣೀಮಾಲಾ ಮೊದಲಾದ ಗ್ರಂಥಗಳಲ್ಲಿ ಶ್ರೀಕಂಠ ಶಿವಾಚಾರ್ಯನ ಭಾಷ್ಯಪಂಕ್ತಿಗಳೂ ಸಿದ್ಧಾಂತವೂ ತುಂಬಿರುವದರಿಂದ ಶ್ರೀಕಂಠ ಭಾಷ್ಯವನ್ನು ಅಪ್ಪಯ್ಯದೀಕ್ಷಿತರೇ ಹುಟ್ಟಿಸಿರಬಹುದು. ಹೀಗೆಯೇ ಅನೇಕ ಗ್ರಂಥಗಳನ್ನು ತಲೆಕೆಳಗೆ ಮಾಡಬಹುದು.

ಶಿವತತ್ತ್ವಸಾರದ ಆಧುನಿಕತ್ವವನ್ನು ಹೇಳುವದರಲ್ಲಿ ಒಂದು ರಹಸ್ಯವಿದೆ. ಆ ಗ್ರಂಥದಲ್ಲಿ ಗುರುಜಂಗಮ ನಾಮಗಳೂ ಶ್ರೀಪತಿ ಪಂಡಿತ ನಾಮವೂ ಬಂದಿವೆ. ಇವು ಶ್ರೀಪತಿ ಪಂಡಿತನ ಮತ್ತು ವೀರಶೈವಮತದ ಕಾಲವನ್ನು ೧೧ ನೆಯ ಶತಮಾನಕ್ಕಿಂತಲೂ ಹಿಂದೆ ಎಂದು ನಿರ್ಣಯಿಸಲು ಮುಖ್ಯ ಸಹಾಯಕಾರಿಗಳಾಗಿವೆ. ಇದು ರಾಯರಿಗೆ ಇಷ್ಟವಿಲ್ಲ. ಹೊರಗೆ ನೋಡುವದಕ್ಕೆ ಹಯವದನರಾಯರು ನಿರ್ಣಯಿಸಿದ ಶ್ರೀಕರಭಾಷ್ಯದ ಕಾಲವನ್ನು ಖಂಡಿಸಿದ ಹಾಗೆ ನಟಿಸಿ ಶಿವತತ್ತ್ವಸಾರವು ೧೪ನೆಯ ಶತಮಾನದಲ್ಲಿ ಹುಟ್ಟಿದಂತೆ ಹೇಳಿದರೆ ಶ್ರೀಕರಭಾಷ್ಯ ಶ್ರೀಪತಿಪಂಡಿತರ ಕಾಲವೂ ಸಂಶಯಕಲ್ಲೋಲವಾಗುವದಷ್ಟೆ! ನಾರಾಯಣರಾಯರ ಈ ವೈಖರಿಯು ಚರಿತ್ರೆ ಪರಿಶೋಧನೆಯಲ್ಲಿ ಎಷ್ಟರಮಟ್ಟಿಗೆ ಸಹಾಯಕವಾಗುವುದೆಂಬುದನ್ನು ಸತ್ಯಶೀಲರಾಲೋಚಿಸಲಿ!

ಶಿವತತ್ತ್ವಸಾರದ ಕನ್ನಡ ಅನುವಾದದ ಪ್ರತಿಯೂ ಇತ್ತೀಚೆಗೆ ದೊರೆತಿದೆ. ಅದರ ಬಗ್ಗೆ ಶ್ರೀ ವೇ|| ಪ್ರಭಾಕರಶಾಸ್ತ್ರಿಗಳ ಲೇಖವನ್ನು ನಮ್ಮ ವಿಭೂತಿ ವರ್ಷ ೨ ಸಂಚಿಕೆ ೪ರಲ್ಲಿ ನೋಡಬಹುದು. ನಾನು ಹಿಂದೆ ಉದಹರಿಸಿದ ಮಲ್ಲಿಕಾರ್ಜುನ ಪಂಡಿತಾರಾಧ್ಯನ ಶಿವತತ್ತ್ವಸಾರದ ತೆಲುಗು ಪದ್ಯಕ್ಕೆ—

ಧರೆಯೊಳಗೆ ಮಲ್ಲಿಕಾರ್ಜುನ ವರಪಂಡಿತನೆನಿಸುತಿಹುದರಿಂ ನಿನ್ನಾಜ್ಞಾ |
ಭರಮೆಸೆಯಲ್ ಪ್ರಮಥರೊಳಾ ನಿರಲೆಂದೀಕ್ಷಿಸುವೆ ನಿಮ್ಮ ಬಯಸುವೆನೀಶಾ ||

ಎಂಬ ಕನ್ನಡ ಪದ್ಯವು ಕನ್ನಡ ಶಿವತತ್ತ್ವಸಾರದಲ್ಲಿಯೂ ಇರುವದರಿಂದ ಆಂಧ್ರ ಶಿವತತ್ತ್ವಸಾರವನ್ನು ಮಲ್ಲಿಕಾರ್ಜುನ ಪಂಡಿತಾರಾಧ್ಯನೇ ವಿರಚಿಸಿದ್ದಾನೆಂಬುದು ಸಿದ್ಧಾಂತವೇ ಸರಿ. ಕನ್ನಡ ಶಿವತತ್ತ್ವಸಾರದ ಕರ್ತೃತ್ವದ ವಿಷಯದಲ್ಲಿ ಇನ್ನೂ ವ್ಯಕ್ತಿನಿರ್ಣಯವಾಗಿಲ್ಲ. ನಾರಾಯಣರಾಯರಿಗೂ ಈ ವಿಷಯ ತಿಳಿಯುವದಕ್ಕಾಗಿ 'ವಿಭೂತಿ' ಸಂಚಿಕೆ ಕಳುಹಿಸಲಾಗಿದೆ.

"ಬಸವನಿಗೆ ಪೂರ್ವದಲ್ಲಿ ಈ ಅರ್ವಾಚೀನರೂಪದಿಂದ ವೀರಶೈವವು ಇತ್ತೆಂಬುದಕ್ಕೆ ಯಾವ ಆಧಾರವೂ ಇಲ್ಲ" ಎಂದು ಬರೆಯುವ ರಾಯರಿಗೆ ಮತ್ತೊಮ್ಮೆ

ವೀರಶೈವ ಮತಗ್ರಂಥಗಳನ್ನು ಸರಿಯಾಗಿ ಪರಿಶೀಲಿಸಿ ತಮ್ಮ ಊಹೆಗಳನ್ನು ಸರಿಪಡಿಸಿಕೊಳ್ಳಬೇಕೆಂದು ನಿವೇದಿಸುತ್ತೇನೆ.

ಇನ್ನು ವೀರಶೈವರ ಕನ್ನಡ ವಚನಗ್ರಂಥಗಳ ಹೆಸರುಗಳನ್ನೇನೋ ಅವರು ಬಹಳವಾಗಿ ಉದಾಹರಿಸಿದ್ದಾರೆ. ಆದರೆ ಅವುಗಳಲ್ಲಿಯೂ ಕೂಡ "ಬರೀ ಭಕ್ತಿ ಶಿವಸಾಮರಸ್ಯ ಯಾಚನೆಗ"ಳಿದ್ದಂತೆ ರಾಯರು ಭಾವಿಸಿದ್ದರಿಂದ ಶ್ರೀ ರಾಯರು ಅವುಗಳನ್ನೂ ನೋಡದೆ ಅವುಗಳಲ್ಲಿರುವ ವಿಸ್ತಾರವಾದ ಷಟ್‌ಸ್ಥಳ—ಅಷ್ಟಾವರಣಾದಿಗಳನ್ನು ತಿಳಿದಿಲ್ಲವೆಂದು ಗೊತ್ತಾಗುತ್ತದೆ. ವಚನಗಳ ಕಾಲದ ವಿಷಯದಲ್ಲಿ ಒಂದು ತೊಡಕಿರುವುದೇನೋ ಸತ್ಯ. ಶ್ರೀರಂಗನಾಥ ದಿವಾಕರರು ತಮ್ಮ 'ವಚನಶಾಸ್ತ್ರರಹಸ್ಯ'ದಂತಹ ಹೆಬ್ಬೊತ್ತಿಗೆಯಲ್ಲಿಯೂ ವಚನಗಳ ಕಾಲದ ವಿಷಯವಾಗಿ ಜಾಣ್ಮೆಯಿಂದ ಮೌನ ವಹಿಸಿದ್ದಾರೆ. ವಚನಗಳ ವಿಷಯದಲ್ಲಿ ಪರಿಶ್ರಮಪಡುತ್ತಲಿರುವವರೂ ಅವುಗಳ ಕಾಲವನ್ನು ನಿಷ್ಕಪಟವಾಗಿ ಹೇಳುತ್ತಿಲ್ಲ. ಶ್ರೀ ಬಸವಾದಿಗಳ ಕಾಲದಲ್ಲಿಯೂ ಅವರಿಂದ ಹೇಳಲ್ಪಟ್ಟ ವಚನಗಳು ಪ್ರಚಾರದಲ್ಲಿದ್ದು ಅನಂತರದಲ್ಲಿ ಕ್ರಮಕ್ರಮವಾಗಿ ೧೬ನೆಯ ಶತಮಾನದ ಪ್ರಾಂತದಲ್ಲಿ ಈಗ ಕಾಣುವ ವಚನಗಳು ಪೂರ್ತಿಯಾಗಿ ಗ್ರಂಥರೂಪಕ್ಕೆ ಬಂದಿರಬಹುದೆಂದು ಕೆಲವು ಕಾರಣಗಳಿಂದ ನಾನು ನಂಬಿದ್ದೇನೆ. ಇದು ಸರಿಯಲ್ಲವೆಂದು ಸಪ್ರಮಾಣವಾಗಿ ಯಾರಾದರೂ ನಿರೂಪಿಸಿದರೆ ಆದರದಿಂದ ಸ್ವೀಕರಿಸುವದರಲ್ಲಿ ನನಗೆ ಸಂಕೋಚವಿಲ್ಲ. ಆದರೆ ಪ್ರಾಚೀನರ ಮೂಲವಿಲ್ಲದಲೇ ಇತ್ತೀಚೆಗೆ ಯಾರೋ ಸಂಪೂರ್ಣ ಹೊಸದಾಗಿ ರಚಿಸಿ ಬಸವಾದಿಗಳ ಹೆಸರಿನಿಂದ ಪ್ರಸಿದ್ಧಮಾಡಿದ್ದಾರೆಂಬ ನಾರಾಯಣರಾಯರ ಸಿದ್ಧಾಂತವು ಮಾತ್ರ ಪ್ರಾಮಾದಿಕವೆಂದು ಹೇಳಬಹುದು. ಈಗಿನ ಗ್ರಂಥಗಳಲ್ಲಿಯ ಕೆಲವು ವಚನಗಳು ಆಯಾ ಪ್ರಾಚೀನ ವ್ಯಕ್ತಿಗಳಿಂದಲೇ ಹೇಳಲ್ಪಟ್ಟಿರಬೇಕೆನ್ನುವಷ್ಟು ಸ್ಫೂರ್ತಿಯನ್ನೊಳಗೊಂಡಿವೆ.

"ವೀರಶೈವಾಚಾರ್ಯ ಪಂಚಕದಲ್ಲಿ ಕೆಲವರು ಬಸವನಿಗೆ ಪೂರ್ವಿಕರು, ಕೆಲವರು ಸಮಕಾಲಿಕರು, ಕೆಲವರು ಈಚೆಯವರು," ಎಂದು ರಾಯರು ಹೇಳಿಬಿಟ್ಟಿದ್ದಾರೆ. ಇದು ಕನ್ನಡ ಕವಿಚರಿತೆಯ ಸಂಗ್ರಹಾನುವಾದವೆಂತಲೂ ಹೇಳಬಹುದು.

ಶ್ರೀಕರಭಾಷ್ಯದ ಆದಿಯಲ್ಲಿ ಪ್ರಸಿದ್ಧನಾದ ರೇಣುಕಾಚಾರ್ಯನನ್ನೂ ತನ್ನ ಗುರುವಾದ ಏಕೋರಾಮಾಚಾರ್ಯನನ್ನೂ ಶ್ರೀಪತಿಪಂಡಿತನು ಸ್ತುತಿಸಿದ್ದಾನೆ. ದ್ವಿತೀಯಾಧ್ಯಾಯ ತೃತೀಯಪಾದದ "ಸಮಾಧ್ಯಭಾವಾಚ್ಚ || ೩೬ ||" ಎಂಬ ಸೂತ್ರದ ಭಾಷ್ಯದಲ್ಲಿ ಮರುಲಸಿದ್ಧ (ದಾರುಕಾಚಾರ್ಯ)ನನ್ನೂ ಹೇಳಿದ್ದಾನೆ. ರೇವಣ-ಮರುಲ-ಏಕೋರಾಮರ ಹೆಸರುಗಳು ಭಾಷ್ಯದಲ್ಲಿ ನಾಲ್ಕಾರುಸಲ ಬಂದಿರುವದರಿಂದ ಇವರು ಶ್ರೀಪತಿಗಿಂತಲೂ ಪೂರ್ವಿಕರೆಂತಲೇ ಸಹಜವಾಗಿ ಗ್ರಹಿಸಬಹುದು.

ಪಂಚಾಚಾರ್ಯ ಪಂಚವರ್ಣೋತ್ಪತ್ತಿ-ಶಂಕರಸಂಹಿತಾ-ವೀರಲೈಂಗೋಪನಿಷತ್-ನಾರಾಯಣೋಪನಿಷದ್ಭಾಷ್ಯಗಳಲ್ಲಿ ವೀರಶೈವಾಚಾರ್ಯರಾದ ಪಂಡಿತಾರಾಧ್ಯ ವಿಶ್ವಾರಾಧ್ಯನಾಮಗಳೂ ಬಂದಿವೆ. ತೆಲುಗು ದೇಶದ ಮಲ್ಲಿಕಾರ್ಜುನ ಪಂಡಿತಾರಾಧ್ಯನು ವೀರಶೈವಾಚಾರ್ಯ ಪಂಡಿತಾರಾಧ್ಯನಿಗಿಂತಲೂ ಬೇರೆಂಬುದನ್ನು ತಿಳಿಯದೆ ಅನೇಕರು ಭ್ರಮೆಗೊಳಗಾಗಿದ್ದಾರೆ. ಮಲ್ಲಿಕಾರ್ಜುನ ಪಂಡಿತನು ಗೃಹಸ್ಥನಾಗಿದ್ದು ಆತನ ವಂಶಪರಂಪರೆಯೂ ಈಗ ಇದೆ. ವೀರಶೈವಾಚಾರ್ಯ ಪಂಡಿತಾರಾಧ್ಯನೂ ಆತನ ಶಿಷ್ಯ ಚಂದ್ರಗುಂಡ ಶಿವಾಚಾರ್ಯನೂ ಶ್ರೀಶೈಲ ಗುರುಪೀಠಾಧಿಕಾರಿಗಳಾಗಿದ್ದ ಪ್ರಾಚೀನರೆಂತಲೂ ಆ ಪೀಠವೀಗಲೂ ಪರಂಪರೆಯಾಗಿ ವೀರಶೈವಾಧೀನವಾಗಿ (ಗುಂತಕಲ್ಲಿನಲ್ಲಿ) ಇದೆಯೆಂತಲೂ ಅನೇಕ ಐತಿಹಾಸಿಕ ಆಧಾರಗಳನ್ನು “ಆಚಾರ್ಯ ಪಂಡಿತ”ನೆಂಬ ಲೇಖದಲ್ಲಿ (ವಿಭೂತಿ ೧–೧೨, ೨–೧) ಪ್ರಕಟಿಸಲಾಗಿದೆ. ಶಿವ ಪಂಚಸ್ತವಕ್ಕೆ ಟೀಕೆಯನ್ನು ಬರೆದಿರುವ ಆಧುನಿಕ ವಿಶ್ವಾರಾಧ್ಯನನ್ನು ಕೆಲವರು ಪಂಚಾಚಾರ್ಯರಲ್ಲಿ ಒಬ್ಬನನ್ನಾಗಿಯೂ ಭಾವಿಸಿದ್ದಾರೆ. ಚತುರಾಚಾರ್ಯ ವ್ಯವಹಾರವೂ ಇರುವದರಿಂದ ವಿಶ್ವಾರಾಧ್ಯನು ಆಧುನಿಕನಾಗಿರಬಹುದೆಂದು ಮತ್ತೆ ಕೆಲವರು ಊಹಿಸುತ್ತಿರುವರು. ಇದು ಸರಿಯಲ್ಲ. ಪಂಚಕಲಶಾರ್ಚನೆಯಲ್ಲಿ ನಾಲ್ವರನ್ನು ಋತ್ವಿಜರನ್ನಾಗಿಯೂ ಒಬ್ಬನನ್ನು ಗುರುವನ್ನಾಗಿಯೂ ವಿನಿಯೋಗಿಸುವಾಗ ಸಾಮಾನ್ಯವಾಗಿ ಚತುರಾಚಾರ್ಯ ವ್ಯವಹಾರವನ್ನು ಮಾಡಿದರೂ ಇಲ್ಲಿ ಗುರು ಶಬ್ದದಿಂದ ವಿಶ್ವಾರಾಧ್ಯನೇ ಸೂಚಿತನಾಗುತ್ತಿದ್ದಾನೆಂಬುದನ್ನು ಸಂಪ್ರದಾಯಜ್ಞರಿಗೆ ಹೇಳಬೇಕಾಗಿಲ್ಲ. “ಕಾಶೀಪೀಠಾಚೇ ಪ್ರಾಚೀನತ್ವ” ಎಂಬ ನನ್ನ ಮರಾಠಿ ಪುಸ್ತಕದಲ್ಲಿ ಈ ವಿಷಯವು ವಿಪುಲವಾಗಿ ನಿರೂಪಿಸಲ್ಪಟ್ಟಿದೆ. ಶಿವಾಗಮ ಶಂಕರ ಸಂಹಿತಾದಿಗಳಲ್ಲಿ ಹೇಳಿದಂತೆಯೂ, ಪರಂಪರೆಯಾಗಿ ಬಂದ ಪ್ರಕಾರವಾಗಿಯೂ ಪಂಚಾಚಾರ್ಯರು ಬಸವಾದಿಗಳಿಗಿಂತಲೂ ಪೂರ್ವಿಕರೇ ಹೊರತು ಯಾವುದಾದರೂ ಒಂದು ನಾಮಸಾಮ್ಯವು ಕಂಡಕೂಡಲೆ ಅವರನ್ನು ಆಚಾರ್ಯಪಂಚಕದಲ್ಲಿ ಸೇರಿಸುವುದು ಸಯುಕ್ತಿಕವಲ್ಲ.

ರಾಯರು ತಿಳಿದಂತೆ ಹರಿಹರನ ಕಾಲವು ಉದ್ಭಟಕಾವ್ಯದ ಸೋಮರಾಜನ ಕಾಲದ ಮೇಲೆ ಆಧಾರಪಟ್ಟಿಲ್ಲ. ಅನೇಕಗಳಾದ ಪ್ರಮಾಣಗಳಿಂದ “ಹರಿಹರದೇವ” ಎಂಬ ಗ್ರಂಥದಲ್ಲಿ ಹರಿಹರನಕಾಲವು ಕ್ರಿ. ಶ. ೧೨೧೬ ಎಂದು ನಿರ್ಣಯಿಸಲಾಗಿದೆ. ೧೨೪೫ರಲ್ಲಿದ್ದ ಮಲ್ಲಿಕಾರ್ಜುನಕವಿ ತನ್ನ ಸೂಕ್ತಿಸುಧಾರ್ಣವದಲ್ಲಿ ಹರಿಹರನ ಗಿರಿಜಾ ಕಲ್ಯಾಣದ ಪದ್ಯಗಳನ್ನು ಉದಾಹರಿಸಿದ್ದಾನೆನ್ನುವುದನ್ನೂ ಡಾ|| ವೆಂಕಟಸುಬ್ಬಯ್ಯನವರ ವಾದವನ್ನು ವಿಮರ್ಶಿಸಿ ಸೋಮರಾಜನ “ಸಾಸಿರದಸೂಱುಂ ಸಂದ” ಎಂಬ

ಕವಿಚರಿತಕಾರರ ಪಾಠವೇ ಸರಿಯಾದುದೆಂಬುದನ್ನೂ ವಿಪುಲವಾಗಿ ಆ ಗ್ರಂಥದಲ್ಲಿ ನಿರೂಪಿಸಿದುದು ನಾರಾಯಣರಾಯರಿಗೆ ಗೊತ್ತಿಲ್ಲದಂತೆ ತೋರುತ್ತದೆ. ಆದರೂ ನಾನು ನೋಡಿದ ಒಂದು ವಿಷಯವನ್ನು ಬರೆಯುವುದು ಆವಶ್ಯಕವೆಂದು ಕಾಣಿಸುತ್ತದೆ. ಕಳೆದ ೧೯೩೨ರ ಸುಮಾರಕ್ಕೆ ರಾಣಿಬೆನ್ನೂರು ಪ್ರಾಂತದಿಂದ ಮುದೇನೂರು ಹಿರಿಯಮಠದ ಶ್ರೀ ವಾಗೀಶಶಿವಾಚಾರ್ಯ ಸ್ವಾಮಿಗಳವರು ಕಾಶಿಗೆ ತಂದಿದ್ದ ಸೋಮರಾಜನ ಉದ್ಭಟಕಾವ್ಯದ ತಾಳದೋಲೆಯ ಪ್ರತಿಯಲ್ಲಿ "ಸಾಸಿರದನೂಱುಂ ಸಂದ ನಾಲ್ವತ್ತುನಾಲ್ಕನೆಯಾ" (ಶಾ. ಶ. ೧೧೪೪) ಎಂಬ ಪಾಠವನ್ನೇ ನಾನು ಸ್ಪಷ್ಟವಾಗಿ ನೋಡಿದ್ದೇನೆ. ಪುನಃ ಆ ಪ್ರತಿಯಲ್ಲಿಯ ಓಲೆಯನ್ನು ಸಪ್ರತಿಬಿಂಬವಾಗಿ (ಫೋಟೋ ಸಹಿತ) ಮುಂದೆ ಪ್ರಕಟಿಸಲುದ್ಯುಕ್ತನಾಗಿರುವೆನು. ಇನ್ನು ಚಿತ್ರಭಾನು ಸಂವತ್ಸರವು ಶಾ. ೧೧೪೪ರಲ್ಲಿಯೇ ಆಗುತ್ತಿರುವದರಿಂದ 'ಸಂದ' ಎಂಬುದನ್ನು ಸರಿಮಾಡುವುದು ಹೇಗೆ ಎಂದು ಆಕ್ಷೇಪವುಂಟು. ಸೋಮರಾಜನ ಪಾಠವು ಶಾ. ಶ. ೧೪೪೪ರ ಎಂದು ಅರ್ಥಮಾಡಿದಾಗಲೂ ಈ ಆಕ್ಷೇಪವು ತಪ್ಪುವುದಿಲ್ಲ. 'ಸಂದ'ಕ್ಕೆ 'ಹೋದ' ಎಂತಲೇ ಸಹಜವಾಗಿ ಅರ್ಥವಾಗುತ್ತಿದ್ದರೂ ಶಾ. ೧೧೪೫ರಲ್ಲಿ ಚಿತ್ರಭಾನು ಇಲ್ಲದಿರುವದರಿಂದ ಶಾ. ೧೧೪೩ ಸಂವತ್ಸರಗಳು ಕಳೆದು (ಸಂದ) ಶಾ. ೧೧೪೪ನೆಯ ವರ್ಷಾರಂಭವೆಂಬುದನ್ನೇ ಗ್ರಹಿಸಬೇಕಾಗುವುದು. ಕೆಲವು ಶಾಸನಾದಿಗಳಲ್ಲಿ ಗತವರ್ಷಗಳೂ ವರ್ತಮಾನ ವರ್ಷಗಳೂ ಹೇಳಲ್ಪಟ್ಟಿರುವದರಿಂದ ಈ ವಿಧವಾದ ಒಂದು ವರ್ಷದ ತಾರತಮ್ಯವನ್ನು ಸ್ವೀಕರಿಸುವುದು ಅನುಚಿತವೇನೂ ಅಲ್ಲ. "ನೂಱುಂ ಸಂದ" "ನಾನೂಱ್ ಸಂದ" ಎಂಬ ಪ್ರಯೋಗಗಳ ಶುದ್ಧಾಶುದ್ಧತೆ ಹೇಗಿದ್ದರೂ ಸೋಮರಾಜನ ಪ್ರಯೋಗವು ಇದ್ದಕ್ಕಿದ್ದ ಹಾಗೆ ಗ್ರಹಿಸಲ್ಪಡಬೇಕೆಂಬ ಅಭಿಪ್ರಾಯವನ್ನು ನಾನು ಸಮರ್ಥಿಸುತ್ತೇನೆ.

ಪಾಲ್ಕುರಿಕಿ ಸೋಮನಾಥನ ಕಾಲವೂ ಸೋಮರಾಜನ ಹೇಳಿಕೆಯನ್ನವಲಂಬಿಸಿಲ್ಲ. ಪಿಡುಪರ್ತಿ ಸೋಮನಾಥನು ಹೇಳಿದಹಾಗೆ ಓರುಗಲ್ಲಿನ ಮೊದಲನೆಯ ಪ್ರತಾಪರುದ್ರನ ಕಾಲದಲ್ಲಿ ಅಂದರೆ ಕ್ರಿ. ಶ. ೧೧೯೦ರಲ್ಲಿಯೇ ಪಾಲ್ಕುರಿಕಿ ಸೋಮನಾಥನು ಇದ್ದನೆಂಬುದನ್ನು ಗ್ರಹಿಸುವದಕ್ಕೆ ಬಾಧಕಪ್ರಮಾಣಗಳೇನೂ ಇಲ್ಲ. ಆಂಧ್ರ ಹಿಸ್ಟಾರಿಕಲ್ ಸೊಸೈಟಿಯವರ "ಕಾಕತೀಯ ಸಂಚಿಕೆ"ಯಲ್ಲಿ ಹೀಗೆಯೇ ಸೋಮನಾಥನ ಕಾಲವು ನಿರೂಪಿಸಲ್ಪಟ್ಟಿದೆ. ಮತ್ತೊಂದು ವಿಶೇಷವೂ ಇದೆ. ಪಾಲ್ಕುರಿಕಿ ಸೋಮನಾಥನು ಆಂಧ್ರದೇಶದಲ್ಲಿಯೂ ಹರಿಹರಕವಿಯು ಕರ್ಣಾಟಕ ದೇಶದಲ್ಲಿಯೂ ದೂರಸ್ಥರಾಗಿರುವದರಿಂದಲೂ ಸಮಕಾಲಿಕರಾದುದರಿಂದಲೂ ತಮ್ಮತಮ್ಮ ಬಸವಚರಿತ್ರೆಗಳಲ್ಲಿ ಪರಸ್ಪರವಾಗಿ ನಾಮೋಲ್ಲೇಖನೆಮಾಡಿಲ್ಲ.

ಆದುದರಿಂದಲೇ ಉಭಯರ ಗ್ರಂಥಗಳಲ್ಲಿ ಬಸವನ ಕಥಾಂಶಗಳ ಬಗ್ಗೆ ವಿರೋಧವಿದೆ. ರಾಯರು ಹೇಳಿದಂತೆ ಸೋಮನಾಥನು ೧೩ನೆಯ ಶತಮಾನದ ಕೊನೆಯಲ್ಲಿದ್ದರೆ ಹರಿಹರನ ಬಸವರಗಳೆಯನ್ನು ಅವಶ್ಯವಾಗಿ ಅವಲೋಕಿಸಿ ಆತನ ನಾಮೋಲ್ಲೇಖ ವನ್ನು ತನ್ನ ಬಸವಪುರಾಣದಲ್ಲಿ ಮಾಡದೇ ಬಿಡುತ್ತಿರಲಿಲ್ಲ. ಕಾರಣವೇನೆಂದರೆ ಬಸವೇ ಶ್ವರನ ಚರಿತ್ರೆಯ ಬಗ್ಗೆ ಅನೇಕ ಅಂಶಗಳನ್ನು ಸಂಗ್ರಹಿಸುವುದಕ್ಕೋಸ್ಕರ ಸೋಮ ನಾಥನು ಅವಶ್ಯವಾಗಿ ಪ್ರಯತ್ನಪಟ್ಟಿರಬೇಕು. ಎಲ್ಲಿಯೂ ಕೃತಿರೂಪದಿಂದ ಆಗ ಸೋಮನಾಥನಿಗೆ ಸಿಕ್ಕಿಲ್ಲ. ಆದುದರಿಂದಲೇ "ಶಿವಭಕ್ತರ ಹೇಳಿಕೆಯನ್ನನುಸರಿಸಿ ಇದನ್ನು ರಚಿಸುತ್ತಿರುವೆ"ನೆಂದು ಬಸವಪುರಾಣದಲ್ಲಿ ಸೋಮನಾಥನು ಸೂಚಿಸಿ ದ್ದಾನೆ. ಸೋಮನಾಥನು ಬಸವನ ಕಾಲಕ್ಕೆ ಅಂದರೆ ಕ್ರಿ. ಶ. ೧೧೬೮ರ ಪ್ರಾಂತದಲ್ಲಿ ಹುಟ್ಟಿ ೧೧೯೦ರ ಪ್ರಾಂತದಲ್ಲಿ ಪಂಡಿತಾರಾಧ್ಯನ ಶಿಷ್ಯರಿಂದಲೂ ವೀರಶೈವ ಭಕ್ತ ರಿಂದಲೂ ಕೇಳಿದ ಕಥಾಂಶಗಳನ್ನು ಸಂಗ್ರಹಿಸಿ ಬಸವಪುರಾಣವನ್ನು ರಚಿಸಿ ಆಂಧ್ರ ಕರ್ಣಾಟಕದೇಶಗಳಲ್ಲಿ ಪ್ರಸಿದ್ಧಿಯನ್ನು ಹೊಂದಿ ಪಂಡಿತಾರಾಧ್ಯಚರಿತ್ರಾದಿ ಪ್ರೌಢ ಗ್ರಂಥಗಳನ್ನು ನಿರ್ಮಿಸಿ ಸುಮಾರು ೧೨೨೪ ಸಂವತ್ಸರದ ಸಮೀಪದ ವರೆಗೂ ಜೀವಿಸಿರಬಹುದು. ಬಸವನ ಅನಂತರ ಎರಡು ಶತಾಬ್ದಗಳು ಕಳೆದಮೇಲೆ ಬಸವ ಪುರಾಣದ ರಚನೆಯಾಗಿದ್ದರೆ ಅದರಲ್ಲಿ ಅಂತಹ ಸ್ಫೂರ್ತಿಯೇ ಬರುತ್ತಿರಲಿಲ್ಲ. ಅಂತಹ ಸುಪ್ರಸಿದ್ಧನಾದ ಬಸವನ ಕಾಲದಲ್ಲಿ ಕವಿಗಳು ಯಾರೂ ಇರಲಿಲ್ಲ; ಹದಿನಾಲ್ಕನೆಯ ಶತಮಾನದವರೆಗೂ ಆತನ ಚರಿತ್ರೆ ಜಗತ್ತಿಗೆ ಗೊತ್ತಿಲ್ಲವೆಂದು ಹೇಳಿದರೆ ಅಸಂಗತ ವಾಗುವದಷ್ಟೆ! ಬಸವನ ಕಾಲಕ್ಕೆ ಸಮೀಪಸ್ಥರಾದ ಹರಿಹರನೂ ಸೋಮನಾಥನೂ ತಮ್ಮ ತಮ್ಮ ಮಾತೃಭಾಷೆಯಲ್ಲಿ ಬಸವಚರಿತ್ರೆಗಳನ್ನು ರಚಿಸಿದ್ದಾರೆಂತಲೂ ಆಮೇಲೆ ಇವನ್ನನುಸರಿಸಿ ಇತರ ಪುರಾಣಗಳು ಹುಟ್ಟಿದವೆಂದೂ ಭಾವಿಸುವುದೇ ಸಮಂಜಸ ವಾಗಿದೆ. ಆದುದರಿಂದ ಸೋಮನಾಥನು ೧೩೦೦ರ ಪ್ರಾಂತದಲ್ಲಿದ್ದನೆಂದು ರಾಯರು ಕಲ್ಪಿಸಿದ ಕಾಲವು ಗಾಳಿಯ ಮಾತೇ ಹೊರತು ಅದಕ್ಕೆ ಆಧಾರವಿಲ್ಲ. ಹರಿಹರ ಕೆರೆಯಪದ್ಮರಸರು ಮಲ್ಲಿಕಾರ್ಜುನಕವಿಯ (ಕ್ರಿ. ಶ. ೧೨೪೫) ಸೂಕ್ತಿಸುಧಾರ್ಣವ ದಲ್ಲಿ ಹೆಸರ್ಗೊಳ್ಳಲ್ಪಟ್ಟಿದ್ದಾರೆಂಬ ವಿಷಯವು ರಾಯರಿಗೆ ಗೊತ್ತಿಲ್ಲದೆ ಎಲ್ಲರನ್ನೂ ಹದಿಮೂರನೆಯ ಶತಾಬ್ದಿಯ ಅಂತ್ಯದಲ್ಲಿ ಇರಿಸಬೇಕೆಂದು ಪ್ರಯತ್ನಿಸುತ್ತಿದ್ದಾರೆ.

ರಾಯರಿಗೆ 'ಶಿವಾನುಭವ'ದಲ್ಲಿ ಪ್ರಕಟಿತವಾದ ಬಸವೇಶ್ವರನ ಅರ್ಜುನವಾಡ ಶಿಲಾಶಾಸನದ ವಿಷಯವು ಗೊತ್ತಿಲ್ಲದುದರಿಂದ ಬಸವನು ನಿಜವಾಗಿ ಇದ್ದನೋ ಇಲ್ಲವೋ ಎಂದು ಏನೇನೋ ಬರೆದಿದ್ದಾರೆ. ಬಸವನು ಬಿಜ್ಜಳನ ಹತ್ತಿರ ಬಹಳ ಸ್ವಲ್ಪಕಾಲ ಅಂದರೆ ಐದಾರು ವರ್ಷಗಳು ಮಾತ್ರ ಇರುವದರಿಂದಲೂ ಅದು

ಕ್ರಾಂತಿಯ ಕಾಲವಾದುದರಿಂದಲೂ ಬಿಜ್ಜಳನ ಶಾಸನಗಳೆಲ್ಲವೂ ಬಸವನ ಮಂತ್ರಿತ್ವದ ಕಾಲಕ್ಕಿಂತ ಪೂರ್ವಕಾಲದವಾದುದರಿಂದಲೂ ಬಿಜ್ಜಳನ ಶಾಸನಗಳಲ್ಲಿ ಬಸವನು ಹೇಳಲ್ಪಟ್ಟಿಲ್ಲ. ಈ ವಿಷಯದಲ್ಲಿಯ ರಾಯರ ಬರಹಗಳು ಸಪ್ರಯೋಜನವಾಗಿಲ್ಲ. ಇನ್ನೊಂದು ಅದ್ಭುತವಿಷಯವೇನೆಂದರೆ ಅಬ್ಲೂರಿನ ಏಕಾಂತರಾಮಯ್ಯನ ಶಿಲಾಶಾಸನದಲ್ಲಿ ಬಸವನ ಹೆಸರು ಬಂದಿದೆಯೆಂದು ರಾಯರು ಜ್ಯೋತಿಷ ಹೇಳುತ್ತಿರುವರು. ಬಸವನ ಹೆಸರು ಬಂದಿಲ್ಲವೆಂಬುದನ್ನು ಸತ್ಯವಾಗಿ ರಾಯರು ಶಾಸನ ನೋಡಿದಾಗ ತಿಳಿಯಬಹುದು. ಇನ್ನು ಮುನವಳ್ಳಿಶಾಸನದ ಬಸವನೇ ಕಲ್ಯಾಣದ ಬಸವನೆಂದು ಅವರು ಪ್ರತಿಪಾದಿಸಹತ್ತಿದ್ದಾರೆಯೇ ಹೊರತು ಆ ಶಾಸನವನ್ನಾದರೂ ರಾಯರು ಸರಿಯಾಗಿ ಅರ್ಥಮಾಡಿಲ್ಲ. ೧೨೬೦ರಲ್ಲಿ ಹುಟ್ಟಿದ ಅರ್ಜುನವಾಡದ ಶಿಲಾಶಾಸನವು *Epigraphia Indica*, Vol. XXI, p. 9ರಲ್ಲಿಯೂ ಮುದ್ರಿತವಾಗಿದೆ. ಅದರಿಂದ ಬಸವನು ಬಾಗೆವಾಡಿಯವನೆಂತಲೂ ಮಾದಿರಾಜನ ಮಗನೆಂತಲೂ ಸಂಗಮೇಶ್ವರನ ಶಿಷ್ಯನೆಂತಲೂ ಸ್ಪಷ್ಟವಾಗಿ ಗೊತ್ತಾಗಿ ಬಿಡುವುದು. ಅರ್ಜುನವಾಡದ ಶಾಸನವನ್ನು ನೋಡದ ಡಾ|| ಫ್ಲೀಟುಸಾಹೇಬರು *Epigraphia Indica*, Vol. V ನಲ್ಲಿ ಮನಗೋಳಿ ಶಾಸನದ ಬಗ್ಗೆ ಬರೆದಿರುವ ಅಸಂಗತವಾಕ್ಯಗಳು ಉಂಟು. ಅದೇ ಪುಸ್ತಕದಲ್ಲಿಯ ಅಬ್ಲೂರು ಶಾಸನದ ವಿವರಣದಲ್ಲೂ ಫ್ಲೀಟ್‌ರವರು ಬರೆದ ವಿಷಯವು ಸಂಗತವಾಗಿಲ್ಲ. ಇದನ್ನೇ ಬಹಳ ಪ್ರಮಾಣವನ್ನಾಗಿ ನಂಬಿ ಮೂಲಶಾಸನಗಳನ್ನು ನೋಡದೆ, ಡಾ|| ರಾಯರೂ ಅಡ್ಡಹಾದಿ ಹಿಡಿದಿರುವರು. ಪ್ರಬುದ್ಧ ಕರ್ಣಾಟಕ ಲೇಖದಲ್ಲಿಯೂ ತಮ್ಮ ಪಂಡಿತಾರಾಧ್ಯ ಚರಿತ್ರೆಯ ಪೀಠಿಕೆಯಲ್ಲಿಯೂ ಮನಗೋಳಿ ಬಸವನನ್ನು ಬಾಗೆವಾಡಿ ಬಸವನನ್ನಾಗಿ ಹೇಳುತ್ತ ಹೋಗಿದ್ದಾರೆ. ಇದರ ಬಗ್ಗೆ ಸ್ವಲ್ಪ ಸರಿಯಾದ ವಿವರಣೆಯನ್ನು ಮಾಡುವುದು ಆವಶ್ಯಕವೆಂದು ತೋರುತ್ತದೆ.

ಕ್ರಿ. ಶ. ೯೭೩-೯೯೭ ರಲ್ಲಿದ್ದ ದ್ವಿತೀಯ ತೈಲಪದೇವನಿಂದ ಮನಗೋಳಿ (ಮಣಿಂಗವಲ್ಲಿ)ಯ ಅಗ್ರಹಾರವನ್ನು ಪಡೆದ ಹಾರೀತಗೋತ್ರದ ಮಾಧವನು ಬಸವೇಶ್ವರನ ತಂದೆಯಾದ ಮಾದಿರಾಜನೆಂದು ಇವರು ಭ್ರಮೆಗೊಳಗಾಗಿದ್ದಾರೆ. ಹಾಗಾದರೆ ಹತ್ತನೆಯ ಶತಮಾನದಲ್ಲಿಯೇ ಬಸವನು ಹುಟ್ಟಿರಬೇಕಾಗುವುದು. ಇದರಿಂದಾಗುವ ಚಾರಿತ್ರಕಹತ್ಯೆಯನ್ನು ಇವರು ಗಮನಿಸಿದಂತೆ ಕಾಣುವುದಿಲ್ಲ. ಮತ್ತು ಕಾಶ್ಯಪಗೋತ್ರದ ಚಂಡಿರಾಜಪುತ್ರ ಬಸವರಸಯ್ಯನನ್ನೂ ಬಸವೇಶ್ವರನನ್ನಾಗಿ ಹೇಳುವ ಫ್ಲೀಟರ ಸಿದ್ಧಾಂತವು ಎಷ್ಟು ಅವಿಚಾರಮೂಲಕವಾಗಿದೆಯೆಂಬುದು ಸ್ಪಷ್ಟವೇ ಸರಿ. ಮನಗೋಳಿಯಲ್ಲಿಯ ಕಲಿದೇವೇಶ್ವರನ ಆಲಯವು ೨ನೆಯ ಜಗದೇಕಮಲ್ಲನಿಗಿಂತಲೂ (ಕ್ರಿ. ಶ. ೧೧೪೨) ಪೂರ್ವದಲ್ಲಿಯೇ ಇದ್ದಂತೆಯೂ, ಆ ಆಲಯ

ವನ್ನು ನಿರ್ಮಿಸಿದ ಬಸವರಸಯ್ಯನು ಅವನಿಗಿಂತ ಹಿಂದಿನವನೆಂತಲೂ ಶಾಸನದ ಭಾಷೆಯನ್ನು ಸರಿಯಾಗಿ ಅರ್ಥಮಾಡಿಕೊಂಡರೆ ತಿಳಿಯುವದು. ಅಂದರೆ ಅಲ್ಲಿಯ ಬಸವರಸಯ್ಯನು ಜಗದೇಕಮಲ್ಲನ ಸಮಕಾಲಿಕನಲ್ಲ. ಬಸವರಸಯ್ಯನು ಆಲಯವನ್ನು ನಿರ್ಮಿಸಿದ ೧೪೫ ವರ್ಷಗಳ ಅನಂತರದಲ್ಲಿ ಜಗದೇಕಮಲ್ಲನೂ ಬಂದು ಮಸಗೋಳಿಯ ಮಾದಿರಾಜಾದಿಗಳ ಪ್ರಾರ್ಥನೆಯಂತೆ ೧೧೪೨ರಲ್ಲಿ ಆಲಯಕ್ಕಾಗಿ ಮತ್ತೊಂದು ದಾನವನ್ನು ಕಾಲಾಮುಖ ಸದ್ಯೋಜಾತಪಂಡಿತನಿಗೆ ದಾನಮಾಡಿದ್ದಾನೆ. ಈ ಬಸವರಸಯ್ಯನಿಗೂ ೨ನೆಯ ಜಗದೇಕಮಲ್ಲನಿಗೂ ಯಾವ ಸಂಬಂಧವೂ ಸಮಕಾಲಿಕತ್ವವೂ ಇಲ್ಲ. ಈ ಉಭಯರಿಗೂ ಬಾಗೆವಾಡಿಯ ಬಸವನಿಗೂ ಮೊದಲೇ ಸಂಬಂಧವಿಲ್ಲ. ಬಸವೇಶ್ವರನಿಗಿಂತಲೂ ಪೂರ್ವದಲ್ಲಿ “ಬಸವ”ಶಬ್ದವು ಪ್ರಚಾರವಾಗಿದ್ದುದನ್ನು ತಿಳಿಯದೆ ಆ ಹೆಸರಿನವರನ್ನೆಲ್ಲ ಬಾಗೆವಾಡಿ ಬಸವನಿಗೆ ಗಂಟುಹಾಕಲು ಹವಣಿಸುವದರಲ್ಲಿ ತಥ್ಯವೇನೂ ಇಲ್ಲ. ಬಸವೇಶ್ವರನ ವಂಶದ ಗೋತ್ರಾದಿಗಳು ಎಲ್ಲಿಯೂ ಹೇಳಲ್ಪಡದಿರುವದರಿಂದ ರಾಯರು ಮಾಡಿದ ಗೋತ್ರಾನ್ವೇಷಣವೂ ನಿಷ್ಫಲವಾಗಿದೆ.

ಶ್ರೀ ರಾಯರು ಬಳ್ಳಾರಿಜಿಲ್ಲಾ ಹಡಗಲಿ ತಾಲ್ಲೂಕು ಬರುವಾಯಿ ಗ್ರಾಮದ ಬೆಣಕಪ್ಪನ ಗುಡಿಯಲ್ಲಿದ್ದ ಶಾಸನವೊಂದನ್ನು ಸಮನ್ವಯ ಮಾಡಲು ಹೊರಟಿದ್ದಾರೆ. (ಕ್ರಿ. ಶ. ೧೨೦೩ ರಲ್ಲಿ ಹುಟ್ಟಿದ ಈ ಶಾಸನವು *South Indian Inscriptions*, Vol. IX, Part I. ಪುಸ್ತಕದಲ್ಲಿ ೩೩೪ನೆಯ ಶಾಸನ.) ಅದರಲ್ಲಿರುವ ಮುಖ್ಯಾಂಶವು ಹೀಗಿದೆ—

“ ಸ್ವಸ್ತಿ ಶ್ರೀಮತು ಯಾದವನಾರಾಯಣಂ ಪ್ರತಾಪಚಕ್ರವರ್ತಿ ಹೊಯ್ಸಳ ವೀರಬಲ್ಲಾಳದೇವರಾಜ್ಯಸಮುದ್ಧರ ಬಸವದಂಡನಾಯಕ ಗುಣಪ್ರಭಾವವೆಂತೆಂದೊಡೆ—

ನುಡಿವಂ ಸತ್ಯವಚೋಕ್ತಿಯಂ, ಸಕಲಧರ್ಮವ್ಯಾಪ್ತಿಯಿಂದರ್ಥಮಂ
ಪಡೆವಂ, ವಿಪ್ರಸುರಾದಿಶಿಷ್ಟಜನತಾಸಂತುಷ್ಟಿಯಾಗಲ್ಕೆ ತಾ
ಕೊಡುವಂ, ದ್ರವ್ಯಮನೀಗುಣಾಶ್ರಯಮುಮಂ ಲೋಕಂಬ ಬಾಪ್ಪೆಂಬಿನಂ
ಪಡೆದಂ, ಸದ್ಗುಣಿ ದಂಡನಾಥಬಸವಂ ಪ್ರಖ್ಯಾತಿಯಂ ಕೀರ್ತಿಯಂ

ಕಲಿಯಮೃತದಂಡನಾಥರ ಲಲಿತಾತ್ಮಜನೆಂದೊಡೊಪ್ಪುಗುಂ ಕವಿತನಮುಂ |
ಸಲೆ ಸತ್ಯಾಮೃತವಾಕ್ಯಂ ಕುಲತಿಲಕಂ ಬಸವದಂಡನಾಥಾಧಿಪನೊಳ್ ||

ಶ್ರೀಮದೀಶ್ವರಸಂವತ್ಸರ ಶ್ರಾವಣ ಬಹುಳ ಅಮಾವಾಸ್ಯಾ ಶುಕ್ರವಾರ ಸೂರ್ಯಗ್ರಹಣದಂದು ಶ್ರೀವಿನಾಯಕದೇವರ್ಗೆ ರಣಧವಳ ಬಸವಚಮೂಪಂ ಧಾರಾಪೂರ್ವಕಂ ಮಾಡಿಕೊಟ್ಟು. . . . ”—

ಇದರಲ್ಲಿಯ ಬಸವದಂಡನಾಥನು ಬಾಗೆವಾಡಿಯ ಬಸವನೆಂದು ಹೇಳುವುದು ತುಂಬಾ ಪರಿಹಾಸದ ಮಾತಾಗಿದೆ. ಕಲಿಯಮ್ಮೃತದಂಡನಾಥನ ಮಗನೂ ವೀರ ಬಲ್ಲಾಳನ ಮಂತ್ರಿಯೂ ರಣಧವಳ ಬಿರುದಾಂಕಿತನೂ ಆದ ಬರುವಾಯಿ ಶಾಸನದ ಬಸವನು ಎಂದೆಂದಿಗೂ ಕಲ್ಯಾಣದ ಬಸವನಾಗಲಾರ. ಮತ್ತೊಂದು ಆಶ್ಚರ್ಯ ಕರವಾದ ವಿಷಯವೇನೆಂದರೆ ಮನಗೋಳಿಯ ಬಸವನನ್ನೂ ಬರುವಾಯಿ ಬಸವನನ್ನೂ ಒಂದುಮಾಡಿ ಕಲ್ಯಾಣಬಸವನ ರೂಪವನ್ನು ತಯಾರ್ಮಾಡಲು ರಾಯರು ಯತ್ನಿ ಸಿದ್ದಾರೆ. ಅದಕ್ಕಾಗಿ ಬಿಜ್ಜಳನು ಮೃತಿಪಟ್ಟನಂತರ ಹೊಯ್ಸಳ ಬಲ್ಲಾಳನ ಹತ್ತಿರಕ್ಕೆ ಬಂದು ಬಿಜ್ಜಳನ ವಂಶವನ್ನು ಸಂಪೂರ್ಣವಾಗಿ ನಾಶಗೊಳಿಸಲು ಬಸವೇಶ್ವರನು ಹೆಣಗಾಡಿದ್ದಾನೆಂದು ರಾಯರು ಬರೆದಿದ್ದಾರೆ. ಮಹಾಪುರುಷರ ಮೇಲೆ ಹೇಯವಾದ ಅಪರಾಧಗಳನ್ನು ಹೊರಿಸುವ ಸಾಹಸವಿದೆಂದು ನಾನು ಹೇಳುತ್ತೇನೆ. ಈ ಮಾತು ಗಳನ್ನೇ ನಂಬಿದರೆ ಬಸವೇಶ್ವರನು ಎನೆಯ ತೈಲಪನ ಮೊದಲ್ಗೊಂಡು ಹೊಯ್ಸಳದ ವೀರಬಲ್ಲಾಳನ ವರೆಗೆ ಅಂದರೆ ೧೨೦ ವರ್ಷಗಳ ಕಾಲ ಬಾಳಿದನೆಂದು ಹೇಳ ಬೇಕಾಗುವುದು. ಈ ಅಸಂಬದ್ಧ ವಿಷಯಗಳನ್ನು ಉದಾಸೀನಮಾಡಿ ಪಾಲ್ಕುರಿಕಿ ಸೋಮನಾಥನು ಹೇಳಿದಂತೆಯೂ, ಸಂಪ್ರದಾಯದಲ್ಲಿದ್ದಂತೆಯೂ ಬಸವೇಶ್ವರನು ಯೌವನದಲ್ಲಿ (೩೦, ೩೫ ವರ್ಷಗಳ ವಯಸ್ಸಿನಲ್ಲಿ) ಬಿಜ್ಜಳನೊಡನೆಯೇ ಶಿವೈಕ್ಯ ವಾಗಿರುವನೆಂಬುದೇ ಸರ್ವಸಮ್ಮತವಾಗಿದೆ. "ಬಸವೇಶ್ವರನ ಬಗ್ಗೆ ಶಾಸನ ಸಾಮುಗ್ರಿ" ಎಂಬ ಲೇಖ (ವಿಭೂತಿ ೨-೪) ದಲ್ಲಿ ಇದನ್ನು ವಿಸ್ತರಿಸಿದೆ.

ಪಾಲ್ಕುರಿಕಿ ಸೋಮನಾಥನು "ಮೈಸೂರು ರಾಷ್ಟ್ರದ ತುಮಕೂರು ಜಿಲ್ಲಾ ಪಾಲ್ಕುರಿಕೆಯಲ್ಲಿ ಹುಟ್ಟಿದವ"ನೆಂಬ ಒಂದು ನವೀನ ಇತಿಹಾಸವನ್ನು ಅವರು ಹೇಳಿದ್ದಾರೆ. ಇದು ಅಸತ್ಯವಾದ ವಿಷಯವೆಂದು ನಾನು ಧಾರಾಳವಾಗಿ ಹೇಳಲಿಚ್ಛಿಸು ತ್ತೇನೆ. ಒಂದು ನಾಮಸಾಮ್ಯವು ಸಿಕ್ಕಿದ ಕೂಡಲೆ ನಿಜಾಂದೇಶದ ಸುಪ್ರಸಿದ್ಧವಾದ ಓರುಗಲ್ಲಿನ ಹತ್ತರ ಇರುವ "ಪಾಲ್ಕುರಿಕಿ"ಯನ್ನು ತುಮಕೂರಿನ "ಹಾಲ್ಕುರಿಕೆ" ಯನ್ನಾಗಿ ಹೇಳುವುದು ತುಂಬಾ ಅನ್ಯಾಯ. ಈ ಎರಡು ಗ್ರಾಮಗಳನ್ನೂ ರಾಯರು ನೋಡಿದಂತಿಲ್ಲ. ನಾನು ೧೯೨೪ರಲ್ಲಿ ತುಮಕೂರು ತಾಲ್ಲೂಕಿನ ಹಾಲ್ಕುರಿಕೆಯನ್ನೂ ನಾಲ್ಕೈದು ಸಲ ಓರುಗಲ್ಲಿನ ಹತ್ತಿರ ಇರುವ ಪಾಲ್ಕುರಿಕಿಯನ್ನೂ ನೋಡಿದ್ದೇನೆ. ರಾಯರು ಹೇಳಿದಂತೆ "ಪಾಲಗುರ್ತಿ"ಯೆಂಬ ವ್ಯವಹಾರವು ಅದಕ್ಕೆ ಇಲ್ಲ. ಪ್ರಾಚೀನ ಕಾಲದಿಂದ ಈ ವರೆಗೂ ಅದಕ್ಕೆ 'ಪಾಲ್ಕುರಿಕಿ' ಎಂಬುದೇ ಶಿಷ್ಟವ್ಯವಹಾರವು. "ಪಾಲಕುರ್ತಿ" ಎಂಬ ಗ್ರಾಮ್ಯಜನರ ವ್ಯವಹಾರವೂ ಈಗ ಉಂಟು. ಸೋಮೇಶ್ವರ ದೇವಾಲಯವೂ ಸೋಮನಾಥನ ಸಮಾಧಿಯೂ ಈ ಊರಲ್ಲಿ ಇದ್ದು ಈಗಲೂ

ಜಂಗಮಮಾಹೇಶ್ವರರ ಅಧೀನದಲ್ಲಿದೆ. ಪಾಲ್ಕುರಿಕಿ ಸೋಮನಾಥನ ಜ್ಞಾತಿಗಳಾಗಿ ತೋರುವ 'ಪಾಲಕುರಿಕಿ' ಎಂಬ ಮನೆಯ ಹೆಸರುಳ್ಳ ಮಾಹೇಶ್ವರರು, ವರಂಗಲ್ ಜಿಲ್ಲೆಯ ರಘುನಾಥಪಲ್ಲಿಯ ಹತ್ತಿರದಲ್ಲೂ ಸಿಕಿಂದ್ರಾಬಾದಿನಲ್ಲೂ ಏಂಜಾಲದಲ್ಲೂ ಈಗಲೂ ಇದ್ದಾರೆ. ಸೋಮನಾಥನ ಶಿಷ್ಯರಾಗಿ ಕಾಣುವ "ಪಿಡುಪರ್ತಿ"ಯವರೂ, ಬೀಗರಾಗಿ ಕಾಣುವ "ವಿಭೂತಿ" "ಶಿವರಾತ್ರಿ"ಯವರೂ ಗುರುಗಳ ಸ್ಥಾನವಾದ "ಕಟ್ಟಕೂರೂ" ಇದೇ ಪ್ರಾಂತದಲ್ಲಿ ಒತ್ತಟ್ಟಿಗೇನೇ ಹತ್ತಿರ ಹತ್ತಿರ ಇವೆ. "ವರಂಗಲ್ಲಿನ ಪ್ರತಾಪರುದ್ರನು ಸೋಮನಾಥನ ಪುರಾಣವನ್ನು ಕೇಳಿದ್ದನು" ಎಂಬ ಪಿಡುಪರ್ತಿಕವಿಯ ಹೇಳಿಕೆಯೂ ಮೇಲಿನ ಅಂಶಗಳನ್ನು ಬಲಪಡಿಸುತ್ತದೆ. ಸೋಮನಾಥನ ಗ್ರಂಥಗಳೂ ಈ ದೇಶದಲ್ಲಿ ಬಹಳ ಪ್ರಚಾರವಾಗಿವೆ. ೧೫ ವರ್ಷಗಳ ಹಿಂದೆ ಈ ಪಾಲ್ಕುರಿಕಿಯನ್ನು ನೋಡಿ ಪರಿಶೀಲನೆಮಾಡಿದ ಸುಪ್ರಸಿದ್ಧರಾದ ಶ್ರೀ ಶೇಷಾದ್ರಿರಮಣಕವಿಗಳು ತಮ್ಮ "ನಿಜಾಂರಾಷ್ಟ್ರ ಪ್ರಶಂಸೆ" ಎಂಬ ತೆಲುಗು ಪುಸ್ತಕದಲ್ಲಿ ಹೀಗೆ ಬರೆದಿದ್ದಾರೆ—

"ಸೋಮನಾಥನು ಓರುಗಲ್ಲಿಗೆ ಮೂರುಗಾವದ ದೂರದಲ್ಲಿರುವ ಪಾಲ್ಕುರಿಕಿಯಲ್ಲಿ ಶಿವೈಕ್ಯನಾದನು. ಆ ಪ್ರದೇಶದಲ್ಲಿ ಮಠವೊಂದು ದೇವಾಲಯದಂತೆ ಕಟ್ಟಲ್ಪಟ್ಟಿದೆ. ಅಲ್ಲೊಂದು ಶಿವಲಿಂಗವನ್ನು ಪ್ರತಿಷ್ಠಿಸಿ ಈಗಲೂ ಜಂಗಮರು ಪೂಜಿಸುತ್ತಿರುತ್ತಾರೆ. ಕವಿವರ್ಯನು ಶಿವೈಕ್ಯವಾದ ಸ್ಥಳದಲ್ಲಿ ದೊಡ್ಡ ಉತ್ಸವವು ಜರುಗಿಸಲ್ಪಡುತ್ತಿದೆ. ಕವಿಚರಿತ್ರೆಯನ್ನು ಗ್ರಂಥಸ್ಥ ಮಾಡಲಿಚ್ಛೆಯಾದರೆ ಇಲ್ಲಿ ಬಹಳ ಚರಿತ್ರೆ ರಹಸ್ಯಗಳು ಲಭಿಸುವುವು. ಸೋಮನಾಥನ ಗ್ರಂಥಗಳು ಕೂಡ ಇಲ್ಲಿ ಬಹಳ ವ್ಯಾಪಕವಾಗಿವೆ"—(೯೫ನೆಯ ಪುಟ).

ಇತ್ಯಾದಿ ಪ್ರಮಾಣಗಳಿಂದ ಪಾಲ್ಕುರಿಕಿ ಸೋಮನಾಥ ಕವಿಯ ಜನ್ಮನಿವಾಸ ಭೂಮಿಯು ಓರಂಗಲ್ಲಿನ ಹತ್ತಿರ ಇರುವ ಆಂಧ್ರದೇಶದ "ಪಾಲಕುರಿಕಿ"ಯೇ ಎಂಬುದು ಸಿದ್ಧಾಂತವೇ ಸರಿ. 'ಪಾಲ್ಕುರಿಕಿ' ಎಂಬ ಶಬ್ದವು ಈಗಿನ ಪ್ರಾಂತವಿಭಾಗವನ್ನನುಸರಿಸಿ ಕನ್ನಡ ನುಡಿಯೆಂದು ರಾಯರ ಹೇಳಿಕೆಯಿದೆ. ಅದು ಪ್ರಾಚೀನಕಾಲದಲ್ಲಿ ಯಾವ ಭಾಷೆಗೆ ಸೇರಿರುವುದೆಂಬುದನ್ನು ಹೇಳುವುದು ಸಾಧ್ಯವಿಲ್ಲ. ಅದು ಆಂಧ್ರ ಭಾಷೆಯದೇ ಏಕಾಗಬಾರದು? 'ಕುಱ್ಱು' ಎಂಬುದು ಔಪವಿಭಕ್ತಿಕವಾಗಿ "ಕುರಿಕಿ"ಯಾಗುತ್ತದೆ. ಅಂಗಲಕುರ್ರು = ಅಂಗಲಕುರಿಕಿ, ಮೋತುಕುರ್ರು = ಮೋತ್ಕುರಿಕಿ ಮೊದಲಾದ ಗ್ರಾಮದ ರೂಪಗಳು ಆಂಧ್ರದೇಶದಲ್ಲಿಯೂ ಉಂಟು. ತುಮಕೂರಿನ ಹಾಲ್ಕುರಿಕೆಯು ಸೋಮನಾಥಕವಿಯ ಯಾವ ಸ್ಮೃತಿಯಿಂದಲೂ ಕೂಡಿರುವದಿಲ್ಲ. ಪಿಡುಪರ್ತಿ, ವಿಭೂತಿ ಮುಂತಾದ ಉಪನಾಮಗಳುಳ್ಳ ಜಂಗಮರಾಗಲಿ

ಸೋಮನಾಥನ ಗ್ರಂಥಗಳಾಗಲಿ ಹಾಲ್ಕುರಿಕೆಯಲ್ಲಿಲ್ಲ. ಸೋಮನಾಥನ ಊರೆಂದು ಹೇಳುವ ಸಂಪ್ರದಾಯವೂ ಇಲ್ಲ. ಒಂದೆರಡು ತೆಲುಗು ಸೊಟ್ಟಪುಟ್ಟ ನುಡಿಗಳು ಆ ಊರಲ್ಲಿ ಕೆಲವರಿಗೆ ತಿಳಿದರೂ ಅದು ಶುದ್ಧ ಕನ್ನಡ ಪ್ರದೇಶವೇ ಆಗಿದೆ. ಪಾಲ್ಕುರಿಕಿ ಸೋಮನಾಥನು ಅಲ್ಲಿ ಹುಟ್ಟಿದ್ದರೆ ಅವನಿಗೆ ಕನ್ನಡದಲ್ಲಿಯೇ ದೊಡ್ಡ ಪಾಂಡಿತ್ಯವು ಸಹಜವಾಗಿ ಲಭಿಸಬೇಕಾಗಿದ್ದಿತು. ಅವನು ತನ್ನ ಬಸವಪುರಾಣವನ್ನು ಬಸವನ ಮತ್ತು ತನ್ನ ಮಾತೃಭಾಷೆಯಾದ ಕನ್ನಡದಲ್ಲಿಯೇ ರಚಿಸುತ್ತಿದ್ದನು. ಹಾಲ್ಕುರಿಕೆಯು ಪ್ರಾಚೀನಕಾಲದಿಂದ ಇದ್ದು ಸೋಮನಾಥನ ಭೂಮಿಯಾಗಿದ್ದರೆ ಅಪ್ರಸಿದ್ಧವಾಗಿರಲು ಕಾರಣಗಳಿಲ್ಲ. ಸೋಮನಾಥನು ಶುದ್ಧ ಆಂಧ್ರದೇಶ ಮಧ್ಯದಲ್ಲಿ ಹುಟ್ಟಿದನೆಂಬುದನ್ನು ಆತನ ತೆಲುಗು ಜಾಣ್ನುಡಿಯ ಬಿಗುವಿನಿಂದಲೇ ತಿಳಿಯಬಹುದು. ಬಸವಪುರಾಣದ ರಚನೆಮಾಡಿದಮೇಲೆ ಸೋಮನಾಥನಿಗೆ ಪ್ರಸಿದ್ಧಿಯುಂಟಾಗಿ ದೇಶದೇಶಾಂತರಗಳ ಸಂಚಾರದ ಮೂಲಕವಾಗಿ ಆತನಿಗೆ ತಮಿಳು, ಕನ್ನಡ, ಮರಾಠಿ ಭಾಷೆಗಳೂ ಬಂದಿರಬಹುದು. ಅಷ್ಟೇ ಹೊರತು ಕನ್ನಡಭಾಷೆಯಲ್ಲಿ ಸರಿಯಾದ ಪಾಂಡಿತ್ಯವಿತ್ತೆಂಬುದಕ್ಕೆ ನಿದರ್ಶನಗಳಿಲ್ಲ.

ವೀರಶೈವ ವಾಙ್ಮಯವು, ಸಂಸ್ಕೃತ ಆಂಧ್ರ ಕರ್ಣಾಟಕ ಮಹಾರಾಷ್ಟ್ರ ದ್ರವಿಡಭಾಷೆಗಳಲ್ಲಿ ಅನಂತವಾಗಿದೆ. ಅಚ್ಚಾದ ಸಾಮಗ್ರಿಯೇ ಎರಡೆತ್ತುಗಳ ಗಾಡಿಗೆ ಸರಿಹೋಗುವಷ್ಟಿದೆ. ೧೫-೨೦ ವರ್ಷಗಳಿಂದ ವೀರಶೈವರ ಪತ್ರಿಕಾ ಪ್ರಪಂಚವೂ ಆರಂಭವಾಗಿದೆ. ಅನೇಕ ವಿಮರ್ಶೆಗಳೂ ಬಂದಿವೆ. ಬಹಳ ಪ್ರಾಚೀನ ಕಾಲದಿಂದಲೂ ಪ್ರಚಾರದಲ್ಲಿರುವ ವೀರಶೈವ ವಾಙ್ಮಯವು ೧೪ನೆಯ ಶತಮಾನದಲ್ಲಿ ಹುಟ್ಟಿತೆಂಬುದು ಸಾಹಸವೇ ಸರಿ. ಶ್ರೀ ಹಯವದನರಾಯರ ಶ್ರೀಕರಭಾಷ್ಯದ ಇಂಗ್ಲೀಷು ಪೀಠಿಕೆಯೂ ಶ್ರೀ ನಾರಾಯಣರಾಯರ ಪಂಡಿತಾರಾಧ್ಯ ಚರಿತ್ರೆಯ ಪೀಠಿಕೆಯೂ ಅಪಸಿದ್ಧಾಂತಗಳಿಂದ ತುಂಬಿರುವುವು. ಗ್ರಂಥಗಳನ್ನೂ ಶಾಸನಗಳನ್ನೂ ಸರಿಯಾಗಿ ಪರಿಶೀಲಿಸದೆ ಸಂಪ್ರದಾಯವನ್ನೂ ತಿಳಿಯದೆ "ಚರಿತ್ರಗ್ರಂಥಗಳ" ಹೆಸರಿನಿಂದ ಪ್ರಕಟಿಸಿದರೆ ಪ್ರಯೋಜನವಾಗಲಾರದು. ಸುಮ್ಮನೆ ಕಲ್ಪನಾತ್ಮಕವಾಗಿ ಬರೆಯುತ್ತ ಹೋದರೆ ವಿವಾದ ವಿಸ್ತಾರವಾಗುವದಲ್ಲದೆ ಪರಿಶ್ರಮೆಯು ಸಫಲವಾಗುವುದಿಲ್ಲ. ಸಪ್ರಮಾಣವಾಗಿ ಗುಣದೋಷಾದಿಗಳನ್ನು ನಿರೂಪಿಸಿದರೆ ಯಾರಿಗೂ ಹಾನಿಯಿಲ್ಲವಷ್ಟೆ! ಪರಿಶೋಧಕನು ಬಹಳವಾಗಿ ನೋಡಿ ಸ್ವಲ್ಪವಾಗಿ ಬರೆಯಬೇಕೇ ಹೊರತು ಸ್ವಲ್ಪವಾಗಿ ನೋಡಿ ಬಹಳವಾಗಿ ಬರೆಯಬಾರದೆಂದು ನಿವೇದಿಸುತ್ತೇನೆ.

ಚಿದಿರೆಮಠದ ವೀರಭದ್ರಶಾಸ್ತ್ರಿ.

---

# ಎಕ್ಸ್ ರೇ ಅಥವಾ ರಾಂಟ್‌ಜನ್ ಕಿರಣಗಳು

## (೩) ವೈದ್ಯಶಾಸ್ತ್ರದಲ್ಲಿ ಎಕ್ಸ್ ರೇ ಉಪಯೋಗ

**ವ್ಯಾಧಿಪರೀಕ್ಷೆಗೆ ಸಹಾಯ.**—ಈ ನೂತನ ರಶ್ಮಿಗಳನ್ನು ಉಪಯೋಗಿಸಿ ವ್ಯಾಧಿಪರೀಕ್ಷೆಯನ್ನು ಮಾಡಿದವರಲ್ಲಿ ಮೊಟ್ಟಮೊದಲನೆಯವನು ಅಮೆರಿಕ ದೇಶದ ಒಬ್ಬ ವೈದ್ಯನೆಂದು ಮೇಲೆ ತಿಳಿಸಿದೆ. ರೋಗಿಯ ಕಾಲಿನೊಳಗೆ ಹೊಕ್ಕಿದ್ದ ಒಂದು ಗುಂಡಿನ ಸ್ಥಳವನ್ನು ತಿಳಿಯಲು ಅವನು ನಲವತ್ತು ನಿಮಿಷಗಳ ಕಾಲ ಈ ಕಿರಣಗಳನ್ನು ಬಿಡಬೇಕಾಯಿತು. ಇದಕ್ಕೆ ಕಾರಣ ಮೊದಮೊದಲು ತಯಾರಿಸಿದ ಕಿರಣಗಳ ಮಾರ್ದವ. ಈಗ ಈ ಪರೀಕ್ಷೆಗೆ ಕೆಲವು ಸೆಕಂಡುಗಳು ಸಾಕು. ಎಕ್ಸ್ ರೇ ಹೊರಬಿದ್ದ ತರುಣದಲ್ಲಿಯೆ ಅಮೆರಿಕ ದೇಶದ ಒಬ್ಬ ವೈದ್ಯನು ಉಡುಗೆ ತೊಡಿಗೆಗಳನ್ನು ಪೂರ್ತಿಯಾಗಿ ಧರಿಸಿದ್ದ ಒಬ್ಬ ಕುತೂಹಲಿಯ ಮೇಲೆ ಅದನ್ನು ಬಿಟ್ಟು ಅವನ ಸಂಪೂರ್ಣ ಅಸ್ಥಿಪಂಜರದ ಚಿತ್ರವನ್ನು ತೆಗೆದನು. ವ್ಯಾಧಿ ಪರೀಕ್ಷೆಯಲ್ಲಿ ಇದು ಹೆಚ್ಚು ವ್ಯಾಪಿಸಿತು. ಶ್ವಾಸಕೋಶ, ಹೃದಯ, ಜೀರ್ಣಕೋಶ ಮೊದಲಾದವುಗಳನ್ನೆಲ್ಲ ಸರಿಯಾಗಿ ಪರೀಕ್ಷಿಸಿ ತಕ್ಕ ಚಿಕಿತ್ಸೆಯನ್ನು ಮಾಡಲು ಅವಕಾಶವಾಯಿತು. ಕ್ಷಯ, ಕ್ಯಾನ್‌ಸರ್, ಮುಂತಾದ ರೋಗಗಳನ್ನು ಪ್ರಾರಂಭದಲ್ಲಿಯೇ ಗುರುತಿಸಿದ್ದರಿಂದ ಅನೇಕ ಜೀವಗಳು ಉಳಿದುಕೊಂಡವು.

ಎಕ್ಸ್ ರೇ ಫೋಟೋವನ್ನು ಮೊದಲು ನೋಡಿದರೆ ನಮಗೆ ಏನೂ ತಿಳಿಯುವುದಿಲ್ಲ. ಈ ಚಿತ್ರವು ಬೀಳುವುದಕ್ಕೆ ಬೇರಿಯಂಪ್ಲಾಟಿನೋ ಸಯನೈಡಿನಿಂದ ತೆರೆಯನ್ನು ಸಜ್ಜುಗೊಳಿಸಬೇಕು. ಎಕ್ಸ್ ರೇಯು ಆ ಉಪ್ಪಿನ ಮೇಲೆ ಬಿದ್ದರೆ ಅದು ಪ್ರಕಾಶಮಾನವಾಗುತ್ತದೆ. ಅದರ ಮೇಲೆ ಬೀಳುವಾಗ ದಾರಿಯಲ್ಲಿ ಒಂದು ವಸ್ತುವನ್ನು ಹಿಡಿದರೆ ಆ ಭಾಗವನ್ನು ಬಿಟ್ಟು ಉಳಿದ ಭಾಗದ ತೆರೆಯು ಪ್ರಕಾಶವಾಗಿ ಕಾಣುತ್ತದೆ. ಗೋಡೆಯ ಮೇಲೆ ಬೆಳಕನ್ನು ಬಿಟ್ಟು ದಾರಿಯಲ್ಲಿ ಒಂದು ವಸ್ತುವನ್ನು ಹಿಡಿದರೆ ಏನಾಗುತ್ತದೆ? ಆ ವಸ್ತುವಿನ ಭಾಗ ಬಿಟ್ಟು ಉಳಿದ ಭಾಗವು ಪ್ರಕಾಶವಾಗುತ್ತದೆ. ವಸ್ತುವಿನ ಆಕಾರಕ್ಕೆ ತಕ್ಕ ನೆರಳು ಗೋಡೆಯ ಮೇಲೆ ಬೀಳುತ್ತದೆ. ಎಕ್ಸ್ ರೇಗಳು ತೆರೆಯ ಮೇಲೆ ಬೀಳುವಾಗ ನಿಮ್ಮ ಕೈಯನ್ನು ದಾರಿಯಲ್ಲಿ ಹಿಡಿದರೆ ಅದೇ ರೀತಿ ಇದರ ನೆರಳು ತೆರೆಯ ಮೇಲೆ ಬೀಳುತ್ತದೆ. ಆದರೆ ಒಂದು ವ್ಯತ್ಯಾಸ ಮಾತ್ರ ಕಾಣುತ್ತದೆ. ಬೆಳಕಿಗೆ ಎದುರಾಗಿ ಕೈಹಿಡಿದರೆ ನಿಮ್ಮ ಕೈ ಆಕಾರವು

ಪೂರ್ತಿಯಾಗಿ ಗೋಡೆಯ ಮೇಲೆ ಬೀಳುತ್ತದೆ. ಎಕ್ಸ್ ರೇಗೆ ಕೈಹಿಡಿದಾಗ ಈ ಪೂರ್ತಿ ಆಕಾರವು ಬೀಳದೆ ಒಳಗಿನ ಅಸ್ಥಿಪಂಜರದ ನೆರಳು ಮಾತ್ರ ಬೀಳುತ್ತದೆ. ಮೊದಲು ಸಲ ನಿಮ್ಮ ಕೈಯಿಟ್ಟು ಈ ವಿಕೃತವಾದ ನೆರಳನ್ನು ನೋಡಿದಾಗ ನಿಮ್ಮ ಮೈ 'ಜುಂ' ಎನ್ನುತ್ತದೆ. ನಿಮಗೆ ನಿಜವಾಗಿಯೂ ಗಾಬರಿಯಾಗುತ್ತದೆ. ಈ ವಿಕೃತ ಛಾಯೆಗೆ ಕಾರಣವೇನು? ರಾಂಟ್‌ಜನ್ನನು ತನ್ನ ಮೊಟ್ಟಮೊದಲ ಪರೀಕ್ಷೆಗಳಲ್ಲಿಯೇ ಕಂಡಿದ್ದಂತೆ ಈ ಕಿರಣಗಳು ಪದಾರ್ಥಗಳ ಸಾಂದ್ರತೆಗೆ ತಕ್ಕಂತೆ ಅವುಗಳನ್ನು ಪ್ರವೇಶಿಸುತ್ತವೆ. ನಮ್ಮ ಕೈಯಲ್ಲಿರುವ ಚರ್ಮ ರಕ್ತ ಮಾಂಸಕ್ಕಿಂತಲೂ ಮೂಳೆಗಳ ಸಾಂದ್ರತೆ ಹೆಚ್ಚು. ಈ ಮೂಳೆಗಳ ಮಧ್ಯೆ ಒಂದು ಗುಂಡಿದ್ದರೆ ಅದರ ಸಾಂದ್ರತೆ ಮೂಳೆಗಳಿಗಿಂತ ಹೆಚ್ಚು. ಎಕ್ಸ್ ರೇಗಳು ಚರ್ಮ ರಕ್ತ ಮಾಂಸಗಳ ಮೂಲಕ ನುಗ್ಗಬಲ್ಲವು. ಮೂಳೆಗಳ ಮೂಲಕ ನುಗ್ಗಲಾರವು. ಆ ಮೂಳೆಗಳಿರುವ ಕಡೆಗಳಲ್ಲೆಲ್ಲ ಅವು ಹಾಯಲಾರದೆ ಆ ಮೂಳೆಗಳ ಆಕಾರಕ್ಕೆ ಸಮನಾದ ಸ್ಥಳವನ್ನು ಬಿಟ್ಟು ಮಿಕ್ಕ ಕಡೆಗಳನ್ನು ಬೆಳಗುತ್ತವೆ. ಅಂದರೆ ಮೂಳೆಗಳ ನೆರಳು ತೆರೆಯ ಮೇಲೆ ಬೀಳುತ್ತದೆ. ಮೂಳೆಗಳು ಒಡೆದಿದ್ದರೆ ಛಾಯೆಯಲ್ಲಿ ಇದನ್ನು ನೋಡಬಹುದು. ಗುಂಡಿನ ಛಾಯೆಯು ಇನ್ನೂ ಕಪ್ಪಗೆ ಬೀಳುವುದರಿಂದ ಅದು ಇರುವ ಸ್ಥಳವನ್ನು ಪತ್ತೆಮಾಡಬಹುದು. ಗುಂಡಿನಂತೆಯೇ ಭಾರವಾದ ಯಾವ ಪದಾರ್ಥಗಳು—ಉಂಗುರ, ಕಾಸು, ಬಂಗಾರದ ಕಲ್ಲು, ಇತ್ಯಾದಿ—ಒಳಗೆ ಸೇರಿಕೊಂಡಿದ್ದರೂ ಅಸ್ಥಿಗಿಂತ ಅವುಗಳು ಭಾರವಾಗಿರುವುದರಿಂದ ಎಕ್ಸ್ ರೇ ಛಾಯೆಯಲ್ಲಿ ಅವುಗಳ ಆಕಾರಕ್ಕೆ ತಕ್ಕಂತೆ ಅತಿ ಕಪ್ಪಗಿರುವ ಒಂದು ಆಕೃತಿಯು ಕಾಣುತ್ತದೆ. ಕೂಡಲೆ ಅವು ಪತ್ತೆಯಾಗುತ್ತವೆ. ಹೆಚ್ಚು ಕಷ್ಟವಿಲ್ಲದೆ ಹೊರಗೆ ತೆಗೆಯಬಹುದು.

**ವ್ಯಾಧಿಚಿಕಿತ್ಸೆಯಲ್ಲಿ ಉಪಯೋಗ.**—ವ್ಯಾಧಿಪರೀಕ್ಷೆಗೆ ಇದು ಸಹಾಯಕವೆಂದು ಮೊದಲಿಂದಲೂ ಹೆಸರಾಯಿತು. ಜೊತೆಗೆ ಇದರ ಇನ್ನೊಂದು ಗುಣವು ಶೀಘ್ರದಲ್ಲಿಯೇ ಗೋಚರವಾಯಿತು. ಈ ಕಿರಣಗಳ ಪರೀಕ್ಷೆಯಲ್ಲಿಯೇ ಮಗ್ನರಾಗಿದ್ದ ಕೆಲವು ಉತ್ಸಾಹಿಗಳಿಗೆ ಕೆಲವು ವಿಚಿತ್ರವಾದ ಅನುಭವಗಳು ಪ್ರಾಪ್ತವಾದುವು. ಕೆಲವರ ಕೂದಲು ಉದುರಲಾರಂಭಿಸಿತು. ಕೆಲವರು ಕಣ್ಣುನೋವಿನಿಂದ ಪೀಡಿತರಾದರು. ಕೆಲವರಿಗೆ ಕೈಸುಟ್ಟು ಗಾಯಗಳಾದವು. ತೀಕ್ಷ್ಣವಾದ ಅಲೆಗಳನ್ನು ತಯಾರಿಸಲು ಹೊರಟ ಕೆಲವರಿಗೆ ಇನ್ನೂ ಹೆಚ್ಚಿನ ವ್ಯಾಧಿಗಳು ತಗಲಿದವು. ಇವು ಅವರ ಶರೀರದೊಳಕ್ಕೆ ಹೊಕ್ಕು ರಕ್ತಕಣಗಳನ್ನು ನಾಶಮಾಡಿ ಅವರ ಶಕ್ತಿಯನ್ನೂ ಕ್ರಮೇಣ ಕೆಲವರ ಜೀವವನ್ನೂ ಹೀರಿಕೊಂಡವು. ಜೀವಾಣುಗಳಿಗೆ ಈ ಕಿರಣಗಳು ಹಾನಿಕರವೆಂದು ವ್ಯಕ್ತವಾಯಿತು. ಈ ವಿಷಯವನ್ನು ವಿಶದವಾಗಿ ಪರೀಕ್ಷಿಸ



ಎಕ್ಸ್‌ರೇ ಫೋಟೋ ತೆಗೆಯುವುದು



ಕರುಳಿನ ಎಕ್ಸ್‌ರೇ ಚಿತ್ರ

(ಪಡಿಯಚ್ಚುಗಳು ಶ್ರೀಮಾನ್ ಯು. ರಾಘವೇಂದ್ರಾಚಾರ್ಯರು ದಯೆಯಿಟ್ಟು ಕೊಟ್ಟವು.)



ವಾಚಿನ ಎಕ್ಸ್‌ರೇ ಚಿತ್ರ



ಪಿಸ್ತೂಲಿನ ಎಕ್ಸ್‌ರೇ ಚಿತ್ರ

(ಪಡಿಯಚ್ಚುಗಳು ಶ್ರೀಮಾನ್ ಯು. ರಾಘವೇಂದ್ರಾಚಾರ್ಯರು ದಯೆಯಿಟ್ಟು ಕೊಟ್ಟವು.)

ಬೇಕೆಂದು ತೀರ್ಮಾನಿಸಿ, ತಮಗೆ ಉಂಟಾಗಬಹುದಾದ ತೊಂದರೆಗಳನ್ನು ಲಕ್ಷಿಸದೆ, ಕೆಲವು ವೀರಪಟುಗಳು ಹೊರಟರು. ಇವರ ಪ್ರಯೋಗಗಳಿಂದ ಕೆಲವು ಆಶ್ಚರ್ಯಕರ ವಾದ ವಿಷಯಗಳು ಹೊರಬಿದ್ದವು. ಈ ಕಿರಣಗಳು ದೇಹದ ಒಂದೊಂದು ಭಾಗವನ್ನು ಒಂದೊಂದು ರೀತಿ ಬದಲಾಯಿಸಿದವು. ಇವುಗಳ ಕಾವಿನಲ್ಲಿ ಕೆಲವು ಜೀವಕಣಗಳು ಮಡಿದರೆ ಮತ್ತೆ ಕೆಲವಕ್ಕೆ ಇವು ಹೊಸ ಜೀವವನ್ನು ತುಂಬಿದವು. ಎಳೆಯ ಕಣಗಳು (immature cells) ಇವುಗಳ ಜೋರನ್ನು ಬೆಳೆದ ಕಣಗಳಂತೆ ತಡೆದು ಕೊಳ್ಳಲಿಲ್ಲ. ಕ್ಯಾನ್ಸರ್ ರೋಗ ತಗಲಿದ ಕಣಗಳು ಇವುಗಳ ಹೊಡೆತದಲ್ಲಿ ಹುಟ್ಟಡಗಿದವು. ದೇಹದಲ್ಲಿರುವ ಸೂಕ್ಷ್ಮ ಕ್ರಿಮಿಗಳು (germs) ಇವುಗಳ ಉದ್ವೇಗ ದಲ್ಲಿ ನಾಶವಾದವು. ದೇಹದಲ್ಲಿರುವ ಪ್ರತಿಯೊಂದು ವಿಷಕ್ರಿಮಿಯನ್ನೂ ನಾಶ ಮಾಡುವ ಉದ್ದೇಶದಿಂದ ಹೊರಟವರು ಇವು ನಾಶವಾಗುವಷ್ಟು ಕಾಲ ಎಕ್ಸ್ ರೇಯು ದೇಹಕ್ಕೆ ತಗಲುವುದರಿಂದ ಇತರ ವಿಧವಾದ ಹಾನಿಗಳು ಪ್ರಾಪ್ತವಾಗುವು ವೆಂದು ತಿಳಿದರು. ಕ್ಯಾನ್ಸರ್ ಮತ್ತು ಹುಳುಕಡ್ಡಿಗಳ ನಿವಾರಣೆಗಾಗಿಯೂ ಕೆಲವು ಗಾಯಗಳು ಬೇಗ ಮಾಯುವಂತೆ ಪ್ರಚೋದಿಸುವುದಕ್ಕಾಗಿಯೂ ಈ ಕಿರಣಗಳು ಪ್ರತಿಯೊಂದು ಮುಖ್ಯ ಆಸ್ಪತ್ರೆಯಲ್ಲಿಯೂ ಈಗ ಉಪಯೋಗದಲ್ಲಿವೆ.

## ವೈಜ್ಞಾನಿಕರ ಕಷ್ಟಸುಖಗಳು

**ಸತ್ಯಪ್ರೇಮ.**—ಎಕ್ಸ್ ರೇಗಳ ಗುಣಾವಗುಣಗಳನ್ನು ಪರೀಕ್ಷಿಸಲು ಹೊರಟ ವೈಜ್ಞಾನಿಕರ ವಿಷಯವಾಗಿ ಸ್ವಲ್ಪ ಯೋಚಿಸೋಣ. ಈ ಪರೀಕ್ಷೆಯು ಅಪಾಯಕರ ವೆಂದು ಅನೇಕರಿಗೆ ತಿಳಿದಿತ್ತು. ಆದರೂ ಈ ಕಷ್ಟಕೆಲಸವನ್ನು ಏಕೆ ಕೈಕೊಂಡರು? ಇದಕ್ಕೆ ಎರಡು ಕಾರಣಗಳಿವೆ. ಮೊದಲನೆಯದು ಕುತೂಹಲ ಮತ್ತು ವಿದ್ಯಾತುರತೆ. ಹೊನ್ನು ಹೆಣ್ಣುಗಳ ವ್ಯಾಮೋಹ ಹಿಡಿದವನಿಗೆ ನಿದ್ದೆ ಹತ್ತುತ್ತದೆಯೆ? ಈ ಆಸೆಗಳ ಉದ್ವೇಗದಲ್ಲಿ ಬುದ್ಧಿ ವಿಕಲ್ಪವಾಗಿ ಅಂಧಕಾರ ಕವಿಯುವುದಿಲ್ಲವೆ? ಅವರ ಉದ್ದೇಶ ಸಾಧನೆ ಉಳಿದು ಬೇರೆ ಯೋಚನೆ ಅವರ ಮನಸ್ಸಿಗೆ ಹತ್ತುತ್ತದೆಯೆ? ವಿದ್ಯಾತುರತೆಯೂ ಇಷ್ಟೇ ತೀವ್ರವಾದುದು. ವೀರವಿಜ್ಞಾನಿಗೆ ಮಿಕ್ಕ ಪ್ರಪಂಚವೆಲ್ಲ ಶೂನ್ಯ. ನ್ಯೂಟ ನ್ನನು ಶಾಸ್ತ್ರಾನ್ವೇಷಣೆಯಲ್ಲಿ ಮಗ್ನನಾಗಿದ್ದಾಗ ಅವನಿಗೆ ಬೇರಾವುದೂ ಕಂಡು ಕೇಳುತ್ತಿರಲಿಲ್ಲವಂತೆ. ಎದುರಿಗೆ ನಿಂತ ಸ್ನೇಹಿತರು ಅವನನ್ನು ತಿವಿದು ಎಬ್ಬಿಸಿದಲ್ಲದೆ ಅವರು ಅವನ ಕಣ್ಣಿಗೆ ಗೋಚರಿಸುತ್ತಿರಲಿಲ್ಲವಂತೆ. ನಿಜವಾದ ವಿಜ್ಞಾನಿಗಳು ಸತ್ಯಾನ್ವೇಷಣೆಯೆಂಬ ವ್ರತದಲ್ಲಿ ಸದಾ ಮಗ್ನರಾಗಿರುತ್ತಾರೆ. ಸತ್ಯವೇ ಅವರ ಜೀವನದ ಗುರಿ, ಅವರ ದಾಹವನ್ನಡಗಿಸುವ ಪಾನ. ಅನ್ನಾಹಾರಗಳ ತವಕ

ಅವರನ್ನು ನೋಂಕದು. ಎಡಿಸನ್ನನು ಒಂದು ಪರಿಶೋಧನೆಯನ್ನು ನಡೆಸುತ್ತಿದ್ದಾಗ ತಾನು ಕೂತಿದ್ದ ಸ್ಥಳದಿಂದ ಕದಲಲು ಎರಡೂವರೆ ದಿನಗಳಾದವಂತೆ. ವೈಜ್ಞಾನಿಕರು ಈ ರೀತಿ ಏಕಾಗ್ರಚಿತ್ತದಿಂದ ಪ್ರಕೃತಿಯನ್ನು ಪೂಜಿಸದಿದ್ದರೆ ನಮ್ಮ ಬಾಳ್ವೆಯು ಇಷ್ಟು ಹಿತವಾಗುತ್ತಿರಲಿಲ್ಲ. ನಾವು ಕೈಗೊಳ್ಳುವ ಪ್ರತಿಯೊಂದು ಕೆಲಸಕ್ಕೂ ಒಳ್ಳೆಯದೋ ಕೆಟ್ಟದ್ದೋ ಒಂದು ಧ್ಯೇಯವಿದ್ದೇ ಇರುತ್ತದೆ. ಮೇಲೆ ಕಾಣಿಸಿ ಕೊಳ್ಳದಿದ್ದರೂ ಸ್ವಲ್ಪ ಕಣ್ಣಿಟ್ಟು ನೋಡಿದರೆ ಇದು ಗೋಚರಿಸುತ್ತದೆ. ಯೋಗಿಗಳಲ್ಲಿ ಕೆಲವರ ದೃಷ್ಟಿ ಬ್ರಹ್ಮಸಾಕ್ಷಾತ್ಕಾರದ ಕಡೆ; ಕೆಲವರದು ಮಾರಿಮಸಣಿಗಳನ್ನೂ ದುರ್ದೈವಗಳನ್ನೂ ಒಲಿಸಿಕೊಂಡು ಮಾಟಕಾಟಗಳನ್ನು ಹುಡುಕುವ ಕಡೆ. ವಿಜ್ಞಾನಿ ಗಳಿಗೆ ಸತ್ಯದೃಷ್ಟಿಯು ಪ್ರಧಾನವಾದದ್ದಾದರೂ ಲೋಕಕಲ್ಯಾಣಬುದ್ಧಿಯೂ ಜೊತೆಗೆ ಹೆಣೆದುಕೊಂಡಿರಬೇಕು. ತಾವು ತೋರುವ ಮಾರ್ಗಗಳು ಜೀವನರಥದ ಚಕ್ರಗಳಿಗೆ ಕೀಲೆಣ್ಣೆಯಂತಿರಬೇಕು. ಬಂಧನದಲ್ಲಿರುವ ದುಷ್ಟಶಕ್ತಿಗಳನ್ನು ಕಳಚಿ ಪ್ರಪಂಚವು ಅಲ್ಲೋಲಕಲ್ಲೋಲದಲ್ಲಿ ಮುಳುಗುವಂತೆ ಮಾಡುವುದು ಶಾಸ್ತ್ರಧರ್ಮವಲ್ಲ. ಇಂಥ ಪ್ರಸಂಗವು ಈಗ ನಮಗೆ ಒದಗಿ ವಿಜ್ಞಾನವನ್ನು ದ್ವೇಷಿಸಬೇಕಾಗಿ ಬಂದಿದೆ. ಸರ್ ಸಿ. ವಿ. ರಾಮನ್ ಅವರು ಈಚೆಗೆ ಕೊಟ್ಟ ಒಂದು ಉಪನ್ಯಾಸದಲ್ಲಿ ಇಂಥ ವಿಜ್ಞಾನಿಗಳು ಹುಟ್ಟಿಕೊಂಡಿರುವುದರಿಂದ ವೈಜ್ಞಾನಿಕರು ತಲೆಯೆತ್ತಿಕೊಂಡು ತಿರುಗು ವುದು ಕಷ್ಟವಾಗಿದೆಯೆಂದೂ, ಅಂಥ ಪರಿಶೋಧನೆಗಳನ್ನು ದಂಡಿಸುವುದು ಜನಾಂಗದ ಕರ್ತವ್ಯವೆಂದೂ ನುಡಿದರು. ಈ ದುಷ್ಟಶಕ್ತಿಗಳಿಂದ ನಾಗರಿಕತೆಯನ್ನುಳಿಸಿಕೊಳ್ಳು ವುದು ಹೇಗೆಂಬುದೇ ಈಗಿನ ಮುಂದಾಳುಗಳ ಯೋಚನೆ.

**ಆನಂದ.**—ಜನರ ಹಿತಕ್ಕಾಗಿ ಹೊಸ ಸಾಧನಗಳನ್ನು ಕಂಡುಹಿಡಿಯುವ ವೈಜ್ಞಾನಿಕರ ಸಂಖ್ಯೆ ವಿಶೇಷವಾಗಿದೆ. ಆರ್ಕಿಮಿಡಿಸ್ ಮೊದಲುಗೊಂಡು ಸಾಲ್ವರ್ ಸನ್ ಸಂಯುಕ್ತ (compound)ವನ್ನು ಕಂಡುಹಿಡಿದ ವಿಜ್ಞಾನಿ ಪಾಲ್ ಆರ್‌ಲಿಕ್ ಪರ್ಯಂತ ಈ ಸಂತತಿಯು ಅವಿಚ್ಛಿನ್ನವಾಗಿ ನಡೆದುಕೊಂಡು ಬಂದಿದೆ. ಯೋಗಿಗೆ ಬ್ರಹ್ಮಸಾಕ್ಷಾತ್ಕಾರವಾದರೆ ಉಂಟಾಗುವ ಆನಂದ ಇವರಿಗೆ ವಿಜ್ಞಾನಮಾರ್ಗಗಳ ಬೆಳಕಿನಿಂದ ಉಂಟಾಗುತ್ತದೆ. ಆರ್ಕಿಮಿಡೀಸನು ಪದಾರ್ಥಗಳ ಘನತ್ವಕ್ಕೆ ಸಂಬಂಧ ಪಟ್ಟ ಒಂದು ಸಮಸ್ಯೆಯನ್ನು ಯೋಚಿಸಿ, ಬಗೆಹರಿಯದೆ ಬಹಳ ದಿನ ಅವಸ್ಥೆ ಪಡುತ್ತಿದ್ದನು. ಒಂದು ದಿನ ನಗ್ನಾವಸ್ಥೆಯಲ್ಲಿ ಸ್ನಾನಮಾಡುತ್ತಿದ್ದಾನೆ: ಸ್ನಾನ ಮಾಡುವ ತೊಟ್ಟಿಯಲ್ಲಿಯೂ ಇದೇ ಯೋಚನೆ. ಥಟಕ್ಕನೆ ಒಂದು ಸಮಾಧಾನ ತೋರಿ ಸಮಸ್ಯೆಯು ಹರಿಯಿತು. ಆನಂದಪರವಶನಾಗಿ, ಬಂಧವಿಮೋಚನೆಯಾದ ಹಕ್ಕಿಯಂತೆ, 'ಕಂಡೆ!', 'ಕಂಡೆ!' ಎಂದು ಕೂಗುತ್ತಾ ಬೀದಿಬೀದಿಯಲ್ಲಿ

ಕುಣಿದಾಡಿಕೊಂಡು ಓಡುತ್ತಾ, ದೇವರು ಕರುಣಿಸಿದ ತನ್ನ ನಿಜರೂಪದಿಂದ ಜನರೆಲ್ಲರನ್ನೂ ಮುಗ್ಧಪಡಿಸಿ, ಕ್ಷಣಕಾಲ ಅವರ ಕಣ್ಣನ್ನು ಮುಚ್ಚಿಸಿದನು. ಮಾದಕ ಪದಾರ್ಥಗಳು ಕೆಡುವ ಕಾರಣವನ್ನು ಪರಿಶೀಲಿಸುತ್ತಿದ್ದ ಪಾಸ್ಟ್ಯೂರನಿಗೆ ವಾಯುವಿನಲ್ಲಿರುವ ಸೂಕ್ಷ್ಮ ಕ್ರಿಮಿಗಳು ಇವುಗಳ ನಾಶಕ್ಕೆ ಕಾರಣವೆಂದು ಗೋಚರಿಸಿದಾಗ ಉಂಟಾದ ಆನಂದದಿಂದ ಕೊಂಚಕಾಲ ಏನೂ ಕಾಣಲಿಲ್ಲವಂತೆ; ಒಂದು ಮಾತನ್ನೂ ಆಡಲಾರದೆ ಸಂತೋಷದ ಮಡುವಿನಲ್ಲಿ ಮುಳುಗಿಹೋದನಂತೆ. ವಿಜ್ಞಾನಸಾಧನೆಯಲ್ಲಿ ಇಂಥ ಅಪಾರ ಸನ್ನಿವೇಶಗಳಿಗೆ ಅವಕಾಶವುಂಟು. ತಮ್ಮ ಒಡನಾಡಿಗಳಿಗೂ ತಮಗೂ ಹಿತವಾಗುವಂತೆ ಮಾಡುವ ಅನೇಕ ಮಾರ್ಗಗಳಿವೆ. ಇದರ ಪರಿಣಾಮವಾಗಿ ತಮ್ಮ ಮತ್ತು ತಮ್ಮ ದೇಶದ ಸಂಪತ್ತು ಹೆಚ್ಚಿ ಮಾನವನ ಅಭ್ಯುದಯವೂ ಮುಂದುವರಿಯಬಹುದು. ರಾಂಟ್‌ಜನ್, ಪಾಸ್ಟ್ಯೂರ್, ಲಿಸ್ಟರ್ ಮುಂತಾದವರು ಇಂಥ ವಿಭೂತಿ ಪುರುಷರು

**ವೀರಪರಾಕ್ರಮ.**—ಪ್ರಕೃತಿಯು ಒಲಿದಾಗ ವೈಜ್ಞಾನಿಕರಿಗೆ ಉಂಟಾಗುವ ಆನಂದವನ್ನು ನೋಡಿ ಅವರ ಕೆಲಸವು ಸುಲಭವಾದುದು, ಹಿತವಾದುದು, ಎಂದು ಊಹಿಸಬಾರದು. ಅನೇಕವೇಳೆ ಅವರು ಕೈಗೊಳ್ಳುವ ಕೆಲಸವು ಬಹಳ ಕಷ್ಟತರವಾದುದು, ಅಸಹ್ಯಕರವಾದುದು. ಪಾಸ್ಟ್ಯೂರನು ಹುಚ್ಚುನಾಯಿಯ ಕಡಿತಕ್ಕೆ ಕಾರಣವನ್ನೂ ನಿವಾರಣೋಪಾಯವನ್ನೂ ಹುಡುಕುವುದಕ್ಕೆ ಅನೇಕ ತಿಂಗಳುಗಳಾದವು. ಈ ಪರೀಕ್ಷೆಗೆ ಮುಖ್ಯವಾಗಿ ಬೇಕಾದ್ದು ಹುಚ್ಚುನಾಯಿಗಳು. ಈ ಕಾಲದಲ್ಲಿ ಅವನ ಬಂಗಲೆಯ ಸುತ್ತ ವಿವಿಧ ಅವಸ್ಥೆಯಲ್ಲಿದ್ದ ನಾಯಿಗಳು ತುಂಬಿದ್ದುವು. ಕೆಲವಕ್ಕೆ ಹುಚ್ಚು; ಇವುಗಳ ಸಹಾಯದಿಂದ ಹುಚ್ಚನ್ನುಂಟುಮಾಡಿದ್ದವು ಇನ್ನು ಕೆಲವು; ಹುಚ್ಚಿನ ನಿವಾರಣೆಗಾಗಿ ದೇಹದೊಳಕ್ಕೆ ಔಷಧವನ್ನು ಬಿಟ್ಟಿದ್ದವು ಮತ್ತೆ ಕೆಲವು. ಅವನ ಮನೆಯ ಸುತ್ತ ಈ ನಾಯಿಗಳು ಒಂದಿಲ್ಲದಿದ್ದರೆ ಮತ್ತೊಂದು ಸದಾ ಬೊಗಳುತ್ತಿದ್ದವು: ಇವುಗಳ ಭೀಕರನಾದವು ವಿದ್ಯಾತುರತೆಯಲ್ಲಿ ಲೀನನಾಗಿದ್ದ ಪಾಸ್ಟ್ಯೂರನಿಗೆ ಕೇಳದಿರಬಹುದು. ಅವನ ಹೆಂಡತಿ ಮಕ್ಕಳ ಪಾಡೇನು? ಈ ಕೆಲಸಕ್ಕೆ ಸಹಾಯಮಾಡಲು ಅವನು ನೇಮಿಸಿಕೊಂಡವರ ಪೈಕಿ ಯಾರೂ ಮೂರು ತಿಂಗಳಿಗೆ ಮೇಲೆ ನಿಲ್ಲಲಿಲ್ಲವಂತೆ. ಪಾಸ್ಟ್ಯೂರನು ಈ ಕಷ್ಟವನ್ನನುಭವಿಸದಿದ್ದರೆ ಈಗ ಹುಚ್ಚುನಾಯಿಯ ಕಡಿತದಿಂದ ಎಷ್ಟುಜನ ಸಾಯಬೇಕಾಗಿತ್ತು! ಯೆಲ್ಲೊ ಫೀವರ್ ರೋಗಪರೀಕ್ಷೆಯನ್ನು ಕೈಗೊಂಡ ಕೆಲವರು ಆ ರೋಗದಿಂದ ಸತ್ತವರ ಬಟ್ಟೆಯನ್ನು ಧರಿಸಿ ಕೆಲವು ದಿನಗಳಿದ್ದರು. ವ್ಯಾಧಿಯ ಗುಟ್ಟು ರಟ್ಟಾಗದಿರಲು ಅನಂತರ ಆ ರೋಗವನ್ನುಂಟುಮಾಡುವ ಸೊಳ್ಳೆಯಿಂದ ಕಚ್ಚಿಸಿಕೊಂಡರು. ವ್ಯಾಧಿಯು ತಗಲಿತು. ಸೊಳ್ಳೆಯೇ ಇದರ

ವಾಹಕವೆಂದು ಸ್ಥಿರಪಡಿಸಿದರು. ಈ ವ್ಯಾಧಿಯ ಗುಡಿಯನ್ನು ಪ್ರವೇಶಿಸಲು ಇವರು ತಮ್ಮ ಪ್ರಾಣಗಳನ್ನೇ ಬಲಿಕೊಡಲು ಸಿದ್ಧರಾಗಿದ್ದರು. ರಾಂಟ್‌ಜನ್ ಕಿರಣಗಳ ವೇಗವನ್ನು ಪರೀಕ್ಷಿಸಲು ಹೊರಟ ಅನೇಕ ವೀರಪಂಡಿತರು ಇದೇ ರೀತಿ ಮಡಿದರು. ನೀಷೆ, ಮುಸೊಲೀನಿ, ಹಿಟ್ಲರ್ ಮುಂತಾದ ರಣಪಟುಗಳು ಯುದ್ಧವು ಪ್ರತಿದೇಶಕ್ಕೂ ಆವಶ್ಯಕ; ಒಂದು ಜನಾಂಗದಲ್ಲಿ ಧೈರ್ಯ, ದೇಶಪ್ರೇಮ, ಅಸ್ವಾರ್ಥತೆ ಮೂಡ ಬೇಕಾದರೆ ಇದೇ ಸಾಧನ; ಶಾಂತಿಯ ಸೋಟವನ್ನೇ ಬಯಸುವ ದೇಶದ ಜೀವವು ಶಾಂತವಾಗುತ್ತದೆ—ಎಂದು ವಾದಿಸುತ್ತಾರೆ. ಯುದ್ಧದಾಹದಲ್ಲಿ ತವಕಪಡುವ ಇವರು ತಮ್ಮಂತೆ ಬದುಕಿ ಬಾಳುವ ಇತರ ಮಾನವರ ರಕ್ತವನ್ನು ಹೀರಿ, ಅವರ ಸಂಸಾರವೂ ದೇಶವೂ ದುಃಖಜ್ವಾಲೆಯಲ್ಲಿ ಉರಿಯುವುದನ್ನು ಕಂಡು ಅಸುರರಂತೆ ಆನಂದಿಸು ತ್ತಾರೆ. ನಮ್ಮ ಬುದ್ಧಿಕುಶಲತೆಗಳನ್ನೂ ಧೈರ್ಯೋತ್ಸಾಹಗಳನ್ನೂ ಪ್ರದರ್ಶಿಸಲು ವ್ಯಾಧಿಗಳೆಂಬ ವಿವಿಧ ಶತ್ರುಗಳಿಲ್ಲವೆ? ಪಾಸ್ಟ್ಯೂರ್, ವಾಲ್ಟರ್ ರೀಡ್ (ಯೆಲ್ಲೊ ಫೀವರ್ ಶೋಧಕ) ಮುಂತಾದ ವೈಜ್ಞಾನಿಕರು ಎಂಥ ಕೆಚ್ಚೆದೆಯವರು! ಯೋಧರು ಹೊಡೆದಾಡುವ ಶತ್ರುಗಳು ಅವರ ಕಣ್ಣಿಗೆ ಕಾಣುತ್ತಾರೆ. ವಿಜ್ಞಾನಿಗಳ ವೈರಿಗಳು (ಸೂಕ್ಷ್ಮಕ್ರಿಮಿಗಳು) ಅನೇಕ ಸಲ ರಹಸ್ಯದಲ್ಲಿಯೇ ಇದ್ದು ಅವರನ್ನು ನುಂಗುತ್ತಾರೆ. ಅಲ್ಪಪ್ರಾಣಿಗಳಾದರೂ ಅವುಗಳ ಹಾವಳಿ ಬಹಳ ಹೆಚ್ಚು. ಜಾಡ್ಯದಿಂದುಂಟಾಗುವ ನಷ್ಟವು ಯುದ್ಧದಿಂದುಂಟಾಗುವುದಕ್ಕಿಂತ ನೂರ್ಮಡಿಯಾದದ್ದು. ೧೯೧೯ರಲ್ಲಿ ಹರಡಿದ ಇನ್‌ಫ್ಲುಯಂಜ ವ್ಯಾಧಿಯು ೧೯೧೪ರಿಂದ ೧೯೧೮ರ ವರೆಗೆ ನಡೆದ ಘೋರ ಯುದ್ಧದಲ್ಲಿ ಮಡಿದ ಜನಕ್ಕಿಂತ ಐದುಪಾಲು ಹೆಚ್ಚು ಜನರನ್ನು ನುಂಗಿತು. ಯುದ್ಧದಲ್ಲಿ ತೋರಿಸುವ ಶೌರ್ಯವನ್ನು ಪುರಸ್ಕರಿಸಿ, ಸ್ಮರಿಸುವುದು ನಮ್ಮ ಪ್ರಾಚೀನ ಸಂಪ್ರದಾಯ. ಆದರೆ ವ್ಯಾಧಿಗಳೊಡನೆ ಹೊಡೆದಾಡುವವರ ಶೌರ್ಯಕ್ಕೆ ಆ ಮನ್ನಣೆಯಿಲ್ಲ. ಇಂಥ ಯುದ್ಧವು ಮಾನವಕುಲಕ್ಕೇ ಕೀರ್ತಿಯನ್ನು ತರುತ್ತ ದೆಂಬುದನ್ನು ನಾವು ಮರೆಯುತ್ತೇವೆ. ಇಂಥವರಿಗೆ ವೀರಗಲ್ಲುಗಳನ್ನು ನೆಡದಿರುವುದು ನಾಗರಿಕತೆಗೆ ಕೀರ್ತಿಕರವಲ್ಲ. ಪಾಸ್ಟ್ಯೂರ್, ರಾಂಟ್‌ಜನ್, ಮುಂತಾದ ಕೆಲವು ಪ್ರಮುಖರ ಹೆಸರನ್ನು ನಾವು ಶಾಶ್ವತಗೊಳಿಸಿರಬಹುದು. ಅವರಂತೆಯೇ ಕೆಲಸ ಮಾಡಿ ಹೊಸದನ್ನು ಕಾಣದೆಹೋದ ದುರದೃಷ್ಟಶಾಲಿಗಳನೇಕರು ಮಾನವವರ್ಗದ ಹಿತಕ್ಕಾಗಿ ದುಡಿದು ಧನ್ಯರಾಗಿರುತ್ತಾರೆ. ಅವರನ್ನೂ ನಾವು ಸ್ಮರಿಸಬೇಕು.

**ಹೊಸ ಜೀವರೂಪಗಳನ್ನುಂಟುಮಾಡಬಲ್ಲವು.**—ಎಕ್ಸ್‌ರೇಗಳ ಹೊಂಬಿಸಿಲಿನಲ್ಲಿ ಕೆಲವು ಜೀವಾಣುಗಳು ಹುಲುಸಾಗಿ ಬೆಳೆಯುತ್ತವೆಯೆಂದು ಹೇಳಿದೆಯಷ್ಟೆ. ಅಷ್ಟೇ ಅಲ್ಲ. ಕೆಲವು ಜೀವಾಣುಗಳು ಇವುಗಳ ಪ್ರಚೋದನೆಯಿಂದ ಮಾರ್ಪಟ್ಟು

ಬೇರೆ ಬೇರೆ ರೂಪಗಳನ್ನು ತಾಳುತ್ತವೆ. ಈ ಕಿರಣಗಳಲ್ಲಿ ನೆನೆದ ಕೆಲವು ನೊಣಗಳ (fruitfly) ಮರಿಗಳು ತಾಯಿಯನ್ನು ಹೋಲದೆ ಹೊಸ ರೂಪುಗಳನ್ನು ತಾಳಿದವು ; ಹೊಸ ಜಾತಿಯ ಕಣ್ಣುಗಳು ಹೊಸ ಬಣ್ಣದ ರೆಕ್ಕೆಗಳು ಮತ್ತು ಅವುಗಳ ಮೇಲೆ ಹೊಸ ರೀತಿಯ ಗುರುತುಗಳು ಕಂಡುಬಂದುವು. ಇವು ತಾಯಿಯಿಂದ ಭಿನ್ನವಾಗಿದ್ದದ್ದು ಮಾತ್ರವಲ್ಲ. ಇಂಥ ರೂಪಗಳ ಚಿಟ್ಟೆಗಳು ಅದುವರೆಗೂ ಕಂಡುಬಂದಿರಲಿಲ್ಲ. ನೂರಾರು ಮರಿಗಳು ಜನಿಸಿ ಪ್ರತಿಯೊಂದೂ ಬೇರೆ ಬೇರೆ ರೂಪವನ್ನು ತಾಳಿದ್ದವು. ಆದುದರಿಂದ ಎಕ್ಸ್‌ರೇಯು ಹೊಸ ರೀತಿಯ ಜೀವಸೃಷ್ಟಿಗೆ ಸಹಾಯಕವೆಂದು ನಿರ್ಧರವಾಯಿತು. ನಮ್ಮ ಸಂಸ್ಥಾನದ ವ್ಯವಸಾಯ ಇಲಾಖೆಯವರು ಎಕ್ಸ್‌ರೇ ಸಹಾಯದಿಂದ ಹೊಸ ಜಾತಿಯ ಕಬ್ಬನ್ನು ತಯಾರಿಸಿದ್ದಾರೆ. ಇಂಥ ಹಲವಾರು ಹೊಸ ಜಾತಿಗಳ ಪೈಕಿ ಹೆಚ್ಚು ಸಕ್ಕರೆಯನ್ನು ಉತ್ಪತ್ತಿಮಾಡುವ ಜಾತಿಯ ಬೀಜಗಳನ್ನು ತಯಾರಿಸಿ ಮಂಡ್ಯದ ಸುತ್ತಮುತ್ತಲಿನ ರೈತರಿಗೆ ಕೊಟ್ಟು ಅವರ ಆರ್ಥಿಕಸ್ಥಿತಿಯನ್ನು ಉತ್ತಮ ಗೊಳಿಸಿರುತ್ತಾರೆ. ಎಕ್ಸ್‌ರೇ ಸಹಾಯದಿಂದ ರೈತನ ಸ್ಥಿತಿಯು ಇನ್ನೂ ಉತ್ತಮ ಗೊಳ್ಳಲು ಹೆಚ್ಚು ಅವಕಾಶವಿದೆ. ಹೆಚ್. ಜಿ. ವೆಲ್ಸ್‌ರವರು ಈ ವಿಷಯವಾಗಿ ಚರ್ಚಿಸುತ್ತ ಒಂದು ಹೊಸ ಸೂಚನೆಯನ್ನು ಮಾಡಿದ್ದಾರೆ. ಸೃಷ್ಟಿಯಲ್ಲಿ ಕಾಣುವ ವಿವಿಧ ರೂಪಗಳಿಗೆ ಅನುವಂಶೀಯತೆ, ದೃಢಸಂಕಲ್ಪ, ಸನ್ನಿವೇಶ ಸೌಕರ್ಯ ಮುಂತಾದವು ಕಾರಣವೆಂದು ಸ್ಪಷ್ಟಪಟ್ಟಿದೆ. ಸೂರ್ಯರಶ್ಮಿಗಳಲ್ಲಿರುವ ಅಲ್ಪ ಸ್ವಲ್ಪ ಎಕ್ಸ್‌ರೇಗಳೂ ಹತ್ತಾರು ವರ್ಷಗಳಲ್ಲಿ ಜೀವರಾಶಿಗಳನ್ನು ರೂಪಾಂತರಗೊಳಿಸ ಬಹುದು. ಆದುದರಿಂದ ಜೀವರಾಶಿಗಳ ರೂಪಭೇದಗಳಿಗೆ ಎಕ್ಸ್‌ರೇಗಳೂ ಒಂದು ಮೂಲಕಾರಣವಾಗಿರಬಾರದೇಕೆ ?

**ಉಪಯೋಗಿಸುವಾಗ ಎಚ್ಚರಿಕೆಯಿಂದಿರಬೇಕು.**—ಈ ವೇಳೆಗೆ ಎಕ್ಸ್ ರೇಗಳ ತಯಾರಿಕೆ ಮತ್ತು ಉಪಯೋಗವು ಅಪಾಯಕರವೆಂದು ವಾಚಕರಿಗೆ ತಿಳಿದಿರ ಬಹುದು. ಗಟ್ಟಿಯಾದ ಕಿರಣಗಳು ಬೇಕಾದಾಗ ಕೊಳವೆಯಲ್ಲಿ ಹೆಚ್ಚಿನ ವಿದ್ಯುನ್ಮಟ್ಟ ವನ್ನುಂಟುಮಾಡಬೇಕಾಗುತ್ತದೆ. ಶಿವನಸಮುದ್ರದಿಂದ ಬರುವ ಕರೆಂಟಿನ ಮಟ್ಟ ಸುಮಾರು ೭೫೦೦೦ ವೋಲ್ಟುಗಳು. ಈ ಕೊಳವೆಯಲ್ಲಿ ಕೆಲವು ವೇಳೆ ಉಂಟು ಮಾಡಬೇಕಾದ ಅಂತರ ನಾಲ್ಕು ಲಕ್ಷ ವೋಲ್ಟುಗಳು. ಆದರೆ ಆಸ್ಪತ್ರೆಗಳಲ್ಲಿ ಅಷ್ಟು ತೀಕ್ಷ್ಣವಾದ ಕಿರಣವು ಸಾಮಾನ್ಯವಾಗಿ ಬೇಕಾಗುವುದಿಲ್ಲ. ಒಂದು ಲಕ್ಷ ವೋಲ್ಟು ಗಳಿಗೆ ಅಧಿಕವಾದ ಮಟ್ಟ ವ್ಯತ್ಯಾಸವಾಗಬೇಕಾಗುವುದು ಅಪರೂಪ. ಇದೂ ಅಪಾಯಕರವಾದದ್ದೇ. ಇದನ್ನು ತಯಾರಿಸಿ ಉಪಯೋಗಿಸುವ ವೈದ್ಯರು ಇದರ ಶಿಕ್ಷಣಕ್ಕೆ ಮುಡುಪಾಗಿರುವ ಪ್ರೌಢಶಾಲೆಗಳಲ್ಲಿ ಎರಡು ವರ್ಷಕಾಲವಾದರೂ

ಪ್ಯಾಸಂಗಮಾಡಿರಬೇಕು. ಈ ಕೆಲಸದಲ್ಲಿ ಸುರಿತವರಾಗಿ ವ್ಯಾಧಿ ಚಿಕಿತ್ಸೆಯಲ್ಲಿ ಇದರ ಉಪಯೋಗವನ್ನು ಕ್ರಮಪಡಿಸಬೇಕೆಂದು ಉತ್ಸಾಹವುಳ್ಳ ಪಂಡಿತರೆಲ್ಲರೂ ಆಗಿಂದಾಗ್ಗೆ ಸಭೆ ಸೇರಿ ತಮ್ಮ ಅನುಭವಗಳನ್ನು ಕುರಿತು ಚರ್ಚಿಸುತ್ತಾರೆ. ಈಗ ಯಾವ ಖಾಯಿಲೆಗೆ ಯಾವ ತೀಕ್ಷ್ಣತೆಯ ಎಷ್ಟು ಪ್ರಮಾಣ ಕಿರಣಗಳು ಬೇಕೆಂದು ಗೊತ್ತುಮಾಡಿರುತ್ತಾರೆ. ಈ ಕಿರಣಗಳ ಪ್ರಮಾಣವನ್ನಳೆಯಲು ಒಂದು ಹೊಸ ಮಾನವನ್ನು ಗೊತ್ತುಮಾಡಿ ಅದಕ್ಕೆ ರಾಂಟ್‌ಜನ್ ಎಂದು ಹೆಸರಿಟ್ಟು ಆ ವೈಜ್ಞಾನಿಕನ ಹೆಸರನ್ನು ಕೀರ್ತಿಗೊಳಿಸಿದ್ದಾರೆ. ಸುರಿತ ವೈದ್ಯರು ವ್ಯಾಧಿಗೆ ತಕ್ಕಂತೆ ಮೂರು ರಾಂಟ್‌ಜನ್, ನಾಲ್ಕು ರಾಂಟ್‌ಜನ್ ಅಥವಾ ಆವಶ್ಯಕವಾದಷ್ಟು ಶಕ್ತಿಯನ್ನು ಮಾತ್ರ ತಯಾರಿಸಿ ಉಪಯೋಗಿಸುತ್ತಾರೆ. ಈ ಶಕ್ತಿಯ ಉತ್ಪತ್ತಿ ಮತ್ತು ಉಪಯೋಗವು ಸೀಸೆಯಿಂದ ಬೇಕಾಗುವಷ್ಟು ದ್ರಾವಕವನ್ನು ತೆಗೆದು ಉಪಯೋಗಿಸುವಷ್ಟು ಸುಲಭವಾಗಿದೆ. ಹೀಗೆ ಹೇಳುವುದರಿಂದ ಈ ಕೆಲಸ ಸುಲಭ, ಇದನ್ನು ಬೇಕಾದವರು ಮಾಡಬಹುದು ಎಂದು ತಿಳಿಯಕೂಡದು. ಈ ಶಾಸ್ತ್ರವು ಬಹಳ ಮುಂದುವರಿದು ಮೊದಲಿದ್ದ ತೊಡಕುಗಳೆಲ್ಲ ಪರಿಹಾರವಾಗಿವೆಯೆಂದು ತಿಳಿಸುವುದೇ ನಮ್ಮ ಉದ್ದೇಶ.

## (೪) ವಾಣಿಜ್ಯದಲ್ಲಿ ಎಕ್ಸ್‌ರೇಗಳ ವ್ಯಾಪ್ತಿ

**ಎರಕಗಳ ಮತ್ತು ಬೆಸಗೆಗಳ ಪರೀಕ್ಷೆಯಲ್ಲಿ.**—ಈ ಹೊಸ ಕಿರಣಗಳು ಮೊಟ್ಟಮೊದಲು ಪ್ರಚಾರಕ್ಕೆ ಬಂದದ್ದು ರೋಗನಿವಾರಣೆಯಲ್ಲಿ. ಕ್ರಮೇಣ ಇತರ ಜೀವನ ಕ್ಷೇತ್ರಗಳಲ್ಲಿಯೂ ಇದರ ಉಪಯೋಗವು ಪ್ರಸರಿಸಿತು. ೧೮೯೬ರಲ್ಲಿ ಯೇಲ್ ವಿಶ್ವವಿದ್ಯಾಲಯದ ರೈಟ್ ಎಂಬ ಸಂಶೋಧಕನು ಬೆಸೆದ ಒಂದು ಲೋಹದ ತುಂಡನ್ನು ಈ ಕಿರಣಗಳಲ್ಲಿ ಪರೀಕ್ಷಿಸಿದನು. ಮೇಲೆ ನೋಡಲು ಬೆಸಗೆಯಲ್ಲಿ, ಯಾವ ಲೋಪವೂ ಇಲ್ಲದೆ, ಈ ತುಂಡು ಎರಡು ಪ್ರತ್ಯೇಕ ಚೂರುಗಳಿಂದ ಕೂಡಿದ್ದು ಎಂದು ಹೇಳಲೇ ಸಾಧ್ಯವಿರಲಿಲ್ಲ. ಆದರೆ ಎಕ್ಸ್ ರೇ ನೆರಳಿನಲ್ಲಿ ಬೆಸಗೆಯ ಒಳಭಾಗದಲ್ಲಿದ್ದ ಬಿರುಕು ವಿಶದವಾಗಿ ಕಂಡಿತು. ಸೈನ್ಯಶಾಖೆಯವರಿಗೆ ಈ ವಿಷಯ ಮುಟ್ಟಿತು. ದೊಡ್ಡ ದೊಡ್ಡ ಫಿರಂಗಿಗಳನ್ನು ಈ ರೀತಿ ಪರೀಕ್ಷಿಸುವುದು ಎಷ್ಟು ಆವಶ್ಯಕ ಮತ್ತು ಅನುಕೂಲ ಎಂದು ತಿಳಿಯಿತು. ಯುದ್ಧದಲ್ಲಿ ಈಗ ಉಪಯೋಗಿಸುವ ಫಿರಂಗಿಗಳು ಅಗಾಧವಾದ ಯಂತ್ರಗಳು. ಅವುಗಳಿಂದ ಹೊರಟ ಅತಿ ಭಾರವಾದ ಗುಂಡುಗಳು ಇಪ್ಪತ್ತು ಮೈಲಿಯಾಚೆ ಆಸ್ಫೋಟನವಾಗುವಂತೆ ಏರ್ಪಡಿಸಬೇಕಾಗುತ್ತದೆ. ಜರ್ಮನರು ಎಪ್ಪತ್ತೈದು ಮೈಲಿ ದೂರ ಗುಂಡನ್ನು ಎಸೆಯಬಲ್ಲ ಯಂತ್ರಗಳನ್ನು ಇತ್ತೀಚೆಗೆ ಕಂಡುಹಿಡಿದಿರುತ್ತಾರೆ. ಈ ಫಿರಂಗಿಗಳ ಕೊಳಬೆಗಳು ಸುಮಾರು

ಮೂವತ್ತು ಅಡಿಗಳಷ್ಟಿರುತ್ತವೆ. ಅವುಗಳ ಬಾಯಿಯಲ್ಲಿ ನಾವು ಧಾರಾಳವಾಗಿ ನುಸಿಯಬಹುದು. ಇವುಗಳ ಮೈ ದಪ್ಪ ಅರ್ಧ ಅಡಿ ಅಥವಾ ಅದಕ್ಕೆ ಹೆಚ್ಚಾಗಿಯೂ ಇರಬೇಕಾಗುತ್ತದೆ. ಈ ರೀತಿಯ ಕೊಳಬೆಗಳನ್ನು ಎರಕ ಹೊಯ್ಯುವುದು ಎಷ್ಟು ಕಷ್ಟ, ನೋಡಿ! ಕೊಳಬೆಗಳಲ್ಲಿ ಹುಳುಕು ಬಿರುಕು ಯಾವುದೂ ಇರಕೂಡದು. ಸರಿಯಾಗಿ ಪರೀಕ್ಷಿಸದಿದ್ದರೆ ಯುದ್ಧ ಮಧ್ಯದಲ್ಲಿ ಇವುಗಳಿಂದ ನೂರಾರು ಮೈಲಿ ವೇಗದಲ್ಲಿ ನುಗ್ಗುವ ಅತಿ ತೂಕವಾದ ಗುಂಡುಗಳ ಸಿಡಿತದಲ್ಲಿ ಇವೂ ಸಿಡಿದುಹೋಗಿ ವ್ಯೂಹವೇ ಹಾಳಾಗುವ ಸಂಭವವುಂಟು. ಎಕ್ಸ್ ರೇ ಸಹಾಯವಿಲ್ಲದೆ ಇವುಗಳನ್ನು ಪರೀಕ್ಷಿಸಲು ಸಾಧ್ಯವೇ ಇಲ್ಲ. ಯುದ್ಧಕಾಲದಲ್ಲಿ ಶತ್ರುಪಕ್ಷದ ಯುದ್ಧಸಾಮುಗ್ರಿಗಳನ್ನು ಕಷ್ಟಪಟ್ಟು ಪಡೆದು ಪರೀಕ್ಷಿಸಬೇಕಾಗುತ್ತದೆ. ಕೆಲವು ಗುಂಡುಗಳನ್ನೂ ಬಂದೂಕಗಳನ್ನೂ ಒಡೆಯುವ ಆಗತ್ಯ ಬೀಳುತ್ತದೆ. ಮೊದಲು ಎಕ್ಸ್ ರೇ ಸಹಾಯದಿಂದ ಇವುಗಳ ಒಳಪರೀಕ್ಷೆ ನಡಸಿ ಅವುಗಳಲ್ಲಿ ಅಪಾಯಕರವಾದ ಸಾಮಾನುಗಳಿದ್ದರೆ ತಕ್ಕ ಭದ್ರತೆಗಳನ್ನುಂಟುಮಾಡಿಕೊಂಡು ಅನಂತರ ಅವುಗಳನ್ನು ಒಡೆಯುತ್ತಾರೆ. ಈ ಕ್ರಮವು ರೂಢಿಗೆ ಬರುವುದಕ್ಕೆ ಮೊದಲು ಈ ಕೆಲಸಕ್ಕೆ ನಿಯಮಿತರಾದವರಲ್ಲಿ ಅನೇಕರು ಸಾಯುತ್ತಿದ್ದರು. ದೊಡ್ಡ ಹಡಗುಗಳ ಬುಡವೂ ಬಹಳ ದಪ್ಪನಾದ ತಗಡಿನಿಂದ ಬೆಸೆದಿರುತ್ತದೆ. ಈ ತಗಡುಗಳನ್ನೂ ಬೆಸಗೆಗಳನ್ನೂ ಸರಿಯಾಗಿ ಪರೀಕ್ಷಿಸಬೇಕು. ನೀರಿನ ಮಧ್ಯದಲ್ಲಿ ಇವು ಬಾಯಿಬಿಟ್ಟುಕೊಂಡರೆ ವಿಪರೀತ ಅನರ್ಥವು ಸಂಭವಿಸುತ್ತದೆ. ವಿಮಾನಗಳು ಅತ್ಯಂತ ವೇಗವಾಗಿ ಸಂಚರಿಸುತ್ತವೆ. ಅವುಗಳಲ್ಲಿರುವ ಒಂದೊಂದು ಬೆಸಗೆಯನ್ನೂ ಸರಿಯಾಗಿ ಪರೀಕ್ಷಿಸಬೇಕು. ರೈಲ್ವೆ ಎಂಜಿನ್ ಮೊದಲಾದ ದೊಡ್ಡದೊಡ್ಡ ಯಂತ್ರಗಳ ಭಾಗಗಳನ್ನೂ ಇದೇ ರೀತಿ ಪರೀಕ್ಷಿಸಬೇಕು. ಅರವತ್ತು ಮೈಲಿ ವೇಗದಲ್ಲಿ ನುಗ್ಗುವ ಒಂದು ರಾಕ್ಷಸಯಂತ್ರವು ಯಾವುದಾದರೂ ಒಂದು ಬೆಸಗೆಯಲ್ಲಿ ಲೋಪವಿದ್ದು, ಅಥವಾ ತಗಡಿನಲ್ಲಿ ಬಿರುಕಿದ್ದು, ಸಿಡಿದರೆ ಎಷ್ಟು ಜನ ಸಾಯುವರು ನೋಡಿ! ಅಮೆರಿಕದಲ್ಲಿ ಅನೇಕ ಮನೆಗಳು ಹದಿನೈದು ಇಪ್ಪತ್ತು ಅಂತಸ್ತಿರುತ್ತವೆ. ಅವುಗಳಿಗೆ ಉಪಯೋಗಿಸುವ ಉಕ್ಕಿನ ತೊಲೆಗಳಲ್ಲಿ ಸ್ವಲ್ಪವೂ ಕಳಂಕವಿರಕೂಡದು. ಈ ಪ್ರತಿಯೊಂದು ಪರೀಕ್ಷೆಗೂ ಎಕ್ಸ್ ರೇಗಳನ್ನು ಉಪಯೋಗಿಸದೆ ಗತ್ಯಂತರವಿಲ್ಲ. ಯುದ್ಧರಂಗದಲ್ಲಿ ಅನೇಕ ಕಟ್ಟಡಗಳ ಗೋಡೆ ಮತ್ತು ಸೂರುಗಳ ಒಳಪರೀಕ್ಷೆಯನ್ನು ಮಾಡಬೇಕಾಗುತ್ತದೆ. ಇವುಗಳ ಒಳಗಡೆ ಅಪಾಯಕರವಾದ ಸಾಮಾನುಗಳನ್ನು ಹೂಳಲು ಅನೇಕ ಒಳಸಂಚುಗಳು ನಡೆಯುತ್ತವೆ. ಸರಿಯಾದ ಪರೀಕ್ಷೆ ನಡೆಸಿ ಅನಂತರ ಸೇನಾಧಿಪತಿಗಳ ವಾಸಕ್ಕೋ ಅಥವಾ ಮದ್ದು ಗುಂಡುಗಳನ್ನಿಡುವುದಕ್ಕೋ ಇವುಗಳನ್ನು ಉಪಯೋಗಿಸುತ್ತಾರೆ.

**ಆಹಾರಸಾಮಗ್ರಿಗಳ ಮತ್ತು ಇತರ ವಸ್ತುಗಳ ಪರೀಕ್ಷೆ.**—ವ್ಯಾಪಾರಗಾರನಿಗೆ ಇದರ ಉಪಯೋಗ ಸೋಡಿ: ಅಮೇರಿಕ ದೇಶದಲ್ಲಿ ಹಿಟ್ಟಿಗೆ ಅದೇ ವರ್ಣದ ಮರಳನ್ನೂ, ಸಕ್ಕರೆಗೆ ಸುಣ್ಣಕಲ್ಲು ಪುಡಿಯನ್ನೂ ಸೇರಿಸಿ ತೂಕವನ್ನು ಹೆಚ್ಚಿಸುತ್ತಿದ್ದರು. ಎಕ್ಸ್ ರೇಗಳು ಈ ಕಳ್ಳತನವನ್ನು ಬಯಲುಮಾಡಿದವು. ಜರ್ಮನಿಯಲ್ಲಿ ಆಹಾರಪದಾರ್ಥಗಳ ಪರೀಕ್ಷೆಯಲ್ಲಿ ಇವುಗಳನ್ನು ವಿಶೇಷವಾಗಿ ಉಪಯೋಗಿಸುತ್ತಾರೆ. ರೇಷ್ಮೆ ಮತ್ತು ಹತ್ತಿಯಿಂದ ತಯಾರಾದ ಬಟ್ಟೆಗಳನ್ನು ಕೆಲವು ಲೋಹಗಳ ದ್ರಾವಕದಲ್ಲಿ ಅದ್ದಿ ಅವುಗಳ ದಪ್ಪ ಮತ್ತು ಹೊಳಪನ್ನು ಹೆಚ್ಚಿಸಿ ಜನರನ್ನು ಮೋಸಪಡಿಸುತ್ತಿದ್ದರು. ಈಗ ಇದಕ್ಕೆ ಅವಕಾಶವಿಲ್ಲ. ಒಳ್ಳೆಯ ವಜ್ರದ ಮೂಲಕ ಈ ಕಿರಣಗಳು ಪ್ರವೇಶಿಸುತ್ತವೆ. ಕೃತಕ ವಜ್ರಗಳಲ್ಲಿ ಇವು ಸರಿಯಾಗಿ ಹಾಯುವುದಿಲ್ಲ. ಈ ರೀತಿ ಪರೀಕ್ಷೆಯಿಂದ ಒಳ್ಳೆಯ ರತ್ನಗಳನ್ನು ಪತ್ತೆಮಾಡಲು ಅನುಕೂಲವಾಯಿತು. ಸಮುದ್ರತಳದಲ್ಲಿ ಮುತ್ತನ್ನು ಬೆದಕುವವರು ಈಗ ಆ ಪ್ರಾಣಿಗಳ ಒಳಗಡೆ ಮುತ್ತು ತಯಾರಾಗಿದೆಯೆ ಇಲ್ಲವೆ ನೋಡಿಕೊಂಡು ಅನಂತರ ಅವುಗಳನ್ನು ಸಂಗ್ರಹಿಸುತ್ತಾರೆ. ಮೊದಲು ಮುತ್ತಿಲ್ಲದಿದ್ದ ಅನೇಕ ಪ್ರಾಣಿಗಳನ್ನು ಕೊಲ್ಲಬೇಕಾಗಿತ್ತು. ಈಗ ಅವನ್ನು ಪುನಃ ನೀರಿಗೆ ಬಿಡುವುದರಿಂದ ಮುತ್ತು ತಯಾರಾಗಲು ಹೆಚ್ಚು ಅವಕಾಶ ಕಲ್ಪಿಸಿದಂತಾಯಿತು. ಗಣಿಗಳಲ್ಲಿ ಕಲ್ಲಿದ್ದಲಿನ ಒಳರಚನೆಯನ್ನು ನೋಡಲು ಇವನ್ನು ಉಪಯೋಗಿಸುತ್ತಾರೆ. ಗಾಲ್ಫ್ ಚೆಂಡುಗಳ ಒಳರಚನೆಯು ಸರಿಯಾಗಿಲ್ಲದಿದ್ದರೆ ಅವು ನೆಲಕ್ಕೆ ಬಿದ್ದೊಡನೆ ಸರಿಯಾದ ದಿಕ್ಕಿನಲ್ಲಿ ಹೋಗುವುದಿಲ್ಲ. ಕಾರ್ಖಾನೆಯವರು ಎಕ್ಸ್ ರೇಗಳಿಂದ ಇವುಗಳನ್ನು ಪರೀಕ್ಷಿಸುತ್ತಾರೆ. ಹೊಗೆಸೊಪ್ಪಿನ ಮೇಲೆ ಒಂದು ವಿಧವಾದ ಸೂಕ್ಷ್ಮ ಕ್ರಿಮಿಗಳಿರುತ್ತವೆ. ಇವು ಬಹಳ ಅಪಾಯಕರ. ಈಗ ಈ ಕಿರಣಗಳ ಕಾವಿನಲ್ಲಿ ಸೊಪ್ಪನ್ನು ಶುದ್ಧಿಮಾಡಿ ಅನಂತರ ಒಳ್ಳೊಳ್ಳೆಯ ಸಿಗರೇಟುಗಳನ್ನು ತಯಾರಿಸುವುದು ವಾಡಿಕೆಗೆ ಬಂದಿದೆ. ರೈಲಿಗೂ, ಪೋಸ್ಟಾಫೀಸಿಗೂ ಬರುವ ಭಾಂಗಿಗಳಲ್ಲಿಯೂ ಮತ್ತು ಹಡಗುಗಳ ಮೂಲಕ ಬಂದುಹೋಗುವ ಭಾಂಗಿಗಳಲ್ಲಿಯೂ ಸಂಶಯವಾದವುಗಳನ್ನು ಪರೀಕ್ಷಿಸಲು ಈ ಕಿರಣಗಳು ಸಹಾಯಮಾಡುತ್ತವೆ. ಮಾಲಿಗೆ ತಕ್ಕಂತೆ ರುಸುಂ ತೆಗೆದುಕೊಳ್ಳಬೇಕಾಗುತ್ತದೆ. ಅಲ್ಲದೆ ಹಿಂದೆ ಈ ರೀತಿ ಪರೀಕ್ಷೆಗೆ ಅವಕಾಶವಿಲ್ಲದೆ ಕೆಲವು ಅಪಾಯಗಳುಂಟಾಗಿವೆ. ಯುದ್ಧಕಾಲದಲ್ಲಿ ಈ ಪರೀಕ್ಷೆಯ ಅಗತ್ಯವೆಷ್ಟು ನೀವೇ ಊಹಿಸಿ! ನಾಯಿಗಳು ಕುದುರೆಗಳು ಮತ್ತಿತರ ಪ್ರಾಣಿಗಳು ಕಾಣದೆ ಲೋಹಗಳ ಚೂರನ್ನು ನುಂಗಿ ನರಳುವುದುಂಟು. ಆಗ ತಕ್ಕ ಪರೀಕ್ಷೆ ನಡಸಿ ಚಿಕಿತ್ಸೆ ಮಾಡಿ ಅವುಗಳನ್ನು ಬದುಕಿಸುತ್ತಾರೆ. ಒಂದು ಆನೆಯು ಬೆಲೆಬಾಳುವ ಒಂದು

ಉಂಗುರವನ್ನು ನುಂಗಿತ್ತಂತೆ. ಆನೆಯನ್ನು ಕೊಲ್ಲುವುದಕ್ಕಿಲ್ಲ, ಉಂಗುರವನ್ನು ಕಳೆದುಕೊಳ್ಳುವುದಕ್ಕಿಲ್ಲ. ಆಗ ಎಕ್ಸ್‌ರೇ ಸಹಾಯದಿಂದ ಉಂಗುರವು ಇದ್ದ ಸ್ಥಳವನ್ನು ಪತ್ತೆಮಾಡಿ ಆನೆಯನ್ನು ಸಾಯಿಸದೆ ಅದನ್ನು ಹೊರಕ್ಕೆ ತೆಗೆದರಂತೆ.

**ಪುರಾತನ ಚಿತ್ರಪರೀಕ್ಷೆ.**—ಈ ಕಿರಣಗಳಿಂದ ಕಲೆಗೂ ಉಪಯೋಗವಾಗಿದೆ. ಕೆಲವು ಪುರಾತನ ಚಿತ್ರಪಟಗಳ ಸೌಂದರ್ಯವನ್ನು ಸರಿಯಾಗಿ ತಿಳಿಯಲಾರದ ಅಜ್ಞರು ತಮ್ಮ ಅಭಿರುಚಿಗೆ ತಕ್ಕಂತೆ ಅವುಗಳನ್ನು ಬದಲಾಯಿಸುತ್ತಾರೆ. ಈ ಬದಲಾವಣೆಗೆ ಉಪಯೋಗಿಸುವ ಈಗಿನ ಬಣ್ಣಗಳು ಕಲ್ಲಿದ್ದಲಿನ ಟಾರಿನಿಂದ ತಯಾರಾದವು. ಇವುಗಳ ಮೂಲಕ ಎಕ್ಸ್ ರೇ ನುಗ್ಗುತ್ತದೆ. ಹಳೆಯ ಕಾಲದಲ್ಲಿ ಬಣ್ಣಗಳನ್ನು ಬೇರೆ ವಿಧಾನದಲ್ಲಿ ತಯಾರಿಸಿಕೊಳ್ಳುತ್ತಿದ್ದರು. ಅವುಗಳ ಮೂಲಕ ಈ ಕಿರಣಗಳು ಪ್ರವೇಶಿಸುವುದು ಕಷ್ಟ. ಕ್ರೈಸ್ತನ ಮರಣಚಿತ್ರವೊಂದರ ಮುನ್ನೆಲೆಯಲ್ಲಿ ಒಬ್ಬ ಮಹಿಳೆಯು ಚಿತ್ರಿತಳಾಗಿದ್ದಳು. ಅದು ಬಹಳ ಪ್ರಾಚೀನಕಾಲದ ಪಟ. ಕಲಾಭಿಜ್ಞರು ಇದನ್ನು ಬಹಳವಾಗಿ ಮೆಚ್ಚಿ, ಆ ಮಹಿಳೆಯ ಚಿತ್ರವಿಲ್ಲದಿದ್ದರೆ ಅದರ ಸೌಂದರ್ಯವು ಅತ್ಯಧಿಕವಾಗುತ್ತಿತ್ತೆನ್ನುತ್ತಿದ್ದರು. ಆಮ್ಸ್ಟರ್ಡಾಂ ನಿವಾಸಿಯಾದ ಡಾ|| ಹೇಲ್ ಬ್ರಾನ್ ಎಂಬ ಪಂಡಿತನು ಎಕ್ಸ್ ರೇ ಸಹಾಯದಿಂದ ಇದನ್ನು ಪರೀಕ್ಷಿಸಿ ಆ ಮಹಿಳೆಯ ಹಿಂದೆ ಒಬ್ಬ ಯತಿಯ ರೂಪವನ್ನು ಕಂಡನು. ಮೇಲೆ ನೋಡಿದರೆ ಅದರ ಸುಳಿವೇ ತಿಳಿಯುತ್ತಿರಲಿಲ್ಲ. ಕಷ್ಟಪಟ್ಟು ಆ ಮಹಿಳೆಯ ಚಿತ್ರವನ್ನಳಿಸಲು, ಮೊದಲಿದ್ದ ಯತಿಯ ರೂಪವು ಕಂಗೊಳಿಸಿತು. ಆಗ ಚಿತ್ರದ ಕಳೆಯೇ ಬದಲಾಯಿಸಿ, ಕಲಾನಿಪುಣನ ಕೌಶಲ್ಯವು ಸರಿಯಾಗಿ ವ್ಯಕ್ತವಾಯಿತು; ಕಲಾಕೋವಿದರೆಲ್ಲರೂ ಚಿತ್ರದ ಮಹಿಮೆಯನ್ನು ಕೊಂಡಾಡಿದರು. ಕಲಾಪ್ರಪಂಚದಲ್ಲಿ ನೂರಾರು ವರ್ಷಗಳಿಂದ ಬದುಕಿ ಬಂದು, ಜನರಲ್ಲಿ ಸ್ಫೂರ್ತಿಯನ್ನುಂಟುಮಾಡಿ ಅವರ ವಿಶ್ವಾಸಕ್ಕೆ ಪಾತ್ರವಾಗಿರುವ ಅನೇಕ ಚಿತ್ರಗಳಿವೆ. ಇಂಥ ಒಂದು ಚಿತ್ರವು ಈಗ ಕೆಲವು ದಿವಸಗಳಲ್ಲಿ ಎಂಟು ಲಕ್ಷ ರೂಪಾಯಿಗೆ ಮಾರಾಟವಾಯಿತು. ಸರಿಯಾದ ವ್ಯಾಪಾರಗಾರರು ಇವನ್ನು ಸರಿಯಾಗಿ ಪರೀಕ್ಷಿಸದೆ ಕೊಳ್ಳುವುದಿಲ್ಲ, ಮಾರುವುದಿಲ್ಲ. ಎಕ್ಸ್ ರೇಗಳು ಇವುಗಳ ನಿಜಸ್ವರೂಪವನ್ನು ಸುಲಭವಾಗಿ ತಿಳಿಯಪಡಿಸುತ್ತವೆ. ಹಳೆಯ ಚಿತ್ರಗಳ ಪುನರ್ರಚನೆಗೂ ಇವು ಹೆಚ್ಚು ಸಹಾಯಕವಾಗಿವೆ.

**ವಸ್ತುಗಳ ಸ್ವರೂಪನಿರ್ಣಯಕ್ಕೆ ಸಹಕಾರಿ.**—ಈ ಕಿರಣಗಳ ಸ್ವರೂಪವು ಮೊದಮೊದಲು ತಿಳಿಯದೆ ಅನಂತರ ಪ್ರೊ|| ಲಾವೆಯ ಸಲಹೆಯ ಮೇಲೆ ಹರಳುಗಳ ಮೂಲಕ ಬಿಡಲು, ಸ್ಥಿರವಾಯಿತೆಂದು ತಿಳಿಸಲಾಗಿದೆ. ಇವುಗಳ ಸ್ವರೂಪವನ್ನು ಹರಳು ತಿಳಿಸಿಕೊಟ್ಟಂತೆಯೇ ಹರಳುಗಳ ನಿಜವಾದ ಸ್ವರೂಪವನ್ನು ಇವು ಸರಿಯಾಗಿ

ತಿಳಿಸುತ್ತವೆ. ಇವುಗಳ ಸಹಾಯದಿಂದ "ಹರಳುಶಾಸ್ತ್ರ"ವೆಂಬ ಒಂದು ದೊಡ್ಡ ಶಾಸ್ತ್ರವೇ ಹುಟ್ಟಿಕೊಂಡಿದೆ. ಇದರ ಆವಶ್ಯಕತೆಯನ್ನು ತಿಳಿಯಲು ಒಂದು ಉದಾಹರಣೆಯನ್ನು ತೆಗೆದುಕೊಳ್ಳೋಣ. ವಜ್ರವು ಬಹಳ ಗಟ್ಟಿಯಾದ ಪದಾರ್ಥ. ಸರಿಯಾಗಿ ಕತ್ತರಿಸಿದರೆ ಅದು ಅದ್ವಿತೀಯ ಪ್ರಕಾಶವನ್ನು ಬೀರುತ್ತದೆ. ಆದುದರಿಂದಲೇ ಅದನ್ನು ಒಂದು ರತ್ನವೆನ್ನುತ್ತೇವೆ, ಅತ್ಯಧಿಕ ಬೆಲೆಯನ್ನು ಕೊಟ್ಟು ಕೊಳ್ಳಲು ಸಿದ್ಧರಾಗಿದ್ದೇವೆ. ಆದರೆ ಅದರ ನಿಜಸ್ವರೂಪವನ್ನು ಹೇಳಿದರೆ ನಂಬುವುದೇ ಕಷ್ಟವಾಗುತ್ತದೆ. ಇದರ ಸ್ವರೂಪಕ್ಕೂ ಹಣೆಯಮೇಲಿನ ಅಂಗಾರಕ್ಕೂ ಸ್ವಲ್ಪವೂ ವ್ಯತ್ಯಾಸವಿಲ್ಲ. ಇದು ಅಂಗಾರದ ಅತಿ ಶುದ್ಧರೂಪ. ಇದರಂತೆಯೇ ಇರುವ ಇಂಗಾಲದ ಇನ್ನೊಂದು ಶುದ್ಧರೂಪವನ್ನು ನಾವು ನಿತ್ಯವೂ ವ್ಯವಹಾರದಲ್ಲಿ ಉಪಯೋಗಿಸುತ್ತೇವೆ. ಸೀಸದಕಡ್ಡಿಯನ್ನು ನಾವೆಲ್ಲರೂ ಉಪಯೋಗಿಸುತ್ತೇವೆ. ಅದರಲ್ಲಿರುವುದು ಸೀಸವಲ್ಲ. ತಿಳಿಯದೆ ಮೊದಲು ಅದನ್ನು ಸೀಸದಕಡ್ಡಿಯೆಂದು ಕರೆದು ಆ ಮಾತು ಬೇರೂರಿಕೊಂಡಿದೆ. ಸೀಸವು ಇಷ್ಟು ಸುಲಭವಾಗಿ ಸವೆಯುವ ಪದಾರ್ಥವಲ್ಲ. ನಾವು ಬರೆಯುವ ಪ್ರತಿಯೊಂದು ಮಾತಿಗೂ ಸ್ವಲ್ಪ ಸವೆಯುವುದು ಇಂಗಾಲದ ಈ ಇನ್ನೊಂದು ರೂಪ. ಇದನ್ನು ಗ್ರ್ಯಾಫೈಟ್ (graphite) ಎನ್ನುತ್ತಾರೆ. ಇದರ ಮಾರ್ದವಕ್ಕಾಗಿ ಅನೇಕ ಯಂತ್ರಗಳಿಗೆ ಇದನ್ನು ಕೀಲೆಣ್ಣೆಯಂತೆ ಉಪಯೋಗಿಸುತ್ತಾರೆ. ಇಂಗಾಲದ ಈ ರೂಪವು ಇಷ್ಟು ಮೃದುವಾಗಿಯೂ ಕಗ್ಗಗೂ ವಜ್ರದ ರೂಪವು ಅಷ್ಟು ಗಟ್ಟಿಯಾಗಿಯೂ ಪ್ರಕಾಶವಾಗಿಯೂ ಇರಲು ಕಾರಣವೇನು ? ಈ ಸಮಸ್ಯೆಯನ್ನು ಪರಿಹಾರಮಾಡಿದ್ದು ಎಕ್ಸ್ ರೇ. ಈ ವಿಷಯವಾಗಿ ಸ್ವಲ್ಪ ಚರ್ಚಿಸೋಣ.

ನಾವು ನೋಡುವ ಗಟ್ಟಿಪದಾರ್ಥಗಳೆಲ್ಲವೂ ಹರಳುಗಳೇ. ತುಪ್ಪಟ, ರೇಷ್ಮೆ, ದಾರ, ಮಣ್ಣು ಮೊದಲಾದುವೆಲ್ಲ ಹರಳುಗಳೇ. ಪಟಿಕದ, ಗಂಧಕದ, ಅಥವಾ ಕಲ್ಲುಸಕ್ಕರೆಯ ಹರಳುಗಳಂತೆ ದೊಡ್ಡದಾಗಿ, ನೋಡಲು ಅಂದವಾಗಿ ನುಣುಪಾಗಿರುವುದನ್ನು ಹರಳೆನ್ನುವುದು ವಾಡಿಕೆ. ಆದರೆ ಪದಾರ್ಥಗಳ ಸಣ್ಣಸಣ್ಣ ಕಣಗಳೂ ಹರಳುಗಳೇ. ಬರಿಯ ಕಣ್ಣಿಗೆ ಇವು ಕಾಣುವುದಿಲ್ಲ, ಅಷ್ಟೇ. ತಕ್ಕ ಸಾಧನಗಳಿಂದ ಪದಾರ್ಥಗಳ ಒಳರಚನೆಯನ್ನು ಪರೀಕ್ಷಿಸಿದರೆ ಕ್ರಮವಾಗಿ ಜೋಡಿಸಿರುವ ಕೆಲವು ಆಕೃತಿಗಳು ಕಾಣುತ್ತವೆ. ಕೆಲವು ಘನಾಕೃತಿಗಳು (cubes); ಮೂಲೆಗಳಲ್ಲಿ ಒಂದೊಂದು ಪರಮಾಣು, ಮಧ್ಯದಲ್ಲಿ ಒಂದು ಪರಮಾಣು ಈ ರೀತಿ ನಿರ್ಮಿಸಿರುವ ಕಟ್ಟಡಗಳು. ಕೆಲವು ಘನಾಕೃತಿಗಳ ಪ್ರತಿಯೊಂದು ಮುಖದ ಮಧ್ಯದಲ್ಲಿಯೂ ಒಂದೊಂದು ಅಣುವಿರುತ್ತದೆ. ಪದಾರ್ಥಗಳ ಒಂದೊಂದು ಕಣವೂ ಈ ರೀತಿಯ ಆಕೃತಿಗಳ ಒತ್ತಾದ ಜೋಡಣೆಯಿಂದ ಆದದ್ದು. ಇಟ್ಟಿಗೆಗಳನ್ನು ಜೋಡಿಸಿ

ಕಟ್ಟಡವನ್ನು ನಿರ್ಮಿಸುವಂತೆ ಆಕೃತಿಗಳ ಜೋಡಣೆಯಿಂದ ಪದಾರ್ಥವು ನಿರ್ಮಿತವಾಗಿರುತ್ತದೆ. ಒಂದು ಪದಾರ್ಥದ ಪ್ರತಿಯೊಂದು ಮೂಲ ಆಕೃತಿಯೂ ಒಂದೇ ತೆರನಾಗಿರುತ್ತದೆ. ಒಂದು ಆಕೃತಿಗೂ ಪಕ್ಕದ್ದಕ್ಕೂ ಒಂದು ಗೊತ್ತಾದ ಅಂತರವಿರುತ್ತದೆ. ಈ ಅಂತರವನ್ನು ಬದಲಾಯಿಸುವುದು ಬಹಳ ಕಷ್ಟ. ಸೂರ್ಯನೂ




**ಅಡಿಗೆ ಉಪ್ಪಿನ ಒಂದು 'ಹರಳು'**

ಇದರಲ್ಲಿ ಸೋಡಿಯಂ (ಸೊ) ಮತ್ತು ಕ್ಲೋರೀನ್ (ಕ್ಲೊ) ಪರಮಾಣುಗಳು ಹೇಗೆ ಘನಾಕೃತಿಯಾಗುವಂತೆ ಜೋಡಿಸಿಕೊಂಡಿವೆ ಎಂಬುದನ್ನು ನೋಡಬಹುದು. ಒಂದು ಸಣ್ಣ ಹರಳಿನಲ್ಲಿ ಈ ರೀತಿ ಜೋಡಿಸಿಕೊಂಡಿರುವ ಅನೇಕ ಕೋಟಿ ಪರಮಾಣುಗಳಿರುತ್ತವೆ.

ಗ್ರಹಗಳೂ ಪರಸ್ಪರ ಎಳೆಯುವಂತೆ ಈ ಆಕೃತಿಗಳು ಒಂದನ್ನೊಂದು ವಿಶೇಷವಾದ ಶಕ್ತಿಯಿಂದ ಎಳೆಯುತ್ತವೆ. ವಜ್ರದಲ್ಲಿ ಆಕೃತಿಗಳಿಗೆ ಒಂದು ಕ್ಲುಪ್ತ ಅಂತರವಿದೆ. ಸೀಸದಕಡ್ಡಿ ಸೀಸದ ಆಕೃತಿಗಳೂ ವಜ್ರದ ಆಕೃತಿಗಳಂತೆಯೇ ಇವೆ. ಆದರೆ ಅವುಗಳಿಗಿರುವ ಪರಸ್ಪರ ಅಂತರವು ವಜ್ರದ ಆಕೃತಿಗಳಿಗೆ ಇರುವ ಅಂತರದ ಎರಡರಷ್ಟಿದೆ. ಬ್ರಾಗ್ ಎಂಬವನು ಈ ಸಮಸ್ಯೆಯ ವಿಷಯವನ್ನು ಬಹಳವಾಗಿ ಯೋಚಿಸಿ ಪರಿಹಾರಮಾಡಿದನು. ವಜ್ರದ ಆಕೃತಿಗಳಿಗೆ ಇರುವ ಅಂತರ ೧.೫೪ ಆ. ಮಾನವೆಂದೂ ಗ್ರಾಫೈಟ್ ಆಕೃತಿಗಳಿಗಿರುವ ಅಂತರ ಸುಮಾರು ೩ ಆ.ಮಾ. ಗಳೆಂದೂ

ಕಂಡುಹಿಡಿದನು. ಈ ವ್ಯತ್ಯಾಸವು ಪದಾರ್ಥಗಳಲ್ಲಿ ಎಷ್ಟೊಂದು ತಾರತಮ್ಯ ವನ್ನುಂಟುಮಾಡುತ್ತವೆ, ನೋಡಿ! ಒಂದನ್ನು ಅಮರಲೋಕದ ವಸ್ತುವೆಂದು ಮೆಚ್ಚುತ್ತೇವೆ. ಇನ್ನೊಂದನ್ನು ಕಾಕರಾಜನ ಕುಲಮುದ್ರೆಯೆಂದು ಧಿಕ್ಕರಿಸು ತ್ತೇವೆ. ವಜ್ರದಿಂದ ನಿಜವಾಗಿಯೂ ಏನೂ ಪ್ರಯೋಜನವಿಲ್ಲ. ಸೀಸದಕಡ್ಡಿಯ ಸೀಸವು ನಮ್ಮ ನಿತ್ಯಜೀವನದಲ್ಲಿ ಅತ್ಯುಪಯುಕ್ತವಾದ ಒಂದು ವಸ್ತು. ಇದರ ಆಕೃತಿಗಳು ಸ್ವಲ್ಪ ದೂರವಾಗಿರುವುದರಿಂದಲೇ ಇದು ಅಷ್ಟು ಮೃದುವಾಗಿರುವುದು. ಆಕೃತಿಗಳು ಸಮೀಪವಾಗಿರುವುದರಿಂದ ವಜ್ರವು ಗಟ್ಟಿಯಾಗಿರುವುದೇನೋ ಸರಿಯೆ. ಆದರೆ ಅದಕ್ಕೆ ಆ ಅಪಾರ ಸೌಂದರ್ಯ ಎಲ್ಲಿಂದ ಬಂತು? ಇದು ಆಶ್ಚರ್ಯಕರವಾದ ವಿಷಯವಾದರೂ ಸೃಷ್ಟಿರಚನೆಯ ವೈಚಿತ್ರ್ಯವೆಂದರಿತು ನಾವು ತೃಪ್ತಿಪಡಬೇಕಾಗು ತ್ತದೆ. ಬ್ರಾಗನು ಇತರ ಪದಾರ್ಥಗಳನ್ನೂ ಈ ರೀತಿ ಪರೀಕ್ಷಿಸಿ ಎರಡು ಮೂರು ರೂಪಗಳಲ್ಲಿ ಕಾಣುವ ಪದಾರ್ಥಗಳಲ್ಲಿ ಇದೇ ರೀತಿ ರಚನಭೇದವಿದೆಯೆಂದು ತೋರಿಸಿ ದನು. ಕಬ್ಬಿಣದಲ್ಲಿಯೂ ಎರಡು ಜಾತಿ ಇವೆಯೆಂದು ಕಂಡುಹಿಡಿದು ಅವುಗಳ ರಚನೆಯನ್ನು ಸರಿಯಾಗಿ ವಿವರಿಸಿ ಯಾವುದು ಹೆಚ್ಚು ಗಟ್ಟಿ ಎಂದು ಸ್ಪಷ್ಟಪಡಿಸಿ ದನು. ಇದರಿಂದ ದೊಡ್ಡ ಯಂತ್ರಗಳ ಮತ್ತು ಕಟ್ಟಡಗಳ ನಿರ್ಮಾಣಕರಿಗೆ ಬಹಳ ಸಹಾಯವಾಗಿದೆ. ಅವರು ಸರಿಯಾದ ಜಾತಿಯ ಕಬ್ಬಿಣವನ್ನು ಉಪಯೋಗಿಸಿ ಮುಂದೆ ಅಪಾಯವಾಗದಂತೆ ನೋಡಿಕೊಳ್ಳುತ್ತಾರೆ.

ಹರಳುಗಳು ರಾಂಟ್‌ಜನ್ ಕಿರಣಗಳನ್ನು ಪ್ರತ್ಯೇಕಿಸಲು ತಕ್ಕ ಸಾಧನಗಳೆಂದು ಹೇಳಿದೆ. ಪ್ರತಿ ಹರಳಿನಲ್ಲಿಯೂ ಪರಮಾಣುಗಳಿಗಿರುವ ಅಂತರವು ಕ್ಲುಪ್ತವಾದದ್ದು. ಈ ಅಂತರಕ್ಕೆ ಸರಿಯಾದ ಅಳತೆಯುಳ್ಳ ಎಕ್ಸ್ ರೇ ಅಲೆಗಳನ್ನು ಅದು ಪ್ರತ್ಯೇಕಿಸಿ ಹೊರಗೆ ಬಿಡುತ್ತದೆ. ಈ ಅಲೆಗಳ ಅಳತೆ ತಿಳಿದೊಡನೆ ಪರಮಾಣುಗಳ ಅಂತರವು ತಿಳಿಯುತ್ತದೆ. ಇದು ತಿಳಿದೊಡನೆ ಪದಾರ್ಥವು ಯಾವುದೆಂದು ಹೇಳಿಬಿಡಬಹುದು. ಏಕೆಂದರೆ ಒಂದು ಪದಾರ್ಥದ ಕಣಗಳಿಗಿರುವ ಅಂತರವು ವಿಧಿವತ್ತಾದದ್ದು. ಅದನ್ನು ಬದಲಾಯಿಸಲಾಗುವುದಿಲ್ಲ. ಮತ್ತು ಬೇರಾವ ಪದಾರ್ಥವನ್ನು ಪರೀಕ್ಷಿಸಿದರೂ ಅವುಗಳ ಪರಮಾಣುಗಳಿಗಿರುವ ಅಂತರವು ಇದಕ್ಕಿಂತ ಭಿನ್ನವಾದುದು, ಪದಾರ್ಥಗಳ ಪರೀಕ್ಷೆ ಎಷ್ಟು ಸುಲಭವಾಯಿತು ನೋಡಿ! ಒಂದು ಲೋಹವನ್ನು ಪರೀಕ್ಷಿಸ ಬೇಕೆನ್ನೋಣ. ಅದರ ಮೂಲಕ ಎಕ್ಸ್ ರೇ ಹಾಯಿಸಿ ವಿಭಜನವಾದ ಅಲೆಗಳನ್ನು ಅಳೆಯಿರಿ. ಈ ಅಲೆಗಳು ಯಾವ ಲೋಹಕ್ಕೆ ಸಂಬಂಧಪಟ್ಟವೆಂದು ಪಟ್ಟಿಯನ್ನು ನೋಡಿ. ಪರೀಕ್ಷಿಸುತ್ತಿರುವ ಲೋಹವು ಅದೇ. ಲೋಹವು ಮಿಶ್ರವಾಗಿದ್ದರೂ ಯಾವ ಯಾವ ಅಲೆಗಳು ಹೊರಬೀಳುತ್ತವೆಯೆಂದು ನೋಡಿಕೊಂಡು ಲೋಹದಲ್ಲಿರುವ

ಪದಾರ್ಥಗಳನ್ನು ಖಚಿತಪಡಿಸಬಹುದು. ಈ ರೀತಿ ವಸ್ತುಪರೀಕ್ಷೆಯಲ್ಲಿ ಈ ಕಿರಣಗಳು ಅತ್ಯಮೂಲ್ಯವಾದ ಸಾಧನವಾಗಿವೆ.

## (೫) ವಿಶ್ವಶಕ್ತಿಯ ಮೂಲ

**ಪರಮಾಣುಗಳ ಒಳರಚನೆ.**—ಸರ್ ಜೆ. ಜೆ. ಥಾಮ್ಸನ್ನರವರ ಸಂಶೋಧನೆಯ ಫಲವಾಗಿ ಪರಮಾಣುಗಳ ವಿಷಯದಲ್ಲಿದ್ದ ಅಭಿಪ್ರಾಯವು ಮಾರ್ಪಟ್ಟಿತೆಂದು ಮೊದಲೇ ತಿಳಿಸಿದ್ದೇವೆ. ಒಂದೊಂದು ಪರಮಾಣುವಿನಲ್ಲಿಯೂ ಧನವಿದ್ಯುದಂಶದ ಸುತ್ತ ಸಂಚರಿಸುವ ವಿದ್ಯುತ್ಕಣಗಳ ಸಂಖ್ಯೆ ಗೊತ್ತಾದದ್ದು. ಪ್ರತಿಯೊಂದು ಮೂಲ ವಸ್ತುವಿಗೂ ವಸ್ತುಪಟ್ಟಿಯಲ್ಲಿ ಪರಮಾಣುಗಳಲ್ಲಿರುವ ಈ ವಿದ್ಯುತ್ಕಣಗಳ ಸಂಖ್ಯೆಗೆ ತಕ್ಕ ಸ್ಥಾನ ಕೊಡಲಾಗಿದೆ. ಮೊದಲನೆಯದು ಜಲಜನಕ. ಏಕೆಂದರೆ ಇದರ ಪರಮಾಣುವಿನಲ್ಲಿ ಒಂದೇ ಒಂದು ವಿದ್ಯುತ್ಕಣವಿದೆ. ೭೯ನೆಯದು ಬಂಗಾರ. ಏಕೆಂದರೆ ಅದರ ಪರಮಾಣುವಿನಲ್ಲಿ ೭೯ ವಿದ್ಯುತ್ಕಣಗಳಿವೆ. ಇದೇರೀತಿ ೮೮ನೆಯದು ರೇಡಿಯಂ. ಎಲ್ಲಕ್ಕೂ ಕೊನೆಯಾದದ್ದು ಯುರೇನಿಯಂ. ಇದರ ಸ್ಥಾನ ೯೨. ಈ ಮಧ್ಯೆ ಕೆಲವು ಸಂಖ್ಯೆಗಳಿಗೆ ತಕ್ಕ ಪದಾರ್ಥಗಳು ದೊರೆಯದೆ ಖಾಲಿ ಇತ್ತು. ಈಚಿನ ಪರಿಶೋಧನೆಯ ಪರಿಣಾಮವಾಗಿ ಈ ಖಾಲಿ ಸ್ಥಳಗಳಿಗೆ ತಕ್ಕ ಹೊಸ ಲೋಹಗಳು ದೊರೆತಿವೆ. ೧೯೨೩ರಲ್ಲಿ ಹಾಫ್ನಿಯಂ ಎಂಬ ಲೋಹವು ಈ ರೀತಿ ಹೊರಬಿತ್ತು. ೮೫, ೮೭ ನೆಯವು ಇನ್ನೂ ದೊರೆತಿಲ್ಲ. ವಸ್ತುಗಳನ್ನು ಈ ರೀತಿ ಕ್ರಮವಾಗಿ ಜೋಡಿಸುವುದರಿಂದ ಹೊಸ ವಸ್ತುಗಳನ್ನು ಕಂಡುಹಿಡಿಯಲು ಸಹಾಯವಾಯಿತು. ಈ ಸಂಖ್ಯೆಯು ಹೆಚ್ಚುತ್ತಾ ಹೋದಂತೆ ಪದಾರ್ಥಗಳ ಸಾಂದ್ರತೆಯೂ ಹೆಚ್ಚುತ್ತಾ ಹೋಗುತ್ತದೆ. ಬಂಗಾರ, ಸೀಸ, ಪ್ಲಾಟಿನಂ ಹೆಚ್ಚು ಘನತ್ವವುಳ್ಳವು. ಪಟ್ಟಿಯ ಅಡಿಯಲ್ಲಿ ಬಹಳ ಸಮೀಪವಾಗಿ ಕಾಣುತ್ತವೆ. ಅನಿಲಗಳು ಬಹಳ ಹಗುರವಾದವು. ಎಲ್ಲವೂ ಪಟ್ಟಿಯ ಪ್ರಾರಂಭದಲ್ಲಿ ಸಿಗುತ್ತವೆ.

**ಲೋಹಪರಿವರ್ತನೆ.**—ಬಂಗಾರವು ಆದಿಯಿಂದಲೂ ಬಹಳ ಬೆಲೆಯುಳ್ಳ ಪದಾರ್ಥವೆಂದು ಮನ್ನಣೆಪಡೆದಿದೆ. ಪಾದರಸವೂ ಇದರಂತೆಯೇ ಪ್ರಕಾಶವಾದ ಪದಾರ್ಥ. ಇದರ ಬೆಲೆ ಸುಲಭ. ಪ್ರಯತ್ನ ಪಟ್ಟರೆ ಇದನ್ನು ಬಂಗಾರಮಾಡಬಹುದು, ಹೆಚ್ಚು ಧನಿಕರಾಗಬಹುದು ಎಂಬ ಬಯಕೆಯಿಂದ ಅನೇಕರು ಆಸ್ತಿಪಾಸ್ತಿಗಳನ್ನು ಕಳೆದಿದ್ದಾರೆ. ಈ ಗುಟ್ಟನ್ನು ಕಲಿಸುವ ನೆಪದಿಂದ ಕೆಲವು ಬೈರಾಗಿಗಳು ಅನೇಕ ಮಾನ್ಯರಿಗೆ ಹುಚ್ಚು ಹಿಡಿಸುತ್ತಿದ್ದರು. ಇಂಥ ಕೆಲವು ಅಪ್ರಾಮಾಣಿಕರ ದುರ್ವರ್ತನೆಯಿಂದ ಇಂಥ ಸಂಶೋಧಕರೆಲ್ಲರೂ ಮಾಯಗಾರರು, ಮೋಸಗಾರರು ಎಂಬ ಅಪಪ್ರಥೆ

ಹುಟ್ಟಿ ಸರಕಾರವು ಇಂಥವರನ್ನು ಬಂಧಿಸುವ ಪ್ರಸಂಗ ಒದಗಿ ಶಾಸ್ತ್ರದ ಬೆಳವಣಿಗೆಗೆ ಬಹಳ ಕುಂದಕವಾಗಿತ್ತು. ಇದು ಹಳೆಯಕಾಲದ ಮಾತು. ಈಗ ಕೆಲವು ವರ್ಷಗಳ ಹಿಂದೆ ಕ್ಯಾವೆಂಡಿಷ್ ಪ್ರಯೋಗಶಾಲೆಯ ರದರ್‌ಫರ್ಡ್ ಎಂಬ ಪ್ರಸಿದ್ಧ ವಿಜ್ಞಾನಿಯು ಈ ಪರೀಕ್ಷೆಯನ್ನು ಕೈಗೊಂಡನು. ಬಂಗಾರದ ಪರಮಾಣುವಿನಲ್ಲಿ ಪಾದರಸದ ಪರಮಾಣುವಿನಲ್ಲಿರುವುದಕ್ಕಿಂತ ಒಂದು ವಿದ್ಯುತ್ಕಣ ಮಾತ್ರ ಕಡಮೆ ಇದೆ. ಪಾದ ರಸದ ಪರಮಾಣುವಿನ ಕೇಂದ್ರದಿಂದಬಂದು ವಿದ್ಯುತ್ಕಣವನ್ನು ತೆಗೆಯಲು ಸಾಧ್ಯವೇ? ಈ ರೀತಿ ಭಿನ್ನಮಾಡಿದರೆ ಅದು ಬಂಗಾರವಾಗುತ್ತದೆಯೇ? ಈ ಮಹನೀಯನು ಬಹಳಕಾಲ ಪರೀಕ್ಷಿಸಿ, ಕಡುಕಷ್ಟವಾದ ಪ್ರಯೋಗಗಳನ್ನು ನಡೆಸಿ, ಕೊನೆಗೆ ಇದು ಸಾಧ್ಯವೆಂದು ತೋರಿಸಿದನು. ಲೋಹಪರಿವರ್ತನೆಯು ಸಾಧ್ಯವೆಂದೊಡನೆ ಇದು ಸುಲಭವೆಂದೆಣಿಸಬಾರದು. ಸ್ವಲ್ಪ ಪಾದರಸವನ್ನು ಕೊಟ್ಟು ಅದನ್ನು ಬಂಗಾರ ಮಾಡಬೇಕೆಂದು ಹೇಳಿದರೆ ಯಾವ ವಿಜ್ಞಾನಿಗೂ ಸಾಧ್ಯವಿಲ್ಲ. ವಿಶೇಷ ಸಾಹಸದಿಂದ ಕೆಲವು ಪರಮಾಣುಗಳನ್ನು ಮಾತ್ರ ಪರಿವರ್ತಿಸಬಹುದು. ಆದುದರಿಂದ ಈ ಕೆಲಸವು ಮನುಷ್ಯನ ಸಾಹಸಕ್ಕೆ ಒಂದು ಹೆಗ್ಗುರುತಾದರೂ, ವಸ್ತುಜ್ಞಾನವನ್ನು ಹೆಚ್ಚು ಬೆಳೆಸಿದರೂ, ವ್ಯಾಪಾರಗಾರನಿಗೆ ಯಾವ ಸಹಾಯವನ್ನೂ ಮಾಡಲಾರದು. ಸುಲಭ ವಾದ ಮಾರ್ಗಗಳು ಗೊತ್ತಾದರೆ ಬಂಗಾರಕ್ಕೆ ಈಗ ಇರುವ ಬೆಲೆಯು ಬಹಳ ಇಳಿದುಹೋಗುತ್ತದೆ.

## ಎಕ್ಸ್ ರೇಗಳು ಏಕೆ ಉತ್ಪನ್ನವಾಗುತ್ತವೆ?

ಪರಮಾಣುಗಳಲ್ಲಿರುವ ವಿದ್ಯುತ್ಕಣಗಳನ್ನು ಹೆಚ್ಚುಕಡಮೆ ಮಾಡುವುದು ಬಹಳ ಕಷ್ಟವೆಂದು ಹೇಳಿದ್ದೇವೆ. ಮಧ್ಯದಲ್ಲಿ ಸೂರ್ಯನಂತಿರುವ ಧನವಿದ್ಯುದಂಶದ ಸುತ್ತ ಇವು ಗ್ರಹಗಳಂತೆ ಕ್ಲುಪ್ತಪಥದಲ್ಲಿ ಸಂಚರಿಸುತ್ತವೆಯೆಂದೂ ತಿಳಿಸಿದ್ದೇವೆ. ಇವುಗಳ ಪಥವನ್ನು ಬದಲಾಯಿಸುವುದಕ್ಕೆ ವಿಶೇಷ ಶಕ್ತಿಬೇಕು. ಎಕ್ಸ್ ರೇ ಯಂತ್ರದಲ್ಲಿ ಋಣಧ್ರುವದಿಂದ ಹೊರಡುವ ವಿದ್ಯುತ್ಕಣಗಳು ಬಹಳ ವೇಗವಾಗಿ ಸಂಚರಿಸುತ್ತವೆ. ಆದುದರಿಂದ ಅವುಗಳಿಗೆ ವಿಶೇಷ ಶಕ್ತಿಯಿದೆ. ಇವು ಧನಧ್ರುವದ ಸಮೀಪದಲ್ಲಿರುವ ಲಕ್ಷ್ಯದ ಮೇಲೆ ಬಡಿದರೆ ಲಕ್ಷ್ಯದ ಪರಮಾಣುಗಳಲ್ಲಿರುವ ವಿದ್ಯುತ್ಕಣಗಳು ತಮ್ಮ ಪಥವನ್ನು ಬದಲಾಯಿಸುತ್ತವೆ. ಪರಮಾಣುಗಳ ಮಧ್ಯದಲ್ಲಿ ಸಂಚರಿಸುವ ಕೆಲವು ವಿದ್ಯುತ್ಕಣಗಳು ಹೊರಕ್ಕೆ ಬರುತ್ತವೆ. ಪರಮಾಣುವಿನ ಸಮಸ್ಥಿತಿ ಕೆಡುತ್ತದೆ. ಹೆಚ್ಚು ಹೊತ್ತು ಹೀಗಿರಲು ಸಾಧ್ಯವಿಲ್ಲ. ಕೂಡಲೇ ವಿದ್ಯುತ್ಕಣಗಳು ತಮ್ಮ ತಮ್ಮ ಸ್ಥಾನಗಳನ್ನು ಸೇರಿ ಪರಮಾಣುವು ಸಮಸ್ಥಿತಿಗೆ ಬರುತ್ತದೆ. ಸ್ಥಾನಪಲ್ಲಟ

ಹೊಂದಿದ ವಿದ್ಯುತ್ಕಣಗಳು ಸ್ವಸ್ಥಾನವನ್ನು ಸೇರುವಾಗ, ಆ ಸ್ಥಾನಪಲ್ಲಟಕ್ಕೆ ತಗಲಿದ ಶಕ್ತಿಯನ್ನು ಅವು ಪುನಃ ಹೊರಕ್ಕೆ ಚೆಲ್ಲುತ್ತವೆ. ಈ ಶಕ್ತಿಯು ಅಲೆಗಳ ರೂಪದಲ್ಲಿ ಹೊರಡುತ್ತದೆ. ಇವೇ ಎಕ್ಸ್ ರೇ ಅಲೆಗಳು. ಸುಮಾರಾಗಿ ಒಳಗಡೆ ಇರುವ ವಿದ್ಯುತ್ಕಣವನ್ನು ಚಲಿಸುವುದಕ್ಕೆ ಹೆಚ್ಚು ಶಕ್ತಿ ಬೇಕಿಲ್ಲ. ಇದು ಪುನಃ ಸ್ವಸ್ಥಾನವನ್ನು ಸೇರುವಾಗ ಒರುವ ಎಕ್ಸ್ ರೇಗಳೂ ಅಷ್ಟು ಬಲವಾಗಿರುವುದಿಲ್ಲ.




**ಹೀಲಿಯಂ ಪರಮಾಣುವಿನ ಒಳರಚನೆ**

(ಮಧ್ಯದಲ್ಲಿ ಪ್ರೊಟಾನ್. ಸುತ್ತ ಎರಡು ವಿದ್ಯುದಣುಗಳು ತೋರಿಸಿರುವ ಪಥದಲ್ಲಿ ಸಂಚರಿಸುತ್ತವೆ.)

ಬಹಳ ಆಳದಲ್ಲಿರುವ ವಿದ್ಯುತ್ಕಣಗಳನ್ನು ಎಬ್ಬಿಸುವುದಕ್ಕೆ ವಿಶೇಷಶಕ್ತಿ ಬೇಕು. ಇವು ತಮ್ಮ ಸ್ಥಾನವನ್ನು ಸೇರಿದಾಗ ಹೊರಡುವ ಎಕ್ಸ್ ರೇಗಳು ಬಹಳ ತೀಕ್ಷ್ಣ ವಾದವು. ಆದುದರಿಂದ ಎಕ್ಸ್ ರೇಗಳ ಉತ್ಪತ್ತಿಗೆ ಕಾರಣ ಈಗ ಸ್ಪಷ್ಟವಾಗಿರ ಬೇಕು. ಪದಾರ್ಥಗಳ ಪರಮಾಣುಗಳೊಳಗಿರುವ ವಿದ್ಯುತ್ಕಣಗಳನ್ನು ತಕ್ಕ ಸಾಧನ ಗಳಿಂದ ಪ್ರಚೋದಿಸಿದರೆ ಎಕ್ಸ್ ರೇಗಳು ಉದ್ಭವಿಸುತ್ತವೆ.

## ಗ್ಯಾಮಾ ರಶ್ಮಿಗಳ ತಯಾರಿಕೆ

ಈ ರೀತಿ ನಾವು ಪ್ರಚೋದಿಸಬಹುದಾದದ್ದು ಪರಮಾಣುಗಳಲ್ಲಿರುವ ಋಣ ವಿದ್ಯುತ್ಕಣಗಳನ್ನು ಮಾತ್ರ. ಮಧ್ಯದಲ್ಲಿರುವ ಧನವಿದ್ಯುದಂಶವನ್ನು ಕದಲಿಸುವುದು

ಬಹಳ ಕಷ್ಟ. ಅನೇಕ ವಿದ್ಯುತ್ಕಣಗಳ ಶಕ್ತಿಯನ್ನು ಇದು ತಡೆದಿಟ್ಟಿರುವುದರಿಂದ ಇದರ ಶಕ್ತಿ ಬಹಳ ಹೆಚ್ಚು. ಲಕ್ಷಾಂತರ ವಿದ್ಯುತ್ಕಣಗಳ ಬಾಣವನ್ನು ಬಿಟ್ಟರೂ ಒಂದು ವಿದ್ಯುತ್ಕಣ ಹೋಗಿ ಇದಕ್ಕೆ ಬಡಿದು ಇದರಲ್ಲಿರುವ ಒಂದು ಸಣ್ಣ ಅಂಶವನ್ನು ಕದಲಿಸುವುದೂ ಬಹಳ ಕಷ್ಟ. ಆದರೆ ಹೀಗೆ ಕದಲಿಸಿದ ಪಕ್ಷದಲ್ಲಿ ಹೊರಡುವ ಅಲೆಗಳು ಅತ್ಯಂತ ಬಲವುಳ್ಳವಾಗಿ, ಅಂದರೆ ಸಣ್ಣಗೆ, ಇರತಕ್ಕವು. ಎಕ್ಸ್‌ರೇಗಳಿಗಿಂತ ಇವು ಬಹಳ ತೀಕ್ಷ್ಣವಾಗಿರುತ್ತವೆ. ಇವನ್ನು ಉತ್ಪತ್ತಿಮಾಡಲು ಅರ್ಧಕೋಟಿ ವೋಲ್ಟಿನ ವಿದ್ಯುಸ್ಮಟ್ಟ ಬೇಕಾಗುತ್ತದೆ. ಇಷ್ಟು ಹೆಚ್ಚಿನ ವಿದ್ಯುಸ್ಮಟ್ಟವನ್ನು ಪಡೆಯುವುದು ಸುಲಭಸಾಧ್ಯವಲ್ಲ. ಸೃಷ್ಟಿಯ ವೈಖರಿಯನ್ನು ನೋಡಿ.—ರೇಡಿಯಂ ಎಂಬ ಒಂದು ಲೋಹವಿದೆ; ಅದರ ಪರಮಾಣುಗಳು ಯಾವ ಸಹಾಯವೂ ಇಲ್ಲದೆ ಬದಲಾವಣೆ ಹೊಂದುತ್ತಾ ಶಕ್ತಿಯನ್ನು ಹೊರಸೂಸುತ್ತವೆ. ಇದು ಆ ಪರಮಾಣುಗಳಲ್ಲಿ ಕಾಣುವ ಆಶ್ಚರ್ಯಕರವಾದ ಲಕ್ಷಣ. ಇನ್ನೂ ಹೆಚ್ಚಿನ ವಿಶೇಷವೇನೆಂದರೆ ಪರಮಾಣುಗಳ ಮಧ್ಯವರ್ತಿಯಾದ ಧನವಿದ್ಯುದಂಶವೇ ಸ್ವಯಂಪ್ರಚೋದಿತವಾಗು ವುದರಿಂದ ಅತಿ ತೀಕ್ಷ್ಣವಾದ ಕಿರಣಗಳು ಹೊರಹೊಮ್ಮುತ್ತವೆ. ಎಕ್ಸ್‌ರೇಗಳು ಅರ್ಧ ಅಡಿ ಉಕ್ಕನ್ನು ಹೊಕ್ಕರೆ ಇವು ಸುಮಾರು ಒಂದು ಮೊಳ ದಪ್ಪದ ಉಕ್ಕಿನ ಒಳಕ್ಕೆ ಸುಗ್ಗಬಲ್ಲವು. ಇವನ್ನೇ ಗ್ಯಾಮ ಕಿರಣಗಳೆನ್ನುವುದು. ಎಕ್ಸ್ ರೇಗಳಿಗಿಂತ ಇವು ಬಹಳ ಚಿಕ್ಕವು. ಎಕ್ಸ್ ರೇಗಳಂತೆ ಇವನ್ನು ಉತ್ಪನ್ನಮಾಡುವುದಕ್ಕಾಗು ವುದಿಲ್ಲ. ಸ್ವಯಂಪ್ರಭೆಯುಳ್ಳ ಲೋಹಗಳಿಂದಲೇ ಇವು ನಮಗೆ ದೊರೆಯುವುದು. ರೇಡಿಯಂ ಲೋಹವು ತನ್ನಲ್ಲಿರುವ ಶಕ್ತಿಯನ್ನು ಸಂತತವಾಗಿ ಚೆಲ್ಲುತ್ತಾ ಸ್ವಲ್ಪ ಸ್ವಲ್ಪವಾಗಿ ಪರಿವರ್ತನೆ ಹೊಂದಿ ಸೀಸವಾಗುತ್ತದೆ. ಇದಕ್ಕೆ ತಗಲುವ ಕಾಲ ೩,೫೦೦ ವರ್ಷಗಳು.

**ಮ್ಯಾಡಂ ಕ್ಯೂರಿಯ ಅಪೂರ್ವ ಶಾಸ್ತ್ರಪ್ರೇಮ.**—ರೇಡಿಯಂ ವಿಷಯ ಹೇಳುವಾಗ ಅದನ್ನು ಕಂಡುಹಿಡಿದ ಮಹಿಳಾಶಿರೋಮಣಿಯನ್ನು ನೆನೆಯದಿರಲಾಗು ವುದಿಲ್ಲ. ಈಕೆ ಪೋಲೆಂಡ್ ದೇಶದ ಒಂದು ದಾರಿದ್ರ್ಯ ಮತ್ತು ದಾಸ್ಯಕೂಪದಲ್ಲಿ ಜನಿಸಿದ ಅಲ್ಪವ್ಯಕ್ತಿ. ಬಾಲ್ಯದಲ್ಲಿಯೇ ತನ್ನ ದೇಶವನ್ನು ರಷ್ಯದ ಶೃಂಖಲೆಯಿಂದ ಬಿಡುಗಡೆಮಾಡುವ ಒಂದು ಗೂಢಸಮಿತಿಗೆ ಸೇರಿದ್ದಳು. ಗುಟ್ಟು ಬಯಲಾಗಿ ಸರ್ಕಾರವು ಸೆರೆಮನೆಗೆ ದೂಡುವುದಕ್ಕೆ ಮುನ್ನ ಫ್ರಾನ್ಸ್ ದೇಶವನ್ನು ಸೇರಿದಳು. ಆ ವೇಳೆಗೆ ಕಲಿತಿದ್ದ ಶಾಸ್ತ್ರವಿದ್ಯೆಯ ಸಹಾಯದಿಂದ ಕ್ರಮೇಣ ಪ್ಯಾರಿಸ್ ನಗರದ ಸಾರ್ಬಾನ್ ಎಂಬ ಪ್ರಸಿದ್ಧ ಶಾಸ್ತ್ರಶಾಲೆಯಲ್ಲಿ ಕ್ಯೂರಿ ಎಂಬ ಅಧ್ಯಾಪಕನಿಗೆ ಸಹಾಯಕಳಾಗಿ ನಿಯಮಿತಳಾದಳು. ಇವಳ ಅಸಾಧಾರಣ ಶಕ್ತಿಯಿಂದ ಮೋಹಿತ

ನಾಗಿ ಕ್ಯೂರಿಯು ಇವಳನ್ನು ಮದುವೆಯಾದನು. ಇಬ್ಬರೂ ದಾರಿದ್ರ್ಯದಲ್ಲಿ ಸವೆಯಬೇಕಾಗಿದ್ದರೂ ತಮ್ಮ ಶಾಸ್ತ್ರಪ್ರೇಮವನ್ನು ಸ್ವಲ್ಪವೂ ತ್ಯಜಿಸಲಿಲ್ಲ. ನೈಸರ್ಗಿಕವಾದ ಈ ಆತುರವನ್ನು ಬಾಹ್ಯಜೀವನದ ಯಾವ ತೊಡಕುಗಳೂ ನಂದಿಸ ಲಾಗುವುದಿಲ್ಲ. ಹತ್ತಾರು ವರ್ಷ ಕಷ್ಟಪಟ್ಟು, ಮೂವತ್ತು ನಲವತ್ತು ಗಾಡಿ ಪಿಚ್‌ಬ್ಲೆಂಡ್ ಎಂಬ ಮಣ್ಣನ್ನು ಕರಗಿಸಿ ಕೊನೆಗೆ ಅವುಗಳಲ್ಲಿ ಪ್ರಭೆಯನ್ನುಂಟು ಮಾಡುತ್ತಿದ್ದ ರೇಡಿಯಂ ಲೋಹವನ್ನು ಪ್ರತ್ಯೇಕಿಸಿದರು. ಅಷ್ಟು ಮಣ್ಣನ್ನು ಕರಗಿಸಿದರೂ ಕೆಲವು ಗುಲಗಂಜಿ ತೂಕದಷ್ಟು ಮಾತ್ರ ರೇಡಿಯಂ ದೊರೆಯಿತು. ಇವರ ಪರಿಶ್ರಮವು ಮೆಚ್ಚಿಗೆ ಪಡೆದು, ಪ್ರಪಂಚದ ವೈಜ್ಞಾನಿಕರೆಲ್ಲರ ಪರಮ ಗುರಿಯಾದ ನೊಬೆಲ್ ಬಹುಮಾನವು ಇವರಿಗೆ ದೊರೆಯಿತು. ರೇಡಿಯಂ ಗುಣಗಳು ಶೀಘ್ರದಲ್ಲಿಯೇ ವ್ಯಕ್ತವಾದವು. ರೋಗ ಚಿಕಿತ್ಸೆಗೆ ಇದು ಅತ್ಯಂತ ಸಹಾಯಕಾರಿ ಯೆಂದು ತಿಳಿಯಿತು. ಆದುದರಿಂದ ಕ್ಯೂರಿಯವರು ಪ್ರತ್ಯೇಕಿಸಿದ್ದಷ್ಟು ರೇಡಿಯಂಗೆ ಐದಾರು ಲಕ್ಷ ರೂಪಾಯಿ ಕೊಟ್ಟು ಕೊಳ್ಳಲು ಸರ್ಕಾರದವರು ಸಿದ್ಧವಾಗಿದ್ದರು. ಆದರೆ ದುಡ್ಡಿನ ಮೇಲಿನ ಆಸೆಯು ಈ ವೈಜ್ಞಾನಿಕರಿಗಿರಲಿಲ್ಲ. ನಾಲ್ಕಾರು ವರ್ಷದ ಕಷ್ಟದ ಪರಿಣಾಮವಾಗಿ ಗಳಿಸಿದ್ದ ರೇಡಿಯಂ ಎಲ್ಲವನ್ನೂ ಯಾವ ಪ್ರತಿಫಲವನ್ನೂ ಪಡೆಯದೆ ದೇಶಕ್ಕೆ ಧಾರೆಯೆರೆದು ಒಂದು ರೇಡಿಯಂ ಆಸ್ಪತ್ರೆಯ ಸ್ಥಾಪನೆಗೆ ಕಾರಣ ರಾದರು. ಸ್ವಲ್ಪಕಾಲದಲ್ಲಿಯೇ ಗಂಡನು ಒಂದು ವಾಹನಕ್ಕೆ ಸಿಕ್ಕಿ ಮೃತನಾಗಲು ಮ್ಯಾಡಂ ಕ್ಯೂರಿಯು ಒಂಟಿಯಾದಳು. ಆದರೂ ಅವಳ ಶಾಸ್ತ್ರದಾಹವು ಏಕರೀತಿ ಉಕ್ಕುತ್ತಿತ್ತು. ತನ್ನ ಅದ್ಭುತ ಮೇಧಾಶಕ್ತಿಯಿಂದಲೇ ಹೊಸ ವಿಷಯಗಳನ್ನು ಕಂಡುಹಿಡಿದಳು. ಶಾಸ್ತ್ರಲೋಕವು ಇವಳ ಕೆಲಸವನ್ನು ಮೆಚ್ಚಿ ಎರಡನೆಯಬಾರಿ ಇವಳಿಗೆ ನೊಬೆಲ್ ಬಹುಮಾನವನ್ನು ಕೊಟ್ಟಿತು. ಈ ಮರ್ಯಾದೆಯು ಇದುವರೆಗೂ ಯಾರಿಗೂ ಲಭಿಸಿಲ್ಲ. ೧೯೧೪ರಿಂದ ೧೯೧೮ರ ವರೆಗೆ ನಡೆದ ಯುದ್ಧದಲ್ಲಿ ಮ್ಯಾಡಂ ಕ್ಯೂರಿಯು ದಾದಿಯಾಗಿ ಯುದ್ಧಭೂಮಿಯಲ್ಲಿ ಗಾಯಗೊಂಡವರಿಗೆ ರೇಡಿಯಂ ಚಿಕಿತ್ಸೆ ನಡೆಸಿ ಹೆಚ್ಚು ಖ್ಯಾತಿ ಪಡೆದಳು. ತನ್ನ ಶಾಸ್ತ್ರವಿದ್ಯೆಯು ಪರಹಿತಸಾಧನೆಗೆ ಮುಡುಪಾಗಿರಬೇಕೆಂಬುದನ್ನು ಅವಳು ಮರೆಯಲಿಲ್ಲ.

**ರೇಡಿಯಂ ಚಿಕಿತ್ಸೆಯ ಕಷ್ಟ.**—ರೇಡಿಯಂ ಸಹಾಯದಿಂದ ಅನೇಕ ರೋಗ ಗಳನ್ನು ಗುಣಪಡಿಸಬಹುದು. ಈ ಸುದ್ದಿಯು ಸಾಮಾನ್ಯರಿಗೇನೂ ಸಂತೋಷ ಪಡಿಸುವಂಥದಲ್ಲ. ಏಕೆಂದರೆ ರೇಡಿಯಂ ದೊರೆಯುವುದು ಕಷ್ಟ. ಆದುದರಿಂದ ಅದರ ಬೆಲೆ ಬಹಳ ಹೆಚ್ಚು. ಲಂಡನ್ ನಗರದ ಒಂದು ಪ್ರಸಿದ್ಧ ಆಸ್ಪತ್ರೆಯಲ್ಲಿ ಇದರಿಂದ ರೋಗ ಚಿಕಿತ್ಸೆಮಾಡಲು ತಗಲುವ ಖರ್ಚನ್ನು ಈ ಕೆಳಗೆ ಕಾಣಿಸಿದೆ.

೧೯೩೦ರ ಅಂಕೆಗಳು

| | | | |
|---|---|---|---|
| ನಾಲಗೆಯ ಕ್ಯಾನ್ಸರಿಗೆ | .... ೧೨ ಮಿಲಿಗ್ರಾಂ | .... | £ ೧೪೦ |
| ಮೆದುಳಿನ ಕ್ಯಾನ್ಸರಿಗೆ | .... ೭೦ ,, | .... | £ ೮೦೫ |
| ಎದೆಯ ಕ್ಯಾನ್ಸರಿಗೆ | .... ೧೩೭ ,, | .... | £೧,೫೦೦ |

ಆದುದರಿಂದ ಇದರ ಅನುಕೂಲವು ಬಡವರಿಗೆ ದುಸ್ಸಾಧ್ಯವಾದುದು. ಶುದ್ಧ ರೂಪದಲ್ಲಿ ಇದನ್ನು ಉಪಯೋಗಿಸಿದರೆ ತೊಂದರೆಯಾಗುತ್ತದೆ, ಮತ್ತು ಅದು ಆವಶ್ಯಕವೂ ಅಲ್ಲ. ಆದುದರಿಂದ ಅದರ ಸಂಯುಕ್ತವನ್ನು (Radium Sulphate) ಆಸ್ಪತ್ರೆಗಳಲ್ಲಿ ಉಪಯೋಗಿಸುತ್ತಾರೆ. ಇದನ್ನು ಉಪಯೋಗಿಸುವವರೂ ಬಹಳ ಹುಷಾರಾಗಿರುತ್ತಾರೆ. ಇದನ್ನು ಆರು ಅಂಗುಲ ದಪ್ಪದ ಸೀಸದ ಪೆಟ್ಟಿಗೆಗಳಲ್ಲಿ ಇಟ್ಟು ಕಾಪಾಡುತ್ತಾರೆ. ಸಾಮಾನ್ಯ ಆಸ್ಪತ್ರೆಗಳಲ್ಲಿ ಇದರ ಚಿಕಿತ್ಸೆಯು ರೂಢಿಗೆ ಬರುವುದು ಕಷ್ಟ. ಎಕ್ಸ್‌ರೇಗೆ ಇಷ್ಟು ಖರ್ಚು ತಗಲುವುದಿಲ್ಲ. ಆದುದರಿಂದ ಮೈಸೂರು ಬೆಂಗಳೂರು ಆಸ್ಪತ್ರೆಗಳಲ್ಲಿ ಅದರ ಉಪಯೋಗವನ್ನು ನಾವು ನೋಡಬಹುದು.

ಮಾನವನ ಶಕ್ತಿಯು ಸನ್ಮಾರ್ಗದಲ್ಲಿ ಹರಿದರೆ ಲೋಕಕ್ಕೇ ನೆಮ್ಮದಿ. ಆತ್ಮಸಾಕ್ಷಿಗೆ ವಿರುದ್ಧವಾಗಿ ಅದನ್ನು ದುರುಪಯೋಗಪಡಿಸುವುದರಿಂದ ಉಂಟಾಗುವ ಪರಿಣಾಮಕ್ಕೆ ಈಗಿನ ಯುದ್ಧವೇ ಸಾಕ್ಷಿ.

[ಈ ಪ್ರಬಂಧವನ್ನು ಬರೆಯುವುದರಲ್ಲಿ ನನಗೆ ಅನೇಕರು ಸಹಾಯಮಾಡಿರುತ್ತಾರೆ. ಅವರಲ್ಲಿ ಮುಖ್ಯರಾದವರು ಶ್ರೀಗಳಾದ ಟಿ. ಎಸ್. ಸುಬ್ಬರಾಯ ಮತ್ತು ಆರ್. ಕೆ. ಸಂಗಮೇಶ್ವರನ್. ಇವರಿಗೂ, ನನಗೆ ಸಹಾಯಮಾಡಿದ ಇತರ ಮಹನೀಯರಿಗೂ, ಉಚಿತವಾಗಿ ಪಡಿಯಚ್ಚುಗಳನ್ನು ಕಳುಹಿಸಿಕೊಟ್ಟ ಶ್ರೀ|| ಯು. ರಾಘವೇಂದ್ರಾಚಾರ್ಯರಿಗೂ ನಾನು ಚಿರಋಣಿ.]

ಜಿ. ಆರ್. ರಂಗಸ್ವಾಮಿ.

---

## ಪ್ರಮಾಣಲೇಖನಾವಳಿ

1. *X-Rays and Radium*—V. E. PULLIN.
2. *Science of Life*—H. G. WELLS.
3. *Encyclopaedia Britannica* (XIV Edition)—X-Rays, Radiation, Atom, etc.
4. *Madam Curie*—By Eve Ourie—*Readers Digest*, March, 1938.
5. *The Story of Civilization*—C. E. M. JOAD.
6. *At Home Among The Atoms*—JAMES KENDALL.

# ಉಪಾಧ್ಯಾಯ ಪಂಡಿತರು

## ಅವರ ಸ್ಥಾನ, ಅವರ ಕರ್ತವ್ಯ, ಅವರ ಪುರೋದೃಷ್ಟಿ

(೧೯೪೦ನೆಯ ಇಸವಿ ಮೇ ೨೫ರಲ್ಲಿ ಮೇಲುಕೋಟೆಯಲ್ಲಿ ನೆರೆದಿದ್ದ ಮೈಸೂರು ಪಂಡಿತಮಂಡಲದ ಆರನೆಯ ಸಮ್ಮೇಳನದ ಅಧ್ಯಕ್ಷೋಪನ್ಯಾಸ)

ರಾಜಮಂತ್ರಪ್ರವೀಣ ಶ್ರೀಮಾನ್ ಮಾಧವರಾಯರವರೆ, ಸ್ವಾಗತಮಂಡಲಾಧ್ಯಕ್ಷ ಶ್ರೀಮಾನ್ ಬಿ. ಎಸ್. ರಾಘವೇಂದ್ರರಾಯರವರೆ, ಪಂಡಿತಮಂಡಲೋಪಾಧ್ಯಕ್ಷ ಶ್ರೀಮಾನ್ ಡಿ. ವೆಂಕಟರಾಮಯ್ಯನವರೆ, ವಿದ್ವನ್ಮಣಿಗಳೆ, ಸಮಸ್ತ ಸಭಿಕ ಮಹಾಶಯರೆ,—

ಇಂಥ ಸಭೆಯ ಅಧ್ಯಕ್ಷಸ್ಥಾನದ ಗೌರವವು ದ್ವಿಮುಖಿಯಾದದ್ದೆಂಬುದು ನನ್ನ ಮನಸ್ಸಿಗೆ ಚೆನ್ನಾಗಿ ಗೊತ್ತಿದೆ. ಒಂದುಕಡೆ ಅದು ದೊಡ್ಡ ಪ್ರಶಸ್ತಿಯಾದರೆ ಇನ್ನೊಂದುಕಡೆ ಅದು ಅಷ್ಟೂ ಅಷ್ಟು ದೊಡ್ಡ ಕರ್ತವ್ಯಭಾರ. ಒಂದನ್ನು ನೋಡುವುದರಿಂದಾಗುವ ಸಂತೋಷವು ನನ್ನಂಥವನ ಪಾಲಿಗೆ ಇನ್ನೊಂದರಿಂದ ಹುಟ್ಟುವ ಭಯದಲ್ಲಿ ಮುಳುಗಿಹೋಗುತ್ತದೆ. ಈ ಪದವಿಗೆ ನನ್ನನ್ನು ಆಹ್ವಾನಿಸುವುದರಲ್ಲಿ ನಮ್ಮ ಪಂಡಿತಮಂಡಲದ ಅಧಿಕಾರಿಗಳಿಗೆ ಇದ್ದ ಭಾವವು ನನ್ನ ಮೇಲಣ ಅಭಿಮಾನವೆಂಬುದನ್ನು ನಾನು ಕಂಡುಕೊಂಡಿದ್ದೇನೆ. ಆದರೆ ಆ ಆಹ್ವಾನವನ್ನು ಅಂಗೀಕರಿಸುವುದರಲ್ಲಿ ನನಗಿದ್ದ ಭಾವವು ಆತ್ಮವಿಶ್ವಾಸವಲ್ಲವೆಂಬುದನ್ನು ಕೃತಕವಿಲ್ಲದೆ ತಮ್ಮಲ್ಲಿ ಅರಿಕೆ ಮಾಡಬೇಕಾಗಿದೆ. ಇಂಥ ಪದವಿಗೆ ಅವಶ್ಯವಾದ ಪಾಂಡಿತ್ಯವಾಗಲಿ ಪ್ರಜ್ಞೆಯಾಗಲಿ ಲೌಕಿಕ ಪ್ರಭಾವವಾಗಲಿ ನನಗೆ ಲಭ್ಯವಾದದ್ದಲ್ಲ. ಈ ನನ್ನ ಮಾತನ್ನು ನಾನೇ ನಿಜವಾಗಿ ನಂಬಿದ್ದ ಪಕ್ಷದಲ್ಲಿ ಈ ಪೀಠದಲ್ಲಿ ಕುಳ್ಳಿರಲು ನಾನು ಏಕೆ ಒಪ್ಪಬೇಕಾಗಿತ್ತು ಎಂದು ಯಾರಾದರೂ ಕೇಳಬಹುದು. ಅದಕ್ಕೆ ನನ್ನ ಉತ್ತರ ಹೀಗಿದೆ:—ದೇಶಭಾಷೆಗಳ ಅಭ್ಯುದಯದ ವಿಷಯದಲ್ಲಿ ನಾನು ಉತ್ಸಾಹವುಳ್ಳವನು. ನಮ್ಮ ಪಂಡಿತರಿಂದ ನಮ್ಮ ಜನಸಾಮಾನ್ಯಕ್ಕೆ ಆಗಬೇಕಾಗಿರುವ ಉಪಕಾರಗಳು ಅಪಾರವಾಗಿವೆಯೆಂದು ನಾನು ನಂಬಿಕೊಂಡಿದ್ದೇನೆ. ಹೀಗೆ ಸಾಮಾನ್ಯ ಜನರು ಪಂಡಿತವರ್ಗದಿಂದ ಏನನ್ನು ಅಪೇಕ್ಷಿಸಿ ನಿರೀಕ್ಷಿಸಿಕೊಂಡಿದ್ದಾರೆಂಬುದನ್ನು ಸೂಚಿಸಲು ನನಗೆ ಇದು ಒಳ್ಳೆಯ ಅವಕಾಶವಾಗಿದೆ. ಸಾಮಾನ್ಯಲೋಕದ ಪರವಾಗಿ ಪಂಡಿತ ಸಮ್ಮುಖದಲ್ಲಿ ಒಂದೆರಡು ವಿಚಾರಗಳನ್ನು ಬಿನ್ನಯಿಸುವುದೇ ನನ್ನ ಇಂದಿನ ಉದ್ದೇಶ.

## ಪಂಡಿತ ಕಸಬು

ಭಗವದ್ಗೀತಾದಿ ಪುರಾತನ ಗ್ರಂಥಗಳಲ್ಲಿ "ಪಂಡಿತ" ಶಬ್ದದ ಅರ್ಥವು ಬಹು ಉದಾತ್ತವಾದದ್ದಾಗಿದ್ದರೂ, ನಮ್ಮ ಪ್ರಕೃತ ಸಂದರ್ಭದಲ್ಲಿ ಆ ಶಬ್ದವು ಒಂದು ಕಸಬಿನ ಹೆಸರಾಗಿದೆ. "ಪಂಡಿತರು" ನಮ್ಮ ವಿದ್ಯಾಶಾಲೆಗಳಲ್ಲಿ ಸಂಸ್ಕೃತದ, ಅಥವಾ ಕನ್ನಡ ಮೊದಲಾದ ದೇಶಭಾಷೆಗಳಲ್ಲೊಂದರ, ಸಾಹಿತ್ಯ ಗ್ರಂಥಗಳನ್ನು ಪಾಠ ಹೇಳುವವರು. ಹೀಗೆ ಆ ಶಬ್ದದ ಅರ್ಥವು ಈಗ ಸಂಕುಚಿತವಾಗಿದೆಯೆಂದಮಾತ್ರದಿಂದ ಆ ವೃತ್ತಿಯ ಬೆಲೆ ಹೆಚ್ಚಿನದಲ್ಲವೆಂದು ಸೂಚಿಸಿದಂತೆ ಯಾರೂ ಭಾವಿಸತಕ್ಕದ್ದಲ್ಲ. ಲೋಕದಲ್ಲಿ ಯಾವ ಒಂದು ವಸ್ತುವಿನ ಬೆಲೆಯೇ ಆಗಲಿ ಅದರ ಬಳಕೆಯೋಪಯೋಗಿತೆಯನ್ನು ಅವಲಂಬಿಸಿಕೊಂಡಿರುತ್ತದೆ. ನಮ್ಮ ಜನಕ್ಕೆ ಸಂಸ್ಕೃತ ಕನ್ನಡಗಳ ಆವಶ್ಯಕತೆ ಎಷ್ಟುಮಟ್ಟಿಗೆ ಇರುತ್ತದೆಯೋ ಆ ಭಾಷೆಗಳನ್ನು ಕಲಿಸುವವರಿಗೆ ದೊರೆಯುವ ಮನ್ನಣೆಯು ಅಷ್ಟುಮಟ್ಟಿಗೆ ಇರುತ್ತದೆ. ಎದುವರೆಗೂ ಮನುಷ್ಯಮನುಷ್ಯರ ಪರಸ್ಪರ ಮನೋಭಿವ್ಯಕ್ತಿಯು ವಾಕ್ಕಿನ ಮೂಲಕ ಆಗಬೇಕಾಗಿರುವುದೋ, ಎದುವರೆಗೂ ವಾಗ್ವಿಲಾಸದಿಂದ ಸಂತೋಷಿಸಿ ಹಿಗ್ಗುವ ಸ್ವಭಾವವು ಮನುಷ್ಯರ ಶ್ರವಣೇಂದ್ರಿಯವನ್ನು ತೊರೆಯುವುದಿಲ್ಲವೋ, ಎದುವರೆಗೂ ಲೋಕವ್ಯವಹಾರಕ್ಕೆ ವಾಕ್ಕು ಮುಖ್ಯ ಸಾಧನವಾಗಿರುವುದೋ ಅದುವರೆಗೂ ಈ ದೇಶದ ಜನರಿಗೆ ಕನ್ನಡ ಸಂಸ್ಕೃತಗಳು ಜೀವಿತಭಾಗ್ಯದ ಒಂದು ಮುಖ್ಯ ನಿಧಿಯಾಗಿರುತ್ತವೆ. ಈ ಕಾರಣದಿಂದ ದೊಡ್ಡದಾಗ ತಕ್ಕದ್ದು ನಮ್ಮ ಉಪಾಧ್ಯಾಯ-ಪಂಡಿತರ ಬೆಲೆ.

## ಪ್ರಾಚೀನ ಪಾಂಡಿತ್ಯ

ಹಾಗಾದರೆ ಈ ಪಂಡಿತರೆಂಬವರಿಗೆ ಇರಬೇಕಾದ ಯೋಗ್ಯತಾ ಸಂಪತ್ತು ಎಂಥಾದ್ದು, ಅವರ ವೈಲಕ್ಷಣ್ಯವೇನು—ಎಂಬ ಪ್ರಶ್ನೆಗಳು ವಿಚಾರ್ಯವಾಗುತ್ತವೆ. ಹಿಂದಿನ ಕಾಲದಲ್ಲಿ ಪಂಡಿತರೆನ್ನಿಸಿಕೊಳ್ಳುತ್ತಿದ್ದವರು ಬಹುಶಃ ಒಂದೆರಡು ಪ್ರಾಚೀನ ಶಾಸ್ತ್ರಗಳಿಗೆ ಅಧಿಕಾರಿಗಳಾಗಿದ್ದುಕೊಂಡು, ಆ ಶಾಸ್ತ್ರಗಳಿಗೆ ಸಂಬಂಧಪಟ್ಟ ಇತರ ಶಾಸ್ತ್ರಗಳಲ್ಲಿಯೂ ತಕ್ಕಮಟ್ಟಿಗೆ ನಿಷ್ಣಾತರಾಗಿರುತ್ತಿದ್ದರು. ಸಾಹಿತ್ಯವನ್ನೋ ವ್ಯಾಕರಣವನ್ನೋ, ತರ್ಕವನ್ನೋ, ಮೀಮಾಂಸಾಶಾಸ್ತ್ರವನ್ನೋ, ಧರ್ಮಶಾಸ್ತ್ರವನ್ನೋ ಆಮೂಲಾಗ್ರವಾಗಿ ಸಂಪ್ರದಾಯ ಸಿದ್ಧವಾದ ರೀತಿಯಲ್ಲಿ ಅಭ್ಯಾಸಮಾಡಿ, ಆಯಾ ಶಾಸ್ತ್ರದ ವಿಚಾರದಲ್ಲಿ ಬಂದ ಪ್ರಶ್ನೆ ಸಂದೇಹಗಳಿಗೆ ನಿಷ್ಕೃಷ್ಟವಾದ ಉತ್ತರವನ್ನು ಕೊಡಬಲ್ಲವರು ಪಂಡಿತರೆನ್ನಿಸಿಕೊಳ್ಳುತ್ತಿದ್ದರು. ವಿಸ್ತಾರವಾದ ಗ್ರಂಥರಾಶಿ ಅವರಿಗೆ ಮುಖಸ್ಥವಾಗಿರುತ್ತಿತ್ತು. ಪ್ರತಿದಿನವೂ ಮನುಸ್ಮೃತಿಯ ಭಾಗಗಳನ್ನೋ

ಅಷ್ಟಾಧ್ಯಾಯಿಯನ್ನೋ ಶಬ್ದಾನುಶಾಸನವನ್ನೋ ಪಾರಾಯಣಮಾಡಿದ ಹೊರತು ಭೋಜನಮಾಡಲೊಪ್ಪದಿದ್ದ ಸ್ವಶಾಸ್ತ್ರಭಕ್ತರನ್ನು ನಾನು ನೋಡಿದ್ದೇನೆ. ಒಂದು ಪ್ರಾಚೀನ ಶಾಸ್ತ್ರದಲ್ಲಿ ಸಂಪೂರ್ಣವಾದ ಮತ್ತು ಸಂಪ್ರದಾಯಾನುಸಾರವಾದ ಪ್ರಜ್ಞೆ, ಅದರ ಜೊತೆಗೆ ಸಾಹಿತ್ಯ ವ್ಯಾಕರಣಾದಿ ವಿದ್ಯೆಗಳಲ್ಲಿ ತಕ್ಕಷ್ಟು ವಿದ್ವತ್ತು, ವಿಸ್ತಾರ ವಾದ ಗ್ರಂಥಧಾರಣೆ, ಇವುಗಳ ಸಮ್ಮೇಳನದಿಂದ ಉತ್ಪನ್ನವಾದ ವಾಗ್ವೈಭವ— ಇವು ಪೂರ್ವಕಾಲದ ಪಾಂಡಿತ್ಯದ ಲಕ್ಷಣಗಳಾಗಿದ್ದವು. ಇಂಥ ಪಂಡಿತರು ಇದ್ದ ಕಾಲವನ್ನು ನೋಡುವ ಯೋಗ ನನಗೆ ದೊರೆತಿತ್ತು. ನನ್ನ ಮಕ್ಕಳು ಮುಮ್ಮಕ್ಕಳ ಕಾಲಕ್ಕೂ ಅಂಥ ಯೋಗವಿದ್ದೀತೆಂಬ ಭರವಸೆ ನನಗೆ ಅಷ್ಟಾಗಿಲ್ಲ. ಇದು ಯಂತ್ರ ಯುಗ. ಶಾಲುಗಳು ಯಂತ್ರಗಳಿಂದ ತಯಾರಾಗುತ್ತವೆ. ಯೋಗ್ಯತಾಪತ್ರಿಕೆಗಳೂ ಹಾಗೆಯೇ. ಆದ್ದರಿಂದಲೇ ಸರಕು ಅಗ್ಗ.

## ಶಿಥಿಲವೇಕೆ?

ಹಿಂದಣ ತೆರದ ಪಾಂಡಿತ್ಯ ಶಿಥಿಲವಾಗುತ್ತಿರುವುದಕ್ಕೆ ಕಾರಣಗಳೇನೆಂದು ವಿಚಾರಿಸುವುದು ಅನುಚಿತವಲ್ಲ. ಮೊದಲನೆಯದಾಗಿ, ಪೂರ್ವಕಾಲದಲ್ಲಿ ಪಂಡಿತರಿಗೆ ಹೊರಜಗತ್ತಿನ ಅಬ್ಬರ ಈಗಿನಷ್ಟು ಹೆಚ್ಚಾಗಿರಲಿಲ್ಲ. ರಾಜಾಶ್ರಯದಿಂದ ದೊರೆತಷ್ಟ ರಲ್ಲಿ ಅವರು ತೃಪ್ತರಾಗಿ ಲೋಕಸನ್ಮಾನದಿಂದ ಸಂತುಷ್ಟರಾಗಿರುತ್ತಿದ್ದರು. ಈಗಿನ ಪ್ರಪಂಚದ ಆಕರ್ಷಣೆಗಳು ಬೇರೆ ತೆರದವು, ಹೆಚ್ಚು ಗೊಂದಲದವು. ಇಂಗ್ಲಿಷ್ ಕಲಿತು ಲೌಕಿಕ ವಿದ್ಯೆಗಳಲ್ಲಿ ಪ್ರಸಿದ್ಧರಾದವರಿಗೆ ಲಭ್ಯವಾಗಿರುವ ಸುಖಸಾಧನಗಳು ಕೇವಲ ಸಂಸ್ಕೃತಾಭ್ಯಾಸಿಗಳ ಮನಸ್ಸಿಗೂ ಮೋಹಕಗಳಾಗಿವೆ. ಸಂಸ್ಕೃತ ಕಲಿತ ಮಾತ್ರದಿಂದ ಕುಕ್ಷಿಕ್ಲೇಶ ದೂರ ತೊಲಗುವುದೆಂದು ಊಹಿಸಲು ಕಾರಣವೇನೂ ಇಲ್ಲ. ಅಥವಾ ಪಂಡಿತರಾದವರು ತಮ್ಮೊಬ್ಬರಷ್ಟಕ್ಕೆ ತಾವು ಇಹವೈಭವದ ಆಶೆಯನ್ನು ಜಯಿಸಿಯಾರೆಂದು ಭಾವಿಸಿದರೂ, ಅವರ ದಾರಾ ಪುತ್ರಾದಿಗಳೂ ಹಾಗೆಯೇ ಮಾಡಬೇಕೆಂಬ ನಿಬಂಧನೆಯೇನೂ ಇಲ್ಲ. ಸಾಮಾನ್ಯ ಮನುಷ್ಯನಿಗಿರುವ ಹಸಿವು ಹಂಬಲುಗಳೆಲ್ಲ ಪಂಡಿತರಿಗೂ ಇರುವುದು ಸ್ವಾಭಾವಿಕ. ಪಂಡಿತರೇನೂ ಅತಿ ಮಾನುಷ ಜೀವಿಗಳಲ್ಲ. ನೆರೆಹೊರೆಯಂತೆ ಬದುಕಿ ಬೆಳೆಯಬೇಕೆಂದು ಅವರಲ್ಲಿ ಆಶೆ ಹುಟ್ಟಿದ ಮೇಲೆ ನೆರೆಹೊರೆಯವರು ಹಿಡಿದ ಉಪಾಯಗಳನ್ನು ಅವರೂ ಅನುಸರಿಸ ಬೇಕಾಯಿತು. ವೈದಿಕತನ ಇಳಿಯಿತು, ಲೌಕಿಕತನ ಏರಿತು. ಶಾಸ್ತ್ರೋಪಾಸನೆ ಕಡಮೆಯಾಯಿತು, ಆಶ್ರಯಾನ್ವೇಷಣೆ ಹೆಚ್ಚಿತು. ಹೀಗೆ "ಶತಶ್ಲೋಕೇನ ಪಂಡಿತಃ", "ಶಾಲೂಮಾತ್ರೇಣ ಪಂಡಿತಃ" ಎಂಬ ವಿಡಂಬನ ವಾಕ್ಯಗಳಿಗೆ ದಾರಿಯಾಯಿತು.

ದುರೀಶ್ವರದ್ವಾರ ಬಹಿರ್ವಿತರ್ದಿಕಾ
ದುರಾಶಿಕಾಯೈ ರಚಿತೋಯಮಂಜಲಿಃ ||

ಎಂದು ಹೇಳಿಸುವ ಮನೋದಾರ್ಢ್ಯವು ಪುಸ್ತಕ ಪಾಂಡಿತ್ಯದಿಂದ ಬರತಕ್ಕದ್ದಲ್ಲ. ಶಾಲುವಿನ ಹಾಸು ಹೊಕ್ಕುಗಳಲ್ಲಿ ವೈರಾಗ್ಯದ ಕಣಗಳು ಅಡಗಿಕೊಂಡಿರುವುದಿಲ್ಲ. ಈ ನಿಜಾಂಶವನ್ನು ಪಂಡಿತರು ತಾವು ಸ್ಪಷ್ಟವಾಗಿ ಒಪ್ಪಿಕೊಂಡು ಸರಕಾರದ ಅಧಿಕಾರಿಗಳು ಗಮನದಲ್ಲಿರಿಸಿಕೊಳ್ಳುವಂತೆ ಮಾಡಿದರೆ ವೈದಿಕ ಲೌಕಿಕರಿಗಿರುವ ಪರಸ್ಪರ ವೈಮನಸ್ಯವು ಬಹುಮಟ್ಟಿಗೆ ನಿವಾರಣೆಯಾದೀತು. ಇಂಗ್ಲಿಷ್ ಸಾಹಿತ್ಯವನ್ನೂ ಭೌತಶಾಸ್ತ್ರ ರಸಾಯನಶಾಸ್ತ್ರಗಳನ್ನೂ ಗಣಿತ ಭೂವಿವರಣೆಗಳನ್ನೂ ಬೋಧಿಸುವ ಉಪಾಧ್ಯಾಯರಂತೆಯೇ ನಮ್ಮ ಪಂಡಿತರೂ ವೇತನಾರ್ಥಿಗಳು. ಅವರು ಹಿಡಿಯದ ಮಡಿಯನ್ನು ಇವರೇನೂ ಹಿಡಿದಿಲ್ಲ. ಇದನ್ನು ಎಲ್ಲರೂ ಸ್ಪಷ್ಟವಾಗಿ ಅಂಗೀಕರಿಸಬೇಕು. ಪಂಡಿತರಿಗೆ ವೈರಾಗ್ಯದ ಸೋಗು ಬೇಕಿಲ್ಲ. ಪ್ರಭುಗಳು ಅವರಲ್ಲಿ ಆ ನಟನೆಯನ್ನು ನಿರೀಕ್ಷಿಸಬೇಕಾದದ್ದಿಲ್ಲ. ಹೀಗೆ ಒಂದು ಕಡೆ ಪಂಡಿತರ ವಿಷಯದಲ್ಲಿಯೂ ಇನ್ನೊಂದು ಕಡೆ ಇತರ ಉಪಾಧ್ಯಾಯರ ವಿಷಯದಲ್ಲಿಯೂ ಬಹು ದಿನಗಳಿಂದ ಜನಕ್ಕೆ ಅಭ್ಯಾಸವಾಗಿ ಬಂದಿರುವ ದೃಷ್ಟಿಭೇದವನ್ನು ತೊಡೆದುಹಾಕುವುದು ಸಾಮಾನ್ಯ ನ್ಯಾಯಸಾಧನೆಗೆ ಮೊದಲನೆಯ ಮೆಟ್ಟಲು. ಪಂಡಿತವರ್ಗವೂ ಇತರ ಉಪಾಧ್ಯಾಯ ವರ್ಗವೂ ಒಂದೇ ಕಸಬಿನ ಎರಡು ವಿಭಾಗಗಳು. ಅವುಗಳಲ್ಲಿ ಒಂದು ಹೆಚ್ಚು ಒಂದು ಕಡಮೆಯೆಂಬ ವ್ಯತ್ಯಾಸವೇನೂ ಇರತಕ್ಕದ್ದಲ್ಲ. ಇದು ಇನ್ನು ಮುಂದಣ ಮಾತಾಯಿತು. ಹಿಂದೆ ಪಾಂಡಿತ್ಯಾಭಿವೃದ್ಧಿ ಕಡಮೆಯಾದದ್ದಕ್ಕೆ ಆಗಣ ಪಂಡಿತರು ಹಲಕೆಲವರಾದರೂ ನವೀನಲೋಕದ ಸಿರಿಸೊಗಸುಗಳಿಗೆ ಮನಸೋತದ್ದು ಒಂದು ಕಾರಣವೆಂಬುದನ್ನು ಅಪ್ರಿಯವಾದರೂ ನಾವು ಒಪ್ಪಿಕೊಳ್ಳಬೇಕು. ಅನ್ಯದೇಶಗಳ ಬುದ್ಧಿ ಶಕ್ತಿ ವಿಕಾಸದ ಫಲವಾಗಿ ಬಂದ ಯಂತ್ರಸಾಧನಗಳೂ ಅದರ ಪರಿಣಾಮವಾದ ಐಶ್ವರ್ಯವೂ ಭೋಗಸಾಮಗ್ರಿಗಳೂ ನಮ್ಮ ದೇಶದ ಪಾಂಡಿತ್ಯಕ್ಕೆ ಸ್ವಲ್ಪ ಮಾತ್ರವಾದರೂ ಮುಪ್ಪನ್ನು ತಂದವು.

## ಪುರಾತನ ನೂತನಗಳ ಪ್ರಸ್ಪರ್ಧೆ

ಎರಡನೆಯದಾಗಿ, ನಮ್ಮ ಸ್ಕೂಲು ಕಾಲೇಜುಗಳು ಪ್ರಾರಂಭವಾದ ಕಾಲದಲ್ಲಿ ಇಂಗ್ಲಿಷ್ ಭಾಷೆಯನ್ನೂ ವಿಜ್ಞಾನಾದಿ ಪಾಶ್ಚಾತ್ಯ ವಿದ್ಯೆಗಳನ್ನೂ ಬೋಧಿಸಲು ಜನ ವಿರಳರಾಗಿದ್ದಂತೆ ಸಂಸ್ಕೃತವನ್ನೂ ಇತರ ದೇಶಭಾಷೆಗಳನ್ನೂ ಬೋಧಿಸಬಲ್ಲವರು ವಿರಳರಾಗಿರಲಿಲ್ಲ. ಹೀಗೆ ನಮ್ಮ ಪಂಡಿತರು ಆಗ ಅಗ್ಗದ ವೇತನಗಳನ್ನು ಸಂತೋಷದಿಂದ ಅಂಗೀಕರಿಸಿದರು. ಆ ವೇತನಗಳಿಗಾಗಿ ತಮ್ಮ ತಮ್ಮಲ್ಲಿ ಪೋಟಾಪೋಟಿಯನ್ನೂ

ಮಾಡಿದರು. ಹೀಗೆ ಆಗ ಅವರು ಮಾಡಿಸಿದ ಅಗ್ಗದ ಸ್ಥಿತಿ ಇದುವರೆಗೂ ಅನುಸರಿಸಿ ಕೊಂಡು ಬಂದಿದೆ. ಪಂಡಿತವರ್ಗದ ಇಂದಿನ ಅವಸ್ಥೆಗೆ ಅದೂ ಒಂದು ಕಾರಣ.

ಮೂರನೆಯದಾಗಿ, ಲೋಕೋಪಯೋಗಿತೆಯಲ್ಲಿಯೂ, ತಜ್ಜನ್ಯವಾದ ಲೌಕಿಕ ಮೂಲ್ಯದಲ್ಲಿಯೂ ಪ್ರಾಚೀನ ವಿದ್ಯೆಗೂ ನವೀನ ವಿದ್ಯೆಗೂ ಇರುವ ವ್ಯತ್ಯಾಸವು ಹಳೆಯ ಪಾಂಡಿತ್ಯವನ್ನು ಶಿಥಿಲಗೊಳಿಸಿತು. ಪೂರ್ವ ಪಾಂಡಿತ್ಯವೇನಿದ್ದರೂ ಸಂಸ್ಕೃತದಲ್ಲಿರುವ ಸಾಹಿತ್ಯವನ್ನೂ ನಾಲ್ಕಾರು ಶಾಸ್ತ್ರಗಳನ್ನೂ ಒಳಕೊಂಡಿತ್ತು. ಈಗ ಅವುಗಳಿಗೆ ಪ್ರತಿಸ್ಪರ್ಧಿಗಳಾಗಿ ಅನೇಕ ಹೊಸ ಶಾಸ್ತ್ರಗಳು ನಮ್ಮ ದೇಶದೊಳಕ್ಕೆ ಬಂದಿವೆ. ಭೌತಶಾಸ್ತ್ರ, ರಸಾಯನಶಾಸ್ತ್ರ, ಪ್ರಾಣಿಶಾಸ್ತ್ರ, ಭೂಗರ್ಭಶಾಸ್ತ್ರ, ಖಗೋಳ ಶಾಸ್ತ್ರ ಮೊದಲಾದ ಆಧುನಿಕ ಪ್ರಕೃತಿ ವಿಜ್ಞಾನಶಾಸ್ತ್ರಗಳು ನಮ್ಮ ಪುರಾತನ ತರ್ಕ ಮೀಮಾಂಸಾದಿ ಶಾಸ್ತ್ರಗಳಿಗೆ ಪ್ರತಿದ್ವಂದ್ವಿಗಳಾಗುತ್ತಿವೆ. ಹಾಗೆಯೇ ರಾಜ್ಯಶಾಸ್ತ್ರ, ಅರ್ಥಶಾಸ್ತ್ರ, ವ್ಯವಹಾರ ಧರ್ಮಶಾಸ್ತ್ರ ಮೊದಲಾದ ಆಧುನಿಕ ಸಮಾಜ ವಿಜ್ಞಾನ ಶಾಸ್ತ್ರಗಳೂ ತಮ್ಮ ತಮ್ಮ ಪ್ರಾಧಾನ್ಯವನ್ನು ಸ್ಥಾಪಿಸುತ್ತಿವೆ. ಈ ನೂತನ ಶಾಸ್ತ್ರಗಳೂ ನಮ್ಮ ಪುರಾತನ ಶಾಸ್ತ್ರಗಳಂತೆ ದೊಡ್ಡವು, ವಿಸ್ತಾರವಾದವು, ಕಷ್ಟತರ ವಾದುವು. ಹೀಗೆ ನಾಲ್ಕು ಶಾಸ್ತ್ರಗಳಿದ್ದ ಕಡೆ ಈಗ ನಲವತ್ತು ಶಾಸ್ತ್ರಗಳು ಪರಸ್ಪರ ಪೋಟಾಪೋಟಿಗೆ ನಿಂತಿವೆ. ಇದರಲ್ಲಿ ಯಾವುದು ಜನದ ನಿತ್ಯಜೀವನಕ್ಕೆ ಪ್ರತ್ಯಕ್ಷೋಪಯೋಗಿಯೋ ಅದಕ್ಕೆ ಹೆಚ್ಚು ಪ್ರತಿಫಲ ದೊರೆಯುವುದು ಸ್ವಾಭಾವಿಕ ವಾಗಿದೆ. ಅದೃಷ್ಟಹಿತಕ್ಕಿಂತ ದೃಷ್ಟಹಿತಕ್ಕೆ ಹೆಚ್ಚಾಗಿ ಬೆಲೆಕಟ್ಟುವುದೂ, ದೂರದ ಹಿತಕ್ಕಿಂತ ಸಮೀಪದ ಹಿತವನ್ನು ಹೆಚ್ಚು ಆದರದಿಂದ ನೋಡುವುದೂ ಮಾನವ ಸ್ವಭಾವದ ಗುಣ; ಅಥವಾ ಅವಗುಣ. ಹೇಗಾದರೂ, ಅದರಿಂದ ತಪ್ಪಿಸಿಕೊಳ್ಳುವುದು ಯಾರಿಗೂ ಸಾಧ್ಯವಿಲ್ಲ. ಯೂರೋಪಿನಿಂದ ಬರುತ್ತಿರುವ ನವೀನ ವಿಜ್ಞಾನಗಳು ನಮ್ಮ ಲೌಕಿಕಜೀವನದ ಸಾಧನಸೌಕರ್ಯಗಳನ್ನು ಹೆಚ್ಚಿಸುತ್ತಿವೆ; ಹೊಸ ಹೊಸ ಉಪಭೋಗ ಸಾಮಗ್ರಿಗಳನ್ನು ಒದಗಿಸುತ್ತಿವೆ; ಹೊಸ ಹೊಸ ಕುಶಲ ಸಂಧಾನ ಗಳನ್ನು ತೋರಿಸುತ್ತಿವೆ. ಅವು ಎಲ್ಲರಿಗೂ ಬೇಕಾಗಿವೆ. ಪೂರ್ವಕಾಲದ ಪಂಡಿತರು ಸಹ ಮೋಟಾರು ಸವಾರಿಯನ್ನು ಬೇಡವೆನ್ನುತ್ತಿಲ್ಲ. ಹೀಗೆ ನವೀನ ವಿದ್ಯೆಯ ಲೌಕಿಕ ಮೂಲ್ಯ ಹೆಚ್ಚಿದೆ. ಈ ನವೀನ ವಿದ್ಯೆಯಲ್ಲಿಯೂ ಇಂಗ್ಲಿಷ್ ಸಾಹಿತ್ಯ ಪಾಂಡಿತ್ಯಕ್ಕೆ ದೊರೆಯುವ ಮೌಲ್ಯಕ್ಕಿಂತ ಯಂತ್ರೋಪಕರಣಗಳ ಕುಶಲತೆಗೆ ದೊರೆಯುವ ಮೌಲ್ಯ ದೊಡ್ಡದಾಗಿದೆ. ಇದು ಅಪರಿಹಾರ್ಯವಾದ ವ್ಯತ್ಯಾಸ. ಮನುಷ್ಯನಿಗೆ ಶ್ರೇಯವಾದದ್ದರಲ್ಲಿರುವುದಕ್ಕಿಂತ ಪ್ರೇಯವಾದದ್ದರಲ್ಲಿ ಪ್ರವೃತ್ತಿ ಹೆಚ್ಚೆಂಬುದನ್ನು ನಮ್ಮ ಉಪನಿಷತ್ತುಗಳೇ ಸೂಚಿಸಿಲ್ಲವೆ?

## ಸ್ಮೃತಿ ಸ್ವತಂತ್ರ ಬುದ್ಧಿಗಳ ಪ್ರಸ್ಪರ್ಧೆ

ನಾಲ್ಕು:—ಇನ್ನೂ ಒಂದು ವಿಶೇಷವುಂಟು. ದ್ರವ್ಯರೂಪ ಪ್ರತಿಫಲದ ಮಾತು ಹಾಗಿರಲಿ. ಪುರಸ್ಕಾರವೂ ಸಹ ಕೆಲವು ಭಾಗಗಳಲ್ಲಿ ನವೀನ ವಿದ್ಯಾಪ್ರವೀಣರಿಗೆ ಹೆಚ್ಚಾಗಿ ದೊರೆಯುತ್ತಿದೆ. ಪಂಡಿತಾಭಿಮಾನಿಗಳು ಇದನ್ನು ಅನ್ಯಾಯವೆನ್ನುವುದುಂಟು. ಆದರೆ ನವೀನವಿದ್ಯೆಯ ಪರವಾಗಿ ಹೇಳುವ ಕಾರಣವನ್ನು ನಾವು ಮನಸ್ಸಿಗೆ ತಂದುಕೊಳ್ಳುವುದು ಉಚಿತವಾಗಿದೆ. ನಮ್ಮ ದೇಶದಲ್ಲಿ ಸ್ವತಂತ್ರವಾದ ಬುದ್ಧಿ ಕಾರ್ಯವೂ ಅನ್ಯಾನುವಾದವಲ್ಲದ ಶಾಸ್ತ್ರರಚನೆಯೂ ನಿಂತುಹೋಗಿ ನೂರಾರು ವರ್ಷಗಳಾದವು. ಈಚಿನ ಪಾಂಡಿತ್ಯವೇನಿದ್ದರೂ ಸ್ಮೃತಿ ಮಹಿಮಾಮಾತ್ರದ್ದು. ಹೊಸ ಗ್ರಂಥಗಳೇನಾದರೂ ಇದ್ದರೆ ಅವು ಚರ್ವಿತಚರ್ವಣ ಅಥವಾ ಛಾಯಾನುಕರಣ. ಈಚಿನ ಅಲಂಕಾರ ಗ್ರಂಥಗಳಲ್ಲಿಯ ಉದಾಹರಣೆಗಳು ಹಿಂದಿನ ಗ್ರಂಥಗಳ ಪ್ರತಿಬಿಂಬಗಳು. ಈಚಿನ ವಾಕ್ಯಾರ್ಥಗಳಲ್ಲಿಯ ಕೋಠಿ ಪ್ರತಿಕೋಠಿಗಳು ಹಿಂದಿನ ವಾದಸರಣಿಯ ಪಡಿಯಚ್ಚುಗಳು. ಹೀಗೆ ಈಚಿನ ಗ್ರಂಥಸಂಖ್ಯೆ ಬಹುವಾಗಿದ್ದರೂ ವಿಷಯ ಮಾತ್ರ ಹಿಂದಿನಷ್ಟೇ ಆಗಿದೆ. ಯೂರೋಪಿನಿಂದ ಬಂದು ಬೆಳೆಯುತ್ತಿರುವ ನವೀನ ವಿದ್ಯೆಗಳಾದರೋ ದಿನೇ ದಿನೇ ಮತ್ತೂ ನವನವೀನಗಳಾಗುತ್ತಿವೆ. ಹೊಸ ಹೊಸ ಸಂಶೋಧನೆಗಳೂ ಹೊಸ ಹೊಸ ಅನ್ವೇಷಣೆಗಳೂ ಪ್ರತಿನಿತ್ಯವೂ ನಡೆಯುತ್ತಿವೆ. ಹೀಗೆ ಈ ವಿಜ್ಞಾನಶಾಸ್ತ್ರಗಳು ಅಪಾರವಾಗಿ ಬೆಳೆಯುತ್ತಿವೆ; ವಿಜ್ಞಾನದ ಕ್ರಿಯಾಕ್ಷೇತ್ರವು ವಿಸ್ತಾರಪಡುತ್ತಿದೆ. ಆ ಶಾಸ್ತ್ರಗಳ ಬೋಧಕರು ಅನುದಿನವೂ ಈ ವಿಜ್ಞಾನ ವಿಸ್ತರಣೆಗಳನ್ನು ಸಮೀಕ್ಷಿಸುತ್ತ ಸ್ವಬುದ್ಧಿ ಕಾರ್ಯದಿಂದ ತಮ್ಮ ಜ್ಞಾನವನ್ನು ವಿಸ್ತರಿಸಿಕೊಳ್ಳಬೇಕಾಗಿದೆ. ಹೀಗೆ ಎಲ್ಲಿಯೋ ಒಬ್ಬ ಐನ್‌ಸ್ಟೈನ್, ಅಥವಾ ರಾಮನ್, ಅಥವಾ ಕೇನ್ಸ್, ಅಥವಾ ಲಾಸ್ಕಿ ಸ್ವತಂತ್ರವಾಗಿ ತೋರಿಸುವ ಬುದ್ಧಿಪ್ರಭಾವದಿಂದ, ಅವರಿಗೆ ಸಂಬಂಧಪಟ್ಟ "ಫಿಸಿಕ್ಸ್" ಅಥವಾ "ಎಕನಾಮಿಕ್ಸ್" ಅಥವಾ "ಪಾಲಿಟಿಕ್ಸ್" ಶಾಸ್ತ್ರಗಳನ್ನು ಬೋಧಿಸುವ ನಮ್ಮೂರಿನ ಉಪನ್ಯಾಸಕರಿಗೂ ಅಷ್ಟಿಷ್ಟು ವಿಶೇಷ ಪ್ರಶಸ್ತಿ ದೊರೆಯುತ್ತದೆ. ಸಂಸ್ಕೃತ ಕನ್ನಡಗಳಿಗೆ ದೊರೆಯುವ ಬೆಲೆಯಾದರೋ ಬಹುಮಟ್ಟಿಗೆ ಕಂಠಪಾಠಕ್ಕೆ ಸಲ್ಲುವ ಬೆಲೆ. ನಮ್ಮ ಪಂಡಿತರಿಗೂ ಅದೇ ರೀತಿ ಪುರಸ್ಕಾರ ದೊರೆಯುವಂತೆ ನಮ್ಮ ಶಾಸ್ತ್ರ ಸಾಹಿತ್ಯಗಳಲ್ಲಿಯೂ ಹೊಸ ಹೊಸ ಬುದ್ಧಿ ಪ್ರಕಾಶಗಳನ್ನು ಉತ್ಪತ್ತಿಮಾಡುವುದು ಹೇಗೆ—ಎಂಬುದು ಬಹು ದೊಡ್ಡ ಪ್ರಶ್ನೆ. ಅದಕ್ಕೆ ಉತ್ತರ ಹೇಳಲು ನಾನು ಇಲ್ಲಿ ಪ್ರಯತ್ನಿಸಲಾರೆ. ನನ್ನ ಮನಸ್ಸಿನಲ್ಲಿರುವ ಒಂದು ಭರವಸೆಯನ್ನು ಮಾತ್ರ ನಿರೂಪಿಸಲು ಅಪ್ಪಣೆ ಬೇಡುತ್ತೇನೆ. ನಮ್ಮ ಪ್ರಾಚೀನವಿದ್ಯೆಗೆ ನೂತನವಿದ್ಯೆಯ ಸಂಪರ್ಕವಾಗುತ್ತಿರುವುದು ಲೋಕಕ್ಕೆ

ಪರಮ ಶೋಭನಕರವೆಂದು ನಾನು ಭಾವಿಸಿದ್ದೇನೆ. ಮಳೆಯ ಮರುದಿನ ಬಂದ ಹೊಸ ಪ್ರವಾಹದಿಂದ ಕೆರೆಯ ನೀರು ಕದಡಿ ಒಂಡಾದಂತೆ ಕಂಡರೂ, ಅಂದಿನ ಮಾರನೆಯ ದಿನ ಆ ನೀರು ತಿಳಿಯಾಗಿ ಹಿಂದಿಗಿಂತ ರಮಣೀಯವಾಗುವುದು. ವಿದ್ಯೆ ಸಂಸ್ಕೃತಿಗಳ ಕಥೆಯೂ ಹಾಗೆಯೇ. ಹೊಸಹೊಸದಾಗಿ ಬರುತ್ತಿರುವ ವಿಜ್ಞಾನ ವಿದ್ಯಾಪ್ರವಾಹ ಗಳಲ್ಲಿ ನಮ್ಮ ಪ್ರಾಚೀನ ವಿದ್ಯೆಯ ಮೈಮೇಲೆ ನೂರಾರು ವರ್ಷಗಳಿಂದ ಸೇರಿರುವ ಧೂಳುಕೊಳೆಗಳನ್ನು ತೊಳೆಯಬೇಕಾಗಿದೆ. ನಮ್ಮ ಸಾಹಿತ್ಯ ಸೂತ್ರಗಳನ್ನೂ ನಮ್ಮ ಸಮಾಜ ಧರ್ಮ ತತ್ತ್ವಗಳನ್ನೂ ನಮ್ಮ ಆಧ್ಯಾತ್ಮಿಕ ಸಿದ್ಧಾಂತಗಳನ್ನೂ ಸಹ ಹೊಸ ಕಾಲದ ಬೆಳಕಿನಲ್ಲಿ ಪರೀಕ್ಷಿಸಿ ವಿಮರ್ಶಿಸಿ ಪುನಃ ಪರಿಷ್ಕಾರಗೊಳಿಸಬೇಕಾಗಿದೆ.

## ಪುರಾತನ ನೂತನಗಳ ಏಕಪ್ರವಾಹ

ವಾಸ್ತವವಾಗಿ ಮನುಷ್ಯಲೋಕದ ಅಂತರಂಗ ಜೀವನದಲ್ಲಿ ಹಳೆಯದಾವುದು? ಹೊಸದಾವುದು? ಒಳಗಿನದಾವುದು? ಹೊರಗಿನದಾವುದು? ಪೌರಸ್ತ್ಯವಾವುದು? ಪಾಶ್ಚಾತ್ಯವಾವುದು? ಮಾನವಜೀವಿತದ ಸಾರಭಾಗಗಗಳು ಎಲ್ಲ ಕಡೆಯೂ ಒಂದೇ ಆಗಿರುತ್ತವೆ. ಇಂದಿಗೆ ನಿನ್ನೆ ಹಳೆಯದು, ಈ ಗಳಿಗೆ ಹೊಸದು; ನಾಳೆಯ ಮೈಯಲ್ಲಿ ನಿನ್ನೆಯೂ ಈ ಹೊತ್ತೂ ಎರಡೂ ಕೂಡಿಕೊಂಡಿರುತ್ತವೆ. ನಮ್ಮ ದೇಶದ ಸ್ವತಂತ್ರ ಪ್ರತಿಭೆಯು ಪಾಶ್ಚಾತ್ಯ ಸಾಹಿತ್ಯಸಂಸ್ಕೃತಿಗಳ ಸಂಸರ್ಗದಿಂದ ಪುನಃ ಪ್ರಬುದ್ಧವಾಗಿ, ಅದರಿಂದ ನಮ್ಮ ಹಳೆಯ ಸಾಹಿತ್ಯಸಂಸ್ಕೃತಿಗಳು ಪುನಃ ಒಂದು ಅಭಿನವ ತೇಜಸ್ಸನ್ನು ತಾಳಿ ಅಭಿವೃದ್ಧಿ ಪಡೆದಾವೆಂದು ನನಗೆ ದೃಢವಾದ ನಂಬಿಕೆ ಇದೆ.

ಪುನಃ ಪುನರ್ಜಾಯಮಾನಾ ಪುರಾಣೀ |
ಸಮಾನಂ ವರ್ಣಮಭಿಶುಂಭಮಾನಾ ||

(ಬಹು ಹಳಬಳು; ಹಾಗೆಯೇ ಹೊಸಹೊಸದಾಗಿ ಹುಟ್ಟುತ್ತಿರುವವಳು; ಎಂದಿಗೂ ಕಳೆಗುಂದದ ಕಾಂತಿಯಿಂದ ಸೊಗಯಿಸುತ್ತಿರುವವಳು.)

ಈ ವೇದಮಂತ್ರದ ಉಷಾಸ್ತವವು ವಾಗ್ದೇವಿಗೂ ಅನ್ವಯಿಸತಕ್ಕದ್ದು.

ಐದು :—ನಮ್ಮ ಈಚೀಚಿನಕಾಲದ ಪಾಂಡಿತ್ಯದ ಮಟ್ಟವು ಪೂರ್ವಕಾಲದ್ದ ಕ್ಕಿಂತ ಕಡಮೆಯಾದಂತೆ ಕಾಣಲು ಇನ್ನೂ ಒಂದು ಕಾರಣವನ್ನು ಹೇಳಬಹುದು. ಪೂರ್ವದಲ್ಲಿ ಪಂಡಿತ ತರಗತಿಗೆ ಸೇರುತ್ತಿದ್ದವರು ಸಾಮಾನ್ಯವಾಗಿ ತಮ್ಮ ಮನೆಯಲ್ಲಿ ಒಂದಿಷ್ಟು ಶಾಸ್ತ್ರಸಂಸ್ಕಾರವನ್ನು ಪಡೆದಿದ್ದಂಥವರು. ಅವರು ಬಾಲ್ಯದಿಂದಲೂ ತಮ್ಮ ಬಂಧುಬಳಗದ ಗೋಷ್ಠಿಯಲ್ಲಿಯೂ ಮಿತ್ರಗೋಷ್ಠಿಯಲ್ಲಿಯೂ ಹಿಂದಿನಿಂದ ಬಂದಿದ್ದ ಕಾವ್ಯಶಾಸ್ತ್ರಜಿಜ್ಞಾಸೆಯನ್ನು ಕಿವಿಯಿಂದ ಕೇಳಿ, ಅಲ್ಪಸ್ವಲ್ಪ ಬಾಯಿಂದಲೂ

ಉಚ್ಚರಿಸಿದ್ದವರು. ಈ ತೆರದ ಬಹುಶ್ರುತತೆಯಿಂದ ಅವರಿಗೆ ಸ್ವಲ್ಪಮಟ್ಟಿನ ಸಂಸ್ಕಾರವು ಅಪ್ರಯತ್ನವಾಗಿ ಆಗುತ್ತಿತ್ತು. ಈ ಪೂರ್ವಸಿದ್ಧತೆಯನ್ನು ಪಡೆದುಕೊಂಡು ಪಂಡಿತ ಪಾಠಶಾಲೆಗೆ ಬಂದು ಅಲ್ಲಿ ಹೆಚ್ಚಿನ ಶಿಕ್ಷಣವನ್ನು ಪಡೆದವರು ಉತ್ತಮ ಪಂಡಿತರಾಗುತ್ತಿದ್ದುದು ಸ್ವಾಭಾವಿಕವಾಗಿದೆ. ಈಚೆಗೆ ಈ ಸನ್ನಿವೇಶ ಬದಲಾಯಿಸಿದೆ. ಈಗ ಪಂಡಿತ ತರಗತಿಗೆ ಸೇರುವವರೆಲ್ಲರೂ ಆ ರೀತಿಯ ಬಾಲ್ಯಸಂಸ್ಕಾರವನ್ನು ಪಡೆದವರೆಂದು ಹೇಳಲಾಗುವುದಿಲ್ಲ. ಅವರಲ್ಲಿ ಎಷ್ಟೋ ಮಂದಿಗೆ ಪ್ರೌಢಕಾವ್ಯಗಳೂ ಶಾಸ್ತ್ರಗಳೂ ತೀರಾ ಹೊಸದುವಾಗಿ, ಪಾಠಶಾಲೆಯಲ್ಲಿಯೇ ಮೊದಲು ಪರಿಚಿತವಾಗತಕ್ಕುವು. ಇಂಥವರ ಪಾಂಡಿತ್ಯ ಪರಿಪಾಕವು ಸ್ವಲ್ಪ ಮಂದವಾಗಿ ನಡೆಯುವುದು ಸ್ವಾಭಾವಿಕವಾಗಿದೆ. ಹೀಗೆ ಹೇಳಿದ್ದರಿಂದ ಪಂಡಿತ ಮನೆತನದಲ್ಲಿ ಹುಟ್ಟದೆ ಇರುವವರು ಪಂಡಿತರಾಗಕೂಡದೆಂಬುದು ನನ್ನ ಅಭಿಪ್ರಾಯವೆಂದು ಅರ್ಥಮಾಡತಕ್ಕದ್ದಲ್ಲ. ನಮ್ಮ ದೇಶದಲ್ಲಿ ಕನ್ನಡ-ಸಂಸ್ಕೃತ ಪಾಂಡಿತ್ಯವು ಎಲ್ಲ ಕುಲ ಎಲ್ಲ ಕೋಮು ಎಲ್ಲ ವರ್ಗಗಳಲ್ಲಿಯೂ ಹರಡಬೇಕೆಂಬುದು ನನ್ನ ನಿಜವಾದ ಆಶೆ. ತೆಲುಗುಸೀಮೆ ತಮಿಳುಸೀಮೆಗಳಲ್ಲಿ ದೇಶ ಭಾಷಾ ಪಾಂಡಿತ್ಯವು ಕನ್ನಡನಾಡಿನಲ್ಲಿರುವುದಕ್ಕಿಂತ ಹೆಚ್ಚಾಗಿ ಎಲ್ಲ ಜನ ವರ್ಗಗಳಲ್ಲಿಯೂ ವ್ಯಾಪಿಸಿದೆ. ಅಲ್ಲಿ ವಿದ್ವತ್ತನ್ನು ಕುಲಕ್ರಮಾಗತವಾಗಿ ಪಡೆಯದ ಜಾತಿವರ್ಗಗಳಲ್ಲಿಯೂ ವಿದ್ವಾಂಸರೂ ಲೇಖಕರೂ ಪ್ರಸಿದ್ಧರಾಗಿದ್ದಾರೆ. ಕನ್ನಡದಲ್ಲಿಯೂ ಹಾಗೆ ಆಗಿ, ಸಾರಸ್ವತ ಕ್ಷೇತ್ರದಲ್ಲಿ ಸಕಲರಿಗೂ ಸಮಾನವಾದ ಗಣ್ಯತೆ ಇರಬೇಕೆಂಬುದೇ ನನ್ನ ಆಶೆ. ಇದಕ್ಕೆ ಬೇಕಾದ ಪೀಠಿಕೆ ನಮ್ಮ ಪೂರ್ವಸಾಹಿತ್ಯದ ಚರಿತ್ರೆಯಲ್ಲಿದೆ. ಕನ್ನಡ ಗ್ರಂಥ ಲೇಖಕರಲ್ಲಿ ನಾನಾ ಕುಲ ನಾನಾ ವರ್ಗಗಳವರು ಹಿಂದಿನಿಂದ ಗಣ್ಯರಾಗಿ ಬಂದಿದ್ದಾರೆ. ಈ ಸರ್ವಜನೈಕಸುಲಭತೆ ನಮ್ಮ ಸಾಹಿತ್ಯರಾಜ್ಯದಲ್ಲಿ ಇನ್ನು ಮುಂದೆ ಕಾಲಕ್ರಮದಲ್ಲಿ ಮತ್ತಷ್ಟು ವಿಶೇಷವಾಗಿ ವ್ಯಾಪಿಸೀತೆಂದು ನನಗೆ ತೋರುತ್ತಿದೆ.

## ಕಾವ್ಯಸ್ವರೂಪ

ಪ್ರಕೃತ ಸಂದರ್ಭದಲ್ಲಿ ಪಂಡಿತ ಶಬ್ದಕ್ಕೆ ದೇಶಭಾಷಾ ಸಾಹಿತ್ಯೋಪಾಧ್ಯಾಯರೆಂದು ಅರ್ಥಹೇಳಿದೆನಷ್ಟೆ. ಆ ಅಧಿಕಾರದ ಮಹತ್ತ್ವವೆಂಥಾದ್ದು, ಅದಕ್ಕೆ ಆಗಬೇಕಾದ ಸಿದ್ಧತೆ ಎಂಥಾದ್ದು ಎಂಬ ವಿವರವನ್ನು ಕುರಿತು ಒಂದಿಷ್ಟು ಪ್ರಸ್ತಾವಿಸುವುದು ಇಲ್ಲಿ ಅಪ್ರಕೃತವೆನಿಸಲಾರದು. ಈ ಪ್ರಸ್ತಾವದ ಅಂಗವಾಗಿ ಕಾವ್ಯಪಾಠದ ವಿವರವನ್ನು ಕುರಿತು ಒಂದು ಮಾತನ್ನಾಡಬೇಕಾಗಿದೆ.

ಉತ್ತಮ ಕಾವ್ಯವು ಮೂರು ಬಗೆಯ ದ್ರವ್ಯಗಳ ಸಮ್ಮೇಳನ. ಒಂದು ಶ್ರವಣ ಮೋಹಕದ್ರವ್ಯ, ಇನ್ನೊಂದು ಮನೋವೇಧಕದ್ರವ್ಯ, ಮತ್ತೊಂದು ಬುದ್ಧಿಚೋದಕ

ದ್ರವ್ಯ. ಮೊದಲು, ಕವಿಯ ವಾಗ್ಗುಂಫನದ ಒಂದು ಗುಣವಿಶೇಷವು—ಒಂದು ನಾದ, ಒಂದು ಧಾಟಿ, ಒಂದು ಧ್ವನಿಗತಿ, ಒಂದು ಪದಮೈತ್ರಿ, ಒಂದು ಪ್ರಾಸನರ್ತನ, ಒಂದು ಶಬ್ದವಿನ್ಯಾಸ, ಇವು—ಶ್ರೋತ್ರೇಂದ್ರಿಯವನ್ನು ಹಿಡಿದು ವಶಪಡಿಸಿಕೊಂಡು ಮನಸ್ಸಿನೆಡೆಗೆ ದಾರಿ ಬಿಡಿಸುತ್ತವೆ. ಅನಂತರ ಕವಿಯು ಬಣ್ಣಿಸಿರುವ ವಸ್ತುಪರಂಪರೆಗಳೂ ಕಥಾಸಂದರ್ಭಗಳೂ ನಮ್ಮ ಮನಸ್ಸಿನ ಮುಂದೆ ಬಂದು, ಚಿತ್ರ ಚಿತ್ರವಾಗಿ ಎದ್ದುನಿಂತು, ಕುತುಕವನ್ನು ಹುಟ್ಟಿಸಿ, ಕ್ರಮ ಕ್ರಮವಾಗಿ ಭಾವಾವೇಶವನ್ನು ತಂದು, ತಲ್ಲೀನತೆಯನ್ನುಂಟುಮಾಡುತ್ತವೆ. ಹೀಗೆ ಮನಸ್ಸು ಕಾದು ಕರಗಿ ತಳಮಳಗುಟ್ಟುತ್ತಿರುವಲ್ಲಿ ಆ ಕಾವು ಬುದ್ಧಿಗೆ ವ್ಯಾಪಿಸಿ ಅಲ್ಲಿ ಚಿಂತಾತರಂಗಗಳನ್ನೇಳಿಸುತ್ತದೆ. ಈ ಚಿಂತೆಯಿಂದ ಆತ್ಮಸಂಸ್ಕಾರ. ಇಷ್ಟು ಕೆಲಸ ನಡೆದರೆ ಕಾವ್ಯವ್ಯಾಸಂಗ ಪೂರ್ಣವಾಗಿ ನಡೆದಂತೆ. ಶಬ್ದಸೌಂದರ್ಯದಿಂದ ಶ್ರವಣಗ್ರಹಣ; ಶ್ರವಣಗ್ರಹಣದಿಂದ ಚಿತ್ರ ಸಂದರ್ಭದರ್ಶನ; ಚಿತ್ರ ಸಂದರ್ಭದಿಂದ ರಸಾವಿರ್ಭಾವ; ರಸಾನುಭವದಿಂದ ವಿಚಾರೋದಯ; ವಿಚಾರೋದಯದಿಂದ ಧೀರತೆ ಪ್ರಸನ್ನತೆ ಶಾಂತತೆಗಳು—ಈ ತೆರನಾದದ್ದು ಆತ್ಮಪರಿಪಾಕ. ಇಂಥಾ ಮಹಾ ಆತ್ಮಯಜ್ಞದಲ್ಲಿ ಋತ್ವಿಕ್ಪುರೋಹಿತರುಗಳಾಗಿರತಕ್ಕವರು ನಮ್ಮ ಸಾಹಿತ್ಯ ಪಂಡಿತರು. ಹೀಗೆಂದ ಮೇಲೆ ಅವರಿಗಿರಬೇಕಾದ ಯೋಗ್ಯತಾಸಿದ್ಧಿಯೆಂಥದೆಂಬುದು ಸುಸ್ಪಷ್ಟವಾಗುತ್ತದೆ.

## ಗಮಕ ಕಲೆ

ಮೊದಲು ಅವರು ಒಳ್ಳೆಯ ಗಮಕಿಗಳಾಗಿರಬೇಕು. ಪದ್ಯಗದ್ಯಗಳನ್ನು ಶ್ರಾವ್ಯವಾದ ರೀತಿಯಲ್ಲಿ ಓದುವುದೇ ಒಂದು ದೊಡ್ಡ ಕಲೆ. ಪೂರ್ವದಲ್ಲಿ ಈ ಕಲೆಯ ವ್ಯವಸಾಯಕ್ಕೆ ಹೆಚ್ಚುಗಮನ ಕೊಡುತ್ತಿದ್ದರೆಂದು ತೋರುತ್ತದೆ. ಪದ್ಯವು ಬುದ್ಧಿಗೆ ಅರ್ಥವಾಗಲಿ ಅರ್ಥವಾಗದಿರಲಿ, ಅದರ ಶಬ್ದ ಸೌಂದರ್ಯವೇ ಕಿವಿಯನ್ನು ಅರಳಿಸಿ ಮನಸ್ಸನ್ನು ಮುಗ್ಧಪಡಿಸುವಂತೆ ಓದುಬಲ್ಲ ವಾಚನ ಕುಶಲಿಗಳನ್ನು ತಾವೂ ನೋಡಿರಬಹುದು. ಮಹರ್ಷಿಗಳು ಶ್ರವಣೇಂದ್ರಿಯದ ಮಹತ್ತ್ವವನ್ನೂ ಅದರ ಪರಮೋತ್ತಮ ವಿನಿಯೋಜನ ಕ್ರಮವನ್ನೂ ಚೆನ್ನಾಗಿ ಕಂಡುಕೊಂಡಿದ್ದವರು. ಆದದ್ದರಿಂದಲೇ ವೇದಘೋಷೆಯು ಒಂದು ಘನಗಂಭೀರವಾದ, ಒಂದು ಲೋಕಾತೀತವಾದ, ಒಂದು ದೈವೀಯವೆನಿಸುವ ವಾತಾವರಣವನ್ನು ಕಲ್ಪಿಸುವ ಶಕ್ತಿಯುಳ್ಳದ್ದಾಗಿದೆ. ವಾಲ್ಮೀಕಿ ಮಹರ್ಷಿ ತನ್ನ ಕಾವ್ಯವನ್ನು ರಾಗ ತಾಳ ಸಮನ್ವಿತವಾಗಿ ಹಾಡಿಸಿದನಂತೆ:—"ಕಾವ್ಯಮೇತದಗಾಯತಾಂ!" ಒಂದೊಂದು ಅಕ್ಷರಧ್ವನಿಯಲ್ಲಿಯೂ, ಒಂದೊಂದು ಧ್ವನಿವಿನ್ಯಾಸದಲ್ಲಿಯೂ, ಒಂದೊಂದು ಶಕ್ತಿಯಿರುತ್ತದೆ. ಈ ಅಕ್ಷರಶಕ್ತಿಗಳನ್ನು ಸಂಪೂರ್ಣ

ವಾಗಿ ಮೂರ್ತಗೊಳಿಸಿದಲ್ಲದೆ ಮನಸ್ಸಿನಲ್ಲಿ ಭಾವೋದ್ರೇಕವುಂಟಾಗಲಾರದು. ಈ ದೃಷ್ಟಿಯಿಂದ ಶಬ್ದಗಳ ಸ್ಫುಟೋಚ್ಚಾರಣೆಯೂ ಛಂದಸ್ಸಿನ ಯತಿತಾಳಗಳ ಅನುಸರಣೆಯೂ ಉಚಿತರಾಗ ಸಮ್ಮೇಳನವೂ ಅತ್ಯಂತ ಮುಖ್ಯವಾದ ಸಂಗತಿಗಳಾಗುತ್ತವೆ. ಹೀಗೆ ಕಾವ್ಯದ ಪ್ರಥಮ ಸೌಂದರ್ಯ ಪ್ರದರ್ಶಕವಾಗಿರುವ ಗಮಕಕಲೆಯ ಅಭ್ಯಾಸವು ವಾಸ್ತವವಾಗಿ ಚಿಕ್ಕವಯಸ್ಸಿನಲ್ಲಿಯೇ ಆರಂಭವಾಗಬೇಕಾದದ್ದು. ಬಾಲ್ಯದಲ್ಲಿ "ಅಮರ"ವನ್ನು ಬಾಯಿಪಾಠಮಾಡಿಸುತ್ತಿದ್ದವರು ಈ ತತ್ತ್ವವನ್ನು ಅರಿತುಕೊಂಡಿದ್ದರು. ಅವರನ್ನು ಸಂಪೂರ್ಣ ಕಂಸಾವತಾರಗಳೆಂದು ಹೇಳಲಾಗುವುದಿಲ್ಲ. ಅವರು ಮಕ್ಕಳಿಗೆ ಕಾಟಕೊಡುತ್ತಿದ್ದುದರಲ್ಲಿ ಒಂದು ಉದಾರವಾದ ದೂರಾಲೋಚನೆಯಿತ್ತು. ಜ್ಞಾಪಕಶಕ್ತಿಯನ್ನು ಬಲಪಡಿಸುವುದೂ ಉಚ್ಚಾರಣೆಯನ್ನು ಸ್ಫುಟಗೊಳಿಸುವುದೂ ಕಾವ್ಯಾಭ್ಯಾಸಕ್ಕೆ ಅತ್ಯವಶ್ಯವಾದ ಪೂರ್ವಸಿದ್ಧತೆ. ಅವೇ ಸಾಹಿತ್ಯದಲ್ಲಿ ಮೊದಲ ಪಾಠ.

## ಪದ್ಯಸ್ಮೃತಿ

ಈ ಮೂಲತತ್ತ್ವವನ್ನು ಈಚಿನ ಶಿಕ್ಷಣಪದ್ಧತಿ ಮೂಲೆಗೊತ್ತಿದೆಯೆಂದು ನನ್ನ ಮನಸ್ಸಿಗೆ ಚಿಂತೆ ತೋರಿದೆ. ನನ್ನ ಮಿತ್ರರೊಬ್ಬರು ಸಂಸ್ಕೃತ ವಿದ್ವಾಂಸರಾದವರು ವಿದ್ಯಾಪ್ರಚಾರದ ಇಲಾಖೆಯಲ್ಲಿ ಅಧಿಕಾರಿಗಳಾಗಿದ್ದರು. ಒಂದು ದಿನ ನಾನು ಅವರ ಮನೆಗೆ ಹೋಗಿದ್ದಾಗ ಅವರ ಹುಡುಗರು ಅಲ್ಲಿ ಓಡಾಡುತ್ತಿದ್ದದ್ದನ್ನು ನೋಡಿ— "ಈ ಮಕ್ಕಳಿಗೆ ಅಮರ ಹೇಳಿ ಕೊಡುತ್ತಿದ್ದೀರಾ"? ಎಂದು ಆತನನ್ನು ಕೇಳಿದೆ. "ನಿಮಗೆ ಉರುಹಚ್ಚುವುದರಲ್ಲಿ ಇನ್ನೂ ನಂಬಿಕೆಯಿದೆಯೆ?"—ಎಂದು ಅವರು ನನಗೆ ಪ್ರತಿಪ್ರಶ್ನೆ ಹಾಕಿದರು. ಅಮರ, ಶಬ್ದ, ಧಾತುರೂಪ—ಇವುಗಳನ್ನು ಕಂಠಪಾಠ ಮಾಡುವುದು ಸಂಸ್ಕೃತ ಭಾಷಾಭ್ಯಾಸಕ್ಕೆ ತಳಹದಿಯೆಂದು ನಾನು ಹೇಳಿದೆ. ಅವರು ತಲೆಯಲ್ಲಾಡಿಸಿ ಅಪನಂಬಿಕೆಯನ್ನು ಸೂಚಿಸಿದರು. ನಾನು ಇನ್ನೂ ನನ್ನ ಆ ಹಳೆಯ ನಂಬಿಕೆಯನ್ನು ಬಿಡಲು ಕಾರಣ ಕಂಡಿಲ್ಲ. ಹಿಂದೆ ಪಾಠಶಾಲೆಗಳಲ್ಲಿ ಪರೀಕ್ಷ್ಯರ ಪದ್ಯಸ್ಮೃತಿಯನ್ನು ಪರೀಕ್ಷಿಸುವುದಕ್ಕಾಗಿ ಕೆಲವು ಪದ್ಯಗಳ ಹಲಕೆಲವು ಪದಗಳನ್ನು ಮಾತ್ರ ಕೊಟ್ಟು ಉಳಿದ ಪದ್ಯಭಾಗಗಳನ್ನು ಭರ್ತಿಮಾಡಬೇಕೆಂದು ಕೇಳುತ್ತಿದ್ದುದುಂಟು. ಈಚಿನ ಪರೀಕ್ಷಾ ಪತ್ರಿಕೆಗಳಲ್ಲಿ ಇಂಥಾ ಪ್ರಶ್ನೆಗಳು ಕಡಮೆಯಾಗುತ್ತಿವೆಯೆಂದು ಕೇಳಿದ್ದೇನೆ. ಈ ವಿಚಾರವು ಪಂಡಿತಮಂಡಲದ ಗಮನಕ್ಕೆ ಅರ್ಹವಾದದ್ದೆಂದು ನನ್ನ ಅಭಿಪ್ರಾಯ. ಪದಗಳ ಧ್ವನಿಸೌಂದರ್ಯವನ್ನರಿತುಕೊಂಡು ಓದಲಾರದವನು ಕಾವ್ಯರಸವನ್ನೇನನುಭವಿಸಿಯಾನು? ಪದ್ಯಗಳನ್ನು ನೆನಪಿನಲ್ಲಿ ತುಂಬಿರಿಸಿಕೊಳ್ಳದವನು ಹೇಗೆ ಉಚಿತಪದ ಪ್ರಯೋಗದಿಂದ ಉತ್ತಮವಾಗ್ಮಿಯೆನಿಸಿಯಾನು? ಪಾಠಶಾಲೆ

ಗಳಲ್ಲಿ ಪಠ್ಯಗ್ರಂಥವು ಈಚೆಗೆ ಬಹು ವಿಪುಲವಾಗಿರುವುದರಿಂದ ಬಾಯಿಪಾಠದ ಪದ್ಧತಿ ಈಗ ಅಸಾಧ್ಯವೆಂದು ಯಾರಾದರೂ ಆಕ್ಷೇಪಣೆ ತೆಗೆದಾರೇನೋ! ನನ್ನ ಉತ್ತರವಿಷ್ಟೆ:—ಐನೂರು ಪದ್ಯಗಳನ್ನು ಅಷ್ಟಿಷ್ಟು ಕಚ್ಚಿ ಎಂಜಲು ಮಾಡುವುದಕ್ಕಿಂತ, ನೂರು ಪದ್ಯಗಳನ್ನು ಚರಣ ಚರಣವಾಗಿ, ಅಕ್ಷರಕ್ಷರವಾಗಿ, ನೋಡಿ ಪರೀಕ್ಷಿಸಿ, ಸವಿದು ಚಪ್ಪರಿಸುವುದು ಹೆಚ್ಚು ತೃಪ್ತಿಕರವಾಗುತ್ತದೆ. ಸತ್ಕವಿಪ್ರಯೋಗವು ಕಲ್ಲು ಸಕ್ಕರೆಯಂತೆ, ಅಥವಾ ಮುರಬ್ಬಾ ತುಂಡಿನಂತೆ, ಬಹುಕಾಲ ಬಾಯಲ್ಲಿರಬೇಕಾದದ್ದು. ಒಳ್ಳೆಯ ಪದ್ಯವನ್ನು ಆಗಾಗ ನೆನಪಿನಿಂದ ತೆಗೆದು ಮನಸ್ಸಿಗೆ ಮೆಲಕುಮೇವಾಗಿ ಸುತ್ತಿದ್ದರೆ ಆಗ ಅದರ ಸ್ವಾರಸ್ಯವು ಆತ್ಮಕ್ಕೆ ಪೂರ್ತಿಯಾಗಿ ದೊರೆತೀತು. ಹೀಗೆ ಜ್ಞಾಪಕವೂ ಉಚ್ಚಾರಣೆಯೂ ಕಾವ್ಯವ್ಯಾಸಂಗಕ್ಕೆ ಪರಮಸಾಧಕಗಳು.

ಮೈಸೂರಿನಲ್ಲಿ ಮಹಾರಾಜರ ಕಾಲೇಜಿನಲ್ಲಿ ಕನ್ನಡ ಪಂಡಿತರಾಗಿದ್ದ ಶ್ರೀಮಾನ್ ಕಾನಕಾನಹಳ್ಳಿಯ ವರದಾಚಾರ್ಯರ ಕಾವ್ಯಪಾಠದ ವೈಖರಿಯನ್ನು ತಾವು ಕೇಳಿರಬಹುದು. ವೇದಾಕ್ಷರವನ್ನು ನುಡಿದು ಕುದುರಿದ ಬಾಯಿ, ಮಧುರವಾದ ಶಾರೀರ, ಸಂಗೀತಪರಿಜ್ಞಾನ, ರಸವಿವೇಚನೆ, ರಸಾನುಭವವನ್ನು ಪ್ರತ್ಯಕ್ಷಗೊಳಿಸುವ ಮುಖಭಂಗಿ—ಇವು ಅವರ ಪಾಠವನ್ನು ಕಿವಿಮನಸ್ಸುಗಳಿಗೆ ಔತಣವನ್ನಾಗಿಸಿದ್ದವು. ಇತರ ತರಗತಿಗಳಲ್ಲಿದ್ದ ವಿದ್ಯಾರ್ಥಿಗಳೂ ಉಪಾಧ್ಯಾಯರೂ ಸಹ ತಮ್ಮ ತಮ್ಮ ಪಾಠಗಳನ್ನು ಬಿಟ್ಟು ವರದಾಚಾರ್ಯರ ಕಾವ್ಯವ್ಯಾಖ್ಯಾನವನ್ನು ಕೇಳಲು ಬರುತ್ತಿದ್ದುದುಂಟು. ಅದು ಕಾವ್ಯಬೋಧನೆಗೆ ಆದರ್ಶ.

ಇಂಗ್ಲೆಂಡಿನಲ್ಲಿ ಆಂಗ್ಲ ಕಾವ್ಯೋತ್ಸಾಹಿಗಳು ಈ ತತ್ತ್ವವನ್ನು ಗ್ರಹಿಸಿ ಕಾವ್ಯವಾಚನವನ್ನು ಕಲಿಸಲು ಪಾಠಶಾಲೆಗಳನ್ನೇರ್ಪಡಿಸಿರುತ್ತಾರೆ. ಬೆಂಗಳೂರಿನಲ್ಲಿ ಕರ್ಣಾಟಕ ಸಾಹಿತ್ಯ ಪರಿಷತ್ತು ಈ ರೀತಿಯ ಪ್ರಯತ್ನ ನಡಸಿರುವುದನ್ನು ತಾವು ನೋಡಿರಬಹುದು. ನಿಮ್ಮ ಈ ಸಮ್ಮೇಳನದ ಕಾರ್ಯಾಂಶಗಳಲ್ಲಿ ಚೂರ್ಣಿಕಾಪಠನ ಕಾವ್ಯವಾಚನಗಳನ್ನು ಸೇರಿಸಿರುವುದು ತೃಪ್ತಿಕರವಾಗಿದೆ. ಒಂದೆರಡು ಸಂಸ್ಥೆಗಳು ಐಚ್ಛಿಕವಾಗಿ ಇಂಥ ಪ್ರಯತ್ನಗಳನ್ನು ನಡಸಿದರೆ ಸಾಲದು. ಕಾವ್ಯೋಚ್ಚಾರಣೆ ಕಾವ್ಯಜ್ಞಾಪಕಗಳು ಪಾಠಶಾಲೆಗಳ ಪಾಠಪಟ್ಟಿಕೆಗಳಲ್ಲಿ ಯಥೋಚಿತ ಸ್ಥಾನವನ್ನು ಪಡೆದು ಪರೀಕ್ಷಾಂಶಗಳಾಗಬೇಕು. ಹಾಗಾಗುವ ವರೆಗೂ ನಿಮ್ಮ ಸಾಹಿತ್ಯ ಬೋಧನೆಯು ಸಮರ್ಪಕವಾಗದು.

## ರಸದೃಷ್ಟಿ ಸೂಕ್ಷ್ಮತೆ

ಕಾವ್ಯಕ್ರಿಯೆಗಳಲ್ಲಿ ಮೊದಲನೆಯದಾದ ಶ್ರವಣಗ್ರಹಣಕ್ಕೆ ಸಂಬಂಧಪಟ್ಟಂತೆ ಇಷ್ಟನ್ನು ಹೇಳಿದ್ದಾಯಿತು. ಉಳಿದ ಇನ್ನೆರಡು ಅರ್ಥವಿಮರ್ಶೆ ರಸಾನುಸಂಧಾನಗಳು.

ಇವು ಸಾಂಗವಾಗಿ ನಡೆಯಬೇಕಾದರೆ ಉಪಾಧ್ಯಾಯ ಪಂಡಿತರುಗಳಿಗೆ ನಿಘಂಟು ವ್ಯಾಕರಣ ಛಂದಸ್ಸು ಅಲಂಕಾರಶಾಸ್ತ್ರಗಳ ಬಲ ಎಷ್ಟಿದ್ದರೂ ಹೆಚ್ಚಾಗದೆಂಬುದು ಸ್ವತಸ್ಸಿದ್ಧವಾದ ವಿಷಯ. ಈ ನಾಲ್ಕು ಸಾಹಿತ್ಯಾಂಗಗಳ ಅಧ್ಯಯನವನ್ನು ಪಂಡಿತರು ಪದೇ ಪದೇ ಪುನರಾವರ್ತನ ಮಾಡುತ್ತಿರಬೇಕಾದದ್ದು ಅವರ ನಿತ್ಯಧರ್ಮವಾಗಿದೆ.

ಹಾಗೆಯೇ ತಮ್ಮ ಕಾವ್ಯಪರಿಚಯವನ್ನು ವಿಸ್ತಾರಪಡಿಸಿಕೊಳ್ಳುವುದೂ ಅವರಿಗೆ ಧರ್ಮವಾಗಿರುತ್ತದೆ. ತಾವು ಪಂಡಿತಪರೀಕ್ಷೆಗಾಗಿ ಓದಿದ ಕಾವ್ಯಭಾಗ, ಅದರ ಜೊತೆಗೆ ತಾವು ಪಾಠ ಹೇಳಬೇಕಾಗಿ ಬಂದ ಕಾವ್ಯಭಾಗ—ಇವಿಷ್ಟನ್ನು ಮಾತ್ರ ಅವರು ವ್ಯಾಸಂಗಮಾಡಿದ್ದರೆ ಸಾಕೆಂದು ಯಾರು ತಾನೆ ತಿಳಿದುಕೊಂಡಿದ್ದಾರು? ಎಲ್ಲ ಬಗೆಯ ಸೌಂದರ್ಯಗಳ ಪರಾಮರ್ಶದಲ್ಲಿಯೂ ನಮ್ಮ ದೃಷ್ಟಿ ಸೂಕ್ಷ್ಮತರವಾಗುವುದು ಒಂದು ವಸ್ತುವನ್ನಿನ್ನೊಂದರೊಡನೆ ಹೋಲಿಸಿ ನೋಡುವುದರಿಂದ. ಒಬ್ಬ ಕವಿಯನ್ನಿನ್ನೊಬ್ಬನೊಡನೆ ಹೋಲಿಸಿ, ಒಬ್ಬನ ಒಂದು ಸಂದರ್ಭದ ಕೈವಾಡವನ್ನು ಅದೇ ಕವಿಯ ಇನ್ನೊಂದು ಸಂದರ್ಭದ ಕೈವಾಡದೊಡನೆ ಹೋಲಿಸಿ, ಹೀಗೆ ಪರೀಕ್ಷಿಸುವುದರಿಂದ ನಮ್ಮ ರಸಾನುಭವಶಕ್ತಿ ತೀಕ್ಷ್ಣವಾಗುತ್ತದೆ. ಕನ್ನಡದಲ್ಲಿ ಪೂರ್ವದ ಕಾವ್ಯರಾಶಿ ಹೇರಳವಾಗಿದೆ. ಅದರ ಜೊತೆಗೆ ಹೊಸದೂ ಯಥೇಷ್ಟ ಪರಿಮಾಣದಲ್ಲಿ ಬೆಳೆಯುತ್ತಿದೆ. ಈ ವಾಙ್ಮಯ ರಾಶಿಯಲ್ಲಿ ಎಷ್ಟೆಷ್ಟು ವಿಶಾಲ ಭಾಗವನ್ನು ಪಂಡಿತರುಗಳು ಸ್ವಾಧೀನಪಡಿಸಿಕೊಳ್ಳುವರೋ ಅವರು ಬೋಧಿಸುವ ಪಾಠವು ಅಷ್ಟಷ್ಟು ಹೆಚ್ಚು ಸ್ವಾರಸ್ಯಪಡುವುದು ಸಿದ್ಧವಾಗಿದೆ.

### ತೋಲನ ಪರೀಕ್ಷೆ

ಆದರೆ ನಾನು ತಮ್ಮಲ್ಲಿ ವಿಶೇಷವಾಗಿ ವಿಜ್ಞಾಪಿಸಬೇಕಾಗಿರುವುದು ಬೇರೊಂದು ವಿಷಯ. ಅದು ಅನ್ಯಭಾಷಾ ವ್ಯಾಸಂಗದ ಕರ್ತವ್ಯತೆಯನ್ನು ಕುರಿತದ್ದು. ಸಾಹಿತ್ಯ ದೃಷ್ಟಿಯಿಂದ ಮಾತನಾಡುವವರಲ್ಲಿ ಒಂದು ಮೂಲತತ್ತ್ವ ಸರ್ವತ್ರ ಅಂಗೀಕೃತವಾಗತಕ್ಕದ್ದಿದೆ. ಅದೇನೆಂದರೆ—ಯಾರು ಒಂದೇ ಭಾಷೆಯನ್ನು ಮಾತ್ರ ಬಲ್ಲೆನೆನ್ನುವರೋ ಅವರಿಗೆ ಆ ಒಂದು ಭಾಷೆ ಸಹ ನಿಜವಾಗಿ ತಿಳಿಯದೆಂಬುದು. ಸಾಹಿತ್ಯದ ಸ್ವಾರಸ್ಯ ಯಥಾವತ್ತಾಗಿ ಅರಿವಿಗೆ ಬರಬೇಕಾದರೆ, ಅದರ ಪಾಠವು ಸಾದೃಶ್ಯ ವೈಲಕ್ಷಣ್ಯಗಳ ಪರೀಕ್ಷೆಯ ಆಧಾರದ ಮೇಲೆ—ತೋಲನ ರೀತಿಯಲ್ಲಿ—ನಡೆಯಬೇಕೆಂದು ಈಗತಾನೆ ಅರಿಕೆಮಾಡಿದೆನಷ್ಟೆ. ಈ ತೋಲಕ ದೃಷ್ಟಿಯು ಎರಡು ಬೇರೆಬೇರೆ ಭಾಷೆಗಳ ವಾಙ್ಮಯಗಳ ಸಮೀಕ್ಷೆಯಿಂದ ಪಟುವಾಗುತ್ತದೆ. ಆ ಎರಡು ಭಾಷೆಗಳೂ ವಿಜಾತೀಯಗಳಾಗಿದ್ದಷ್ಟೂ ನಮ್ಮ ದೃಷ್ಟಿಗೆ ಸೂಕ್ಷ್ಮತಾ ಲಾಭ ಹೆಚ್ಚಾಗಿರುತ್ತದೆ.

ಈ ಕಾರಣದಿಂದ ನಮ್ಮ ಕನ್ನಡ ಪಂಡಿತರಿಗೂ ನಮ್ಮ ಸಂಸ್ಕೃತ ಪಂಡಿತರಿಗೂ ಸಹ ಇಂಗ್ಲಿಷ್ ಸಾಹಿತ್ಯದ ಪರಿಚಯವು ಅಷ್ಟಿಷ್ಟಾದರೂ ಇರುವುದು ಅವಶ್ಯವೆಂದು ನಾನು ನಂಬಿದ್ದೇನೆ.

## ಕನ್ನಡ ಸಂಸ್ಕೃತಗಳ ಕಾದಾಟ

ಈ ಪ್ರಸಂಗದಲ್ಲಿ ಕನ್ನಡ ಸಂಸ್ಕೃತಗಳಿಗೆ ಉಚಿತವಾದ ಪರಸ್ಪರ ಬಾಂಧವ್ಯವನ್ನು ಕುರಿತು ಒಂದು ಮಾತನ್ನಾಡುವುದು ಅಪ್ರಕೃತವೆನಿಸಲಾರದು. ಈ ಎರಡು ಭಾಷೆಗಳಿಗೂ ಅನ್ಯೋನ್ಯ ವೈಷಮ್ಯವು ಎಂದಿಗೂ, ಎಷ್ಟುಮಾತ್ರವೂ, ಸಿದ್ಧಿಸಲಾರದು. ಕನ್ನಡದ ಮುಖಾಂತರದಿಂದಲ್ಲದೆ ಸಂಸ್ಕೃತ ವಾಙ್ಮಯದ ಅಂತಸ್ಸಾರವು ಜನಸಾಮಾನ್ಯದ ಕೈಗೆ ದೊರಕಲಾರದು. ಹಾಗೆಯೇ ಸಂಸ್ಕೃತದ ಬೆಂಬಲವಿದ್ದಲ್ಲದೆ ಕನ್ನಡ ಪರಿಪುಷ್ಟವಾಗಿ ಬೆಳೆಯಲಾರದು. ಸಂಸ್ಕೃತವು ಮಳೆಯ ಮೋಡ; ಕನ್ನಡವು ಅದನ್ನು ಹನಿಯಾಗಿಸಿ ನೆಲಕ್ಕೆ ಬರಮಾಡುವ ತಂಗಾಳಿ. ಹೀಗೆ ಅವೆರಡೂ ಅವಿನಾಭಾವದಿಂದ ಬಾಳಿ ಮುಂದಕ್ಕೆ ಸಾಗಬೇಕಾಗಿವೆ. ಯಾವ ಒಂದೂ ಇನ್ನೊಂದನ್ನು ಬಿಟ್ಟು ಸಾರ್ಥಕವೆನಿಸುವುದು ಅಸಾಧ್ಯ. ವಸ್ತುಸ್ಥಿತಿ ಹೀಗಿರುವಾಗ, ಸಂಸ್ಕೃತೋತ್ಸಾಹಿಗಳೂ ಕರ್ಣಾಟಕೋತ್ಸಾಹಿಗಳೂ ಪರಸ್ಪರ ಸ್ಪರ್ಧಿಗಳಾಗಿ ಬಡಿದಾಡುವುದು ಉಭಯರಿಗೂ ಅನರ್ಥಕರವೇ ಆಗುವುದರಲ್ಲಿ ಆಶ್ಚರ್ಯವೇನೂ ಇಲ್ಲ.

ಕನ್ನಡದ ಶಬ್ದಕೋಶವೂ ಲಕ್ಷಣಶಾಸ್ತ್ರಗಳೂ ಬಹುಮಟ್ಟಿಗೆ ಸಂಸ್ಕೃತವನ್ನನುಸರಿಸಿವೆಯೆಂಬುದು ಪ್ರಸಿದ್ಧ ಸಂಗತಿ. ಕನ್ನಡ ಪಂಡಿತನಿಗೆ ಸಂಸ್ಕೃತದ ಬಲವಿದ್ದಷ್ಟೂ ಅವನ ಕನ್ನಡಪಾಠವು ವೀರ್ಯವತ್ತರವಾಗುವುದು ಸಿದ್ಧವಾಗಿದೆ. ನಮ್ಮ ಕನ್ನಡ ಪಂಡಿತರು ಪ್ರತಿದಿನವೂ ಒಂದಿಷ್ಟು ಸಂಸ್ಕೃತ ಗ್ರಂಥ ವ್ಯಾಸಂಗವನ್ನಿಟ್ಟುಕೊಳ್ಳುವುದು ಅವರಿಗೆ ಕರ್ತವ್ಯ ಕರ್ಮವಾಗಿದೆ.

ನಮ್ಮ ಸಂಸ್ಕೃತ ಪಂಡಿತರಿಗೆ ಕನ್ನಡ ಸಾಹಿತ್ಯದ ವಿಷಯದಲ್ಲಿ ಅದೇ ತೆರನಾದ ಮಮತೆ ಇನ್ನೂ ಬೆಳೆಯಬೇಕಾಗಿದೆ. ಸಂಸ್ಕೃತ ಪಾಂಡಿತ್ಯವಿರುವ ಮಾತ್ರದಿಂದಲೇ ಕನ್ನಡ ಪಾಂಡಿತ್ಯವಿದ್ದಂತಾಯಿತೆನ್ನುವುದು ಕೇವಲ ಭ್ರಾಂತಿಯ ಮಾತು. ಕನ್ನಡಕ್ಕೂ ಒಂದು ಸ್ವತಂತ್ರವಾದ ರೂಢಿಯಿದೆ; ಒಂದು ಬೇರೆ ಮರ್ಯಾದೆಯಿದೆ; ಬೇರೆ ಗತಿ ಬೇರೆ ಧಾಟಿಗಳಿವೆ. ಸಂಸ್ಕೃತದ ಸಂಪ್ರದಾಯ ಶಾಸ್ತ್ರಗಳು ಮಹರ್ಷಿಕೃತಗಳಾದರೆ ಕನ್ನಡದ ಬಳಕೆ ಆಯಕಟ್ಟುಗಳು ಮಹಾಜನಸಹಿತಗಳಾದುವು. ಇವೂ ಪ್ರತ್ಯೇಕ ಪ್ರಯತ್ನದಿಂದಲೇ ಕಲಿಯಲಾಗತಕ್ಕುವು. ಇವುಗಳನ್ನು ಕಲಿಯಲು ಸಂಸ್ಕೃತ ಪಂಡಿತರು ಪ್ರಯಾಸಪಡುವುದರಿಂದ ಅವರ ಲೋಕೋಪಯೋಗಿತೆಯ ಸಾಮರ್ಥ್ಯ ಹೆಚ್ಚಾಗುವುದು.

## ಎರಡನ್ನೂ ಒಂದು ಪಾಠದಲ್ಲಿ ಸೇರಿಸಿರಿ

ಸಂಸ್ಕೃತ ಕನ್ನಡಗಳ ಪರಸ್ಪರ ಸಂಬಂಧವನ್ನು ಕುರಿತು ನಾನು ಹೇಳಬಯಸುವ ಮಾತು ಇನ್ನೊಂದಿದೆ. ಈ ಎರಡು ಭಾಷೆಗಳನ್ನೂ ಒಂದೇ ವಿಷಯದ ಎರಡು ಅಂಶಗಳೆಂದು ಪರಿಗಣಿಸಿ ಎರಡನ್ನೂ ಒಟ್ಟುಗೂಡಿಸಿ ಪಾಠಹೇಳುವುದು ಅಪೇಕ್ಷಣೀಯವೆಂದೂ, ಅದು ಅಸಾಧ್ಯವಲ್ಲವೆಂದೂ, ನಾನು ಬಹುದಿನದಿಂದ ಅಭಿಪ್ರಾಯವಿಟ್ಟುಕೊಂಡಿದ್ದೇನೆ. ಕನ್ನಡಕ್ಕಂತೂ ಸಂಸ್ಕೃತದ ಸಹಾಯ ಅನಿವಾರ್ಯವಾಗಿದೆ. ಪಂಪ, ರನ್ನ, ರುದ್ರಭಟ್ಟ, ಷಡಕ್ಷರಿ ಮೊದಲಾದ ಪ್ರಾಚೀನ ಕವಿಗಳ ಕಾವ್ಯಗಳನ್ನು ಓದಿ ಆನಂದಿಸಬೇಕೆನ್ನುವವರಿಗೆ ಸಂಸ್ಕೃತಜ್ಞಾನವು ಅವಶ್ಯವಾಗಿ ಬೇಕಾಗುತ್ತದೆ. ಇನ್ನು ಮುಂದೆ ಹೊಸ ವಿಷಯಗಳನ್ನು ಕುರಿತು ಕನ್ನಡದಲ್ಲಿ ನಿಷ್ಕರ್ಷೆಯಾದ ಪದಗಳಿಂದ ಗ್ರಂಥ ಬರೆಯಬೇಕೆನ್ನುವವರಿಗೂ, ನೂತನ ಶಬ್ದಸಾಮಗ್ರಿಯನ್ನು ಹವಣಿಸಿಕೊಳ್ಳಲು, ಸಂಸ್ಕೃತದ ಜ್ಞಾನವು ಅವಶ್ಯವಾಗಿರುತ್ತದೆ. ಈ ಎರಡು ಯೋಜನೆಗಳನ್ನೂ ಒತ್ತಟ್ಟಿಗಿಟ್ಟು ಸಂಸ್ಕೃತದ ಸ್ವತಂತ್ರ ಸಂಪತ್ತನ್ನು ನೋಡಿದರೂ, ಅದು ಸಮಸ್ತ ಭಾರತೀಯರಿಗೂ ಉಪಾದೇಯವಾಗಿರುತ್ತದೆ. ಈ ಕಾರಣಗಳಿಂದ ಸಂಸ್ಕೃತದ ಲಘುಪಾಠಗಳು ಕೆಲವನ್ನು ಕನ್ನಡಪಾಠದ ಅಂಗವಾಗಿ ನಮ್ಮ ಮಾಧ್ಯಮಿಕ ಶಾಲೆಗಳಲ್ಲಿ ಕಲಿಸಬಹುದೆಂದು ನನಗೆ ತೋರುತ್ತದೆ. ಮುಂದೆ ಮುಂದೆ ಪಂಪನನ್ನೂ ನಾಗವರ್ಮನನ್ನೂ ಸೇವಿಸಬೇಕಾದವರಿಗೆ ವಾಲ್ಮೀಕಿರಾಮಾಯಣದ ಒಂದೆರಡು ಸರ್ಗಗಳು, ಅಥವಾ ರಘುವಂಶದ ಒಂದೆರಡು ಸರ್ಗಗಳು, ದುರ್ಭರವಾದ ಹೊರೆಯಾಗಲಾರವು. ಸಂಸ್ಕೃತದ ಶ್ರೇಷ್ಠ ಕಾವ್ಯಗಳನ್ನು ಕನ್ನಡಕ್ಕೆ ಪರಿವರ್ತನೆ ಮಾಡುವುದರಿಂದಲೇ ಸಂಸ್ಕೃತದ ಮಧುವನ್ನು ಕನ್ನಡಿಗರಿಗೆ ದೊರೆಕಿಸುವೆವೆನ್ನುವುದು ಭ್ರಾಂತಿಯ ಮಾತು. ಭಾಷಾಂತರಕರ್ತನ ಬೆರಳಿಗೆ ಸಿಕ್ಕದೆ ನುಣಿಚಿಕೊಳ್ಳುವ ಸೊಗಸುಗಳು, ಇತರ ಭಾಷೆಗಳಲ್ಲಿರುವಂತೆಯೇ, ಸಂಸ್ಕೃತದಲ್ಲಿಯೂ ಅನಂತವಾಗಿರುತ್ತವೆ. ಕೃಷ್ಣಕರ್ಣಾಮೃತದ ಬೆಡಗುಗಳನ್ನೂ ಗೀತಗೋವಿಂದದ ಒಯ್ಯಾರಗಳನ್ನೂ ಕನ್ನಡಕ್ಕೆ ತರ್ಜುಮೆಮಾಡಬಲ್ಲವರಾರು? ಅನೇಕ ಕನ್ನಡ ಕಾವ್ಯಗಳ ಸೊಬಗುಗಳೂ ಹೀಗೆಯೇ ಸಂಸ್ಕೃತಕ್ಕೆ ತರ್ಜುಮೆಯಾಗಲಾರವು. ಸಂಸ್ಕೃತ ಕನ್ನಡಗಳೆರಡನ್ನೂ ಯಮಳರಂತೆ ಭಾವಿಸಿ, ಎರಡನ್ನೂ ಒಟ್ಟುಕೂಡಿಸಿ ಪಾಠಹೇಳುವುದರ ಸಾಧ್ಯಾಸಾಧ್ಯತೆಗಳನ್ನು ತಾವುಗಳು ಸಮಾಲೋಚಿಸಬೇಕೆಂದು ಬೇಡುತ್ತೇನೆ.

ಹಾಗೆಯೇ ಕನ್ನಡ ಪಠ್ಯಗ್ರಂಥಗಳಲ್ಲಿ ಎಷ್ಟು ಭಾಗ ಪ್ರಾಚೀನ ಕಾವ್ಯದ್ದಾಗಿರಬೇಕು ಎಂಬುದೂ ವಿಚಾರಾರ್ಹವಾದ ಪ್ರಶ್ನೆ. ಸಂಸ್ಕೃತ ಜ್ಞಾನಲಾಭದ ದೃಷ್ಟಿಯಿಂದ ನೋಡಿದರೆ, ಪ್ರಾಚೀನ ಕನ್ನಡ ಕವಿಗಳು ಆಧುನಿಕರಿಗಿಂತಲೂ ನಮಗೆ ಹೆಚ್ಚು

ಉಪಕಾರಕರಾಗಿದ್ದಾರೆ. ಪ್ರತ್ಯೇಕವಾಗಿ ಸಂಸ್ಕೃತ ಕಲಿಯದವನು ಪಂಪ ಷಡಕ್ಷರಿಗಳ ಕೃತಿಗಳನ್ನೋದಿದರೆ ಆ ಮೂಲಕವೇ ಒಂದಿಷ್ಟು ಸಂಸ್ಕೃತ ಪರಿಚಯವನ್ನು ಸಂಪಾದಿಸಲಾಗುತ್ತದೆ. ಈ ಲಾಭವು ಉಪೇಕ್ಷಿಸಬಹುದಾದಷ್ಟು ಸಣ್ಣದೇನೂ ಅಲ್ಲ. ಈ ಆರ್ಯಸಂಸ್ಕೃತಿ ಮಹಿಮಾದೃಷ್ಟಿಯಿಂದಲೂ ಕನ್ನಡ ಪ್ರಾಚೀನ ಕಾವ್ಯಗಳ ಪ್ರಾಮುಖ್ಯವನ್ನು ತಗ್ಗಿಸದಿರುವುದು ಯುಕ್ತವೆಂದು ನನಗೆ ತೋರುತ್ತದೆ.

## ಪಂಡಿತರಿಗೂ ಇಂಗ್ಲಿಷ್

ಕನ್ನಡ ಸಂಸ್ಕೃತಗಳ ಪರಸ್ಪರಾಪೇಕ್ಷೆಗಳಿಗಿಂತ ಹೆಚ್ಚು ಗಮನವನ್ನು ಕೋರುತ್ತಿರುವ ಅಂಶ ಅವುಗಳಿಗಿರುವ ಇಂಗ್ಲಿಷಿನ ಅಪೇಕ್ಷೆ. ಇದು ಅವೆರಡಕ್ಕೂ ಸಮಾನವಾಗಿ ಅವಶ್ಯವಾದದ್ದು. ನಾನು ಮೇಲೆ ವಿಜ್ಞಾಪಿಸಿದ ಅಸದೃಶಭಾಷಾ ವ್ಯಾಸಂಗದ ಉಪಯೋಗವನ್ನು ಇಂಗ್ಲೆಂಡಿನವರು ಕಂಡುಕೊಂಡು, ಅಲ್ಲಿಯ ಪಾಠ ಪಟ್ಟಿಕೆಗಳಲ್ಲಿ ಆಂಗ್ಲ ಭಾಷೆಯ ಜೊತೆಗೆ ಗ್ರೀಕ್ ಮತ್ತು ಲ್ಯಾಟಿನ್ ಎಂಬ ಪ್ರಾಚೀನ ಭಾಷೆಗಳನ್ನೋ, ಅಥವಾ ಫ್ರೆಂಚ್, ಜರ್ಮನ್ ಮೊದಲಾದ ಸಾಂಪ್ರತಕಾಲದ ಭಾಷೆಗಳನ್ನೋ ಸೇರಿಸಿರುತ್ತಾರೆ. ನಮ್ಮ ದೇಶದಲ್ಲಿ ಅನೇಕ ಕಾರಣಗಳಿಂದ ಈಗ ಪ್ರಚಾರದಲ್ಲಿರುವ ಇಂಗ್ಲೀಷ್ ಭಾಷೆಯು ನಮಗೆ ಸಾಹಿತ್ಯದೃಷ್ಟಿಯಿಂದಲೂ ಅಮೋಘವಾದ ಉಪಕಾರವನ್ನು ಮಾಡಬಲ್ಲದ್ದಾಗಿದೆ. ಅದರ ವಾಙ್ಮಯ ಸಂಪತ್ತಿನ ಎರಡು ಮೂರು ಮುಖ್ಯಾಂಶಗಳು ವಿಶೇಷವಾಗಿ ನಮ್ಮ ಲಕ್ಷ್ಯದಲ್ಲಿರಬೇಕಾದುವು. ಮೊದಲನೆಯದು ಅದರ ಅನುಪಮವಾದ ಕಾವ್ಯಸಮೃದ್ಧಿ. ಸಂಸ್ಕೃತದ ವೈದಿಕ ಮತ್ತು ಪೌರಾಣಿಕ ಕಾವ್ಯಸಂಪತ್ತನ್ನು ವಿನಾಯಿಸಿದರೆ ಪರಿಮಾಣದಲ್ಲಾಗಲಿ ಗುಣದಲ್ಲಾಗಲಿ ಇಂಗ್ಲಿಷಿನ ಕಾವ್ಯಭಂಡಾರಕ್ಕೆ ಸರಿದೂಗುವ ಕಾವ್ಯಸಂಪತ್ತು ಇನ್ನಾವ ಭಾಷೆಯಲ್ಲೂ ಇಲ್ಲವೆಂದು ಬಹು ಭಾಷಾನಿಪುಣರು ಬಹುಮಂದಿ ಹೇಳಿದ್ದಾರೆ. ಎರಡನೆಯದಾಗಿ, ಇಂಗ್ಲಿಷಿನಲ್ಲಿರುವ ವಚನ ಪ್ರಬಂಧರಾಶಿಗೆ ಹೋಲುವಂಥಾ ಸಾಹಿತ್ಯ ಕನ್ನಡದಲ್ಲಿಲ್ಲ; ಸಂಸ್ಕೃತದಲ್ಲಿಯೂ ಇಲ್ಲ. ಸಂಸ್ಕೃತದ ಭಾಷ್ಯಗ್ರಂಥಗಳನ್ನು ಬಿಟ್ಟರೆ ಇಂಗ್ಲಿಷಿನಲ್ಲಿರುವಂಥ ಪ್ರಸನ್ನ ಗಂಭೀರವಾದ ಗದ್ಯಶೈಲಿ ನಮ್ಮಲ್ಲಿ ಇನ್ನೂ ಹುಟ್ಟಬೇಕಾಗಿದೆ. ಮೂರನೆಯದಾಗಿ, ಸಾಂಪ್ರತಲೋಕದ ಮನೋಗತಿಗಳನ್ನು—ಅದರ ಆಶೆಗಳನ್ನು, ಸಂದೇಹಗಳನ್ನು, ಭೀತಿಗಳನ್ನು, ಅದರ ಯತ್ಕಿಂಚಿತ್ ವಿಜಯಗಳನ್ನು, ಅದರ ಪುನಃಪುನಸ್ಸಂಗತಗಳಾದ ಆಶಾಭಂಗಗಳನ್ನು, ಅದರ ಜಿಜ್ಞಾಸಾ ಪರಂಪರೆಗಳನ್ನು—ನಮಗೆ ತೋರಿಸುವ ಕೈಕನ್ನಡಿ ಇಂಗ್ಲಿಷ್ ಸಾಹಿತ್ಯ. ಹೀಗೆ ಉಪಲಭ್ಯವಾಗಿರುವ ಪ್ರಕೃತ ಲೋಕಜ್ಞಾನವು ನಮ್ಮ ಸಾಹಿತ್ಯಕ್ಕೆ ತೀರಾ

ಅವಶ್ಯವಾಗಿದೆ. ನಮ್ಮಲ್ಲಿ ನವೀನ ಸಾಹಿತ್ಯಸೃಷ್ಟಿಗಾಗಿ ಮಾತ್ರವೇ ಇಲ್ಲ, ಈಗಾಗಲೇ ಸಿದ್ಧವಾಗಿರುವ ಸಾಹಿತ್ಯದ ವಿವರಣೆಗಾಗಿಯೂ ನಮಗೆ ಇಂಗ್ಲಿಷ್ ಸಾಹಿತ್ಯದ ಉಪಕಾರವು ಬೇಕಾಗಿದೆ.

## ತೂಗಿಸಿ ನೋಡಿ ಬೆಲೆ ಕಟ್ಟಿ

ನಮ್ಮ ವಾಲ್ಮೀಕಿವ್ಯಾಸ ಕಾಳಿದಾಸರುಗಳು ದೊಡ್ಡಕವಿಗಳೆಂಬುದನ್ನು ನಾವೆಲ್ಲ ತಿಳಿದುಕೊಂಡಿದ್ದೇವೆ, ನಿಜ. ಆದರೆ ಆ ದೊಡ್ಡತನವೆಂಥಾದ್ದು? ಅದು ಯಾವ ಮಟ್ಟದ್ದು? ಈ ವಿವರವನ್ನು ಕಾಣಬೇಕಾದರೆ ವಾಲ್ಮೀಕಿಯನ್ನು ಮಿಲ್ಟನಿನೊಡನೆ, ವ್ಯಾಸನನ್ನು ಹೋಮರನೊಡನೆ, ಕಾಳಿದಾಸನನ್ನು ಷೇಕ್ಸ್‌ಪಿಯರಿನೊಡನೆ, ಭರ್ತೃಹರಿಯನ್ನು ವರ್ಡ್ಸ್‌ವರ್ತಿನೊಡನೆ ಹೋಲಿಸಿ ನೋಡಬೇಕು. "ಆ ಕವಿಗಳ ಮನೋಧರ್ಮ ಬೇರೆ, ಅವರ ಜಾತಿಲಕ್ಷಣಗಳು ಬೇರೆ, ಅವರ ಕಾವ್ಯವಸ್ತುಗಳ ಪ್ರಾಗ್ಭೂಮಿಗಳು ಬೇರೆ; ಅವುಗಳಿಗೂ ನಮ್ಮವುಗಳಿಗೂ ಸಾಮ್ಯ ಹೇಗಾದೀತು"—ಎಂದು ವಾದಿಸುವುದು ಸಫಲವಾಗದು. ತತ್ತದ್ದೇಶಿಯವೂ ತತ್ತತ್ಕಾಲೀನವೂ ಆದ ಸಂದರ್ಭಗಳು ಎಲ್ಲ ಕಾವ್ಯಪ್ರಬಂಧಗಳಲ್ಲಿಯೂ ಅಷ್ಟಿಷ್ಟು ಇದ್ದೇ ಇರುತ್ತವೆ. ಅಂಥವುಗಳನ್ನು ವಿನಾಯಿಸಿ, ಸಾರ್ವದೇಶಿಕಗಳೂ ಸಾರ್ವಕಾಲೀನಗಳೂ ಆಗಿ, ಸಮಸ್ತ ಮಾನವಸ್ವಭಾವಕ್ಕೂ ಏಕಪ್ರಕಾರವಾಗಿ ಸಂಬಂಧಪಟ್ಟಿರುವ ಸನ್ನಿವೇಶಗಳನ್ನು ಲಕ್ಷ್ಯಕ್ಕೆ ತಂದುಕೊಂಡು ನೋಡಿದರೆ, ಈ ಆಂಗ್ಲಕವಿ ಭಾರತಕವಿಗಳಲ್ಲಿ ಯಾರು ಯಾರು ಯಾವ ಯಾವ ದರ್ಜೆಗೆ ಹತ್ತುತ್ತಾರೆ? ನಮ್ಮವರೆಲ್ಲರೂ ಅವರೆಲ್ಲರಿಗಿಂತಲೂ ಮೇಲ್ಮಟ್ಟಕ್ಕೇರುವರೆಂದು ನಾನು ಹೇಳಲಾರೆ. ನಮ್ಮ ಸಾಹಿತ್ಯದಲ್ಲಿ ಕೇಳಬರದ ಅನೇಕ ಸೂಕ್ಷ್ಮಧ್ವನಿಗಳೂ, ನಮ್ಮಲ್ಲಿ ಕಾಣಬರದ ಅನೇಕ ಸೂಕ್ಷ್ಮತೇಜಸ್ಸುಗಳೂ ಇಂಗ್ಲಿಷ್ ಕಾವ್ಯದಲ್ಲಿ ಗೋಚರವಾಗುತ್ತವೆ. ಅಲ್ಲಿಯ ವಿದ್ಯುಜ್ಜ್ವಲನೆಯ ವೇಗವೆಂಥದೆಂಬುದನ್ನು ಕಂಡುಕೊಳ್ಳುವುದೇ ನಮಗೆ ಒಂದು ಹೊಸ ದಿವ್ಯದರ್ಶನ.

## ಇಂಗ್ಲಿಷ್ ಗದ್ಯ

ಇಂಗ್ಲಿಷ್ ಗದ್ಯಸಾಹಿತ್ಯವು ಹೇಗೆ ನಮಗೆ ವಿಶೇಷ ಆದರಣೀಯವಾದದ್ದೆಂಬುದನ್ನು ಮೇಲೆ ಹೇಳಿದೆ. ಆ ಗದ್ಯದಲ್ಲಿರುವುದು ಕಥೆಕಾದಂಬರಿಗಳು ಮಾತ್ರವೇ ಅಲ್ಲ. ಕನ್ನಡದಲ್ಲಿ ಅದನ್ನನುಸರಿಸಿಕೊಂಡು ಈಚೀಚೆಗೆ ಹುಟ್ಟಿರುವುದು ಒಂದಿಷ್ಟು ಸಣ್ಣ ಕಥೆಗಳ ಸಾಹಿತ್ಯ. ಇಂಗ್ಲಿಷ್ ಮಾತನಾಡುವ ದೇಶಗಳಲ್ಲಿ ಜನಜೀವನದ ಮೇಲೆ ಬಹುಪ್ರಕಾರವಾಗಿ ಪ್ರಭಾವ ಬೀರಿರುವ ದೊಡ್ಡದೊಡ್ಡ ಸಾಮಾಜಿಕ ಕಾದಂಬರಿ

ಗಳಂಥವು ನಮ್ಮಲ್ಲಿ ಇನ್ನೂ ಹುಟ್ಟಬೇಕಾಗಿವೆ. ಶ್ರೀಮಾನ್ ಬಿ. ವೆಂಕಟಾಚಾರ್ಯರು ವಂಗಭಾಷೆಯಿಂದ ತಂದುಕೊಟ್ಟಿರುವ ನಾವೆಲ್ಲುಗಳನ್ನು ಬಿಟ್ಟರೆ, ಆ ಜಾತಿಯ ಪ್ರಬಂಧಗಳು ಕನ್ನಡದಲ್ಲಿ ಮೂರು ನಾಲ್ಕಾದರೂ ಇವೆಯೋ ಇಲ್ಲವೋ ಹೇಳುವುದು ಕಷ್ಟ. ಥ್ಯಾಕರೇ, ಡಿಕೆನ್ಸ್, ಸ್ಕಾಟ್, ಗಾಲ್ಸ್ವರ್ದಿ, ಹಾರ್ಡಿ—ಇವರುಗಳ ಕಥಾ ನಿರ್ಮಿತಿಗಳೇ ಇಂಗ್ಲಿಷಿನಿಂದ ನಮಗೆ ಅಮೋಘಗಳಾದ ವರಗಳಾಗುತ್ತವೆ. ಅವುಗಳ ಜೊತೆಗೆ ಇತಿಹಾಸ ಲೇಖನಗಳೂ, ತತ್ತ್ವವಿಚಾರ ಗ್ರಂಥಗಳೂ, ರಾಜ್ಯಶಾಸ್ತ್ರ ಅರ್ಥಶಾಸ್ತ್ರ ವ್ಯವಹಾರಶಾಸ್ತ್ರ ಮೊದಲಾದ ಸಮಾಜ ವಿಜ್ಞಾನ ಗ್ರಂಥಗಳೂ ಅಸಂಖ್ಯೇಯವಾಗಿವೆ. ಇವನ್ನೆಲ್ಲ ಒತ್ತಟ್ಟಿಗಿಟ್ಟು, "ಎಸ್ಸೇ" (Essay) ಎನ್ನಿಸಿಕೊಂಡಿರುವ ಕೇವಲ ಉಪನ್ಯಾಸ ಪ್ರಬಂಧಗಳನ್ನೇ ನೋಡಿದರೂ ಅವು ಕೂಡ ನಮಗೆ ನವೀನಮಾರ್ಗದರ್ಶಕಗಳಾಗಿವೆ. ಈ ಉಪನ್ಯಾಸಗಳು ಮನುಷ್ಯಬುದ್ಧಿಗೆ ತೋರುವ ಎಲ್ಲ ವಿಷಯಗಳನ್ನೂ ಕುರಿತುವಾಗಿರುತ್ತವೆ. ರೈಲು ಪ್ರಯಾಣ, ಚೆಂಡಾಟ, ರಜಾವಿನೋದ, ಮದುವೆಯ ಸಂದಣಿ, ದಾರಿಯಪಕ್ಕದ ಸತ್ರ, ಚರಮ ಸಂಸ್ಕಾರದಲ್ಲಿಯ ಹಾಸ್ಯಪ್ರಸಂಗ, ಸಂತೆಯಲ್ಲಿನ ಪ್ರಣಯ—ಇಂಥ ಯಾವುದೋ ಒಂದು ಮಾನವಜೀವಿತದ ಲಘುವಾದ ಅಥವಾ ಗಹನವಾದ ತೊಡಕಿನ ಪ್ರಸಂಗವನ್ನೆತ್ತಿ ಪ್ರಬಂಧ ಕುಶಲಿ ಒಂದೆರಡು ಪುಟಗಳನ್ನು ಬರೆದಿಡುತ್ತಾನೆ. ಅದರಲ್ಲಿ ಮಾತಿನ ಭಾರವೇನೂ ಕಾಣುವುದಿಲ್ಲ. ವರ್ಣನೆಯಲ್ಲಿ ಆಡಂಬರವಿರುವುದಿಲ್ಲ. ಎಲ್ಲವೂ ಸಾಮಾನ್ಯವಾಗಿ, ಹಗುರವಾಗಿ, ಸಹಜವಾಗಿರುತ್ತದೆ. ಆದರೂ ಈ ಸಾಮಾನ್ಯತೆಯ ಮೇಲುಹೊದಕೆಯ ಕೆಳಗಡೆ ಒಂದು ವಿಶೇಷವಾದ ತತ್ತ್ವ ಚಿಂತನೆಯಿರುತ್ತದೆ. ಇದನ್ನು ನಾವು ನೋಡಿ ಕಲಿಯಬೇಕು.

ನಾನು ಈಗ್ಗೆ ಐದಾರು ವರ್ಷಗಳ ಹಿಂದೆ ಕೆಲವು ವರ್ಷಗಳ ಕಾಲ ಪಂಡಿತ ಪರೀಕ್ಷೆಯಲ್ಲಿ ಒಬ್ಬ ಪರೀಕ್ಷಕನಾಗಿದ್ದೆ. ನಮ್ಮ ಪಂಡಿತರ ಉಪನ್ಯಾಸ ಲೇಖನ ರೀತಿಯನ್ನು ನೋಡುವ ಅವಕಾಶ ಆಗ ನನಗೆ ದೊರೆತಿತ್ತು. ಅಂದಿನಿಂದ ನಮ್ಮ ಪಂಡಿತರಿಗೆ ಪ್ರಬಂಧರಚನೆಯಲ್ಲಿ ನೂತನವಿಧಾನಗಳನ್ನು ತೋರಿಸುವುದು ಅವಶ್ಯವೆಂಬ ಅಭಿಪ್ರಾಯ ನನ್ನ ಮನಸ್ಸಿನಲ್ಲಿ ನಿಂತಿದೆ. ವಿಷಯ ಸಾಮಗ್ರಿಯ ಹವಣಿಕೆ, ಅದನ್ನು ವಿಂಗಡಿಸಿ ಜೋಡಿಸುವುದರಲ್ಲಿ ಒಂದು ಕ್ರಮ, ಒಂದು ಅಚ್ಚುಕಟ್ಟು, ನಿರೂಪಣರೀತಿಯಲ್ಲಿ ಒಂದು ಚಮತ್ಕಾರ, ಅತಿಭಾರವೂ ಅಲ್ಲದೆ ಅತಿಪೇಲವವೂ ಅಲ್ಲದೆ ಸರಳವಾಗಿ ಹರಿಯುವ ವಾಕ್ಸರಣಿ,—ಇವು ಇಂಗ್ಲಿಷ್ ಪ್ರಬಂಧರಚನೆಯ ಉತ್ತಮ ಲಕ್ಷಣಗಳು. ಈ ಲಕ್ಷಣಗಳು ನೂರಾರು ವರ್ಷಗಳ, ನೂರಾರು ಕೈಗಳ, ಪ್ರಯಾಸದಿಂದ ಕೊಂಚಕೊಂಚವಾಗಿ ಬೆಳೆದು ಕ್ರಮಕ್ರಮವಾಗಿ ಉಂಟಾದವು.

ಬರಿಯ ಲಘು ಪ್ರಬಂಧಗಳಲ್ಲಿ ಮಾತ್ರವೇ ಅಲ್ಲ, ದೊಡ್ಡದೊಡ್ಡ ರಾಜ್ಯಶಾಸ್ತ್ರ ಅರ್ಥಶಾಸ್ತ್ರ ಗ್ರಂಥಗಳಲ್ಲಿಯೂ ಭೌತಶಾಸ್ತ್ರ ಜೀವಶಾಸ್ತ್ರ ಗ್ರಂಥಗಳಲ್ಲಿಯೂ ಈ ವಾಕ್ಯ ಪರಿಷ್ಕಾರದ ಸೊಗಸು ಇಂಗ್ಲಿಷ್ ಬರೆವಣಿಗೆಯಲ್ಲಿ ಕಾಣಬರುತ್ತದೆ. ಒಂದೊಂದು ವಾಕ್ಯವೂ ಒಂದು ಅಚ್ಚುಕಟ್ಟಾದ ಪೊಟ್ಟಣದಂತೆ, ಒಂದೊಂದು ವಾಕ್ಯ ಸಮುಚ್ಚಯವೂ ಒಂದು ಅಂದವಾಗಿ ಪೇರಿಸಿದ ಸಣ್ಣ ಪೆಟ್ಟಿಗೆಗಳ ಸಾಲಿನಂತೆ, ನೋಟಕ್ಕೆ ಒಪ್ಪವಾಗಿ ಉಪಯೋಗಕ್ಕೆ ಬೇಗ ದೊರಕುವುದಾಗಿರುತ್ತದೆ. ಈ ವಚನಶೈಲಿಯ ಸೊಬಗೊಂದಕ್ಕೋಸ್ಕರವಾಗಿಯೇ ಆದರೂ ನಾವು ಇಂಗ್ಲಿಷ್ ಸಾಹಿತ್ಯವನ್ನು ಆದರಿಸಬೇಕಾಗಿದೆ.

## ಲೋಕಪರಿಜ್ಞಾನ

ಇನ್ನು ಒಂದು ತತ್ತ್ವವನ್ನು ಆಲೋಚಿಸೋಣ. ಸಾಹಿತ್ಯಪಾಠವೇನೂ ಗುಹೆಯೊಳಗಣ ತಪಸ್ಸಲ್ಲ. ಸಾಹಿತ್ಯದ ವಸ್ತು ಲೋಕಜೀವನದಿಂದ ಬಂದದ್ದು ; ಅದರ ಪರಮ ಸಾರ್ಥಕತೆ ಲೋಕಜೀವನದಲ್ಲಿ. ಹೀಗೆ ಸಾಹಿತ್ಯಕ್ಕೂ ಲೋಕಜೀವನಕ್ಕೂ ಅನ್ಯೋನ್ಯಾಶ್ರಿತಭಾವವಿರುವಲ್ಲಿ, ಲೋಕಪರಿಸ್ಥಿತಿಯನ್ನರಿಯದವರು ಹೇಳುವ ಸಾಹಿತ್ಯ ಪಾಠವು ಹೇಗೆ ಕಳೆ ಕಟ್ಟೀತು? ನಿತ್ಯ ನೂತನತೆಯು ಸಜೀವಸಾಹಿತ್ಯದ ಲಕ್ಷಣವೆಂಬುದನ್ನು ನಾವು ಮರೆಯಲಾಗದು. "ಇನ್ನು ಸಾಹಿತ್ಯಸೃಷ್ಟಿ ಮುಗಿದು ಹೋಯಿತು; ಇಲ್ಲಿಂದ ಮುಂದೆ ಹಳೆಯ ಕಾವ್ಯಗಳೆಷ್ಟೋ ಅಷ್ಟನ್ನೇ ನಾವು ಪಾಠ ಹೇಳಬೇಕಾದದ್ದು"—ಎಂಬ ಕಾಲವು ಎಂದಿಗೂ ಬರಲಾರದು. ಅದು ಬರಬಾರದೆಂಬುದೇ ನಮ್ಮ ಸಂತತಪ್ರಾರ್ಥನೆಯಾಗಿರಬೇಕು ; ಏಕೆಂದರೆ, ಹೊಸತನವೇ ಬಾಳು, ಹಳಸಿಕೆಯೇ ಸಾವು. ಲೋಕದಲ್ಲಿ ಜನರ ಮನೋ ಬುದ್ಧಿಗಳು ಸಂತತವೂ ಬೆಳೆದು ಹೊಸ ಹೊಸ ರೂಪಭಾವಗಳನ್ನು ತಾಳುತ್ತಿರುತ್ತವೆ. ಅದಕ್ಕನುಸಾರವಾಗಿ ಕಾವ್ಯಕಲೆಗಳೂ ಶಾಸ್ತ್ರದರ್ಶನಗಳೂ ಆಗಿಂದಾಗ್ಗೆ ಅಭಿನವ ರೂಪಗಳನ್ನು ಧರಿಸಬೇಕಾಗುತ್ತದೆ. ಹೀಗಿರುವಲ್ಲಿ ಸಾಹಿತಿಗಳಿಗೆ ಯಾವಾಗಲೂ ಎರಡು ಕರ್ತವ್ಯಗಳು ಕಾದಿರುತ್ತವೆ : ಒಂದು, ಹಳೆಯ ಕಾವ್ಯಗಳನ್ನು ಹೊಸ ಭಾವನೆ ಹೊಸ ಜ್ಞಾನಗಳ ಹೊಸ ಬೆಳಕಿನಲ್ಲಿ ಪುನರ್ವಿಮರ್ಶೆಮಾಡಿ ಅವಕ್ಕೆ ಹೊಸದಾಗಿ ಬೆಲೆ ಕಟ್ಟುವುದು ; ಎರಡನೆಯದು, ಹೊಸ ಕಾವ್ಯಗಳನ್ನು ಹೊಸ ಕಾಲದ ದೃಷ್ಟಿಯಿಂದ ನೋಡಿ ಅರ್ಥಮಾಡಿಕೊಳ್ಳುವುದು. ಈ ಎರಡು ಕರ್ತವ್ಯಗಳಿಗೂ ಅವಶ್ಯವಾದದ್ದು ಲೋಕಪರಿಜ್ಞಾನ. ಇದು ನಮಗೆ ಸದ್ಯಕ್ಕೆ ಇಂಗ್ಲಿಷಿನಿಂದ ದೊರಕುವಷ್ಟು ಮಟ್ಟಿಗೆ ಇನ್ನಾವ ಭಾಷೆಯಿಂದಲೂ ದೊರೆಯಲಾರದು.

## ಪಂಡಿತರೂ ಹೊಸ ಸಾಹಿತ್ಯವೂ

ಪ್ರಪಂಚದಲ್ಲಿ ಈಚೆಗೆ ಭಾಷಾಶಾಸ್ತ್ರವೆಂಬ ಹೊಸ ಶಾಸ್ತ್ರವೊಂದು ಹುಟ್ಟಿಕೊಂಡಿದೆ. ನಾನಾ ಭಾಷೆಗಳ ವಂಶಾನುಕ್ರಮಗಳು, ಕಾಲಕ್ರಮದಲ್ಲಿ ಅವು ಪಡೆದಿರುವ ಮಾರ್ಪಾಟುಗಳು, ಅವುಗಳ ಪರಸ್ಪರ ಋಣ ಆದಾನಗಳು—ಈ ಮೊದಲಾದವು ಭಾಷಾಶಾಸ್ತ್ರದ ವಿಷಯಗಳು. ಈ ಶಾಸ್ತ್ರವು ನಮ್ಮ ಪಂಡಿತೋಪಾಧ್ಯಾಯರುಗಳಿಗೆ ಅತ್ಯಂತ ಉಪಯುಕ್ತವಾದದ್ದೆಂದು ಹೇಳಬೇಕಾಗಿಲ್ಲ. ಆ ಶಾಸ್ತ್ರವು ಸದ್ಯಕ್ಕೆ ಉಪಲಭ್ಯವಾಗಿರುವುದು ಇಂಗ್ಲಿಷಿನಲ್ಲಿ.

ಈ ನಾನಾ ಕಾರಣಗಳಿಂದ ನಾನು ನಮ್ಮ ಉಪಾಧ್ಯಾಯ ಪಂಡಿತರಿಗೆ ಇಂಗ್ಲಿಷ್ ಭಾಷಾಜ್ಞಾನವು ಅತ್ಯಂತಾವಶ್ಯವೆಂದು ಅಭಿಪ್ರಾಯ ಪಟ್ಟಿದ್ದೇನೆ. ಇಂಟರ್ಮಿಡಿಯೆಟ್ ತರಗತಿಯ ವಿದ್ಯಾರ್ಥಿಗಳಲ್ಲಿ ನಿರೀಕ್ಷಿಸುವಷ್ಟರಮಟ್ಟಿನ ಇಂಗ್ಲಿಷ್ ಭಾಷಾ ಪರಿಚಯವಾದರೂ ಪಂಡಿತರಿಗೆ ಇಲ್ಲದಿದ್ದರೆ ಅವರು ತಮ್ಮ ಬೋಧನಕಾರ್ಯವನ್ನು ಸಮರ್ಪಕವಾಗಿ ನೆರವೇರಿಸುವುದು ಅಸಾಧ್ಯವಾಗುವುದು.

ಪಂಡಿತರಿಗೆ ವಿಶ್ವವಿದ್ಯಾಲಯದಲ್ಲಿ ಕೆಲವು ಸ್ಥಾನಗಳನ್ನು ಪ್ರತ್ಯೇಕವಾಗಿರಿಸಬೇಕೆಂದು ಕೆಲವರು ಅಭಿಪ್ರಾಯಪಟ್ಟಿದ್ದಾರೆ. ಆದರೆ ಇದರಲ್ಲಿರುವ ಒಂದು ಕಷ್ಟವನ್ನು ನಿಮ್ಮ ಗಮನಕ್ಕೆ ತರಬೇಕಾಗಿದೆ. ವಿಶ್ವವಿದ್ಯಾಲಯದ ಸಂಸ್ಕೃತ ಕನ್ನಡಗಳ ಶಾಖೆಗಳಲ್ಲಿ ಈಗ ಇರುವ, ಮತ್ತು ಎಂದಾದರೂ ಇರಬಹುದಾದ, ಬೋಧನವಿಷಯಗಳು ಸ್ಥೂಲವಾಗಿ ನಾಲ್ಕು :—(೧) ಪ್ರಾಚೀನ ಸಾಹಿತ್ಯ, (೨) ನವೀನ ಗ್ರಂಥಗಳು, (೩) ಭಾಷಾಂತರೀಕರಣ, (೪) ಪ್ರಬಂಧಲೇಖನ. ಇವುಗಳಲ್ಲಿ ಮೊದಲನೆಯದೊಂದರ ವಿನಾ ಮಿಕ್ಕ ಮೂರೂ ಇಂಗ್ಲಿಷ್ ಜ್ಞಾನವನ್ನಪೇಕ್ಷಿಸತಕ್ಕವು. ನವೀನ ಗ್ರಂಥಗಳು ಸಾಮಾನ್ಯವಾಗಿ ಭೌತವಿಜ್ಞಾನಾದಿ ವಿಷಯಕಗಳಾಗಿ, ಇಂಗ್ಲಿಷಿನಿಂದ ಉದ್ಧರಿಸಿದುವಾಗಿರುತ್ತವೆ; ಅಥವಾ ಪಾಶ್ಚಾತ್ಯ ಸಾಹಿತ್ಯದ ಅನುವಾದಗಳಾಗಿರುತ್ತವೆ. ಉದಾಹರಣೆಗಾಗಿ, ನಾಲ್ಕೈದು ವರ್ಷಗಳ ಕೆಳಗೆ ಇಂಟರ್ಮಿಡಿಯೆಟ್ ತರಗತಿಯ ಕನ್ನಡ ಪಠ್ಯಪುಸ್ತಕವಾಗಿದ್ದ ಒಂದು 'ಪ್ರಬಂಧಮಾಲೆ' ಯಲ್ಲಿಯ ಕೆಲವು ವಿಷಯಗಳ ಹೆಸರುಗಳನ್ನು ನೋಡೋಣ :—"ಎಪಿಕ್ಟೆಟಸ್ಸಿನ ನೀತಿಬೋಧೆ", "ಮಾರ್ಕಸ್ ಆರೆಲಿಯಸ್ಸನ ಮನನಗಳು", "ಡೇವಿಡ್ ದೊರೆಯ ಗೀತಗಳು", "ಗಯ್‌ಟೆ ಕವಿಯ ಸಂಭಾಷಣೆಗಳು". ಇಂಥ ವಿಷಯಗಳನ್ನು ಇಂಗ್ಲಿಷ್ ತಿಳಿಯದವರು ಪಾಠ ಹೇಳುವುದು ಹೇಗೆ? ಅಥವಾ ಇಂಥ ವಿಷಯಗಳನ್ನು ಕುರಿತ ಗ್ರಂಥಗಳು ಕನ್ನಡಕ್ಕೆ ಬೇಡವೆ? ಪಾಠವನ್ನು ಮೊಟಕು ಮಾಡೋಣವೆ? ಅಥವಾ ಭಾಷೆಯನ್ನು ಕರಡುಮಾಡೋಣವೆ? ನಮ್ಮ ಪಂಡಿತರು ಇಂಗ್ಲಿಷನ್ನು ಬಲ್ಲವರಾದರೆ ಈ ಕಷ್ಟ ಆಗ ಇರಲಾರದು.

## ಪಂಡಿತರ ಜೀವಿಕಾ ಸಮಸ್ಯೆ

ನಮ್ಮ ಪಂಡಿತ ಪರೀಕ್ಷೆಯ ಕ್ರಮವನ್ನು ಪುನರ್ವಿಮರ್ಶೆಮಾಡಿ ಪರಿಷ್ಕಾರಗೊಳಿಸುವುದು ಈಗ ಅವಶ್ಯವೆಂದು ತೋರುತ್ತದೆ. ಈ ಕೆಲಸ ವಿಶ್ವವಿದ್ಯಾಲಯದ ಮೂಲಕ ನಡೆದರೆ, ಪಂಡಿತರಿಗೂ ಗ್ರ್ಯಾಡ್ಯುಯೇಟ್‌ಗಳಿಗೂ ಈಗ ಇರುವ ಪೋಟಾಪೋಟಿಯು ಅದರಿಂದ ಕೊಂಚಮಟ್ಟಿಗಾದರೂ ನಿವಾರಣೆಯಾಗಬಹುದು. ಒಂದು ಕಡೆ ವಿದ್ಯಾಪ್ರಚಾರದ ಇಲಾಖೆ ತಯಾರು ಮಾಡುವ ಪಂಡಿತರುಗಳು, ಇನ್ನೊಂದು ಕಡೆ ವಿಶ್ವವಿದ್ಯಾಲಯದ ಬಿ.ಎ., ಎಂ.ಎ., ಪಟ್ಟಾಂಚಿತರುಗಳು—ಹೀಗೆ ಎರಡು ಕಕ್ಷಿಗಳೇರ್ಪಡುತ್ತಿದ್ದರೆ ಇವರಿಗೆ ಉದ್ಯೋಗಗಳನ್ನು ಹಂಚುವುದು ಹೇಗೆ? ಲೋಕಪ್ರಯೋಜನ ದೃಷ್ಟಿಯಿಂದ ಇಬ್ಬರಿಗೂ ಸ್ಥಾನಗಳುಂಟು. ಪಂಡಿತರು ಹಳೆಯ ಸಾಹಿತ್ಯವನ್ನೇ ಮುಖ್ಯವಾಗಿ ಎಣಿಸಿ ಅದರಲ್ಲಿ ವಿಶೇಷ ಕೃಷಿಮಾಡಬೇಕಾದವರು; ಬಿ.ಎ., ಎಂ.ಎ., ಗಳು ಹೊಸ ವಿಮರ್ಶನ ಪದ್ಧತಿಯನ್ನು ಪ್ರಚಾರಕ್ಕೆ ತರಬೇಕಾದವರು ಮತ್ತು ಹೊಸ ಸಾಹಿತ್ಯವನ್ನು ರಚಿಸಬಹುದಾದವರು. ಹೀಗೆ ಕರ್ತವ್ಯಗಳನ್ನು ಹಂಚಿಕೊಡುವುದು ಸಾಧ್ಯ. ಆದರೆ ಜೀವಿಕೆಯನ್ನೊದಗಿಸುವುದು ಅಷ್ಟು ಸುಲಭವಲ್ಲ. ಪಂಡಿತ ಪಟ್ಟಾಂಚಿತರು ಕನ್ನಡ ಸಂಸ್ಕೃತ ಸಾಹಿತ್ಯಜ್ಞಾನಗಳ ಜೊತೆಗೆ ಇಂಟರ್‌ಮೀಡಿಯೆಟ್ ತರಗತಿಯ ಇಂಗ್ಲಿಷ್ ಜ್ಞಾನವನ್ನೂ ಸಂಪಾದಿಸಿಕೊಂಡಿದ್ದರೆ ಅಂಥವರನ್ನು ಸರಕಾರದ ಉದ್ಯೋಗ ವಿಚಾರದಲ್ಲಿ ಬಿ.ಎ., ಗಳಿಗೆ ಸಮನೆಂದು ಏಕೆ ಪರಿಗಣಿಸಬಾರದು? ಅಷ್ಟು ಮಟ್ಟಿನ ಇಂಗ್ಲಿಷ್ ಜ್ಞಾನದಿಂದ ಅವರು ಶಿರಸ್ತೆದಾರ್, ಪೋಲೀಸ್ ಇನ್‌ಸ್ಪೆಕ್ಟರ್, ಸಬ್ ರೆಜಿಸ್ಟ್ರಾರ್, ಅಮಲ್ದಾರ್ ಮೊದಲಾದ ಅಧಿಕಾರಿಗಳ ಕರ್ತವ್ಯಗಳನ್ನು ನಿರ್ವಹಿಸಲಾಗುವುದಿಲ್ಲವೆ? ಇಂಥ ಸುಧಾರಣೆಯನ್ನೇನಾದರೂ ಆಲೋಚಿಸಿ, ಪಂಡಿತರಾಗುವವರಿಗೆ ಆರ್ಥಿಕ ಭವಿಷ್ಯವನ್ನು ಆ ಮೂಲಕ ಅಷ್ಟಿಷ್ಟಾದರೂ ಉತ್ತಮಪಡಿಸಿಕೊಡದೆ ಹೋದರೆ ಪಂಡಿತ ಸಂಪ್ರದಾಯವು ಊರ್ಜಿತವಾಗುವ ಆಶೆ ನನಗೆ ತೋರದು. ಪಾಂಡಿತ್ಯಕ್ಕೆ ಕೂಡ ಕಾಲು ಬಲಪಡುವುದು ಹೊಟ್ಟೆಯಿಂದ. ಉಪವಾಸವು ಪಾಂಡಿತ್ಯಕ್ಕೂ ಮೃತ್ಯುವೇ.

## ಯಾರಲ್ಲಿ ಮೊರೆ?

ಪ್ರಾಚೀನ ವಿದ್ಯಾ ಪಾಂಡಿತ್ಯಗಳನ್ನು ಉಳಿಸಿ ಊರ್ಜಿತಪಡಿಸಬೇಕೆಂದು ಬದ್ಧಕಂಕಣರಾಗಿರುವವರು ನಮ್ಮ ಸಂಸ್ಥಾನದಲ್ಲಿ ಯಾರಿದ್ದಾರೋ ನನಗೆ ತಿಳಿಯದು. ಸರಕಾರಕ್ಕೆ ನೂರು ಚಿಂತೆಗಳಿರುತ್ತವೆ. ಅವುಗಳ ಪೈಕಿ ಮೊದಲನೆಯ ಹತ್ತರಲ್ಲಾದರೂ ಇದು ಒಂದಾಗಿದ್ದರೆ ನನಗೆ ಅತೃಪ್ತಿಯಿಲ್ಲ. ಆದರೆ ಅಂಥ ನಿರೀಕ್ಷಣೆ ಹೆಚ್ಚಿನ

ದೆಂದೇ ತೋರುತ್ತದೆ. ಅಧಿಕಾರಸ್ಥಾನಗಳಲ್ಲಿರುವವರಿಗೆ ಸಾಹಿತ್ಯದ ಹವ್ಯಾಸಕ್ಕೆ ವ್ಯವಧಾನ ಕಡಮೆ. ಸಾಹಿತ್ಯ ಸಾವಕಾಶವಾದದ್ದು, ಗದ್ದಲವಿಲ್ಲದ್ದು; ಸರಕಾರ ಅವಸರದ್ದು, ಸಡಗರವುಳ್ಳದ್ದು. ಪಾಂಡಿತ್ಯದ ಕೈಯನ್ನು ಯಾರು ಹಿಡಿದಾರು? ಹೀಗೆ ಸಂಘಕಟ್ಟಿ ಕೂಗೆಬ್ಬಿಸಿದರೆ ಯಾರ ಕಟಾಕ್ಷವಾದರೂ ನಿಮ್ಮ ಕಡೆಗೆ ತಿರುಗೀತೇಸೋ ಎಂದು ನೀವು ಆಶೆಪಟ್ಟುಕೊಂಡಿರಬಹುದು. ಇಂಥಾ ಚಳವಳಗಳ ಅನುಭವ ನನಗೆ ಸ್ವಲ್ಪ ಉಂಟು. ಅದು ಅಷ್ಟೇನೂ ಪ್ರೋತ್ಸಾಹಕರವಾಗಿಲ್ಲ. ಆದರೆ ನಿಮ್ಮ ಅನುಭವ ಬೇರೆ ವಿಧದ್ದು ಏಕಾಗಬಾರದು?

ಈ ದಿನ ನಮ್ಮ ಸಂಸ್ಥಾನದ ಮಂತ್ರಿಮಂಡಲದ ಸದಸ್ಯರು ರಾಜಮಂತ್ರ ಪ್ರವೀಣ ಶ್ರೀಮಾನ್ ನ್ಯಾಪತಿ ಮಾಧವರಾಯರವರು ಇಲ್ಲಿಗೆ ದಯಮಾಡಿ ಬಂದು, ಈ ಸಮಾರಂಭದಲ್ಲಿ ತಮ್ಮ ಸಹಾನುಭೂತಿಯನ್ನು ತೋರಿ, ಹಿತಕರವೂ ಪ್ರೋತ್ಸಾಹ ಕರವೂ ಆದ ಭಾಷಣವನ್ನು ಅಪ್ಪಣೆಕೊಡಿಸಿರುತ್ತಾರೆ. ಈ ಸಂಗತಿ ಪಂಡಿತ ಮಂಡಲದ ಭವಿಷ್ಯತ್ತಿಗೆ ಶುಭಸೂಚನೆಯೆಂದು ನಾನು ಭಾವಿಸುತ್ತೇನೆ.

ಮೇಲಂತಸ್ತಿನ ಅಧಿಕಾರಿಗಳ ಮಾತು ಹಾಗಿರಲಿ, ಅವರಿಗಿಂತ ಹೆಚ್ಚು ಹೆಚ್ಚಾಗಿ ಸ್ಕೂಲು ಹೈಸ್ಕೂಲುಗಳೊಡನೆ ಅನುದಿನದ ಸಂಬಂಧವಿರುವ ಜಿಲ್ಲೆಯ ಮತ್ತು ರೇಂಜಿನ ವಿದ್ಯಾಧಿಕಾರಿಗಳು ಸಾಹಿತ್ಯಾಭಿಮಾನಿಗಳಾಗಿ, ಭಾಷಾಶಿಕ್ಷಣದ ಕಷ್ಟ ನಿಷ್ಠುರಗಳ ವಾಸ್ತವಿಕ ಜ್ಞಾನವನ್ನು ಪಡೆದವರಾದರೆ, ಎಷ್ಟೋ ಉಪಕಾರವಾದೀತು. 'ಸ್ಕೌಟಿಂಗ್' 'ಸ್ಪೋರ್ಟ್ಸ್' ಮೊದಲಾದ ವಿಷಯಗಳಲ್ಲಿ ಅವರು ತೋರಿಸುವಷ್ಟು ಉತ್ಸಾಹವನ್ನಾದರೂ ದೇಶಭಾಷಾ ಭಾಗಕ್ಕೂ ತೋರುವುದಾದರೆ ಕನ್ನಡ ಸಂಸ್ಕೃತಗಳ ಸ್ಥಿತಿ ಮಾತ್ರವೇ ಅಲ್ಲದೆ ನಮ್ಮ ಒಟ್ಟು ವಿದ್ಯಾಭ್ಯಾಸಕ್ರಮವೇ ಉತ್ತಮವಾದೀತು.

## ಶಿಕ್ಷಣಕ್ರಮ ಪರಿಷ್ಕರಣೆ

ಈಗ ನಮ್ಮ ವಿದ್ಯಾಪ್ರಚಾರ ಕ್ರಮದಲ್ಲಿ ವೆಚ್ಚವಾಗುತ್ತಿರುವ ದ್ರವ್ಯದಲ್ಲಿಯೂ ಕಾಲಪರಿಶ್ರಮಗಳಲ್ಲಿಯೂ ಬಹುಭಾಗ ನಿರರ್ಥಕವಾಗಿ ಹೋಗುತ್ತಿದೆಯೆಂಬ ಫುಕಾರನ್ನು ಬಹುಮಂದಿ ಕೇಳಿದ್ದಾರೆ. ಈ ವ್ಯರ್ಥ ವೆಚ್ಚವನ್ನು ತಪ್ಪಿಸಿ, ವ್ಯಯವಾದ ಪ್ರತಿಯೊಂದು ಕಾಸೂ, ಪ್ರತಿಯೊಂದು ಗಳಿಗೆಯೂ, ಪ್ರತಿಫಲದಾಯಕವಾಗುವಂತೆ ಮಾಡಬೇಕೆಂದು ಇಲಾಖೆಯಲ್ಲಿ ಪ್ರಯತ್ನ ನಡೆಯುತ್ತಿದೆ. ಆ ವ್ಯರ್ಥತೆಯನ್ನು ಪರಿಹರಿಸುವ ಯತ್ನದಲ್ಲಿ ಕನ್ನಡ ಬೋಧನ ಕ್ರಮವನ್ನು ಪರಿಷ್ಕಾರಗೊಳಿಸುವುದೂ ಒಂದು ಮುಖ್ಯಭಾಗವಾಗಿರಬೇಕು. ವಿದ್ಯೆಯು ವಿಸ್ತಾರವಾಗಿ ಹರಡುವುದೊಂದೇ ಮುಖ್ಯವಲ್ಲ. ಅದು ಸಾರ್ಥಕವಾಗುವಂತೆಯೂ ಹರಡಬೇಕು. ಬರಿಯ ವಿಸ್ತೀರ್ಣ

ಸಾಲದು, ಗುಣವೂ ಇರಬೇಕು. ಗುಣಾಭಿವೃದ್ಧಿಗೆ ಮೊದಲು ಆಗಬೇಕಾದದ್ದು ಶಿಕ್ಷಣ ಪದ್ಧತಿಯ ಪರಿಷ್ಕರಣೆ.

## ಕನ್ನಡ ಚೆನ್ನಾದರೆ ಇಂಗ್ಲೀಷ್ ಚೆನ್ನ

ಇನ್ನೊಂದು ದೃಷ್ಟಿಯಿಂದ ಈ ವಿಚಾರವನ್ನು ನೋಡೋಣ. ಈಗ ವಿಶ್ವ ವಿದ್ಯಾಲಯದ ಒಳಗಡೆಯೂ ಹೊರಗಡೆಯೂ ನಮ್ಮ ವಿದ್ಯಾರ್ಥಿಗಳ ಇಂಗ್ಲಿಷ್ ಜ್ಞಾನವು ತಕ್ಕಷ್ಟಿಲ್ಲವೆಂಬ ದೂರು ಹಬ್ಬಿದೆ. ಕನ್ನಡ ಸಂಸ್ಕೃತಗಳ ಪ್ರಾಬಲ್ಯದಿಂದ ಇಂಗ್ಲೀಷಿಗೆ ಕಾಲುಮುರಿಯಿತೆಂದು ಕೆಲವರು ಹೇಳುತ್ತಾರೆ. ಈ ಮಾತು ಶುದ್ಧ ಅಸಂಗತವೆಂದು ನಾನು ತಿಳಿದಿದ್ದೇನೆ. ಇಂಗ್ಲಿಷು ಚೆನ್ನಾಗಿರಬೇಕಾದರೆ ಮೊದಲು ಕನ್ನಡ ಚೆನ್ನಾಗಿರಬೇಕು. ಈ ತತ್ತ್ವವನ್ನು ಸಮಸ್ತರೂ ಗ್ರಹಿಸುವುದು ನಮ್ಮ ವಿದ್ಯಾಪದ್ಧತಿಯಲ್ಲಿ ಮೊಟ್ಟಮೊದಲು ಆಗಬೇಕಾದ ಸುಧಾರಣೆಗಳಲ್ಲೊಂದು. ಲೋಕದಲ್ಲಿ ಭಾಷೆಗಳು ಬೇರೆಬೇರೆಯಾದರೂ ವ್ಯಾಕರಣ ಬುದ್ಧಿಯೆಂಬುದು ಒಂದು. ರೂಪಾಯಿ ಆಣೆ ಪೈಗಳ ಸಂಕಲನ ವ್ಯವಕಲನಾದಿ ಗಣಿತ ಪ್ರಕ್ರಿಯೆಗಳನ್ನು ಬಲ್ಲವನು ಪೌಂಡು ಷಿಲಿಂಗ್ ಪೆನ್ನಿ ಮೊದಲಾದ ನಾಣ್ಯಗಳ, ಅಥವಾ ಅಡಿ ಗಜ ಮೈಲಿ ಮೊದಲಾದ ದೂರಮಾನಗಳ, ಗಣಿತವನ್ನು ಸುಲಭವಾಗಿ ಕಲಿತುಕೊಳ್ಳುವಂತೆ, ಶಬ್ದಸ್ವರೂಪವನ್ನೂ, ಲಿಂಗ ವಚನ ವಿಭಕ್ತಿಗಳ ರೀತಿಯನ್ನೂ, ಕ್ರಿಯಾಪದ ಕಾಲ ರೂಪನಿಷ್ಪತ್ತಿಯನ್ನೂ, ಕರ್ತೃ ಕರ್ಮ ಕ್ರಿಯಾ ಯೋಜನ ವಿವರವನ್ನೂ ಕನ್ನಡದಲ್ಲಿ ಚೆನ್ನಾಗಿ ಕಲಿತುಕೊಂಡವನು ಅದೇ ವ್ಯಾಕರಣ ಸೂತ್ರಗಳನ್ನು ಇಂಗ್ಲಿಷಿಗೆ ಹೊಂದಿಸಿಕೊಳ್ಳುವುದು ಕಷ್ಟವಾಗಲಾರದು. ಹೀಗೆ ಕನ್ನಡದಲ್ಲಿ ಭದ್ರವಾಗಿ ತಳಹದಿ ಕಟ್ಟುವುದು ದೊಡ್ಡ ಕೆಲಸ. ಇಂಗ್ಲಿಷಿನ ಹಿತಚಿಂತಕರು ಕನ್ನಡದಲ್ಲಿ ಭಾಷಾ ಬೋಧನೆಯನ್ನು ಮೊದಲು ಬಲಪಡಿಸಬೇಕು. ಹೀಗೆಂದ ಮೇಲೆ ಇಂಗ್ಲಿಷಿನ ಭದ್ರಸ್ಥಿತಿಗೆ ನಮ್ಮ ಪ್ರಾಥಮಿಕ ಪಾಠಶಾಲೆಗಳ ಬೋಧನಕ್ರಮ, ಅಲ್ಲಿಯ ಉಪಾಧ್ಯಾಯರುಗಳ ಭಾಷಾಜ್ಞಾನ—ಇವು ಅತಿ ಮುಖ್ಯ ವಿಷಯಗಳಾಗುತ್ತವೆ. ಇಂಗ್ಲಿಷಿನ ಕಾರಣದಿಂದಲೇ ಅಲ್ಲ, ಸ್ವತಏವ ಇವು ಮುಖ್ಯ ವಿಷಯಗಳೆಂಬುದನ್ನು ಎಲ್ಲರೂ ಒಪ್ಪಲೇಬೇಕು. ನಮ್ಮಲ್ಲಿ ಮೊದಮೊದಲು ಬಾಲಪಾಠಶಾಲೆಗಳ ಬೋಧಕರಾಗಿ ಬಂದವರು ಅಷ್ಟಿಷ್ಟು ಪೂರ್ವಕಾಲದ ಸಂಸ್ಕೃತಿಯನ್ನು ಪಡೆದವರಾಗಿರುತ್ತಿದ್ದರು. ಅವರಿಗೆ ಮತ್ತಾವ ವಿಶೇಷ ಪಾಂಡಿತ್ಯವಿರದಿದ್ದರೂ, ಸ್ವಲ್ಪ ಅಮರ, ನೂರಾರು ಶ್ಲೋಕಗಳು, ಪ್ರಸಿದ್ಧ ಪುರಾಣಕಥೆಗಳು, ವ್ಯಾಕರಣದ ಮುಖ್ಯಾಂಶಗಳು—ಇಷ್ಟಾದರೂ ಜ್ಞಾಪಕದಲ್ಲಿರುತ್ತಿದ್ದವು. ನಲವತ್ತು ವರುಷಗಳ ಹಿಂದೆ ನನಗೆ

ಕನ್ನಡ ಕಲಿಸಿದ ಮಹಾನುಭಾವರಾದ ಚಂದ್ರಶೇಖರಶಾಸ್ತ್ರಿಗಳವರು ವೇದಾಧ್ಯಯನ ಮಾಡಿದವರಾಗಿಯೂ ಸಂಸ್ಕೃತಕಾವ್ಯ ವ್ಯಾಸಂಗಮಾಡಿದವರಾಗಿಯೂ ಇದ್ದರು. ಅವರು "ಗಜವದನ ಹೇರಂಬ ಗಣಪತಿ" ಪದ್ಯವನ್ನು ಪಾಠ ಹೇಳಿದರೂ ಸಂಧಿ, ಸಮಾಸ, ಅವಯವಾರ್ಥ, ಅನ್ವಯ, ಆಕಾಂಕ್ಷೆ ಇವುಗಳನ್ನೆಲ್ಲಾ ಕೂಡಿದಮಟ್ಟಿಗೂ ವಿದ್ಯಾರ್ಥಿಯ ಬಾಯಿಂದಲೇ ಹೊರಡಿಸಿ, ಸಂಸ್ಕೃತ ಸಂಪ್ರದಾಯದಲ್ಲಿ ಕನ್ನಡವನ್ನು ಹೇಳಿಕೊಡುತ್ತಿದ್ದರು. ಅವರ ಕಾವ್ಯವಾಚನಧಾಟಿಯೂ ಹಾಗೆಯೇ ಹೃದಯಂಗಮ ವಾಗಿರುತ್ತಿತ್ತು. ಅಂಥಾ ಉಪಾಧ್ಯಾಯರುಗಳು ಈಗ ವಿರಳರಾಗಿದ್ದಾರೆ. ಉಪಾಧ್ಯಾಯರಿಗಿರುವ ಸಾಹಿತ್ಯಬಲವೇ ಸ್ವಲ್ಪದ್ದಾದ ಮೇಲೆ ವಿದ್ಯಾರ್ಥಿಗಳಿಗೆ ದೊರೆಯುವ ಭಾಷಾಪಾಂಡಿತ್ಯವೆಷ್ಟುಮಟ್ಟಿನದಾದೀತು? ನಮ್ಮ ವಿದ್ಯಾಪ್ರಚಾರದ ಇಲಾಖೆಯವರೂ ವಿಶ್ವವಿದ್ಯಾಲಯದವರೂ ವಿದ್ಯೋತ್ಸಾಹಿಗಳಾದ ಸರ್ವರೂ ಈ ದೃಷ್ಟಿಯಿಂದ ವಿದ್ಯಾಭ್ಯಾಸಕ್ರಮದ ತಳಪಾಯವನ್ನು ಪರಿಶೋಧಿಸಿ, ಬಾಲಪಾಠಶಾಲೆಗಳಲ್ಲಿಯೂ ಮಾಧ್ಯಮಿಕ ಶಾಲೆಗಳಲ್ಲಿಯೂ ಸಾಹಿತ್ಯಕ್ಕೆ ಭದ್ರವಾದ ಹಸ್ತಿಭಾರವನ್ನು ಹಾಕಬೇಕು. ಆಗ ಕನ್ನಡ ಸಂಸ್ಕೃತ ಸಾಹಿತ್ಯಪಾಠಕ್ಕೆ ಹೊಸ ತೇಜಸ್ಸು ಬರುವುದಲ್ಲದೆ ಇಂಗ್ಲಿಷ್ ಪಾಠವೂ ತೃಪ್ತಿಕರವಾಗುವುದು.

## ಪಾಂಡಿತ್ಯದ "ಹಕ್ಕು"

ಹೀಗೆ ನಿಮ್ಮ ಮುಂದೆ ಅನೇಕ ದೊಡ್ಡ ಪ್ರಶ್ನೆಗಳು ಕಾದುಕೊಂಡಿವೆ. ಅವು ನಿಮ್ಮ ಉದ್ಯೋಗಕ್ಕೆ ಮಾತ್ರವೇ ಅಲ್ಲದೆ ದೇಶದ ಅಭ್ಯುದಯಕ್ಕೂ ಸಂಬಂಧಪಟ್ಟವು. ಅವುಗಳ ಸಮಾಧಾನವು ಸರಕಾರದ ಮತ್ತು ಮಹಾಜನರ ಸಹಕಾರದಿಂದ ಆಗಬೇಕಾಗಿದೆ.

ಪಂಡಿತವರ್ಗಕ್ಕೂ ಪ್ರಭುವರ್ಗಕ್ಕೂ ಇದುವರೆಗೂ ಅಭ್ಯಾಸವಾಗಿರುವ ಪರಸ್ಪರ ಸಂಬಂಧ ಪೋಷ್ಯಪೋಷಕ ಭಾವದ್ದು. ಪಂಡಿತರು ಯಾಚಕರು, ಪ್ರಭುಗಳು ಅನುಗ್ರಹಕರ್ತರು; ಪಂಡಿತರು ಆಶ್ರಿತರು, ಪ್ರಭುಗಳು ಆಶ್ರಯದಾತರು—ಈ ತೆರದ್ದು ಹಳೆಯ ಸಂಬಂಧ. ಈ ಕಾಲದಲ್ಲಿ ಆ ತೆರದ ಸಂಬಂಧಗಳು ಅಳಿಸಿಹೋಗುತ್ತಿವೆ. ಈಗಿನ ಸಂಬಂಧ ಪರಸ್ಪರ ನ್ಯಾಯಭಾವದ್ದು,—ಉಪಯೋಗ ಪ್ರತಿಮೌಲ್ಯರೂಪದ್ದು. ಸರಕಾರವು ಚಿತ್ತಬಂದರೆ ಅನುಗ್ರಹಿಸಬಹುದು, ಇಲ್ಲದಿದ್ದರೆ ಉಪೇಕ್ಷಿಸಬಹುದು—ಎಂಬ ನೀತಿ ಈ ಕಾಲಕ್ಕೆ ಅನ್ವಯಿಸತಕ್ಕದ್ದಲ್ಲ. ಏಕೆಂದರೆ ಈಗ ಪಂಡಿತರ ಅಸ್ತಿತ್ವವನ್ನುಳಿಸಬೇಕಾದದ್ದು ಸರಕಾರದ ಕೀರ್ತಿಪ್ರತಿಷ್ಠೆಗಳಿಗೋಸ್ಕರವಲ್ಲ, ಪ್ರಜಾ ಪ್ರಯೋಜನಕ್ಕೋಸ್ಕರ. ಹಿಂದೆ ಪಂಡಿತರು ರಾಜಾಸ್ಥಾನಕ್ಕೆ ಒಂದು ಅಲಂಕಾರ; ರಾಜನ ಮುಖೋಲ್ಲಾಸಕ್ಕೆ ಅವರ ಹಾಜರಿ ಅವಶ್ಯ; ರಾಜನ ಗುಣವರ್ಣನೆಯೇ ಅವರ ಕಸಬು.

ಈಗ ಹಾಗಿಲ್ಲ. ಲೋಕಬೋಧನೆ ಈಗ ಅವರ ಕರ್ತವ್ಯ. ದೇಶದ ಪ್ರತಿಯೊಂದು ಉದ್ಯೋಗಕ್ಕೂ ಸಲ್ಲಬೇಕಾದ ಹಕ್ಕುಗಳು ಕೆಲವು ಇರುತ್ತವೆ. ಪಂಡಿತವೃತ್ತಿಯೂ ಅಂಥಾದ್ದೊಂದು ಉದ್ಯೋಗ. ಪೊಲೀಸ್, ಮರಾಮತ್, ವೈದ್ಯ—ಮೊದಲಾದ ಇಲಾಖೆಗಳು ಕೆಟ್ಟರೆ ನಷ್ಟಪಡುವವರು ಹೇಗೆ ಪ್ರಜೆಗಳೋ, ಹಾಗೆಯೇ ಪಂಡಿತ ವೃತ್ತಿಯು ಕೆಟ್ಟರೆ ನಷ್ಟಪಡುವವರು ಪ್ರಜೆಗಳೇ. ಹೀಗಿರುವುದರಿಂದ, ಸರಕಾರಕ್ಕೆ ಮಾತ್ರವಲ್ಲದೆ ಮಹಾಜನರಿಗೂ ಸಹ ನಿಮ್ಮ ಕರ್ತವ್ಯದ ಘನತೆಯೆಂಥದೆಂಬುದನ್ನೂ ನಿಮಗಾಗಬೇಕಾದ ಸೌಕರ್ಯಗಳೇನೆಂಬುದನ್ನೂ ಮನಗಾಣಿಸಿ ಕೊಡುವುದು ನಿಮ್ಮ ಸಂಘದ ಕರ್ತವ್ಯವಾಗಿರುತ್ತದೆ.

## ಜನದಲ್ಲಿ ವಿದ್ಯೋತ್ಸಾಹ

ನನ್ನ ಮನಸ್ಸಿಗೆ ತೋರುವ ಒಂದು ಧೈರ್ಯದ ಮಾತಿನಿಂದ ಈ ಉಪನ್ಯಾಸ ವನ್ನು ಮುಗಿಸುತ್ತೇನೆ. ದೇಶದಲ್ಲಿ ಸರ್ವತ್ರ ವಿದ್ಯಾಭಿಲಾಷೆ ಹರಡುತ್ತಿದೆ. ಎಲ್ಲ ಜಾತಿ ಎಲ್ಲ ವರ್ಗಗಳ ಪ್ರಜಾಜನರೂ ಅಕ್ಷರ ವಿದ್ಯೆಯನ್ನಪೇಕ್ಷಿಸುತ್ತಿದ್ದಾರೆ. ಸರಕಾರವೂ ವಿದ್ಯಾಪ್ರಚಾರ ವಿಷಯದಲ್ಲಿ ಹೆಚ್ಚು ಹೆಚ್ಚು ಆಸಕ್ತಿಯನ್ನು ತೋರುತ್ತಿದೆ. ಹೀಗೆ ಅಕ್ಷರಜ್ಞಾನವು ಪ್ರಸರಿಸುತ್ತ ಹೋಗುವುದೆಂಬುದು ನಿಸ್ಸಂದೇಹದ ಸಂಗತಿ. ಅಕ್ಷರ ಜ್ಞಾನದ ಹಿಂದೆಯೇ, ಅದರ ಫಲಿತಾಂಶವಾಗಿಯೇ, ಸಾಹಿತ್ಯಾಭಿರುಚಿಯೂ ಶಾಸ್ತ್ರಕುತೂಹಲವೂ ಹುಟ್ಟಿಬರುತ್ತವೆ. ಈ ಹೊತ್ತು ಓದು ಬರೆಹ ಕಲಿತವನು ನಾಳೆ ಕಥೆ ಕಾವ್ಯಗಳನ್ನು ಓದಬೇಕೆನ್ನುತ್ತಾನೆ; ನಾಳಿದ್ದು ವಿಚಾರಮಾಡ ಹೊರಡುತ್ತಾನೆ. ಈ ಅಕ್ಷರಜ್ಞಾನಮೂಲಕವಾದ ಬುದ್ಧಿವಿಕಸನದಿಂದ ಪಂಡಿತವಿದ್ಯೆಗೆ ಬೆಲೆಯೇರುವುದು ಸ್ವಾಭಾವಿಕವಾಗಿದೆ. ಹೀಗೆ ನಮಗೆ ಹೊಸ ಆಶಾಕಾರಣ ತೋರಿದಂತೆಯೇ ಹೊಸ ಕರ್ತವ್ಯತೆಯೂ ತೋರುತ್ತದೆ. ಅಕ್ಷರಜ್ಞಾನ ಜನಿತವಾದ ಉತ್ಸಾಹವನ್ನು ಸರಿಯಾದ ಕಾಲುವೆಗಳೊಳಕ್ಕೆ ತಿದ್ದಿ ಹರಿಯಿಸಿ ಸಫಲವನ್ನಾಗಿಸುವುದು ನಮ್ಮ ಪಂಡಿತರ ಮತ್ತು ಲೇಖಕರ ಮೇಲಿರುವ ಭಾರ.

## ಕನ್ನಡದ ಪುನರುಜ್ಜೀವನ

ಎರಡನೆಯದಾಗಿ, ಈಚೆಗೆ ನಮ್ಮ ದೇಶಾಭಿಮಾನಿ ಸರಕಾರವು ವಿದ್ಯಾಪ್ರಚಾರ ಶಾಖೆಯಲ್ಲಿ ಒಂದು ಅತಿಮಹತ್ತ್ವದ ಮಾರ್ಪಾಟನ್ನು ನಡಸಿದೆ. ಈಗ ಹೈಸ್ಕೂಲು ಗಳಲ್ಲಿ ಪಾಶ್ಚಾತ್ಯವಿಜ್ಞಾನ ಬೋಧನೆಯೆಲ್ಲ ಕನ್ನಡದ ಮೂಲಕ ಆಗಬೇಕಾಗಿದೆ. ಈ ಮಾರ್ಪಾಟು ಕ್ರಮೇಣ ವ್ಯಾಪಿಸಿ ಮುಂದೆ ವಿಶ್ವವಿದ್ಯಾಲಯಕ್ಕೂ ಹರಡ ಬಹುದಾಗಿದೆ. ಆ ಸಂಸ್ಥೆಯೂ ದೇಶಭಾಷೆಯ ಪ್ರಾಧಾನ್ಯವನ್ನಂಗೀಕರಿಸಿ ಗ್ರಂಥ

ಪ್ರಕಟನೆಯ ಮೂಲಕವೂ ಇತರ ವಿಧಗಳಲ್ಲಿಯೂ ಕನ್ನಡದ ಉದ್ಧಾರಕ್ಕಾಗಿ ದುಡಿಯುತ್ತಿದೆ. ಹೀಗೆ ಸರಕಾರದ ವಿದ್ಯಾಪ್ರಚಾರ ಪದ್ಧತಿಯಲ್ಲಿ ಕನ್ನಡದ ಸ್ಥಾನವು ವಿಶಾಲವಾಗಿ ಭದ್ರಪಡುತ್ತಿದೆ. ಇದರ ಜೊತೆಗೆ ವಾರ್ತಾಪತ್ರಿಕೆಗಳೂ ವಿವಿಧ ಸಾಹಿತ್ಯ ಪತ್ರಿಕೆಗಳೂ ಹರಡಿಕೊಂಡು ಕನ್ನಡವನ್ನು ಬೆಳಸುತ್ತಿವೆ. ಕರ್ಣಾಟಕ ಸಾಹಿತ್ಯ ಪರಿಷತ್ತಿನ ಪ್ರಯತ್ನದಿಂದಲೂ ಎಲ್ಲೆಲ್ಲೂ ಪ್ರವರ್ಧಮಾನವಾಗಿರುವ ಕರ್ಣಾಟಕ ಸಂಘಗಳ ಚಳವಳಗಳಿಂದಲೂ ಜನದಲ್ಲಿ ಕರ್ಣಾಟಕೋತ್ಸಾಹವು ಹಬ್ಬಿ ಹರಿಯಾಗುತ್ತಿದೆ. ಇದು ಪಂಡಿತವರ್ಗಕ್ಕೆ ಪ್ರೋತ್ಸಾಹಕಾರಕವಾದ ಸಂಗತಿ. ಈ ನಾನಾ ಪ್ರಯತ್ನಗಳನ್ನು ತಾವು ಸಹಾನುಭೂತಿಯಿಂದಲೂ ಸ್ನೇಹದಿಂದಲೂ ನೋಡಿ, ಕನ್ನಡದಲ್ಲಿ ಆಧುನಿಕ ವಿಚಾರ ಸಾಹಿತ್ಯ ಬೆಳೆಯುವಂತೆಯೂ ವಿಜ್ಞಾನ ಬೋಧನೆಗೆ ಕನ್ನಡ ಒದಗಿಬರುವಂತೆಯೂ ಸಹಾಯ ಕೊಡುವುದು ತಮ್ಮಗಳಿಗೆ ಕರ್ತವ್ಯವೆಂದು ನಾನು ತಿಳಿದುಕೊಂಡಿದ್ದೇನೆ.

## ಉತ್ತಮ ಸಾಹಿತ್ಯದಿಂದ ಉತ್ತಮ ರಾಜಕೀಯ

ಮೂರನೆಯದಾಗಿ, ಸರಕಾರಗಳು ಎಲ್ಲೆಲ್ಲೂ ಪ್ರಜಾಯತ್ತವಾಗುತ್ತಿವೆ. ಪ್ರತ್ಯಕ್ಷವಾಗಿಯೋ ಅಪ್ರತ್ಯಕ್ಷವಾಗಿಯೋ ರಾಜ್ಯಸೂತ್ರಗಳು ಸಾರ್ವಜನಿಕರಿಗೆ ಹಸ್ತಗತವಾಗುತ್ತಿವೆ. ದೇಶದ ಶಾಸನವ್ಯವಸ್ಥೆಗಳೂ ಆಡಳಿತಗಳೂ ಏರ್ಪಾಟುಗಳೂ ಕೊಂಚ ಕೊಂಚವಾಗಿಯಾದರೂ ಜನಸಾಮಾನ್ಯದ ಅಭಿಪ್ರಾಯವನ್ನು ಅನುಸರಿಸಬೇಕಾಗುತ್ತಿದೆ. ಈ ಏರ್ಪಾಟು ಹಿತಕರವಾಗಬೇಕಾದರೆ ಪ್ರಜಾಸಾಮಾನ್ಯದ ಮನೋಬುದ್ಧಿಗಳು ಸುಸಂಸ್ಕೃತಗಳಾಗಿರಬೇಕೆಂಬುದು ಸ್ವತಸ್ಸಿದ್ಧವಾಗಿದೆ. ನಮ್ಮ ದೇಶದ ಜೀವನಕ್ಕೆ ಚಿರಜ್ಯೋತಿಗಳಾಗಿರುವ ಸಾಹಿತ್ಯರತ್ನಗಳನ್ನು ಕಾಣದಿರುವಂಥವರು—ರಾಮನ ಪ್ರತಿಜ್ಞೆಯನ್ನರಿಯದವರು, ಯುಧಿಷ್ಠಿರನ ಸಂಕಟವನ್ನರಿಯದವರು, ನಳನ ಪರೀಕ್ಷೆಯನ್ನರಿಯದವರು, ಹರಿಶ್ಚಂದ್ರನ ಸ್ಥೈರ್ಯವನ್ನರಿಯದವರು—ಇಂಥವರು ಶಾಸನ ಸಭೆಗಳಲ್ಲಿ ಪ್ರಜಾಪ್ರತಿನಿಧಿಗಳಾಗಿ ಬಂದು ಕುಳಿತರೆ, ಅವರಿಂದ ಎಂಥ ಉದಾರ ಶಾಸನಗಳು ನಡೆದಾವು, ಎಂಥ ನಿರ್ಮಲನೀತಿಗಳು ಹೊರಟಾವು ? ಈಗ ಬರುತ್ತಿರುವ ಈ ಹೊಸ ಪ್ರಜಾಧಿಕಾರದ ಪ್ರವಾಹವು ದೇಶೋಪದ್ರವಕಾರಿಯಾಗದೆ ಕಲ್ಯಾಣ ಕಾರಕವಾಗಬೇಕಾದರೆ ಪ್ರಜಾಪ್ರತಿನಿಧಿಗಳು ಮಾತ್ರವೇ ಅಲ್ಲ, ಅವರನ್ನಾರಿಸಿ ಆ ಅಧಿಕಾರ ಪಟ್ಟವನ್ನು ಕಟ್ಟುವ ಪ್ರಜಾಜನರೂ ಸಹ ನೀತಿಸೂಕ್ಷ್ಮದರ್ಶಿಗಳಾಗಿಯೂ ಉದಾತ್ತಹೃದಯರಾಗಿಯೂ ಇರಬೇಕು. ಈ ಸಂಸ್ಥಿತಿಯನ್ನುಂಟುಮಾಡಬಲ್ಲ ಶಕ್ತಿಯಿರುವುದು ಉತ್ತಮ ಸಾಹಿತ್ಯಕ್ಕೆ. ಕಲ್ಲೆದೆಯನ್ನು ಕರಗಿಸುವ ಅದ್ಭುತವೂ, ಮಣ್ಣೆದೆ

ಯನ್ನು ವಜ್ರವಾಗಿಸುವ ಅದ್ಭುತವೂ ಮಹಾಕಾವ್ಯದ ರಸಕ್ರಿಯೆ. ಈ ಕ್ರಿಯೆ ನಡೆದಲ್ಲದೆ ನಮ್ಮ ಸ್ವಭಾವಗಳು ಪರಿಷ್ಕೃತವಾಗುವ ಬಗೆ ತೋರುವುದಿಲ್ಲ. ಹೀಗೆ ನಮ್ಮ ರಾಜಕೀಯದ ಉತ್ತಮತೆಗೆ ಪರಮ ಸಾಧನವಾದದ್ದು ಸಾಹಿತ್ಯಪ್ರಚಾರ. ಈ ಸಂಗತಿಯಲ್ಲಿಯೂ ಪಂಡಿತ ಲೇಖಕರ ಉತ್ಸಾಹಕ್ಕೆ ಕಾರಣ ಪ್ರತ್ಯಕ್ಷ ಕಾಣುತ್ತದೆ.

## ಜಗತ್ತಿನ ವ್ಯಾಧಿಗೆ ಕಾವ್ಯಸಂಜೀವಿನಿ

ಇವೆಲ್ಲಕ್ಕಿಂತ ಮೇಲಿನದಾದ ದೃಷ್ಟಿಯೊಂದಿದೆ. ಅದು ಲೋಕಸಂಸ್ಥಿತಿಯ ದೃಷ್ಟಿ. ಈ ಕ್ಷಣದಲ್ಲಿ ಮಾನವಪ್ರಪಂಚದ ಸ್ಥಿತಿ ಭಯಂಕರವಾಗಿದೆ. ಎಲ್ಲೆಲ್ಲಿಯೂ ಸಂಕ್ಷೋಭೆ; ಎಲ್ಲೆಲ್ಲಿಯೂ ಕ್ರಾಂತಿ. ದೇಶದೇಶಕ್ಕೆ ಕಲಹ; ವರ್ಗವರ್ಗಕ್ಕೆ ಕಲಹ; ಜಾತಿಜಾತಿಗೆ ಕಲಹ. ಯಾರಿಗೂ ಯಾರಲ್ಲಿಯೂ ವಿಶ್ವಾಸವಿಲ್ಲ. ಯಾರಿಗೂ ಯಾವುದರಲ್ಲಿಯೂ ಪೂಜ್ಯ ಬುದ್ಧಿಯಿಲ್ಲ. ಭೂಮಂಡಲವೆಲ್ಲ ಮಾರಿಗುಡಿಯ ಅಂಗಳ ವಾಗಿದೆ. ಇಂಥಾ ಕಾಲದಲ್ಲಿ ಜನಕ್ಕೆ ಒಂದು ನೆಮ್ಮದಿಯನ್ನು, ಒಂದು ಚಿತ್ತ ಸ್ವಾಸ್ಥ್ಯವನ್ನು, ಒಂದು ಸಹನೆಯನ್ನು, ಒಂದು ಭರವಸೆಯನ್ನು ತಂದೊದಗಿಸುವುದೇ ಒಂದು ಮಹೋಪಕಾರ. ಮಾನವ ಹೃದಯಾಂತರಾಳದಲ್ಲಿ ಒಂದು ದಿವ್ಯಾಂಶವುಂಟು, ಒಂದು ಅಮೃತಕಣವುಂಟು, ಒಂದು ಧರ್ಮಬೀಜವುಂಟು; ಆ ಅಂತಸ್ಸಂಪತ್ತನ್ನು ಹೊರಕ್ಕೆ ತೆಗೆದಲ್ಲದೆ ಸಂತೋಷ ಶಾಂತಿಗಳಿಲ್ಲ—ಎಂದು ಜನವನ್ನು ಸಾಂತ್ವನಗೊಳಿಸ ಬಲ್ಲ ವಾಣಿ ಮಹಾ ಕವಿಯದು. ಪರದೈವಶ್ರದ್ಧೆಯನ್ನೂ ಆತ್ಮಸಂಯಮಪೂರ್ವಕ ವಾದ ಆತ್ಮವಿಶ್ವಾಸವನ್ನೂ ಪುನರುಜ್ಜೀವನಗೊಳಿಸಬಲ್ಲ ದಿವ್ಯವಾಣಿಯೇ,—ಭಗವಾನ್ ವ್ಯಾಸಮಹರ್ಷಿಗಳು ನಮಗೆ ದೊರಕಿಸಿರುವಂಥ ಸಂಕ್ಷುಬ್ಧ ಲೋಕಸಂದರ್ಶನವೇ— ನಮ್ಮ ಇಂದಿನ ವ್ಯಾಧಿಗೆ ಪರಮ ಸಂಜೀವಿನಿ. ಈ ಔಷಧವನ್ನು ಉಚಿತ ಪ್ರಮಾಣ ಗಳಲ್ಲಿ ತಕ್ಕ ಅನುಪಾನಗಳಲ್ಲಿ ಒದಗಿಸಿಕೊಡಬಲ್ಲವರು ಉಪಾಧ್ಯಾಯ ಪಂಡಿತರು. ಈ ಉದಾತ್ತವಾದ ಕರ್ತವ್ಯದೃಷ್ಟಿಗಿಂತ ಮಿಗಿಲಾದ ಸ್ಫೂರ್ತಿಸ್ಥಾನವೂ ಉತ್ಸಾಹ ಹೇತುವೂ ಪಂಡಿತರಿಗೂ ಲೇಖಕರಿಗೂ ಬೋಧಕರಿಗೂ ಇನ್ನೆಲ್ಲಿಯೂ ಇರಲಾರದು. ಮನುಷ್ಯಕುಲದ ಬಹಿರಂಗದ ಪೀಡೆಗಳನ್ನು ಇತರರು ಪರಿಹರಿಸುವವರಾದರೆ ಮನುಷ್ಯನ ಅಂತರಂಗವನ್ನು ಚೊಕ್ಕಟಗೊಳಿಸಿ ಆತ್ಮದ ಸೊಟ್ಟುಗಳನ್ನು ನೆಟ್ಟಗೆಮಾಡುವ ಕೆಲಸ ಸಾಹಿತ್ಯ ಬೋಧಕರದು. ಈ ಒಂದು ಯೋಗದ ಧ್ಯಾನವೇ ಪಂಡಿತರ ಸಮಾಧಾನ ಉತ್ಸಾಹಗಳಿಗೆ ಸಾಕಾದಷ್ಟು ಪರಿಪೋಷಕವೆಂದು ನಾನು ನಂಬಿದ್ದೇನೆ.

ಡಿ. ವಿ. ಗುಂಡಪ್ಪ.

---

# ವಕ್ರೋಕ್ತಿ

ಸಂಸ್ಕೃತ ಸಾಹಿತ್ಯ ವಿಮರ್ಶೆಯಲ್ಲಿ ರಸ, ಅಲಂಕಾರ, ರೀತಿ, ಧ್ವನಿ ಮತ್ತು ವಕ್ರೋಕ್ತಿ ಎಂಬ ಐದು ಪ್ರಸ್ಥಾನಗಳಿವೆ. ಇವುಗಳಲ್ಲಿ 'ರೀತಿ' ಮತ್ತು 'ವಕ್ರೋಕ್ತಿ' ಪ್ರಸ್ಥಾನಗಳು ಒಂದು ದೃಷ್ಟಿಯಿಂದ ಬಹಳ ಮುಖ್ಯವಾದವು. ಮಿಕ್ಕ ಮೂರು ಮಾರ್ಗಗಳ ಪ್ರವರ್ತಕರಿಗೆ ಅನೇಕ ಅರ್ವಾಚೀನರು ಪ್ರಚಾರಕರಾಗಿ ನಿಂತು ಅವರ ಮತಕ್ಕೆ ಗೌರವವನ್ನೂ ಸ್ಥೈರ್ಯವನ್ನೂ ತಂದರು. ಆದರೆ ವಾಮನನೂ ಕುಂತಕನೂ ತಮ್ಮ ತಮ್ಮ ಮತಗಳನ್ನು ಸಮರ್ಥಿಸುವುದಕ್ಕೆ ಒಬ್ಬಂಟಿಗರಾಗಿ ನಿಲ್ಲಬೇಕಾಯಿತು; ಸುತ್ತು ಮುತ್ತಲೂ ಪ್ರಚಾರ ಹೊಂದುತ್ತಿದ್ದ ಪ್ರತಿಪಕ್ಷಗಳ ವಾದಗಳನ್ನು ಅಸಹಾಯರಾಗಿ ಖಂಡಿಸಬೇಕಾಯಿತು. ಹೀಗಿದ್ದರೂ ಇವರ ಮತಗಳು ಬಹಳ ಮಟ್ಟಿಗೆ ಸಾಹಿತ್ಯವಿಮರ್ಶಕರ ದೃಷ್ಟಿಯನ್ನು ಮಾರ್ಪಡಿಸಿ ಪ್ರಸಿದ್ಧಿಗೆ ಬಂದದ್ದು ನಿಜವಾಗಿಯೂ ಇವುಗಳ ಅಂತಃಸತ್ವವನ್ನು ಸೂಚಿಸುತ್ತದೆ.

ರಾಜಾನಕ ಕುಂತಕನೇ ವಕ್ರೋಕ್ತಿ ಮಾರ್ಗದ ಪ್ರವರ್ತಕನೆನ್ನಬಹುದಾದರೂ ವಕ್ರೋಕ್ತಿ ತತ್ವಕ್ಕೆ ಒಂದು ಇತಿಹಾಸವಿದೆ. ಪ್ರಾಯಶಃ ರಾಮಾಯಣ ಮಹಾಭಾರತಗಳ ಕಾಲದಿಂದಲೂ ಈ ಶಬ್ದವು ಪ್ರಚಾರದಲ್ಲಿದ್ದು ಕಾಲಕ್ರಮೇಣ ಅದರ ಅರ್ಥವು ಬದಲಾಯಿಸುತ್ತ ಬಂದಿರಬೇಕೆಂದು ತೋರುತ್ತದೆ. ಭಾಮಹ, ದಂಡಿ, ವಾಮನ ಇವರ ಗ್ರಂಥಗಳಲ್ಲಿ ದೊರೆಯುವ 'ವಕ್ರೋಕ್ತಿ' ಶಬ್ದದ ಅರ್ಥಕ್ಕೂ ರುದ್ರಟ, ಮಮ್ಮಟ ಮತ್ತು ಆಧುನಿಕರ ಗ್ರಂಥಗಳಲ್ಲಿ ದೊರೆಯುವ ಅರ್ಥಕ್ಕೂ ಬಹಳ ವ್ಯತ್ಯಾಸವು ಕಂಡುಬರುತ್ತದೆ. ಆದ್ದರಿಂದ ಭಾಮಹನಿಂದ ಮೊದಲುಮಾಡಿ ಆಧುನಿಕ ವಿಮರ್ಶಕರ ಕಾಲದ ವರೆಗೂ ಈ ಶಬ್ದದ ಅರ್ಥವು ಹೇಗೆ ಬದಲಾಯಿಸಿತೆಂಬುದನ್ನು ಸಂಕ್ಷೇಪವಾಗಿ ಪರಿಶೀಲಿಸುವುದು ಆವಶ್ಯಕ.

'ವಕ್ರ' ಶಬ್ದಕ್ಕೆ ಪ್ರಾಚೀನ ಸಾಹಿತ್ಯದಲ್ಲಿ ಈಗಿನ ಹಾಗೆ ಕೆಟ್ಟ ಅರ್ಥವಿರಲಿಲ್ಲ. ಭಾಮಹನು ಈ ಶಬ್ದವನ್ನು ಉಪಯೋಗಿಸಿರುವ ಕಡೆಗಳನ್ನೆಲ್ಲ ಪರಿಶೀಲಿಸಿದರೆ 'ವಕ್ರೋಕ್ತಿ' ಎಂದರೆ ಕಾವ್ಯದ ರಮ್ಯತೆಗೆ ಕಾರಣವಾದ ಒಂದು 'ಉಕ್ತಿಮಾರ್ಗ' ವೆಂದು ತೋರುತ್ತದೆ. ವಕ್ರೋಕ್ತಿಯನ್ನು ಕಾವ್ಯದ ಜೀವವನ್ನಾಗಿ ಪರಿಗಣಿಸುವುದರಿಂದಲೇ ಭಾಮಹನು ಸ್ವಭಾವೋಕ್ತಿಯನ್ನು ನಿರಾಕರಿಸುತ್ತಾನೆ. ವಿಷಯವೇನೇ ಆದರೂ ಅದನ್ನು ಹೇಳುವಿಕೆಯಲ್ಲಿ ಒಂದು ವಿಧವಾದ ಚಮತ್ಕೃತಿಯುಂಟು. ವಿಷಯ

ಗಳನ್ನು ಇದ್ದದ್ದಿದ್ದಹಾಗೆ ಹೇಳಿದರೆ ಯಾರಿಗೆತಾನೇ ರುಚಿಸುತ್ತದೆ? ಆ ಚಮತ್ಕೃತಿ ಯಿಂದ ವಿಷಯವು ಎಷ್ಟೇ ನೀರಸವಾಗಿದ್ದರೂ ಸಹೃದಯಾಹ್ಲಾದಕವಾಗಿ ಪರಿಣಮಿ ಸುತ್ತದೆ. ಈ "ಭಣಿತಿ ವೈಚಿತ್ರ್ಯ" ಅಥವಾ "ಉಕ್ತಿ ವೈಚಿತ್ರ್ಯ"ಕ್ಕೆ 'ವಕ್ರೋಕ್ತಿ' ಎಂದು ಹೆಸರು. ಇದರಿಂದಲೇ ಭಾಮಹನು ವೈಚಿತ್ರ್ಯವಿಲ್ಲದ ಹೇತು, ಸೂಕ್ಷ್ಮ, ಲೇಶ ಇತ್ಯಾದಿಗಳನ್ನು ಕಾವ್ಯಾಲಂಕಾರಗಳನ್ನಾಗಿ ಭಾವಿಸುವುದಿಲ್ಲ. ಮತ್ತು ಭಾಮಹನ ಮತಕ್ಕನುಸಾರವಾಗಿ 'ವಕ್ರತೆ'ಯು ಕಾವ್ಯಕ್ಕೆ ಸಾರಭೂತವಾದ ಒಂದು ಆಂತರ ಧರ್ಮ. ಈ ಆಂತರ ಧರ್ಮವು ಎಲ್ಲ ಅಲಂಕಾರಗಳಲ್ಲಿಯೂ ಇರುವುದ ರಿಂದಲೇ ಅಲಂಕಾರಕ್ಕೆ ಕಾವ್ಯದಲ್ಲಿ ಬಹಳ ಮುಖ್ಯವಾದ ಸ್ಥಾನವು ದೊರೆತಿದೆ. (ಕಾವ್ಯಾಲಂಕಾರ ೫-೬೬—ವಾಚಾಂ ವಕ್ರಾರ್ಥ ಶಬ್ದೋಕ್ತಿರಲಂಕಾರಾಯ ಕಲ್ಪತೇ). ಈ ಅಲಂಕಾರಗಳನ್ನು ಕಾವ್ಯದಲ್ಲಿ ಪ್ರಯೋಗಿಸುವುದರಿಂದ ಕಾವ್ಯವು ಸಂತೋಷವನ್ನುಂಟುಮಾಡುತ್ತದೆ. ಹೀಗೆ ಎಲ್ಲಾ ಅಲಂಕಾರಗಳಿಗೂ 'ವಕ್ರತೆ' ಯನ್ನೇ ಮೂಲಭೂತವಾದ ಜೀವವನ್ನಾಗಿ ಪರಿಗಣಿಸಿ ಈ ವಕ್ರೋಕ್ತಿಯ ಚಮತ್ಕೃತಿಯನ್ನು ಮಿಕ್ಕೆಲ್ಲ ಅಲಂಕಾರಗಳಿಗಿಂತ ವಿಶೇಷವಾಗಿ ಪಡೆದಿರುವ 'ಅತಿ ಶಯೋಕ್ತಿ'ಯನ್ನು ಅಲಂಕಾರಗಳಲ್ಲಿ ಶ್ರೇಷ್ಠವೆಂದು ಭಾಮಹನು ಭಾವಿಸುತ್ತಾನೆ. [ಕಾವ್ಯಾಲಂಕಾರ—(೨-೮೫:) ಸೈಷಾ ಸರ್ವೈವ ವಕ್ರೋಕ್ತಿಃ ಇತ್ಯಾದಿ].

'ವಕ್ರೋಕ್ತಿ'ಗೆ ಭಾಮಹನು ಕೊಟ್ಟಿರುವಷ್ಟು ಮಹತ್ವವನ್ನು ದಂಡಿಯು ಕೊಡುವುದಿಲ್ಲ. 'ವಕ್ರೋಕ್ತಿ'ಯು ಸಹೃದಯಾಹ್ಲಾದಕವೇನೋ ಹೌದು. ಆದರೆ ಅದೇ ಕಾವ್ಯದ ಜೀವವಲ್ಲ; ಅಲಂಕಾರದ ಸಾರರೂಪವಾದ ಧರ್ಮವಲ್ಲ. ಏಕೆಂದರೆ ವಕ್ರೋಕ್ತಿಗೆ ವಿರುದ್ಧವಾದ ಸ್ವಭಾವೋಕ್ತಿಯೂ ಒಂದು ಅಲಂಕಾರ; ಇದರಿಂದಲೂ ಕಾವ್ಯಕ್ಕೆ ರಮ್ಯತೆಯು ದೊರೆಯುತ್ತದೆ—ಎಂದು ಅವನು ಅಭಿಪ್ರಾಯಪಡುತ್ತಾನೆ. ಇದರಿಂದ ಕಾವ್ಯದಲ್ಲಿ 'ವಕ್ರೋಕ್ತಿ'ಯ ಸಂಪೂರ್ಣವಾದ ಸ್ವಾತಂತ್ರ್ಯವನ್ನು ಕಡಮೆಮಾಡಿ "ದ್ವಿಧಾ ಭಿನ್ನಂ ಸ್ವಭಾವೋಕ್ತಿರ್ವಕ್ರೋಕ್ತಿರಿತಿ ವಾಙ್ಮಯಮ್" (ಕಾವ್ಯಾದರ್ಶ—೨-೩೬೨) ಎಂದು ಸ್ವಭಾವೋಕ್ತಿಯನ್ನೂ ವಕ್ರೋಕ್ತಿಗೆ ಸಮಾನ ವನ್ನಾಗಿ ಪರಿಗಣಿಸಿದನು. ಮತ್ತು ದಂಡಿಯು 'ವಕ್ರೋಕ್ತಿ' ಶಬ್ದದ ಅರ್ಥವನ್ನು ಸ್ವಲ್ಪ ಸಂಕುಚಿತಮಾಡಿ "ಅಲಂಕಾರಗಳ ಆಂತರ ಧರ್ಮ"ಕ್ಕೆ ಬದಲು "ಗೊತ್ತಾದ ಕೆಲವು ಅಲಂಕಾರಗಳ ಸಮೂಹಕ್ಕೆ ಸಾಮಾನ್ಯವಾದ ಹೆಸರ"ನ್ನಾಗಿ ಬದಲಾಯಿಸಿ ದನು. 'ಹೃದಯಂಗಮಾ' ಎಂಬ ಕಾವ್ಯಾದರ್ಶದ ವ್ಯಾಖ್ಯಾನದಲ್ಲಿ ಈ ರೀತಿ ಹೇಳಿದೆ: "ವಕ್ರೋಕ್ತಿ ಶಬ್ದೇನ ಉಪಮಾದಯಃ ಸಂಕೀರ್ಣಪರ್ಯಂತಾಃ ಅಲಂಕಾರಾ ಉಚ್ಯಂತೇ". ಎಂದರೆ ದಂಡಿಯ ಮತಾನುಸಾರವಾಗಿ 'ವಕ್ರೋಕ್ತಿ'ಯು

ಸ್ವಭಾವೋಕ್ತಿಯನ್ನು ಬಿಟ್ಟು ಉಳಿದ ಎಲ್ಲ ಅಲಂಕಾರಗಳ ಸಾಮಾನ್ಯವಾದ ಹೆಸರು ಎಂದು ತೋರುತ್ತದೆ.

'ವಕ್ರೋಕ್ತಿ'ಯನ್ನು ಬೇರೆ ಒಂದು ಅಲಂಕಾರವನ್ನಾಗಿ ಎಣಿಸಿದವರಲ್ಲಿ ವಾಮನನೇ ಮೊದಲನೆಯವನು. ಇವನು 'ವಕ್ರೋಕ್ತಿ'ಯ ಲಕ್ಷಣವನ್ನು "ಸಾದೃಶ್ಯಾಲ್ಲಕ್ಷಣಾ ವಕ್ರೋಕ್ತಿಃ" ಎಂದು ಹೇಳಿ "ಉನ್ಮಿಮೀಲ ಕಮಲಂ ಸರಸೀನಾಂ ಕೈರವಂ ಚ ನಿಮಿಮೀಲ ಮುಹೂರ್ತಾತ್" ಎಂಬ ಶ್ಲೋಕಾರ್ಧವನ್ನು ಉದಾಹರಿಸುತ್ತಾನೆ. ಎರಡು ಪದಾರ್ಥಗಳ ಸಾದೃಶ್ಯದಿಂದ ಒಂದರ ಕ್ರಿಯೆಯನ್ನು ಇನ್ನೊಂದಕ್ಕನ್ವಯಿಸುವ ಉಪಚರಿತ (Secondary) ವಾದ ಪ್ರಯೋಗಕ್ಕೆ 'ವಕ್ರೋಕ್ತಿ' ಎಂದು ಹೆಸರು. ಮೇಲಿನ ಉದಾಹರಣೆಯಲ್ಲಿ ಉನ್ಮೀಲನ (ತೆರೆಯುವಿಕೆ) ನಿಮೀಲನ (ಮುಚ್ಚುವಿಕೆ) ಈ ಎರಡು ಕ್ರಿಯೆಗಳೂ ಕಮಲಕ್ಕೂ ಕೈರವಕ್ಕೂ ಕ್ರಮೇಣ ಅನ್ವಯಿಸುತ್ತವೆ. ಆದರೆ ಇವೆರಡಕ್ಕೂ ರೂಢಿಯಲ್ಲಿ ನೇತ್ರಕರ್ತೃಕವಾಗಿ ಪ್ರಯೋಗವಿದೆ. ನೇತ್ರಕರ್ತೃಕವಾದ ಈ ಉನ್ಮೀಲನ ನಿಮೀಲನ ಕ್ರಿಯೆಗಳನ್ನು ಕಮಲ ಮತ್ತು ಕೈರವಗಳ ಪರವಾಗಿ ಪ್ರಯೋಗಿಸುವುದು ಅಸಂಗತವಾದರೂ ಕಮಲ ಕೈರವಗಳಿಗೂ ನೇತ್ರಗಳಿಗೂ ಇರುವ ಸಾದೃಶ್ಯದಿಂದ ಲಾಕ್ಷಣಿಕವಾಗಿ ಪ್ರಯೋಗಿಸುವುದರಿಂದ ಒಂದು ವಿಧವಾದ ಚಮತ್ಕಾರವು ಉಂಟಾಗಿ ಕಾವ್ಯದ ರಮ್ಯತೆಗೆ ಕಾರಣವಾಗುತ್ತದೆ. ಹೀಗೆಯೇ

ಇಹ ಚ ನಿರಂತರನವಮುಕುಲಪುಲಕಿತಾ ಹರತಿ ಮಾಧವೀ ಹೃದಯಂ |
ಮದಯತಿ ಚ ಕೇಸರಾಣಾಂ ಪರಿಣತಮಧುಗಂಧಿ ನಿಶ್ವಸಿತಂ ||

ಇತ್ಯಾದಿ ಸ್ಥಲಗಳಲ್ಲಿಯೂ 'ವಕ್ರೋಕ್ತಿ' ಎಂಬ ಅಲಂಕಾರವನ್ನು ವಾಮನನು ಲಕ್ಷಿಸುತ್ತಾನೆ. ಹೀಗೆ ವಾಮನನ ಹೊತ್ತಿಗೆ 'ವಕ್ರೋಕ್ತಿ' ಶಬ್ದವು ತನ್ನ ಮೊದಲಿನ ವಿಶಾಲವಾದ 'ಅಲಂಕಾರಗಳ ಆಂತರ ಧರ್ಮ'ವೆಂಬ ಅರ್ಥವನ್ನು ಬಿಟ್ಟು ಕ್ರಮೇಣ ಕೆಲವು ಅಲಂಕಾರಗಳ ಸಾಮಾನ್ಯವಾದ ಹೆಸರಾಗಿ ಪರಿಗಣಿಸಲ್ಪಟ್ಟು ಕಡೆಗೆ ಬೇರೆ ಒಂದು ಅಲಂಕಾರವಾಗಿ ಮಾರ್ಪಟ್ಟಿತು.

ಹೀಗೆಯೇ ರುದ್ರಟನೂ 'ವಕ್ರೋಕ್ತಿ'ಯನ್ನು ಸ್ವತಂತ್ರ ಅಲಂಕಾರವನ್ನಾಗಿ ಎಣಿಸಿದರೂ ಅವನು 'ವಕ್ರೋಕ್ತಿ'ಗೆ ಬೇರೆ ಒಂದು ಲಕ್ಷಣವನ್ನು ಹೇಳಿ 'ವಕ್ರೋಕ್ತಿ'ಯನ್ನು ಒಂದು ಶಬ್ದಾಲಂಕಾರವನ್ನಾಗಿ ಪರಿಗಣಿಸಿದನು. ರುದ್ರಟನ ಮತವನ್ನನುಸರಿಸಿದರೆ 'ವಕ್ರೋಕ್ತಿ'ಯು ಎರಡು ವಿಧ; 'ಶ್ಲೇಷ ವಕ್ರೋಕ್ತಿ' 'ಕಾಕು ವಕ್ರೋಕ್ತಿ' ಎಂದು. ವಕ್ತೃವು ಹೇಳಿದ ಒಂದು ವಿಷಯವನ್ನು ತದಭಿಮತ ವಿರುದ್ಧವಾಗಿ ಬೇರೆ ವಿಧವಾಗಿ ಪದಚ್ಛೇದ ಮಾಡಿ ಬೇರೆ ಅರ್ಥವನ್ನು ಕಲ್ಪಿಸಿ

ಕೊಳ್ಳುವ ಚಮತ್ಕಾರಕ್ಕೆ ಶ್ಲೇಷವಕ್ರೋಕ್ತಿ ಎಂದು ಹೆಸರು. ಸ್ವಾಭಾವಿಕವಾದ ಸ್ವರವನ್ನು ಬಿಟ್ಟು ಬೇರೆ ವಿಧವಾದ ಸ್ವರದಲ್ಲಿ ಹೇಳುವುದರಿಂದ ಎಲ್ಲಿ ಅರ್ಥವು ಬೇರೆಯಾಗುವುದೋ ಅಲ್ಲಿ ಕಾಕುವಕ್ರೋಕ್ತಿ. ಈ ರೀತಿ ರುದ್ರಟನು ವಕ್ರೋಕ್ತಿಯನ್ನು ಒಂದು ಶಬ್ದಾಲಂಕಾರವನ್ನಾಗಿ ಪರಿಗಣಿಸಿ ಅದರ ಎರಡು ಭೇದಗಳಿಗೂ ಲಕ್ಷಣ ಸಹಿತ ಉದಾಹರಣೆಗಳನ್ನು ತನ್ನ ಕಾವ್ಯಾಲಂಕಾರಗ್ರಂಥದಲ್ಲಿ ಕೊಡುತ್ತಾನೆ.

ಹೀಗೆ ವಕ್ರೋಕ್ತಿ ಶಬ್ದದ ಅರ್ಥವು ಬದಲಾಯಿಸುತ್ತಿದ್ದರೂ ಕುಂತಕನು ಪುನಃ ಭಾಮಹನ ಮತವನ್ನು ಸ್ಮರಿಸಿಕೊಂಡು ವಕ್ರೋಕ್ತಿ ಶಬ್ದಕ್ಕೆ ಅದಕ್ಕಿಂತಲೂ ವಿಶಾಲವಾದ ಅರ್ಥವನ್ನು ಕಲ್ಪಿಸಿ ವಕ್ರೋಕ್ತಿ ಮಾರ್ಗವನ್ನು ಸ್ಥಾಪಿಸಿದನು. ಕಾಲಕ್ರಮೇಣ ಮಲಿನವಾಗುತ್ತ ಬಂದಿದ್ದ 'ವಕ್ರೋಕ್ತಿ'ಯ ತೇಜಸ್ಸನ್ನು ಹೆಚ್ಚಿಸಿ ಅದನ್ನೇ ಒಂದು ಸರ್ವಸಮಾನವಾದ ವಿಮರ್ಶನ ಮಾರ್ಗದ ಹೆಸರಾಗುವಂತೆ ಮಾಡಿದನು. ಈ ಕೆಲಸವು ಕುಂತಕನಿಗೆ ಬಹಳ ಕಷ್ಟವಾಗಿದ್ದಿರಬೇಕು. ಏಕೆಂದರೆ, ಕುಂತಕನು ತನ್ನ ಮತದ ತತ್ವವನ್ನು ಹರಡುವುದಕ್ಕಿಂತ ಮುಂಚೆ ಸುಮಾರು ಒಂದು ಒಂದೂವರೆ ಶತಮಾನಗಳಿಂದ ಬೇರೂರಿ ಪ್ರಸಿದ್ಧಿ ಹೊಂದಿ, ಬಹುಮತದಿಂದ ಸ್ವೀಕೃತವಾಗಿದ್ದ 'ಧ್ವನಿ' ಮಾರ್ಗಕ್ಕಿಂತ ತನ್ನ ಮತದಲ್ಲಿ ವೈಶಿಷ್ಟ್ಯವನ್ನು ತೋರಿಸಬೇಕಾಗಿ ಬಂತು. ಇಲ್ಲದಿದ್ದರೆ ಆಗಿನ ವಿದ್ವಾಂಸರು ಧ್ವನಿಮಾರ್ಗಕ್ಕಿಂತ ಬೇರೆಯಾದ ಯಾವ ತತ್ವವನ್ನೂ ಅಂಗೀಕರಿಸುತ್ತಿರಲಿಲ್ಲ. ಆದ್ದರಿಂದ ಕುಂತಕನು ಬಹಳ ಎಚ್ಚರಿಕೆಯಿಂದ ವರ್ತಿಸಬೇಕಾಯಿತು. ಧ್ವನಿ ಮಾರ್ಗವನ್ನು ಸಂಪೂರ್ಣವಾಗಿ ನಿರಾಕರಿಸಿದ್ದರೆ ಅವನಿಗೂ ಮಹಿಮಭಟ್ಟನ ಗ್ರಂಥಕ್ಕಾದ ಅಧಃಪಾತವೇ ಉಂಟಾಗಿ ಅವನ ಮತಕ್ಕೂ ಪ್ರಸಿದ್ಧ ಪ್ರಸ್ಥಾನಗಳ ಸಮೂಹದಿಂದ ಬಹಿಷ್ಕಾರವಾಗುತ್ತಿತ್ತು. ಆದ್ದರಿಂದ ಕುಂತಕನು 'ಧ್ವನಿ' ಮತ್ತು ರಸ ಇವುಗಳ ಪ್ರಾಧಾನ್ಯವನ್ನೂ ಸತ್ಯತೆಯನ್ನೂ ಒಪ್ಪಿಕೊಂಡು ತನ್ನ ಮತವನ್ನು ಪರಿಷ್ಕರಿಸಿದನು. ಇವನು ಮಹಿಮಭಟ್ಟನ ಹಾಗೆ 'ಧ್ವನಿ ಎಂಬುದು ಇಲ್ಲವೇ ಇಲ್ಲ, ಧ್ವನಿ ಧ್ವನಿ ಎಂದು ಯಾವುದನ್ನು ಕರೆಯುತ್ತಿದ್ದಾರೆಯೋ ಅದೆಲ್ಲ ಕಾವ್ಯಾನುಮಿತಿಯೆಂಬ ಅನುಮಾನದ ಒಂದು ಭೇದ ಮಾತ್ರ' ಎಂದು ಸಾರಲಿಲ್ಲ. ಈ ನಿಷ್ಠುರವಾದ ಧ್ವನಿನಿರಾಸಮಾರ್ಗವನ್ನು ಬಿಟ್ಟು ಕುಂತಕನು ಮತ್ತೊಂದು ದಾರಿಯನ್ನು ಹಿಡಿದನು. 'ಧ್ವನಿ' ಎಂಬುದೊಂದಿರಬಹುದು; ಅದನ್ನು ಯಾರೂ ನಿಷೇಧಿಸಿಲ್ಲ. ಆದರೆ ಧ್ವನಿಯೇ ಕಾವ್ಯದ ಜೀವವಲ್ಲ; 'ಧ್ವನಿ'ಯೊಂದನ್ನೇ ಕಾವ್ಯದ ಆತ್ಮವನ್ನಾಗಿ ಪರಿಗಣಿಸುವುದರಿಂದ ಸಹೃದಯರು ಮೆಚ್ಚುವ ಅನೇಕ ಪ್ರಬಂಧಗಳಿಗೆ ಕಾವ್ಯತ್ವವು ಹೋಗುತ್ತದೆ; ಧ್ವನಿಯೂ ಕಾವ್ಯದ ಜೀವ ಹೌದು; ಆದರೆ ರಸ ಅಲಂಕಾರ ರೀತಿಗಳೂ ಕಾವ್ಯದ

ಜೀವವಾಗಬಹುದು; ಅಂತಹ ಕಾವ್ಯಜೀವಿತವಾಗಲು ಅರ್ಹತೆಯುಳ್ಳ ರಸ ಅಲಂಕಾರಾದಿಗಳಿಗೆಲ್ಲ ಒಂದು ವಿಶೇಷವಿದೆ; ಅದೇ 'ವಕ್ರತೆ'; 'ವಕ್ರತೆ'ಯೇ ಕಾವ್ಯದ ಜೀವ; ಧ್ವನಿಯೂ ಒಂದು ವಿಧವಾದ ವಕ್ರತೆ; ರೀತಿ, ರಸ, ಅಲಂಕಾರ, ಎಲ್ಲವೂ ಒಂದೊಂದು ವಿಧವಾದ ವಕ್ರತೆಯಲ್ಲಿ ಪರ್ಯವಸಿತವಾಗುತ್ತವೆ—ಎಂಬುದು ಕುಂತಕನ ಅಭಿಪ್ರಾಯ.

ಕುಂತಕನು ಈ ರೀತಿ ಧ್ವನಿಯ ಸಂಪೂರ್ಣನಿರಾಸಕ್ಕಾಗಿ ಹೊರಡದೇ ಇದ್ದರೂ ಕಡೆಗೂ ಅವನ ಗ್ರಂಥಕ್ಕೆ ಶಿಕ್ಷೆಯು ತಪ್ಪಲೇ ಇಲ್ಲ; ಧ್ವನಿಮತದ ಪ್ರಾಬಲ್ಯವು ಒಟ್ಟಿನಲ್ಲಿ ತನ್ನ ಪ್ರತಾಪವನ್ನು ತೋರಿಸದೆ ಬಿಡಲಿಲ್ಲ. ಇದರಿಂದಲೇ ಕುಂತಕನ ಗ್ರಂಥವು ಸುಮಾರು ೧೩ ನೆಯ ಶತಮಾನದಿಂದ ಬಹಳ ಕಾಲದ ವರೆಗೆ ಪಂಡಿತರಿಗೆ ಸಿಕ್ಕದೆ ಅದರ ಹೆಸರು ಮಾತ್ರ ಕೇಳ ಬರುತ್ತಿತ್ತು. ಈಚೆಗೆ ಡಾ|| ಸುಶೀಲ ಕುಮಾರ್ ದೇ ಅವರು ಈ ಗ್ರಂಥವನ್ನು ಹುಡುಕಿ ಮೊದಲನೆಯ ಮೂರು 'ಉನ್ಮೇಷ' ಗಳನ್ನು ಸಂಪೂರ್ಣವಾಗಿ ಶೋಧಿಸಿ ಕಡೆಯ ಭಾಗಗಳ ಸಂಕ್ಷಿಪ್ತಸಾರದೊಡನೆ ೧೯೨೩ರಲ್ಲಿ ಮುದ್ರಣ ಮಾಡಿಸಿರುತ್ತಾರೆ. ಅಲ್ಲಿಂದೀಚೆಗೆ ಕುಂತಕನ ಗ್ರಂಥವನ್ನು ವ್ಯಾಸಂಗಮಾಡಿ ಅವನ ಕಾವ್ಯತತ್ತ್ವವನ್ನು ತಿಳಿಯುವ ಸುಯೋಗ ದೊರಕಿದೆ.

ಕುಂತಕನ ಗ್ರಂಥವು ಸಂಪೂರ್ಣವಾಗಿ ದೊರಕದೆ ಇರುವುದರಿಂದಲೂ ಕಡೆಯ ಭಾಗಗಳು ಶಿಥಿಲವಾಗಿರುವುದರಿಂದಲೂ ಗ್ರಂಥದ ಕೊನೆಯಲ್ಲಿ ಪ್ರಾಯಃ ಇದ್ದಿರಬಹುದಾದ ಕುಂತಕನ ಆತ್ಮಚರಿತವು ನಮಗೆ ಸಿಕ್ಕದೆ ಹೋಗಿದೆ. ಗ್ರಂಥದ ಆದಿಯಲ್ಲಿ ಕುಂತಕನು ತನ್ನ ವಿಷಯವಾಗಿ ಏನನ್ನೂ ಹೇಳಿಕೊಳ್ಳುವುದಿಲ್ಲ. ಈ ಕಾರಣಗಳಿಂದ ಈತನ ಕಾಲವನ್ನು ನಿರ್ಣಯಿಸುವುದು ಬಹಳ ಕಷ್ಟವಾಗಿರುತ್ತದೆ. ಆತನ ಸಮಕಾಲೀನರೋ ಮತ್ತು ಈಚಿನವರೋ ಇವನ ವಿಚಾರವಾಗಿ ಹೇಳುವ ಅಲ್ಪಸ್ವಲ್ಪ ವಿಷಯಗಳನ್ನು ಸಂಗ್ರಹಿಸಿ ಮತ್ತು ಈತನು ಹಿಂದಿನ ಯಾವ ಯಾವ ಗ್ರಂಥಗಳಿಂದ ಶ್ಲೋಕಗಳನ್ನೂ ಮಿಕ್ಕ ಕೆಲವು ವಿಷಯಗಳನ್ನೂ ತೆಗೆದುಕೊಂಡಿರುತ್ತಾನೆ ಎಂಬುದನ್ನು ಪತ್ತೆಮಾಡಿ ಇವನ ಕಾಲವನ್ನು ನಿರ್ಣಯಿಸಬೇಕಾಗಿದೆ. ಕುಂತಕನು ತನ್ನ ಗ್ರಂಥದ ವೃತ್ತಿಭಾಗದಲ್ಲಿ ಅನೇಕ ಕಾವ್ಯ ನಾಟಕ ಅಲಂಕಾರ ಗ್ರಂಥಗಳ ವಾಕ್ಯಗಳನ್ನೂ ಶ್ಲೋಕಗಳನ್ನೂ ಉದಾಹರಣೆಗಾಗಿ ಉದ್ಧರಿಸಿದ್ದರೂ ಗ್ರಂಥಕರ್ತರ ಹೆಸರುಗಳನ್ನು ಮಾತ್ರ ಹೇಳುವುದಿಲ್ಲ. ಈ ರೀತಿಯಾಗಿ ಉದ್ಧರಿಸಲ್ಪಟ್ಟಿರುವ ಗ್ರಂಥಗಳ ಪೈಕಿ ಈತನ ಕಾಲವನ್ನು ನಿರ್ಣಯಿಸಲು ಉಪಯುಕ್ತವಾದವು ಕೆಲವಿವೆ. ರಾಜಶೇಖರನ ನಾಟಕಗಳಿಂದ* ಅನೇಕ ಭಾಗಗಳು ಉದ್ಧರಿ

* ವಿದ್ಧಶಾಲಭಂಜಿಕಾ ಮತ್ತು ಬಾಲರಾಮಾಯಣ.

ಸಲ್ಪಟ್ಟಿವೆ. ಹಾಗೆಯೇ ಧ್ವನಿಕಾರನ ಮಂಗಳಶ್ಲೋಕವು ಕುಂತಕನಿಂದ ಪುನರುದ್ಧರಿಸಲ್ಪಟ್ಟಿದೆ. ಇದರಿಂದ ಕುಂತಕನು ಆನಂದವರ್ಧನ ರಾಜಶೇಖರ ಇವರಿಗಿಂತ ಅರ್ವಾಚೀನನೆಂದು ಧಾರಾಳವಾಗಿ ಹೇಳಬಹುದು. ಎಂದರೆ ಹತ್ತನೆಯ ಶತಮಾನದ ಮೊದಲನೆಯ ಅರ್ಧಕ್ಕಿಂತ ಹಿಂದೆ ಕುಂತಕನು ಇದ್ದಿರಲಾರನು. ಇದು ಕುಂತಕನ ಕಾಲಕ್ಕೆ ಮೇಲಿನ ಅವಧಿ.

ಕುಂತಕನ ವಿಷಯವಾಗಿ ವಿಮರ್ಶೆಮಾಡಲು ಯತ್ನಿಸಿದವರಲ್ಲಿ ಮೊದಲನೆಯವನು ಮಹಿಮಭಟ್ಟ. ಇವನು ಕುಂತಕನ ಗ್ರಂಥವನ್ನು ಪರಾಮರ್ಶಿಸಿ ಅವನ ಮತವನ್ನು ಖಂಡಿಸಿರುತ್ತಾನೆ. ಆದ್ದರಿಂದ ಕುಂತಕನು ಮಹಿಮಭಟ್ಟನಿಗಿಂತ ಹಿಂದಿನವನಾಗಿದ್ದಿರಬೇಕು. ಮಹಿಮಭಟ್ಟನ ಕಾಲವು ಕ್ರಿ. ಶ. ಹನ್ನೊಂದನೆಯ ಶತಮಾನದ ಆದಿಯೆಂದು ನಿರ್ಣಯಿಸಲ್ಪಟ್ಟಿದೆ. ಇದರಿಂದ ಕುಂತಕನು ಹತ್ತನೆಯ ಶತಮಾನದ ಉತ್ತರಾರ್ಧದಲ್ಲಿ ತನ್ನ ಗ್ರಂಥವನ್ನು ರಚಿಸಿರಬಹುದೆಂದು ಹೇಳಬಹುದು. ಡಾ|| ಶಂಕರನ್ ಅವರು ಕುಂತಕನು ಸುಮಾರು ೧೦೦೦ ದಿಂದ ೧೦೧೦ ರ ವರೆಗೆ ಪ್ರಸಿದ್ಧನಾಗಿದ್ದಿರಬಹುದೆಂದು ಹೇಳುತ್ತಾರೆ. ಇದು ಸರಿಯೆಂದು ತೋರುತ್ತದೆ. ಈ ನಿರ್ಣಯವನ್ನು ಸಮರ್ಥಿಸಲು ಇನ್ನೊಂದು ಆಧಾರವಿದೆ. ಕುಂತಕನ ಮತವು ಅಭಿನವಗುಪ್ತನಿಂದಲೂ ವಿಮರ್ಶಿಸಲ್ಪಟ್ಟಿದೆ. ಅಭಿನವಗುಪ್ತನು ೯೯೦ ರಿಂದ ೧೦೧೫ ವರೆಗೆ ಪ್ರಸಿದ್ಧನಾಗಿದ್ದನೆಂದು ತೋರುತ್ತದೆ. ಇವರಿಬ್ಬರ ಗ್ರಂಥಗಳನ್ನೂ ಪರಿಶೀಲಿಸಿದರೆ ಒಂದು ವಿಷಯವು ವ್ಯಕ್ತವಾಗುತ್ತದೆ. ಅಭಿನವಗುಪ್ತನೂ ಕುಂತಕನೂ ಸಮಕಾಲೀನರಾಗಿದ್ದರೂ ಕುಂತಕನು ಪ್ರಸಿದ್ಧಿಹೊಂದುವ ಹೊತ್ತಿಗೆ ಅಭಿನವಗುಪ್ತನು ವೃದ್ಧನಾಗಿದ್ದಿರಬಹುದೆಂದು ಹೇಳಬಹುದು. ಪ್ರಖ್ಯಾತನಾದ ಅಭಿನವಗುಪ್ತನು ಇನ್ನೂ ಅಲ್ಪವಯಸ್ಕನಾದ ಕುಂತಕನ ನವೀನಮಾರ್ಗದ ವಿಷಯದಲ್ಲಿ ತಿರಸ್ಕಾರಭಾವದಿಂದಲೋ ಎಂಬಂತೆ ಏನೊಂದು ತೀಕ್ಷ್ಣವಾದ ವಿಮರ್ಶೆಯನ್ನೂ ಮಾಡುವುದಿಲ್ಲ. ಇದಕ್ಕೆ ಕುಂತಕನು ಧ್ವನಿಯನ್ನು ಸಂಪೂರ್ಣವಾಗಿ ನಿಷೇಧಿಸದಿದ್ದುದೂ ಒಂದು ಕಾರಣವೆಂದು ತೋರುತ್ತದೆ. ಆದರೂ ಪ್ರವರ್ಧಮಾನನಾದ ಕುಂತಕನು, ತಾತನ ಉಪದೇಶವನ್ನು ತಿರಸ್ಕರಿಸಿ ನವೀನ ಮಾರ್ಗದಲ್ಲಿ ವರ್ತಿಸುವ ಆಧುನಿಕ ಯುವಕನಂತೆ, ಅವನ ಮಾರ್ಗವನ್ನು ಬಿಟ್ಟು ವಕ್ರೋಕ್ತಿ ಮಾರ್ಗದ ಸತ್ವವನ್ನು ಸಮರ್ಥಿಸುತ್ತಾನೆ.

ಕುಂತಕನು ಕಾಶ್ಮೀರದೇಶದವನು. ಇವನಿಗೆ 'ರಾಜಾನಕ' ಎಂಬ ಬಿರುದು ದೊರೆತಿತ್ತು. ಇಷ್ಟು ಹೊರತು ಈತನ ಜೀವನದ ವಿಷಯವಾಗಿ ಇನ್ನಾವ ವಿಚಾರಗಳೂ ತಿಳಿದುಬಂದಿಲ್ಲ.

'ವಕ್ರೋಕ್ತಿ ಜೀವಿತ' ಗ್ರಂಥವು ಸಂಪೂರ್ಣವಾಗಿ ದೊರಕದೆ ಇರುವುದರಿಂದ ಅದು ಎಷ್ಟಿದ್ದಿರ ಬಹುದು ಎಂಬ ವಿಚಾರವಾಗಿ ಒಂದು ವಿವಾದವು ಹುಟ್ಟಿದೆ. ನಾಲ್ಕು ಉನ್ಮೇಷಗಳಿದ್ದುವು; ಕಡೆಯ ಉನ್ಮೇಷದ ಸ್ವಲ್ಪ ಭಾಗಗಳು ಮಾತ್ರ ಹೋಗಿವೆ ಎಂದು ಕೆಲವರು ಹೇಳುತ್ತಾರೆ. ಮತ್ತೆ ಕೆಲವರು, ಐದು ಉನ್ಮೇಷಗಳಿದ್ದು ಗ್ರಂಥದ ಕಡೆಯ ಉನ್ಮೇಷವೂ ನಾಲ್ಕನೆಯದರ ಕೆಲವು ಭಾಗಗಳೂ ನಷ್ಟವಾಗಿರಬೇಕೆಂದು ಹೇಳುತ್ತಾರೆ. ಇದನ್ನು ಹೀಗೇ ಎಂದು ತೀರ್ಮಾನಮಾಡುವುದು ಅಸಾಧ್ಯ. ಹೇಗೂ ತೀರ್ಮಾನ ಮಾಡಲು ಆಧಾರಗಳಿಲ್ಲದಿರುವುದರಿಂದ ಈ ಚರ್ಚೆಯು ಅನಾವಶ್ಯಕ. ಅಂತು ಈಗ ಲಬ್ಧವಾಗಿರುವ ಗ್ರಂಥದಲ್ಲಿ ನಾಲ್ಕು ಉನ್ಮೇಷಗಳಿವೆ. ಕಾರಿಕೆ; ಸ್ವನಿರ್ಮಿತವಾದ ವೃತ್ತಿ; ಉದಾಹರಣೆಗಾಗಿ ಇತರ ಗ್ರಂಥಗಳಿಂದ ತೆಗೆದುಕೊಂಡಿರುವ ಶ್ಲೋಕಗಳು—ಎಂದು ಗ್ರಂಥವನ್ನು ಮೂರು ಭಾಗಮಾಡಬಹುದು. ಮೊದಲನೆಯ ಉನ್ಮೇಷದಲ್ಲಿ ಕಾವ್ಯದ ಲಕ್ಷಣ, ಲಕ್ಷಣದ ವಿವರಣೆ ಮತ್ತು ಪರೀಕ್ಷೆ; ಗುಣಗಳು, ರೀತಿಗಳು ಇವುಗಳ ವಿಚಾರವಿದೆ. ಎರಡನೆಯ ಉನ್ಮೇಷದಿಂದ ಮುಂದೆ ಆರು ವಿಧವಾದ ವಕ್ರತೆಗಳ ಲಕ್ಷಣ ಮತ್ತು ಉದಾಹರಣೆಗಳಿವೆ. ಇಲ್ಲಿ ಮಧ್ಯೆಮಧ್ಯೆ ಭಾಮಹ ಮೊದಲಾದ ಹಿಂದಿನ ಗ್ರಂಥಕರ್ತರ ಮತಗಳು ಖಂಡಿಸಲ್ಪಟ್ಟಿವೆ.

ರಾಜಾನಕ ಕುಂತಕನು ಕಾವ್ಯದ ಲಕ್ಷಣವನ್ನು ಈ ರೀತಿ ಹೇಳುತ್ತಾನೆ—

> ಶಬ್ದಾರ್ಥೌ ಸಹಿತೌ ವಕ್ರಕವಿವ್ಯಾಪಾರಶಾಲಿನಿ |
> ಬಂಧೇ ವ್ಯವಸ್ಥಿತೌ ಕಾವ್ಯಂ ತದ್ವಿದಾಹ್ಲಾದಕಾರಿಣಿ ||

'ವಕ್ರೋಕ್ತಿಜೀವಿತ'ದ ಮೊದಲನೆಯ ಉನ್ಮೇಷದಲ್ಲಿ ಈ ಲಕ್ಷಣದ ಪ್ರತಿಯೊಂದು ಪದಕ್ಕೂ ವಿಸ್ತಾರವಾಗಿ ಅರ್ಥವು ಹೇಳಲ್ಪಟ್ಟಿದೆ. ಅದನ್ನು ನಾವು ಈ ರೀತಿ ಸಂಗ್ರಹಿಸಬಹುದು: ವಕ್ರವಾದ (ಎಂದರೆ, ಪ್ರಸಿದ್ಧವಾದ ಮಾರ್ಗವನ್ನು ಬಿಟ್ಟು ನವ್ಯತೆಯಿಂದಲೂ ಸೌಂದರ್ಯದಿಂದಲೂ ಕೂಡಿದ) ಕವಿವ್ಯಾಪಾರಲಬ್ಧವಾದ, ಮತ್ತು ಕಾವ್ಯಜ್ಞರಿಗೆ ಆನಂದವನ್ನುಂಟುಮಾಡತಕ್ಕ ಬಂಧದಲ್ಲಿ (ಎಂದರೆ ವಾಕ್ಯಸಮೂಹದಲ್ಲಿ) ವ್ಯವಸ್ಥಿತವಾದ, ಶಬ್ದಾರ್ಥಯುಗಳವೇ ಕಾವ್ಯ. ಈ ಲಕ್ಷಣದಲ್ಲಿ 'ಸಹಿತೌ' ಎಂಬ ಶಬ್ದಕ್ಕೆ ಕುಂತಕನು ಒಂದು ಚಮತ್ಕಾರವಾದ ಅರ್ಥವನ್ನು ಕಲ್ಪಿಸುತ್ತಾನೆ.—"ಸಾಹಿತ್ಯಮನಯೋಃ ಶೋಭಾಶಾಲಿತಾಂಪ್ರತಿ ಕಾಪ್ಯಸೌ ಅನ್ಯೂನಾನತಿರಿಕ್ತತ್ವ ಮನೋಹಾರಿಣ್ಯವಸ್ಥಿತಿಃ | ಅನ್ಯೂನಾನತಿರಿಕ್ತತ್ವ ಮನೋಹಾರಿಣೀ,—ಪರಸ್ಪರ ಸ್ಪರ್ಧಿತ್ವ ರಮಣೀಯಾ ||" ಎಂದರೆ ವಾಚಕವಾದ ಶಬ್ದವು ವಾಚಕಾಂತರದೊಡನೆಯೂ ವಾಚ್ಯವಾದ ಅರ್ಥವು ವಾಚ್ಯಾಂತರದೊಡನೆಯೂ

ರಮಣೀಯತೆಯಲ್ಲಿಯೂ, ಸಮಯಕ್ಕೆ ತಕ್ಕಂತೆ ಇರುವಿಕೆಯಲ್ಲಿಯೂ ಪರಸ್ಪರ ಸ್ಪರ್ಧಿಸುವಂತಿರುವುದು. ಹೀಗೆಯೇ "ಬಂಧೇ ವ್ಯವಸ್ಥಿತೌ" ಎಂಬ ವಿಶೇಷಣವನ್ನೂ ವಿವರಿಸುತ್ತಾ 'ಬಂಧ'ದ ಲಕ್ಷಣವನ್ನು ಹೀಗೆ ಹೇಳುತ್ತಾನೆ—

ವಾಚ್ಯವಾಚಕಸೌಭಾಗ್ಯಲಾವಣ್ಯಪರಿಪೋಷಕಃ |
ವ್ಯಾಪಾರಶಾಲೀ ವಾಕ್ಯಸ್ಯ ವಿನ್ಯಾಸೋ ಬಂಧ ಉಚ್ಯತೇ ||

ಸೌಭಾಗ್ಯ ಮತ್ತು ಲಾವಣ್ಯ ಇವೆರಡೂ ಗುಣಗಳು. (ಇವುಗಳ ವಿಚಾರ ಮುಂದೆ ಬರುತ್ತದೆ.) ಶಬ್ದ ಮತ್ತು ಅರ್ಥಗಳ ಈ ಗುಣಕ್ಕೆ ಪರಿಪೋಷಕವಾದ ಮತ್ತು ಕಾವ್ಯಕರಣ ವ್ಯಾಪಾರಯುಕ್ತವಾದ ವಾಕ್ಯದ ಗ್ರಥನಕ್ಕೆ 'ಬಂಧ'ವೆಂದು ಹೆಸರು. ಸುಲಭವಾಗಿ ಹೇಳುವುದಾದರೆ, 'ಬಂಧ'ವೆಂಬ ಶಬ್ದಕ್ಕೆ ಕನ್ನಡದಲ್ಲಿ 'ಪ್ರಬಂಧ' ಎಂದರೂ ಇಂಗ್ಲೀಷಿನಲ್ಲಿ 'Composition' ಎಂದರೂ ಏನರ್ಥವೋ ಅದೇ ಅರ್ಥ.

"ತದ್ವಿದಾಹ್ಲಾದಕಾರಿಣಿ" ಎಂಬುದು "ಬಂಧೇ" ಎನ್ನುವುದಕ್ಕೆ ವಿಶೇಷಣ. ಅದರ ಅರ್ಥ 'ಕಾವ್ಯವನ್ನು ತಿಳಿದವರಿಗೆ ಎಂದರೆ ಸಹೃದಯರಿಗೆ ಸಂತೋಷವನ್ನುಂಟು ಮಾಡುವ' ಎಂದು. 'ತದ್ವಿದಾಹ್ಲಾದಕಾರಿತ್ವ' ಎಂದರೆ—

ವಾಚ್ಯವಾಚಕ ವಕ್ರೋಕ್ತಿ ತ್ರಿತಯಾತಿಶಯೋತ್ತರಮ್ |
ತದ್ವಿದಾಹ್ಲಾದಕಾರಿತ್ವಂ ಕಿಮಪ್ಯಾಮೋದ ಸುಂದರಮ್ ||

ಎಂದು ಹೇಳುತ್ತಾನೆ. ಶಬ್ದ ಅರ್ಥ ವಕ್ರತೆ ಇವೆಲ್ಲಕ್ಕಿಂತ ಬೇರೆಯಾದ ಮತ್ತು ಅತಿಶಯವಾದ, ಅವರ್ಣನೀಯವೂ ಸಹೃದಯ ಸಂವೇದ್ಯವೂ ಆಗಿ 'ರಂಜಕತ್ವ' ಎಂದು ಪ್ರಸಿದ್ಧವಾಗಿರುವ ಗುಣವನ್ನು "ತದ್ವಿದಾಹ್ಲಾದಕಾರಿತ್ವ"ವೆಂದು ಹೇಳಬಹುದು. ಇದರಿಂದ ಕುಂತಕನು ಸಹೃದಯರ ಅಭಿಪ್ರಾಯಕ್ಕೆ ಎಷ್ಟು ಬೆಲೆ ಕೊಟ್ಟಿದ್ದನೆಂಬುದು ವ್ಯಕ್ತವಾಗುತ್ತದೆ.

ಕಡೆಯಲ್ಲಿ "ವಕ್ರಕವಿವ್ಯಾಪಾರ ಶಾಲಿನಿ" ಎಂಬ ವಿಶೇಷಣದ ಅರ್ಥವನ್ನು ಪರಿಶೀಲಿಸಬಹುದು. ಇದೇ ಕುಂತಕನ ತತ್ವಕ್ಕೆ ಆಧಾರಭೂತವಾದದ್ದು. ಇದೂ 'ಬಂಧೇ' ಎಂಬುದಕ್ಕೆ ವಿಶೇಷಣ. ವಕ್ರ ಎಂದರೆ ಹೃದ್ಯ ಅಥವಾ ಸುಂದರ ಎಂದು ಅರ್ಥ. ಸುಂದರವಾದ ಕವಿವ್ಯಾಪಾರದಿಂದ ಉತ್ಕೃಷ್ಟವಾಗಿದೆ ಎಂದು ಇದರ ಅರ್ಥ.

ಈ 'ವಕ್ರತೆ' ಅಥವಾ ಸೌಂದರ್ಯವು ಕವಿಯ ಮಾತಿನಲ್ಲಿ ಹೇಗೆ ಬರುತ್ತದೆ ಎಂಬ ಪ್ರಶ್ನೆಗೆ ಕುಂತಕನು ಸೂಕ್ಷ್ಮವಾಗಿ ಉತ್ತರವನ್ನು ಸೂಚಿಸುತ್ತಾನೆ. ಕವಿಯ ಪ್ರತಿಭೆಯು ಸಾಮಾನ್ಯಜನರ ಬುದ್ಧಿಗಿಂತ ಅತಿಶಯವಾದ ಶಕ್ತಿಯುಳ್ಳದ್ದು. ಆದ್ದರಿಂದಲೇ, ಸಾಮಾನ್ಯರಿಗೆ ಆಗುವ ಅನುಭವಗಳಿಂದ ಅವರು ಗ್ರಹಿಸುವ ವಿಚಾರಗಳಿಗಿಂತಲೂ ಗಹನವಾದ ಮತ್ತು ರಮ್ಯವಾದ ವಿಚಾರಗಳನ್ನು ಕವಿಯು ಗ್ರಹಿಸಿ ಅವನ್ನೇ

ಮಿಕ್ಕವರು ಹೇಳುವುದಕ್ಕಿಂತ ರಂಜಕವಾಗಿ ಹೇಳುತ್ತಾನೆ. ಇದೇ ಕವಿಯ ಚಾತುರ್ಯ. ಕವಿಯ ಚಾತುರ್ಯ ಮಾತ್ರವಲ್ಲ—ಎಲ್ಲಾ ಕಲೆಯಲ್ಲಿಯೂ ಹೀಗೆಯೇ.

ಒಟ್ಟಿನಲ್ಲಿ ಕವಿಯ ಮುಖ್ಯವಾದ ಕೆಲಸವು 'ಅಪೂರ್ವ ಮಾರ್ಗಾನುಸರಣ' ಎಂದು ಹೇಳಿದರೆ ತಪ್ಪಾಗಲಾರದು. ಹೇಗೆಂದರೆ ವಿಷಯವು ಎಷ್ಟೇ ನೀರಸವಾಗಿದ್ದರೂ ಅದನ್ನು ಹೇಳುವ ರೀತಿಯಿಂದ ರುಚಿಸುವಂತೆ ಮಾಡಬಹುದು. ಆದರೆ ವಿಷಯವು ಎಷ್ಟೇ ಚೆನ್ನಾಗಿದ್ದರೂ ಅದನ್ನು ಸರಿಯಾಗಿ ಹೇಳದಿದ್ದರೆ ಜನರಿಗೆ ರುಚಿಸದೆ ಹೋಗಬಹುದು. ಆದ್ದರಿಂದ ಯಾವ ವಿಷಯವನ್ನೇ ಆಗಲಿ ಹೇಳುವ ರೀತಿಯಲ್ಲಿ ಒಂದು ವಿಚಿತ್ರ ಮಾರ್ಗಾನುಸರಣವೇ ಕವಿತ್ವದ ತತ್ವ ಎಂದು ಕುಂತಕನು ಅಭಿಪ್ರಾಯ ಪಡುತ್ತಾನೆ. ಈ ಮಾರ್ಗಕ್ಕೆ 'ವಕ್ರಮಾರ್ಗ' ಎಂದು ಹೆಸರಿಡುತ್ತಾನೆ—

"(ವಕ್ರತ್ವಂ ನಾಮ) ಶಾಸ್ತ್ರಾದಿಪ್ರಸಿದ್ಧ ಶಬ್ದಾರ್ಥೋಪನಿಬಂಧವ್ಯತಿರೇಕಿತ್ವಂ." ಅಥವಾ "ಪ್ರಸಿದ್ಧಪ್ರಸ್ಥಾನ ವ್ಯತಿರೇಕಿತ್ವಂ.—"

ಎಂದರೆ, ನಮ್ಮ ಮನಸ್ಸಿನ ಭಾವನೆಗಳನ್ನು ಇತರರಿಗೆ ತಿಳಿಸುವುದಕ್ಕೆ ಸಾಮಾನ್ಯವಾಗಿ ಶಾಸ್ತ್ರದಲ್ಲಿಯೂ ವ್ಯವಹಾರದಲ್ಲಿಯೂ ಯಾವ ಒಂದು ಮಾರ್ಗವನ್ನೂ ಸರಣಿಯನ್ನೂ ಅನುಸರಿಸುತ್ತೇವೋ ಅದಕ್ಕಿಂತ ಬೇರೆಯಾದ ಒಂದು ಅಪೂರ್ವತೆಯಿಂದಲೂ, ಚಮತ್ಕೃತಿ ಮತ್ತು ಆಹ್ಲಾದಕತ್ವದಿಂದಲೂ ಕೂಡಿದ ಒಂದು ಉಕ್ತಿಮಾರ್ಗವೇ 'ವಕ್ರಮಾರ್ಗ'.

ಈ ರೀತಿ 'ವಕ್ರತೆ' ಎಂದರೇನು, ಕಾವ್ಯದಲ್ಲಿ 'ವಕ್ರತೆ'ಯ ಸ್ಥಾನವಾವುದು ಎಂಬೀ ವಿಚಾರಗಳನ್ನು ಚರ್ಚಿಸಿ ಅನಂತರ 'ವಕ್ರತೆ'ಯ ಸೂಕ್ಷ್ಮ ವಿಭಾಗಗಳನ್ನು ಉದಾಹರಣೆಗಳೊಡನೆ ತೋರಿಸಲು ಪ್ರಯತ್ನಿಸುತ್ತಾನೆ. ಈ ಲೆಕ್ಕವಿಲ್ಲದಷ್ಟು ವಿಭಾಗಗಳನ್ನೆಲ್ಲ ವಿವರಿಸುವುದು ಅನಾವಶ್ಯಕ. ಮುಖ್ಯವಿಭಾಗಗಳನ್ನು ಮಾತ್ರ ಪರಿಶೀಲಿಸಬಹುದು.

'ವಕ್ರತೆ'ಯು ಆರು ವಿಧ: ವರ್ಣವಿನ್ಯಾಸವಕ್ರತೆ, ಪದಪೂರ್ವಾರ್ಧವಕ್ರತೆ, ಪದಪರಾರ್ಧವಕ್ರತೆ, ವಾಕ್ಯವಕ್ರತೆ, ಪ್ರಕರಣವಕ್ರತೆ ಮತ್ತು ಪ್ರಬಂಧವಕ್ರತೆ ಎಂದು. ಈ ಆರು ವಿಧವಾದ ವಕ್ರತೆಯಲ್ಲಿ ಪ್ರಾಚೀನರಿಂದ ಉಕ್ತವಾದ ಅಲಂಕಾರಗಳು, ರೀತಿಗಳು, ರಸ ಮತ್ತು ಧ್ವನಿಭೇದಗಳೆಲ್ಲವೂ ಅಂತರ್ಭವಿಸುತ್ತವೆ.

**೧. ವರ್ಣವಿನ್ಯಾಸವಕ್ರತೆ.**—ಹಿಂದಿನವರು ಶಬ್ದಾಲಂಕಾರವೆಂದು ಯಾವುದನ್ನು ಕರೆಯುತ್ತಾರೆಯೋ ಅದೆಲ್ಲ ವರ್ಣವಿನ್ಯಾಸವಕ್ರತೆಯಲ್ಲಿ ಅಂತರ್ಭಾವವನ್ನು ಹೊಂದುತ್ತದೆ.

**೨. ಪದಪೂರ್ವಾರ್ಧವಕ್ರತೆ.**—ಪದದ ಪೂರ್ವಾರ್ಧ, ಪ್ರಾತಿಪದಿಕ ಅಥವಾ ಧಾತು. ಇವುಗಳ ವಿನ್ಯಾಸದಲ್ಲಿನ ವೈಚಿತ್ರ್ಯಕ್ಕೆ ಪದಪೂರ್ವಾರ್ಧವಕ್ರತೆ ಎಂದು ಹೆಸರು. ಈ ವಕ್ರತೆಯಲ್ಲಿ ರೂಢಿವೈಚಿತ್ರ್ಯವಕ್ರತೆ, ಪರ್ಯಾಯವಕ್ರತೆ, ಉಪಚಾರ ವಕ್ರತೆ, ವಿಶೇಷಣವಕ್ರತೆ ಎಂದು ಮುಂತಾಗಿ ಅನೇಕ ಭೇದಗಳಿವೆ. ಇದರಲ್ಲಿ ಧ್ವನಿ ಮತ್ತು ಗುಣೀ ಭೂತ ವ್ಯಂಗ್ಯಗಳ ಭೇದಗಳೆಲ್ಲವೂ ಅಂತರ್ಭಾವವನ್ನು ಹೊಂದುತ್ತವೆ.

**೩. ಪದಪರಾರ್ಧವಕ್ರತೆ.**—ಪದದ ಪರಾರ್ಧ ಎಂದರೆ ಪ್ರತ್ಯಯ. ಆ ಪ್ರತ್ಯಯವನ್ನು ಆಶ್ರಯಿಸಿರುವ ವಕ್ರತೆಗೆ 'ಪದಪರಾರ್ಧವಕ್ರತೆ'ಯೆಂದು ಹೆಸರು. ರಸಪರಿಪೋಷಕ್ಕೋಸ್ಕರ ಅನುಸರಿಸಿರುವ ಕೆಲವು ವಿಚಿತ್ರವಾದ ಉಕ್ತಿಪ್ರಕಾರಗಳು ಇಲ್ಲಿ ವಿವರಿಸಲ್ಪಟ್ಟಿವೆ.

**೪. ವಾಕ್ಯವಕ್ರತೆ.**—ವಾಕ್ಯವಕ್ರತೆಯಲ್ಲಿ ಸಾವಿರಾರು ಭೇದಗಳಿವೆ. ಇಲ್ಲಿ ಅರ್ಥಾಲಂಕಾರಗಳೆಲ್ಲವೂ ಅಂತರ್ಭವಿಸುತ್ತವೆ.

**೫. ಪ್ರಕರಣವಕ್ರತೆ.**—ವಾಕ್ಯದ ಜೋಡಣೆಯಲ್ಲಿ ಹೇಗೆ 'ವಕ್ರತೆ'ಯು ಸಾಧ್ಯವೋ ಹಾಗೆಯೇ ಒಂದು ಪ್ರಬಂಧದಲ್ಲಿ ಬರುವ ಅನೇಕ ಸನ್ನಿವೇಶಗಳನ್ನು ಚಿತ್ರಿಸುವುದರಲ್ಲಿಯೂ ಒಂದು ವಿಧವಾದ 'ವಕ್ರತೆ'ಯು ಸಾಧ್ಯ. ಭಾಸ, ಕಾಳಿದಾಸ ಮೊದಲಾದ ಮಹಾಕವಿಗಳು ಪುರಾಣಪ್ರಸಿದ್ಧವಾದ ಕಥೆಗಳನ್ನು ಅನುಸರಿಸಿ ಕಾವ್ಯ ನಿರ್ಮಾಣಮಾಡಿದರೂ ಅನೇಕ ಪ್ರಕರಣಗಳನ್ನು ರಸಪರಿಪೋಷಕ್ಕನುಗುಣವಾಗು ವಂತೆ ಮಾರ್ಪಡಿಸಿರುತ್ತಾರೆ.* ಇದೇ ಪ್ರಕರಣ ವಕ್ರತೆ.

**೬. ಪ್ರಬಂಧ ವಕ್ರತೆ.**—ಪ್ರಬಂಧದಲ್ಲಿ ಮೇಲೆ ಹೇಳಿದ ಐದು ವಿಧವಾದ ವಕ್ರತೆಗಳನ್ನು ಆಶ್ರಯಿಸಿ ಕವಿಯು ಚಮತ್ಕಾರವನ್ನೂ ರಸಪರಿಪೋಷವನ್ನೂ ಉಂಟು ಮಾಡಿದ್ದರೂ ಒಟ್ಟಿನಲ್ಲಿ ಆ ಗ್ರಂಥದಿಂದ ಒಂದು ಮಹತ್ತತ್ತ್ವವು ವ್ಯಕ್ತವಾಗುವಂತೆ ಮಾಡಿರುತ್ತಾನೆ. ಎಂದರೆ ಪ್ರಬಂಧದಲ್ಲಿ ಅಲ್ಲಲ್ಲಿ ವರ್ಣನೆಗಳೂ ವಿಧವಿಧವಾದ ಸನ್ನಿವೇಶಗಳೂ ಶಬ್ದಚಮತ್ಕಾರಗಳೂ ಅರ್ಥಾಲಂಕಾರಗಳೂ ಕಂಡುಬಂದರೂ, ಮತ್ತು ಕಾವ್ಯವು ಸ್ಥೂಲವಾಗಿ ಯಾವುದೋ ಒಂದು ನಾಯಕ ನಾಯಿಕೆಯರ ವ್ಯವಹಾರವಾದರೂ, ಇವೆಲ್ಲವೂ ಕಾವ್ಯದಿಂದ ಒಟ್ಟಿನಲ್ಲಿ ಹೊರಪಡುವ ತತ್ತ್ವಕ್ಕೆ ಸಾಧನಗಳು. ಈ ತತ್ತ್ವವಿಲ್ಲದಿದ್ದರೆ ಕಾವ್ಯವು ಜೀವನವನ್ನು ಉತ್ತಮಗೊಳಿಸುವುದಕ್ಕೆ ಅರ್ಹವಲ್ಲ. ಆದ್ದರಿಂದ ಅಪ್ರಯೋಜಕ. ಇಂಥ ಉದಾತ್ತತತ್ತ್ವ ಅಥವಾ ನೀತಿಯ ಸುಂದರ ಪ್ರತಿಪಾದನೆಯೇ ಪ್ರಬಂಧವಕ್ರತೆ.

* ಉದಾತ್ತರಾಘವದಲ್ಲಿ ಮಾಯಾಮೃಗ ವೃತ್ತಾಂತ, ಶಾಕುಂತಲದ ದೂರ್ವಾಸಪ್ರಕರಣ., ಪ್ರತಿಮಾನಾಟಕದ ಪ್ರತಿಮಾಗೃಹ, ಮತ್ತು ದಶರಥನ ಶಾಪದ ಪ್ರಕರಣ ಇತ್ಯಾದಿ.

ಅಂತೂ ಕವಿಗಳು ಕಾವ್ಯದಲ್ಲಿ ಎಷ್ಟು ವಿಧವಾದ ಸಹೃದಯಾಹ್ಲಾದಕವಾದ ಚಮತ್ಕಾರಗಳನ್ನು ಉಂಟುಮಾಡುತ್ತಾರೆಯೋ ಅದೆಲ್ಲವನ್ನೂ ಕುಂತಕನು ಆರು ವಿಧವಾದ ವಕ್ರತೆಗಳಲ್ಲಿ ಅಡಗಿಸಿದ್ದಾನೆ. ಹೀಗೆ ರಸ, ರೀತಿ, ಅಲಂಕಾರ, ಧ್ವನಿ ಇವುಗಳನ್ನು ಆಶ್ರಯಿಸಿ ಉಂಟಾಗುವ ಚಮತ್ಕಾರಗಳೆಲ್ಲವನ್ನೂ ವಕ್ರೋಕ್ತಿಯೊಂದರಲ್ಲೇ ಸೇರಿಸುವುದರಲ್ಲಿ ಕುಂತಕನ ಅಭಿಪ್ರಾಯವೇನು? ಕುಂತಕನ ಮತಕ್ಕನುಸಾರವಾಗಿ ಕಾವ್ಯದಲ್ಲಿ ರೀತಿ, ರಸ, ಅಲಂಕಾರ, ಧ್ವನಿ, ಇವುಗಳ ಸ್ಥಾನವಾವುದು? ಈ ವಿಚಾರಗಳನ್ನು ಚರ್ಚಿಸಿದರೆ 'ವಕ್ರೋಕ್ತಿ' ಮಾರ್ಗದ ಪರಿಚಯುವನ್ನು ತಕ್ಕ ಮಟ್ಟಿಗೆ ಮಾಡಿಕೊಂಡ ಹಾಗಾಗುತ್ತದೆ.

ಮೇಲೆ ಸೂಚಿಸಿರುವಂತೆ ಕುಂತಕನ ಮತಕ್ಕನುಸಾರವಾಗಿ ಅಲಂಕಾರಗಳೆಲ್ಲವೂ ವಾಕ್ಯವಕ್ರತೆಯ ಭೇದಗಳಾಗಿ ಪರಿಣಮಿಸುತ್ತವೆ. ರೀತಿ, ರಸ, ಧ್ವನಿ ಇವುಗಳ ಹಾಗೆ ಅಲಂಕಾರಗಳೂ ಒಂದು ವಿಧವಾದ ವಕ್ರತೆಗೆ ಸಾಧಕವಾಗಿ ಸಹೃದಯರಿಗೆ ಸಂತೋಷವುಂಟಾಗುವಂತೆ ಕಾವ್ಯದ ರಮಣೀಯತೆಗೆ ಕಾರಣವಾಗುತ್ತವೆ. ಇದರಿಂದ ಕಾವ್ಯದಲ್ಲಿ ಅಲಂಕಾರವೇ ಮುಖ್ಯ ಎಂದು ಹೇಳುವ ಆಲಂಕಾರಿಕರ ಮಾತು ಸುಳ್ಳಾಯಿತು. ಬಾಹ್ಯವಾದ ಅಲಂಕಾರಗಳೇ ಕಾವ್ಯದ ಜೀವವೆಂದು ಹೇಳುವುದನ್ನು ಬಿಟ್ಟು ಇವೂ ಕಾವ್ಯದ ರಮಣೀಯತೆಗೆ ಕಾರಣವಾಗುತ್ತವೆ; ಆದರೆ ಆ ರಮಣೀಯತೆಗೆ ಅವುಗಳಿಗೆಲ್ಲಕ್ಕೂ ಮೂಲಭೂತವಾದ ವಕ್ರತೆಯೇ ಕಾರಣ ಎಂದು ಕುಂತಕನು ಅಭಿಪ್ರಾಯಪಡುತ್ತಾನೆ. ಈ ವಿಷಯದಲ್ಲಿ ಭಾಮಹನ ಮತವೂ ಇವನ ಮತವೂ ಒಂದೇ ಎಂದು ಹೇಳಬಹುದು. ಅಲಂಕಾರಗಳ ರಮಣೀಯತೆಗೆ ಮೂಲಭೂತವಾದ ವಕ್ರತೆಯೇ ಕಾರಣವೆಂದು ಪರಿಗಣಿಸುವುದರಿಂದ ಇವನೂ ಭಾಮಹನ ಹಾಗೆಯೇ ಸ್ವಭಾವೋಕ್ತಿಯನ್ನು ಅಲಂಕಾರವೆಂದು ಹೇಳುವುದಿಲ್ಲ.

ಅಲಂಕಾರಗಳ ಪೈಕಿ ಪ್ರೇಯಸ್, ರಸವತ್, ಊರ್ಜಸ್ವಿ, ಸಮಾಹಿತ, ಉದಾತ್ತ ಇವುಗಳ ವಿಚಾರದಲ್ಲಿ ಭಾಮಹನ ಮತವನ್ನು ಖಂಡಿಸಿ ಕುಂತಕನು ಅವೆಲ್ಲ ಅಲಂಕಾರಗಳಲ್ಲವೆಂದು ನಿರ್ಣಯಿಸುತ್ತಾನೆ. ಉಪಮೇಯೋಪಮಾ, ತುಲ್ಯಯೋಗಿತಾ ಇವುಗಳನ್ನು ಉಪಮೆಯಲ್ಲೇ ಸೇರಿಸುತ್ತಾನೆ. ದೀಪಕದ ವಿಚಾರವಾಗಿ ಭಾಮಹನ ಲಕ್ಷಣವನ್ನೂ ವಿಭಾಗವನ್ನೂ ಖಂಡಿಸುತ್ತಾನೆ.

ರೀತಿಯ ವಿಷಯದಲ್ಲಿ ಕುಂತಕನ ಮತವು ಬಹಳ ವಿಚಿತ್ರವಾಗಿದೆ. ಇವನು ರೀತಿಯ ಲಕ್ಷಣವನ್ನೂ ವಿಭಾಗವನ್ನೂ ಎಲ್ಲರಿಗಿಂತಲೂ ವಿಲಕ್ಷಣವಾಗಿ ರಚಿಸುತ್ತಾನೆ. ವೈದರ್ಭೀ ಗೌಡೀಯಾ ಈ ಎರಡು ರೀತಿಗಳಿಗೂ ಭೇದ ಗ್ರಹಣಮಾಡುವುದರಲ್ಲಿ ಇಷ್ಟವಿಲ್ಲದೆ ಭಾಮಹನು ಮೊದಲೇ ಒಂದು ಚರ್ಚೆಯನ್ನು ಪ್ರಾರಂಭಿಸಿ ದೇಶ

ಭೇದಕ್ಕನುಸಾರವಾಗಿ ರೀತಿಭೇದಗಳನ್ನು ಅಂಗೀಕರಿಸುವುದು ಅನ್ಯಾಯವೆಂದು ತನ್ನ ಮತವನ್ನು ಸೂಚಿಸಿದ್ದನು. ಆದರೆ ಅವನ ಮತವು ಊರ್ಜಿತವಾಗದೆ ಪುನಃ ದಂಡಿಯು ಈ ವಿಚಾರವನ್ನು ವಿಮರ್ಶಿಸಿ, "ದೇಶಭೇದಕ್ಕನುಸಾರವಾಗಿ ರೀತಿಭೇದಗಳನ್ನು ಅಂಗೀಕರಿಸುವುದಿಲ್ಲ; ದೇಶದ ಹೆಸರನ್ನು ಉಪಯೋಗಿಸಿ ರೀತಿಗಳಿಗೆ ಹೆಸರಿಟ್ಟಾಕ್ಷಣ ಆಯಾ ದೇಶದವರು ಆಯಾ ರೀತಿಗಳಲ್ಲೇ ಕಾವ್ಯಗಳನ್ನು ರಚಿಸುತ್ತಾರೆ ಎಂದು ಅರ್ಥವಲ್ಲ; ಮೊದಲು ಆ ರೀತಿಗಳು ಆ ದೇಶಗಳಲ್ಲಿ ಬಳಕೆಯಲ್ಲಿದ್ದದ್ದರಿಂದ ಆ ಹೆಸರು ಬಂದಿರಬಹುದು; ಆದರೆ ನಿಜವಾಗಿಯೂ ರೀತಿಗಳಿಗೆ ಭೇದವು ಅವುಗಳಲ್ಲಿ ಅಡಗಿರುವ ಗುಣಗಳಿಗನುಸಾರವಾಗಿದೆ" ಎಂದು ವಾದಿಸಿ ಪುನಃ ಇದೇ ರೀತಿಗಳನ್ನೇ ಸ್ಥಾಪಿಸಿದನು. ಅನಂತರ ಕುಂತಕನ ಕಾಲದ ವರೆಗೆ ರೀತಿಯ ವಿಚಾರವಾಗಿ ವಿವಾದವಿರಲಿಲ್ಲ. ವೈದರ್ಭೀ ಗೌಡೀಯಾ ಇವುಗಳ ಜತೆಗೆ ಪಾಂಚಾಲೀ ಲಾಟೀ ರೀತಿಗಳು ಸೇರಿಸಲ್ಪಟ್ಟವು. ಕುಂತಕನು ರೀತಿಯ ವಿಚಾರವಾದ ಚರ್ಚೆಯನ್ನು ಪುನಃ ಪ್ರಾರಂಭಿಸಿ ರೀತಿಗಳು ದೇಶಧರ್ಮಗಳಲ್ಲ ಎಂದು ಘೋಷಿಸಿದನು. ರೀತಿಯು ದೇಶ ಧರ್ಮವಲ್ಲದ್ದರಿಂದ ರೀತಿಯ ಹೆಸರನ್ನು ದೇಶದ ಹೆಸರಿಗನುಸಾರವಾಗಿ ಇಡುವುದು ಅನ್ಯಾಯ. ಮತ್ತು ವೈದರ್ಭೀ ರೀತಿಯನ್ನು ಉತ್ತಮವನ್ನಾಗಿ ಅಂಗೀಕರಿಸಿ ಗೌಡೀಯಾ ಪಾಂಚಾಲೀ ರೀತಿಗಳನ್ನು ಮಧ್ಯಮ ಮತ್ತು ಅಧಮವನ್ನಾಗಿ ಪರಿಗಣಿಸುವುದು ತಪ್ಪು. ಉತ್ತಮ ಕಾವ್ಯಲಾಭವೇ ಕವಿಯ ಆಶಯವಾಗಿರುವುದರಿಂದ ಅದನ್ನು ರಚಿಸುವುದಕ್ಕೆ ಅನುಕೂಲಗಳನ್ನು ಕಲ್ಪಿಸುವುದು ಸರಿ; ಮಧ್ಯಮ ಮತ್ತು ಅಧಮ ರೀತಿಗಳು ಹೀಗಿರಬೇಕು ಎಂದು ನಿಯಮಗಳನ್ನು ರಚಿಸುವುದರಲ್ಲಿ ಅರ್ಥವಿಲ್ಲ. ಉತ್ತಮ ಕಾವ್ಯರಚನೆಯೇ ಕವಿಯ ಧ್ಯೇಯ; ಮಧ್ಯಮ ಮತ್ತು ಅಧಮ ರೀತಿಯಲ್ಲಿ ಕಾವ್ಯವನ್ನು ರಚಿಸಿ ಕ್ರಮೇಣ ಉತ್ತಮ ಕಾವ್ಯಗಳನ್ನು ಬರೆಯಲು ಶಕ್ತನಾಗುತ್ತಾನೆ ಎಂಬ ಮತವೂ ತಪ್ಪು. ಈ ರೀತಿ ಚರ್ಚಿಸಿ ಕುಂತಕನು ಮುಂದೆ ಮಮ್ಮಟನಿಂದ ಬರಬೇಕಾಗಿದ್ದ ರೀತಿ ತತ್ವದ ಖಂಡನೆಗೆ ಮುನ್ನುಡಿಯನ್ನು ಬರೆದನು.

ಕುಂತಕನ ಮತದ ಪ್ರಕಾರ ರೀತಿಯು ಕವಿಯ ಸ್ವಭಾವಕ್ಕನುಸಾರವಾಗಿ ಬೇರೆಯಾಗುತ್ತದೆ. ಎಂದರೆ ಅಸಂಖ್ಯಾತರಾದ ಕವಿಗಳ ಸ್ವಭಾವಕ್ಕನುಸಾರವಾಗಿ ಅಸಂಖ್ಯಾತವಾದ ರೀತಿಗಳು ಸಂಭವಿಸುತ್ತವೆಂದು ತಾತ್ಪರ್ಯವಲ್ಲ. ವಸ್ತುತಃ ಅಸಂಖ್ಯಾತವಾದರೂ ರೀತಿಗಳನ್ನು ಕವಿಯ ಮನೋಧರ್ಮ, ಶಕ್ತಿ, ವ್ಯುತ್ಪತ್ತಿ, ಅಭ್ಯಾಸಗಳಿಗನುಗುಣವಾಗಿ ಮೂರು ವಿಧವಾಗಿ ವಿಭಾಗಿಸಬಹುದು. ಈ ಮೂರು ರೀತಿಗಳಲ್ಲಿ ಇದು ಚೆನ್ನಾಗಿದೆ ಇದು ಚೆನ್ನಾಗಿಲ್ಲ ಎಂಬ ಭೇದವಿಲ್ಲ. ಮೂರೂ ಸಕ್ಕರೆ, ಹಾಲು, ಕಬ್ಬು ಇವುಗಳಿದ್ದ ಹಾಗೆ. ಅವುಗಳಿಗೆ ತಾರತಮ್ಯವಿದ್ದರೂ ಇದು

ರುಚಿ, ಇದು ರುಚಿಯಿಲ್ಲ ಎಂದು ಹೇಳುವ ಹಾಗಿಲ್ಲ. ಇಂತಹ ಮೂರು ರೀತಿಗಳಿಗೂ ಸುಕುಮಾರ, ವಿಚಿತ್ರ ಮತ್ತು ಮಿಶ್ರ (ಅಂದರೆ ಮೊದಲಿನ ಎರಡು ರೀತಿಗಳ ಬೆರಕೆ) ಎಂದು ಹೆಸರಿಡುತ್ತಾನೆ. ಈ ಮೂರು ರೀತಿಗಳಿಗೂ ಸ್ವರೂಪದಾಯಕಗಳಾಗಿ ನಾಲ್ಕು ಗುಣಗಳಿವೆ. ಅವು ಯಾವುವೆಂದರೆ, ಮಾಧುರ್ಯ, ಪ್ರಸಾದ, ಲಾವಣ್ಯ, ಮತ್ತು ಆಭಿಜಾತ್ಯ. ಇವು ವಿಶೇಷ ಗುಣಗಳು. ಈ ಗುಣಗಳು ಒಂದೊಂದು ರೀತಿಗೆ ಅನ್ವಯಿಸುವಾಗ ಒಂದೊಂದು ಅರ್ಥವನ್ನು ಕೊಡುತ್ತವೆ. ಎಂದರೆ ಮಾಧುರ್ಯಗುಣವು ಮೂರು ರೀತಿಗಳಲ್ಲಿದ್ದರೂ ಸುಕುಮಾರರೀತಿಗೆ ಅನ್ವಯಿಸುವಾಗ ಒಂದರ್ಥವನ್ನೂ ವಿಚಿತ್ರರೀತಿಗೆ ಅನ್ವಯಿಸುವಾಗ ಮತ್ತೊಂದು ಅರ್ಥವನ್ನೂ ಮಿಶ್ರರೀತಿಗೆ ಅನ್ವಯಿಸುವಾಗ ಬೇರೊಂದು ಅರ್ಥವನ್ನೂ ಕೊಡುತ್ತದೆ. ಈ ನಾಲ್ಕು ಗುಣಗಳಲ್ಲದೆ ಸಾಧಾರಣ ಗುಣಗಳೆಂಬುದಾಗಿ ಸೌಭಾಗ್ಯ ಮತ್ತು ಔಚಿತ್ಯ ಇವೆರಡನ್ನೂ ವಿವರಿಸುತ್ತಾನೆ. ಈ ಸಾಧಾರಣ ಗುಣಗಳಿಗೂ ವಿಶೇಷ ಗುಣಗಳಿಗೂ ಭೇದವು ಅವನಿಗೇ ಗೊತ್ತಿರಬೇಕು.

ಕುಂತಕನಿಗೆ ರಸ ಮತ್ತು ಧ್ವನಿಗಳ ತತ್ವವು ತಿಳಿದಿದ್ದರೂ ಅವನು ಅವುಗಳಿಗೆ ಮಿಕ್ಕವರು ಕೊಟ್ಟ ಉತ್ಕೃಷ್ಟಸ್ಥಾನವನ್ನು ಕೊಡಲಿಲ್ಲ. ಅವನಿಗೆ ಇವೂ ವಕ್ರತೆಯ ಪ್ರಕಾರಗಳು ಅಥವಾ ಭೇದಗಳು ಮಾತ್ರ. ಆದರೂ ಅಲಂಕಾರಕ್ಕಿಂತ ರಸದ ಉತ್ಕರ್ಷವನ್ನು ಒಪ್ಪಿಯೋ ಏನೋ ರಸಕ್ಕೆ ಸುಕುಮಾರ ಮತ್ತು ವಿಚಿತ್ರರೀತಿಗಳಲ್ಲಿ ಒಂದು ವಿಶೇಷವಾದ ಪ್ರಾಮುಖ್ಯತೆಯನ್ನು ಕೊಟ್ಟಿರುತ್ತಾನೆ. ಈ ಪ್ರಾಮುಖ್ಯತೆಯು ಧ್ವನಿಗೂ ಇಲ್ಲ. ಧ್ವನಿಯ ಅನೇಕ ವಿಧವಾದ ಭೇದಗಳು ವಕ್ರತೆಯ ಭೇದಗಳಲ್ಲಿ ಅಂತರ್ಭಾವವನ್ನು ಹೊಂದುತ್ತವೆ.

ಕುಂತಕನ ಮತವನ್ನು ವಿಮರ್ಶಿಸಿ ಬೆಲೆಕಟ್ಟುವುದು ಬಹಳ ಕಷ್ಟವಾದ ಕೆಲಸ. ಒಂದು ಕಡೆ ಅವನ ವಿಚಿತ್ರವಾದ ವಕ್ರೋಕ್ತಿತತ್ವವು ಸಂಪೂರ್ಣವಾಗಿ ಖಂಡಿಸಲ್ಪಟ್ಟಿದೆ; ಮಹಿಮಭಟ್ಟ, ವಿಶ್ವನಾಥ, ಮೊದಲಾದವರು ಈ 'ವಕ್ರೋಕ್ತಿ'ಯು ತಲೆಯೆತ್ತದ ಹಾಗೆ ಮಾಡಲು ಪ್ರಯತ್ನಪಟ್ಟಿದ್ದಾರೆ. ಇನ್ನೊಂದುಕಡೆ ಧ್ವನಿ ಮತಕ್ಕೆ ಸಂಪೂರ್ಣ ಸಮ್ಮತಿಯನ್ನು ಕೊಡದ ಕೆಲವರೂ, ಮಮ್ಮಟ, ರುಯ್ಯಕ ಮುಂತಾದವರೂ ಇವನ ಮತದ ಮುಖ್ಯ ತತ್ವವಾದ 'ವಕ್ರೋಕ್ತಿ'ಯನ್ನು ತಳ್ಳಿದರೂ ಮಿಕ್ಕ ಬಹಳ ವಿಚಾರಗಳಲ್ಲಿ ಇವನನ್ನು ಅನುಸರಿಸಿ ಇವನ ಮತವನ್ನು ಒಪ್ಪಿರುತ್ತಾರೆ. ಅಲಂಕಾರಗಳ ವಿಚಾರವಾಗಿ ಧ್ವನಿಮಾರ್ಗದ ಪ್ರವರ್ತಕರ ಅಭಿಪ್ರಾಯಗಳನ್ನು ಒಪ್ಪದೆ ಕುಂತಕನ ಮತವನ್ನು ಸ್ವೀಕರಿಸಿರುತ್ತಾರೆ. ಒಟ್ಟಿನಲ್ಲಿ ಕಾವ್ಯವಿಮರ್ಶೆಯಲ್ಲಿ ಕುಂತಕನ ಮತವನ್ನು ಯಾರೂ ಒಪ್ಪದಿರುವಹಾಗಿಲ್ಲ. ರಸಿಕ ಶಿರೋಮಣಿಗಳಲ್ಲಿ

ಕುಂತಕನೊಬ್ಬನೆಂಬುದು ಸರ್ವಸಮ್ಮತವಾದ ವಿಷಯ. ಅವನ ಗ್ರಂಥದಲ್ಲಿ ಉದಾಹರಣೆಗಾಗಿ ತೆಗೆದುಕೊಂಡ ಕೆಲವು ಶ್ಲೋಕಗಳ ವಿಮರ್ಶೆಯನ್ನೋದಿದರೆ ಸಾಕು, ಈ ವಿಚಾರವು ವ್ಯಕ್ತವಾಗುತ್ತದೆ.

ಸೂಕ್ಷ್ಮವಾಗಿ ಪರಿಶೀಲಿಸಿದರೆ ಕುಂತಕನ ವಕ್ರೋಕ್ತಿ ತತ್ವವು ಇವರೆಲ್ಲರೂ ಹೇಳುವಷ್ಟು ವಿಚಿತ್ರವಾಗಿ ತೋರುವುದಿಲ್ಲ. ಈ ಮಾರ್ಗವನ್ನು ಉಪದೇಶಿಸುವುದರಲ್ಲಿ ಕುಂತಕನ ಆಶಯವನ್ನು ಗಮನಿಸಿದರೆ ಆಗ ನಾವು ಅದರ ಬೆಲೆಯನ್ನು ತಿಳಿಯಬಹುದು. ಅಲಂಕಾರ ಮಾರ್ಗದವರು ಅಲಂಕಾರಗಳ ಬೆಲೆಯನ್ನು ಕೊಂಡಾಡುತ್ತಾ ಅಲಂಕಾರಗಳೇ ಕಾವ್ಯದ ಜೀವವೆಂದು ವಾದಿಸುತ್ತಿದ್ದರು; ರಸ ರೀತಿ ಇವೆಲ್ಲವನ್ನೂ ಅಲಂಕಾರಗಳಲ್ಲಿಯೇ ಸಂಗ್ರಹಿಸುತ್ತಿದ್ದರು. ಕಾವ್ಯನಿರ್ಮಾಣವನ್ನು ಹೂವಿನ ಮಾಲೆಯನ್ನು ಕಟ್ಟುವಿಕೆಗೂ, ಕವಿಯನ್ನು ಹೂವನ್ನು ಕಟ್ಟುವವನಿಗೂ, ಅಲಂಕಾರಗಳನ್ನು ಹೂವುಗಳಿಗೂ ಹೋಲಿಸಿ, ಕವಿಯ ಕೆಲಸವು ಈ ಪುಷ್ಪರೂಪವಾದ ಅಲಂಕಾರಗಳನ್ನು ಆಯ್ದು ಯಾವ ಯಾವ ಹೂವನ್ನು ಯಾವ ಯಾವ ಜಾಗದಲ್ಲಿಟ್ಟು ಕಟ್ಟಿದರೆ ಚೆನ್ನಾಗುತ್ತೋ ಹಾಗೆ ಕಟ್ಟುವುದರಲ್ಲಿ ಮಾತ್ರ ಎಂದು ಹೇಳುತ್ತಿದ್ದರು. ಇದೊಂದು ವಾದ. ಇನ್ನೊಂದು ಕಡೆ ರಸವೇ ಕಾವ್ಯದ ಜೀವವೆಂದು ಇನ್ನು ಕೆಲವರು ಹೇಳುತ್ತಿದ್ದರು. ಈ ರಸೋತ್ಪತ್ತಿಗೆ ಕಾರಣವಾದ ವಿಭಾವ, ಅನುಭಾವ, ವ್ಯಭಿಚಾರಿ ಭಾವಗಳನ್ನು ಕಾವ್ಯದಲ್ಲಿ ಸರಿಯಾಗಿ ಔಚಿತ್ಯದಿಂದ ಪ್ರಯೋಗಿಸುವುದು ಕವಿಯ ಕೆಲಸವೆಂದು ಇವರ ಭಾವನೆ. ಮತ್ತೊಬ್ಬರು ರೀತಿಯೇ ಕಾವ್ಯದ ಆತ್ಮ; ವಿಷಯ ಹೇಗಾದರೂ ಇರಲಿ, ಸರಿಯಾದ ರೀತಿಯಲ್ಲಿ (ವೈದರ್ಭೀ ರೀತಿಯಲ್ಲಿ) ಅದನ್ನು ಕವಿಯು ಹೇಳಬೇಕು. ಮಾಧುರ್ಯ, ಓಜಸ್ಸು, ಪ್ರಸಾದ, ಸಮತೆ, ಇತ್ಯಾದಿ ಹತ್ತು ಗುಣಗಳೂ ಕಾವ್ಯದಲ್ಲಿ ತುಂಬಿಲ್ಲದಿದ್ದರೆ ಅದು ಕಾವ್ಯವೇ ಅಲ್ಲ. ಅಲಂಕಾರಗಳೆಲ್ಲವೂ ಕಾವ್ಯಕ್ಕೆ ಹೆಚ್ಚು ಮೆಚ್ಚುಗೆಯನ್ನು ಸಂಪಾದಿಸಬಹುದು. ಆದರೆ ಗುಣವಿಶಿಷ್ಟವಾದ ಪದರಚನೆಯೇ ಜೀವ ಎಂದು ಇವರ ಅಭಿಪ್ರಾಯ. ಹೀಗೆಯೇ ಧ್ವನಿಮಾರ್ಗದ ಪ್ರವರ್ತಕರೂ ಕೂಡ ಮಿಕ್ಕ ಮಾರ್ಗಗಳ ತತ್ವವನ್ನು ಖಂಡಿಸಿ 'ಧ್ವನಿ' ಅಥವಾ ವ್ಯಂಗ್ಯವೇ ಕಾವ್ಯದಲ್ಲಿ ಸಾರಭೂತವಾದದ್ದು ಎಂದು ಸಾರುವುದಕ್ಕೆ ಮೊದಲು ಮಾಡುತ್ತಿದ್ದರು.

ಹೀಗೆ ಒಂದು ಮಾರ್ಗದವರು ಇನ್ನೊಂದು ಮಾರ್ಗದವರ ಮತವನ್ನು ಖಂಡಿಸಿ ತಮ್ಮ ಅಭಿಪ್ರಾಯವನ್ನು ಸ್ಥಿರಪಡಿಸುತ್ತಿದ್ದರೂ, ಸಂಪೂರ್ಣವಾಗಿ ಯಾರೊಬ್ಬರೂ ಮಿಕ್ಕವರ ಮತಗಳನ್ನು ತೊಡೆದುಹಾಕಿ ಸ್ಥಿರವಾದ ಒಂದು ಕಾವ್ಯತತ್ವವನ್ನು ಪ್ರಚುರಪಡಿಸಲು ಸಾಧ್ಯವಾಗಲಿಲ್ಲ. ಪ್ರತಿಯೊಂದು ಮಾರ್ಗದಲ್ಲಿಯೂ ಸ್ವಲ್ಪಸ್ವಲ್ಪ ಸತ್ವವಿದ್ದದ್ದರಿಂದ ಏಕಮುಖತೆಯು ಸಾಧ್ಯವಾಗಲಿಲ್ಲ. ಆನೆಯನ್ನು ನೋಡಲು

ಹೋದ ಕುರುಡರ ಹಾಗೆ ಒಬ್ಬೊಬ್ಬರೂ ಸತ್ಯದ ಒಂದೊಂದು ಅಂಶವನ್ನು ತಿಳಿದುಕೊಂಡು ಮಿಕ್ಕವರೊಡನೆ ವಾದಿಸುತ್ತಿದ್ದರು. ಇದೆಲ್ಲವನ್ನೂ ನೋಡಿ ಕುಂತಕನು ಈ ಮತಗಳೆಲ್ಲವನ್ನೂ ಒಟ್ಟುಗೂಡಿಸಿ, ಪ್ರತಿಯೊಂದು ಅಂಶದ ಪ್ರಭಾವವನ್ನೂ ಅರಿತು ಒಂದು ವಿಶಾಲವಾದ, ಎಲ್ಲ ತತ್ವಗಳ ಸತ್ವವನ್ನೂ ಒಳಗೊಂಡ ಕಾವ್ಯತತ್ವವನ್ನು ಪ್ರಕಾಶಪಡಿಸಲು ಪ್ರಯತ್ನಪಟ್ಟನು. ಕುಂತಕನಿಗೆ ಅಲಂಕಾರ, ರಸ, ರೀತಿ, ಧ್ವನಿ ಇವೆಲ್ಲದರ ಬೆಲೆಯೂ ಗೊತ್ತು. ಇವೆಲ್ಲ ಕಾವ್ಯದ ರಮ್ಯತೆಗೆ ಕಾರಣವೆಂಬುದೂ ಗೊತ್ತು. ಆದರೆ ಇವೆಲ್ಲಕ್ಕೂ ಸಾಧಾರಣ ಧರ್ಮವನ್ನು ಹುಡುಕಿ ಅದನ್ನು ಪ್ರಕಾಶಪಡಿಸಬೇಕೆಂಬುದು ಅವನ ಆಶಯ. ಇವೆಲ್ಲವನ್ನೂ ಬಿಟ್ಟು ವಕ್ರೋಕ್ತಿ ಎಂಬ ಒಂದು ಹೊಸ ಪದಾರ್ಥವನ್ನು ಕಂಡುಹಿಡಿದು ಅದೇ ಕಾವ್ಯದ ಜೀವ, ಇವೆಲ್ಲ ಅಲ್ಲ, ಎಂದು ಅವನು ಹೇಳುವುದಿಲ್ಲ. ಆದ್ದರಿಂದ ಇವನ ವಕ್ರೋಕ್ತಿ ಮತವು ಮಿಕ್ಕ ಮಾರ್ಗಗಳ ಸಮುಚ್ಚಯವಿದ್ದ ಹಾಗೆ; ತಿರುಳಾದ ಎಲ್ಲ ಅಂಶಗಳ ಸಂಗ್ರಹವಿದ್ದ ಹಾಗೆ. ಈ ರೀತಿ ಗ್ರಹಿಸುವುದರಿಂದ ಕುಂತಕನ ವಕ್ರೋಕ್ತಿ ಮಾರ್ಗಕ್ಕೆ ಹೆಚ್ಚಾದ ಬೆಲೆ ಕಟ್ಟಬಹುದು. ಮಿಕ್ಕ ಮಾರ್ಗಗಳ ಆಂಶಿಕ ಸತ್ಯತೆಯನ್ನು ಒಪ್ಪುವುದಕ್ಕಿಂತ ಈ ಮಾರ್ಗದ ಏಕೀಕರಣ ತತ್ಪರತೆಯನ್ನು ಮೆಚ್ಚಬಹುದು.

ಕುಂತಕನ ವಿಮರ್ಶನ ದೃಷ್ಟಿಯು ಮಿಕ್ಕವರ ಅಭಿಪ್ರಾಯಕ್ಕೆ ವಿರುದ್ಧವಾಗಿಲ್ಲವೆಂಬುದಕ್ಕೆ ಇನ್ನೊಂದು ಕಾರಣವಿದೆ. ಮಮ್ಮಟ, ಭಾಮಹ, ಆನಂದವರ್ಧನ, ವಿಶ್ವನಾಥ ಮೊದಲಾದ ವಿಮರ್ಶಕರು ಒಳ್ಳೆಯ ಕಾವ್ಯವೆಂದು ಯಾವುದನ್ನು ಹೊಗಳುತ್ತಾರೆಯೋ ಅದನ್ನು ಕುಂತಕನೂ ಒಳ್ಳೆಯದೆಂದು ಹೊಗಳುತ್ತಾನೆ. ಅವರು ದುಷ್ಟವೆಂದು ಹೇಳುವ ಅನೇಕ ಕಾವ್ಯಗಳನ್ನು ಇವನೂ ದುಷ್ಟವೆಂದು ನಿರಾಕರಿಸುತ್ತಾನೆ. ಆದ್ದರಿಂದ ಕುಂತಕನ ವಿಮರ್ಶೆಯನ್ನು ಸಹೃದಯವಿರುದ್ಧವೆಂದು ತಳ್ಳಲು ಸಾಧ್ಯವಿಲ್ಲ. ಮತ್ತು ಕುಂತಕನು ಕವಿಯ ಮನಸ್ಸನ್ನು ಅರಿತು ವಿಮರ್ಶೆಯ ನಿಯಮಗಳನ್ನು ರಚಿಸುತ್ತಾನೆ. ಕವಿಯ ಕಷ್ಟವನ್ನು ತಿಳಿಯದೆ ಎಂತಹ ಕಾವ್ಯವನ್ನು ರಚಿಸಿದರೂ ದುಷ್ಟವೆಂದು ಹೇಳಿ ದೋಷಗ್ರಹಣಮಾಡುವ ವಿಮರ್ಶಕರನೇಕರಿದ್ದಾರೆ. ಇಂತಹ ಕಠಿಣಮನಸ್ಕರಾದ ವಿಮರ್ಶಕರ ಕಬ್ಬಿಣದ ಕಟ್ಟುಗಳಂತಿರುವ ನಿಯಮಗಳನ್ನು ಅನುಸರಿಸಿ ಕಾವ್ಯವನ್ನು ರಚಿಸಲು ಅಸಾಧ್ಯವಾದುದರಿಂದಲೇ ಆಧುನಿಕರು ಆ ನಿಯಮಗಳನ್ನು ಉಲ್ಲಂಘಿಸಿ ಹಿಂದಿನವರೊಡನೆ ಜಗಳವಾಡುತ್ತಿದ್ದಾರೆ. ಇದನ್ನೆಲ್ಲ ತಪ್ಪಿಸುವುದೂ ಕುಂತಕನ ಉದ್ದೇಶ. ಅದರಿಂದಲೇ ಮಿಕ್ಕ ವಿಮರ್ಶಕರಿಗಿಂತ ಕುಂತಕನು ಕವಿಗೆ ಹೆಚ್ಚು ಸಹಾನುಭೂತಿಯನ್ನು ತೋರಿಸಿ ಅವನಿಗೆ ಹೆಚ್ಚು ಸ್ವಾತಂತ್ರ್ಯವನ್ನು ಕೊಡುತ್ತಾನೆ. ರಸ, ಅಲಂಕಾರ, ಧ್ವನಿ ಇವುಗಳೆಲ್ಲವನ್ನೂ

ಒಳಗೊಂಡ ವಕ್ರತೆಯನ್ನೇ ಕಾವ್ಯದ ಜೀವವನ್ನಾಗಿ ಪರಿಗಣಿಸುವುದರಿಂದ ಕವಿ ವ್ಯಾಪಾರಕ್ಕೆ ಮೊದಲಿಗಿಂತ ವಿಶಾಲವಾದ ಅವಧಿಯನ್ನು ಏರ್ಪಡಿಸಿದ ಹಾಗಾಯಿತು. ಕುಂತಕನ ಲಕ್ಷಣವನ್ನು ಅನುಸರಿಸಿ ಕಾವ್ಯವನ್ನು ರಚಿಸುವುದು ಮೊದಲಿಗಿಂತಲೂ ಸುಲಭ. ಹೀಗೆಂದ ಮಾತ್ರಕ್ಕೆ ಕುಂತಕನ ಕಾವ್ಯಲಕ್ಷಣವು ಕಾವ್ಯದ ಉನ್ನತ ಸ್ಥಾನವನ್ನು ತೆಗೆದುಹಾಕಿ ಅದರ ರಚನೆಯನ್ನು ಸುಲಭಸಾಧ್ಯವನ್ನಾಗಿ ಮಾಡಿ ಅದರ ಮೊದಲಿನ ಬೆಲೆಯನ್ನು ಕಡಿಮೆಮಾಡಿದಂತಾಗಲಿಲ್ಲ. ಕವಿಯ ಪ್ರತಿಭೆಗೆ ಮೊದಲಿದ್ದ ಸಂಕುಚಿತವಾದ ಅವಧಿಯನ್ನು ಸ್ವಲ್ಪ ವಿಸ್ತಾರಮಾಡಿದ ಮಾತ್ರಕ್ಕೆ ಕಾವ್ಯದ ಮಹತ್ವಕ್ಕೆ ಕುಂದು ಬರಲು ಕಾರಣವಿಲ್ಲ. ಇದನ್ನು ಕುಂತಕನೂ ಬಹು ಸ್ವಾರಸ್ಯವಾಗಿ ಸೂಚಿಸುತ್ತಾನೆ. 'ವಕ್ರತೆ' ಎಂದರೆ ಪ್ರಾಕೃತವಾದ ನೀರಸವಾದ ಮಾರ್ಗದ ಬದಲಾವಣೆ. ಈ ಬದಲಾವಣೆಯು ಎರಡು ವಿಧವಾಗಿರಬಹುದು. ಒಂದೊಂದು ಸಲ ವಕ್ರತೆಯು ಸಹೃದಯರ ಮೆಚ್ಚಿಕೆಗೆ ಪಾತ್ರವಾಗಬಹುದು. ಒಂದೊಂದು ಸಲ ಆಗದಿರಬಹುದು. ನಾವು ಶುಕ್ಲಪಕ್ಷದ ಚಂದ್ರನ ಕೊಂಕಾದ ಬಿಂಬವನ್ನು ನೋಡಿ ಆನಂದಪಡಬಹುದು; ಆದರೆ ಅದೇ ರೀತಿ ಕೊಂಕಾದ ನಾಯಿಯ ಬಾಲವನ್ನು ವರ್ಣಿಸಿ ಹೊಗಳುವುದಿಲ್ಲ. ವಕ್ರತೆಯೂ ಹೀಗೆಯೇ. ಎಲ್ಲಾ ವಿಧದಲ್ಲಿಯೂ ಪ್ರಸಿದ್ಧವಾದ ಮಾರ್ಗವನ್ನು ಬಿಟ್ಟು ವ್ಯತಿರಿಕ್ತವಾಗಿ ವರ್ತಿಸುವವನನ್ನು ಹುಚ್ಚನೆಂದು ಕರೆಯುತ್ತಾರೆ. ಆದಕಾರಣ ಕುಂತಕನು ಸಹೃದಯಾಹ್ಲಾದಕವಾದ ವಕ್ರತೆಯನ್ನೇ ಕಾವ್ಯದ ಆತ್ಮವನ್ನಾಗಿ ಪರಿಗಣಿಸುತ್ತಾನೆ. ಇದರಿಂದ ಧ್ವನಿಮಾರ್ಗದವರು ಕಾವ್ಯವಿಮರ್ಶೆಯಲ್ಲಿ ಸಹೃದಯರ ಅನುಭವಕ್ಕೆ ಹೇಗೆ ಬೆಲೆ ಕೊಡುತ್ತಾರೆಯೋ ಅದೇ ರೀತಿ ಕುಂತಕನೂ ಕೂಡ ಸಹೃದಯರ ಅನುಭವವನ್ನು ಪ್ರಮಾಣವನ್ನಾಗಿ ಸ್ವೀಕರಿಸುತ್ತಾನೆ.

'ವಕ್ರೋಕ್ತಿ ಜೀವಿತ'ವನ್ನೋದಿದವರಿಗೆಲ್ಲ ಅದರ ಶೈಲಿಯು ಒಪ್ಪಿದೆ. ವೃತ್ತಿಯಂತೂ ಬಹಳ ಚೆನ್ನಾಗಿದೆ. ಇಷ್ಟು ಒಳ್ಳೆಯ ಶೈಲಿಯಲ್ಲಿ ಬರೆಯಲು ಶಕ್ತನಾದ ಕುಂತಕನು ಒಂದು ಗದ್ಯಕಾವ್ಯವನ್ನಾದರೂ ಬರೆಯಲಿಲ್ಲವಲ್ಲ ಎನ್ನಿಸುತ್ತದೆ. ಅಥವಾ ಬರೆದನೋ ಏನೋ! ಯಾರಿಗೆ ಗೊತ್ತು? ಸಂಸ್ಕೃತ ಸಾಹಿತ್ಯದ ಎಷ್ಟೋ ಅಮೂಲ್ಯ ರತ್ನಗಳು ಮಾಯವಾಗಿರುವಂತೆ ಅದೂ ಮಾಯವಾಗಿರಬಹುದು. ಇದುವರೆಗೆ ಈ 'ವಕ್ರೋಕ್ತಿ ಜೀವಿತ' ಗ್ರಂಥವೂ ಸಿಕ್ಕದೆ ಸುಮ್ಮನೆ ಅಲ್ಲಿ ಇಲ್ಲಿ ಕುಂತಕನ ಹೆಸರು ಮಾತ್ರ ಕೇಳಿಬರುತ್ತಿರಲಿಲ್ಲವೆ?

"ವಕ್ರಾನುರಂಜನೀಮುಕ್ತಿಂ ಚಂಚೂಮಿವ ಪುಟೇ ವಹನ್ |
ಕುಂತಕಃ ಕ್ರೀಡತಿ ಸುಖಂ ಕೀರ್ತಿಸ್ಫಟಿಕ ಪಂಜರೇ" ||

ಎಸ್. ವಿ. ಶ್ರೀನಿವಾಸ ರಾಘವಾಚಾರ್.

---

## 'ಅರವಿಂದ'

"ಕೈ-ಲಾ-ಸಾ-ಧಿ-ಪ-ತಿ . . . . ಜಯಾ . . . . ಜಯಾ-, ಕೈ-ಲಾ-ಸಾ-ಧಿ-ಪ-ತಿ, ಜೈ ಗೌರೀಶಂಕರ . . . . ಕಾಶಿ ವಿಶ್ವನಾಥ . . . ."

"ಮುಂದಕ್ಕೆ ಹೋಗಿಬಾಪ್ಪ!"

"ತಾಯಿಾ, ಭಿಕ್ಷ . . . ."

"ಎಷ್ಟು ಹೊತ್ತಿಗೋ ಬರೋದು? ಎಲ್ಲರಿಗೂ ಊಟವಾಯಿತು."

". . . . ಕೈ-ಲಾ-ಸಾ-ಧಿ-ಪ-ತೇ . . . . ಜಯಾ . . . ."

"ಒಳ್ಳೇ ಮೊಂಡರು, ಕೊಟ್ಟ ಸಾಲ ಇವರಿಗೆ! ಹೋಗು ಎಂದರೂ ಹೋಗುವುದಿಲ್ಲ" ಎಂದು ಲೊಟಗುಟ್ಟುತ್ತಾ ಬಂದು ಒಬ್ಬಾಕೆ ಅಕ್ಕಿ ಹಾಕಿ, ಒಳಗೆ ಹೋಗುವಾಗ ಅಂಗಳದ ಕಡೆ ಬಾಗಿಲು ಹಾಕಿದ್ದುದನ್ನು ನೋಡಿ, "ಇದೇನು ಇವತ್ತು ಇಷ್ಟು ಹೊತ್ತಾದರೂ ಗುಂಡಮ್ಮ ಮನೆಗೆ ಬಂದಿಲ್ಲ" ಎಂದುಕೊಂಡಳು.

ಗುಂಡಮ್ಮ ವಾಸ್ತವವಾಗಿ ಒಳಗೇ ಇದ್ದಳು. ಮನೆಯಲ್ಲಿ ಇಲ್ಲವೆಂದುಕೊಂಡಾಕೆ ಬಾಗಿಲನ್ನು ತಳ್ಳಿ ನೋಡಿದ್ದರೆ ನಿಜಾಂಶವು ಗೊತ್ತಾಗುತ್ತಿತ್ತು. ಆದರೆ ಆವಳಿಗೆ ಹಾಗೆ ನೋಡಬೇಕಾದ ಪ್ರಮೇಯವಿರಲಿಲ್ಲ. ಗುಂಡಮ್ಮ ಒಳಗಿದ್ದು ಬಾಗಿಲು ಮುಚ್ಚುವುದೆಂದರೆ ಯಾರ ಮನಸ್ಸಿಗೂ ಹೊಳೆಯದ ವಿಷಯ ಅದು. ಆ ವಠಾರದಲ್ಲಿದ್ದ ಹತ್ತು ಸಂಸಾರಗಳಲ್ಲಿ ದೊಡ್ಡವರು ಚಿಕ್ಕವರಾದಿಯಾಗಿ ಎಲ್ಲರಿಗೂ ಗುಂಡಮ್ಮನ ಸ್ವಭಾವ ಮನವರಿಕೆಯಾಗಿತ್ತು. ಮನೆಯಲ್ಲಿದ್ದರೆ ಬಾಗಿಲು ತೆಗೆದಿರುವುದು, ಹೊರಗೆ ಹೋದರೆ ಬಾಗಿಲು ಮುಂದಕ್ಕೆ ಹಾಕಿಕೊಂಡು ಹೋಗುವುದು, ಅಷ್ಟೆ!

ಆ ಬಾಗಿಲು ಬೀಗವನ್ನು ಕಂಡದ್ದೇ ಇಲ್ಲ! ಅದಕ್ಕೆ ಎರಡು ಕಾರಣ. ಅಷ್ಟು ಜನಗಳ ನಡುವೆ ಇದ್ದ ತನ್ನ ಮನೆಗೆ ಯಾರೂ ಕಳ್ಳತನಕ್ಕೆ ಬರುವುದಿಲ್ಲ. ಒಂದುವೇಳೆ ಬಂದರೂ, ಅಲ್ಲಿದ್ದ ಎರಡು ಒಡಕು ಪಾತ್ರೆ, ಮುರುಕು ಮರ, ಒಂದು ಹರಕು ಸೀರೆ, ಇವುಗಳ ವಿಷಯ ಗುಂಡಮ್ಮನನ್ನು ಎಂದೂ ಬಾಧಿಸಿದಂತೆ ತೋರಲಿಲ್ಲ.

ಗುಂಡಮ್ಮ ಒಂಟಿಯಾಗಿದ್ದರೂ, ಅವಳ ಜೀವನ ಒಂಟಿಯಾಗಿರಲಿಲ್ಲ. ನೆರೆಹೊರೆಯವರ . . . . ಅಷ್ಟೇ ಏಕೆ, ಊರಿನ ಬಹುಜನರ ಕಷ್ಟಸುಖಗಳೊಡನೆ ಅದು ಮಿಳಿತವಾಗಿದ್ದಿತು. ಮದುವೆಯಿಂದ ಮಸಣದವರೆಗೆ ಗುಂಡಮ್ಮನಿಲ್ಲದ ಜಾಗವಿಲ್ಲ. ಅವಳಿಗೆ ಯಾವಾಗಲೂ ಬಿಡುವಿಲ್ಲ. ಇವತ್ತು ಅವರ ಮನೆಯಲ್ಲಿ ಮದುವೆ; ಹಪ್ಪಳ, ಸಂಡಿಗೆ, ಚಕ್ಕುಲಿಹಿಟ್ಟು ಮೊದಲಾದುವೆಲ್ಲಾ ಆಗಬೇಕು; ಅಣಿಮಾಡುವುದಕ್ಕೆ ಮೊದಲಾದರೆ,

ಬೀಗರು ಹೊರಟುಹೋಗುವವರೆಗೂ ಅವಳಿಗೆ ಒಂದುಕ್ಷಣ ಪುರುಸೊತ್ತಿಲ್ಲ. ತನ್ನ ಮನೆಯ ಕೆಲಸದಂತೆ ಶ್ರದ್ಧೆಯಿಂದ ಮಾಡುವುದು ಅವಳ ಸ್ವಭಾವ. ಮದುವೆ ಮುಗಿದರೆ ಮನೆಯವರಿಗೆ ಬಿಡುವು. ಆದರೆ ಗುಂಡಮ್ಮನಿಗಿಲ್ಲ! ಆ ವೇಳೆಗೆ ಮತ್ತೊಂದು ಮದುವೆಯೋ ಮುಂಜಿಯೋ ಏನಾದರೂ ಒಂದು ಸಿದ್ಧವಾಗಿರುತ್ತಿತ್ತು. ಅವಳ ಮುರುಕು ಮನೆಯಲ್ಲಿ ಎಷ್ಟು ಮದುವೆ ಮುಂಜಿಗಳ ಹಪ್ಪಳ ಸಂಡಿಗೆಗಳು ತಯಾರಾಗಿದ್ದುವೋ ದೇವರೇ ಬಲ್ಲ!

ನಾನು ಗುಂಡಮ್ಮನನ್ನು ಮೊದಲು ನೋಡಿದ್ದು ನಮ್ಮ ಸಂಬಂಧಿಗಳೊಬ್ಬರ ಮನೆಯಲ್ಲಿ. ಅವರ ಮಗಳು ಖಾಯಿಲೆಯಾಗಿ ಆಸ್ಪತ್ರೆಯಲ್ಲಿದ್ದಳು. ಮನೆಯಲ್ಲಿ ಇನ್ನಾರೂ ಹೆಂಗಸರಿಲ್ಲ. ಯಜಮಾನಿ ಮನೆಗೆಲಸಗಳನ್ನು ಮುಗಿಸಿ ಇತರ ಮಕ್ಕಳು, ಕೋರ್ಟು ಕಚೇರಿಗಳಿಗೆ ಹೋಗುವವರು, ಇವರನ್ನೆಲ್ಲಾ ಸುದಾರಿಸಿ ಆಸ್ಪತ್ರೆಗೆ ತಿರುಗುವುದೆಂದರೆ ಅಸಾಧ್ಯವೇ ಸರಿ. ಆ ಸಮಯದಲ್ಲಿ ಗುಂಡಮ್ಮ ಅವರಿಗೆ ಮಾಡಿದ ಸಹಾಯ ಎಂದಿಗೂ ಮರೆಯುವಂತಹುದಲ್ಲ. ಹಗಲೂ ರಾತ್ರಿ, ಆಸ್ಪತ್ರೆಗೆ ಹಾಲು ಕಾಫಿ ಗಂಜಿ ಮೊದಲಾದುವನ್ನು ಹೊತ್ತು ಅಲೆಯುವುದು, ರಾತ್ರಿ ಅಲ್ಲೇ ಮಲಗಿದ್ದು ಮಧ್ಯಾಹ್ನ ಹುಡುಗಿಗೆ ಆಹಾರವನ್ನು ಕೊಟ್ಟಮೇಲೆ ೧೨ ಗಂಟೆ ಮಟಮಟ ಬಿಸಿಲಿನಲ್ಲಿ, ಒಂದೂವರೆ ಮೈಲಿ ದೂರವಿದ್ದ ಮನೆಗೆ ಬರುವುದು, ಸ್ನಾನಮಾಡಿ ಆಗ ಒಂದಿಷ್ಟು ಅನ್ನ ಬೇಯಿಸಿಕೊಂಡು, ಒಂದಿಷ್ಟು ಉಪ್ಪಿನಕಾಯಿ, ಮಜ್ಜಿಗೆ ಹಾಕಿಕೊಂಡು ಊಟಮಾಡುವುದು. (ಮನೆಯವರು ಬೇರೆ ಜನವಾದ್ದರಿಂದ ಗುಂಡಮ್ಮ ಅವರ ಮನೆಯಲ್ಲಿ ಊಟಮಾಡುತ್ತಿರಲಿಲ್ಲ.) ಸಾಮಾನ್ಯವಾಗಿ ಗುಂಡಮ್ಮ ಬಳಕೆಯಾಗಿ ಓಡಾಡುತ್ತಿದ್ದುದು ಅವಳ ಸ್ವಜನಗಳಿಗಿಂತ ಇತರ ಜನರಲ್ಲೇ ಹೆಚ್ಚಾಗಿತ್ತು. ಆದರಿಂದ ಮದುವೆ ಮುಂಜಿಗಳಾಗಿ ಮನೆಯವರೆಲ್ಲಾ ಪಂಚಭಕ್ಷ್ಯ ಪರಮಾನ್ನ ಉಂಡರೂ ಗುಂಡಮ್ಮನ ಪಾಲಿಗೆ ಮಾತ್ರ ಗೊಜ್ಜು ಅನ್ನವೇ ಆಗುತ್ತಿತ್ತು.

ಊಟವಾದ ಮೇಲೆ ಒಂದು ಘಳಿಗೆ ಸುದಾರಿಸಿಕೊಂಡು ಪುನಃ ಕಾಫಿ ತೆಗೆದುಕೊಂಡು ಹೋದರೆ, ನಾಳೆ ಮಧ್ಯಾಹ್ನವೇ ಊಟಕ್ಕೆ ಬರುತ್ತಿದ್ದುದು. ಅದುವರೆಗೂ ಆ ಪ್ರಾಣಿ ಬಾಯಿಗೆ ಒಂದು ತೊಟ್ಟು ನೀರೂ ಸಹ ಹಾಕುವಂತಿರಲಿಲ್ಲ.

ಈ ದಿನಚರಿ ಸುಮಾರು ಮೂರು ತಿಂಗಳು ನಡೆದಿರಬಹುದು. ಹುಡುಗಿಗೆ ಹುಷಾರಾಗಿ ಮನೆಗೆ ಬಂದ ದಿನ ತಾಯಿಗಿಂತಲೂ ಗುಂಡಮ್ಮನೇ ಹೆಚ್ಚಾಗಿ ಸಂತೋಷಪಟ್ಟು, ತನ್ನ ಶ್ರಮವು ಈಗ ಸಾರ್ಥಕವಾಯಿತೆಂದು ದೇವರನ್ನು ಕೊಂಡಾಡುತ್ತ, ಹೊತ್ತ ಹೊರೆಯನ್ನು ಇಳುಕಿದಂತೆ ನಿರಾತಂಕವಾಗಿ ತನ್ನ ಮನೆಗೆ ಹೋಗಿ ರಾಶಿಯಾಗಿ ಬಿದ್ದಿದ್ದ ಧೂಳನ್ನು ಗುಡಿಸಿಹಾಕಿ, ಆರಾಮವಾಗಿ ಮಲಗಿಕೊಂಡು ಕಣ್ಣು ತುಂಬ ನಿದ್ರೆಮಾಡಿದಳು.

ನಾನು ಎರಡು ಮೂರು ದಿವಸ, ಪೇಟೆ ಕಡೆ ಹೋಗಿ ಹಿಂದಿರುಗಿ ಬರುತ್ತಿರುವಾಗ ದಾರಿಯಲ್ಲಿ, ತಡಪು ಸೀರೆಯನ್ನು ಸುತ್ತಿ, ಉದ್ದವಾಗಿ ಮುಸುಕು ಹಾಕಿಕೊಂಡು ಆಸ್ಪತ್ರೆಯಿಂದ ಮನೆಗೆ ಬರುತ್ತಿರುವ ಗುಂಡಮ್ಮನನ್ನು ನೋಡಿದ್ದೆ. ಉರಿಬಿಸಿಲು, ಕೆಳಗಡೆ ಕಾದು ಅಂಟುತ್ತಿರುವ ಟಾರು ರಸ್ತೆ. ಬರಿಯಕಾಲಿನಲ್ಲಿ, ಬೆವರು ಹರಿಸುತ್ತ ನಡೆದುಬರುತ್ತಿದ್ದರೂ, ಅವಳ ಮುಖದಲ್ಲಿ ಮುಗುಳು ನಗೆಯು ಮಾತ್ರ ಮರೆಯಾಗಿರಲಿಲ್ಲ. ನಾನು ಗಾಡಿಯನ್ನು ನಿಲ್ಲಿಸಿ " ಹೇಗಿದ್ದಾಳೆ ಗುಂಡಮ್ಮ ನಿಮ್ಮ ಮಗಳು ? " ಎಂದು ಕೇಳಿದೆ. ಗುಂಡಮ್ಮ ನಗುತ್ತ "ನೀನೂ ಹಾಗೇ ಕೇಳುತ್ತೀಯಾ ? ಮನೆಗೆ ಹೋದರೆ ಅವಳ ಅಪ್ಪ ಅಮ್ಮ ಹಾಗೇ ಕೇಳುತ್ತಾರೆ. ಪುಣ್ಯಾತ್ಮರ ಮಗು ಎಲ್ಲಿಯಾದರೂ ಚೆನ್ನಾಗಿರಲಿ ; ನನ್ನ ಹೆಸರು ಯಾಕೆ ಹೇಳುತ್ತೀರಿ ?—ಅಂತ ನಾನು. ನಿತ್ಯವೂ ಇದೇ ಚರ್ಚೆ ಮನೆಯಲ್ಲಿ." ಎಂದು ಹೇಳಿದಳು. 'ಮನೆ' ಎಂದರೆ ಅವರ ಮನೆ. ಗುಂಡಮ್ಮ ಯಾರ ಮನೆಯಲ್ಲಿದ್ದರೂ ಅದು ತನ್ನ ಮನೆಯಂತೆಯೇ ತಿಳಿದು ನಡೆಯುತ್ತಿದ್ದಳು. ಆದ್ದರಿಂದ ಅವಳ ಮಾತಿನಲ್ಲೂ ಅದೇ ವ್ಯಕ್ತವಾಗುತ್ತಿತ್ತು. ಇನ್ನು ಅಲ್ಲಿ ಅವಳ ಸಹಾಯದ ಆವಶ್ಯಕತೆ ಏನೂ ಇಲ್ಲದೆ ತನ್ನ ಮನೆಗೆ ಹೋಗಬೇಕಾಗುವ ವರೆಗೆ ಅವಳಿಗೆ ತನ್ನ ಆ ಮನೆಯು ನೆನಪೇ ಆಗುತ್ತಿರಲಿಲ್ಲ.

ಈ ವಿಶೇಷ ಗುಣಗಳನ್ನು ನೋಡಿ ನಾನು ಗುಂಡಮ್ಮನ ವಿಚಾರದಲ್ಲಿ ಗೌರವವನ್ನಿಟ್ಟಿದ್ದೆ. ಅಲ್ಲಿಂದ ಮುಂದೆ ಗುಂಡಮ್ಮ ನಮ್ಮ ಮನೆಗೆ ಬಂದುಹೋಗುವುದು ಹೆಚ್ಚಾಯಿತು. ಏನೂ ಕೆಲಸವಿಲ್ಲದಿದ್ದರೂ, ಆ ಬೀದಿಗೆ ಬಂದರೆ ಗುಂಡಮ್ಮ ನಮ್ಮ ಮನೆಗೆ ಬಾರದೆ ಹೋಗುತ್ತಿರಲಿಲ್ಲ. ಬಂದು ಅಲ್ಲಿ ಇಲ್ಲಿಯ ಮಾತುಗಳನ್ನು ಆಡುತ್ತ ಕುಳಿತಿದ್ದು, ಇದ್ದ ಏನಾದರೂ ಹಣ್ಣುಹಂಪಲನ್ನು ಕೊಟ್ಟರೆ ಎಷ್ಟೋ ಸಂತೋಷದಿಂದ ಬಾಯಿಗೆ ಹಾಕಿಕೊಂಡು ಹೋಗುತ್ತಿದ್ದಳು. ಸಾಮಾನ್ಯವಾಗಿ ಸ್ನೇಹ ವಿಶ್ವಾಸಗಳು ಏಕಮುಖವಾಗಿ ನಡೆದುಬರುವುದಿಲ್ಲ. ಅದರಿಂದಲೇ ನಾನು ಅವಳಲ್ಲಿ ಇಟ್ಟಿದ್ದಂತೆಯೇ ಗುಂಡಮ್ಮ ನನ್ನಲ್ಲಿ ಹೆಚ್ಚು ಆತ್ಮೀಯತೆಯನ್ನು ತೋರಿಸುತ್ತ, ತನಗೆ ಬೇಸರವಾದಾಗ, ಅಥವಾ ಮನಸ್ಸು ಏನಾದರೂ ನೊಂದಾಗ ನನ್ನನ್ನು ಹುಡುಕಿಕೊಂಡು ಬರುತ್ತಿದ್ದಳೆಂದು ಕಾಣುತ್ತದೆ. ಆ ಸಮಯಗಳಲ್ಲಿ ಅವಳು ಆಡಿದ ಕೆಲವು ಮಾತುಗಳಿಂದ ಅವಳ ಹಿಂದಿನ ಜೀವನದ ವಿಚಾರವನ್ನು ಸ್ವಲ್ಪಮಟ್ಟಿಗೆ ತಿಳಿದುಕೊಂಡಿದ್ದೆ.

ಒಂದು ದಿನ ಅವಳು ನಮ್ಮ ಮನೆಗೆ ಬಂದಾಗ ನಾನು, " ಗುಂಡಮ್ಮ ಈ ಸಲ ಮದುವೆ ಮನೆಗಳೆಲ್ಲಾ ನಿಮ್ಮ ಓಡಾಟವಿಲ್ಲದೆ ಬಿಮ್ಮೆನ್ನುತ್ತಿತ್ತು. ಎರಡು ಮೂರು ಕಡೆಗಳಲ್ಲಿ ' ಗುಂಡಮ್ಮ ಖಾಯಿಲೆಮನೆಗೆ ಒಪ್ಪಿಕೊಂಡು ನಮಗೆ ಕೈಕೊಟ್ಟಳು.

ನಮ್ಮಮೇಲೆ ವಿಶ್ವಾಸ ಕಡಿಮೆಯಾಯಿತು' ಎಂದು ನನ್ನ ಸಂಗಡ ದೂರಿದರು. ಲಗ್ನಕಾಲದಲ್ಲಿ (ನಾಲ್ಕು ಕಾಸು ಸಂಪಾದನೆಯಾಗುವಂಥ ಕಾಲದಲ್ಲಿ) ನಿಮಗೆ ಅದು ಗಂಟುಬಿದ್ದಿತು" ಎಂದು ಹೇಳಿದೆ.

"ಒಳ್ಳೆಯದಾಯಿತು. ನಾನು ಹೋಗದೇ ಮದುವೆಯೇನು ನಿಂತುಹೋಯಿತೆ? ದುಡ್ಡು ಕೊಟ್ಟರೆ ಮೈಸೂರಿನಲ್ಲಿ ಕೆಲಸದವರಿಗೇನು ಕಮ್ಮಿ? ಮದುವೆ ಮನೆಗೆಂದರೆ ಯಾರಾದರೂ ಮಾಡುತ್ತಾರೆ. ಖಾಯಿಲೆ ಕಸಾಲೆ ಎಂದರೆ ಯಾರು ಸಿದ್ಧವಾಗಿ ಬರುತ್ತಾರೆ? ಇಷ್ಟಕ್ಕೂ ನಾನೇನು ಧರ್ಮಕ್ಕೆ ಮಾಡಿದೆನೆ? ಅಲ್ಲಿ ಬರುವ ದುಡ್ಡು ಇಲ್ಲೇ ಬಂದುಹೋಯಿತು. ಗುಂಡಮ್ಮನ ವಿಶ್ವಾಸ ಅವರಿಗೂ ಗೊತ್ತಿಲ್ಲದೇ ಇಲ್ಲ. ಮದುವೆಗೆ ಬರಲಿಲ್ಲವೆಂತ ಸಿಟ್ಟಿಗೆ ಹಾಗೆ ಹೇಳಿದಾರೆ. ನೀನು ಹೇಳು, ಮನುಷ್ಯರ ವಿಶ್ವಾಸವನ್ನು ಒರೆಹಚ್ಚಿ ನೋಡುವುದು ಕಷ್ಟದಲ್ಲೋ, ಸುಖದಲ್ಲೋ? ಸಂತೋಷ ಕಾಲದಲ್ಲಿ ನಗುತ್ತ ಓಡಾಡುತ್ತ ಉಂಡು, ತಿಂದು, ಕೈಗೆಬಂದ ಕೆಲಸವನ್ನು ಮಾಡಿದರೆ ಮಾತ್ರ ವಿಶ್ವಾಸವೇ? ಅದರಿಂದ ಅವರು ವಿಶ್ವಾಸದ ಆಳವನ್ನು ಅಳೆದು, ನಾನು ದೂರವಾದೆನೆಂದು ಭಾವಿಸಿದರೆ ಅದಕ್ಕೆ ನಾನೇನುಮಾಡಲಿ? ಅವರ ಸಂತೋಷ" ಎಂದು ಹೇಳಿ ಗುಂಡಮ್ಮ ನಕ್ಕಳು.

ಗುಂಡಮ್ಮ "ನಾನೇನು ಧರ್ಮಕ್ಕೆ ಮಾಡಿದೆನೆ?" ಎಂದು ಹೇಳಿದರೂ ಅವಳ ಮನಸ್ಸಿನಲ್ಲಿ ದುಡ್ಡಿಗೆ ಹೆಚ್ಚು ಪ್ರಾಧಾನ್ಯವಿಲ್ಲವೆಂಬುದು ನನಗೆ ಗೊತ್ತು. ಕೈಲಿ ಒಂದು ಕಾಸೂ ಇಲ್ಲದೆ, "ನಾಳೆ"ಯ ಯೋಚನೆಯೇ ಇಲ್ಲದೆ ಅವಳಷ್ಟು ನಿರಾಶವಾಗಿ, ಸುಖವಾಗಿ ಇದ್ದವರನ್ನು ನಾನು ಇದುವರೆಗೂ ನೋಡಿಲ್ಲ. ಪ್ರಪಂಚ ದಲ್ಲಿ ಅನುಭವಿಸುವ ಅನೇಕ ಸುಖಗಳಿಗೆ ಆವಶ್ಯಕವಾದ ದುಡ್ಡಿನ ವಿಚಾರದಲ್ಲಿ ಆತಂಕವಿಲ್ಲದೆ, ಶ್ರದ್ಧೆಯಿಲ್ಲದೆ, ಅವಳಂತೆ ಇರುವವರೂ ಬಹಳ ವಿರಳವೇ! ಅವಳ ಸ್ವಭಾವ ಸಾಮಾನ್ಯವಾದ ಇತರ ಜನಗಳಿಗಿಂತ ವಿಚಿತ್ರವಾಗಿತ್ತು. ಅವಳು ಮಾಡಿದ ಶ್ರಮಕ್ಕಾಗಿ ಯಾರಾದರೂ ದುಡ್ಡುಕೊಟ್ಟರೆ ಸ್ವಲ್ಪವೂ ಸಂಕೋಚದ ಸೋಂಕಿಲ್ಲದೆ ತೆಗೆದುಕೊಳ್ಳುತ್ತಿದ್ದಳು. ಕೊಡದಿದ್ದರೆ ಅದರ ಯೋಚನೆಯನ್ನೇ ಮಾಡುತ್ತಿರಲಿಲ್ಲ. ತಾನು ಮಾಡಬೇಕಾದ ಕೆಲಸವನ್ನು ಮಾಡಿದ್ದಾಯಿತೆಂದು ತಿಳಿದುಕೊಂಡು ಸುಮ್ಮ ನಿದ್ದುಬಿಡುತ್ತಿದ್ದಳು.

"ಗುಂಡಮ್ಮ ಯಾವಾಗಲೂ ಹೀಗಿರಲಿಲ್ಲ. ಒಂದಾನೊಂದು ಕಾಲದಲ್ಲಿ ಇತರರು ಒಂದು ಆಣೆ ತೆಗೆದುಕೊಳ್ಳುವ ಜಾಗದಲ್ಲಿ ನಾಲ್ಕು ಆಣೆ ತೆಗೆದುಕೊಳ್ಳುತ್ತಿದ್ದಳು. ಈ ವೈರಾಗ್ಯವೆಲ್ಲಾ ಹೊಸದಾಗಿ ಬಂದದ್ದು" ಎಂದು ಕೆಲವರು ಹಳಬರು, ಅಂದರೆ ಗುಂಡಮ್ಮನನ್ನು ನನಗಿಂತ ಮೊದಲಿನಿಂದ ಕಂಡವರು, ಹೇಳುತ್ತಾರೆ. ಅದೂ ನಿಜವಿರ

ಬಹುದು. ಮತ್ತು ಅದಕ್ಕೆ ತಕ್ಕ ಕಾರಣವೂ ಇದ್ದಿರಬಹುದು. ಅದನ್ನು ಹೇಳಬೇಕಾದರೆ ಗುಂಡಮ್ಮನ ಹಿಂದಿನ ವಿಚಾರವನ್ನು ಸ್ವಲ್ಪ ಹೇಳಬೇಕಾಗುತ್ತದೆ.

* * * * *

ಗುಂಡಮ್ಮ ಅವಳ ತಾಯಿತಂದೆಗಳಿಗೆ ಒಬ್ಬಳೇ ಮಗಳು. ಅವರು ಶ್ರೀಮಂತರಲ್ಲದಿದ್ದರೂ ಹೊಟ್ಟೆ ಬಟ್ಟೆಗಳ ಮಟ್ಟಿಗೆ ಅನುಕೂಲವಾಗಿಯೇ ಇದ್ದರು. ಗುಂಡಮ್ಮನ ಬಾಲ್ಯವು ಬಹಳ ಸುಖವಾಗಿ ಕಳೆಯಿತು. ಜೊತೆಗೆ ಬೇರೆ ಒಬ್ಬರಿಲ್ಲದೆ ಮನೆಗೆ ಒಬ್ಬಳಾಗಿಯೇ ಬೆಳೆದ ಅವಳಿಗೆ ಮುಂದಿನ ಸುಖದ ಕಲ್ಪನೆಯನ್ನು ಹೆಣೆಯುವುದರಲ್ಲಿಯೇ ಹೆಚ್ಚು ಹೊತ್ತು ಕಳೆಯುತ್ತಿತ್ತು. (ಆಗ ಈಗಿನಂತೆ ಶಾಲೆ ಕಾಲೇಜುಗಳ ಕಾಲವಲ್ಲವೆಂಬುದನ್ನು ನಾವು ಮರೆಯುವಂತಿಲ್ಲ.) ಗುಂಡಮ್ಮನಿಗೆ ಮದುವೆಯಾದಾಗ ೧೨ ವರ್ಷ. ಹುಡುಗ ಅದೇ ಊರಿನವನಾದರೂ, ನೆರೆಯೂರಿನಲ್ಲಿ ತನ್ನ ಸೋದರಮಾವನ ಮನೆಯಲ್ಲಿರುತ್ತಿದ್ದ. ಅವನು ಊರಿಗೆ ಬಂದಾಗ ಅವಳಿಗೆ ಹಬ್ಬ! ಜೊತೆಯವರಿಲ್ಲದೆ ಬಳಲುತ್ತಿದ್ದ ಚೇತನವು ನವಚೈತನ್ಯದಿಂದ ಮಿಡಿಯುತ್ತಿತ್ತು. ಆ ವರ್ಷ ಅವಳಿಗೆ ಒಬ್ಬ ತಮ್ಮನೂ ಹುಟ್ಟಿದ. ಗುಂಡಮ್ಮನ ಸಂತೋಷಕ್ಕೆ ಪಾರವೇ ಇಲ್ಲ. ತಾಯಿತಂದೆಗಳಿಗೂ ಹಾಗೆಯೇ. ಮಗಳು ಗಂಡನ ಚಿಂತೆಗೆ ಗುರಿಯಾಗುವ ವೇಳೆಗೆ ಮಗ ಹುಟ್ಟಿದ್ದು ಸಂತೋಷವೇ! ಆದರೆ ಆ ಸಂತೋಷ ಕುಡಿಯಿಡುತ್ತಿರುವಾಗಲೇ ಗುಂಡಮ್ಮನ ಗಂಡ ತೀರಿಹೋದ ವರ್ತಮಾನವು ಸಿಡಿಲಿನಂತೆ ಬಂದು ಅದು ಮೊಳಕೆಯಲ್ಲಿಯೇ ಸೀದುಹೋಯಿತು.

ಗುಂಡಮ್ಮನಿಗೆ ತನ್ನ ಸ್ಥಿತಿಯನ್ನು ಪೂರ್ಣವಾಗಿ ಅರಿಯುವಷ್ಟು ಪ್ರಪಂಚ ಜ್ಞಾನ ಬಂದಿರಲಿಲ್ಲ. ಅವಳಿಗೆ ಆಗಾಗ ದುಃಖವಾಗುತ್ತಿದ್ದರೂ, ಮನೆಯಲ್ಲಿ ಅಂಬೆಗಾಲಿಕ್ಕುತ್ತಿದ್ದ ಮಗು ಬೇಗ ಅದನ್ನು ಮರೆಸಿಬಿಡುತ್ತಿತ್ತು. ಹೀಗೆ ಐದಾರು ವರ್ಷಗಳು ಕಳೆದಿರಬಹುದು. ಆಗ ಗುಂಡಮ್ಮನ ತಾಯಿತಂದೆಗಳು ಜೀವನ ಸಾಗರದಲ್ಲಿ ಅವಳನ್ನು ಆ ಮಗುವಿನೊಂದಿಗೆ ತೇಲಿಬಿಟ್ಟು ತಾವು ಕಣ್ಮರೆಯಾದರು.

ಗುಂಡಮ್ಮ ನಿಜವಾಗಿ ಕಣ್ಣು ತೆರೆದದ್ದು ಆಗ. ಕಷ್ಟದಲ್ಲಿ ಮುಳುಗಿದ್ದರೂ, ಅದರ ಕಾವು ತಗಲಿದ್ದೂ ಆಗಲೇ! ಊರು ತುಂಬ ಕಂಡ ಜನಗಳೇ; ಮನೆಯಲ್ಲಿ ತಿನ್ನುವುದಕ್ಕೆ ಇರದಿದ್ದರೂ, ಕಂಡವರ ಮನೆಗೆ ಹೋಗುವುದು ಅವಮಾನ. ಬದುಕಿ ಬಾಳಿದ ಊರಿನಲ್ಲಿ ಭಿಕ್ಷೆ ಬೇಡುವುದೇ? ಇಂಥಾ ಕಷ್ಟವೇ ಅವಳಿಗೆ ಎದೆಗಾರಿಕೆಯನ್ನು ಕೊಟ್ಟಿರಬೇಕು! ಅವಳು ಒಬ್ಬಳೇ ಆಗಿದ್ದರೆ ಅದರ ಮಾತೇ ಬೇರೆ. ಜೊತೆಗೆ ಹುಡುಗ ಬೇರೆ. ಅವನನ್ನು ದೊಡ್ಡವನನ್ನಾಗಿ ಮಾಡುವ ಭಾರವನ್ನು ತಾಯಿತಂದೆಗಳು ಹೊರಿಸಿ ಹೊರಟುಹೋಗಿದ್ದಾರೆ. ಪ್ರಪಂಚವನ್ನು ಕಾಣದ ಹುಡುಗಿ ಬರಿಯ ಕೈಲಿ

ಮೈಸೂರಿಗೆ ಬಂದು ತಮ್ಮನನ್ನು ಮುಂದಕ್ಕೆ ತರುವ ಭಾರವನ್ನು ಹೊತ್ತು ಸ್ವಾರ್ಥವನ್ನೆಲ್ಲಾ ಮರೆತು ತನ್ನ ಮೇಲೆ ಬಿದ್ದ ಜವಾಬ್ದಾರಿಯನ್ನು ನಿರ್ವಹಿಸಲು ನಿಂತಳು. ಆ ವರ್ಷಗಳಲ್ಲಿ ಅವಳು ಪಡೆದ ಜೀವನದ ಕಟುತರವಾದ ಅನುಭವವೇ ಈಗ ನಾವು ಅವಳಲ್ಲಿ ನೋಡುತ್ತಿರುವ ತಾಳ್ಮೆ, ಯಾವಾಗಲೂ ಮಾಸದ ನಗು, ಇವುಗಳಿಗೆ ಕಾರಣವಾಗಿರಬೇಕು. ಆ ವಿಚಾರವಾಗಿ ಮಾತುಬಂದಾಗ ಗುಂಡಮ್ಮ ಒಂದು ದಿನ, "ನೋಡು, ಆ ಮೊದಲಿನ ದಿನಗಳನ್ನು ನೆನೆಯಬಾರದು. ಹತ್ತು ಮನೆಗೆ ಕೆಲಸಕ್ಕಾಗಿ ತಿರುಗುತ್ತಿದ್ದೆ. ಒಬ್ಬೊಬ್ಬರ ಸ್ವಭಾವ ಒಂದೊಂದು ರೀತಿ. ಬರಬರುತ್ತ ನನಗೆ ದೂಷಣೆಗೂ ಹೊಗಳಿಕೆಗೂ ವ್ಯತ್ಯಾಸವೇ ಕಾಣುತ್ತಿರಲಿಲ್ಲ. ಕೆಲಸವೊಂದೇ ನನ್ನ ಗುರಿ! ಎಷ್ಟು ಕಷ್ಟಪಟ್ಟಿದ್ದರೂ ಮನೆಗೆ ಬಂದು ಅವನನ್ನು ನೋಡಿದ ಕೂಡಲೇ ಎಲ್ಲವೂ ಮರೆತುಹೋಗುತ್ತಿತ್ತು. ನನಗೆ ಪ್ರಪಂಚವೆಂದರೆ ಅವನೇ ಆಗಿದ್ದ. ಎಷ್ಟೋ ಸಲ ಮೂರು ಮೂರುದಿನ ಊಟವಿಲ್ಲದೆ, ಅವನಿಗೆ ಮಟ್ಟಿಗೆ ತಿಂಡಿ ತರಲು ಸಾಧ್ಯವಾಗುತ್ತಿತ್ತು. ಆದರೆ ಕಾಲವು ಎಂದಿಗೂ ಒಂದೇ ಸಮನಾಗಿರುವುದಿಲ್ಲ. ನನಗೂ ಹೆಚ್ಚು ಜನಗಳ ಪರಿಚಯವಾಯಿತು. ನನಗೆ ನನ್ನ ರಟ್ಟೆಯೇ ದಿಕ್ಕಾಯಿತು. ಕೂಲಿ ನಾಲಿ ಮಾಡಿ ಅದರಲ್ಲೇ ಹೊಟ್ಟೆ, ಬಟ್ಟೆ, ಅವನಿಗೆ ವಿದ್ಯೆ, ಬುದ್ಧಿ, ಮುಂಜಿ, ಮದುವೆ ಎಲ್ಲಾ ಮಾಡಿ ಆಯಿತು. ಒಂದು ದಿವಸವೂ ಕಷ್ಟ ಕಾಣಲಿಲ್ಲ. ಅದು ಏನು ಉತ್ಸಾಹವೋ ಕೆಲಸ ಮಾಡುವುದಕ್ಕೆ! ಎಷ್ಟು ಸಂಪಾದಿಸಿದರೂ ಸಾಲದು. ಅವನಿಗಾಗಿ ನನ್ನ ಜೀವವನ್ನೇ ಕೊಟ್ಟರೂ ತೃಪ್ತಿಯಾಗದು. ಅವನೂ ಹಾಗೇ ಇದ್ದ. ಬಹಳ ಒಳ್ಳೆ ಹುಡುಗ, ಒಂದು ದಿವಸ ಮಾತ್ರ—ಅದೂ ಸಹವಾಸದೋಷ ಅನ್ನಿ! ನಾನು ಪುಸ್ತಕಕ್ಕೆಂದು ಕೊಟ್ಟ ದುಡ್ಡಿನಲ್ಲಿ ಹೋಟಲಿಗೆ ಹೋಗಿ ತಿಂಡಿ ತಿಂದು, ನಾಟಕ ನೋಡಿ, ಪುಸ್ತಕವಿಲ್ಲದೆ ಕ್ಲಾಸಿನಲ್ಲಿ ಹಿಂದಾದನಂತೆ. ಆ ವಿಚಾರ ನನಗೆ ತಿಳಿದಾಗ ಎಷ್ಟು ದುಃಖವಾಯಿತು, ಗೊತ್ತೇ? ಅವನನ್ನು 'ಹೀಗೆ ಏಕೆಮಾಡಿದೆ?' ಎಂದು ಕೇಳುವುದಕ್ಕೆ ಕೂಡ ನನ್ನಲ್ಲಿ ಶಕ್ತಿ ಉಳಿಯಲಿಲ್ಲ. ನಾನು ಕಟ್ಟಿದ್ದ ಆದರ್ಶದ ಚಿತ್ರವೆಲ್ಲಾ ಒಂದೇ ಸಲಕ್ಕೆ ಚೂರು ಚೂರಾಗಿ ಬಿದ್ದುಹೋಯಿತು. ಮೂರು ದಿವಸ ಒಂದೇಸಮ ಅನ್ನ ನೀರಿಲ್ಲದೆ—ಕೆಲಸಕ್ಕೂ ಹೋಗದೆ ಸಂಕಟಪಟ್ಟೆ. ಕೊನೆಗೆ ಆ ಹುಡುಗ ನನ್ನ ಸಂಕಟವನ್ನು ನೋಡಿ ಅಳುತ್ತಾ, 'ಅಕ್ಕಾ, ನಾನು ಮಾಡಿದ್ದು ತಪ್ಪು, ಇದೇ ಮೊದಲು, ಇದೇ ಕೊನೆ—ಇನ್ನು ಮುಂದೆ ಹೀಗೆಂದಿಗೂ ಮಾಡುವುದಿಲ್ಲ' ಎಂದು ಹೇಳಿದ. ಅಲ್ಲ ಏನು ಹುಚ್ಚು! ನಾನು ಅವನಿಗಾಗಿ ಕಷ್ಟಪಡುತೀನಿ ಅಂತ, ನವಚೈತನ್ಯದಿಂದ ತುಂಬಿದ ಒಂದು ಜೀವ ನನ್ನ ಇಷ್ಟದಂತೆಯೇ ನಡೆಯಬೇಕೆಂದು ಬಯಸುವುದು ಯಾವ ನ್ಯಾಯ? ಆಗ ಸಂಕಟಪಟ್ಟದ್ದು ನೆನೆದರೆ ಈಗ ನನಗೇ ನಗು ಬರುತ್ತೆ.

ನನ್ನ ಜೀವನವೆಲ್ಲಾ ಹುಚ್ಚು ಹುಚ್ಚೇ ಅನ್ನು. ಆಗ ಅವನೇ ಪ್ರಪಂಚವೆಲ್ಲಾ ಆಗಿದ್ದ. ಈಗ ಅವನು ದೂರವಾದ ಮೇಲೆ ಪ್ರಪಂಚವೆಲ್ಲಾ ನನ್ನದೆ ಆಗಿದೆ" ಎಂದಳು.

"ಅವನಿಗಾಗಿ ಇಲ್ಲಿ ಇದ್ದು ಹಲುಬುತ್ತೀರಿ. ಅವನ ಬಳಿ ಹೋಗಿ ಇರಬಾರದೆ? ಸಂಪಾದಿಸುವ ಕಾಲದಲ್ಲಿ ನೀವು ಹೋದರೆ ಅನ್ನ ಹಾಕಲಾರನೆ? ಒಳ್ಳೆಯವನು ಎಂದು ಹೊಗಳುತ್ತೀರಿ. ಮುಪ್ಪಿನ ಕಾಲದಲ್ಲಿ ನಾಲ್ಕು ದಿವಸ ನಾರಾಯಣ, ಕೃಷ್ಣ ಎನ್ನುತ್ತಾ ಇದ್ದುಕೊಂಡಿರದೆ ಈ ಕಷ್ಟ ಎಲ್ಲಿಯ ವರೆಗೆ ಗುಂಡಮ್ಮ?" ಎಂದು ಕೇಳಿದೆ.

"ಕಷ್ಟವೇನು ಬಂತು? ನಿಮಗೆ ಹಾಗೆ ತೋರುತ್ತೆ. ಅವನೇನೋ ಕರೆಯುತ್ತಲೆ ಇದಾನೆ, 'ಬಾ, ಅಕ್ಕ ನಾವು ಕುಡಿದ ಗಂಜಿ ನಿನಗೂ ಹಾಕುತ್ತೇವೆ, ನೀನು ನಮಗೆ ಭಾರವೇ' ಎನ್ನುತ್ತಾನೆ. ನನಗೇ ಹೋಗಲು ಇಷ್ಟವಿಲ್ಲ. ಅವನಿಗೆ ಕೆಲಸವಾಗಿ ಬೇರೆ ಸಂಸಾರ ಹೂಡಿದಾಗ ನನಗೆ ಒಂದೇ ಸಲಕ್ಕೆ ಮುಪ್ಪು ಬಂದಂತಾಯಿತು. ಯಾತಕ್ಕೂ ಕೆಲಸಕ್ಕೆ ಬಾರದಂತೆ ತೋರಿತು ನನ್ನ ಜೀವ. ಇಷ್ಟು ದಿನವೂ ಕಷ್ಟಪಟ್ಟಾಯಿತು. ಈಗ ಒಂದು ತುತ್ತು ಅನ್ನಕ್ಕಾಗಿ ಮತ್ತೊಬ್ಬರ ಆಶ್ರಯದಲ್ಲಿರಲೇ? ಅಂತಹ ಹೋಗಲೇ ಬೇಕಾದ ಕಾಲ ಬಂದಾಗ ಹೋದರಾಯಿತು ಎಂದುಕೊಂಡೆ. ಈಗ ನನಗೇನು ಆಗಬೇಕಾಗಿದೆ? ಎಲ್ಲಿದ್ದರೆ ಅಲ್ಲೇ ಮನೆ. ಆ ಗುಡಿಸಲಿಗೆ ಒಂದು ರೂಪಾಯಿ ಕೊಡುವುದೂ ದಂಡವೇ. ಏನೋ ಕೈಕಾಲು ಗಟ್ಟಿಯಾಗಿರುವವರೆಗೂ ಸರಿ. ಒಂದು ತಲೆನೋವು ಮೂಗುನೋವು ಬಂದರೆ ಕಾಲುನೀಡಿಕೊಂಡು ಇನ್ನೊಬ್ಬರಿಗೆ ಮುಜಗರ ವಾಗದಂತೆ ಮಲಗಿಕೊಳ್ಳುವುದಕ್ಕೆ ಇರಲಿ ಎಂದು ಅದನ್ನು ಇಟ್ಟುಕೊಂಡಿದ್ದೇನೆ ಅಷ್ಟೆ" ಎಂದು ಹೇಳಿದಳು. ಆಕೆ ಆಡುತ್ತಿದ್ದ ಒಂದೊಂದು ಮಾತೂ ಒಂದೊಂದು ಅನುಭವದ ಮುದ್ದೆಯಂತೆ. "ಅವಳು ಯಾವುದಕ್ಕೂ ವ್ಯಸನಪಡದವಳಂತೆ ಹಗುರ ವಾಗಿ ಮಾತಾಡುತ್ತಿದ್ದರೂ, ಅವಳ ಮನಸ್ಸಿನಲ್ಲಿ ವ್ಯಥೆಯಿಲ್ಲವೇ? ಈ ಸ್ನೇಹ ಶೂನ್ಯ ಜೀವನದಲ್ಲಿ ಬೇಸರವಿಲ್ಲವೇ?" ಎಂಬ ಪ್ರಶ್ನೆ ಆಗಾಗ ನನಗೆ ಬರುತ್ತಿತ್ತು.

ನಾನು ನೋಡುವಾಗ್ಗೆ ಆಕೆಗೆ ವಯಸ್ಸು ಐವತ್ತರ ಮೇಲಾಗಿತ್ತು. ಅವಳನ್ನು ಬಹುವಚನದಲ್ಲಿ ಮಾತಾಡಿಸಿದರೆ ಆಕೆಗೆ ಸಿಟ್ಟು ಬರುತ್ತಿತ್ತು. ನೀವು ದೊಡ್ಡವರು, ನಿಮ್ಮನ್ನು ಹೇಗೆ ಬಾ, ಹೋಗು, ಎನ್ನುವುದು?" ಎಂದು ಕೇಳಿದರೆ, "ನಿಮ್ಮ ಅಜ್ಜಿ ಎಷ್ಟು ದೊಡ್ಡವರು? ಅವರನ್ನು ಬಾ ಎನ್ನುವುದಿಲ್ಲವೆ? ನನ್ನನ್ನು ಏಕೆ ಹಾಗೇ ತಿಳಿದುಕೊಳ್ಳಬಾರದು! ನೀನಾದರೂ ಹಾಗೆ ಕರೆದರೆ ನನಗೆ ಸಮಾಧಾನವಾಗುತ್ತೆ" ಎಂದು ಹೇಳುತ್ತಿದ್ದಳು. ಆಗ ನನಗೆ ಏನು ಹೇಳುವುದಕ್ಕೂ ತೋರುತ್ತಿರಲಿಲ್ಲ. ಆಕೆ ಅನೇಕಸಲ ಆ ಮಾತನ್ನು ಒತ್ತಿ ಹೇಳಿದ್ದರ ಮೇಲೆ, ಈಗೀಗ ಸ್ವಲ್ಪ ಪ್ರಯತ್ನಪಟ್ಟರೂ ಪೂರ್ತಿಯಾಗಿ ಬಹುವಚನ ಪ್ರಯೋಗಹೋಗಿಲ್ಲ.

* * * * *

ಒಂದು ದಿನ ಸಾಯಂಕಾಲವಾಗಿತ್ತು. ನಾನು ಏನೋ ಕೆಲಸಮಾಡುತ್ತಿದ್ದೆ. ಆಗ ಗುಂಡಮ್ಮ ಬಂದು ಕೂಗಿದಳು. ಅವಳ ಮುಖ ಪೆಚ್ಚಾಗಿತ್ತು. "ಏನು ಗುಂಡಮ್ಮ?" ಎಂದು ಕೇಳಿದೆ.

"ಏನೂ ಇಲ್ಲ, ಇಲ್ಲೇ ನಾಗಮ್ಮನ ಮನೆಗೆ ಬಂದಿದ್ದೆ. ಹಾಗೆ ನೋಡಿಕೊಂಡು ಹೋಗೋಣವೆಂದು ಬಂದೆ."

"ಹೌದು; ನಾಗಮ್ಮ, 'ಗುಂಡಮ್ಮ ಯಾಕೋ ಬರಲೇ ಇಲ್ಲ. ಅವತ್ತು ಅವಸರದಲ್ಲಿ ಹೊರಟುಹೋದರು. ಬಾಗಿನ ಸಹ ಕೊಟ್ಟಿಲ್ಲ. ಬೋರನ ಸಂಗಡ ಹೇಳಿ ಕಳುಹಿಸಬೇಕು' ಎಂದಿದ್ದಳು."

"ಬಾಗಿನ ಎಲ್ಲಿ ಹೋಗುತ್ತೆ ಹೇಳು! ಇನ್ನೆಂಟು ದಿನವಾದರೂ ನಾನು ಹೋದ ದಿನ ಬರುತ್ತಿತ್ತು. ನೀನು ಆ ಸಲ ಮಗುವಿನ ಹುಟ್ಟಿದಹಬ್ಬ ಮಾಡಿದಾಗ ಒಂದು ತಿಂಗಳಾದ ಮೇಲೆ ನಾನು ಊರಿಂದ ಬಂದಾಗ ಮಡಿಯಲ್ಲಿ ಮುಚ್ಚಿಟ್ಟಿದ್ದು ಕೊಡ ಲಿಲ್ಲವೇ? ಲಾಡು ಸ್ವಲ್ಪ ವಾಸನೆಬಂದಿತ್ತು. ಆದರೂ ನೀನು ಅಷ್ಟು ವಿಶ್ವಾಸದಿಂದ ಇಟ್ಟಿದ್ದೆಯಲ್ಲ ಎಂದು ಒಂದು ಕಾಳೂ ಬಿಡದೆ ತಿಂದೆ. ಮುಖ್ಯ, ವಿಶ್ವಾಸ ಎಲ್ಲಕ್ಕಿಂತ ದೊಡ್ಡದು . . . ".

"ಕೂತುಕೊಳ್ಳಿ ಗುಂಡಮ್ಮ, ನಿಂತೇ ಇದ್ದೀರಲ್ಲ. ನಾಗಮ್ಮ ಜಾಣೆ, ಚಿಕ್ಕವಳಾದರೂ ತುಂಬಾ ತಿಳಿವಳಿಕೆ. ಅವತ್ತು ಬಹಳ ವಿತರಣೆಯಾಗಿ ಮಾಡಿದಳು."

"ಹೌದು, ನಾನೂ ಅವಳಿಗೆ ಹಾಗೇ ಹೇಳಿದೆ. ಇಷ್ಟಾದರೂ ಅವಳ ಮನಸ್ಸಿಗೆ ಸಮಾಧಾನವಿಲ್ಲ. ಸಂಸಾರ ಎಂದ ಮೇಲೆ ಏನಾದರೂ ಇರುತ್ತಲ್ಲ. 'ನಮಗೆಲ್ಲ ಏನು ಮಾಡುವುದಕ್ಕೆ ಬರುತ್ತೆ' ಎಂದು ಪೇಚಾಡಿದಳು."

"ಕಾರಣ?"

"ಅವತ್ತು ಸುಣ್ಣವೋ ಏನೋ ಸಿಕ್ಕಲಿಲ್ಲವಂತೆ. 'ಏನು ಅಣಿಮಾಡಿದೀಯೋ ಒಂದಿಷ್ಟು ಸುಣ್ಣಕ್ಕೆ ಗತಿಯಿಲ್ಲ ಈ ಮನೆಯಲ್ಲಿ' ಎಂದು ಅವಳ ಯಜಮಾನರು ಕೂಗಾಡಿದರು. ಪಾಪ, ಹುಡುಗಿ ಒಬ್ಬಳೇ ಬಹಳ ಉತ್ಸಾಹದಿಂದ ಒಂದು ತಿಂಗಳಿಂಡ ಇದಕ್ಕೆ ಸಿದ್ಧಮಾಡಿದ್ದಳು. ಒಂದು ಮಡಕೆಯ ತುಂಬ ಕೆನೆಯ ಹಾಗಿದ್ದ ಸುಣ್ಣ ಸೋಸಿ ತುಂಬಿಟ್ಟಿದ್ದಳು. ಪಾಪ, ಅವಳೇ ಎಲ್ಲಕ್ಕೂ ಓಡಾಡಬೇಕು. ಕೊಡುವುದು ಸ್ವಲ್ಪ ತಡವಾಯಿತು. ಗಂಡಸರು ಅಷ್ಟೆಲ್ಲಾ ಎಲ್ಲಿ ನೋಡುತ್ತಾರೆ? ಬೇಗ ಕೈಗೆ ಸಿಕ್ಕಲಿಲ್ಲವೆಂದು ಹಾಗಂದಿರಬಹುದು. ಅಷ್ಟು ಜನರ ಎದುರಿಗೆ ಹಾಗಂದುಬಿಟ್ಟರಲ್ಲ ಎಂದು ಅವಳಿಗೆ! ನಾನೂ ಎಷ್ಟೋ ಸಮಾಧಾನ ಹೇಳಿದೆ. 'ನಿನಗೆ ಆ ಮಾತಿನಿಂದ ನೋವಾಗಿದೆ ಎಂದು ತಿಳಿದರೆ ನಿನ್ನ ಯಜಮಾನರು ಇನ್ನೂ ಹೆಚ್ಚು ಆದರಿಸಿ

ಸಮಾಧಾನಮಾಡುತ್ತಾರೆ. ಹಾಗೆ ಅಂದಮಾತ್ರಕ್ಕೆ ಅವಮಾನವೇನು ಹೇಳು. ಏನೋ ಸಿಟ್ಟಿನ ಭರದಲ್ಲಿ ಆಡಿದ ಮಾತು' ಎಂದೆ. ಪ್ರೀತಿಯಿಂದ ಸಮಾಧಾನ ಮಾಡುವವರೊಬ್ಬರಿದ್ದರೆ, ಅನ್ನಿಸಿಕೊಳ್ಳುವುದೂ ಒಂದು ತರಹ ಸುಖವೇ ಅಲ್ಲವೇ ?" ಎಂದು ನನ್ನ ಕೇಳಿದಳು. ನಾನು ಆ ಮಾತಿಗೆ ಏನು ಹೇಳಲಿ? "ಇರಬಹುದು" ಎಂದೆ.

ಎಂದೂ ಇಲ್ಲದ ಗುಂಡಮ್ಮ ಆ ಮಾತು ಹೇಳುತ್ತ ಕಣ್ಣೀರು ತುಂಬಿದುದನ್ನು ನೋಡಿ ನನಗೆ ಹೇಗೆಹೇಗೋ ಆಯಿತು. "ಗುಂಡಮ್ಮ, ಇವತ್ತು ಯಾಕೋ ನಿಮ್ಮ ಮನಸ್ಸು ಸರಿಯಾಗಿರುವಂತಿಲ್ಲ. ನಿಮ್ಮ ತಮ್ಮ ಹುಷಾರಾಗಿದಾನೋ ಇಲ್ಲವೋ ? ಏನಾದರೂ ಕಾಗದ ಬಂತೆ ? " ಎಂದು ಕೇಳಿದೆ.

"ನೋಡಿದೆಯಾ, ಬುಡಕ್ಕೇ ಕೊಡಲಿ ಹಾಕಿದೆ. ಬುದ್ಧಿವಂತರ ಲಕ್ಷಣವೇ ಹೀಗೆ. ಈಗ ಮೂರು ದಿನದಲ್ಲಿ ಶೀನು ಬಂದಿದ್ದನಂತೆ. ಒಂದು ದಿನ ಅವರ ಮಾವನ ಮನೆಯಲ್ಲಿ ಇದ್ದು ಹೊರಟುಹೋದನಂತೆ. ಊರಿಗೆ ಹೋದ ಮೇಲೆ, 'ನನಗೆ ನಿನ್ನನ್ನು ನೋಡಬೇಕೆಂದು ಬಹಳ ಆಸೆಯಿತ್ತು. ಒಂದು ಘಳಿಗೆಯೂ ಪುರುಸೊತ್ತಾಗಲಿಲ್ಲ, ಬರಲಿಲ್ಲವೆಂದು ಏನೂ ತಿಳಿದುಕೊಳ್ಳಬೇಡ. ಇನ್ನೊಂದುಸಲ ಬರುತ್ತೇನೆ' ಎಂದು ಕಾಗದ ಬರೆದಿದ್ದಾನೆ. ಬೆಳಗ್ಗೆ ಕಾಗದ ಬಂದಾಗಿನಿಂದಲೂ ಒಂದೂ ಬೇಡವಾಗಿದೆ. ಒಲೆಯನ್ನು ಸಹ ಹೊತ್ತಿಸಲಿಲ್ಲ. ಹೊತ್ತುಹೋದ್ದೇ ಗೊತ್ತಾಗಲಿಲ್ಲ. ಸುಮ್ಮನೆ ಹೆಂಚು, ಗಳು, ಎಣಿಸುತ್ತ ಕೂತಿದ್ದೆ. ನಾಗಮ್ಮನ ಮನೆ ಆಳು ಬಂದು ಕೂಗಿದ. ಆಗ ಎದ್ದು ಮುಖ ತೊಳೆದುಕೊಂಡು, ಒಂದು ಲೋಟ ನೀರು ಕುಡಿದವಳೆ ಈ ಕಡೆ ಬಂದುಬಿಟ್ಟೆ" ಎಂದರು.

ನನಗೆ ಆಕೆಯನ್ನು ನೋಡಿ ತುಂಬ ವ್ಯಥೆಯಾಯಿತು. ಸಮಾಧಾನಕ್ಕಾಗಿ, "ಗುಂಡಮ್ಮ ನೀವು ಎಲ್ಲರಿಗೂ ವಿವೇಕ ಹೇಳುವವರು, ಹೀಗೆ ಮಾಡಬಹುದೇ ? ಏನೋ, ಏನು ಕೆಲಸವಿತ್ತೋ, ಹಾಗೇ ಹೊರಟುಹೋಗಿರಬಹುದು. ಅಷ್ಟಕ್ಕೆ ಇಷ್ಟು ನೊಂದುಕೊಳ್ಳುವುದೇ ? ನೋಡಿ, ಹೋದವಾರ ನನ್ನ ತಂಗಿ ಮೋಟಾರಿನಲ್ಲಿ ಬಂದಿದ್ದಳಂತೆ; ಅಲ್ಲೇ ಯಾರೋ ಸ್ನೇಹಿತರ ಮನೆಯಲ್ಲಿ ರಾತ್ರಿ ಇದ್ದು ಬೆಳಗ್ಗೆ ಅಷ್ಟು ಹೊತ್ತಿಗೇ ಹೊರಟುಹೋದಳಂತೆ. ಆಮೇಲೆ ನನಗೆ ಗೊತ್ತಾಯಿತು. ಮೋಟಾರಿತ್ತು. ಹಾಗೇ ಒಂದುಕ್ಷಣ ಈ ಕಡೆ ಬಂದು ಇಣಿಕಿ ನೋಡಿಕೊಂಡು ಹೋಗಬಾರದಾಗಿತ್ತೆ ಎಂದುಕೊಂಡೆ ಅಷ್ಟೆ. ಅದನ್ನೆಲ್ಲಾ ಮನಸ್ಸಿಗೆ ಹಚ್ಚಿಕೋತಾ ಹೋದರೆ ಹೇಗಾಗುತ್ತೆ ಹೇಳಿ ? "

"ಏನೋಮ್ಮ, ನೀವು ಸರಿಸರಿಯಾಗಿ ಬದುಕುವವರು, ಹಾಗೇ ಅಂದುಕೊಳ್ಳ ಬಹುದು. ನನಗೆ ಹಾಗನ್ನಿಸುವುದೇ ? ನಾನೂ ಎಲ್ಲರಂತೆ ಇದ್ದಿದ್ದರೆ ನನ್ನ ತಮ್ಮ

ಹೀಗೇಕೆ ಮಾಡುತ್ತಿದ್ದ? ಅತ್ತೆ ಮನೆಗೆ ಹೋದರೆ ಅಳಿಯ ಬಂದನೆಂದು ತುಂಬಾ ಉಪಚಾರಮಾಡುತ್ತಾರೆ. ನನ್ನ ಮನೇಲಿ ಏನಿದೆ? ಕಾಫಿಪುಡಿ ಸಕ್ಕರೆ ತೆಗೆದುಕೊಂಡು ಬಂದರೆ ಕಾಫಿ ಮಾಡಿ ನಿನಗೂ ಕೊಟ್ಟು ನಾನೂ ಕುಡಿಯುತ್ತೇನೆ ಎನ್ನಬೇಕಾಗಿತ್ತು. ಏನೋ ಹಾಳುಪಾಪಿ ಅಳುಕುಮನಸ್ಸು; ಎಷ್ಟು ಬುದ್ಧಿ ಹೇಳಿದರೂ ಅದರ ದಾರಿ ಅದು ಬಿಡುವುದಿಲ್ಲ. ಆದರೇನು? ನಾನು ಗುಂಡಲ್ಲವೇ? ಯಾವುದಕ್ಕೂ ಜಗ್ಗುವುದಿಲ್ಲ. ಅದಕ್ಕೇ ನಾನು ಆ ಹೆಸರಿಟ್ಟುಕೊಂಡದ್ದು! ಏನೋ ಹೇಳುತ್ತಾರಲ್ಲ 'ಗೋರ್ಕಲ್ಲ ಮೇಲೆ ಮಳೆಗರೆದರೆ' ಅಂತ, ಹಾಗೆ! ಕಷ್ಟಸುಖ ಯಾವುದು ಬಂದರೂ ಬಹಳ ಹೊತ್ತು ನಿಲ್ಲುವುದಿಲ್ಲ. ಕಲ್ಲಿನ ಮೇಲೆ ಬಿದ್ದ ನೀರಿನ ಹಾಗೆ! ಒಂದುಕ್ಷಣ ನೆನಸಿ ಕೊಚ್ಚಿ ಹೋಗುತ್ತದೆ. ಅಷ್ಟೆ! ನಾಳೆ ಇಷ್ಟು ಹೊತ್ತಿಗೆ ನನ್ನ ಸಮಾನವಿಲ್ಲವೆಂದು ಹಪ್ಪಳವೋ, ಸಂಡಿಗೆಯೋ ಮಾಡುತ್ತ ಸಮಾಧಾನವಾಗಿದ್ದು ಬಿಡುತ್ತೇನೆ" ಎಂದು ಹೇಳಿ ಕಣ್ಣೊರಸಿಕೊಂಡಳು.

ಗುಂಡಮ್ಮ ಹೆಸರು ಬದಲಾಯಿಸಿಕೊಂಡ ವಿಚಾರ ನನಗೆ ಗೊತ್ತಿತ್ತು. ಅವಳ ಹೆಸರು 'ಅರವಿಂದ'. ಗುಂಡಮ್ಮ ಕುರೂಪಿಯೇನಲ್ಲ. ಈ ವಯಸ್ಸಿನಲ್ಲಿ ಇಷ್ಟು ತಾಪತ್ರಯಗಳಲ್ಲಿ ಇರುವಾಗಲೇ ತಕ್ಕಮಟ್ಟಿಗೆ ನೋಡಲು ಚೆನ್ನಾಗಿದ್ದಾಳೆ. ಚಿಕ್ಕತನದಲ್ಲಿ ಇನ್ನೂ ಲಕ್ಷಣವಾಗಿದ್ದಳೆಂದು ಅವಳನ್ನು ಈಗ ನೋಡುವ ಯಾರಾದರೂ ಸುಲಭವಾಗಿ ಊಹಿಸಬಹುದು. ತಾಯಿತಂದೆಗಳು ತಮ್ಮ ಒಂದೇ ಮಗುವನ್ನು ಮುದ್ದಿನಿಂದ 'ಅರವಿಂದ' ಎಂದು ಕೂಗುತ್ತಿದ್ದರು. ಅವಳು ಮೈಸೂರಿಗೆ ಬಂದ ತರುಣದಲ್ಲಿ ಯಾರೋ ಅವಳನ್ನು "ಮಾಡುವುದು ಕೂಲಿ, ಹೆಸರು ಮಾತ್ರ 'ಅರವಿಂದ'" ಎಂದು ಆಡಿಕೊಂಡರಂತೆ. ಅದು ಅವಳ ಕಿವಿಗೂ ಬಿದ್ದಿತು. ಗುಂಡಮ್ಮ ಅವರ ಮೇಲೆ ಕೋಪಿಸಿಕೊಳ್ಳಲಿಲ್ಲ, 'ಅದೂ ನ್ಯಾಯವೇ' ಎಂದುಕೊಂಡಳು. ಚೆನ್ನಾಗಿರುವ ಹೆಸರು, ಕೂಲಿ ಕೆಲಸ, ಎರಡೂ ಜೊತೆಯಲ್ಲಿ ಶೋಭಿಸುವುದಿಲ್ಲ. ಯಾವುದನ್ನಾದರೂ ಒಂದನ್ನು ಬಿಡಬೇಕು. ಗುಂಡಮ್ಮ ಆಗ ಇದ್ದ ಸ್ಥಿತಿಯಲ್ಲಿ ಯಾವುದನ್ನು ಬಿಡಬೇಕೆಂದು ಹೆಚ್ಚು ಯೋಚನೆಮಾಡಬೇಕಾಗಿರಲಿಲ್ಲ. ಹೆಸರು ಬದಲಾಯಿಸುವುದೇ ಸುಲಭವೆಂದುಕೊಂಡು, ಆಗಿನಿಂದ ಮುಂದೆ ತಾನು ಹೋದ ಕಡೆಯಲ್ಲೆಲ್ಲಾ 'ಗುಂಡಮ್ಮ'ನೆಂದು ಹೇಳಿಕೊಳ್ಳುತ್ತಾ ಬಂದಳಂತೆ.

ಈ ವಿಚಾರವನ್ನು ಅವಳೇ ಒಂದು ದಿನ ಏನೋ ಮಾತು ಬಂದಾಗ ಹೇಳಿದ್ದಳು. ಈಗಲೂ ಆ ಹೆಸರು ನೆನಪಾದ ಕೂಡಲೆ ಗುಂಡಮ್ಮನಿಗೆ ಹೊಸ ಶಕ್ತಿ ಬಂದಂತಾಗಿ ನಗು ಮುಖದಿಂದ ಎದ್ದು, "ನಾನು ಹೋಗುತ್ತೀನಮ್ಮ, ಹೊತ್ತಾಯಿತು" ಎಂದಳು.

ನಾನು, "ಗುಂಡಮ್ಮ ಏನಾದರೂ ಸ್ವಲ್ಪ ಫಲಾಹಾರ ಮಾಡಿಕೊಂಡು ಹೋಗಿ, ಬೆಳಗಿನಿಂದ ಊಟವಿಲ್ಲ" ಎಂದು ಹೇಳಿದೆ.

"ಏನೂ ಬೇಡಮ್ಮ, ನಾಳೆ ಊಟ ಆಗುತ್ತೆ. ಈಗ ನಾಗಮ್ಮ ಕೊಟ್ಟಿದಾಳಲ್ಲ ಅದನ್ನೇ ಅಷ್ಟು ಬಾಯಿಗೆ ಹಾಕಿಕೊಳ್ಳುತ್ತೇನೆ" ಎಂದು ಹೇಳಿ ಹೊರಟುಹೋದಳು.

ಗುಂಡಮ್ಮ ಹಾಗೇ ಕತ್ತಲೆಯಲ್ಲಿ ಮರೆಯಾದಳು. ನಾನು ಬಹಳ ಹೊತ್ತಿನ ವರೆಗೆ ಆ ಕಡೆಯೇ ನೋಡುತ್ತ, ಜೀವನದ ಸುಖದುಃಖಗಳ ಕುಲುಮೆಯಲ್ಲಿ ಕರಗಿ ತಿಳಿಯಾದ ಮನಸ್ಸನ್ನೂ, ಆ ಅನುಭವದ ಬೆಳಕನ್ನು ಪ್ರತಿಬಿಂಬಿಸುತ್ತಿದ್ದ ಅವಳ ಮುಖವನ್ನೂ ನೆನೆಯುತ್ತಿದ್ದೆ.

"ವಾಣಿ"

---

# ಶ್ರೀನಾಥ

(ಒಂದು ಕವಿಕಥೆ)

ಶ್ರೀನಾಥನು ತನ್ನ ಸಮಕಾಲೀನರಾದ ತೆಲುಗು ಕವಿಗಳನ್ನೆಲ್ಲ ಮೀರಿಸಿದ ಮಹಾಕವಿ; ತೆಲುಗಿನಲ್ಲಿ ಭಾರತವನ್ನು ರಚಿಸಿ 'ಕವಿತ್ರಯ'ವೆಂದು ಪ್ರಸಿದ್ಧರಾಗಿರುವ ನನ್ನಯಭಟ್ಟ, ತಿಕ್ಕನ ಸೋಮಯಾಜಿ, ಯೆಱ್ಱಪ್ರೆಗಡರಿಗೆ ಸಮಜೋಡಿ. ಇವನ ಕಾಲ ಕ್ರಿ. ಶ. ೧೩೬೫–೧೪೪೦. ತೆಲುಗು ಸಂಸ್ಕೃತಗಳೆರಡರಲ್ಲಿಯೂ ಈತನಿಗೆ ಅಸಾಧಾರಣವಾದ ಪಾಂಡಿತ್ಯ. ಆದ್ದರಿಂದಲೇ ಈತನು ವಿದ್ವದೌಷಧವೆನಿಸಿದ ನೈಷಧವನ್ನೂ ಉಕ್ಕಿನ ಉಂಡೆಗೆ ಹೋಲಿಸಲ್ಪಟ್ಟಿರುವ ಕಾಶೀಖಂಡವನ್ನೂ ಸುಲಭವಾಗಿ ತೆಲುಗಿಸಿ ಕವಿಸಾರ್ವಭೌಮನೆನಿಸಿಕೊಂಡನು. ಈತನು ಕೃಷ್ಣಾ ಜಿಲ್ಲೆಯ ಕಾಲಪಟ್ಟಣವೆಂಬ ಒಂದು ಸಣ್ಣ ಗ್ರಾಮದಲ್ಲಿ ಜನಿಸಿ ತನ್ನ ತಾತನಾದ ಕಮಲನಾಭಾಮಾತ್ಯನ ಪೋಷಣೆಯಲ್ಲಿ ಬೆಳೆದು ಉಭಯ ಭಾಷಾಸಾಹಿತ್ಯಗಳನ್ನೂ ಅಭ್ಯಾಸಮಾಡಿದನು. ಈತನು ಸಹಜಕವಿ. ಬಾಲ್ಯದಲ್ಲಿಯೇ ಈತನಿಗೆ ಕವಿತಾಶಕ್ತಿ ಲಭಿಸಿದಂತೆ ತೋರುತ್ತದೆ. ಚಿಕ್ಕಹುಡುಗನಾಗಿದ್ದಾಗಲೇ ಮರುತ್ತರಾಯಚರಿತ್ರೆಯೆಂಬ ಕಾವ್ಯವನ್ನು ಬರೆದನಂತೆ! ಯೌವನ ಪ್ರಾದುರ್ಭಾವ ಸಮಯದಲ್ಲಿ ಶಾಲೀವಾಹನ ಸಪ್ತಶತಿಯನ್ನೂ ತುಂಬುಯೌವನದಲ್ಲಿ ಆಂಧ್ರನೈಷಧವನ್ನೂ ಪ್ರೌಢ ವಯಸ್ಸಿನಲ್ಲಿ ಭೀಮಖಂಡವನ್ನೂ ವಾರ್ಧಕ್ಯ ಸಮೀಪಿಸುವ ಮೊದಲೇ ಕಾಶೀಖಂಡವನ್ನೂ ಬರೆದನಂತೆ! ಇವಲ್ಲದೆ ನಿಗಮಾರ್ಥಸಾರಸಂಗ್ರಹ, ಪಂಡಿತಾರಾಧ್ಯ ಚರಿತೆ, ಪಲ್ನಾಟಿವೀರಚರಿತೆ, ವೀಧೀನಾಟಕ ಎಂಬ ಗ್ರಂಥಗಳನ್ನೂ ಬರೆದಿರುವಂತೆ ತೋರುತ್ತದೆ. ಈತನ ನೈಷಧವು ಬಹಳ ಶ್ರೇಷ್ಠವಾಗಿದ್ದು ಆಂಧ್ರ ಪಂಚಮಹಾ ಕಾವ್ಯಗಳಲ್ಲಿ ಒಂದೆಂದು ಪರಿಗಣಿತವಾಗಿದೆ. ಕೆಲವು ಸಂದರ್ಭಗಳಲ್ಲಿ ಮೂಲ ಗ್ರಂಥಕ್ಕಿಂತ ಭಾಷಾಂತರವೇ ಶ್ರೇಷ್ಠವಾಗಿದೆಯೆಂಬುದು ವಿದ್ವಾಂಸರ ಮತ. 'ಶ್ರೀಹರ್ಷನಿಗೊಬ್ಬ ಶ್ರೀನಾಥ' ಎಂದು ಹೇಳುವುದು ವಾಡಿಕೆಯಾಗಿದೆ. ಅವನ ವಿಚಾರವಾಗಿ ಹಲವು ಕಥೆಗಳು ಪ್ರಚಾರದಲ್ಲಿವೆ. ಶ್ರೀನಾಥನೇ ತನ್ನ ಅನುಭವಗಳನ್ನು ಹಲವು ಬಿಡಿ ಪದ್ಯಗಳಲ್ಲಿ ವರ್ಣಿಸಿದ್ದಾನೆ. ಆ ಪದ್ಯಗಳು ಚಾಟು ಶ್ಲೋಕಗಳಂತೆ ತೆಲುಗು ದೇಶದಲ್ಲಿ ಪ್ರಚಾರಗೊಂಡಿವೆ. ಅವುಗಳಲ್ಲಿ ಕೆಲವನ್ನು ಮುಂದೆ ಕೊಟ್ಟಿದೆ. ಈಗಿನ ಕರ್ನೂಲು ಜಿಲ್ಲೆಗೆ ರೇನಾಡೆಂದು ಹೆಸರು. ಈ ರೇನಾಡಿಗೆ ಶ್ರೀನಾಥನು

ಹೋದಾಗ ಅಲ್ಲಿ ಯಾರೋ ಅವನಿಗೆ ಜೋಳದ ಅನ್ನವನ್ನು ಬಡಿಸಿದ್ದಾರೆ; ಭೋಜನ ರಸಿಕನೂ, ಭೋಗಲಾಲಸನೂ ಆದ ಶ್ರೀನಾಥನಿಗೆ ಅದು ಹಾಲಾಹಲಕ್ಕಿಂತಲೂ ಕಠಿನವಾಗಿ ಕಂಡಿತಂತೆ! ಅದನ್ನು ಕುರಿತು ಈ ಪದ್ಯವನ್ನು ನುಡಿದಿದ್ದಾನೆ:—

ಗರಳಮು ಮ್ರಿಂಗಿ ತಿನಂಚುಂ
ಬುರಹರ ಗರ್ವಿಂಪಬೋಕು ಪೋಪೋಪೋ ನೀ
ಬಿರುದಿಂಕಗಾನವಚ್ಚೆ ಡಿ
ಮೆಱಸೆಡಿ ರೇನಾಟಿ ಜೊನ್ನಮೆದುಕುಲು ತಿನುವಿಾ ||

(ಓ ಪುರಹರ, ಗರಳವನ್ನು ನುಂಗಿದೆನೆಂದು ಗರ್ವಿಸಬೇಡ. ಈ ರೇನಾಡಿನ ಜೋಳದ ಅಗುಳುಗಳನ್ನು ತಿಂದರೆ ನಿನ್ನ ಯೋಗ್ಯತೆ ತಿಳಿಯುತ್ತದೆ.)

ರೇನಾಡೇ ಅಲ್ಲದೆ ಪಲ್ನಾಡೂ ಶ್ರೀನಾಥನ ಟೀಕೆಗೆ ಒಳಗಾಗಿದೆ. ಗುಂಟೂರು ಜಿಲ್ಲೆಯ ಪಶ್ಚಿಮಭಾಗಕ್ಕೆ ಪಲ್ನಾಡೆಂದು ಹೆಸರು. ಇಲ್ಲಿ ಜಲಕ್ಷಾಮ ಹೆಚ್ಚು; ಜನರು ಬಡವರು, ಒರಟರು. ಇಂಥಾ ದೇಶದಲ್ಲಿ ಈ ರಸಿಕಶಿಖಾಮಣಿಗೆ ಆದ ರೋಪಚಾರಗಳು ಹೇಗೆ ನಡೆದಾವು? ಇಲ್ಲಿನ ಜನರ ದಾರಿದ್ರ್ಯ ಒರಟುತನಗಳನ್ನು ಕವಿಯು ಹಲವು ಪದ್ಯಗಳಲ್ಲಿ ವರ್ಣಿಸಿದ್ದಾನೆ. ತಾನು ಒಂದುಸಲ ಇಳಿದುಕೊಂಡಿದ್ದ ಪುರೋಹಿತನ ಮನೆಯ ವರ್ಣನೆ ಇದು:—

ದೋಸೆಡು ಕೊಂಪಲೋ ಪಸುಲ ತ್ರೊಕ್ಕಿಡಿ ಮಂಚಮು ದೂಡರೇಣಮುನ್
ಬಾಸಿನ ವಂಟಕಂಬು ಪಸಿಬಾಲುರ ಶೌಚಮು ವಿಸ್ತರಾಕುಲುನ್
ಮಾಸಿನ ಗುಡ್ಡಲುನ್ ತಲಕು ಮಾಸಿನ ಮುಂಡಲು ವಂಟಕುಂಡಲುನ್
ರಾಸೆಡು ಕಟ್ಟೆಲುಂ ದಲಪರಾದು ಪುರೋಹಿತಲಿಂಟಿಕೃತ್ಯಮುಲ್

(ಬೊಗಸೆಯಷ್ಟು 'ಕೊಂಪೆ'ಯಲ್ಲಿ ದನಗಳ ತುಳಿದಾಟ, ಒಂದು ಮಂಚ, ಕರುವಿನ ಸಗಣಿ, ಹಳಸಿದ ತಂಗಳು, ಚಿಕ್ಕಮಕ್ಕಳ ಶೌಚ, ಊಟದೆಲೆಗಳು,* ಮಾಸಿದ ಬಟ್ಟೆಗಳು, ತಲೆಮಾಸಿದ ಮುಂಡೆಯರು, ಅಡಿಗೆಯ ಮಡಕೆಗಳು, ರಾಸಿಗಟ್ಟಲೆ ಸೌದೆ—ಈ ಪಲ್ನಾಡಿನ ಪುರೋಹಿತರ ಮನೆಯ ಕೃತ್ಯಗಳನ್ನು ನೆನೆಸಿಕೊಳ್ಳಲೂ ಬಾರದು.)

ರಸಿಕಡು ಪೋವಡು ಪಲ್ನಾ
ಡೆಸಗಂಗಾ ರಂಭಯೈನ ನೇಕುಲೆ ವಡುಕುನ್
ವಸುಧೇಶುಡೈನ ದುನ್ನುನು
ಗುಸುಮಾಸ್ತ್ರುಂಡೈನ ಜೊನ್ನ ಕೂಡೇ ಕುಡುಚುನ್

---

* ಪಲ್ನಾಡಿನ ಹಳ್ಳಿಗಳಲ್ಲಿ ಊರಿನ ಒಕ್ಕಲಿಗರಿಗೆ ಉತ್ಸವಕಾಲಗಳಲ್ಲಿ ಬೇಕಾಗುವಷ್ಟು ಊಟದೆಲೆಗಳನ್ನು ಪುರೋಹಿತರೇ ಹಚ್ಚಿಕೊಡಬೇಕಂತೆ. ಅದಕ್ಕಾಗಿ ಅವರ ಮನೆಯಲ್ಲಿ ರಾಸಿಗಟ್ಟಲೆ ಎಲೆ ಬಿದ್ದಿರುತ್ತದೆ.

(ರಸಿಕನು ಪಲ್ನಾಡಿಗೆ ಹೋಗನು. ಏಕೆಂದರೆ ಅಲ್ಲಿ ರಂಭೆಯಾದರೂ ರಾಟೆ ಹಿಡಿದು ನೂಲಬೇಕು. ವಸುಧೇಶನೇ ಆದರೂ ನೇಗಿಲುಹಿಡಿದು ಉಳಬೇಕು. ಕುಸುಮಾಸ್ತ್ರನೇ ಆದರೂ ಜೋಳದ ಕೂಳನ್ನೇ ತಿನ್ನಬೇಕು.)

ಪಲ್ನಾಡಿನಲ್ಲಿ ಒಂದು ಸಲ ದಾರಿ ನಡೆಯುತ್ತಿದ್ದಾಗ ದಾಹವಾಗಿ ನೀರು ಸಿಕ್ಕದೆ ಕಷ್ಟಪಟ್ಟ ಶ್ರೀನಾಥನು ನೀರಿಗಾಗಿ ಆ ಗಂಗಾಧರನನ್ನು ಬೇಡಿದ ರೀತಿ ಇದು:—

ಸಿರಿ ಗಲವಾನಿಕಿ ಜೆಲ್ಲುನು
ದರುಣುಲು ಪದಿಯಾರು ವೇಲದಗ ಪೆಂಡ್ಲಾಡನ್
ದಿರಿಪೆಮುನಕಿದ್ದರಾಂಡ್ರಾ
ಪರಮೇಶಾ ಗಂಗ ವಿಡುಮು ಪಾರ್ವತಿ ಚಾಲುನ್ ||

(ಸಿರಿಯುಳ್ಳವನು ಹದಿನಾರು ಸಾವಿರ ತರುಣಿಯರನ್ನು ಮದುವೆಯಾದರೂ ಸಲ್ಲುತ್ತದೆ. 'ತಿರುಪೆ' ಯವನಿಗೆ ಇಬ್ಬರು ಹೆಂಡಿರೆ? ಪರಮೇಶ್ವರಾ, ನಿನಗೆ ಪಾರ್ವತಿಯೊಬ್ಬಳು ಸಾಕು; ಗಂಗೆಯನ್ನು ಬಿಟ್ಟುಬಿಡು.)

ಶ್ರೀನಾಥನು ಮಹಾ ಶಿವಭಕ್ತ. 'ಕಾಂಶೀಖಂಡ,' 'ಶಿವರಾತ್ರಿ ಮಾಹಾತ್ಮ್ಯ,' 'ಹರವಿಲಾಸ' ಎಂಬ ಶೈವಗ್ರಂಥಗಳನ್ನು ರಚಿಸಿದವನು. ಆದರೆ ಈ ಪದ್ಯದಲ್ಲಿ ಅವನು ಶಿವನನ್ನು ಪ್ರಾರ್ಥಿಸಿರುವ ರೀತಿಯಲ್ಲಿ ಒಂದು ಔದ್ಧತ್ಯವಿದೆ. ಇನ್ನೊಂದು ಸಲ ಶ್ರೀನಾಥನು ಬಹಳ ಬೇಸರಗೊಂಡು ಪಲ್ನಾಡನ್ನು ಹೀಗೆ ಬೈದಿದ್ದಾನೆ:

ಅಂಗಡಿ ಯೂರಲೇದು ವರಿಯನ್ನಮು ಲೇದು ಶುಚಿತ್ವಮೇಮಿ ಲೇ
ದಂಗನಲಿಂಪುಗಾರು ಪ್ರಿಯಮೈನ ವನಂಬುಲು ಲೇವು ನೀಟಿಕೈ
ಭಂಗಪಡಂಗ ಬಾಲ್ಪಡು ಕೃಪಾಪರುಲೆವ್ವರು ಲೇರು ದಾತಲೆ
ನ್ನಂಗನು ಸುನ್ನ ಗಾನ ಪಲ್ನಾಟಿಕಿ ಕಾಟಿಕಿ ಪೋವ ನೇಟಿಕಿನ್

(ಊರಲ್ಲಿ ಒಂದು ಅಂಗಡಿಯಿಲ್ಲ. ನೆಲ್ಲಕ್ಕಿಯ ಅನ್ನವಿಲ್ಲ. ಶುಚಿತ್ವವು ಎಷ್ಟು ಮಾತ್ರವೂ ಇಲ್ಲ. ಅಂಗನೆಯರಲ್ಲಿ ಇಂಪಿಲ್ಲ. ಪ್ರಿಯವಾದ ಉದ್ಯಾನಗಳಿಲ್ಲ. ನೀರಿಗಾಗಿ ಭಂಗಪಟ್ಟರೆ ಸಹಾಯಮಾಡುವ ಕೃಪಾಪರರು ಯಾರೂ ಇಲ್ಲ. ದಾತರು ಸೊನ್ನೆ. ಇಂಥಾ ಪಲ್ನಾಡಿಗೆ, ಸ್ಮಶಾನಕ್ಕೆ, ಏಕೆ ಹೋಗಬೇಕು?)

ಕನ್ನಡ ದೇಶವೂ ಶ್ರೀನಾಥನ ಗಮನಕ್ಕೆ ಬಂದಿದೆ. ವಿಜಯನಗರದ ಪ್ರೌಢ ದೇವರಾಯನ ಸಂದರ್ಶನಾರ್ಥವಾಗಿ ಬಂದ ಶ್ರೀನಾಥನಿಗೆ ಎಷ್ಟುದಿನಗಳಾದರೂ ರಾಜದರ್ಶನ ಲಭಿಸಲಿಲ್ಲ. ಆಗ ಬೇಸರಗೊಂಡು ಶ್ರೀನಾಥನು ಈ ಪದ್ಯವನ್ನು ಹೇಳಿದ್ದಾನೆ:

ಕುಲ್ಲಾಯುಂಚಿತಿ ಗೋಕ ಸುಟ್ಟಿತಿ ಮಹಾಕೂರ್ಪಾಸಮು ನ್ದೊೀಡಿತಿನ್
ವೆಲ್ಲುಲ್ಲಿನ್ ತಿಲಪಿಷ್ಟಮುನ್ ಪಿಸಿಕಿತಿನ್ ವಿಶ್ವಸ್ತ ವಡ್ಡಿಂಪಗಾ
ಸಲ್ಲಾನಂಬಲಿ ದ್ರಾವಿತಿನ್ ರುಚುಲು ದೋಸಂಬಂಚು ಬೋನಾಡಿತಿನ್
ದಲ್ಲೀ ಕನ್ನಡರಾಜ್ಯಲಕ್ಷ್ಮಿ ದಯಲೇದಾ ನೇನು ಶ್ರೀನಾಥುಡನ್.

(ಕುಲಾವಿಯನ್ನಿಟ್ಟುಕೊಂಡೆ; ಸೀರೆ (ರುಮಾಲು)ಯನ್ನು ತಲೆಗೆ ಸುತ್ತಿದೆ. ಈ ದೊಡ್ಡ ಕುಪ್ಪಸ (ನಿಲುವಂಗಿ)ವನ್ನು ತೊಟ್ಟುಕೊಂಡೆ. ಬೆಳ್ಳುಳ್ಳಿ ಎಳ್ಳುಗಳ ಚಟ್ಣಿಯನ್ನು ತಿನ್ನಲಾರದೆ ಕೈಲಿ ಹಿಸಿಕಿ ಬಿಸಾಟೆ. ತಣ್ಣನೆಯ ಗಂಜಿಯನ್ನು ಕುಡಿದೆ. ರುಚಿಗಳು ದೋಷವೆಂದೆಣಿಸಿ ಬಿಟ್ಟುಬಿಟ್ಟೆ. ತಾಯಿ, ಕನ್ನಡ ರಾಜ್ಯಲಕ್ಷ್ಮೀ, ಇಷ್ಟಾದರೂ ನಿನಗೆ ದಯೆ ಬರಲಿಲ್ಲವೆ? ನಾನು ಶ್ರೀನಾಥ.)

ಆ ಮೇಲೆ ಶ್ರೀನಾಥನಿಗೆ ರಾಜಸಂದರ್ಶನವು ಲಭಿಸಿದುದೇ ಅಲ್ಲದೆ ಅರಸನಿಂದ ಕನಕಾಭಿಷೇಕವೇ ನಡೆಯಿತಂತೆ!

ನೆಲ್ಲೂರು ಜಿಲ್ಲೆಯ ಒಂದು ಭಾಗಕ್ಕೆ ಹಿಂದೆ ರಾವುಸಿಂಗಭೂಪಾಲನು ದೊರೆಯಾಗಿದ್ದನು. ಈತನು ಮಹಾ ಪ್ರಾಜ್ಞನಾಗಿದ್ದುದಲ್ಲದೆ, ತನ್ನ ಆಸ್ಥಾನದಲ್ಲಿ ಹಲವರು ವಿದ್ವಾಂಸರನ್ನು ಪೋಷಿಸುತ್ತಿದ್ದನು. ಈತನಿಗೆ 'ಸರ್ವಜ್ಞ'ನೆಂಬ ಒಂದು ಬಿರುದು ಕೂಡ ಇತ್ತು. ಈತನ ಬಳಿಗೆ ಶ್ರೀನಾಥನು ತನ್ನ ಆಶ್ರಯದಾತನಾದ ವೇಮಭೂಪಾಲನ ರಾಯಭಾರಿಯಾಗಿ ಹೋಗಬೇಕಾಯಿತು. ಅಲ್ಲಿ ತನಗೆ ಗೌರವ ಬಂದೀತೋ ಬಾರದೋ ಎಂಬ ಶಂಕೆಯಿಂದ ಶ್ರೀನಾಥನು ಶಾರದೆಯನ್ನು ಹೀಗೆ ಪ್ರಾರ್ಥಿಸಿದನಂತೆ:

ದೀನಾರಟಂಕಾಲ ದೀರ್ಥಮಾಡಿಂಚಿತಿ
    ದಕ್ಷಿಣಾಧೀಶು ಮುತ್ಯಾಲ ಶಾಲ.
ಪಲುಕುದೋಡೈತಾಂಧ್ರಭಾಷಾಮಹಾಕಾವ್ಯ
    ನೈಷಧಗ್ರಂಥಸಂದರ್ಭಮುನಕು.
ಪಗುಲಗೊಟ್ಟಿಂಚಿತುದ್ಭಟವಿವಾದಪ್ರೌಢಿ
    ಗೌಡಡಿಂಡಿಮಭಟ್ಟು ಕಂಚು ಢಕ್ಕ
ಚಂದ್ರಭೂಷಕ್ರಿಯಾಶಕ್ತಿರಾಯಲಯೊದ್ದ
    ಪಾದುಕೊಲ್ಪಿತಿ ಸಾರ್ವಭೌಮಬಿರುದ
ಮೆಟುಲುಮೆಪ್ಪಿಂಚೆದೋನನ್ನು ನಿಂಕವಿಾದ
ರಾವುಸಿಂಗಮಹೀಪಾಲು ಧೀವಿಶಾಲು
ನಿಂಡುಕೊಲುವುನ ನೆಲಕೊನಿಯುಂಡಿ ನೀವು
ಸರಸಸದ್ಗುಣನಿಕುರುಂಬ ಶಾರದಾಂಬ ||

(ದಕ್ಷಿಣಾಧೀಶನ ಮುತ್ತಿನ ಓಲಗಶಾಲೆಯಲ್ಲಿ ನನಗೆ ದೀನಾರ ಟಂಕಗಳಿಂದ ಅಭಿಷೇಕ ಮಾಡಿಸಿದೆ. ಆಂಧ್ರಭಾಷೆಯಲ್ಲಿ ನೈಷಧವೆಂಬ ಮಹಾಕಾವ್ಯವನ್ನು ಬರೆಯಲು ಸಹಾಯಮಾಡಿದೆ. ಗೌಡದೇಶದ ಡಿಂಡಿಮಭಟ್ಟನನ್ನು ಪ್ರೌಢವಾದ ವಾಗ್ವಾದದಲ್ಲಿ ಸೋಲಿಸಿ ಅವನ ಕಂಚಿನ ಢಕ್ಕೆಯನ್ನು ಒಡೆದುಹಾಕಿಸಲು ಸಹಾಯಮಾಡಿದೆ. ಚಂದ್ರಭೂಷ ಕ್ರಿಯಾಶಕ್ತಿರಾಯರ ಆಸ್ಥಾನದಲ್ಲಿ ನನಗೆ ಕವಿಸಾರ್ವಭೌಮನೆಂಬ ಬಿರುದನ್ನು ಕೊಡಿಸಿದೆ. ಓ ಶಾರದಾಂಬೆ, ಸದ್ಗುಣನಿಕುರುಂಬೆ, ಇನ್ನು ಮಹಾಧೀ ಶಾಲಿಯಾದ ರಾವುಸಿಂಗಮಹೀಪಾಲನ ಒಡ್ಡೋಲಗದಲ್ಲಿ ನೀನು ಹೇಗೆ ಗೌರವವನ್ನು ಉಳಿಸುವೆಯೋ !).

ಈ ಪ್ರಾರ್ಥನೆಯಲ್ಲಿಯೇ ಶ್ರೀನಾಥನು ತನ್ನ ಹಿಂದಿನ ವೈಭವವನ್ನೆಲ್ಲ ವರ್ಣಿಸಿದ್ದಾನೆ.

ಒಂದು ಸಲ ರಾಜಮಹೇಂದ್ರಕ್ಕೆ ಹೋಗಿದ್ದಾಗ ಅಲ್ಲಿನ ಪಂಡಿತರು ಶ್ರೀನಾಥ ನನ್ನು ಅಪಹಾಸ್ಯಮಾಡಿದರಂತೆ. ಕೂಡಲೆ ಆಗ್ರಹೋದಗ್ರನಾದ ಶ್ರೀನಾಥನು ತನ್ನ ಆಶುಕವಿತೆಯ ಖಡ್ಗಧಾರೆಯನ್ನು ಅವರ ಮೇಲೆ ಬೀಸಿದನು. ಅವನು,

ಬೋಧಮಲ್ಪಂಬು ಗರ್ವಮಭ್ಯುನ್ನತಂಬು
ಶಾಂತಿ ನಿಪ್ಪಚ್ಚರಂಬು ಮಚ್ಚರಮು ಘನಮು
ಕೂಪಮಂಡೂಕಮುಲ ಬೋಲೆ ಕೊಂಚವೆಱುಗಿ
ಪಂಡಿತಂಮನ್ಯುಲೈನ ವೈತಂಡಿಕುಲಕು

ಎಂದು ಬಹಳ ಉಗ್ರವಾಗಿ ನುಡಿದು ಅವರ ಬಾಯಿ ಮುಚ್ಚಿದನಂತೆ.

(ಬಾವಿಯೊಳಗಿನ ಕಪ್ಪೆಗಳಂತೆ ಕೊಂಚ ತಿಳಿದು ಪಂಡಿತಂಮನ್ಯರಾದ ಈ ವಿತಂಡಾ ವಾದಿಗಳಿಗೆ ಜ್ಞಾನ ಕೊಂಚ; ಗರ್ವ ಹೆಚ್ಚು. ಶಾಂತಿ ಸೊನ್ನೆ; ಮತ್ಸರ ಹೆಚ್ಚು.)

ಹೀಗೆ ಭೋಗೈಕಲಾಲಸನಾಗಿ, ರಸಿಕನಾಗಿ, ಶ್ರೀಮಂತನಾಗಿ, ರಾಜಸನ್ಮಾನಿತ ನಾಗಿ ಬದುಕಿದ ಶ್ರೀನಾಥನಿಗೂ ಕಷ್ಟ ತಪ್ಪಲಿಲ್ಲ. ರಾಜಮಹೇಂದ್ರವು ನಾಶವಾಯಿತು. ಅಲ್ಲಿನ ದೊರೆ ಪದಭ್ರಷ್ಟನಾದನು. ಶ್ರೀನಾಥನಿಗೆ ಇನ್ನಾವ ರಾಜನ ಆಶ್ರಯವೂ ಸಿಕ್ಕಲಿಲ್ಲ. ಯತ್ನವಿಲ್ಲದೆ ಕೃಷ್ಣಾತೀರದಲ್ಲಿ ಬೊಡ್ಡುಪಲ್ಲಿಯೆಂಬ ಗ್ರಾಮವನ್ನು ಶ್ರೀನಾಥನನು ಗುತ್ತಿಗೆಗೆ ತೆಗೆದುಕೊಂಡನು. ಆದರೆ ದುರ್ದೈವದಿಂದ ಆ ವರ್ಷ ಪ್ರವಾಹ ಹೆಚ್ಚಾಗಿ ಬಂದು ಇಡಿಸಿದ್ದ ಬೆಳೆ ಹಾಳಾಯಿತು. ಗುತ್ತಿಗೆಯ ಹಣ ಸಲ್ಲಿಸಲು ಅಸಾಧ್ಯವಾಯಿತು. ಗಜಪತಿರಾಜರು ಸುಮ್ಮನೆ ಬಿಡುವವರಲ್ಲ. ಗುತ್ತಿಗೆಯನ್ನು ಕೊಡದ ಈ ಕವಿರಾಜನಿಗೆ ಕೋಳಹಾಕಿ, ಗುಂಡುಹೊರಿಸಿ, ಮೆರವಣಿಗೆ ಮಾಡಿ ಅವಮಾನಪಡಿಸಿದರು. ಆಗ "ಕರ್ಣಾಟಕಕ್ಷಿತಿಪಾಲಮೌಕ್ತಿಕ ಸಭಾಗಾರಾಂತರಾ

ಕಲ್ಪಿತಸ್ವರ್ಣಸ್ನಾನ ಜಗತ್ಪ್ರಸಿದ್ಧ ಕವಿ'' ರಾಜನಾದ ಶ್ರೀನಾಥನು ತನ್ನ ಪೂರ್ವ ಸ್ಥಿತಿಯನ್ನು ನೆನೆಸಿಕೊಂಡು ಅತ್ತಿದ್ದಾನೆ—

ಕವಿರಾಜು ಕಂಠಂಬು ಕೌಗಿಲಿಂಚೆನು ಗದಾ
ಪುರವೀಥಿನೆದುರೇಗ ಬೊಗಡ ದಂಡ
ಸಾರ್ವಭೌಮುನಿ ಭುಜಾಸ್ತಂಭಮೆಕ್ಕೆನು ಗದಾ
ನಗರಿ ವಾಕಿಟನುಂಡು ನಲ್ಲ ಗುಂಡು
ವೀರಭದ್ರಾರೆಡ್ಡಿ ವಿದ್ವಾಂಸು ಮುಂಜೇತ
ವಿಯ್ಯಮುಂದೆನು ಗದಾ ವೆದುರು ಗೊಡಿಯ
ಆಂಧ್ರನೈಷಧಕರ್ತ ಯಂಘ್ರಿಯುಗ್ಮಂಬುನ
ದಗಿಲಿ ಯುಂಡೆನು ಗದಾ ನಿಗಳಯುಗಮು
ಕೃಷ್ಣವೇಣಮ್ಮ ಗೊನಿಪೋಯೆನಿಂತಫಲಮು
ಬಿಲಬಿಲಾಕ್ಷುಲುದಿನಿಪೋಯೆ ದಿಲಲುಪೆಸಲು
ಬೊಡ್ಡುಪಲ್ಲೆನುಗೊಡ್ಡೇರಿ ವೋಸಪೋತಿ
ನೆಟ್ಟುಚೆಲ್ಲಿಂತು ಡಂಕಂಬುಲೇಡುನೂರ್ಲು ?

(ಕವಿರಾಜನ ಕೊರಳಿಗೂ ಅಪಮಾನಕರವಾದ ಈ ದಂಡೆಯು ಬಿತ್ತಲ್ಲವೆ? ಕವಿ ಸಾರ್ವಭೌಮನಾದ ನನ್ನ ಭುಜದ ಮೇಲೆ ಈ ಊರು ಬಾಗಿಲಿನ ಕರಿಯಗುಂಡನ್ನು ಎತ್ತಿದರಲ್ಲವೆ? ವೀರಭದ್ರಾರೆಡ್ಡಿಯ ವಿದ್ವಾಂಸನ ಮುಂಗೈಗೆ ಬಿದಿರಿನ ಕೋಳವನ್ನು ಹಾಕಿದರು. ಆಂಧ್ರನೈಷಧಕರ್ತನ ಅಂಘ್ರಿಯುಗ್ಮಕ್ಕೆ ಸಂಕೋಲೆ ತಗಲಿಸಿದರು. ಕೃಷ್ಣವೇಣಮ್ಮನು (ನದಿ) ಕೊಂಚ ಫಲವನ್ನು ಕೊಂಡುಹೋದಳು. ಇಲಿಗಳು, ಕ್ರಿಮಿಕೀಟಗಳು ಕೊಂಚ ತಿಂದುಹಾಕಿದುವು. ಬೊಡ್ಡುಪಲ್ಲಿ ಎಂಬ ಈ ಕುಗ್ರಾಮಕ್ಕೆ ಬಂದು ಮೋಸಹೋದೆ. ಏಳುನೂರು ಟಂಕಗಳನ್ನು ಕಂದಾಯಕ್ಕಾಗಿ ನಾನು ಹೇಗೆ ಸಲ್ಲಿಸಲಿ?) ಹೀಗೆ ಕಂದಾಯವನ್ನು ಕೊಡಲಾರದೆ ಗಜಪತಿರಾಜರ ಕಾಟಕ್ಕೆ ಈಡಾಗಿ ಬಹಳ ರಿಕ್ತಾವಸ್ಥೆಯಲ್ಲಿಯೇ ತನ್ನ ವೃದ್ಧಾಪ್ಯವನ್ನು ಕಳೆದು ದಿವಂಗತನಾದನು. ತನ್ನ ಅವಸಾನಕಾಲದಲ್ಲಿಯೂ ಶ್ರೀನಾಥನು ತನ್ನ ಆತ್ಮಪ್ರತ್ಯಯವನ್ನು ಬಿಡಲಿಲ್ಲ. ಕೊನೆಗಾಲದಲ್ಲಿ ಶ್ರೀನಾಥನು ಹೇಳಿದ ಪದ್ಯವಿದು :

ಕಾಶಿಕಾ ವಿಶ್ವೇಶು ಗಲಿಸೆ ವೀರಾರೆಡ್ಡಿ
ರತ್ನಾಂಬರಂಬುಲೇ ರಾಯಡಿಚ್ಚು
ರಂಭಗೂಡೆ ದೆನುಂಗುರಾಯರಾಹತ್ತುಂಡು
ಕಸ್ತೂರಿಕೇರಾಜು ಪ್ರಸ್ತುತಿಂತು
ಸ್ವರ್ಗಸ್ಥುಡಯ್ಯೆ ವಿಸ್ಸನಮಂತ್ರಿ ಮಱಿ ಹೇಮ
ಪಾತ್ರಾನ್ನಮೆವ್ವನಿ ಪಂಕ್ತಿ ಗಲದು.

ಕೈಲಾಸಗಿರಿ ಬಂಡೆ ಮೈಲಾರುವಿಭುಡೇಗಿ
ದಿನವೆಚ್ಚಮೇ ರಾಜು ತೀರ್ಪಗಲಡು.
ಭಾಸ್ಕರುಡು ಮುನ್ನೆ ದೇವುನಿ ಪಾಲಿಕರಿಗೆ
ಗಲಿಯುಗಂಬುನ ನಿಕ ನುಂಡಗಷ್ಟಮನುಚು
ದಿವಿಜಕವಿವರು ಗುಂಡಿಯಲ್ ದಿಗ್ಗುರನಗ
ನರುಗುಚುನ್ನಾಡು ಶ್ರೀನಾಥುಡಮರಪುರಿಕಿ.

(ವೀರಾರೆಡ್ಡಿಯು ಕಾಶೀವಿಶ್ವೇಶ್ವರನನ್ನು ಸೇರಿಬಿಟ್ಟ. ಇನ್ನು ರತ್ನಾಂಬರಗಳನ್ನು ಯಾವ ರಾಯನು ಕೊಡುತ್ತಾನೆ? ತೆನುಗುರಾಯನು ರಂಭೆಯನ್ನು ಕೂಡಿದ. ಕಸ್ತೂರಿಗಾಗಿ ಇನ್ನು ಯಾವ ರಾಜನನ್ನು ಹೊಗಳಲಿ? ವಿಸ್ಸನಮಂತ್ರಿ ಸ್ವರ್ಗಸ್ಥನಾದ. ಇನ್ನು ಹೇಮಪಾತ್ರಾನ್ನವು ಯಾರ ಪಂಕ್ತಿಯಲ್ಲಿ ಲಭಿಸೀತು? ಮೈಲಾರವಿಭುವು ಕೈಲಾಸಗಿರಿಯನ್ನು ಹತ್ತಿದನು. ಇನ್ನು ದಿನವೆಚ್ಚವನ್ನು ಯಾವ ರಾಜನು ತೀರಿಸಬಲ್ಲನು? ಭಾಸ್ಕರನು ಮೊದಲೆ ದೇವರ ಬಳಿಗೆ ಸೇರಿದನು. ಆದ್ದರಿಂದ ಇನ್ನು ಕಲಿಯುಗದಲ್ಲಿರುವುದು ಕಷ್ಟವೆಂದು ಯೋಚಿಸಿ ಶ್ರೀನಾಥನು ಅಮರಪುರಿಗೆ ಹೋಗುತ್ತಿದ್ದಾನೆ. ದೇವಕವಿಯ (ಶುಕ್ರನ) ಎದೆ ಹೊಡೆದುಕೊಳ್ಳುತ್ತಿದೆ.)

'ಇನ್ನು ಶ್ರೀನಾಥನು ಸ್ವರ್ಗಕ್ಕೆ ಬರುವನಲ್ಲಾ' ಎಂದು ದೇವಕವಿಯ (ಶುಕ್ರನ) ಗುಂಡಿಗೆಯು 'ದಿಗ್ಗ್' ಎಂದಿತಂತೆ!

ಕೆ. ವೆಂಕಟರಾಮಪ್ಪ.

# ಕಾವ್ಯಾವಲೋಕನ

**ಭಾರತಮಾರ್ಗ**—ಅನುವಾದಕರು: ಗುರುರಾಜ ಭೀ. ಜೋಶಿ, ಎಂ.ಎ., ಬಿ.ಟಿ.; ಕ್ರೌನ್ ಅಷ್ಟಪುಟಗಳು ೪೧೩; ಪ್ರಕಾಶಕರು: ಮನೋಹರ ಗ್ರಂಥಮಾಲೆ, ಬೆಲೆ ರೂ. ೨-೪-೦.

ಈ ಗ್ರಂಥವು ಶ್ರೀಮಾನ್ ಇ. ಎಂ. ಫಾರ್ಸ್ಟರ್ ಅವರ "ದಿ ಪ್ಯಾಸೇಜ್ ಟು ಇಂಡಿಯ" ಎಂಬ ಇಂಗ್ಲಿಷ್ ಕಾದಂಬರಿಯ ಕನ್ನಡ ಅನುವಾದ.

ಈ ಬೃಹತ್ಕಾದಂಬರಿಯ ಹೊಟ್ಟೆಯಲ್ಲಿ ಹುದುಗಿರುವ ಕಥಾವಸ್ತು ಅತ್ಯಲ್ಪ:

ಅಝೀಜನೆಂಬವನು ವೈದ್ಯವೃತ್ತಿಯಿಂದ ಜೀವನವನ್ನು ಸಾಗಿಸುತ್ತಿರುವ ಭಾವಜೀವಿ. ಅವನು ತನ್ನ ಯೋಗ್ಯತೆಗೆ ತಕ್ಕ ಪುರಸ್ಕಾರವಿಲ್ಲದೆ, ಹೊಟ್ಟೆಯಲ್ಲಿನ ಸಿಟ್ಟು ರಟ್ಟೆಯಲ್ಲಿ ಇಲ್ಲದೆ, ಒಳಗೊಳಗೇ ಕುದಿಯುತ್ತಿದ್ದಾನೆ. ಹಿಂದೂದೇಶವನ್ನು ನೋಡಬೇಕೆಂದು ಆಗತಾನೆ ಕಾಲಿಟ್ಟಿರುವ ಮಿಸೆಸ್ ಮೂರ್ ಮತ್ತು ಮಿಸ್ ಅಡೀಲಾ ಎಂಬ ಸ್ತ್ರೀಯರು ಇವನಿಗೆ ಪರಿಚಿತರಾಗುತ್ತಾರೆ. ಇವರಿಬ್ಬರದೂ ಮುಚ್ಚುಮರೆಯಿಲ್ಲದ ಸರಳಸ್ವಭಾವ. ಅವರ ಮನಸ್ಸು ಇನ್ನೂ ಆಂಗ್ಲೋ ಇಂಡಿಯನರ ಕ್ಲಬ್ಬು ಜೀವನದಿಂದ ಕದಡಿ ಕೆಸರಾಗಿಲ್ಲ. ಅಝೀಜನೊಡನೆ ಆದ ಪರಿಚಯವು ಸ್ನೇಹವಾಗಿ ಪರಿಣಮಿಸುತ್ತದೆ. ಸ್ನೇಹದ ಭರದಲ್ಲಿ ಅವರನ್ನು ಅವನು ಮಾರವಾರದ ಗುಹೆಗಳನ್ನು ನೋಡಲು ಆಹ್ವಾನಿಸುತ್ತಾನೆ. ಅವನ ಚಲನ ವಲನಗಳು ಅಡೀಲಾಳ ಪ್ರೇಮಪಾತ್ರರೋನಿಗೆ ಸರಿಬೀಳುವುದಿಲ್ಲ. ಆದರೂ ತನ್ನ ತಾಯಿ ಮೂರಳಿಗೂ, ತನ್ನ ಪ್ರೇಮಪಾತ್ರಳಾದ ಅಡೀಲಾಳಿಗೂ ಮನನೋಯುವುದೇನೊ ಎಂಬ ಹೆದರಿಕೆಯಿಂದ ಅವರ ಕಾರ್ಯಕ್ರಮಗಳಿಗೆ ವಿಘ್ನವನ್ನು ತರುವುದಿಲ್ಲ. ಗುಹೆಗಳನ್ನು ನೋಡುತ್ತಾ ಇರುವಾಗ ಕಾರಣಾಂತರದಿಂದ ಅಡೀಲಾ ಉದ್ವಿಗ್ನಮಾನಸಳಾಗಿ ಅಝೀಜನು ತನ್ನ ಮಾನಭಂಗಮಾಡಲು ಯತ್ನಿಸಿದನೆಂಬ ಭಾವನೆ ಅವಳ ಮನಸ್ಸಿಗೆ ಹೇಗೋ ಬರುತ್ತದೆ. ಈ ಪ್ರವಾದವು ಕಾಡುಕಿಚ್ಚಿನಂತೆ ಹರಡಿ ಇದರ ಫಲವಾಗಿ ಅಝೀಜನು ಸೆರೆಮನೆಗೆ ಸೇರುತ್ತಾನೆ. ಫೀಲ್ಡಿಂಗನೆಂಬ ಸರಕಾರಿ ಕಾಲೇಜೊಂದರ ಪ್ರಿನ್ಸಿಪಾಲನ ಸತತಪ್ರಯತ್ನದಿಂದಲೂ, ಅದಕ್ಕಿಂತಲೂ ಮುಖ್ಯವಾಗಿ ಅಡೀಲಾ ಕಟ್ಟಕಡೆಯಲ್ಲಿ ತನ್ನ ಆಪಾದನೆಯನ್ನು ಹಿಂದಕ್ಕೆ ತೆಗೆದುಕೊಂಡುದರಿಂದಲೂ, ಕಡೆಗೆ ಅಝೀಜನು ತಪ್ಪಿತಸ್ಥನಲ್ಲವೆಂದು ಬಿಡುಗಡೆಯಾದರೂ ಅಝೀಜನಿಗೆ ಅಂಟಿದ ಕಳಂಕವು ಅವನ ಜೀವನಾಂತದವರೆಗೂ ತಪ್ಪುವುದೇ ಇಲ್ಲ. ಇದರಿಂದ ಪ್ರಕ್ಷುಭಿತವಾದ ಅವನ ಮನಸ್ಸು ಆಂಗ್ಲ ಜನಾಂಗವನ್ನೇ ದ್ವೇಷಿಸುವಷ್ಟು ದೂರ ಹೋಗುತ್ತದೆ. ಕಡೆಗೆ ಅವನು ಆಂಗ್ಲರ ಸೇವಾವೃತ್ತಿಗೇ ಶರಣುಹೊಡೆದು ದೇಶೀಯ ಸಂಸ್ಥಾನವೊಂದರಲ್ಲಿ ಅಧಿಕಾರವನ್ನು ಪಡೆದು ತನ್ನ ಜೀವನದ ಉಳಿದಭಾಗವನ್ನು ಸವೆಸುತ್ತಾನೆ.

ಕಥೆಯ ಹಾಸುಹೊಕ್ಕಾಗಿ ಸೇರಿರುವುದು ಹಿಂದೂದೇಶದ ರಾಜಕೀಯ ಜೀವನ. ಅಲ್ಲಲ್ಲಿ ಹಿಂದೂ ಮುಸಲ್ಮಾನರ ಸಮಾಜಜೀವನವೂ, ಆಂಗ್ಲೋ ಇಂಡಿಯನರ ಕೃತಕ ಸಮಾಜಜೀವನವೂ ಮಾರ್ಮಿಕವಾಗಿ ಚಿತ್ರಿತವಾಗಿವೆ. ಆದರೆ ಸಮಾಜಜೀವನ

ಕ್ಕಿಂತಲೂ ರಾಜಕೀಯ ಜೀವನಕ್ಕೇ ಪ್ರಾಶಸ್ತ್ಯ ಹೆಚ್ಚು. ಅಲ್ಲದೆ ಫಾರ್ಸ್ಟರ್ ಅವರು ಹಿಂದೂಗಳ ಸಮಾಜಜೀವಿತವನ್ನು ಸರಿಯಾಗಿ ಅರಿತುಕೊಂಡಂತೆ ಕಾಣುವುದಿಲ್ಲ. ಅವರ ದೃಷ್ಟಿ ಈ ಭಾಗದಲ್ಲಿ ಹೊರನೋಟದಲ್ಲಿಯೇ ವಿರಾಮವಾಗಿದೆಯೆಂದು ಹೇಳ ಬಹುದು. ಕೃಷ್ಣಾಷ್ಟಮಿಯ ಅವರ ತುಲನೆಯೇ ಸಾಕು ಈ ಮಾತಿನ ಸಾರ್ಥಕತೆಗೆ.

ಹಿಂದೂ ದೇಶಕ್ಕೆ ಬರುವ ಆಂಗ್ಲ ಅಧಿಕಾರಿಗಳೆಲ್ಲಾ ರಾಜಕೀಯ ಧುರೀಣ ರೇನೂ ಅಲ್ಲ. ಅವರೆಲ್ಲರ ಸಂಸ್ಕೃತಿಯೂ ಬಹು ಉನ್ನತವಾದುದೆಂದೂ ಹೇಳುವಂತಿಲ್ಲ. ಅಲ್ಲದೆ, ಇಲ್ಲಿಗೆ ಬಂದು ಕೆಲವು ದಿನಗಳು ಜೀವನಪಥವನ್ನು ನಡೆಯುವುದರೊಳಗಾಗಿ ಅವರ ಮನಃಪ್ರವೃತ್ತಿಯು ಬದಲಾಯಿಸಿ ಹೋಗುತ್ತದೆ. 'ಹಿರಿಯಕ್ಕನ ಚಾಳಿ ಮನೆಮಕ್ಕಳಿಗೆಲ್ಲ' ಎನ್ನುವಂತೆ ತಮ್ಮ ಹಿಂದಿನವರ ಅಡ್ಡಮಾರ್ಗವನ್ನೇ ಅವರೂ ಅನುಸರಿಸಿ, ತಾವು ಮೇಲು, ಉಳಿದವರು ಕೀಳು ಎಂಬ ಕೀಳುತತ್ವವೊಂದು ಅವರಲ್ಲಿ ಒಡಮೂಡುತ್ತದೆ. ಜನಸಾಮಾನ್ಯರ ವಿಚಾರದಲ್ಲಿ ಅವರಿಗಿರುವ ಅಸಡ್ಡೆ ಒತ್ತಟ್ಟಿಗಿರಲಿ, ರಾಜ ಮಹಾರಾಜರುಗಳು ಕೂಡ ತಮಗೆ ಸರಿಸಮಾನಸ್ಕಂಧರಲ್ಲವೆಂಬ ಅವಿಚಾರ ಅವರ ತಲೆಯಲ್ಲಿ ಅಂಕುರಿಸುತ್ತದೆ. ಅವರು ಹಾಡಿದ್ದಕ್ಕೆಲ್ಲಾ ತಾಳಹಾಕುವ ಲಾಂಗೂಲಚಾಲಕರು ಬೇರೆ ಅವರಿಗೆ ದೊರೆತ ಮೇಲೆ ಕೇಳುವುದಿನ್ನೇನು? ಅದರಲ್ಲಿಯೂ ಪುರುಷರಿಗಿಂತ ಸ್ತ್ರೀಯರ ಪ್ರತಿಷ್ಠೆ ಅತಿಶಯ. "ಹಃಹಃ, ನರೇಂದ್ರ ಸಭೆಗೆ ನಾಯಿ ಕರೆದುಕೊಂಡು ಹೋಗುವುದೆಂದರೆ ನರೇಂದ್ರರನ್ನು ಕರೆದುಕೊಂಡು ಹೋದಂತೆಯೇ" ಎಂದು ಬಿದ್ದು ಬಿದ್ದು ನಗುವ ಡೆರೆಕ್ಕಳನ್ನು ಕಂಡು ನಮ್ಮ ಮನಸ್ಸು ಹೇಸಿಕೊಳ್ಳುತ್ತದೆ. ಕಾದಂಬರಿಯಲ್ಲಿ ಚಿತ್ರಿತವಾಗಿರುವ ಆಂಗ್ಲೋ ಇಂಡಿಯನ್ನರ ಕೃತಕವಾದ ಕ್ಲಬ್ಬುಜೀವನ ಜುಗುಪ್ಸಾವಹವಾಗಿದೆ.

ಫಾರ್ಸ್ಟರ್ ಅವರಿಗೆ ಭಾರತೀಯರ ವಿಷಯವಾಗಿ ಅನುಕಂಪವಿದೆ. ಹಿಂದೀಯ ರಲ್ಲಿ ಹಲವು ಲೋಪದೋಷಗಳಿವೆ, ಕುಂದುಕೊರತೆಗಳಿವೆ, ಎಂಬುದನ್ನು ಅವರೂ ಒಪ್ಪುತ್ತಾರೆ. ಆದರೆ ಈ ಬಗೆಯಾದ ಕುಂದುಕೊರತೆಗಳು ಭಾರತೀಯರಿಗಾಗಿಯೇ ಮೀಸಲಾದವುಗಳೇನೂ ಅಲ್ಲ. ಮನುಷ್ಯ ಸಾಮಾನ್ಯವಾದ ಹಲವು ಕುಂದುಕೊರತೆ ಗಳು ಆಂಗ್ಲೋ ಇಂಡಿಯನ್ನರಲ್ಲಿಯೂ ಇವೆ. ಹಿಂದೀಯರು ಹಿಸುಣು ನುಡಿಗಳನ್ನು ಹರಡುವ ಹವ್ಯಾಸಕ್ಕೆ ಬಿದ್ದು ಆಂಗ್ಲ ಅಧಿಕಾರಿಯೊಬ್ಬನು ಸಿಗರೇಟುಕೇಳಿದ್ದನ್ನು ಊರಲ್ಲೆಲ್ಲಾ ಹರಹಿ ಹಬ್ಬಿದರೆ ಆಂಗ್ಲ ಅಧಿಕಾರಿಗಳು ತಮ್ಮ ಕೈಕೆಳಗಿನ ಹಿಂದೂ ಅಧಿಕಾರಿಗಳ ವಿಚಾರವಾಗಿ ಪರಸ್ಪರ ಹಿಸುಣುಹಬ್ಬಿಸುವ ದಂಧೆಯನ್ನು ನಡೆಸು ತ್ತಾರೆ. ಹಿಂದೀಯರು ಮುಖಸ್ತುತಿ ಮಾಡಿದರೆ, ಆಂಗ್ಲೊ ಇಂಡಿಯನ್ನರು ಬಾಯಿ ಯಲ್ಲೊಂದು, ಹೊಟ್ಟೆಯಲ್ಲೊಂದು ತೋರುತ್ತಾರೆ. ಅಲ್ಪ ವಿಷಯವನ್ನು ಭೂತಕನ್ನ

ಡಿಯ ಅಡಿಯಲ್ಲಿಟ್ಟು ನೋಡುವ ಚಟ ಇಬ್ಬರಿಗೂ ಸರಿಸಮಾನ. ಹಿಂದೀಯರಲ್ಲಿರುವ ಲೋಪದೋಷಗಳು ಅಧಿಕಸಂಖ್ಯಾತವಾಗಿರಬಹುದು ಅಷ್ಟೆ. ಡಾ|| ಪನ್ನಾಲಾಲ ನಂತಹವರು ಸ್ವಜನದ್ರೋಹಿಗಳಾಗಿರಬಹುದು. ನವಾಬನಂತಹರು ಇಂಗ್ಲಿಷರ ತಾಳಕ್ಕೆ ತಕ್ಕಂತೆ ಕುಣಿಯುತ್ತಾ ಅವರ ಶಹಬಾಸ್‌ಗಿರಿಗಾಗಿ ಬಾಯಿ ಚಪ್ಪರಿಸುತ್ತಿರ ಬಹುದು. ಎಲ್ಲರ ಜೀವನದಲ್ಲಿಯೂ ಕೃತಕತೆಯು ತುಂಬಿರಬಹುದು. ಇದು ಅನಿವಾರ್ಯ. ಸ್ವಾತಂತ್ರ್ಯಪ್ರೇಮಿಯಾದ ಅಝೀಜನು ತನಗೆ ನ್ಯಾಯವೆಂದು ತೋರಿದುದನ್ನು ನಿರ್ಭಯದಿಂದ ಅನುಸರಿಸಬೇಕೆಂಬ ಉತ್ಕಟೇಚ್ಛೆಯುಳ್ಳವನಾಗಿರುವನಾದರೂ ಹಾಗೆ ನಡೆಯಲಾರ. ತನ್ನ ಸಮಾಜಸಂಪ್ರದಾಯಕ್ಕೆ ತಕ್ಕಂತೆ ಹಲ್ಲು ಉಜ್ಜಿಕೊಳ್ಳದೆಯೇ ಹೋಗಿ ತನ್ನ ಮೇಲಧಿಕಾರಿಯನ್ನು ಕಾಣುವೆನೆಂದು ತನ್ನ ಸ್ನೇಹಿತರೆದುರು ಕೊಚ್ಚಿ ಹೋದ ಅಝೀಜ ಆ ಕಾರ್ಯವನ್ನು ನೆರವೇರಿಸಿಕೊಂಡೇ ಅಧಿಕಾರಿಯ ಮನೆಗೆ ಹೋಗುವನು. "ಬಳ್ಳಿಯ ಕುಡಿಯಂತಿದ್ದ ಅವನ ಸೂಕ್ಷ್ಮ ಭಾವನೆಗಳು ಕ್ಯಾಲೆಂಡರನ ಕುಡಿಚಿವುಟುವ ಬಿರುಸುಕೈಗೆ ಹೆದರಿ ಮುದುಡಿಕೊಂಡುವು." ಹ್ಯಾಟುಬೂಟು ಧರಿಸಿ ದವನಿಗೆ ಸಿಕ್ಕುವ ಗೌರವ ಪುರಸ್ಕಾರಗಳು ದೇಶೀಯ ಉಡುಪನ್ನು ಧರಿಸಿದವನಿಗೆ ಇಲ್ಲದುದನ್ನು ಕಂಡೇ ಅಝೀಜನು ಪಾಶ್ಚಾತ್ಯ ವೇಷಭೂಷಣನಾಗುವನು. ನ್ಯಾಯ ವಾದ ತೀರ್ಪನ್ನು ನಿರ್ಭಯದಿಂದ ನೀಡುವ ಉತ್ಕಟೇಚ್ಛೆಯಿದ್ದರೂ ಮ್ಯಾಜಿಸ್ಟ್ರೇಟ್ ದಾಸನು ಹಿಂದುಮುಂದು ನೋಡಬೇಕಾಗುವುದು. ಇದಕ್ಕೆಲ್ಲಾ ಮೂಲಕಾರಣ ರಾಜಕೀಯ ಪರಿಸ್ಥಿತಿ. ಭಾರತದ ರಾಷ್ಟ್ರಜೀವನವೆಂದರೆ "ಭಯ, ಕುತಂತ್ರ, ಹಿಂದೆ ನಿಂತು ಆಡಿಸುವುದು—ಇವುಗಳ ಹಾಸುಹೊಕ್ಕು" ಎಂಬುದಾಗಿ ಫಾರ್ಸ್ಟರ್ ಅವರ ಭಾವನೆ. "ದಾಸ್ಯದಲ್ಲಿರುವ ಜನಾಂಗಕ್ಕೆ ಇದಕ್ಕೂ ಬೇರೆ ಕಲ್ಪಿಸುವುದೇ ಸಾಧ್ಯವಿಲ್ಲ" ವೆಂದು ಅಝೀಜನ ಬಾಯಲ್ಲಿ ಹೇಳಿಸಿದ್ದಾರೆ. ಇದರ ಪರಿಣಾಮವೆಂದರೆ ಸ್ವಾತಂತ್ರ್ಯ ಪ್ರೇಮದಿಂದ ಕಳಕಳಿಸುತ್ತಿದ್ದ ಭಾವಜೀವಿ ಅಝೀಜನಂತಹನೂ ಕೂಡ ಕಟ್ಟಕಡೆಗೆ "ಅವರು ನನ್ನ ದಂಧೆಯನ್ನು ಸಸೂತ್ರವಾಗಿ ಸಾಗಗೊಟ್ಟು ಆಫೀಸಿನಲ್ಲಿ ನನಗೆ ಇಲ್ಲದ ಕಿರಿಕಿರಿ ಮಾಡದಿದ್ದರೆ ಸಾಕು; ನನಗೆ ಇದಕ್ಕೂ ಹೆಚ್ಚಿಗೆ ಏನೂ ಬೇಡ; ಆ ಚಂದ್ರಾರ್ಕವಾಗಿ ನಮ್ಮ ಮೇಲೆ ಅವರೇ ಬಾಳಲಿ; ಯಾರು ಬೇಡವೆನ್ನುವವರು" ಎಂಬ ಮಟ್ಟಕ್ಕಿಳಿದು ಬರುತ್ತಾನೆ.

ಈ ಬಗೆಯಾದ ರೋಗಕ್ಕೆ ಮದ್ದಿಲ್ಲವೆ? ಫಾರ್ಸ್ಟರ್ ಅವರ ಅಭಿಪ್ರಾಯದಂತೆ ಮದ್ದಿಲ್ಲ. ಭಾರತವು ಒಂದು ರಾಷ್ಟ್ರವಲ್ಲ; ಆಂಗ್ಲರು ಆಳುವವರಾಗಿ ಭಾರತೀಯರು ಆಳಲ್ಪಡುವವರಾಗಿರುವವರೆಗೂ, ಅವರವರಿಗೆ ಸಮಾನಭಾವನೆ ಗೆಳೆತನಗಳು ಅಸಾಧ್ಯ. ಕಾದಂಬರಿಯ ಕೊನೆಯಲ್ಲಿ ಫೀಲ್ಡಿಂಗ್ ಮತ್ತು ಅಝೀಜನು ಗೆಳೆಯರಾದರು. ಆದರೆ

ಅದೆಂತಹ ಗೆಳೆತನ? ಅವರು ಏರಿದ್ದ ಚತುಷ್ಪಾದಿಗಳಿಗೂ ಗೊತ್ತು ಅದು ಅಸಾಧ್ಯವೆಂದು. "ನೆಲ, ಮುಗಿಲು, ಗುಡ್ಡ, ಕೆರೆ, ಗುಡಿ, ಅರಮನೆ, ಒಟ್ಟು ಅವರ ಕಣ್ಣಿಗೆ ಕಂಡದ್ದೆಲ್ಲಾ ಒಂದೇ ದನಿಯಿಂದ 'ಬೇಡ, ಇನ್ನೂ ಹೊತ್ತು ಬಂದಿಲ್ಲ' ಎಂದು ಕೂಗಿ ಹೇಳಿದು"ವಂತೆ. ರಾಜಕೀಯವು ಹೀಗಿರುವಂತೆಯೇ ಇರುವವರೆಗೂ ಗೆಳೆತನವಲ್ಲದಿದ್ದರೆ ಸೌಹಾರ್ದವಾದರೂ ಇಬ್ಬಣದವರಲ್ಲಿ ನೆಲಸಬೇಕಾದರೆ ಅಝೀಜನು ಹೇಳುವಂತೆ "ಮಮತೆ . . . ಇನ್ನೂ ಹೆಚ್ಚು ಮಮತೆ . . . ಅದಕ್ಕೂ ಹೆಚ್ಚು ಮಮತೆ . . . ತೋರಬೇಕು. ನಮ್ಮನ್ನು ಮುಂದಕ್ಕೆ ನಡೆಯಿಸಲು ಅದೊಂದೇ ಆಶಾಕಿರಣ ಉಳಿದಿದೆ." ಫೀಲ್ಡಿಂಗನಂತೆ ಸಮರಸವಾಗಿ ಹಿಂದೀಯರೊಡನೆ ಬೆರೆತು ಅವರಲ್ಲಿಯೇ ತಾವೊಬ್ಬರೆಂಬ ಭಾವನೆ ಬರಬೇಕು.

'ಭಾರತ ಮಾರ್ಗ'ವನ್ನು ಆದ್ಯಂತವಾಗಿ ಓದಿದ ಮೇಲೆ ಕೆಲವು ಸಂದೇಹಗಳು ಎದ್ದು ನಿಲ್ಲುತ್ತವೆ. (೧) ಅಡೀಲಾ ಗುಹೆಗೆ ಹೋಗಿದ್ದಾಗ ಅಲ್ಲಿ ಏನು ನಡೆಯಿತು? ಅಝೀಜನ ಮೇಲೆ ಹೊರಿಸಿದ ತಪ್ಪಿಗೆ ಆಧಾರವೇನು? ಪ್ರತಿಧ್ವನಿಯ ಸೂಚನೆ ಸಮರ್ಪಕವಾಗಿರುವಂತೆ ತೋರುವುದಿಲ್ಲ. ಮಾರ್ಗದರ್ಶಕನಾದ ಆಳು ತಪ್ಪುದಾರಿಗೆ ಬಿದ್ದಿರಬಹುದೆಂದು ಹೇಳುವುದಕ್ಕೂ ತಕ್ಕಷ್ಟು ನಿದರ್ಶನಗಳಿಲ್ಲ. ಈ ಸಮಸ್ಯೆ ಸಮಸ್ಯೆಯಾಗಿಯೇ ಉಳಿಯುತ್ತದೆ. ಅಡೀಲಾ ವಿಶ್ವಾಸಘಾತುಕಳಾಗಿರಬಹುದೆಂಬ ಮುನ್ನುಡಿಯ ಮಾತೂ ನಮಗೆ ಸಮರ್ಪಕವಾಗಿ ತೋರುತ್ತಿಲ್ಲ. (೨) ಅಝೀಜನು ತಪ್ಪಿತಸ್ಥನಲ್ಲವೆಂದು ನಿಷ್ಕೃಷ್ಟವಾಗಿ ಅರಿತಿದ್ದ ಮಿಸೆಸ್ ಮೂರಳು ಆ ವಿಚಾರವನ್ನು ತನ್ನ ಮಗನೊಂದಿಗೆ ಬಾಯಿಬಿಟ್ಟು ಹೇಳಿಬಿಡಬಾರದಿತ್ತೇಕೆ? ಇದರಿಂದ ಮುಂದೆ ನಡೆಯಬಹುದಾಗಿದ್ದ ಅನರ್ಥ ಪರಂಪರೆಗಳೆಲ್ಲಾ ತಪ್ಪಿಹೋಗಬಹುದಾಗಿತ್ತಲ್ಲವೆ? ಆಂಗ್ಲ ಶಿಷ್ಟಾಚಾರಕ್ಕೆ ಈ ಬಗೆಯ ಆಚರಣೆ ವಿರುದ್ಧವೆ? (೩) ಅಝೀಜನ ಪಾತ್ರ ಜೀವಕಳೆಯಿಂದ ತುಂಬಿ ತುಳುಕುತ್ತಿದೆ. ಕಥಾ ನಾಯಕನಾದ ಆತನು ಹಿಂದೀಯರ ಪ್ರತಿನಿಧಿ ಸ್ವರೂಪನಾದವನು. ಅವನು ಕಡೆ ಕಡೆಯಲ್ಲಿ ಫೀಲ್ಡಿಂಗನೊಡನೆ ನಡೆದು ಕೊಳ್ಳುವ ರೀತಿ ಬಹಳ ಅಸಮರ್ಪಕವಾಗಿದೆ. ಅಝೀಜನು ಬಹಳ ದುಡುಕು ಸ್ವಭಾವದವನು ನಿಜ. ಆದರೆ ಫೀಲ್ಡಿಂಗನಿಂದ ಅಗಾಧವಾದ ಉಪಕೃತಿಯನ್ನು ಹೊಂದಿ ಹಲವು ಕಾಲ ಅವನೊಡನೆ ಗೆಳೆಯನಂತೆ ವರ್ತಿಸಿದವನು ದೀರ್ಘದ್ವೇಷಿಯಾಗಿ ಪರಿಣಮಿಸಿ, ಅವನ ಕಾಗದಗಳನ್ನು ಸಹ ಬಿಚ್ಚಿ ನೋಡದಷ್ಟು ಕೃತಘ್ನನಾಗುವುದೂ, ಇದಿರಿಗೆ ಬಂದು ತನ್ನ ಮೈತ್ರಿಯನ್ನು ಕಾತರತೆಯಿಂದ ತೋರುತ್ತಿರುವಾಗಲೂ ಒರಟುತನದಿಂದ ನಡೆದು ಕೊಳ್ಳುವುದೂ ಸರಿಯಾಗಬಹುದೆ? (೪) ಪ್ರೊ. ಗೋಡಬೋಲೆಯ ಜೀವನಚಿತ್ರ ಬಹಳ ಅಸಮರ್ಪಕವಾಗಿ ಚಿತ್ರಿತವಾಗಿದೆ. ಅದು ಅಸಂಭವದ ಅತಿರೇಕವಿರಬಹು

ದೇನೊ ಎನ್ನಿಸುತ್ತದೆ. ಫಾರ್ಸ್ಟರ್ ಅವರು ಹಿಂದೂ ಸಮಾಜವನ್ನಷ್ಟೇ ಏಕೆ, ಹಿಂದೂ ವ್ಯಕ್ತಿಗಳನ್ನೂ ಸರಿಯಾಗಿ ಅರ್ಥಮಾಡಿಕೊಂಡಿಲ್ಲವೆಂದು ಹೇಳಬಹುದು.

ಕಡೆಯದಾಗಿ, ಭಾಷಾಂತರದ ವಿಚಾರದಲ್ಲಿ ಒಂದು ಮಾತು. ಇಂಗ್ಲಿಷ್ ಕಥೆಯಲ್ಲಿನ ಓಟ ಕನ್ನಡಸರಣಿಯಲ್ಲಿ ಕಂಡುಬರುತ್ತಾ ಇಲ್ಲ. ಅತ್ಯಲ್ಪಕಾಲದಲ್ಲಿ ಇಂತಹ ದೊಡ್ಡ ಗ್ರಂಥವನ್ನು ಭಾಷಾಂತರಿಸುವುದೆಂದರೆ ಸಾಮಾನ್ಯ ಕಾರ್ಯವಲ್ಲ. 'ಭಾರತಮಾರ್ಗ'ದ ಶೈಲಿಯಲ್ಲಿ ಎಡವಿಕೆ ಮುಗ್ಗರಿಕೆಗಳು ಕಂಡುಬರುತ್ತಾ ಇದ್ದರೆ ಅದು ಭಾಷಾಂತರವೆಂಬ ಕಲೆಗೇ ಸ್ವಭಾವಸಿದ್ಧವಾದುದೆಂದು ಹೇಳಿಬಿಡಬಹುದೋ ಏನೋ!

ತ. ಸು. ಶಾಮರಾಯ.

---

**ನನ್ನ ದೇವರು ಮತ್ತು ಇತರ ಕಥೆಗಳು**—ಲೇಖಕರು: ಶ್ರೀಮಾನ್ ಕೆ. ವಿ. ಪುಟ್ಟಪ್ಪ, ಎಂ.ಎ.; ಪ್ರಕಾಶಕರು: ಕಾವ್ಯಾಲಯ, ಶಿವಮೊಗ್ಗ; ಪುಟಗಳು ಕ್ರೌನ್ ಅ. vi + ೧೦೭; ಬೆಲೆ, ಉತ್ತಮ ಪ್ರತಿ, ರೂ. ೧-೪-೦; ಸಾಮಾನ್ಯ ಪ್ರತಿ, ೧೨ ಆಣೆ.

ಈ ಸಂಗ್ರಹದಲ್ಲಿ ಶ್ರೀಮಾನ್ ಕೆ. ವಿ. ಪುಟ್ಟಪ್ಪನವರು ಬರೆದ ಎಂಟು ಸಣ್ಣ ಕಥೆಗಳಿವೆ. ಸಂಗ್ರಹದ ಮೊದಲ ಕಥೆಯಾದ 'ನನ್ನ ದೇವರು' ಕಲಾದೃಷ್ಟಿಯಿಂದ ಅತ್ಯುತ್ತಮವಾದ ಕಥೆ. ಈ ಕಥೆಯಲ್ಲಿ ಬರುವ, ಪತಿಯನ್ನು ಕಳೆದುಕೊಂಡು ರಾಗೋದ್ವಿಗ್ನಳಾದ ಅಭಾಗಿನಿ ನಾದಿನಿಯನ್ನಾಗಲಿ, ಅವಳನ್ನು ಶಾಶ್ವತವೂ ಅನಂತವೂ ಆದ ಪ್ರಣಯದ ತತ್ತ್ವೋಪದೇಶಗಳಿಂದ ಸಂತವಿಸಿ ಸುಸ್ಥಿರಮನಸ್ಕಳನ್ನಾಗಿ ಮಾಡಿದ ಅವಳ ಭಾವನವರನ್ನಾಗಲಿ ನಾವು ಮರೆಯುವಂತಿಲ್ಲ. ಗಹನವಾದ ವಿಷಯ, ಲಲಿತವಾದ ಶೈಲಿ, ಇದರ ಮೇಲೆ ಕವಿಸಹಜವಾದ ರಸನಿರೂಪಣೆ ಈ ಎಲ್ಲ ಗುಣವಿಶೇಷದಿಂದ ಈ ಕಥೆ ಅತ್ಯುತ್ತಮವಾದ ಒಂದು ಗದ್ಯಾತ್ಮಕ ಭಾವಗೀತೆಯಂತಿದೆ.

'ಔದಾರ್ಯ' ಇನ್ನೊಂದು ಉತ್ತಮವಾದ ಕಥೆ. ತಾನು ಮದುವೆಯಾದ ಎರಡನೆಯ ಹೆಂಡತಿ ಬೇರೊಬ್ಬನಲ್ಲಿ ದುಷ್ಟಸಂಬಂಧವನ್ನು ಬೆಳೆಸಿರುವಳೆಂಬುದು ತನಗೆ ಗೊತ್ತಾದರೂ ಅವಳ ಮೇಲಣ ಪ್ರೇಮ ಎಳ್ಳಷ್ಟಾದರೂ ಕದಲದ ರೀತಿಯಲ್ಲಿ ಆಕೆಯೊಂದಿಗೆ ವ್ಯವಹರಿಸಿ ಆ ವಿಷಯದಲ್ಲಿ ಅನ್ಯಾದೃಶವಾದ 'ಔದಾರ್ಯ'ವನ್ನು ಪ್ರಕಟಪಡಿಸಿಯೂ ದುರಂತಕ್ಕೀಡಾದ ಡೇವಿಡ್ ಮಾಸ್ತರ ಪ್ರಣಯವೃತ್ತ ಇಲ್ಲಿ ಒಂದು ವಿಚಿತ್ರ ರೀತಿಯಲ್ಲಿ ನಿರೂಪಿತವಾಗಿದೆ. ಡೇವಿಡ್ ಮಾಸ್ತರ 'ಔದಾರ್ಯ' ನಿಜವಾಗಿಯೂ 'ಕಡಿದು ಓಡಿಹೋಗುವ ನಾಗರಹಾವಿನ ಹೆಡೆಯಲ್ಲಿ ಸೊಬಗನ್ನು ಕಾಣುವ ಔದಾರ್ಯ'!

'ಸಾಲದ ಮಗು'ವಿನಲ್ಲಿ ಚಿಕ್ಕಂದಿನಲ್ಲಿಯೇ ತಂದೆತಾಯಿಗಳನ್ನು ಕಳೆದುಕೊಂಡು ತಬ್ಬಲಿಯಾದ ಹಸುಮಗು ಸುಬ್ಬ ತಂದೆಯ ಮುನ್ನೂರು ರೂಪಾಯಿ ಸಾಲದ ತೀರ್ಮಾನಕ್ಕಾಗಿ ಗೌಡರ ಮನೆಯಲ್ಲಿ ಜೀತದ ಆಳಾಗಿ ಅವರ ಕೋಪದ ಬೈಗಳನ್ನೂ ಛಡಿಯ ಏಟುಗಳನ್ನೂ ಸಹಿಸಿಕೊಂಡು ದುಡಿಯಲಾರದೆ ದುಡಿಯುತ್ತಿದ್ದು ಒಂದು ಸಲ ಗೌಡರ ಅಪ್ಪಣೆಯಂತೆ ಮಳೆಗಾಲದ ನಡುರಾತ್ರಿಯ ಕಗ್ಗತ್ತಲೆಯಲ್ಲಿ ಗದ್ದೆಯಲ್ಲಿದ್ದ ಮೀನಿನ ಕೂಣಿಯನ್ನು ಹುಡುಕಲೆಂದು ಹೋಗಿ ಕೃಷ್ಣಸರ್ಪಕ್ಕೆ ತುತ್ತಾಗಿ ಮಡಿದ ವಿಷಯ 'ಭಯಂಕರ ಭಯಾನಕ'ವಾಗಿ ಚಿತ್ರಿತವಾಗಿದೆ. ಕಥೆಯ ಕೊನೆಯಲ್ಲಿ ಹಾವುಕಚ್ಚಿ ಸತ್ತುಬಿದ್ದಿದ್ದ ತಬ್ಬಲಿಯನ್ನು ನೋಡಿಯೂ "ಅಂತೂ ಮುನ್ನೂರು ರೂಪಾಯಿ ಮನೆಗೆ ಬಂತು" ಎನ್ನುವ ಗೌಡರ ಮಾತು ವ್ಯಂಗ್ಯಪೂರ್ಣವಾಗಿದೆ.

'ಮೀನಾಕ್ಷಿಯ ಮನೇ ಮೇಷ್ಟರು' 'ನೋಡುವುದಕ್ಕೆ ಅರಸಿಕ ದರಿದ್ರನಂತಿದ್ದರೂ ಅಂತರಂಗದಲ್ಲಿ ರಸಿಕ ಶ್ರೀಮಂತರಾಗಿದ್ದ' ಮೇಷ್ಟರೊಬ್ಬರ ಯೌವನ ಸಹಜವಾದ ಪ್ರಣಯೋನ್ಮುಖ ಚಿತ್ತವೃತ್ತಿಯನ್ನು ಚಿತ್ತರಿಸುವ ಒಂದು ರಮ್ಯ ಕಥೆ.

'ಧನ್ವಂತರಿಯ ಚಿಕಿತ್ಸೆ' ಇಂದಿನ ರೈತನ ದಾರಿದ್ರ್ಯವನ್ನೂ ಅದರ ನಿವಾರಣೋಪಾಯವನ್ನೂ ಪ್ರತಿಪಾದಿಸಿರುವ ವಿಶ್ವಾಮಿತ್ರ ಪರಶುರಾಮಾದಿ ಪುರಾಣಿಕ ಪಾತ್ರಗಳನ್ನೊಳಗೊಂಡ ಒಂದು ಕಾಲ್ಪನಿಕ ಕಥೆ. ವಸ್ತು ಕಾಲ್ಪನಿಕವಾದುದಾದರೂ ವಾಸ್ತವ ಜಗತ್ತಿನ ಪರಿಸ್ಥಿತಿಯ ವಿವರಣೆಯಿರುವುದರಿಂದ ಮನೋಜ್ಞವಾಗಿದೆ.

'ವೈರಾಗ್ಯದ ಮಹಿಮೆ' ಧರ್ಮದ ಹೆಸರಿನಲ್ಲಿ ನಡೆಯುವ ಅಸಹ್ಯ ಅತ್ಯಾಚಾರಗಳನ್ನು ಮಾರ್ಮಿಕವಾಗಿ ಚಿತ್ರಿಸಿರುವ ಒಂದು ಕಥೆ. ಕಥೆಯ ಆವರಣ ವಂಗದೇಶದ ಸಮಾಜದ್ದಾದರೂ ನಮಗೆ ಅಪರಿಚಿತವೆನ್ನುವಷ್ಟು ವಿಜಾತೀಯವೇನಾಗಿಲ್ಲದುದರಿಂದ ಕಥೆ ಹೃದ್ಯವಾಗಿದೆ.

ಈ ಸಂಗ್ರಹದ ಮೂರು ಮತ್ತು ಐದನೆಯ ಕಥೆಗಳಾದ 'ಆದರ್ಶಸಾಧನೆ' ಮತ್ತು 'ಗಂಟು' ಅಥವಾ 'ಗುಪ್ತಧನ' ಇವು ಮೇಲಿನ ಕಥೆಗಳಷ್ಟು ಉತ್ತಮವಾಗಿಲ್ಲ. ಇವೆರಡರಲ್ಲೂ ಸಣ್ಣಕಥೆಯ ಲಕ್ಷಣಗಳು ಕಡಮೆಯಾಗಿ ಹರಟೆಯ ಜಾತಿಗೆ ಸೇರಬಹುದಾದ ಪ್ರಬಂಧದ ಲಕ್ಷಣಗಳೇ ಹೆಚ್ಚಾಗಿವೆ. ಇವುಗಳನ್ನು ಬಿಟ್ಟರೆ ಉಳಿದ ಆರೂ ಉತ್ತಮವರ್ಗಕ್ಕೆ ಸೇರಿದ ಕಥೆಗಳು. ಶ್ರೀಯುತ ಪುಟ್ಟಪ್ಪನವರು ತಮ್ಮದೇ ಆದ ಒಂದು 'ಕಥನ ಪದ್ಧತಿ'ಯನ್ನು ಬೆಳೆಸಿಕೊಂಡಿದ್ದಾರೆ. ಕಥೆಯ ವಸ್ತು, ಪಾತ್ರ, ಶೈಲಿ ಯಾವುದನ್ನು ನೋಡಿದರೂ ಅಲ್ಲಿ ಅವರನ್ನು ನಾವು ಗುರುತಿಸಬಹುದು. ಅಂತಹ ಒಂದು ವಿಶಿಷ್ಟ ರೀತಿಯ ಸ್ವತಂತ್ರ ಮಾರ್ಗದಲ್ಲಿ ಬೆಳೆದ ಅವರ ಕಥನಪದ್ಧತಿಗೆ "ನನ್ನ ದೇವರು ಮತ್ತು ಇತರ ಕಥೆಗಳು" ಸಾಕ್ಷಿಯೆಂಬಂತಿವೆ.

ಎಸ್. ವಿ. ಪರಮೇಶ್ವರಭಟ್ಟ.

**ನಿರಾಭರಣಸುಂದರಿ**—ಲೇಖಕರು: ಶ್ರೀಮಾನ್ ದ. ರಾ. ಬೇಂದ್ರೆ, ಎಂ.ಎ.; ಪ್ರಕಾಶಕರು: ಮನೋಹರ ಗ್ರಂಥಪ್ರಕಾಶನ ಸಮಿತಿ, ಧಾರವಾಡ; ಕ್ರೌನ್ ಅ. ೩೨+೧೮೩; ಬೆಲೆ, ೧ ರೂ,

ಈ ಗ್ರಂಥವನ್ನು ಮೂರು ಭಾಗವಾಗಿ ವಿಂಗಡಿಸಬಹುದು: ಹರಟೆಗಳು, ನಗೆಹಾಡುಗಳು, ಮತ್ತು ಕತೆಗಳು.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಹರಟೆಗಳಿಗೆ ಸರಿಯಾದ ಸ್ಥಾನ ದೊರೆತಿಲ್ಲ. ಉತ್ತಮವಾದ ಸ್ಥಾನವನ್ನು ಪಡೆಯಲು ಯೋಗ್ಯವಾದ ಹರಟೆಗಳೂ ಹೆಚ್ಚಾಗಿ ಹುಟ್ಟಿಲ್ಲ. ಈ ಆತಂಕವನ್ನು ಶ್ರೀಮಾನ್ ಬೇಂದ್ರೆಯವರ ಈ ಗ್ರಂಥವು ಸ್ವಲ್ಪ ಮಟ್ಟಿಗೆ ಹೋಗಲಾಡಿಸುತ್ತದೆ. ಇಲ್ಲಿ ಒಟ್ಟು ಎಂಟು ಹರಟೆಗಳಿವೆ. ಮಾನಪತ್ರಗಳನ್ನು ಕೊಡುವುದು ನಮ್ಮಲ್ಲಿ ಅನೂಚಾನವಾಗಿ ಬಂದ ಸಂಪ್ರದಾಯವೆಂಬುದನ್ನು ಮೊದಲನೆಯದೂ, ಕಸಬರಿಗೆಯು ದೇವರಿಗೆ ಸಮನೆಂದು ಎರಡನೆಯದೂ, ಉಗುಳುವುದು ನಾಟ್ಯಕಲೆ ರಾಜಕೀಯ ಚಳುವಳಿ ವೇದ ಇವೆಲ್ಲಕ್ಕೂ ಸಂಬಂಧವಿದೆಯೆಂಬುದನ್ನು ಮೂರನೆಯದೂ, ಹಾಸ್ಯಮಯವಾಗಿ ತಿಳಿಯಪಡಿಸುತ್ತವೆ. 'ನನ್ನ ಅವತಾರ'ವೆಂಬುದು ಪ್ರಮಾಣಪೂರ್ವಕವಾಗಿ 'ನಾನು ಅವತಾರಿ' ಎಂಬುದನ್ನು ಸ್ಥಿರಪಡಿಸುತ್ತದೆ. ಈಗ ಸಾಹಿತ್ಯಪ್ರಪಂಚದಲ್ಲಿ ವಿಮರ್ಶೆಗಳ ಹೆಚ್ಚು ಭಾಗ ಹೇಗೆ ಹೊಗಳುಭಟ್ಟರ ಕೆಲಸವನ್ನು ಮಾಡುತ್ತದೆಯೆಂಬುದನ್ನು "ವಿಮರ್ಶೆಯನ್ನು ಹೇಗೆ ಮಾಡಬೇಕು?" ಎಂಬುದು ವಿವರಿಸುತ್ತದೆ. "ಸಾರ್ವಭೌಮ-ನಿರಂತರ-ವರ್ಷಾ-ಭವಿಷ್ಯ" ಎಂಬುದು ಪತ್ರಿಕೆಗಳಲ್ಲಿ ಬರುವ ವಾರಭವಿಷ್ಯ ಮಾಸಭವಿಷ್ಯ ವರ್ಷ ಭವಿಷ್ಯಗಳನ್ನು ವ್ಯಂಗ್ಯವಾಗಿ ಹಾಸ್ಯಮಾಡುತ್ತದೆ. 'ಹಸ್ತಸಾಮುದ್ರಿಕದ ಪ್ರಥಮ ಪಾಠಗಳು' ಎಂಬುದೂ ಇದೇ ರೀತಿಯದು.

ಈ ಹರಟೆಗಳೆಲ್ಲಕ್ಕಿಂತ "ಸಾವಿನ ಕೂಡ ಸರಸ" ಎಂಬುದು ಚೆನ್ನಾಗಿದೆ. ಅದು ನಿಜವಾಗಿಯೂ ಉತ್ತಮವಾದ ಹರಟೆ. ಇತರ ಹರಟೆಗಳು ಈ ಮಟ್ಟಕ್ಕೆ ಬರುವುದಿಲ್ಲ. ಹರಟೆಗಳಲ್ಲಿ ಒಂದು ನೈಜವಾದ ಆತ್ಮೀಯತೆಯು ಕಂಡುಬರಬೇಕು. ತನ್ನ ಅನುಭವದಲ್ಲಿ ಬಂದ, ಹೋದ, ಖೇದ ಮೋದ ಜನಕಗಳಾದ ಸನ್ನಿವೇಶಗಳನ್ನು ಬರಹದ ಮೂಲಕ ಇತರರ ಅನುಭವಕ್ಕೆ ಲೇಖಕನು ತಂದರೆ ಅದು ಹರಟೆಯಾಗುತ್ತದೆ. ಈ ಕೆಲಸವನ್ನು 'ಸಾವಿನ ಕೂಡ ಸರಸ'ವು ಮನೋಹರವಾಗಿ ಮಾಡುತ್ತದೆ. ಈ ಹರಟೆಯಲ್ಲಿ 'ಗುದ್ದಿದರೆ ಸಾಯುವ ನಾನು ಹಿಂಸಾಮಾರ್ಗದ ಜಾತಿ ವೈರಿಯಾಗಿದ್ದೆ' ಎನ್ನುವ ಒಬ್ಬನ ಜೀವನವು ಚಿತ್ರಿತವಾಗಿದೆ. ಅವನಿಗಾದ ಬೇನೆ, ಅದರ ನಿವಾರಣೆಗಾಗಿ ಮಾಡಿದ ಉಪಾಯಗಳು, ವೈದ್ಯರ ಮತ್ತು ಔಷಧಿಗಳ ವಿಫಲತೆ, ಆತ್ಮಹತ್ಯ ಪ್ರಯತ್ನ,

ಅದರ ವಿಫಲತೆ, ಇವುಗಳನ್ನೆಲ್ಲಾ ಹಾಸ್ಯರಸಭರಿತವಾಗಿಯೂ, ಹೃದಯಂಗಮ ವಾಗಿಯೂ ಈ ಹರಟೆಯು ವಿವರಿಸುತ್ತದೆ.

ಪುಸ್ತಕದ ಎರಡನೆಯ ಭಾಗದಲ್ಲಿ ನಾಲ್ಕು ನಗೆಹಾಡುಗಳೂ ಎರಡು ಅಣಕ ವಾಡುಗಳೂ ಇವೆ. ಈ ಪದ್ಯಗಳನ್ನು ನೋಡಿ—

ಕಸಪೊರಕೆ! ಕಸಪೊರಕೆ
ಧ್ವಜವೆತ್ತಿ ಮೇಲಕ್ಕೆ
ಹೊರಟಿಹುದು ಈ ಜಗದ ಶುದ್ಧಿಕರಣಕ್ಕೆ
(ಕಸಪೊರಕೆ)

ನಾಡ ಸಂರಕ್ಷಣೆಗೆ ತೋಫು ಇರದಿರಲು
ನಾಡಿಗೊಂದಿರಬೇಕು ಬಯ್ಯುವಾ ಮುದುಕಿ,
ಊರ ಸಂರಕ್ಷಣೆಗೆ ನಾಯಿ ಇರದಿರಲು
ಊರಿಗೊಂದಿರಬೇಕು ಬಾಯ್ಬಡಕ ಮುದುಕಿ,
ಕೇರಿಯನ್ನೆಚ್ಚರಿಸೆ ಗಂಟೆಯಿರದಿರಲು
ಕೇರಿಗೊಂದಿರಬೇಕು ಕೆಮ್ಮುವಾ ಮುದುಕಿ,
ಮನೆಮನೆಗೆ—ಪ್ಲೇಗಾಗಿ—ದೀಪವಿರದಿರಲು
ಮನೆಗೊಂದು ಇರಬೇಕು ಸಾಯದಾ ಮುದುಕಿ!
(ಮುದುಕಿ)

ಇವು ನಾವು ಓದಿ, ನಗಬೇಕಾದ ಪದ್ಯಗಳು. ನಾವು ನಕ್ಕರೆ ಪದ್ಯಗಳು ತಮ್ಮ ಕೆಲಸ ಮಾಡಿದಂತೆ.

ಅಣಕವಾಡುಗಳಲ್ಲಿ ಶ್ರೀಮಾನ್ ಬೇಂದ್ರೆಯವರು ತಮ್ಮ ಪ್ರಸಿದ್ಧವಾದ "ಹಕ್ಕಿ ಹಾರುತಿದೆ" ಎಂಬ ಕವನವನ್ನೂ ಗೋಪಾಲದಾಸರ "ವರದಾ, ಕಾಂಚೀ ವರದಾ" ಎಂಬ ಕೀರ್ತನೆಯನ್ನೂ ಅಣಕಿಸಿದ್ದಾರೆ. ಮೊದಲನೆಯದು 'ಬೆಕ್ಕು ಹಾರುತಿದೆ' ಎಂದೂ ಎರಡನೆಯದು 'ಒರದಾ, ತಗಣಿ ಒರದಾ' ಎಂದೂ ಮಾರ್ಪಾಟಾಗಿವೆ. ಹಕ್ಕಿ ಹಾರುವುದನ್ನು ಬೆಕ್ಕು ಹಾರಿ ಅಣಕಿಸಲಿ; ಹಿಡಿದು ತಿನ್ನಲಿ. ಆದರೆ 'ತಗಣಿ ಒರದು' ಕಂಚಿಯ ವರದನನ್ನು ಅಣಕಿಸುವುದು ಏಕೋ ಅಸಹ್ಯ ವೆನಿಸುತ್ತದೆ. ಪ್ರಾಚೀನ ಸಂಪ್ರದಾಯದಲ್ಲಿ ಗೌರವವುಳ್ಳ ಮತಧರ್ಮ ಪಕ್ಷಪಾತಿಗಳಿಗೆ ಮನಸ್ಸಿನಲ್ಲಿ ಕಿಚ್ಚೇಳುತ್ತದೆ.

ಇನ್ನು ಪುಸ್ತಕದ ಕೊನೆಯ ಭಾಗದಲ್ಲಿ ಏಳು ಕತೆಗಳಿವೆ. ಬಾಲ್ಯಸ್ನೇಹವು ಎಷ್ಟು ನಿರ್ಮಲವಾದುದು, ಅದಕ್ಕೆ ಭಂಗಬಂದರೆ ಏನು ಅನಾಹುತವಾಗುತ್ತದೆ ಎಂಬುದನ್ನು—ಪಾಲಾಪೂ ಎಂಬ ಕಥೆಯಲ್ಲಿ—ಪ್ರಹ್ಲಾದ ಮತ್ತು ರಾಮು ಇವರ

ಸ್ನೇಹದ ಕತೆಯಲ್ಲಿ ಕಾಣಬಹುದು. 'ಹಿರಿದ ಕತ್ತಿ'ಯು ಮುದುಕರ ಮದುವೆಯ ಚಟವನ್ನೂ, 'ಮಗುವಿನ ಕರೆ'ಯು ತಾಯಿಯು ಮಗುವಿನ ಮೇಲಿನ ಪ್ರೇಮದಿಂದ ಆತ್ಮಹತ್ಯ ಪ್ರಯತ್ನವನ್ನು ತ್ಯಜಿಸಿದ ಬಗೆಯನ್ನೂ ಚಿತ್ರಿಸುತ್ತವೆ. ಇನ್ನು ಈ ಗ್ರಂಥಕ್ಕೆ ಹೆಸರು ಕೊಟ್ಟ 'ನಿರಾಭರಣಸುಂದರಿ'. ಮುನ್ನುಡಿಯಲ್ಲಿ ಶ್ರೀಮಾಸ್ತಿ ಮಹಿಷಿಯವರು "ನಿರಾಭರಣಸುಂದರಿ ಬೇಂದ್ರೆಯವರು ಬರೆದದ್ದಲ್ಲ. ಅದರ ಲೇಖಕರು ಅಂಬಿಕಾತನಯದತ್ತರು. ಇದು ಕವಿಯು ಬರೆದ ಕತೆ" ಎಂದು ಹೇಳಿದ್ದಾರೆ. "ಪದ್ಮನು ಚಿತ್ರಗಾರ; ನಾಗಶ್ರೀಯು ಕವಯಿತ್ರಿ. ನಿರಾಭರಣಸುಂದರಿಯ ನಗ್ನ ಚಿತ್ರದ ಜನ್ಮವೇ ಸನ್ನಿವೇಶ. ಈ ಕಲಾಕೃತಿಯ ಬಗ್ಗೆ ರಸಿಕದಂಪತಿಗಳ ಚರ್ಚೆಯೇ ಸಂಭಾಷಣೆ." ಇಷ್ಟೂ ಸೇರಿ ಈ ಕತೆಯಾಗಿದೆ. ಇದೇ ಈ ಗ್ರಂಥದಲ್ಲೆಲ್ಲಾ ಅತ್ಯುತ್ತಮವಾದ ಭಾಗವೆಂಬುದನ್ನು ತೋರಿಸುವುದಕ್ಕೆಂಬಂತೆ ಪುಸ್ತಕಕ್ಕೆ 'ನಿರಾಭರಣ ಸುಂದರಿ' ಎಂದು ಹೆಸರು ಕೊಟ್ಟಿದ್ದಾರೆ.

ಮಿಕ್ಕ ಮೂರು ಕತೆಗಳು ಕತೆ ಬರೆಯುವ ಕಲೆಯಲ್ಲಿ ಈಗತಾನೆ ಕೈ ಇಟ್ಟಿರುವ ಯುವಕನ ಕೈವಾಡದಂತೆ ಕಂಡುಬರುತ್ತದೆ. ಅವು ಲೇಖಕರೇ ಹೇಳಿರುವಂತೆ ಎಂದೋ ಬರೆದವುಗಳಿರಬೇಕು.

ಗ್ರಂಥಪ್ರಕಾಶನ ವಿಷಯದಲ್ಲಿ ಒಂದು ಮಾತು. ಈ ರೀತಿ ಹರಟೆ, ನಗೆಹಾಡು, ಕತೆಗಳೆಲ್ಲವನ್ನು ಸೇರಿಸಿ ಮೇಲೋಗರ ಗ್ರಂಥವನ್ನಾಗಿ ಮುದ್ರಿಸಿರುವುದರ ಔಚಿತ್ಯವೇನು? ಅದರಲ್ಲಿಯೂ ಒಂದು ಹಾಸ್ಯವಿದೆಯಲ್ಲವೇ?

ಜಿ. ವೆಂ.

---

# ಸಾದರ ಸ್ವೀಕಾರ

**೧. ನಾಗವರ್ಮಕೃತ ಕಾವ್ಯಾವಲೋಕನಂ**—ಸಂಪಾದಕರು: ಮ|| ಗಳಾದ ಎಂ. ಎಸ್. ಬಸವಲಿಂಗಯ್ಯ, ಎಂ.ಎ., ಬಿ.ಎಲ್. ಮತ್ತು ಎಚ್. ಆರ್. ರಂಗಸ್ವಾಮಿ ಐಯಂಗಾರ್, ಎಂ.ಎ.; ಪ್ರಕಾಶಕರು: ಓರಿಯಂಟಲ್ ಲೈಬ್ರರಿ, ಮೈಸೂರು; ಡೆ. ಅ. LXXIX + ೨೪೮ ; ಬೆಲೆ, ರೂ. ೧-೮-೦.

**೨. ನಾಗವರ್ಮಕೃತ ಕಾವ್ಯಾವಲೋಕನಂ**—ಸಂಪಾದಕರು: ಶ್ರೀ|| ಗಳಾದ ಶಿ. ಶಿ. ಬಸವನಾಳ, ಎಂ.ಎ. ಮತ್ತು ಕೇಪು ಶಂಕರನಾರಾಯಣ ; ಪ್ರಕಾಶಕರು: ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ; ಡೆ. ಅ. ೧೦+೩೫೨+೨೬ ; ಬೆಲೆ, ರೂ. ೨-೪-೦.

**೩. History of Kannada Literature** (Readership Lectures)—by Prakthana Vimarsa Vichakshana Mahamahopadhyaya Rao Bahadur R. Narasimhacharya, M.A., M.R.A.S.; ಪ್ರಕಾಶಕರು: ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು; ಡೆ. ಅ. ೮+೮೫ ; ಬೆಲೆ, ರೂ. ೧-೦-೦.

**೪. ಹಿಂದೂದರ್ಶನಸಾರ**—ಲೇಖಕರು: ಮಹಾಮಹೋಪಾಧ್ಯಾಯ ಪಂಡಿತರತ್ನಂ ಲಕ್ಷ್ಮೀಪುರಂ ಶ್ರೀನಿವಾಸಾಚಾರ್ಯರು; ಪ್ರಕಾಶಕರು: ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು; ಕ್ರೌ. ಅ. ೧೨+೩೦೨ ; ಬೆಲೆ, ೧೨ ಆಣೆ.

**೫. ಗರುಡಗಂಬದ ದಾಸಯ್ಯ**—ಲೇಖಕರು: ಶ್ರೀಮಾನ್ ಗೊರೂರು ರಾಮಸ್ವಾಮಯ್ಯಂಗಾರ್ ; ಪ್ರಕಾಶಕರು: ಸರಸ್ವತೀ ಪುಸ್ತಕಭಂಡಾರ, ಮಂಡ್ಯ ; ಕ್ರೌ. ಅ. ೧೬+೨೦೩ ; ಬೆಲೆ, ರೂ. ೧-೦-೦.

**೬. ಪ್ರಬಂಧಪ್ರಕಾಶ**—ಲೇಖಕರು: ಶ್ರೀಮಾನ್ ಮ|| ಶ್ರೀ ದೇಶಪಾಂಡೆ, ಎಂ.ಎ.; ಎಸ್.ಟಿ.ಸಿ.: ಪ್ರಕಾಶಕರು: ದೇಶಪಾಂಡೆ ಮನೋಹರರಾಯರು, ಅಥಣಿ; ಕ್ರೌ. ಅ. ೬+೨೨೨+೪ ; ಬೆಲೆ, ರೂ. ೧-೦-೦.

**೭. ನಿರಾಭರಣ ಸುಂದರಿ**—ಲೇಖಕರು: ಶ್ರೀಮಾನ್ ದ. ರಾ. ಬೇಂದ್ರೆ, ಎಂ.ಎ.; ಪ್ರಕಾಶಕರು: ಮನೋಹರಗ್ರಂಥ ಪ್ರಕಾಶನಸಮಿತಿ, ಧಾರವಾಡ; ಕ್ರೌ. ಅ. ೧೪೩ ; ಬೆಲೆ, ರೂ. ೧-೦-೦.

**೮. ಕಂಸವಹೋ** (ಪ್ರಾಕೃತ)—ಸಂಪಾದಕರು: ಶ್ರೀಮಾನ್ ಎ. ಎನ್. ಉಪಾಧ್ಯೆ, ಎಂ.ಎ., ಡಿ.ಲಿಟ್., ಕೊಲ್ಹಾಪುರ; ಪ್ರಕಾಶಕರು: ಹಿಂದೀ ಗ್ರಂಥರತ್ನಾಕರ ಕಾರ್ಯಾಲಯ, ಬೊಂಬಾಯಿ; ಕ್ರೌ. ಅ. ೨೧೩ ; ಬೆಲೆ?

**೯. ಬೆಳ್ಳಿಯ ಹಬ್ಬ** (ಏಕಾಂಕಗಳು)—ಲೇಖಕರು ಮತ್ತು ಪ್ರಕಾಶಕರು: ಶ್ರೀಮಾನ್ ಎನ್. ಕೆ. ಕುಲಕರ್ಣಿ, ಎಂ.ಎ., ಬಿ.ಟಿ., ಧಾರವಾಡ; ಕ್ರೌ. ಅ. ೩+೭೨ ; ಬೆಲೆ, ೮ ಆಣೆ.

---



ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್ ಅವರು
ಮೈಸೂರು ಸಂಸ್ಥಾನದ ಹೊಸ ಮಹಾರಾಜರವರು.
ಮೈಸೂರು ವಿಶ್ವವಿದ್ಯಾನಿಲಯದ ಹೊಸ ಛಾನ್ಸೆಲರವರು

(ಪಡಿಯಚ್ಚು ವೆಸ್ಲಿ ಪ್ರೆಸ್ಸಿನ ಅಧಿಕಾರಿಗಳು ದಯವಿಟ್ಟು ಕೊಟ್ಟದ್ದು)

# ವಸ್ತುಕೋಶ

ಈಗ ಶ್ರೀ ಜಯಚಾಮರಾಜ ವೊಡೆಯರ್ ಬಹದ್ದೂರರವರು ನಮ್ಮನ್ನು ಆಳುವ ಮಹಾಸ್ವಾಮಿಗಳಾಗಿದ್ದಾರೆ; ನಮ್ಮ ಮೈಸೂರು ವಿಶ್ವವಿದ್ಯಾನಿಲಯದ ಛಾನ್ಸೆಲರವರಾಗಿದ್ದಾರೆ. ಮೈಸೂರು ಸಂಸ್ಥಾನವು ಅವರನ್ನು ಎಷ್ಟು ಮಮತೆಯಿಂದ ನಮ್ಮ ಅರಸರು ಎಂದು ಹೇಳಿಕೊಳ್ಳುತ್ತದೆಯೋ ಅಷ್ಟೇ ಮಮತೆಯಿಂದ ಪ್ರಾಯಶಃ ಅದಕ್ಕಿಂತ ಹೆಚ್ಚಾಗಿ, ವಿಶ್ವವಿದ್ಯಾನಿಲಯವು ನಮ್ಮ ಛಾನ್ಸೆಲರು ಎಂದು ಒಂದು ಕ್ಷಮ್ಯವಾದ ಹೆಮ್ಮೆಯಿಂದ ಹೇಳಿಕೊಳ್ಳಬಹುದಾಗಿದೆ. ಅವರು ನಮ್ಮ ವಿಶ್ವವಿದ್ಯಾನಿಲಯದಲ್ಲಿ ವ್ಯಾಸಂಗಮಾಡಿದವರು; ಅದರ ಗುಣದೋಷಗಳನ್ನು ಅನುಭವದಿಂದ ತಿಳಿದವರು; ವಿದ್ಯಾರ್ಥಿಗಳೊಡನೆಯೂ ಉಪಾಧ್ಯಾಯರವರೊಡನೆಯೂ ವಿಶ್ವಾಸದಿಂದ ಕಲೆತು ಅವರ ಕಷ್ಟಸುಖಗಳನ್ನು ಬಲ್ಲವರು. ಮೊನ್ನೆತಾನೆ ಪದವೀದಾನೋತ್ಸವದಲ್ಲಿ ಶ್ರೀ ಅಮರನಾಥ ಝಾ ಅವರು ಹೇಳಿದಂತೆ ಅವರು ಪ್ರಪಂಚದ ವಿಶ್ವವಿದ್ಯಾನಿಲಯಗಳ ಛಾನ್ಸೆಲರುಗಳಲ್ಲೆಲ್ಲಾ ವಯಸ್ಸಿನಲ್ಲಿ ಅತ್ಯಂತ ಕಿರಿಯವರು. ಆದರೆ ವಯಸ್ಸೇನು ಮಾಡುತ್ತದೆ? ವಯಸ್ಸು ಕಿರಿದಾದರೆ ಗುಣಕ್ಕೆ ಮತ್ಸರವೇ ?

ರಾಜಭಕ್ತಿ ಸಮರ್ಪಣೆ

ಅವರು ವಿದ್ಯಾಬುದ್ಧಿ ನಯವಿನಯ ತೇಜೋಗಾಂಭೀರ್ಯಾದಿ ರಾಜಗುಣಗಣಗಳಿಂದ ವಿರಾಜಮಾನರಾಗಿದ್ದಾರೆ. ನಮ್ಮ ದೇಶದಲ್ಲೂ ದೇಶಾಂತರಗಳಲ್ಲೂ ಸಂಚಾರಮಾಡಿ ವಿಸ್ತಾರವಾದ ಅನುಭವವನ್ನು ಗಳಿಸಿದವರಾಗಿದ್ದಾರೆ. ಗುರುಹಿರಿಯರ ಜೊತೆಯಲ್ಲಿದ್ದು ಅವರ ಆಶೀರ್ವಾದ ಅನುಗ್ರಹಗಳನ್ನು ಪಡೆದು ರಾಜ್ಯಪದ್ಧತಿ ಸರ್ಕಾರ ವ್ಯವಹಾರಾದಿಗಳಲ್ಲಿ ಶಿಕ್ಷಣಹೊಂದಿದವರಾಗಿದ್ದಾರೆ. ಪ್ರಜಾವತ್ಸಲರೂ ಲೋಕಪ್ರಿಯರೂ ಆಗಿದ್ದಾರೆ. ಒಟ್ಟಿನ ಮೇಲೆ, ಶ್ರೀ ನಾಲ್ವಡಿ ಕೃಷ್ಣರಾಜ ವೊಡೆಯರವರಂಥ ರಾಜರ್ಷಿಗಳನಂತರ ಸಿಂಹಾಸನಾಧೀಶ್ವರರಾಗಲು ಎಲ್ಲ ವಿಧದಿಂದಲೂ, ಎಲ್ಲ ದೃಷ್ಟಿಯಿಂದಲೂ, ಅವರಿಗೆ ಅನುರೂಪರಾದವರಾಗಿದ್ದಾರೆ. ಇದನ್ನು ಅವರ ಪ್ರಜೆಗಳೆಲ್ಲರೂ ಒಮ್ಮನಸ್ಸಿನಿಂದ ಒಪ್ಪಿ, ಏಕಮುಖವಾಗಿ ಆಡುತ್ತಿದ್ದಾರೆ. ಆದ್ದರಿಂದ ಮುಂದೆ ರಾಜ ಪ್ರಜೆಗಳಲ್ಲಿ, ಹಿಂದಿನಂತೆಯೇ ಸ್ನೇಹಭಕ್ತಿ ವಾತ್ಸಲ್ಯಗಳಿದ್ದು, ಬೆಳೆದು, ದೇಶವು ಅಭಿವೃದ್ಧಿಯನ್ನೈದುವುದೆಂದು ನಾವು ನಂಬಬಹುದಾಗಿದೆ; ಇದು ನಮ್ಮೆಲ್ಲರ ಪುಣ್ಯ. ಈ ಪುಣ್ಯವನ್ನು ಸರ್ವೇಶ್ವರನು ಸದಾಕಾಲ ಕರುಣಿಸಲಿ!

***

ಕಳೆದ ಆಗಸ್ಟ್ ೨೯ ನೆಯ ತಾರೀಖಿನ ದಿನ ಮೈಸೂರಿನ ಅರಮನೆಯಲ್ಲಿ "ಖರೀತಾ ದರ್ಬಾರು" ನಡೆಯಿತು. ಮೈಸೂರಿನ ರೆಸಿಡೆಂಟರಾದ ಲೆಫ್ಟನೆಂಟ್ ಕರ್ನಲ್ ಡಿ. ಎಚ್. ಗಾರ್ಡನ್ ಅವರು ಬ್ರಿಟಿಷ್ ಸರ್ಕಾರದ ಪ್ರತಿನಿಧಿಗಳಾಗಿ ದಯಮಾಡಿದ್ದು ಶ್ರೀ ಜಯಚಾಮರಾಜ ವೊಡೆಯುರವರು ಮೈಸೂರು ಸಿಂಹಾಸನಾಧಿಪತಿಗಳೆಂಬ ಬಗ್ಗೆ ಇಂಡಿಯ ಚಕ್ರವರ್ತಿಗಳ ಒಪ್ಪಿಗೆಯನ್ನು ತಿಳಿಸಿ ಶ್ರೀಮನ್ಮಹಾರಾಜರವರನ್ನು ಅಭಿನಂದಿಸಿದರು. ಅಂದು ಅವರು ಮಾಡಿದ ಭಾಷಣದ ಸಾರಾಂಶವಿದು :—

ಖರೀತಾ ದರ್ಬಾರು : ರೆಸಿಡೆಂಟರವರ ಭಾಷಣ

"ಮೈಸೂರು ಸಂಸ್ಥಾನದ ಉನ್ನತಾಧಿಕಾರಿಗಳೂ, ಸರದಾರರೂ, ಸರ್ಕಾರಿ ಉದ್ಯೋಗಸ್ಥರೂ ಖಾಸಗಿ ದೊಡ್ಡ ಮನುಷ್ಯರೂ ನೆರೆದಿರುವ ತಮ್ಮ ಈ ದರ್ಬಾರಿನಲ್ಲಿ, ಇಂಡಿಯಾ ಚಕ್ರವರ್ತಿಗಳು ತಮ್ಮ ಸಿಂಹಾಸನಾಧಿಕಾರವನ್ನು ಅಂಗೀಕರಿಸಿರುವರೆಂಬ ಸಂಗತಿಯನ್ನು ಘನಹೊಂದಿದ ವೈಸ್‌ರಾಯರವರ ಪರವಾಗಿ ಬಿನ್ನವಿಸುತ್ತೇನೆ.

"ಈಗ್ಗೆ ಇಪ್ಪತ್ತೊಂದು ವರ್ಷಗಳ ಕೆಳಗೆ ತಾವು ಜನ್ಮವೆತ್ತಿದಾಗ ತಮಗೆ 'ಜಯ' ಎಂಬ ಶುಭನಾಮಕರಣವನ್ನು ಮಾಡಲಾಯಿತು. ಆ ಹೆಸರನ್ನು ತಮಗೆ ಇಟ್ಟದ್ದು, ಬ್ರಿಟಿಷ್ ಚಕ್ರಾಧಿಪತ್ಯವೂ ಅದರ ಮಿತ್ರಮಂಡಲಿಯೂ ನಾಲ್ಕು ವರ್ಷ ಘೋರವಾಗಿ ಹೋರಾಡಿ ಜಯವನ್ನು ಪಡೆದ ಕಾಲದಲ್ಲಿ. ಈಗ ಮತ್ತೊಂದು ಸಾರಿ ಬ್ರಿಟಿಷ್ ಚಕ್ರಾಧಿಪತ್ಯವು ನಾಗರಿಕತೆಯನ್ನೂ, ಸ್ವತಂತ್ರ ಜನರು ಜೀವನದ ಉಚ್ಚಾದರ್ಶಗಳೆಂದುಕೊಂಡಿರುವ—ಜೀವವನ್ನಾದರೂ ತೆತ್ತು ಉಳಿಸಿಕೊಳ್ಳಬೇಕೆನ್ನುವ—ವಸ್ತುಪರಿಸ್ಥಿತಿಗಳನ್ನೂ ಕಾಪಾಡಿಕೊಳ್ಳಲು ಹೋರಾಡುತ್ತಿದೆ. ಅಂಥ ಸ್ವತಂತ್ರ ಜನರಲ್ಲಿ ಮೈಸೂರು ಸಂಸ್ಥಾನವು ಮುಂದೆ ನಿಂತಿದೆ. ಈ ಯುದ್ಧಕಾಲದಲ್ಲಿ ಮತ್ತೆ ತಮ್ಮ ಜೀವಮಾನದ ಒಂದು ದೊಡ್ಡ ಸಂಗತಿ ಜರುಗಿದೆ. ಮೈಸೂರಿನಲ್ಲಿ ಹೀಗೆ ಜಯಪ್ರಾಪ್ತವಾದ ಶುಭವು ಜಗತ್ತಿನ ಸ್ವತಂತ್ರ ಜನಕ್ಕೆಲ್ಲಾ ಜಯಸೂಚಕವಾಗಿರುವುದೆಂಬುದರಲ್ಲಿ ಸಂದೇಹವಿಲ್ಲ.

"ಮೈಸೂರಿನ ಒಡೆಯರುಗಳು ೧೩೯೯ ರಿಂದ ಎಂದರೆ ಸುಮಾರು ಐದುವರೆ ಶತಮಾನಗಳಿಂದ ರಾಜ್ಯವಾಳುತ್ತಿದ್ದಾರೆ. ಆಳಿದ ಮಹಾಸ್ವಾಮಿಯವರು ಅವರಲ್ಲಿ ಅತ್ಯಂತ ಘನತೆವೆತ್ತವರಾಗಿದ್ದರು. ತಾವು ಆ ಮಹಾರಾಜ ಪಂಕ್ತಿಗೆ ಸೇರಿದ್ದೀರಿ; ಆದ್ದರಿಂದ ತಮ್ಮ ಜವಾಬುದಾರಿಯು ಗುರುತರವಾದದ್ದಾಗಿದೆ.—ಅದರಲ್ಲಿ ಸದವಕಾಶವೂ ತುಂಬ ಇದೆ. ತಾವು, ತಮ್ಮ ಕಣ್ಣು ಮುಂದೆ ಇದುವರೆಗೆ ವಿರಾಜಮಾನವಾಗಿದ್ದ ಮೇಲ್ಪಂಕ್ತಿಯನ್ನು ಅನುಸರಿಸಬೇಕೆಂದು ಎಷ್ಟು ಶ್ರದ್ಧಾದರಗಳುಳ್ಳವರಾಗಿ

ದ್ದೀರೆಂಬುದನ್ನು ನಾನು ಚೆನ್ನಾಗಿ ಬಲ್ಲೆ ; ತಾವು ಅದರಲ್ಲಿ ಸಂತತವಾಗಿ ಪ್ರಯತ್ನ ಪಡುತ್ತೀರೆಂಬುದರಲ್ಲಿ ಸಂದೇಹವಿಲ್ಲ. ಆಳಿದ ಮಹಾಸ್ವಾಮಿಯವರ ಕಾಲದಲ್ಲಿ ಪ್ರಪಂಚದ ಮಿಕ್ಕೆಡೆಗಳಲ್ಲಿ ಹೇಗೋ ಹಾಗೆ ಮೈಸೂರಿನಲ್ಲಿಯೂ ಅನೇಕ ಬದಲಾವಣೆಗಳು ಆದವು. ಈ ಬದಲಾವಣೆಗಳು ಬಹು ಮಹತ್ವದವಾದರೂ ಇನ್ನೂ ಆಗಬೇಕಾದ ಕಾರ್ಯ ಬಹಳವಾಗಿದೆ. ಅವರು ನಡಸಿ ನಿಂತ ಕಾರ್ಯವನ್ನು ತಾವು ಮುಂದುವರಿಸಬೇಕಾಗಿದೆ. ಸೃಷ್ಟಿಯಲ್ಲಿ ಯಾವುದೂ ನಿಂತಲ್ಲಿ ನಿಲ್ಲುವುದಿಲ್ಲ—ಇಲ್ಲವೇ ಮುಂದುವರಿಯಬೇಕು, ಇಲ್ಲವೇ ಹಿಂದಕ್ಕೆ ಸರಿಯಬೇಕು. ಇವುಗಳ ಮಧ್ಯದ ಸ್ಥಿತಿಯಿಲ್ಲ. ಮೈಸೂರು ಮುಂದುವರಿಯುತ್ತಿದೆ, ಮುಂದುವರಿಯುತ್ತ ಹೋಗುತ್ತದೆ; ಅದನ್ನು ನಡಸಿಕೊಂಡು ಹೋಗುವುದು ತಮ್ಮ ಕರ್ತವ್ಯವಾಗಿದೆ.

"ಪ್ರಪಂಚದಲ್ಲಿ ಎಲ್ಲೆಲ್ಲೂ ಆರ್ಥಿಕ ಅಭ್ಯುದಯವು ಆಧ್ಯಾತ್ಮಿಕ ಅಭಿವೃದ್ಧಿಯನ್ನು ಮೆಟ್ಟಿ ಮುಂದೆ ಹೋಗುತ್ತಿರುವುದನ್ನು ನಾವು ನೋಡುತ್ತಿದ್ದೇವೆ. ಆದರೆ ನ್ಯಾಯಸತ್ಯಗಳ ಧಾರ್ಮಿಕಶಕ್ತಿಯು ಮೇಲಾಗಿ ಅಧರ್ಮಕ್ಕೆ ಪರಾಜಯವಾಗಿಯೆ ಆಗುವುದೆಂದು ನಮಗೆ ಭರವಸೆ ಇದೆ.

"ಮೈಸೂರಿನಲ್ಲಿ ಕಳೆದ ಅರ್ಧ ಶತಮಾನದಿಂದ ಕಂಡು ಬಂದಿರುವ ಸಂಪದಭಿವೃದ್ಧಿಯು ನ್ಯಾಯವಾಗಿ ಹೆಮ್ಮೆಪಡಬಹುದಂಥಾದ್ದಾಗಿದೆ ; ಇತರರಿಗೆ ಇದು ದೊಡ್ಡ ಮೇಲ್ಪಂಕ್ತಿಯಾಗಿದೆ. ಆದರೆ ಈ ಸಂಪದಭಿವೃದ್ಧಿಯ ಜೊತೆಜೊತೆಯಲ್ಲಿಯೇ ಸಂಸ್ಥಾನದ ಧಾರ್ಮಿಕ ಉನ್ನತಿಯೂ ಬೆಳೆದುಕೊಂಡು ಬಂದಿರುವುದು ಶ್ಲಾಘ್ಯವಾಗಿದೆ. ಇದಕ್ಕೆ ಕೀರ್ತಿಯು ಆಳಿದ ಮಹಾಸ್ವಾಮಿಯವರಿಗೆ ಸಲ್ಲತಕ್ಕದ್ದಾಗಿದೆ. ಈ ಸಂಸ್ಥಾನವು ತನ್ನ ಪ್ರಾಚ್ಯ ಮತ್ತು ಪಾಶ್ಚಾತ್ಯ ವಿದ್ಯಾಪೀಠಗಳಿಗೂ, ಕಲೆಗಳಿಗೆ ಕೊಡುತ್ತಿರುವ ಪ್ರೋತ್ಸಾಹಕ್ಕೂ, ಪ್ರಸಿದ್ಧಿ ಪಡೆದಿದೆ. ಅದರ ನಗರಗಳೂ ಉದ್ಯಾನವನಗಳೂ ಅನೇಕಾನೇಕ ಪ್ರಕೃತಿಗತ ಅದ್ಭುತಗಳೂ ಸೌಂದರ್ಯದ ನೆಲೆವೀಡೆಂದು ಹಳ್ಳಿಯ ಗೌಡನೂ ನೋಡಿ ಸಂತೋಷಪಡುವಂತಾಗಿದೆ.

"ಇಷ್ಟೆಲ್ಲಾ ಆದದ್ದು ಏತರಿಂದ ಎಂದು ತಾವು ಒಂದು ಕ್ಷಣ ಯೋಚಿಸಿಕೊಂಡು ನೋಡಬೇಕು. ಇದು ಆಳಿದ ಮಹಾಸ್ವಾಮಿಯವರಿಗೂ ಅವರ ಸರ್ಕಾರಕ್ಕೂ ಇದ್ದ ಅಪೂರ್ವ ಬಾಂಧವ್ಯದ ಫಲವೆಂಬುದರಲ್ಲಿ ನನಗೆ ಸಂದೇಹ ತೋರದು. ಅವರು ತಮ್ಮ ಸರ್ಕಾರದ ಅಧಿಕಾರಿಗಳ ಹಲವು ಸಲಹೆ ಸೂಚನೆಗಳನ್ನು ಸಮನ್ವಯಗೊಳಿಸಿ ಅವುಗಳನ್ನು ವಿಸ್ತಾರವೂ ಫಲವತ್ತೂ ಆದ ಮಾರ್ಗಗಳಿಗೆ ತಿರುಗಿಸಿ ಕೊಟ್ಟರು. ಅವರ ಸರ್ಕಾರವು ಈಗ ತಮ್ಮದಾಗಿ, ಪ್ರಜೆಗಳಿಗೋಸ್ಕರ ಪ್ರಜೆಗಳ ಸೇವಕರಂತೆ ಕೆಲಸಮಾಡುತ್ತ ಬರುತ್ತದೆ.

"ತಾವು ಆಳಿದ ಮಹಾಸ್ವಾಮಿಯವರ ಉದಾತ್ತವಾದ ಉದಾಹರಣೆಯನ್ನು ತಮ್ಮ ಮುಂದೆ ಇಟ್ಟುಕೊಂಡಿರುತ್ತೀರಿ. ಅವರನ್ನು ಚೆನ್ನಾಗಿ ಅರಿತುಕೊಂಡು ಅವರೊಡನೆ ಪಡೆದ ಆತ್ಮೀಯ ಮೈತ್ರಿಯನ್ನು ತಮ್ಮ ಹೃದಯದಲ್ಲಿಟ್ಟುಕೊಂಡಿದ್ದೀರಿ. ತಮ್ಮ ಪುರೋದೃಷ್ಟಿಯು ವಿಶಾಲವಾದದ್ದೂ ಸಂಸ್ಕೃತಿಪೂರ್ಣವೂ ಆಗಿದೆ. ಆದ್ದರಿಂದ ತಾವು ತಮ್ಮ ಸಂಸ್ಥಾನವನ್ನೂ ಸರ್ಕಾರವನ್ನೂ ನಿಜವಾದ ಅಭ್ಯುದಯ ಮಾರ್ಗದಲ್ಲಿ ನಡಸಿ ಆಳಿದ ಮಹಾಸ್ವಾಮಿಯವರಂತೆ ಪ್ರಜೆಗಳಿಗೆ ತಂದೆಯೆನ್ನಿಸಿಕೊಳ್ಳುವ ಉಚ್ಚಸ್ಥಾನವನ್ನು ಅಲಂಕರಿಸುತ್ತೀರೆಂಬುದನ್ನು ನಾನು ಅರಿತಿದ್ದೇನೆ. ಚಕ್ರವರ್ತಿಗಳ ವಿಷಯದಲ್ಲಿನ ಭಕ್ತಿವಿಶ್ವಾಸಗಳು ಒಡೆಯರ ಅರಸುಮನೆತನಕ್ಕೆ ಸಂಪ್ರದಾಯವಾಗಿ ನಡೆದುಬಂದಿವೆ; ಈ ಸಂಪ್ರದಾಯವನ್ನು ತಾವು ನಡಸಿಕೊಂಡು ಬರುವಿರೆಂದು ನಾನು ಬಲ್ಲೆ. ಇನ್ನು, ತಾವು ಪಟ್ಟಕ್ಕೆ ಬಂದದ್ದಕ್ಕಾಗಿ ತಮಗೆ ನನ್ನ ಹೃತ್ಪೂರ್ವಕವಾದ ಅಭಿನಂದನಗಳನ್ನು ಸಮರ್ಪಿಸುತ್ತೇನೆ; ಮತ್ತು ಸದಾ ತಮಗೆ ಶುಭವನ್ನು ಕೋರುತ್ತಿರುತ್ತೇನೆ."

ಇವು ಮೈಸೂರಿನಲ್ಲಿ ಅಭಿಮಾನವನ್ನಿಟ್ಟು, ಅದರ ಬಹುಮುಖವಾದ ಮುನ್ನಡೆಯನ್ನು ನೋಡಿ ಸಂತೋಷಪಟ್ಟು, ವಿಶ್ವಾಸದಿಂದಲೂ ಗೌರವದಿಂದಲೂ ಆಡಿದ ಹಿರಿಯರ ನುಡಿಗಳು; ಪಥ್ಯವೂ ಸತ್ಯವೂ ಪ್ರಿಯವೂ ಆದ ಮಾತುಗಳು. ಅವುಗಳಿಂದ ಕೀರ್ತಿಶೇಷರಾದ ಮಹಾಪ್ರಭುಗಳಲ್ಲಿದ್ದ ಗೌರವವು ಎಷ್ಟು ವ್ಯಕ್ತವಾಗುತ್ತದೆಯೋ ಅಷ್ಟೇ ವಿಶ್ವಾಸವೂ ಭರವಸೆಯೂ ಇಂದಿನ ಆಳುವ ಮಹಾಸ್ವಾಮಿಗಳಲ್ಲಿಯೂ ವ್ಯಕ್ತವಾಗುತ್ತವೆ.

ನಾವೂ ಬ್ರಿಟಿಷ್ ಸರ್ಕಾರದ ಉನ್ನತಾಧಿಕಾರಿಗಳೊಡನೆ, ಮಹಾಸ್ವಾಮಿಯವರ ಅಖಂಡ ಪ್ರಜಾಕೋಟಿಯೊಡನೆ, ಒಂದಾಗಿ ನಮ್ಮ ರಾಜಭಕ್ತಿಪುರಸ್ಸರವಾದ ಅಭಿನಂದನಗಳನ್ನು ಸಮರ್ಪಿಸಿ, ಶ್ರೀಮಹಾಸ್ಮರಾಜ ಜಯಚಾಮರಾಜ ವೊಡೆಯರವರಿಗೆ ಭಗವಂತನು ಆಯುರಾರೋಗ್ಯಾದಿ ಸಕಲಭಾಗ್ಯಗಳನ್ನು ದಯಪಾಲಿಸಲೆಂದೂ ಅವರ ಆಳಿಕೆಯಲ್ಲಿ ಮೈಸೂರೂ ಕನ್ನಡವೂ ಮತ್ತೂ ಮುಂದಕ್ಕೆ ಬರಲೆಂದೂ ಪ್ರಾರ್ಥಿಸುತ್ತೇವೆ.

***

## ಪಟ್ಟಾಭಿಷೇಕ ಪ್ರಸಿದ್ಧಿ ಪತ್ರಿಕೆ

ಶ್ರೀಮತ್ಸಮಸ್ತ ಭೂಮಂಡಲಮಂಡನಾಯಮಾನ ನಿಖಿಲದೇಶಾವತಂಸ ಕರ್ನಾಟಕ ಜನಪದಸಂಪದಧಿಷ್ಠಾನಭೂತ ಶ್ರೀಮನ್ಮಹೀಶೂರಮಹಾಸಂಸ್ಥಾನ

ಮಧ್ಯದೇದೀಪ್ಯಮಾನಾವಿಕಲ ಕಲಾನಿಧಿ ಕುಲಕ್ರಮಾಗತರಾಜ ಕ್ಷಿತಿಪಾಲಪ್ರಮುಖ ನಿಖಿಲರಾಜಾಧಿರಾಜ ಮಹಾರಾಜ ಚಕ್ರವರ್ತಿಮಂಡಲಾನುಭೂತದಿವ್ಯರತ್ನಸಿಂಹಾ ಸನಾರೂಢ ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪಾಪ್ರತಿಮ ವೀರ ನರಪತಿ ಬಿರುದಂತೆಂಬರಗಂಡ ಲೋಕೈಕವೀರ ಯದುಕುಲಪಯಃಪಾರಾವಾರ ಕಲಾನಿಧಿ ಶಂಖಚಕ್ರಾಂಕುಶ ಕುಠಾರ ಮಕರ ಮತ್ಸ್ಯ ಶರಭ ಸಾಳ್ವ ಗಂಡ ಭೇರುಂಡ ಧರಣೀವರಾಹ ಹನೂಮದ್ಗರುಡ ಕಂಠೀರವಾದ್ಯನೇಕಬಿರುದಾಂಕಿತ ಶ್ರೀಮನ್ಮಹಾರಾಜ ಶ್ರೀಮತ್ಕೃಷ್ಣರಾಜೇಂದ್ರ ಒಡೆಯರ್ ಬಹದ್ದರ್‌ರವರ ಸಹೋದರರಾದ ಶ್ರೀಮದ್ಯುವರಾಜ ಕಂಠೀರವ ನರಸಿಂಹರಾಜ ಒಡೆಯರ್ ಬಹದ್ದ ರ್ರರವರ ಧರ್ಮಪತ್ನೀ ಯುವರಾಣಿ ಕೆಂಪುಚೆಲುವಾಜಮ್ಮಣ್ಣೀಯವರ ಗರ್ಭ ಸುಧಾಂಬುಧಿ ರಾಕಾಸುಧಾಕರಾಯಮಾನ ಶ್ರೀಮಚ್ಚಾಮುಂಡಿಕಾಂಬಾವರಪ್ರಸಾ ದೋದ್ಭವರಾದ ಆತ್ರೇಯಸಗೋತ್ರ ಆಶ್ವಲಾಯನಸೂತ್ರ ಋಕ್ಶಾಖಾನುವರ್ತಿ ಗಳಾದ ಶ್ರೀಮನ್ಮಹೀಶೂರಪುರವರಾಧೀಶ ಶ್ರೀ ಜಯಚಾಮರಾಜ ಒಡೆಯರ್ ಬಹದ್ದರ್ರವರು ಶಾಲೀವಾಹನ ಶಕ ೧೮೪೨ನೇ ಸಿದ್ಧಾರ್ಥಿನಾಮ ಸಂವತ್ಸರದ ಆಷಾಢ ಬಹುಳ ಪಂಚಮೀ ಅನಂತರ ಷಷ್ಠೀ ಶುಕ್ರವಾರ ಉತ್ತರಾಭಾದ್ರಪದಾ ನಕ್ಷತ್ರ ಮೀನರಾಶಿ ಧನುರ್ಲಗ್ನದಲ್ಲಿ ಅವತರಿಸಿ, ಶಕ ೧೮೬೩ನೇ ವಿಕ್ರಮನಾಮ ಸಂವತ್ಸರದ ಭಾದ್ರಪದ ಶುದ್ಧ ಸಪ್ತಮೀ ರವಿವಾರ (ಸ‌ನ್ ೧೯೪೦ ನೇ ಇಸವಿ ಸೆಪ್ಟೆಂಬರ್ ತಾರೀಖು ೮) ಅನೂರಾಧಾ ನಕ್ಷತ್ರ ಹಗಲು ೧೦|| ಘಂಟೆ ತುಲಾ ಲಗ್ನದ ವೃಷಭಾಂಶ ವೈರಾಜ ಮುಹೂರ್ತದಲ್ಲಿ ರತ್ನಸಿಂಹಾಸನಾರೂಢರಾಗಿ ಪಟ್ಟಾಭಿಷಿಕ್ತ ರಾಗಿರುತ್ತಾರೆಂದು ಇದರಿಂದ ಸಮಸ್ತ ಪ್ರಜೆಗಳಿಗೂ ತಿಳಿಯಪಡಿಸಿರುತ್ತೆ.

## ಶ್ರೀಮನ್ಮಹಾರಾಜರವರು ಪಟ್ಟಾಭಿಷೇಕ ಸಮಯದಲ್ಲಿ ಮೈಸೂರು ಸಂಸ್ಥಾನದ ಪ್ರಜೆಗಳಿಗೆ ದಯಪಾಲಿಸಿದ ಸಂದೇಶ

ಮೈಸೂರು ಅರಮನೆ,
೮ನೆಯ ಸೆಪ್ಟೆಂಬರ್, ೧೯೪೦

ನನ್ನ ಪ್ರೀತಿಪಾತ್ರರಾದ ಪ್ರಜೆಗಳೆ,

ಪೂಜ್ಯರಾದ ನಮ್ಮ ದೊಡ್ಡಪ್ಪನವರು ಕೀರ್ತಿಶೇಷರಾದ ಮಹಾರಾಜ ಶ್ರೀ ಕೃಷ್ಣರಾಜ ಒಡೆಯರ್ ಬಹದ್ದೂರರವರಲ್ಲಿ ಗೌರವವನ್ನೂ ಪ್ರೇಮವನ್ನೂ ತೋರಿ, ಶ್ರೀಮಂತರಿಂದಲೂ, ಬಡವರಿಂದಲೂ, ಉನ್ನತಸ್ಥಾನದವರಿಂದಲೂ, ಸಾಮಾನ್ಯ ರಿಂದಲೂ, ಸಂಸ್ಥಾನದ ಎಲ್ಲಾ ಕಡೆಗಳಿಂದ ಬಂದು ಸುರಿದ ಅಸಂಖ್ಯಾತ ನಿದರ್ಶನ

ಗಳಿಂದ ನನ್ನ ಹೃದಯು ಗಾಢವಾಗಿ ತಟ್ಟಿಹೋಗಿದೆ. ಅವರುಗಳೂ ನಾನೂ ಪಟ್ಟಿರುವ ನಷ್ಟ ಎಂತಹುದೆಂದು ಅವು ಸಾಕ್ಷ್ಯವೊದಗಿಸಿ, ನನಗೂ ನನ್ನ ಮನೆತನದ ಕುಟುಂಬ ವರ್ಗಕ್ಕೂ ಬಹಳವಾಗಿ ಮನಸ್ಸಮಾಧಾನವನ್ನು ತಂದಿವೆ; ಮತ್ತು ನಾನು ವಹಿಸಿ ಕೊಳ್ಳುತ್ತಿರುವ ಮಹತ್ಕಾರ್ಯದಲ್ಲಿ ನನಗೆ ಧೈರ್ಯವನ್ನು ಕೊಡುವ ಬೆಂಬಲದ ಆಧಾರವಾಗಿವೆ.

ಮೈಸೂರು ಸಿಂಹಾಸನಕ್ಕೆ ಅನುಕ್ರಮವಾಗಿ ನಾನು ಬರುವುದರಲ್ಲಿ ಮಹಾನು ಭಾವರಾದ ರಾಜಶ್ರೇಷ್ಠರನ್ನು ಹಿಂಬಾಲಿಸುತ್ತಿದ್ದೇನೆ. ಅವರು ನಿಮ್ಮೆಲ್ಲರಲ್ಲೂ ಪ್ರೇಮವಿಟ್ಟಿದ್ದರು; ತಮ್ಮ ದೈವಭಕ್ತಿಯಿಂದ, ತಮ್ಮ ಸುಜ್ಞಾನದಿಂದ, ತಮ್ಮ ಕೃಪಾಪ್ರಸನ್ನತೆಯಿಂದ, ತಮ್ಮ ವಿನಯದಿಂದ, ತಮ್ಮ ಕರ್ತವ್ಯನಿಷ್ಠತೆಯಿಂದ, ತಮ್ಮ ರಾಜಗಾಂಭೀರ್ಯದಿಂದ, ರಾಜ್ಯಭಾರಮಹಿಮೆಯಿಂದ, ನಿಮ್ಮೆಲ್ಲರ ಪ್ರೇಮವನ್ನು ಆಕರ್ಷಿಸಿದ್ದರು.

ಅವರ ನೆನಪು ಎಂದೆಂದಿಗೂ ನಮ್ಮಲ್ಲಿ ನಿಲ್ಲುವುದು. ಈಗ ಅದು ಅವರ ನಷ್ಟದ ಪೂರ್ಣಾಘಾತವನ್ನು, ನಮ್ಮ ಬಾಳಿನಲ್ಲಿ ಅವರು ಬಿಟ್ಟ ದೊಡ್ಡ ಕೊರತೆಯನ್ನು, ಅನುಭವಿಸುತ್ತಿರುವ ನಮಗೆ ದುಸ್ಸಹವಾಗಿರುವುದು. ವರ್ಷಗಳು ಕಳೆದಂತೆಲ್ಲಾ, ಅವರು ನಮಗೆ ಏನಾಗಿದ್ದರು ಆ ಅರ್ಥವನ್ನೆಲ್ಲಾ ಬೆಲೆಗಂಡು ತಿಳಿದಂತೆಲ್ಲಾ, ಅವರ ಬಾಳಿನಿಂದ ನಮ್ಮ ಬಾಳನ್ನು ನಾವು ತಿದ್ದುವುದನ್ನು ಕಲಿತಂತೆಲ್ಲಾ, ಆ ನೆನಪು ನಮಗೆ ಸವಿಯಾದ ನೆನಪಾಗಿ ಬೆಳೆಯುವುದು.

ಈಗ ನಾವು ಅವರ ಮಹತ್ಪ್ರಯತ್ನವನ್ನು ಈಡೇರಿಸುವುದಕ್ಕಾಗಿ ನಮ್ಮನ್ನು ಅರ್ಪಣಮಾಡಿಕೊಳ್ಳಬೇಕಾಗಿದೆ. ಒಂದು ದೊಡ್ಡ ಕುಟುಂಬದ ಭಾವನೆಯಲ್ಲಿ ನಮ್ಮನ್ನು ಮುಡಿಪುಕಟ್ಟಿಕೊಳ್ಳುವುದಾದರೆ, ನಾವು ಅದನ್ನು ಈಡೇರಿಸುವುದರಲ್ಲಿ ಕೃತಾರ್ಥರಾಗಬಲ್ಲೆವು. ಈ ಕಾಲದಲ್ಲಿ ಲೋಕ ಎಡರುತೊಡರುಗಳಿಂದ ತುಂಬಿ ಹೋಗಿದೆ; ಈ ಕಷ್ಟಗಳನ್ನು ಒಕ್ಕಟ್ಟಿನಿಂದಲೂ, ಸ್ವಾರ್ಥತ್ಯಾಗದಿಂದಲೂ ಎದುರಿಸಿ ದರೆ ಮಾತ್ರ ನಾವು ಗೆದ್ದುಕೊಂಡು ಈಚೆಗೆ ಬರಬಹುದು. ಈ ಭಾವನೆಯಲ್ಲಿ ನಾನು ನನ್ನ ಹಿರಿಯರ ಸಿಂಹಾಸನವನ್ನೇರುವ ಈ ವ್ರತಸಮಾರಂಭವನ್ನು, ನನ್ನನ್ನೂ ನನ್ನ ಜೀವಮಾನವನ್ನೂ, ನನ್ನ ಸಕಲ ಸರ್ವಸ್ವವನ್ನೂ ಮೈಸೂರು ಸಂಸ್ಥಾನದ ಜನರ ಸೇವೆಗಾಗಿ ಸಮರ್ಪಣ ದೀಕ್ಷೆಯೆಂಬುದಾಗಿ ಎಣಿಸುತ್ತೇನೆ. ಇದರಲ್ಲಿ ನನ್ನೊಬ್ಬನ ಪ್ರಯತ್ನವೊಂದೇ ಜಯಶಾಲಿಯಾಗಲಾರದೆಂದು ನಾನು ಚೆನ್ನಾಗಿ ಅರಿತಿದ್ದೇನೆ. ನಿಮ್ಮ ನೆರವು, ನಿಮ್ಮ ಸಹಕಾರ, ನಿಮ್ಮ ನಂಬಿಕೆ, ನಿಮ್ಮ ಪ್ರೇಮ ನನಗೆ ಬೇಕು.

ನನ್ನ ವಶಕ್ಕೆ ಒಪ್ಪಿಸಿರುವ ಪವಿತ್ರ ಕರ್ತವ್ಯದ ನಿರ್ವಹಣೆಯಲ್ಲಿ ಬೆಳಕನ್ನೂ, ಶಕ್ತಿಯನ್ನೂ ಭಗವಂತನು ನನಗೆ ಅನುಗ್ರಹಿಸಲಿ; ಮತ್ತು ಆತನ ವರಪ್ರಸಾದಗಳು ಯಥೇಷ್ಟವಾಗಿ ಮೈಸೂರು ಸಂಸ್ಥಾನದ ಪ್ರತಿಯೊಂದು ಮನೆಯಲ್ಲಿಯೂ ತೊಟ್ಟಿಯಲ್ಲಿಯೂ ಹೊಕ್ಕು ನೆಲಸಿ ಹೊಳೆದು ಬೆಳಗಲಿ.

**ಶ್ರೀ ಜಯಚಾಮರಾಜ ಒಡೆಯರ್.**

***

ಶ್ರೀಮನ್ ಮಹಾರಾಜ ಜಯಚಾಮರಾಜ ವೊಡೆಯರವರ ಪಟ್ಟಾಭಿಷೇಕದ ವರ್ಣನೆಯೂ ವಿವರಗಳೂ ಅನೇಕ ಕನ್ನಡ ಇಂಗ್ಲಿಷ್ ಪತ್ರಿಕೆಗಳಲ್ಲಿ ಗದ್ಯವಾಗಿ, ಪದ್ಯವಾಗಿ ಬಂದಿವೆ. ೧೧-೧೦-೧೯೪೦ರ 'ಕನ್ನಡ ನುಡಿ'ಯಲ್ಲಿ ಶ್ರೀಮಾನ್ ಮಾಸ್ತಿ ವೆಂಕಟೇಶಯ್ಯಂಗಾರ್ಯರು ತಮ್ಮ ಕವಿಸಹಜವಾದ, ಸರಳವಾದ, ಸುಂದರವಾದ, ಭಕ್ತಿಭಾವಪೂರಿತವಾದ ಮಾತುಗಳಲ್ಲಿ 'ದೊರೆಗಳ ಪಟ್ಟಾಭಿಷೇಕ'ವನ್ನು ವರ್ಣಿಸಿದ್ದಾರೆ. ಅವರ ಆ ಲೇಖನದಿಂದ ಮುಂದೆ ಕೆಲವು ಭಾಗಗಳನ್ನು ಎತ್ತಿ ಬರೆದಿದ್ದೇವೆ:—

**ದೊರೆಗಳ ಪಟ್ಟಾಭಿಷೇಕ**

"ಮೈಸೂರ ಅರಮನೆಯಲ್ಲಿ ರಾಜರಾದ ಮಹನೀಯರಿಗೆ ಕಾಲಲ್ಲಿ ಒಂದು ಚಿನ್ನದ ಸರಪಳಿಯನ್ನು ತೊಡಿಸುವ ಸಂಪ್ರದಾಯವಿದೆ. ಸಿಂಹಪೀಠದಿಂದ ಇಳಿದು ಅಂತಃಪುರಕ್ಕೆ ಬಿಜಮಾಡಿಸುವ ಮಹಾಸ್ವಾಮಿಯವರನ್ನು ನೋಡಿದ ಕೆಲವರಿಗೆ ಅವರ ಪಾದಕ್ಕೆ ಹಾಕಿದ್ದ ಈ ಸರಪಳಿ ಅರಸರ ಅಲಂಕಾರದಲ್ಲಿ ಬಹುಮುಖ್ಯವಾದ ಒಂದು ಭಾಗವೆಂದು ಕಂಡಿತು. ಅದರ ಅರ್ಥವಾದರೂ ಏನು? ಮೊದಲಿನ ಮಾತಾಗಿ, ರಾಜರಲ್ಲಿರುವ ದೈವಶಕ್ತಿಯನ್ನು ರಾಜ್ಯದ ಲಕ್ಷ್ಮಿ ಒಪ್ಪಿಕೊಂಡಿದ್ದಾಳೆನ್ನುವುದು ಇದರ ಅರ್ಥ. ಉಳಿದವರು ಲಕ್ಷ್ಮಿಯನ್ನು ಪೂಜಿಸಬೇಕು: ಅವರಿಗೆ ಹೊನ್ನು ಕಾಲಿಗೆ ತೊಡವಲ್ಲ. ಆದರೆ ರಾಜ್ಯ ರಾಜರನ್ನು ಪೂಜಿಸುತ್ತದೆ. ಆ ರಾಜ್ಯದ ಲಾಂಛನವಾಗಿ ಹೊನ್ನು ಅವರ ಕಾಲಿಗೆ ತೊಡವಾಗುತ್ತದೆ. ಎರಡನೆಯ ಮಾತಾಗಿ, ಉಳಿದವರು ಹೊನ್ನನ್ನು ತಮ್ಮ ಪ್ರಭುವಾಗಿ ಮಾಡಿಕೊಳ್ಳುತ್ತಾರೆ. ರಾಜರು ಹೀಗೆ ಮಾಡುವುದಾಗದು. ಹೊನ್ನು ಅವರಿಗೆ ಸೇವೆಮಾಡುತ್ತದೆ. ಸಾಮಾನ್ಯರ ಜೀವನದಲ್ಲಿ ಪ್ರಭುತ್ವ ಮಾಡುವ ಹೊನ್ನಿನ ಮೇಲೆ ಪ್ರಭುತ್ವ ಮಾಡಬೇಕು ರಾಜರು. ರಾಜರು ರಾಜರಾಗಿದ್ದರೆ ಹೊನ್ನು ಅವರ ದಾಸ್ಯದಲ್ಲಿರುತ್ತದೆ. ಮೂರನೆಯ ಮಾತಾಗಿ, ಈ ಸರಪಳಿ ಭೂಷಣಕ್ಕಿಂತ ಹೆಚ್ಚಾಗಿ ಒಂದು ಬಂಧನ. ಪ್ರಭುವಾದವರಿಗೆ ಅದು ತಾವು ಒಪ್ಪಿಕೊಂಡಿರುವ ಒಂದು ಬಂಧನದ ಲಾಂಛನವೆಂದು ಕಾಣಬೇಕು.

ಉಳಿದವರಿಗೆ ಇಲ್ಲದ ಒಂದು ತೊಡರು ತನ್ನ ಕಾಲಿಗೆ ಬಿದ್ದಿತು ಎಂದೇ ರಾಜರಿಗೆ ಕಾಣುವುದರಲ್ಲಿ ಆಶ್ಚರ್ಯವಿಲ್ಲ. ರಾಜರ ಪದವಿ ಪುಣ್ಯದ ಪ್ರತಿಫಲವಾಗಿ ಬರುವ ತೊಡರು. ನನ್ನನ್ನು ಬಿಟ್ಟು ಹೋದೀಯೆ ಎಂದು ತಾಯ ಕಾಲಿಗೆ ತೊಡರುವ ಮಗುವಿನಂತೆ, ನನ್ನನ್ನು ಅಗಲೀಯೆ ಎಂದು ಇನಿಯನಿಗೆ ತೋಳ್‌ಬಂಧನವನ್ನು ಮಾಡುವ ಪ್ರೇಯಸಿಯಂತೆ, ನನ್ನ ಕೈ ಬಿಟ್ಟೀಯೆ ಎಂದು ಭಗವಂತನ ಕಾಲಿಗೆ ತೆಕ್ಕೆ ಹಾಕುವ ಭಕ್ತನಂತೆ, ಐಶ್ವರ್ಯ ರಾಜರ ಕಾಲಿಗೆ ತೊಡರಿಕೊಳ್ಳುತ್ತದೆ. ಅರಸರು ಉಳಿದ ಪುಣ್ಯವಂತರಂತೆ ಅಥವಾ ಅದಕ್ಕೆ ಸ್ವಲ್ಪ ಹೆಚ್ಚಿನ ಪುಣ್ಯವಂತರಂತೆ ಅಲ್ಲ. ಉಳಿದವರು ನಿಶ್ಚಿಂತೆಯಿಂದ ತಮ್ಮ ಬಾಳನ್ನು ಸಾಗಿಸಬಹುದು. ಅರಸರಿಗೆ ಈ ಸುಲಭ ಜೀವನವಿಲ್ಲ. ದಿನಬೆಳಗೂ ಹಗಲುರಾತ್ರಿಯೂ ಒಂದು ರಾಷ್ಟ್ರದ ಕ್ಷೇಮವನ್ನು ಚಿಂತಿಸುತ್ತ ಅವರು ತಮ್ಮ ದೇಹವನ್ನು ಕ್ಲೇಶಪಡಿಸಬೇಕು: ಮನಸ್ಸನ್ನು ಕ್ಷೋಭೆ ಪಡಿಸಬೇಕು. ಒಡೆಯರ ಕಾಲಿನಲ್ಲಿ ಚಿನ್ನದ ಸರಪಳಿ ಇದಿಷ್ಟರ ಲಾಂಛನ; ಅವರು ಒಪ್ಪಿಕೊಂಡಿರುವ ಹಿರಿದಾದ ಕೆಲಸದ ನೆನಪಿನ ಕುರುಹು.

ಹಿಂದೆ ಆಳಿದ ಅರಸರಿಗೆ ಇರದೆ ಇದ್ದ ಅನೇಕ ತೊಡಕುಗಳು ಈಗಿನ ಅರಸರ ಬಾಳಿನಲ್ಲಿ ಎದುರಿಗೆ ಬರುತ್ತಿವೆ. ಈ ಯುಗ ಕ್ಷೋಭೆಯ ಯುಗವಾಗಿ ಬಿಟ್ಟಿದೆ. ಯೂರೋಪಿನಂಥ ಖಂಡದಲ್ಲಿ ಒಂದು ಘೋರ ಸಂಗ್ರಾಮ. ಏಷ್ಯಾದ ಪೂರ್ವ ದಿಗಂತದಲ್ಲಿ ಅದರದೊಂದು ಪ್ರತಿ. ಎಲ್ಲ ನಾಡಿನಲ್ಲೂ ಜನರಲ್ಲಿ ಪಕ್ಷಗಳು: ಹಣವುಳ್ಳವರು ಹಣವಿಲ್ಲದವರು ಎಂದು; ಒಂದು ಮತದವರು ಇನ್ನೊಂದು ಮತದವರು ಎಂದು; ಒಂದು ಧರ್ಮದವರು ಇನ್ನೊಂದು ಧರ್ಮದವರು ಎಂದು; ಒಂದು ಕುಲದವರು ಇನ್ನೊಂದು ಕುಲದವರು ಎಂದು. ಈ ಪಕ್ಷಗಳು ಕಾದಾಡುತ್ತಿವೆ. ಇದರಲ್ಲಿ ನಮ್ಮ ಕಾಲ ಶಾಂತಿಯನ್ನು ಕಾಣದು. ಹೊಡೆದಾಟವಿಲ್ಲದೆ ಸುಖವಿಲ್ಲವೆಂದು ಈ ತಲೆಮಾರಿನ ಜನ ನಿಶ್ಚಯಮಾಡಿಕೊಂಡಿರುವಂತೆ ಕಾಣುತ್ತದೆ. ನಮ್ಮ ದೇಶವಾದರೂ ಇಂಥ ಸಮಸ್ಯೆಗಳಿಂದ ತೊಂದರೆಪಡದೆ ಇಲ್ಲ. ಪರದೇಶದ ಸ್ಥಿತಿಗತಿಯನ್ನು ನೋಡಿಯೋ, ನೋಡದ ಸಂದರ್ಭದಲ್ಲಿ ಪುಸ್ತಕಗಳಲ್ಲಿ ಓದಿಯೋ, ನಮ್ಮಲ್ಲಿ ಅನೇಕರು ಅಲ್ಲಿರುವುದು ಚೆನ್ನಾಗಿದೆ ಇಲ್ಲಿರುವುದು ಚೆನ್ನಾಗಿಲ್ಲ ಎಂಬಷ್ಟೇ ಒಂದು ತತ್ತ್ವವನ್ನು ಮುಖ್ಯವಾಗಿ ಮಾಡಿಕೊಂಡು ದೇಶದ ಬಾಳುವೆಯನ್ನು ತಿದ್ದಲು ಯತ್ನಮಾಡುತ್ತ ಇದ್ದಾರೆ. ಇದು ಬರಿಯ ರಾಜಕೀಯದ ಮಾತಲ್ಲ, ಎಲ್ಲ ವಿಷಯದಲ್ಲೂ ಅನ್ವಯಿಸುತ್ತದೆ. ಇದಿಷ್ಟಕ್ಕೂ ಮುಖ್ಯಕಾರಣವೇನಂದರೆ, ನಾವು ಸುಖವಾಗಿಲ್ಲ ಎಂದು ತೋರಿ ಹೊರಗೆ ಜನ ಸುಖ ವಾಗಿದ್ದಾರೆ ಎಂದು ತಿಳಿದಿರುವುದು. ಆದರೆ ನಿಜದಲ್ಲಿ ಹೊರಗಿನವರೂ ಸುಖವನ್ನು ಕಂಡಿಲ್ಲ, ಸುಖವನ್ನು ಅರಸುತ್ತಿದ್ದಾರೆ. ಭರತವರ್ಷದಲ್ಲಿ ಜನ ಇದನ್ನೇ ಮಾಡುತ್ತಿದ್ದಾರೆ.

ಸುಖವನ್ನು ಅರಸುವುದರಲ್ಲಿ ಹೊರಗಿನವರು ತಮ್ಮ ತಮ್ಮ ದೇಶದ ಸ್ಥಿತಿಗತಿಗಳನ್ನು ತಮ್ಮ ಕಷ್ಟಗಳ ನಿವಾರಣೆಯನ್ನು ಕುರಿತು ಸ್ವತಂತ್ರವಾಗಿ ಯೋಚಿಸುತ್ತ ಇರಲಾಗಿ ನಮ್ಮವರು ತಮ್ಮ ಸ್ಥಿತಿಗತಿಗಳನ್ನು ವಿಚಾರಮಾಡದೆ ಹೊರಗಿನ ಯಾವುದೋ ನಿವಾರಣೋಪಾಯವನ್ನು ನಾವೂ ಅನುಸರಿಸಬೇಕೆಂದು ಯತ್ನಮಾಡುತ್ತಿದ್ದಾರೆ. ಉದಾಹರಣೆಗಾಗಿ : ನಮ್ಮಲ್ಲಿ ಅನೇಕರು ಪ್ರಜಾಪ್ರೇಮವೆನ್ನುವುದು ಪಾಶ್ಚಾತ್ಯ ತತ್ತ್ವವೆಂದು ತಿಳಿದಿದ್ದೇವೆ. ಸತ್ಯವಾಗಿ ಪ್ರಜಾಪ್ರೇಮವೆನ್ನುವುದೇ ನಮ್ಮ ಸಂಪ್ರದಾಯದ ಭಾವನೆ. **ಅರಸಿಂಗಂ ಪ್ರಜೆಯೆ ದೈವಂ** ಎಂದು ಹೇಳಿದ ಮಾತು ಪಾಶ್ಚಾತ್ಯರಾಜ್ಯಶಾಸ್ತ್ರದ್ದಲ್ಲ. ಇದಾದರೂ ಆಧುನಿಕವಾಯಿತು. ಪ್ರಾಚೀನವಾದ ರಾಜನೀತಿಯಲ್ಲಿ ಯಾವ ಭಾವನೆ ಇತ್ತೆಂದು ತಿಳಿಯುವುದಕ್ಕೆ ದಶರಥನು ತನ್ನ ಕುಮಾರನಿಗೆ ಉಪದೇಶಿಸಿದ ಮಾತನ್ನು ನಿದರ್ಶನವಾಗಿ ಹೇಳಬಹುದು. "........ವಿನಯದಲ್ಲಿ ನಿಲ್ಲು; ಸದಾ ಜಿತೇಂದ್ರಿಯನಾಗಿರು; ಕಾಮಕ್ರೋಧ ಸಮುತ್ಥವಾದ ವ್ಯಸನಗಳನ್ನು ತ್ಯಜಿಸು. ಜನರಿಗೆ ಕಂಡಂತೆ ಹೇಗೆ ನಡೆಯುವೆಯೋ ಕಾಣದಂತೆಯೂ ಹಾಗೆಯೇ ನಡೆಯುವವನಾಗು. ಅಮಾತ್ಯರು ಮೊದಲಾಗಿ ದೇಶವನ್ನೆಲ್ಲ ಅನುರಂಜಿಸು. ಯಾರು ಸಂತುಷ್ಟರಾದ ಅನುರಾಗವುಳ್ಳ ಪ್ರಜೆಯೊಡನೆ ಮೇದಿನಿಯನ್ನು ಪಾಲಿಸುವನೋ ಆತನ ಮಿತ್ರರು ಆನಂದಿಸುತ್ತಾರೆ. ಆದ್ದರಿಂದ ನೀನೂ ಹೀಗೆ ಆತ್ಮನಿಯಮನ ಮಾಡಿಕೊಂಡು ಹೀಗೆಯೇ ನಡೆದುಕೊ." ಪ್ರಕೃತಿಯ ಎಂದರೆ ಪ್ರಜೆಯ ಅನುರಂಜನೆ ರಾಜನ ಮುಖ್ಯ ಕರ್ತವ್ಯ! ಮನುವಿನಿಂದ ಮೊದಲಾಗಿ ದಶರಥ ರಾಮಚಂದ್ರರಿಂದ ಅನುಷ್ಠಿತವಾದ ಈ ಧರ್ಮ ಬಾಳುವೆವೆಂಬ ಎಲ್ಲ ರಾಷ್ಟ್ರಗಳಲ್ಲಿ ಪ್ರಭುಗಳಿಂದ ಅನುಷ್ಠಿತವಾಗಿದೆ. ಜನದ ಬಾಳು ಈಗಿರುವುದಕ್ಕಿಂತ ಚೆನ್ನಾಗಿ ಆಗಬೇಕಾದರೆ ಅದಕ್ಕೆ ದಾರಿಯಾವುದೆನ್ನುವುದನ್ನು ನಮ್ಮ ದೇಶದ ನಾಯಕರು ನಮ್ಮ ಸಂಸ್ಕೃತಿ ನಮ್ಮ ಧರ್ಮ ನಮ್ಮ ಸಂಪ್ರದಾಯಗಳ ದೃಷ್ಟಿಯಿಂದ ವಿವೇಚಿಸಬೇಕಾಗಿದೆ. ಇನ್ನು ಬರುವ ಕಾಲದಲ್ಲಿ ಇಂಥ ವಿವೇಚನೆಯಿಂದ ನಮ್ಮ ಬದುಕು ಪರಿಷ್ಕೃತವಾಗಿ ಸುಂದರವೂ ಸುಖದಾಯಕವೂ ಆಗಬೇಕಾಗಿದೆ. ಅದಕ್ಕೆ ದಾರಿ ತೋರಿಸುವವರಾಗಿ ನಾಯಕರಾಗಿ ನಿಲ್ಲುವ ಹಿರಿಯ ಭಾರ ನಮ್ಮ ಅರಸರನ್ನು ಸೇರಿದೆ."

*
* *

ಇದೇ ಅಕ್ಟೋಬರ್ ತಿಂಗಳು ಹದಿನಾಲ್ಕನೆಯ ತಾರೀಖಿನ ದಿನ ಮೈಸೂರು ನಗರದ ಜಗನ್ಮೋಹನ ಬಂಗಲೆಯಲ್ಲಿ ನಮ್ಮ ವಿಶ್ವವಿದ್ಯಾನಿಲಯದ ಈ ವರ್ಷದ ಪದವೀದಾನೋತ್ಸವ ಸಮಾರಂಭವು ನೆರವೇರಿತು. ಛಾನ್ಸೆಲರವರಾದ ಶ್ರೀ

ಶ್ರೀಮನ್ಮಹಾರಾಜ ಜಯಚಾಮರಾಜ ವೊಡೆಯರ್ ಬಹದ್ದೂರ್ ಅವರು ಮೊದಲು ಸಾರಿ ಅದರ ಅಧ್ಯಕ್ಷತೆ ವಹಿಸಿ ಜಯಶೀಲರಾದ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಪ್ರಶಸ್ತಿಗಳನ್ನೂ ಪದಕಗಳನ್ನೂ ಬಹುಮಾನಗಳನ್ನೂ ದಯಪಾಲಿಸಿದರು. ಆ ಉತ್ಸವದಲ್ಲಿ ಹಿಂದಿನ ಸಂದರ್ಭ ಸನ್ನಿವೇಶಗಳನ್ನು ನೆನೆದು ಪ್ರತಿಯೊಬ್ಬ ಸಭಿಕರ ಹೃದಯವೂ ಶೋಕದಿಂದ ಸಂತಪ್ತವಾಗಿದ್ದರೂ, ಮಳೆ ಬಂದು ನಿಂತಮೇಲೆ ಬೆಳಗುವ ಬಿಸಿಲಿನಂತೆ ಒಂದು ಹೊಸ ಸಂತೋಷ, ಸಂಭ್ರಮ, ಸಂತೃಪ್ತಿ ಇವು ತುಂಬಿದ್ದುವು. ತಾವು ಹುಟ್ಟುವುದಕ್ಕೆ ಮುಂಚೆಯೇ ಜನ್ಮವೆತ್ತಿ ಬೆಳೆದುಕೊಂಡು ಬಂದಿದ್ದ ವಿದ್ಯಾಸೌಧವನ್ನು ಮೆಟ್ಟಲುಮೆಟ್ಟಲಾಗಿ ಹತ್ತಿ ಒಳಗೆಲ್ಲಾ ಓಡಾಡಿ, ನೋಡಿ, ಮೇಲಕ್ಕೆ ಬಂದು, ಅದರ ಕಿರೀಟವಾಗಿ, ಅದರ ಶಿರೋರತ್ನವಾಗಿ, ನಿಂತು ವಿದ್ಯಾಪ್ರಶಸ್ತಿಯನ್ನು ವಿತರಣ ಮಾಡುವುದು ಒಂದು ಅಪೂರ್ವಗೌರವದ, ದೊಡ್ಡ ಹೆಮ್ಮೆಯ, ವಿಷಯ. ಈ ಭಾಗ್ಯವನ್ನು ನಮ್ಮ ವಿಶ್ವವಿದ್ಯಾನಿಲಯಕ್ಕೆ ಬಹುಕಾಲ ಅನುಗ್ರಹಿಸಿರಲಿ ಎಂದು ನಾವು ಭಗವಂತನನ್ನು ಪ್ರಾರ್ಥಿಸುತ್ತೇವೆ.

ಈ ವರ್ಷದ ಪದವೀದಾನೋತ್ಸವ ಸಮಾರಂಭ

ಅಂದು ಅಲಹಾಬಾದ್ ವಿಶ್ವವಿದ್ಯಾನಿಲಯದ ವೈಸ್ ಛಾನ್ಸೆಲರವರಾದ ಶ್ರೀಮಾನ್ ಅಮರನಾಥ ಝಾ ಅವರು ಉಪದೇಶ ಭಾಷಣಮಾಡಿದರು. "ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯ ಕೃತ ನಿಶ್ಚಯಃ" "ನಾಯಮಾತ್ಮಾ ಬಲಹೀನೇನ ಲಭ್ಯಃ" ಎಂಬ ಗೀತಾ ಪ್ರಚೋದನೆಯೂ, ಉಪನಿಷದುಕ್ತಿಯೂ, ಅವರ ಭಾಷಣದ ಸಾರಾಂಶವಾಗಿತ್ತೆಂದು ಹೇಳಿದರೆ ತಪ್ಪಾಗದು. ಹೆಚ್ಚಿನ ವಿವರಗಳನ್ನು ಸಾಧ್ಯವಾದರೆ, ಮುಂದಿನ ಸಂಚಿಕೆಯಲ್ಲಿ ಕೊಡುವೆವು.

ಈ ವರ್ಷ, ಮೈಸೂರು ವಿಶ್ವವಿದ್ಯಾಲಯದ ಪದವೀದಾನೋತ್ಸವದಲ್ಲಿ ಮುಂದೆ ಹೇಳುವಂತೆ ೩೪ ಬಂಗಾರದ ಪದಕಗಳೂ ೧೩ ಬಹುಮಾನಗಳೂ ಕೊಡಲ್ಪಟ್ಟುವು.—

## ೧. ಪದಕಗಳು

### ಎಂ.ಎ.

| ಪದಕಗಳ ಹೆಸರುಗಳು : | ಪಡೆದವರ ಹೆಸರುಗಳು : |
|---|---|
| | ಶ್ರೀಗಳಾದ |
| ೧. ಸರ್ ಹ್ಯೂಡೇಲಿ ಮೆಮೋರಿಯಲ್ ಪದಕ.... | ಎಸ್. ಲಕ್ಷ್ಮೀನರಸಿಂಹನ್. |
| ೨. ನವೀನಂ ರಾಮಾನುಜಾಚಾರ್ಯರ ಪದಕ.... | ಜಿ. ಸೀತಾರಾಮಯ್ಯ. |
| ೩. ಕೇಣಿ ಸಿದ್ದಪ್ಪನವರ ಪದಕ .... | ಎಂ. ಹನುಮಂತರಾವ್. |

## ಬಿ.ಎ. (ಆನರ್ಸ್)

೪. ನವೀನಂ ರಾಮಾನುಜಾಚಾರ್ಯರ ಪದಕ .... ಬಿ. ಎನ್. ನಂಜುಂಡಯ್ಯ.
೫. ಪೂರ್ಣಕೃಷ್ಣರಾಯರ ಪದಕ .... ಬಿ. ಎನ್. ನಂಜುಂಡಯ್ಯ.
೬. ಮೊದಲನೆಯ ವೈಸ್ ಛಾನ್ಸಲರ್ ಹೆಚ್.
ವಿ. ನಂಜುಂಡಯ್ಯನವರ ಪದಕ .... (೧) ಟಿ. ಎಸ್. ಶಾಮರಾವ್,
(೨) ಸಿ. ಮಾರ್ಕಂಡೇಯಶರ್ಮ.
೭. ಪೂರ್ಣಕೃಷ್ಣರಾಯರ ಪದಕ .... ಕೆ. ನರಸಿಂಹಮೂರ್ತಿ.
೮. ಕ್ಯಾಂಡಿ ಪದಕ .... ಎಂ. ಎಸ್. ನಾರಾಯಣಸ್ವಾಮಿ.
೯. ಭಾಭಾ ಮೆಮೋರಿಯಲ್ ಪದಕ .... ಕೆ. ರಾಮಕೃಷ್ಣರಾವ್.
೧೦. ಸರ್ ಎಂ. ಕಾಂತರಾಜ ಅರಸರವರ
ಪದಕ .... ಹೆಚ್. ನಂಜುಂಡಯ್ಯ.
೧೧. ಪ್ರಧಾನಶಿರೋಮಣಿ, ಟಿ. ಆನಂದರಾವ್,
ಸಿ.ಐ.ಇ. ಅವರ ಪದಕ .... ಎಸ್. ಶ್ರೀನಿವಾಸಾಚಾರ್.
೧೨. ಎಂ. ಹಿರಿಯಣ್ಣನವರ ಪದಕ .... ಎಸ್. ಎಂ. ಶ್ರೀನಿವಾಸಾಚಾರ್.

## ಬಿ.ಎ.

೧೩. ಸರ್ ಪಿ. ಎನ್. ಕೃಷ್ಣಮೂರ್ತಿ ಅವರ
ಪದಕ .... (೧) ಟಿ. ಎಸ್. ಸಂಜೀವರಾವ್
(೨) ಎಸ್. ನರಸಿಂಹಮೂರ್ತಿ.
೧೪. ಅಲಮೇಲಮ್ಮ ಹೆಚ್.ರಾಮಾನುಜೈಂಗಾರ್
ಅವರ ಪದಕ .... ಎಸ್. ನರಸಿಂಹಮೂರ್ತಿ.
೧೫. ಸರ್ ಶೇಷಾದ್ರಿಯವರ ಪದಕ .... ಎಂ. ಎ. ವೇದವಲ್ಲಿ.
೧೬. ವಿಯರ್ ಮೆಮೋರಿಯಲ್ ಪದಕ .... ಟಿ. ಎಸ್. ಸಂಜೀವರಾವ್.
೧೭. ಷಾ ಚುರ್ಮನ್‌ಮಲ್ ದುಂಗಾಜಿ ಅವರ
ಪದಕ .... ಎಂ. ಎ. ವೇದವಲ್ಲಿ.
೧೮. ಶ್ರೀ ಯುವರಾಜರವರ ಪದಕ .... ರಹ್ಮತುಲ್ಲಾ ಖಾನ್.
೧೯. ಶ್ರೀ ಲಕ್ಷ್ಮಮ್ಮನವರ ಪದಕ .... ಇ. ಎಸ್. ಗೇಬ್ರಿಯಲ್.
೨೦. ಸಕಲೇಶಪುರದ ಷಾಪು ಸಿದ್ದೇಗೌಡರ
ಪದಕ .... ಬಿ. ರುದ್ರಪ್ಪ.

## ಎಂ.ಎಸ್‌ಸಿ.

೨೧. ಪೂರ್ಣಕೃಷ್ಣರಾಯರ ಪದಕ .... ಪಿ. ಗೋಪಾಲರಾವ್.
೨೨. ಪೂರ್ಣಕೃಷ್ಣರಾಯರ ಪದಕ .... ಎಂ. ವಿ. ಲಕ್ಷ್ಮೀನಾರಾಯಣ ರಾವ್.

## ಬಿ.ಎಸ್‌ಸಿ. (ಆನರ್ಸ್)

೨೩. ಧರ್ಮಪ್ರವರ್ತ ಅಂಬಿಲ್ ಎಸ್. ರಂಗಸ್ವಾಮಿ ಅಯ್ಯಂಗಾರ್ಯರ ಪದಕ .... ಕೆ. ಎನ್. ಶಾಮಶಾಸ್ತ್ರಿ.
೨೪. ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರ ಪದಕ .... ಕೆ. ರಾಮರಾವ್.

## ಬಿ.ಎಸ್‌ಸಿ.

೨೫. ಹೆಚ್. ರಾಮಾನುಜಯ್ಯಂಗಾರ್ಯರ ಪದಕ.. ಡಿ. ಜೆ. ಬಾಲರಾಜ್.
೨೬. ಶ್ರೀ ಲಕ್ಷ್ಮೀದೇವಮ್ಮನವರ ಪದಕ .... ಡಿ. ಜೆ. ಬಾಲರಾಜ್.
೨೭. ಬಿ. ಕೆ. ಶ್ರೀನಿವಾಸಯ್ಯಂಗಾರ್ ಮೆಮೋರಿಯಲ್ ಪದಕ .... ಡಿ. ಜೆ. ಬಾಲರಾಜ್.

## ಬಿ. ಇ.

೨೮. ಬಿ. ವಿ. ಕೃಷ್ಣಯ್ಯಂಗಾರ್ಯರ ಪದಕ .... ವಿ. ಲಕ್ಷ್ಮೀನಾರಾಯಣ.
೨೯. ಬಿ. ಬಿ. ಗರುಡಾಚಾರ್ಯರ ಪದಕ .... ವಿ. ಲಕ್ಷ್ಮೀನಾರಾಯಣ.

## ಎಂ.ಬಿ., ಬಿ.ಎಸ್.

೩೦. ಆರ್ಮುಗಂ ಪದಕ .... ಎಸ್. ಕೆ. ರಂಗಯ್ಯ.
೩೧. ಟಿ. ಆರ್. ಎ. ತಂಬೂಚೆಟ್ಟಿ ಪದಕ .... ಎಂ. ಎಸ್. ವೆಂಕಟರಾಮಯ್ಯ.
೩೨. ಜೇಲಿ ವೆಂಕೋಬರಾಯರ ಪದಕ .... ಎಸ್. ಕೆ. ರಂಗಯ್ಯ.
೩೩. ಎ. ಆರ್. ಸೀತಮ್ಮ ಪದಕ .... ಎಂ. ಎಸ್. ವೆಂಕಟರಾಮಯ್ಯ.

## ಕನ್ನಡ ಕವಿತೆ

೩೪. ರಜತ ಮಹೋತ್ಸವದ ಕನ್ನಡ ಪದಕ .... ಕೆ. ನರಸಿಂಹಮೂರ್ತಿ.

## ೨. ಬಹುಮಾನಗಳು

### ಬಿ.ಎ. (ಆನರ್ಸ್)

೧. ಎಲ್. ಎಸ್. ಸುಬ್ಬರಾಯರ ಬಹುಮಾನ.... ಹೆಚ್. ನಂಜುಂಡಯ್ಯ.

### ಬಿ.ಎ.

೨. ಪಾಲಮಂಡ ಅಕ್ಕಯ್ಯಮ್ಮನವರ ಬಹುಮಾನ .... ಎ. ಸೀತಮ್ಮ.

೩. ಅನ್ನಪೂರ್ಣಮ್ಮನವರ ಬಹುಮಾನ .... ಇ. ಎಸ್. ಗೇಬ್ರಿಯಲ್.

### ಬಿ.ಎಸ್‌ಸಿ. (ಆನರ್ಸ್)

೪. ವಾಟರ್ಸ್ ಮೆಮೋರಿಯಲ್ ಬಹುಮಾನ.... ಕೆ. ರಾಮರಾವ್.

೫. ಮೈಸೂರು ಸರ್ಕಾರದ ಭೌತಶಾಸ್ತ್ರ ಬಹುಮಾನ .... ಬಿ. ವಿ. ನಾರಾಯಣರಾವ್.

೬. ಮೈಸೂರು ಸರ್ಕಾರದ ರಸಾಯನಶಾಸ್ತ್ರ ಬಹುಮಾನ .... ಕೆ. ಎಲ್. ಶಾಮಶಾಸ್ತ್ರಿ.

೭. ಪ್ರೊಫೆಸರ್ ಎಂ. ಜಿ. ಶ್ರೀನಿವಾಸರಾಯರ ಆರ್ಗ್ಯಾನಿಕ್ ಕೆಮಿಸ್ಟ್ರಿ ಬಹುಮಾನ .... (೧) ಎಲ್. ರಂಗಸ್ವಾಮಿ.
(೨) ಕೆ. ಎಲ್. ಶಾಮಶಾಸ್ತ್ರಿ.

### ಬಿ.ಎಸ್‌ಸಿ.

೮. ಸೆಂಟ್ರಲ್ ಕಾಲೇಜಿನ ವಜ್ರ ಮಹೋತ್ಸವದ ಬಹುಮಾನ .... ಡಿ. ಜೆ. ಬಾಲರಾಜ್.

೯. ಟೇಟ್ ಮೆಮೋರಿಯಲ್ ಫಂಡ್ ಬಹುಮಾನ .... (೧) ಎಂ. ಆರ್. ನರಸಿಂಹಮೂರ್ತಿ.
(೨) ಎ. ಎಲ್. ವೆಂಕಟರಾವ್.

### ಬಿ.ಟಿ.

೧೦. ಭಾಭಾ ಮೆಮೋರಿಯಲ್ ಬಹುಮಾನ .... ಟಿ. ಕೇರಲವರ್ಮ.

### ಬಿ.ಇ.

೧೧. ವಿ. ರಂಗಸ್ವಾಮಿ ಅಯ್ಯಂಗಾರ್ಯರ ಬಹುಮಾನ .... ಎಲ್. ಶ್ರೀನಿವಾಸನ್.

**ಎಂ.ಬಿ., ಬಿ.ಎಸ್.**

೧೨. ಮೈಸೂರು ಫ್ರೀ ಮೇಸನ್ಸ್ ಲಾಡ್ಜ್
ಸುವರ್ಣ ಮಹೋತ್ಸವ ಬಹುಮಾನ....(೧) ಎಸ್. ಕೆ. ರಂಗಯ್ಯ.
(೨) ಎಂ.ಎಸ್. ವೆಂಕಟರಾಮಯ್ಯ.

**ಕನ್ನಡ ಪ್ರಬಂಧ**

೧೩. ಹೊನ್ನ ಸೆಟ್ಟಿಯವರ ಬಹುಮಾನ .... ಕೆ. ನರಸಿಂಹಮೂರ್ತಿ.

ಈ ಪದಕ ಬಹುಮಾನಗಳನ್ನು ಪಡೆದ ಮಿತ್ರರನ್ನು ನಾವು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇವೆ.

* * *

“ರಾಜಸೇವಾಸಕ್ತ” ಶ್ರೀಮಾನ್ ಬೆಳ್ಳಾವೆ ವೆಂಕಟನಾರಾಯಣಪ್ಪನವರಿಗೆ ಅಭಿನಂದನೆ

ಈ ವರ್ಷ ನವರಾತ್ರಿ ಮಹೋತ್ಸವ ಕಾಲದಲ್ಲಿ ಶ್ರೀಮನ್ಮಹಾರಾಜರವರು ಅನೇಕ ಮೈಸೂರು ಮಹನೀಯರಿಗೆ, ಅವರು ಸಂಸ್ಥಾನಕ್ಕೆ ಸಲ್ಲಿಸಿದ ಸೇವೆಗಾಗಿ ಬಿರುದುಗಳನ್ನೂ ಪದಕಗಳನ್ನೂ ಖಿಲ್ಲತ್ತುಗಳೊಡನೆ ದಯ ಪಾಲಿಸಿದರು. ಇವರೆಲ್ಲರಿಗೂ ನಮ್ಮ ಅಭಿಮಾನಪೂರ್ವಕವಾದ ಅಭಿನಂದನಗಳು. ಇವರಲ್ಲಿ ಶ್ರೀಮಾನ್ ಬೆಳ್ಳಾವೆ ವೆಂಕಟ ನಾರಾಯಣಪ್ಪನವರು ನಮ್ಮ ವಿಶೇಷ ಅಭಿನಂದನೆಗಳಿಗೆ ಪಾತ್ರರು. ಅವರು ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಭೌತ ಶಾಸ್ತ್ರಾಧ್ಯಾಪಕರಾಗಿದ್ದು ವಿಶ್ರಾಂತಿ ಪಡೆದವರು; ಆದರೆ ಸರ್ಕಾರದವರು ವಿಶ್ರಾಂತಿ ಕೊಟ್ಟರೂ ತಾವು ವಿಶ್ರಾಂತಿ ತೆಗೆದುಕೊಳ್ಳದೆ ಹಗಲು ಇರುಳು ವಿಶ್ವವಿದ್ಯಾನಿಲಯ ದಲ್ಲಿಯೂ ಹೊರಗೂ ಕನ್ನಡಕ್ಕಾಗಿ ದುಡಿಯುತ್ತಿರುವವರು. ಕನ್ನಡ ಸಾಹಿತ್ಯ ಪರಿಷತ್ತು ಹುಟ್ಟಿದಂದಿನಿಂದ ಇಂದಿನ ವರೆಗೆ ಅದಕ್ಕೆ ಪ್ರತ್ಯಕ್ಷವಾಗಿ, ಅಪ್ರತ್ಯಕ್ಷ ವಾಗಿ, ಹಲವು ರೀತಿಯಲ್ಲಿ, ಹಲವು ರೂಪಿನಲ್ಲಿ, ದುಡಿದವರು. ಈಗ ನಾಲ್ಕಾರು ವರ್ಷಗಳಿಂದ ಇಂಗ್ಲಿಷ್-ಕನ್ನಡ ನಿಘಂಟಿನ ಮುಖ್ಯ ಸಂಪಾದಕರಾಗಿದ್ದು ವಯೋ ದೌರ್ಬಲ್ಯವಿದ್ದರೂ, ದೇಹಶ್ರಮ ಬುದ್ಧಿಶ್ರಮಗಳನ್ನು ಲಕ್ಷಿಸದೆ ಅದರ ಕೆಲಸದಲ್ಲಿ ಉತ್ಸಾಹದಿಂದ ನಿರತರಾಗಿರುವವರು. ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದ ಮೊದಲನೆಯ ಅಧ್ಯಕ್ಷರಾಗಿದ್ದು, ಅದಕ್ಕೆ ಪ್ರಾಣವನ್ನು ಕೊಟ್ಟವರು. ವೈಜ್ಞಾನಿಕ ವಿಚಾರಗಳು ಕನ್ನಡಿಗರಿಗೆ ಸರಳವಾದ ರೀತಿಯಲ್ಲಿ ಹೇಗೆ ತಿಳಿಯಬೇಕೆಂದು ಚಿಂತಿಸಿ “ವಿಜ್ಞಾನ” ಪತ್ರಿಕೆಯನ್ನು ನಡಸಿದವರು; “ಜೀವವಿಜ್ಞಾನ”ವು ಅವರ ಆ ಆಸ್ಥೆಯ ಈಚಿನ ಫಲ.

ಶ್ರೀವರ್ಮಾ ವೆಂಕಟನಾರಾಯಣಪ್ಪನವರು ವಿಜ್ಞಾನಿಗಳು ಸಾಹಿತಿಗಳು ಮಾತ್ರವಲ್ಲ. ಧಾರ್ಮಿಕ ಸಾಮಾಜಿಕ ಸಾರ್ವಜನಿಕ ವ್ಯಾವಸಾಯಿಕ ಮುಂತಾದ ಹಲವು ಕ್ಷೇತ್ರಗಳಲ್ಲೂ ಶ್ರದ್ಧೆ ಉತ್ಸಾಹಗಳಿಂದ ಕೆಲಸಮಾಡುತ್ತಿರುವವರು. ಬೆಂಗಳೂರು ಬಸವನಗುಡಿ ಬಡಾವಣೆಯ ಸ್ಥಾಪಕ ಪಾಲಕ ಪೋಷಕರಲ್ಲಿ ಅವರು ಒಬ್ಬ ಪ್ರಧಾನವ್ಯಕ್ತಿಗಳೆಂದರೆ ಅದು ಅಲ್ಲಿಯ ಹಿರಿಯರಿಗೆ ಮಾತ್ರ ಅರ್ಥವಾಗುವ ಮಾತು. ಅವರೊಬ್ಬರೇ ಒಂದು ಉನ್ನತ ಸಂಸ್ಥೆ. ಅವರ ಕೆಚ್ಚು ಕಾರ್ಯೋತ್ಸಾಹಗಳು ಯುವಕರಿಗೂ ಇರುವುದಿಲ್ಲ; ಅವರ ಖಂಡಿತತೆಯೂ ಚಲವೂ ಕೆಲವು ಸಮಯದಲ್ಲಿ ನಿಷ್ಠುರವಾಗಿ ಕಾಣುವಷ್ಟು ಗಡುಸಾದವು. ಆದರೆ ಅವು ಗಟ್ಟಿಗತನದ ರೂಪಾಂತರಗಳೆಂದು ನಾವು ಭಾವಿಸುತ್ತೇವೆ. ಮರಕಡಿಯುವ ಕೊಡಲಿಯನ್ನು ಮೇಣದಿಂದ ಮಾಡುವುದಕ್ಕಾದೀತೇ? ಬಂಗಾರಕ್ಕಾದರೂ ತಾಮ್ರ ಬೆರೆಯದಿದ್ದರೆ ಅದು ನಾಣ್ಯವಾಗುವುದೋ?

***

**ಮೈಸೂರು ವಿಶ್ವವಿದ್ಯಾನಿಲಯಸಂಘದ ಅಕ್ಷರ ಪ್ರಚಾರಕಾರ್ಯ**

ಮೈಸೂರು ವಿಶ್ವವಿದ್ಯಾನಿಲಯ ಸಂಘವು ಅಕ್ಷರ ಪ್ರಚಾರಕಾರ್ಯವನ್ನು ಕೈಗೊಂಡು ಸುಮಾರು ಮೂರು ತಿಂಗಳಾಯಿತು. ವಿದ್ಯಾರ್ಥಿ ಸದಸ್ಯರಿಗೆ ಸಮಾಜಸೇವೆಯಲ್ಲಿ ಇರುವ ಆಸಕ್ತಿಯೇ ಇದಕ್ಕೆ ಮೂಲಕಾರಣ. ಅದು ಮೈಸೂರುನಗರದಲ್ಲಿ ಅನಕ್ಷರಸ್ಥರಿರುವ ಕೇರಿಗಳಲ್ಲಿ ಶಿಬಿರಗಳನ್ನೇರ್ಪಡಿಸಿ ಸಾವಿರಮಂದಿಯನ್ನಾದರೂ ಅಕ್ಷರಸ್ಥರನ್ನಾಗಿ ಮಾಡಬೇಕೆಂದು ತೀರ್ಮಾನಿಸಿಕೊಂಡಿತು. ಹತ್ತುಮಂದಿಗೆ ಒಬ್ಬ ಸ್ವಯಂ ಸೇವಕನಂತೆ ನೂರು ಸ್ವಯಂ ಸೇವಕರು ಅಗತ್ಯವೆನ್ನಲು ಸುಮಾರು ನೂರು ನೂರೈವತ್ತುಮಂದಿ ಈ ಕೆಲಸ ನಡೆಸಲು ಹೆಸರು ಕೊಟ್ಟರು. ಇವರ ಜೊತೆಗೆ ಕೆಲವು ಮಂದಿ ಹೈಸ್ಕೂಲು ವಿದ್ಯಾರ್ಥಿಗಳೂ ಸೇರಿದರು. ಈ ಕೆಲಸದಲ್ಲಿ ಅನುಭವಪಡೆದವರು ಇವರು ಯಾವ ರೀತಿ ಕೆಲಸಮಾಡಬೇಕೆಂದು ಉಪನ್ಯಾಸಗಳ ಮೂಲಕ ತಿಳಿಸಿದರು. ಈ ಕೆಲಸಕ್ಕೆ ನಿಯಮಿತರಾದ ಸಮಿತಿಯ ಸದಸ್ಯರೂ ಮುನಿಸಿಪಲ್ ಪ್ರೆಸಿಡೆಂಟರಾದ ಶ್ರೀ ನವನೀತಂನಾಯ್ಡು ಅವರೂ ನಗರದ ನಾನಾ ಭಾಗಗಳಲ್ಲಿ ತಿರುಗಿ ಪ್ರಚಾರ ನಡೆಸಿ ಪ್ರತಿಶಿಬಿರಕ್ಕೂ ಆವಶ್ಯಕವಾದಷ್ಟು ವಿದ್ಯಾರ್ಥಿಗಳನ್ನು ಸೇರಿಸಿದರು. ಒಂದೆರಡು ಕಡೆ ಅವರ ಸಾಹಸ ನಿರರ್ಥಕವಾಯಿತು. ಕಾಲೇಜಿಗೆ ಸ್ವಲ್ಪ ದೂರವಾದ ಜಲಪುರಿಯಲ್ಲಿ ಶಿಬಿರವನ್ನೇರ್ಪಡಿಸುವ ಉದ್ದೇಶ್ಯವಿಲ್ಲದಿದ್ದರೂ ಅಲ್ಲಿಯವರ ಬಲಾತ್ಕಾರದ ಮೇಲೆ ಅಲ್ಲಿಯೂ ಕೆಲಸವನ್ನಾರಂಭಿಸಲಾಯಿತು.

ಸಂಘದವರು ಈ ಕೆಲಸಕ್ಕಾಗಿ ೩೦೦ ರೂಪಾಯಿಗಳನ್ನೂ, ವಿಶ್ವವಿದ್ಯಾನಿಲಯದವರು ೫೦೦ ರೂಪಾಯಿಗಳನ್ನೂ ಕೊಟ್ಟಿರುತ್ತಾರೆ. ಈ ಕೆಲಸದಲ್ಲಿ ಭಾಗಿಗಳಾಗಲು ಅವಕಾಶವಿಲ್ಲದ ಸದಸ್ಯರು ಸುಮಾರು ೧೦೦ ರೂಪಾಯಿ ಚಂದಾ ಕೊಟ್ಟಿರುತ್ತಾರೆ. ಪ್ರತಿ ವಿದ್ಯಾರ್ಥಿಗೂ ಓದುವಪುಸ್ತಕ ನೋಟ್‌ಪುಸ್ತಕ ಸೀಸಕಡ್ಡಿಗಳನ್ನು ಉಚಿತವಾಗಿ ಒದಗಿಸಿದೆ. ಪ್ರತಿ ಶಿಬಿರದಲ್ಲಿಯೂ ದೀಪಕ್ಕೆ ಏರ್ಪಡಿಸಲಾಗಿದೆ. ವಯಸ್ಕರ ಬೋಧನೆಗೆ ಅನುಕೂಲಿಸುವಂತೆ ಒಂದು ಹೊಸ ವರ್ಣಮಾಲೆಯನ್ನೂ ವಾಕ್ಯಮಾಲೆಯನ್ನೂ ಕೆಲವು ಓದುಹಾಳೆಗಳನ್ನೂ ತಯಾರಿಸಲಾಗಿದೆ. ಮೊದಲು ಮೂರು ತಿಂಗಳ ಕಾಲ ಕೆಲಸ ನಡೆಸಬೇಕೆಂದು ಏರ್ಪಡಿಸಲಾಗಿತ್ತು. ಈಗ ಈ ಅವಧಿಯನ್ನು ಇನ್ನೂ ಮೂರು ತಿಂಗಳು ಕಾಲ ಹೆಚ್ಚಿಸಿದೆ.

ಈಗ ೩೫ ಶಿಬಿರಗಳು ಏರ್ಪಾಡಾಗಿ, ೩೫೦ ಮಂದಿ ಕಲಿಯುತ್ತಿದ್ದಾರೆ. ರಾತ್ರಿ ೭-೩೦ ಘಂಟೆಯಿಂದ ೯ರ ವರೆಗೂ ಕೆಲಸ ನಡೆಯುತ್ತದೆ. ನಿತ್ಯವೂ ಓದು ಬರಹದ ಜೊತೆಗೆ ವಿಜ್ಞಾನ, ಆರೋಗ್ಯ ಮತ್ತು ಸಮಾಜ ಶಿಕ್ಷಣಕ್ಕೆ ಸಂಬಂಧಿಸಿದ ಕೆಲವು ಮುಖ್ಯ ವಿಷಯಗಳನ್ನೂ ನಿತ್ಯವ್ಯವಹಾರಕ್ಕೆ ಬೇಕಾದ ಗಣಿತವನ್ನೂ ಕಲಿಸುವ ಏರ್ಪಾಡಿದೆ. ಇವರ ಶಿಕ್ಷಣ ಮುಗಿದನಂತರ ಎಂದರೆ ಜನವರಿ ತಿಂಗಳಿನಲ್ಲಿ ಇವರ ಪೈಕಿ ಅರ್ಧ ಮಂದಿಯನ್ನಾದರೂ ಸಾಹಿತ್ಯಪರಿಷತ್ತಿನ ಮೊದಲನೆಯ ಪರೀಕ್ಷೆಗೆ ಕೂರಿಸಲಾಗುತ್ತದೆ.

ಈ ೩೫೦ ಮಂದಿಯ ಪೈಕಿ ಸುಮಾರು ಎಪ್ಪತ್ತು ಜನ ಹಿಂದೆ ಸ್ವಲ್ಪ ಕಲಿತು ಈಗ ಮರೆತಿರುವವರು. ಅವರಿಗೆ ಪ್ರತ್ಯೇಕ ಶಿಕ್ಷಣ ಕೊಡಲಾಗುತ್ತಿದೆ. ಹೊಸದಾಗಿ ಸೇರಿದವರ ಪೈಕಿ ಸೇಕಡ ೮೦ ಮಂದಿ ಈ ಹೊಸ ಪದ್ಧತಿಯ ಪ್ರಕಾರ ಎರಡು ವಾರಗಳಲ್ಲಿ ಅಕ್ಷರಗಳನ್ನು ಕಲಿತು ಈಗ ಸುಲಭ ಕಾಗುಣಿತಗಳನ್ನು ಓದಬಲ್ಲವರಾಗಿದ್ದಾರೆ.

ಮಧ್ಯೆ ಮಧ್ಯೆ ರಜ ಬಂದು ವಿದ್ಯಾರ್ಥಿಗಳು ಕೆಲಸಕ್ಕೆ ಹೋಗಲು ತೊಂದರೆಯಾದುದರಿಂದ, ಆಗಸ್ಟ್ ಒಂದರಲ್ಲಿ ಪ್ರಾರಂಭವಾದ ಕೆಲಸ ಸುಮಾರು ೪೫ ದಿನಗಳು ಮಾತ್ರ ನಡೆದಿದೆ. ಒಂದುವಾರ ಕೆಲಸಮಾಡಿದ ಉಪಾಧ್ಯಾಯರಿಗೆ ಇನ್ನೊಂದು ವಾರ ರಜ ಕೊಡಲಾಗುತ್ತಿದೆ. ಈ ಕಾರಣದಿಂದ ಪ್ರತಿ ತರಗತಿಗೂ ಮೂರು ನಾಲ್ಕು ಮಂದಿ ಬೋಧಕರಾಗುತ್ತಾರೆ. ಹೀಗಿದ್ದರೂ ವಿದ್ಯಾರ್ಥಿಗಳ ಕಲಿವಿನ ಅಭಿವೃದ್ಧಿ ಸಮರ್ಪಕವಾಗಿ ಕಂಡು ಬಂದಿದೆ.

ನವೆಂಬರಿನಿಂದ ಉಪಾಧ್ಯಾಯರಿಗೆ ತಿಂಗಳಿಗೆ ಐದು ರೂಪಾಯಿಯಂತೆ ಸಂಬಳ ಕೊಡುವ ಏರ್ಪಾಡಾಗಿದೆ. ಆಗ ಉಪಾಧ್ಯಾಯರ ಬದಲಾವಣೆ ಇರುವುದಿಲ್ಲ.

ಸಮಿತಿಯವರು ವಯಸ್ಕರು ಓದಲು ಅನುಕೂಲವಾಗಿರುವ ಒಂದು ಹೊಸ ಪುಸ್ತಕವನ್ನು ರಚಿಸುತ್ತಿದ್ದಾರೆ. ಶ್ರೀ ಎಂ. ಆರ್. ಶ್ರೀನಿವಾಸಮೂರ್ತಿಯವರ 'ವಯಸ್ಕರ ಪುಸ್ತಕ'ವಾದ ಮೇಲೆ ವಿದ್ಯಾರ್ಥಿಗಳು ಈ ಹೊಸ ಪುಸ್ತಕವನ್ನು ಓದಬೇಕೆಂದು ನಿರ್ಣಯವಾಗಿದೆ.

ಮಹಮದೀಯ ಸೋದರರ ಅನುಕೂಲಕ್ಕಾಗಿ ಕೆಲವು ಉರ್ದು ಕೇಂದ್ರಗಳನ್ನು ತೆರೆಯಲಾಗಿದೆ. ಇಲ್ಲಿ ಸುಮಾರು ೧೦೦ ವಯಸ್ಕರು ಉರ್ದು ಕಲಿಯುತ್ತಿದ್ದಾರೆ.

ಇದುವರೆಗೂ ಪ್ರತಿ ವಿದ್ಯಾರ್ಥಿಗೂ ಸರಾಸರಿ ಎಂಟಾಣೆಯಂತೆ ಖರ್ಚಾಗಿದೆ. ಮುಂದಲ ಮೂರು ತಿಂಗಳ ಅವಧಿಯಲ್ಲಿ ಒಬ್ಬೊಬ್ಬನಿಗೂ ಸರಾಸರಿ ಎರಡೂಕಾಲು ರೂಪಾಯಿ ಖರ್ಚಾಗಬಹುದು. ಮುಂದೆ ಮಹಾಜನರ ತಿಳಿವಳಿಕೆಗಾಗಿ ಮೇಲೆ ಹೇಳಿದ ವರ್ಣಮಾಲೆಯನ್ನೂ ವಾಕ್ಯಮಾಲೆಯನ್ನೂ ಕೊಟ್ಟಿದೆ.

ಜಿ. ಆರ್. ಆರ್.

---

## ಅಕ್ಷರಪ್ರಚಾರದಲ್ಲಿ ಉಪಯೋಗಿಸುತ್ತಿರುವ ವಾಕ್ಯಮಾಲೆ

೧. ಈಗ ಕರಗ. ಈ ತರಹ ಗರ.
ಈತ ರಂಗ, ಈತ ಈರ.

೨. ಎಂತಹ ಹಠ! ಆಗ ಅಂತಹ ಕರಗ.
ಈತ ಹರ; ಆತ ಈರ.
ಈಗ ಏತರ ಆತಂಕ?

೩. ಈಬಲ ಏತರ ಫಲ?
ಅವರ ಮಗ ರಂಗ ಐಲ.
ಆ ಊರ ಕರಗ ಎಂತಹ ಕರಗ.
ಅವರವರ ಮತ ಅವರವರ ಹಠ.

೪. ಅವರ ಛಲ ಕಲಹದ ಫಲ.
ಗಂಧದ ಉದಕ ಘಮಘಮ.
ಈರ ದಂತದ ಕದ ಕಂಡ.
ಮತದವರ ಷರದ ಫಲ, ಗಂಗ ಐಲ ಆದ.

೫. ಆಗ ಬರದ ಭಯ.
ಈರ ಔಷಧ ತಂದ.
ಈ ಬರಹ ಅವರ ಛಲ.
ಜಂಭದ ಫಲ ಅಪಜಯ.
ಚರಕ ಬಡವರ ಔಷಧ.
ಅಂಗದ ಗಂಧದ ರಥ ತಂದ.

೬. ಬಡವನ ಬಳಗ ಬಹಳ.
ಗಂಡನ ಪಯಣ ಅವಳ ಕಳವಳ.
ಪಠದ ಉರಗ ಎಂತಹ ಅಂದ!
ಬಸವನ ಮಗ ಬಹಳ ಒರಟ.
ಈ ಮಗ ಅವಳ ಆಭರಣ.
ಔಷಧದ ಭಯ, ಕಂದನ ಓಟ,
ಈಗ ಔತಣದ ಸಡಗರ.
ಹರನ ಆಟ, ನಳನ ಸಂಕಟ.
ಈರನ ಸಂಗಡ ಪಯಣ, ಜಗಳ.
ಭಗವಂತನ ದಯ, ಬಡವನ ಧನ.
ಈ ಆಕಳ ತರಹ ಬಹಳ ಚಂದ.
ನಂದನವನ ಚಂದ; ಪಂಪನ ಪದ ಚಂದ.
ಭರತ ಖಂಡ ಬಹಳ ಚಂದ.

ಆಗ ಬರ. ಸಂಜ ಬಡವ. ಅವನ ಬಳಗ ಬಹಳ. ಅದರ ಫಲ ಊಟದ ಭಂಗ. ಅವನ ಮಗ ಜವರ ಒರಟ. ಬಳಗದ ಸಂಗಡ ಜಗಳ ತಂದ. ಸಂಜ ಐಲ ಆದ. ಆಗ ಅವಳ ಕಳವಳ, ಮಗನ ಭಯ. ಊರ ರಂಗ ಏತರ ಭಯ ಅಂದ; ಔಷಧ ತಂದ. ಶಂಕರನ ದಯ, ಸಂಜನ ಜಯ.

**ಸೂಚನೆ.**—ಅಕ್ಷರ ಪ್ರಚಾರ ಪಟದಲ್ಲಿ ಕೊಟ್ಟಿರುವ ಪಾಠಗಳೊಂದಿಗೆ ಕಲಿಸಬಹುದಾದ ವಾಕ್ಯಗಳು ಇವು. ಕಲಿಯುವವರ ಅನುಕೂಲವನ್ನನುಸರಿಸಿ ಆಯಾ ಗುಂಪಿನ ಮಾತುಗಳೊಂದಿಗೆ ಇವುಗಳನ್ನು ಓದಿಸಿ ಬರೆಸಬಹುದು.

*
* *

# ಅಕ್ಷರ ಪ್ರಚಾರ

## ವಿಶ್ವವಿದ್ಯಾನಿಲಯ ಸಂಘ, ಮೈಸೂರು

### ವರ್ಣಮಾಲೆ

**ಂ ರ ಠ ಹ ಈ ಯ ಕ ತ ಗ**

ಹರ ಗರ ಗಯ ಕಂಠ ಕರಗ
ಈರ ಈತ ರಂಗ ಹಠ ತರಹ
ಈ ಕರ ಈ ಹಯ

**ಲ ಉ ಊ ಅ ಆ ಎ ಏ**

ಅರ ಆಗ ಏಕ ಎರಕ ಆಲಯ
ಆಲ ಅಂಗ ಏತ ಏತರ ಅಂತಕ
ಆಯ ಊತ ತಲ ಅಗಲ ಆತಂಕ
ಈ ಗಂಗ ಆ ಲಂಗ ಎಂತಹ ಉರಗ

**ವ ಮ ಪ ಫ ಛ ಷ ಘ ಐ**

ವರ ಮಠ ಛಲ ಐಲ ಮರ
ಮಗ ಮತ ಫಲ ಷರ ಪಠ
ಮಂಗ ಕಫ ಯಮ ಪಂಪ ಪಂಕ
ಲವಂಗ ವಲಯ ಕಮಲ ಅವರ ಮಗ ಘಮಘಮ

**ದ ಧ ಥ ಡ ಢ**

ಹದ ಕಂದ ಗಂಧ ಅಂಗದ
ಗಂಡ ರಥ ಎಡ ಪಡವಲ
ದಯ ದಂತ ಪದ ಢಮಢಮ
ಮರದ ಕದ ಅದರ ದರ ರಂಗ ಕಡ ತಂದ

**ಒ ಓ ಔ ಬ ಭ ಜ ಚ ಖ**

ಭಯ ಓಜ ಜಂಭ ಹಂಜರ ಔಡಲ
ಬರ ಖಗ ಬಂಗರ ಓಲಗ ಚಪಲ
ಖರ ಖಂಡ ಒರತ ಔಷಧ ಒಗತ
ಬಡಗಲ ಅಪಜಯ ಈಗ ಬರಹ ಆಗ ಚರಕ

**ನ ಸ ಟ ಣ ಞ ಶ ಳ**

ಶಂಕರ ಕವಳ ಬಡವ ಅರಸ
ಗರಗಸ ಒರಟ ಬಸವ ಶಂಖ
ಊಟದ ಸಮಯ ನಂಜನ ಕಣಜ ಅವಳ ಪದಕ
ಈರನ ಮಗ ಅವರ ಬಳಗ ಇವನ ಪಯಣ

ಸೂಚನೆ :—೧. ಕಲಿಯುವವರ ಕೈಓಟದ ಅನುಕೂಲವನ್ನು ಮುಂದಿಟ್ಟು ಈ ವರ್ಣಮಾಲೆಯಲ್ಲಿ ಅಕ್ಷರಗಳನ್ನು ಗುಂಪುಗಳಾಗಿ ವಿಂಗಡಿಸಿದೆ.

೨. ಪ್ರತಿಯೊಂದು ಗುಂಪಿನ ಅಕ್ಷರಗಳನ್ನೂ, ಮಾತುಗಳನ್ನೂ ಎರಡು ದಿನಗಳಲ್ಲಿ ಕಲಿಯಬಹುದು.

೩. ಈ ಮಾಲೆಯಲ್ಲಿ ೪೩ ಅಕ್ಷರಗಳನ್ನು ಮಾತ್ರ ಕೊಟ್ಟಿದೆ; ಉಳಿದ ಅಕ್ಷರಗಳು ಕಾಗುಣಿತ ಮತ್ತು ಒತ್ತಕ್ಷರಗಳ ಜೊತೆಗೆ ಪಾಠಪುಸ್ತಕದಮೂಲಕ ಪರಿಚಯವಾಗುವುವು.

## ಪ್ರಪಂಚದ ದೊಡ್ಡದೇಶಗಳಲ್ಲಿ ಅಕ್ಷರಸ್ಥರು




### ಮೈಸೂರು ಸಂಸ್ಥಾನದಲ್ಲಿ

ಪ್ರಜಾ ಸಂಖ್ಯೆ, ೬೬ ಲಕ್ಷ. ಓದು ಬರಹ ಬಲ್ಲವರು, ೬ ಲಕ್ಷ.
ಎಂದರೆ ಸಾವಿರಕ್ಕೆ ೯೧ ಜನ.

**ಸುಮಾರು ೧೦ ಜನರಲ್ಲಿ ಒಬ್ಬ ಮಾತ್ರ ಓದುಬರಹ ಬಲ್ಲವನು.**

೩೪ ಲಕ್ಷ ಗಂಡಸರಲ್ಲಿ ಓದುಬರಹ ಬಲ್ಲವರು ೫ ಲಕ್ಷ.
ಅಂದರೆ ಸಾವಿರಕ್ಕೆ ೧೫೦ ಜನ

೩೨ ಲಕ್ಷ ಹೆಂಗಸರಲ್ಲಿ ಓದುಬರಹ ಬಲ್ಲವರು ೮೯ ಸಾವಿರ.
ಅಂದರೆ ಸಾವಿರಕ್ಕೆ ೨೮ ಜನ

| ಮಾತೃಭಾಷೆ | ಮಾತನಾಡುವವರು | ಒಟ್ಟು ಪ್ರಜಾ ಸಂಖ್ಯೆಯಲ್ಲಿ ೧ ಸಾವಿರಕ್ಕೆ |
|---|---|---|
| ಕನ್ನಡ | ೪೫,೭೮,೮೦೧ | ೬೯೮ |
| ತೆಲುಗು | ೧೦,೩೦,೯೨೬ | ೧೫೭ |
| ತಮಿಳು | ೩,೧೩,೬೮೫ | ೪೮ |
| ಹಿಂದುಸ್ತಾನಿ | ೩,೮೨,೮೭೯ | ೫೯ |
| ಮರಾಠಿ | ೯೧,೩೨೨ | ೧೪ |

ಕನ್ನಡ ಬಲ್ಲವರು ೫೫ ಲಕ್ಷ. ಅಂದರೆ ೧೦ ಸಾವಿರಕ್ಕೆ ೮,೨೭೦ ಜನ.

ಇಂಗ್ಲಿಷ್ ಬಲ್ಲವರು ೧೦ ಸಾವಿರಕ್ಕೆ ಗಂಡಸರಲ್ಲಿ ೨೭೧. ಹೆಂಗಸರಲ್ಲಿ ೫೦.

## ಓದುಬರಹ ಅಂದರೇನು

೧. ವೃತ್ತಪತ್ರಿಕೆಯ ಲೇಖನವನ್ನೂ, ನೋಟೀಸನ್ನೂ, ಜಾಹಿರಾತು ಪ್ರಕಟಣೆಯನ್ನೂ ಓದಿ ಅರ್ಥಮಾಡಿಕೊಳ್ಳುವುದು.

೨. ಬಳಕೆಯಲ್ಲಿರುವ ತೂಕ, ಅಳತೆ, ಮತ್ತು ರೂಪಾಯಿ ಆಣೆ ಕಾಸುಗಳ ವ್ಯವಹಾರದ ಸುಲಭ ಲೆಕ್ಕಾಚಾರ. ೧ ರಿಂದ ೧೦, ೧೨, ಮತ್ತು ೧೬ ರ ಮಗ್ಗಿ.

೩. ಬಂಧುವಿಗೆ ಒಂದು ಸಣ್ಣ ಕಾಗದ, ಇಲ್ಲವೇ ಕಛೇರಿಗೆ ಒಂದು ಅರ್ಜಿ ಬರೆಯುವುದು.

೪. ತನ್ನ ದೇಶದ ಚರಿತ್ರೆ. ಭೂಗೋಳ ಮತ್ತು ಮುಖ್ಯ ಸಂಸ್ಥೆಗಳ ಸಾಮಾನ್ಯ ತಿಳಿವಳಿಕೆ.

---

ಮೇಲೆ, ವಿಶ್ವವಿದ್ಯಾನಿಲಯ ಸಂಘದವರು ಅಕ್ಷರತೆಯ ಸಂಬಂಧದಲ್ಲಿ ಶೇಖರಿಸಿರುವ ಅಂಕಿಗಳನ್ನೂ ಅಂಶಗಳನ್ನೂ ಕೊಡಲಾಗಿದೆ. ಇದನ್ನು ನೋಡಿದರೆ ನಮ್ಮಲ್ಲಿ ಅಜ್ಞಾನವು ಎಷ್ಟರಮಟ್ಟಿಗೆ ಇದೆ ಎಂದು ಗೊತ್ತಾಗುತ್ತದೆ. ಈ ಸ್ಥಿತಿಯು ಮೈಸೂರಿಗೆ ಮಾತ್ರ ಸಂಬಂಧಪಟ್ಟದ್ದಲ್ಲ. ಇಡೀ ಭರತಖಂಡಕ್ಕೇ ಅನ್ವಯಿಸತಕ್ಕದ್ದು.

ಇದನ್ನೂ ಚಿತ್ರದ ಮೂಲಕ ಸ್ಫುಟವಾಗಿ ತೋರಿಸಿದೆ. ಒಂದು ದೇಶವು ಮುಂದಕ್ಕೆ ಬರಬೇಕಾದರೆ—"ನಹಿ ಜ್ಞಾನೇನ ಸದೃಶಂ". ಇದ್ದಂತೆ ಇರಬೇಕಾದರೆ—ಎಂದರೆ ದಿನದಿನಕ್ಕೆ ಕೀಳಾಗಬೇಕಾದರೆ—ನಹಿ ಅಜ್ಞಾನೇನ ಸದೃಶಂ. ಅಭ್ಯುದಯಕ್ಕೆ ಅಜ್ಞಾನಕ್ಕಿಂತ ದೊಡ್ಡ ಅಡಚಣೆಯಿಲ್ಲ. ಇಂಡಿಯದಲ್ಲಿ ಸಾವಿರಕ್ಕೆ ೯೦೦ಕ್ಕಿಂತ ಹೆಚ್ಚು ಜನ ಅನಕ್ಷರಸ್ಥರು. ಈ ಶೋಚನೀಯ ಸ್ಥಿತಿ ಪಟ್ಟಣಗಳಿಗಿಂತ ಗ್ರಾಮಾಂತರಗಳಲ್ಲಿ ಹೆಚ್ಚು; ಗಂಡಸರಿಗಿಂತ ಹೆಂಗಸರಲ್ಲಿ ಹೆಚ್ಚು.

ಇದು ಬಹಳ ಕಾಲದಿಂದ ಎಲ್ಲರಿಗೂ ತಿಳಿದಿರುವ ಸಂಗತಿಯೇ; ಆದರೆ ಅದನ್ನು ಸರ್ಕಾರವೊಂದೇ ನಿವಾರಣೆಮಾಡಲು ಸಾಧ್ಯವಾಗಿಲ್ಲ. ಶೇಕಡ ತೊಂಬತ್ತಕ್ಕೆ ಮೇಲ್ಪಟ್ಟ ಅಕ್ಷರಸ್ಥರಿರುವ ಪರದೇಶಗಳಲ್ಲಿ ಸರ್ಕಾರವೂ ಮಹಾಜನರೂ ಸೇರಿ ಬಹು ಧನವ್ಯಯಮಾಡಿ ಜ್ಞಾನದ ಮಟ್ಟವನ್ನು ಆ ಎತ್ತರಕ್ಕೆ ತಂದಿದ್ದಾರೆ. ನಮ್ಮ ದೇಶದಲ್ಲಿ ಆ ಉತ್ಸಾಹವಾಗಲಿ ಐಶ್ವರ್ಯವಾಗಲಿ ಇಲ್ಲ. ಆದ್ದರಿಂದ ಅನಕ್ಷರತೆಯನ್ನು ಎಲ್ಲಿ ಹೇಗೆ ಎಷ್ಟರ ಮಟ್ಟಿಗೆ ಆಕ್ರಮಣ ಮಾಡಿ ಲಗ್ಗೆ ಹತ್ತಬೇಕೆಂದು ಎಲ್ಲರೂ ಯೋಚನೆ ಮಾಡುತ್ತಿರುವಾಗ ಮೈಸೂರು ದೇಶದಲ್ಲಿ ವಿಶ್ವವಿದ್ಯಾನಿಲಯ ಸಂಘವು ಸೇವಾಬುದ್ಧಿಯಿಂದ ಇದನ್ನು ಆರಂಭಿಸಿತು. ವಿದ್ಯಾ ಇಲಾಖೆಯಿಂದ ಆಗದ್ದು ವಿದ್ಯಾರ್ಥಿಗಳಿಂದಾಗುತ್ತದೆಯೆ? ಅಕ್ಷರ ಕಲಿಸಿದರೆ ವಿದ್ಯೆ ಬಂದಂತಾಯಿತೇ? ಒಂದು ಪಟ್ಟಣದ ಹತ್ತು ಕಡೆಗಳಲ್ಲಿ ನೂರು ಜನಕ್ಕೆ—ಸಾವಿರ ಜನಕ್ಕೆ—ನಾಲ್ಕಕ್ಷರ ಹೇಳಿಕೊಟ್ಟು ನೂರಾರು ರೂಪಾಯಿ ಖರ್ಚುಮಾಡಿಬಿಟ್ಟರೆ ಯಾವ ದೇವರಿಗೆ ಪ್ರೀತಿ?—ಎಂದು ಹಳಿಯುವವರಿದ್ದಾರೆ. ಇಂಥವರು ಆಡುವ ಮಾತು ನಿರಭಿಮಾನದಿಂದಲ್ಲ; ಕೆಲಸ ಅಸಾಧ್ಯವಾದದ್ದು ಎಂಬ ಭಾವದಿಂದ; ಆದರೆ ಆವಶ್ಯಕವೆಂದು ಕಂಡರೆ ಅಸಾಧ್ಯವಾದದ್ದನ್ನೂ ಸಾಧಿಸಲೇಬೇಕು—ಬೆಟ್ಟವನ್ನು ಒಡೆದು ರೈಲುಹಾಕುವ ಹಾಗೆ. ಕೆಲಸ ಆರಂಭಮಾಡಿ ನಡಸುವವರೆಗೂ ಅದರ ಕಷ್ಟಸುಖಗಳು ಗೊತ್ತಾಗುವುದಿಲ್ಲ. ಹಾಗೆ ಪಡೆಯುವ ಅನುಭವವು ಅಲ್ಲಗಳೆಯುವುದಲ್ಲ. ಅಲ್ಲದೆ, ಇಂದು ಹತ್ತು ಜನ ತರುಣ ಉತ್ಸಾಹಿಗಳು ನಿಸ್ಸ್ವಾರ್ಥ ಬುದ್ಧಿಯಿಂದ, ಸೇವಾಸಕ್ತಿಯಿಂದ, ಕೆಲಸಮಾಡಿದರೆ ಅದು ಕಾಲಕ್ರಮದಲ್ಲಿ ನೂರಾರು ಜನ ಸಂಬಳಗಾರರು ಮಾಡುವ ಕೆಲಸಕ್ಕಿಂತ ಏಕೆ ಹೆಚ್ಚಾಗಬಾರದು? ಪೂರ್ಣಫಲ ಪಡೆಯುವುದಕ್ಕೆ ಏಕೆ ಮಾರ್ಗದರ್ಶಕವಾಗಬಾರದು? ಗುಳಗುಳನೆ ಜೀವಜಲ ಉಕ್ಕಿಬಂದರೆ ಅದೇ ಹೊಳೆಯಾಗಿ ಹರಿದು ಜಲಸಮೃದ್ಧಿ ತರುವುದಿಲ್ಲವೇ? ಈ ದೃಷ್ಟಿಯಿಂದ ವಿಶ್ವವಿದ್ಯಾನಿಲಯ ಸಂಘದ ಉದ್ಯಮವು ಸ್ತುತ್ಯವಾಗಿದೆ. ನಾವು ಅವರನ್ನು ಅಭಿನಂದಿಸಿ, ಅವರ ಪ್ರಯತ್ನದಲ್ಲಿ ಜಯವುಂಟಾಗಲೆಂದು ಹಾರೈಸುತ್ತೇವೆ.

*
* *

ಮೈಸೂರು ವಿಶ್ವವಿದ್ಯಾನಿಲಯ ಸಂಘದವರು ನಡೆಸುತ್ತಿರುವ ಅಕ್ಷರಪ್ರಚಾರ ಕಾರ್ಯಕ್ಕೆ ಜಯವನ್ನು ಕೋರಿ ಮೈಸೂರು ಸಂಸ್ಥಾನದ ದಿವಾನರವರಾದ ಅಮಿನ್-ಉಲ್-ಮುಲ್ಕ್ ಸರ್ ಮಿರ್ಜಾ ಎಂ. ಇಸ್ಮಾಯಿಲ್ ಅವರು ಈ ರೀತಿ ಸಂದೇಶವನ್ನು ಕಳುಹಿಸಿಕೊಟ್ಟಿರುತ್ತಾರೆ:

**ಅಕ್ಷರಪ್ರಚಾರ ಕಾರ್ಯಕ್ಕೆ ಸಂದೇಶಗಳು**

“ಒಂದು ಜನಾಂಗವು ತನ್ನ ಯೋಧರಿಗಾಗಿ ಹಣ ಖರ್ಚುಮಾಡುವುದು, ಯುದ್ಧಕಾಲದಲ್ಲಿ ಅವರು ತನ್ನ ದೇಶವನ್ನು ಸಂರಕ್ಷಿಸಬಹುದೆಂಬ ನಿರೀಕ್ಷಣೆಯಿಂದ. ಹಾಗಾದರೆ ಸ್ಕೂಲು ಕಾಲೇಜುಗಳಿಗೆ ಹೋಗುವವರಿಂದ ಅದು ಏನನ್ನು ನಿರೀಕ್ಷಿಸುತ್ತದೆ? ಅಪಾರವಾದ ಹಣ ಖರ್ಚುಮಾಡಿ ನಿಮಗೆ ಶಿಕ್ಷಣಕೊಟ್ಟದ್ದರಿಂದ ದೇಶಕ್ಕೆ ಆಗುವ ಪ್ರತ್ಯುಪಕಾರ ವೇನು? ನೀವು ಜ್ಞಾನಜ್ಯೋತಿಯನ್ನು ನಿಮ್ಮ ನೆರೆಹೊರೆಯವರಿಗೆ ತೋರಿಸಿ ಬೆಳಕು ಕೊಡಬೇಕೆಂದು ನಿರೀಕ್ಷಿಸಿದರೆ ಅದು ಹೆಚ್ಚೆನಿಸುತ್ತದೆಯೆ? ಇದು ಪ್ರತಿಯೊಬ್ಬ ವಿದ್ಯಾವಂತನೂ ತಾನು ತನ್ನ ದೇಶಕ್ಕೆ ಹೊತ್ತಸಾಲ. ಮೈಸೂರು ವಿಶ್ವ ವಿದ್ಯಾನಿಲಯ ಸಂಘವು ಇದನ್ನು ನಿಮಗೆ ಜ್ಞಾಪಕಕ್ಕೆ ತಂದುಕೊಡಲಿಚ್ಛಿಸುತ್ತಿದೆ.”

ವಿಶ್ವವಿದ್ಯಾನಿಲಯದ ಮುಖ್ಯಾಧಿಕಾರಿಗಳಾದ ರಾಜಕಾರ್ಯಪ್ರವೀಣ ಎನ್. ಎಸ್. ಸುಬ್ಬರಾಯರವರು ಈ ರೀತಿ ಸಂದೇಶವನ್ನು ಕಳುಹಿಸಿರುತ್ತಾರೆ:

“ಸಮಾಜಾಭಿವೃದ್ಧಿ ಕಾರ್ಯದಲ್ಲಿ, ಅದರಲ್ಲೂ ವಯಸ್ಕರ ಅಕ್ಷರಪ್ರಚಾರ ಕಾರ್ಯದಲ್ಲಿ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳು ಇಷ್ಟು ಆಸಕ್ತಿ ತೆಗೆದುಕೊಳ್ಳು ತ್ತಿರುವುದು ನನಗೆ ಬಹಳ ಸಂತೋಷವಾಗಿದೆ. ಅವರು ಮಾಡುತ್ತಿರುವ ಕೆಲಸದಲ್ಲಿ ಗೋಚರವಾದ ಅಂಶಗಳೇನೂ ಇಲ್ಲದಿರಬಹುದು. ಆದರೆ ಪ್ರಜಾಭ್ಯುದಯಕ್ಕೂ ಅದರಿಂದ ಅಂತ್ಯದಲ್ಲಿ ಸಮಾಜ ಐಕ್ಯತೆಗೂ ಅದು ಬಹಳ ಮುಖ್ಯವಾದ ಸಹಾಯವನ್ನು ನೀಡುವುದಾಗಿದೆ. ಈ ಕೆಲಸ ಮಾಡುವುದರಿಂದ ವಿಶ್ವವಿದ್ಯಾನಿಲಯದ ತರುಣರೂ, ತರುಣಿಯರೂ ತಮ್ಮ ವ್ಯಕ್ತಿತ್ವವನ್ನು ಹೆಚ್ಚಿಸಿಕೊಳ್ಳುತ್ತಿರುವರು. ಮತ್ತು ಜನ ಸಮೂಹದೊಡನೆ ಸೇರುವುದೂ, ಜನಸಮೂಹವು ಜೀವಿಸುವ ಪರಿಸ್ಥಿತಿಯ ತಿಳಿವಳಿಕೆ ಹೊಂದುವುದೂ ಅವರ ಶಿಕ್ಷಣದಲ್ಲಿಯೇ ಒಂದು ಮುಖ್ಯ ಅಂಶವಾಗಿದೆ.”

ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯನವರು ಈ ರೀತಿ ಸಂದೇಶ ಕಳುಹಿಸಿದ್ದಾರೆ:

“ವಿದ್ಯೆಗೆ ಮರ್ಯಾದೆ ಕೊಡುವುದರಲ್ಲಿ ಯಾವ ಜನಾಂಗಕ್ಕೂ ನಾವು ಹಿಂದಿಲ್ಲ. ಆದರೆ ವಿದ್ಯಾವಂತರು—ಕಡೆಗೆ, ಓದುಬರಹ ಬಲ್ಲವರು, ನಮ್ಮಲ್ಲಿ ಎಷ್ಟು ಕಡಮೆ! ನಮ್ಮ ಜನರ ಬಡತನ ಹಿಂಗಬೇಕಾದರೆ, ತಿಳಿವಳಿಕೆ, ಧೈರ್ಯ, ಆತ್ಮಗೌರವ—ಇವು

ಹೆಚ್ಚಬೇಕಾದರೆ, ಈ ಕೂಡಲೆ ಓದುಬರಹ, ಸ್ವಾರಸ್ಯವಾದ ಸುಲಭ ಪುಸ್ತಕಗಳು, ವಿಮರ್ಶೆಯಿಂದ ಶೋಧನೆಪಟ್ಟ ಸಂಬಿಕೆಗಳು ಜನರಲ್ಲಿ ಹರಡಬೇಕು. ವಿದ್ಯಾರ್ಥಿಗಳು, ಉಪಾಧ್ಯಾಯರು, ವಿದ್ಯಾಸಂಸ್ಥೆಗಳು, ಮಠಗಳು, ಗ್ರಾಮಪಂಚಾಯಿತಿಗಳು ಈ ಸಾರ್ವಜನಿಕ ಸೇವೆಯನ್ನು ಶ್ರದ್ಧೆಯಿಂದ ನಡೆಸಬೇಕು. ಮಾತು ಸಾಕು; ಎಲ್ಲರೂ ಹೆಣ್ಣುಮಕ್ಕಳು ಕೂಡ—ತಮ್ಮ ಅಳಿಲುಭಕ್ತಿಯನ್ನು ಕೆಲಸದಲ್ಲಿ ತೋರಿಸಬೇಕು. ದುಡಿಯುವವರಿಗೆ ಸ್ವಲ್ಪವಾದರೂ ವೆಚ್ಚದ ಸಹಾಯ ಮಾಡಬೇಕಾದೀತು. ತನು ಮನ ಧನ ಯಾವುದನ್ನು ಕೊಡಬಲ್ಲಿರಿ, ಕೊಡಿ. ನಾಡು, ನುಡಿ, ಬಾಳನ್ನು ಹಿರಿಯ ತನಕ್ಕೆ ತನ್ನಿ. ಕರ್ನಾಟಕಂ ಗೆಲ್ಗೆ."

*
* *

ಶಿಕ್ಷಣದ ಗುರಿ

"ಇಂಡಿಯಾ ಸರ್ಕಾರದ ಎಜುಕೇಷನಲ್ ಕಮಿಷನರವರಾದ ಮಿ|| ಜಾನ್ ಸಾರ್ಜೆಂಟ್ ಅವರು 'ವಿದ್ಯಾಭ್ಯಾಸ ಸಫಲವಾಗುವ ರೀತಿ' ಎಂಬ ವಿಷಯವನ್ನು ಕುರಿತು ಮೈಸೂರಿನಲ್ಲಿ ಘನವಾದ ಭಾಷಣಮಾಡಿದರು. ಉತ್ತಮವಾದ ಶಿಕ್ಷಣ ವ್ಯವಸ್ಥೆಯಲ್ಲಿ ಮೊದಲ ಎಷ್ಟು ಭಾಗ ಎಷ್ಟು ಕಾಲ ಕಡ್ಡಾಯವಾಗಿ ಸಾರ್ವತ್ರಿಕವಾಗಿ ಇರಬೇಕು? ಮುಂದಿನ ಮಜಲು ಗಳಲ್ಲಿ ವಿದ್ಯಾರ್ಥಿಗಳನ್ನು ಹೇಗೆ ಆಯ್ದುಕೊಂಡು ಬಗೆಬಗೆಯ ವಿಶೇಷ ಶಿಕ್ಷಣ, ವೃತ್ತಿ ಶಿಕ್ಷಣ ಏರ್ಪಡಿಸಬೇಕು? ವಿದ್ಯಾರ್ಥಿಗಳ ಶಿಕ್ಷಣಕ್ಕೂ ದೇಶದ ಆರ್ಥಿಕ ಸಂಪನ್ನತೆಗೂ ಹತ್ತಿರ ಸಂಬಂಧವನ್ನು ಹೇಗೆ ರಚಿಸಬೇಕು? ಅವರ ಬುದ್ಧಿಶಕ್ತಿ ಮನಶ್ಶಕ್ತಿ ಬೆಳೆದು ನಾಡಿನ ಜೀವನದಲ್ಲಿ ಹೇಗೆ ಸಫಲವಾಗಬೇಕು ಎಂಬವನ್ನು ವಿವರಿಸಿದರು. ಕಡೆಯಲ್ಲಿ "ಕಾಲ ಮೀರಿಹೋಗುವ ಮುಂಚೆಯೇ, ಭರತಖಂಡದ ಪೂರ್ವ ಸಂಪ್ರದಾಯಗಳಿಗೂ ಇಂದಿನ ಮಹಾಕಾಂಕ್ಷೆಗಳಿಗೂ ನಾಳಿನ ಅದೃಷ್ಟ ಸೌಭಾಗ್ಯಕ್ಕೂ ತಕ್ಕಂತಹ ವಿದ್ಯಾವ್ಯವಸ್ಥೆಯನ್ನು ರಚಿಸುವ ಕರ್ತವ್ಯ ಎಲ್ಲರಿಗೂ ಸೇರಿದುದಾಗಿದೆ. ಬಹುಶಃ ಆ ಬಂದರ್ಥದಲ್ಲಿ ಮಾತ್ರವೇ 'ಅನಂತಕಾಲವೇ ನಗರ ಗಳನ್ನು ಕಟ್ಟತಕ್ಕದ್ದು' ಎಂಬ ಪ್ಲೇಟೋವಿನ ನುಡಿಯನ್ನು ನಾವು ಅಂಗೀಕರಿಸ ಬಹುದು" ಎಂದು ನುಡಿದು ಮುಗಿಸಿದರು.

ವಿದ್ಯಾವಿಚಾರಗಳನ್ನು ಕುರಿತು ಮೇಧಾವಿಗಳು ಅನೇಕ ರೀತಿಯಲ್ಲಿ ಈವರೆಗೆ ನುಡಿದಿದ್ದಾರೆ. ಭರತಖಂಡದ ಸರ್ವತೋಮುಖವಾದ ಏಳಿಗೆ ಸಂಪತ್ತಿಗಳೇ ಆ ಎಲ್ಲರ ಉದ್ದೇಶ. ನಮ್ಮ ಜೀವನದಲ್ಲಿ ಇಂದು ಯಾವುದೊ ನ್ಯೂನತೆ ಇದೆ. ಇದು ಹೋಗ ಬೇಕು; ಈ ಜನದ ಶಕ್ತಿ ಕುದುರಬೇಕಾದರೆ ಜನದ ದೇಹಶಕ್ತಿಯನ್ನೂ ಮನಶ್ಶಕ್ತಿ

ಯನ್ನೂ ಜಾಗ್ರತೆಗೊಳಿಸಿ ತಕ್ಕ ವಿಚಕ್ಷಣೆಯಿಂದ ಬಲಪಡಿಸಬೇಕು: ಈವೊತ್ತಿನ ಮಕ್ಕಳು ನಾಳಿನ ಜೀವನದ ಆಧಾರಸ್ತಂಭಗಳು, ಆದುದರಿಂದ ಅವರ ವಿದ್ಯಾ ಶಿಕ್ಷಣ ಉತ್ತಮವಾಗಿ ನಡೆಯಬೇಕು ಎಂಬ ಅಂಶಗಳು ನಿರ್ವಿವಾದ. ಆದರೆ ಇತರ ಹಲವು ರಂಗಗಳಲ್ಲಿಸಂತೆಯೇ ಈ ವಿಷಯದಲ್ಲಿಯೂ; ನಾಲ್ಕು ಜನ ನುಡಿವಾಗ ಆರು ಅಭಿಪ್ರಾಯಗಳೂ ಮಾರ್ಗಗಳೂ ಸೂಚಿತವಾಗುವುವು ಎಂಬ ನುಡಿಯಂತೆ ವ್ಯಾಧಿ ಯಾವುದೆಂದು ಪರೀಕ್ಷೆ ನಡಸುವಾಗಲೂ ಚಿಕಿತ್ಸಾವಿಧಾನವನ್ನು ಕೈಕೊಳ್ಳುವಾಗಲೂ ಅನೇಕ ಅಭಿಪ್ರಾಯಗಳು ಹುಟ್ಟಿಕೊಂಡು ಹುರುಡುಮಾಡುವುವು. ಹೀಗಾಗಿ ಭರತಖಂಡದ ಯೋಚನೆ ಪ್ರಯತ್ನಗಳು ಒಂದು ಗುರಿಯಲ್ಲಿಯೂ ಮೊನೆಯಲ್ಲಿಯೂ ಸಾಗುವುದು ಶಕ್ಯವಿಲ್ಲವಾಗಿದೆ. ಇದು ಭರತಖಂಡದ ದುರದೃಷ್ಟ.

ನಾವು ನಲವತ್ತು ಕೋಟಿ ಸಂಖ್ಯೆಯುಳ್ಳ ಜನವರ್ಗ; ಅತಿ ಪ್ರಾಚೀನವಾದ ಕಲೆ ಸಂಸ್ಕೃತಿ ಸಾಧನೆ ಸಿದ್ಧಿಗಳ ಚರಿತ್ರೆಯ ಹಿನ್ನೆಲೆ ಇದೆ ನಮಗೆ. ಸುತ್ತಲ ಪ್ರಪಂಚವನ್ನು ನೋಡಿ ನಾವು ಮುಂದುವರಿಯಬೇಕಾಗಿರುವ ಅಂಶ ಎಷ್ಟಿದೆ ಎಂಬುದನ್ನು ಜನ ಅರಿತುಕೊಳ್ಳುತ್ತಿದೆ. ಒಳ ಹೊರ ಕಾರಣಗಳಿಂದ ನಮ್ಮ ಪ್ರಯತ್ನ ಎಷ್ಟು ವಿಫಲವಾಗುತ್ತಿದೆ ಎಂಬುದನ್ನು ನೆನೆಯುತ್ತ ಮನಸ್ಸು ತಲ್ಲಣಗೊಂಡಿದೆ. ನೂರು ವರ್ಷಗಳಿಂದಲೂ ನೂರಾರು ಕೋಟಿ ರೂಪಾಯಿ ಹಣ ವೆಚ್ಚದಿಂದ ಏರ್ಪಟ್ಟು ನಡೆಯುತ್ತಿರುವ ವಿದ್ಯಾವ್ಯಾಸಂಗ ಹೆಚ್ಚಾಗಿ ಫಲಕಾರಿಯಾಗದಿರುವ ವ್ಯಥೆ ಕೊರಗಿಸುತ್ತಿದೆ. ಹೀಗೆಯೆ ನಡೆದರೆ ಅನಂತಕಾಲ ಮುಗಿದರೂ ನಮ್ಮ ನಾಡು ಕಟ್ಟಲಾರದು; ನಮ್ಮ ನಾಗರಜೀವನ ಮೇಲ್ಪಡಲಾರದು.

ಪ್ರತಿಯೊಬ್ಬ ವ್ಯಕ್ತಿಯೂ ಶಿಕ್ಷಣದಿಂದ ಉತ್ತಮಗೊಂಡ ದೇಹಶಕ್ತಿ ಮನಶ್ಶಕ್ತಿಗಳಿಂದ ನಾಡಿನ ಸೌಭಾಗ್ಯಕ್ಕೆ ತನ್ನದೇ ಆದ ವಿಶೇಷ ಕಾಣಿಕೆಯನ್ನು ಸಲ್ಲಿಸುವಂತಾದ ಹೊರತು ದೇಶದ ಬದುಕು ಪುಷ್ಟಿಗೊಳ್ಳುವುದಿಲ್ಲ ಎಂಬುದು ಎಲ್ಲ ರಿಗೂ ತಿಳಿದ ತತ್ತ್ವ. ವ್ಯಕ್ತಿಯ ಸ್ವಂತ ಶಕ್ತಿ ಬಲಿತಂತೆಲ್ಲ ಅವನ ಸುತ್ತಲ ಆವರಣ ಮೇಲಾಗಲು ಸಾಧ್ಯವಾಗುವುದು. ಆವರಣದ ತುಂಬು ಸೌಕರ್ಯಗಳಿಂದ ವ್ಯಕ್ತಿ ಗುಣವೂ ಶಕ್ತಿಗಳೂ ಬಲಪಡುವುವು. ಇವೆರಡರ ಪರಸ್ಪರ ಸಹಾಯಕತೆಯಿಂದ ಒಟ್ಟು ಒಂದು ಕಾಲದ ಬದುಕು ರೂಪುಗೊಳ್ಳುವುದು. ಇಂದಿನ ವಿದ್ಯಾಭ್ಯಾಸ ಕ್ರಮದಲ್ಲಿ ಆವರಣಸೌಕರ್ಯ ಹೇಳಿಕೊಂಡು ಸಂತೋಷಪಡುವಂತಿಲ್ಲ. ಆವರಣ ಸಂಪತ್ತಿಯನ್ನು ನಿರ್ಮಾಣಮಾಡಿ ಅದರಿಂದ ಜೀವನವನ್ನು ಬೆಳಸತಕ್ಕದ್ದಾಗಿಲ್ಲ ವ್ಯಕ್ತಿಶಕ್ತಿ. ಆದ್ದರಿಂದಲೇ ಇಷ್ಟು ಸತ್ತ್ವದಾರಿದ್ರ್ಯ ನಮ್ಮಲ್ಲಿ. ಬದುಕಿನ ಎಲ್ಲ ರಂಗ ಗಳಲ್ಲಿಯೂ ಕೃತಕಾರ್ಯವಾಗಿ ಆಚಂದ್ರಾರ್ಕವಾದ ಸ್ಮಾರಕಗಳನ್ನು ಬಿಟ್ಟುಹೋದ

ಪ್ರಾಚೀನರು ಮಾಡಬಹುದಾದ್ದೇನು? ಬುದ್ಧಿಶಕ್ತಿಯಲ್ಲಾಗಲಿ ಆಶೆ ಆಕಾಂಕ್ಷೆಗಳಲ್ಲಾಗಲಿ ಯಾರಿಗೂ ಯಾವ ಅಂಶಗಳಲ್ಲಿಯೂ ಕಡಮೆಯಲ್ಲದ ಇಂದಿನ ನಮ್ಮ ಜೀವನ ಹೀಗೆ ಬರಡಾಗಬೇಕಾದುದೇನು? ಇಂದಿನ ಪ್ರಯತ್ನಗಳು ಶ್ರಮಕ್ಕೂ ವೆಚ್ಚಕ್ಕೂ ತಕ್ಕಷ್ಟು ಫಲಕಾರಿಯಾಗದೆ—ವಿದ್ಯಾವಂತರೆನಿಸಿಕೊಂಡ ಜನರಲ್ಲಿ ಕೂಡ—ಕ್ರಿಯಾಶಕ್ತಿಯೂ ನಾಡಿನ ಕಲ್ಯಾಣದರ್ಶನವೂ ಬಹುಮಟ್ಟಿಗೆ ಇಲ್ಲದೆ ಇರುವುದನ್ನು ನೋಡಿದರೆ ನಮ್ಮ ಶಿಕ್ಷಣ ಕೃತಕಾರ್ಯವಾಗಿಲ್ಲ ಎನ್ನಿಸುತ್ತದೆ. ಎಲ್ಲ ವಿದ್ಯಾಕಾರ್ಯದ ಫಲ: ಉತ್ತಮರಾದ ಕರ್ತೃತ್ವಶಾಲಿಗಳ ಹುಟ್ಟು; ತಯಾರಿಕೆ. ಅಂಥವರು ಹೆಚ್ಚು ಸಂಖ್ಯೆಯಲ್ಲಿ ಹುಟ್ಟುವಂತೆ ಮಾಡತಕ್ಕ ಆವರಣದ ಬಲವೂ, ಅನುಕೂಲದ ಏರ್ಪಾಡೂ ಸರಕಾರ ಸಮಾಜ ವಿದ್ಯಾಸಂಸ್ಥೆಗಳಿಗೆ ಸೇರಿದ ಕೆಲಸ. ಜನ ಹುಟ್ಟಿ ಬೆಳೆದರೆ ನಾಡಿನ ಜೀವನ ಹತ್ತು ವರ್ಷದಲ್ಲಿ ಮೇಲಾಗುವುದು; ಹೊಸ ಜನದಿಂದ ಹೊಸ ಜಗತ್ತು ನಿರ್ಮಾಣವಾಗುವುದು. ಜೀವನ ಮೇಲಾದಂತೆಲ್ಲ ಮೇಲ್ತರದ ಜನವನ್ನು ನಿರ್ಮಾಣಮಾಡುವ ಅವಕಾಶ ಹೆಚ್ಚಾಗುವುದು. ಒಬ್ಬೊಬ್ಬನ ಸುತ್ತಲೂ ಒಂದೊಂದು ಪ್ರಭಾವಮಂಡಲ ಉಂಟಾಗಿ ಅಲ್ಲಿ ಉತ್ಸಾಹವೂ ಬಗೆಬಗೆಯ ಕಾರ್ಯಪ್ರಪಂಚಗಳೂ ಹುಟ್ಟಿ ಎಲ್ಲ ಸಾಧನ ಸಫಲವಾಗುವುದು. ನಮ್ಮ ಒಂದೊಂದು ಸಂಸ್ಥಾನ ಅಥವಾ ಒಂದೊಂದು ಪ್ರಾಂತದಷ್ಟು ಕೂಡ ದೊಡ್ಡವಲ್ಲದ ವಿದೇಶಗಳಲ್ಲಿ ಆರ್ಥಿಕ ಜೀವನವಾಗಲಿ ರಾಜಕೀಯ ಸಾಮಾಜಿಕ ಜೀವನಗಳಾಗಲಿ, ಜ್ಞಾನ ವಿಜ್ಞಾನ ಸಾಧನೆಯಾಗಲಿ ಪ್ರಪಂಚವನ್ನು ಬೆರಗುಗೊಳಿಸುವಷ್ಟು ಹಿರಿದಾಗಿ ಬೆಳೆಯುತ್ತಿವೆ. ಒಂದೊಂದು ಶಾಸ್ತ್ರವನ್ನು ವರ್ಷವರ್ಷಕ್ಕೆ ಹತ್ತು ಹೆಜ್ಜೆ ನೂರು ಹೆಜ್ಜೆ ನಡೆಸಿಕೊಂಡು ಹೋಗಬಲ್ಲ ಹಲವಾರು ಮಂದಿಯನ್ನು ಆ ಆವರಣಗಳು ಉಂಟುಮಾಡುತ್ತಿವೆ. ಆ ಆವರಣಗಳ ಶಕ್ತಿ ಏನು? ಆ ವಿದ್ಯಾಪ್ರಭಾವಗಳ ವೀರ್ಯವೇನು? ಇಷ್ಟು ಪ್ರಯತ್ನಪಟ್ಟರೂ ನಮ್ಮ ವಿದ್ಯಾಪದ್ಧತಿ ನಿಷ್ಫಲವಾಗಿ ನಮ್ಮಲ್ಲಿ ವಿದ್ಯಾವಂತರಾದ ಜನರನ್ನು—ಅಲ್ಲಿ ಇಲ್ಲಿ ಒಬ್ಬಿಬ್ಬರು ಮಹಾಸತ್ವರನ್ನುಳಿದು—ಕೇವಲ ಗುಹಾಧ್ವಸಿಗಳನ್ನಾಗಿ ಜಡರನ್ನಾಗಿ ಮಾಡುತ್ತಿರುವುದೇನು? ಈ ಸಂಗತಿಗಳನ್ನು ಯೋಚಿಸಿದರೆ ಯಾವ ತೇಪೆಯ ಕೆಲಸವಾಗಲಿ ಯಾವ ಸಣ್ಣ ಬೆಸುಗೆಯ ಪ್ರಯತ್ನವಾಗಲಿ ಈ ನಾಡನ್ನು ಈಗ ಬಲಪಡಿಸಲಾರದು ಎಂಬುದು ಖಂಡಿತವಾಗುವುದು. ನಮಗೆ ಈಗ ಬೇಕಾಗಿರುವುದು ನಿಸ್ಸತ್ವವಾದ ಸೊರಗಿದ ಈ ಜೀವನವನ್ನು ಸಂಪೂರ್ಣವಾಗಿ ಸರ್ವತೋಮುಖವಾಗಿ ಅರಳಿಸಬಲ್ಲ ಚೈತನ್ಯ. ಅದಾಗಬೇಕಾದರೆ ಮೇಲೆ ಹೇಳಿದಂತೆ ದೇಹದಾರ್ಢ್ಯ ಧೀಶಕ್ತಿ ಧೈರ್ಯ ದಕ್ಷತೆಗಳುಳ್ಳ ಜನ ಬೇಕು. ಒಂದೊಂದು ವಿದ್ಯಾಸಂಸ್ಥೆಯೂ ಒಂದು ಸೃಷ್ಟಿಚೈತನ್ಯವಾಗಬೇಕು; ಕ್ರಿಯೋತ್ಸಾಹ ಊಡಬಲ್ಲ

ಪ್ರೀತಿಯ ಒಂದು ಸಾಧನವೂ ಗರುಡಿಯೂ ಆವರಣವೂ ಆಗಬೇಕು. ಯಾವ ಉಪಕರಣಗಳನ್ನು ಬೇಕಾದರೆ ಅವುಗಳನ್ನು ಒದಗಿಸಿಕೊಂಡು ಮುಂದೆ ಮುಂದೆ ಧೈರ್ಯದಿಂದ, ನಂಬಿಕೆ ಸಂತೋಷಗಳಿಂದ ನಡೆಯಬಲ್ಲ ಶಕ್ತಿ ಹೊಮ್ಮಬೇಕು, ಚಿಮ್ಮಬೇಕು. ಇದಕ್ಕೆ ಬೇಕಾದುದು ಈ ಜನರಲ್ಲಿ ಪ್ರೇಮ, ವಿಶ್ವಾಸ, ಅಭಿಮಾನ, ಕಾರ್ಯನಿಷ್ಠೆ, ನಾಳಿನ ಮಂಗಳದ ಕಡೆಗೆ ನಾಡಿನ ಮಕ್ಕಳನ್ನು ಒಂದು ದೃಢದಿಂದ ನಡೆಸಬೇಕೆಂಬ ಚಲಿಸದ ಪ್ರತಿಜ್ಞೆ. ಈ ಭಾಗ್ಯ ಎಲ್ಲೆಲ್ಲಿಯೂ ಬೇಗನೆ ಉಂಟಾಗ ಬೇಕು ಮಾತ್ರ. ಇಲ್ಲವಾದರೆ ನಾವು ಸಿಕ್ಕಿದವರ ಕಾಲ್ತುಳಿತಕ್ಕೆ ಬಿದ್ದು ಅಡಗಿ ಹೋಗಬೇಕಾದೀತು. ತಡೆಯಲಾಗದ ಪ್ರಪಂಚಶಕ್ತಿಗಳ ಹುಚ್ಚುಹೊಳೆಯಲ್ಲಿ ಕೊಚ್ಚಿಹೋಗಬೇಕಾಗುವುದು. ಸಾರ್ಜೆಂಟ್ ಅವರು ಹೇಳಿದ 'ಕಾಲ ಮೀರುವ ಮುಂಚೆಯೇ' ಎಂಬ ನುಡಿಯನ್ನು ಆ ಅರ್ಥದಲ್ಲಿ ಮಾತ್ರವೇ ನಾವು ತೆಗೆದುಕೊಳ್ಳಲು ಬಯಸುತ್ತೇವೆ."—"ಕನ್ನಡ ನುಡಿ", ೪-೧೦-೧೯೪೦.

# ಪ್ರಾಚ್ಯ ಲೇಖನಾವಳಿ

**I.H.Q.—**June, 1940. (*Poussin Memorial Volume*, Part I).

1. 'The Life and Works of Madhwa'—By B. N. Krishnamurthi Sarma.
2. 'Kalidasa'—By S. K. De.

**J.O.R., Madras.—**Oct.–Dec., 1939.

1. 'Sukthirathnakara of Kalingaraya Surya'—By V. Raghavan.
2. 'Notes on the Ancient Political Geography of South India'—By M. Venkataramanaiya.

   [4 Prēhara: Paru-Viṣaya or Prēhara extended from the Gooty taluq in the north to Hindupur taluq in the south].
3. 'Theories about Ablaut', Part IV—By C. R. Sankaran.

**J.I.H.—**April, 1940.

1. 'The Intervening Age between Pariksit and Nanda'—By D. S. Triveda.

   [1500 or 1510 years and not 1050 or 2500].
2. 'Beginning of Chandragupta Maurya's Reign'—By H. C. Seth, (325 B.C.)
3. 'Chandraguptha the Great'—By P. T. Telang.

   [Vrshala=the powerful or great monarch].

**ಶರಣಸಾಹಿತ್ಯ—**ಆಗಸ್ಟ್, ೧೯೪೦.

೧. ಮಾಣಿಕ್ಯ ವಾಚಕರು ವೀರಶೈವರೇ ?—ಶ್ರೀಮಾನ್ ಎಂ. ಕೆ. ಲಿಂಗಯ್ಯನವರು, ಬಿ.ಎಸ್ ಸಿ.

[ಅವರು ಹಾಡಿದ ಕವನಗಳಲ್ಲಿ ವೀರಶೈವ ಮತದ ಅಥವಾ ತತ್ವದ ಹೆಸರೇ ಬಂದಿಲ್ಲ ; ಗುರು, ಲಿಂಗ, ಜಂಗಮಗಳ ಹೆಸರೂ ಇಲ್ಲ. ಶೈವರು ಶಿವನನ್ನು ಆರಾಧಿಸುವ ಸಾಮಾನ್ಯ ನಿಯಮಗಳಿಗನುಗುಣವಾಗಿಯೇ ಮಾಣಿಕ್ಯ ವಾಚಕರೂ ಶಿವನ ಆರಾಧನೆ ಮತ್ತು ಸ್ತೋತ್ರಗಳನ್ನು ಮಾಡಿದ್ದಾರೆ. ತಮಿಳು ಶೈವ ಆಚಾರ್ಯರಲ್ಲಿ ಅನೇಕರಿಗೆ ವೀರಶೈವವೆಂದರೇನು ಎಂಬುದು ತಿಳಿದಿದ್ದಂತೆ ತೋರುತ್ತಿಲ್ಲ. ಕೇವಲ ಶಿವನನ್ನೇ ಅನನ್ಯ ಶರಣಭಾವದಿಂದ ಪೂಜಿಸುತ್ತ ಬಂದನಿಮಿತ್ತ ಅವರಿಗೆ ಕೆಲವು ಕಡೆ ವೀರಶೈವರೆಂಬ ಹೆಸರು ಬಂದಂತೆ ತೋರುತ್ತದೆ ; ಆದರೆ ಈ 'ವೀರಶೈವರು, ನಿಜವಾದ ವೀರಶೈವ ಮತದ ಸಿದ್ಧಾಂತಗಳನ್ನು ಅರಿತು, ಆಚರಿಸಿದರೆಂದು ಹೇಳಲು ಆಧಾರಗಳೇ ಸಿಕ್ಕುವುದಿಲ್ಲ. ಇದರ ಜತೆಗೆ ಮಾಣಿಕ್ಯವಾಚಕರು

ಲಿಂಗಧಾರಿಗಳಾಗಿದ್ದರೆನ್ನಲು ಯಾವ ಆಧಾರವೂ ಇಲ್ಲ. ಅಥವಾ ಅವರಿಗೆ ದೀಕ್ಷೆಯಿತ್ತ ಗುರುವು ಯಾರು—ಎಂಬುದನ್ನು ಅರಿಯಲು ಅವಕಾಶವಿಲ್ಲ. ವೀರಶೈವಮತದ ಮುಖ್ಯ ಲಕ್ಷಣವಾದ ಗುರು ಲಿಂಗ ಜಂಗಮ ಇಷ್ಟಲಿಂಗ ಮುಂತಾದುವುಗಳ ವಿಷಯವೇ ಅವರ ಗ್ರಂಥಗಳಲ್ಲಿ ಬರದಿರುವುದು ಮತ್ತು ಅವರು ವೀರಶೈವರ ಮುಖ್ಯ ಲಕ್ಷಣವಾದ ಲಿಂಗ ಧಾರಣೆ ಮಾಡದಿದ್ದುದು—ಇವನ್ನು ಕಂಡರೆ ಅವರು ಕೇವಲ ಶಿವಶರಣರಾಗಿದ್ದರೇ ವಿನಾ, ವೀರಶೈವರಾಗಿರಲಿಲ್ಲವೆಂದು ಧಾರಾಳವಾಗಿ ಹೇಳಬಹುದು.]

೨. ಶ್ರೀ ಚಾಮುಂಡರಾಯ—ವಿದ್ವಾನ್ ಕೆ. ಭುಜಬಲಶಾಸ್ತ್ರಿಗಳು.

೩. ಲಿಂಗಧಾರಣ ಮತ್ತು ಶಿವದೀಕ್ಷೆ—ಕೀರ್ತನಕೇಸರಿ ಬಿ. ಶಿವಮೂರ್ತಿ ಶಾಸ್ತ್ರಿಗಳು.

[ಲಿಂಗಧಾರಣವು ವೀರಶೈವರ ಮುಖ್ಯ ಚಿಹ್ನೆಯಾದರೂ ಲಿಂಗಧಾರಿಗಳೆಲ್ಲರೂ ವೀರ ಶೈವರೆನಿಸುವುದಿಲ್ಲ. . . . ಶಿವದೀಕ್ಷಾದಿ ಸಂಸ್ಕಾರಗಳೂ ಅಷ್ಟಾವರಣ ಪಂಚಾಚಾರ ಷಟ್‌ಸ್ಥಲ, ಲಿಂಗಾಂಗ ಸಾಮರಸ್ಯ ಮೊದಲಾದ ಸಾಧನಸಂಪತ್ತುಗಳೂ ಇಲ್ಲದ ಸಾಧಕನು ವೀರಶೈವನೆನಿಸಲು ಅರ್ಹನೆನಿಸಿಕೊಳ್ಳಲಾರನು. . . . ಲಿಂಗ ಎಂಬ ಈಶ್ವರ ವಾಚಕವಾದ ಈ ಹೆಸರು ಪರಬ್ರಹ್ಮನಿಗೆ ಬಹು ಪ್ರಾಚೀನಕಾಲದಿಂದ ರೂಢಿಯಲ್ಲಿದೆ. . . . ಶಿವದೀಕ್ಷೆಯಲ್ಲಿ ವೇಧಾಕ್ರಿಯಾಮನ್ತ್ರ ಎಂಬ ಮೂರು ಭಾಗಗಳಿವೆ. ಗುರುವು ಶಿಷ್ಯನ ತಲೆಯಮೇಲೆ ಹಸ್ತವಿಟ್ಟು ಅನುಗ್ರಹಿಸುವುದು ವೇಧಾದೀಕ್ಷೆಯೆಂದೂ ಶಿಷ್ಯನ ಬಲಗಿವಿಯಲ್ಲಿ ಪ್ರಣವ ಪಂಚಾಕ್ಷರಿಯನ್ನು ಉಪದೇಶವಾಡುವುದು ಮಂತ್ರದೀಕ್ಷೆಯೆಂದೂ ಶಿಷ್ಯನ ವಾಮಹಸ್ತಕ್ಕೆ ಲಿಂಗವನ್ನು ಅನುಗ್ರಹಿಸುವುದು ಕ್ರಿಯಾದೀಕ್ಷೆಯೆಂದೂ ಹೇಳಲ್ಪಡುತ್ತದೆ. ಈ ಶಿವದೀಕ್ಷೆಯ ಕಾಲದಲ್ಲಿ ಶ್ರೀ ಗುರುವು ತನ್ನ ಮಂತ್ರಶಕ್ತಿಯಿಂದ ಶಿಷ್ಯನನ್ನು ಬಹುಜನ್ಮಗಳಿಂದ ಅನುಸರಿಸಿಕೊಂಡು ಬಂದಿರುವ ಮಾತಾಪಿತೃಸುತರೆಂಬ ಭಾವನೆಯ ಆಣವಮಲವನ್ನೂ ಕುಲ ಜಾತಿ ಗೋತ್ರಗಳ ಭ್ರಾಂತಿಯಿಂದ ಕೂಡಿದ ಮಾಯಾಮಲವನ್ನೂ ನಿವೃತ್ತಿಮಾಡುತ್ತಾನೆ. ಹೀಗೆ ಮಲತ್ರಯಗಳು ನಾಶವಾಗುವುದರಿಂದ ಶಿವದೀಕ್ಷಾಬದ್ಧನಾದ ಜೀವನು ಸುಸಂಸ್ಕೃತನಾಗಿ ಪರಿಶುದ್ಧನಾದ ಜೀವ ಎಂಬ ಅರ್ಥವುಳ್ಳ 'ಅಂಗ' ಎಂಬ ಹೆಸರಿನಿಂದ ವ್ಯವಹರಿಸಲ್ಪಡುತ್ತಾನೆ. ಅವನು ತನ್ನ ಮತಸಂಪ್ರದಾಯದಂತೆ ನಡೆದು ಲಿಂಗರೂಪೀ ಬ್ರಹ್ಮನನ್ನು ಸೇರಲು ತನ್ನ ನಾಮರೂಪಗಳನ್ನು ಕಳೆದುಕೊಂಡು ಲಿಂಗಸ್ವರೂಪನೇ ಆಗುತ್ತಾನೆ.]

೪. ವೀರಶೈವ ವಾಙ್ಮಯಾವತಾರವೂ, ಡಾ|| ನಾರಾಯಣರಾಯರೂ, ಲೇಖಾಂಕ ೨:—ಶ್ರೀಮಾನ್ ಕೀರ್ತನಕೇಸರಿ ಶಿವಮೂರ್ತಿ ಶಾಸ್ತ್ರಿಗಳು.

[ಶ್ರೀಕರಭಾಷ್ಯವು ಬಸವನಿಗಿಂತ ಕೊಂಚ ಹಿಂದಿನದು ; ಸಿದ್ಧಾಂತಶಿಖಾಮಣಿಯು ಅದಕ್ಕೆ ಕೊಂಚ ಹಿಂದಿನದು ಅಥವಾ ಸಮಕಾಲದ್ದು.]

**ಶಿವಾನುಭವ—**ಆಗಸ್ಟ್—ಸೆಪ್ಟೆಂಬರ್, ೧೯೪೦.

೧. ಸರ್ವಜ್ಞನ ವಚನಗಳ ಸ್ವಾರಸ್ಯ ೩—ಶ್ರೀ ಶಿವಮೂರ್ತಿ.

೨. ವೀರಶೈವನೀತಿ—ಶ್ರೀ. ವೀರಪ್ಪ ಯುಗಟಿ.

೩. ತ್ರಿವಿಧದಾಸೋಹ—ಶ್ರೀ. ಬ. ಚ. ಪಟ್ಟೇದ.
೪. ಶೂನ್ಯಸಂಪಾದನೆಯ ರಹಸ್ಯ—ಶ್ರೀ. ಕಲ್ಯಾಣಪ್ಪ ಬ್ಯಾಳಿ.
೫. ಶಿವಾನುಭವ ಶಬ್ದಕೋಶ—ರಾ|| ಸಾ|| ಪಿ. ಜಿ. ಹಳಕಟ್ಟಿ.
೬. ರಾಘವಾಂಕ ಪಂಡಿತನ ಲಿಂಗವಂತಿಕೆಯ ಐತಿಹ್ಯ—ಶ್ರೀ. ಶಿವಮೂರ್ತಿ.
೭. ವೀರಶಂಕರ ದಾಸಿಮಯ್ಯನ ವಚನ, ೧.
೮. ಸಂಕೀರ್ಣ ವಚನಗಳು, ಭಾಗ ೨

**ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ**—ಅಕ್ಟೋಬರ್—ಡಿಸೆಂಬರ್, ೧೯೪೦.

೧. ವೊಡ್ಡಾರಾಧನೆ—(ಸಂಪಾ.) ಶ್ರೀ. ಡಿ. ಎಲ್. ನರಸಿಂಹಾಚಾರ್, ಎಂ.ಎ.
೨. ಧರ್ಮನಾಥಪುರಾಣ ಮತ್ತು ಬಾಹುಬಲಿಪಂಡಿತ—ಶ್ರೀ. ಎನ್. ಅನಂತ ರಂಗಾಚಾರ್, ಎಂ.ಎ.

**ವಿಭೂತಿ** (ತೆಲುಗು)—ಫೆಬ್ರವರಿ, ೧೯೪೦.

೧. ಆಚಾರ್ಯ ಪಂಡಿತುಡು—(ಸಂಪಾ.) ಶ್ರೀ. ಬಂಡಾರು ತಮ್ಮಯ್ಯಗಾರು.
೨. ಡಾ. ಚಿ. ನಾರಾಯಣರಾವು, ಎಂ.ಎ. ಗಾರಿ ಪಂಡಿತಾರಾಧ್ಯ ಚರಿತ್ರ ಪೀಠಿಕ—ಪಂ. ಚಿದಿರೆಮಠಮು ವೀರಭದ್ರ ಶರ್ಮಗಾರು.

**ವಿಭೂತಿ** (ತೆಲುಗು)—ಏಪ್ರಿಲ್, ೧೯೪೦.

೧. ಆಚಾರ್ಯ ಪಂಡಿತುಡು—ಶ್ರೀ. ಬಂಡಾರು ತಮ್ಮಯ್ಯಗಾರು.
೨. ಶಿವತತ್ತ್ವಸಾರ ಕರ್ತ ಪಂಡಿತುಡು ಕಾಡಟ!—ಡಾ. ಚಿ. ನಾರಾಯಣರಾವು ಗಾರಿ ವಿಚಿತ್ರಯುಕ್ತಿ—ಪಂಡಿತ ಚಿದಿರೆಮಠಮು ವೀರಭದ್ರ ಶರ್ಮಗಾರು.

**ವಿಭೂತಿ** (ತೆಲುಗು)—ಜೂನ್, ೧೯೪೦.

೧. ಪಂಡಿತಾರಾಧ್ಯ ಚರಿತ್ರಮು—ಶ್ರೀ. ವೇಟೂರಿ ಪ್ರಭಾಕರ ಶಾಸ್ತ್ರಿಗಾರು.
೨. ಬಸವೇಶ್ವರುನಿಗೂರ್ಚಿನ ಶಾಸನ ಸಾಮಗ್ರಿ—ಶ್ರೀ. ಬಂಡಾರು ತಮ್ಮಯ್ಯ ಗಾರು.

---

# ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರ ಪುಸ್ತಕಮಾಲೆ

## ೧೯೩೮–೩೯ರಲ್ಲಿ ಅಚ್ಚಾಗಿರುವ ಪುಸ್ತಕಗಳು

ಬೆಲೆ: ಸಾಧಾರಣ ಪ್ರತಿಗೆ ೨ ಆಣೆ; ಉತ್ತಮ ಪ್ರತಿಗೆ ೩ ಆಣೆ

೧. ಖಗೋಳಶಾಸ್ತ್ರಪ್ರವೇಶ—ಸಿ. ಎನ್. ಶ್ರೀನಿವಾಸ ಅಯ್ಯಂಗಾರ್, ಡಿ.ಎಸ್‌ಸಿ.
೨. ಸಮಾಜದ ರೋಗರುಜಿನಗಳು—ಜಿ. ಹನುಮಂತರಾವ್, ಎಂ.ಎ.
೩. ತೆರಿಗೆ—ಬಿ. ಆರ್. ಸುಬ್ಬರಾವ್, ಎಂ.ಎ.
೪. ನವರತ್ನಗಳು—ಎಚ್. ಸುಬ್ಬಾಜೋಯಿಸ್, ಎಂ.ಎಸ್‌ಸಿ.
೫. ನಮ್ಮ ಹಳ್ಳಿಗಳು—ಜಿ. ಎನ್. ಕೃಷ್ಣಮೂರ್ತಿ, ಎಂ.ಎ.

## ೧೯೩೯–೪೦ರಲ್ಲಿ ಅಚ್ಚಾಗಿರುವ ಪುಸ್ತಕಗಳು

೬. ಕುಮಾರವ್ಯಾಸ—ಎಸ್. ವಿ. ರಂಗಣ್ಣ, ಎಂ.ಎ.
೭. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್, ಎಂ.ಎ.
೮. ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ, ಎಂ.ಎ.
೯. ವಿದ್ಯುಚ್ಛಕ್ತಿಯ ವೈಭವ—ಬಿ. ಎ. ಕೃಷ್ಣಸ್ವಾಮಿರಾವ್, ಎಂ.ಎಸ್‌ಸಿ.
೧೦. ಪಂಪ—ಟಿ. ಎನ್. ಶ್ರೀಕಂಠಯ್ಯ, ಎಂ.ಎ.
೧೧. ಪ್ರಾಣಜೀವನ—ಎ. ನಾರಾಯಣರಾವ್, ಎಂ.ಎಸ್‌ಸಿ.
೧೨. ಕನಸುಗಳು—ಎನ್. ಎಸ್. ನಾರಾಯಣಶಾಸ್ತ್ರಿ, ಎಂ.ಎ.
೧೩. ಮದುವೆಯ ಇತಿಹಾಸ—ಎನ್. ಕಸ್ತೂರಿ, ಎಂ.ಎ., ಬಿ.ಎಲ್.
೧೪. ನಮ್ಮ ಆರ್ಥಿಕ ದೃಷ್ಟಿ—ಎಸ್. ಗೋಪಾಲಸ್ವಾಮಿ, ಎಂ.ಎ.
೧೫. ವಾಯುಗುಣ—ಕೆ. ಶೇಷಾದ್ರಿ ಅಯ್ಯಂಗಾರ್, ಎಂ.ಎಸ್‌ಸಿ., ಎಲ್‌ಎಲ್.ಬಿ.
೧೬. ಬೆಳಕು—ಟಿ. ಎಸ್. ಸುಬ್ಬರಾಯ, ಎಂ.ಎಸ್‌ಸಿ.
೧೭. ಕನ್ನಡ ಕಾದಂಬರಿ—ವಿ. ಸೀತಾರಾಮಯ್ಯ, ಎಂ.ಎ.

## ೧೯೪೦–೪೧ ರಲ್ಲಿ ಅಚ್ಚಾಗಿರುವ ಪುಸ್ತಕಗಳು

೧೮. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್, ಎಂ.ಎ.
೧೯. ಇಂಗ್ಲೆಂಡಿನ ರಾಜಕೀಯ ಬೆಳವಣಿಗೆ—ಪಿ. ಜಿ. ಸತ್ಯಗಿರಿನಾಥನ್, ಎಂ.ಎ.
೨೦. ಕಣ್ಣು ಮತ್ತು ಅದರ ರಕ್ಷಣೆ—ಡಾ|| ಡಿ. ಶಾಮಣ್ಣ, ಬಿ.ಎ., ಎಂ.ಬಿ., ಬಿ.ಎಸ್.
೨೧. ಸಾರ್ವಜನಿಕ ವೆಚ್ಚ—ಎಂ. ಎಚ್. ಗೋಪಾಲ್, ಎಂ.ಎ., ಪಿಎಚ್.ಡಿ.

ವಾರ್ಷಿಕ ಚಂದಾ—ಸಾಧಾರಣ ಪ್ರತಿ ರೂ. ೧—೪—೦
ಉತ್ತಮ ಪ್ರತಿ ರೂ. ೨—೦—೦

**ಜಿ. ಹನುಮಂತರಾವ್, ಎಂ.ಎ.,**
ಸಂಪಾದಕ, ಪ್ರಚಾರ ಪುಸ್ತಕಮಾಲೆ,
ಮಹಾರಾಜರವರ ಕಾಲೇಜು, ಮೈಸೂರು.

# ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದ ಪ್ರಕಟನೆಗಳು

**ಇಂಗ್ಲಿಷ್ ಗೀತಗಳು**—ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್. ಅವರಿಂದ. ಬೆಂಡು ಕಾಗದದ ಪ್ರತಿ, ಬೆಲೆ ರೂ. ೧-೮-೦.

**ಉಮರನ ಒಸಗೆ**—ಡಿ. ವಿ. ಗುಂಡಪ್ಪನವರಿಂದ. ಬೆಲೆ ರೂ. ೧-೦-೦.

**ಮುದ್ದಣ**—ನಂದಳಿಕೆ ಲಕ್ಷ್ಮೀನಾರಣಪ್ಪನವರ ಜೀವನಚರಿತ್ರೆ ಮತ್ತು ಗ್ರಂಥಗಳ ವಿಮರ್ಶೆ. (ಪ್ರತಿಗಳು ಮುಗಿದುಹೋಗಿವೆ) ಬೆಲೆ ರೂ. ೨-೦-೦.

**ಗದಾಯುದ್ಧ ನಾಟಕಂ** (ದ್ವಿತೀಯ ಮುದ್ರಣ)—ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್. ಅವರಿಂದ ಸಂಪಾದಿತವಾದದ್ದು. ಬೆಲೆ ೦-೮-೦.

**ಭಕ್ತಿಭಾಂಡಾರಿ ಬಸವಣ್ಣನವರು** (ದ್ವಿತೀಯ ಮುದ್ರಣ)—ಎಂ. ಆರ್. ಶ್ರೀನಿವಾಸಮೂರ್ತಿ, ಬಿ.ಎ. ಅವರಿಂದ. ಬೆಲೆ ರೂ. ೧-೦-೦.

**ತಾವರೆ**—ಎಂ. ವೆಂಕಟೇಶ ಐಯಂಗಾರ್, ಎಂ.ಎ. ಅವರಿಂದ ರಚಿತವಾದ ಪದ್ಯ ಕಾವ್ಯ (ಸಚಿತ್ರ). ಬೆಲೆ ೦-೧೨-೦.

**ಸೋಕ್ರಟೀಸನ ಮರಣ**—ಎಸ್. ಜಿ. ಶಾಸ್ತ್ರಿ, ಬಿ.ಎ., ಎಂ.ಎಸ್‌ಸಿ. ಅವರಿಂದ. ಡಿ. ವಿ. ಗುಂಡಪ್ಪನವರ ಅವತರಣಿಕೆಯೊಡನೆ. ಬೆಲೆ ರೂ. ೧-೦-೦.

**ಚೀನಾದೇಶದ ಬೌದ್ಧ ಯಾತ್ರಿಕರು**—ಜಿ. ಪಿ. ರಾಜರತ್ನಂ, ಎಂ.ಎ. ಅವರಿಂದ. ಎಂ. ಎಚ್. ಕೃಷ್ಣ, ಎಂ.ಎ., ಡಿ.ಲಿಟ್. ಅವರ ಮುನ್ನುಡಿಯೊಡನೆ. ರೂ. ೧.

**ಭಾಸನ ಏಕಾಂಕ ನಾಟಕಗಳು**—ಎಲ್. ಗುಂಡಪ್ಪ, ಎಂ.ಎ. ಅವರಿಂದ. ಸಾದಾ ಪ್ರತಿ, ಬೆಲೆ ರೂ. ೧-೦-೦ ; ಕ್ಯಾಲಿಕೋ ಪ್ರತಿ, ಬೆಲೆ ರೂ. ೧-೮-೦.

**ಷೇಕ್ಸ್‌ಪಿಯರ್ ನಾಟಕ ಕಥೆಗಳು (ನಾಲ್ಕು)**—ಲಕ್ಷ್ಮೀನರಸಿಂಹಶಾಸ್ತ್ರಿಗಳಿಂದ. ಎಸ್. ವಿ. ರಂಗಣ್ಣ, ಎಂ.ಎ. ಅವರ ಅವತರಣಿಕೆಯೊಡನೆ. ಬೆಲೆ ೦-೧೨-೦.

**ಮಲೆನಾಡಿನ ಚಿತ್ರಗಳು (ಸಚಿತ್ರ)**—ಕೆ. ವಿ. ಪುಟ್ಟಪ್ಪ, ಎಂ.ಎ. ಅವರಿಂದ. ಬೆಲೆ ರೂ. ೧-೦-೦.

**ಭಾಸಕವಿ**—ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ. ಅವರಿಂದ. ಬೆಲೆ ರೂ. ೧-೪-೦.

**ವಿಗಡ ವಿಕ್ರಮರಾಯ**—ಸಂಸ ವಿರಚಿತ (ಎ. ಡಿ. ಎ. ಅವರಿಂದ ಪ್ರಕಾಶಿತವಾದ ದ್ವಿತೀಯ ಮುದ್ರಣ). ಬೆಲೆ ೦-೧೨-೦.

**ಮೈಸೂರು ದೇಶದ ವಾಸ್ತುಶಿಲ್ಪ (ಸಚಿತ್ರ),** ಭಾಗ ೧—ಬಿ. ವೆಂಕೋಬರಾವ್, ಬಿ.ಎ. ಅವರಿಂದ. ಬೆಲೆ ರೂ. ೫-೦-೦.

**ಭಾಸಕವಿಯ ಚಾರುದತ್ತ**—ಎಲ್. ಗುಂಡಪ್ಪ, ಎಂ.ಎ. ಅವರಿಂದ. ಬೆಲೆ ೦-೮-೦.

**ಕುಮಾರವ್ಯಾಸ ಪ್ರಶಸ್ತಿ**—(ಮಹಾರಾಜಾ ಕಾಲೇಜಿನ ಕರ್ಣಾಟಕ ಸಂಘದಿಂದ ಪ್ರಕಾಶಿತವಾದದ್ದು) ಕ್ಯಾಲಿಕೊ ಪ್ರತಿ ರೂ. ೨-೮- ; ಸಾದಾ ರೂ. ೨.

# ಪ್ರಥಮ ಕನ್ನಡ-ಕನ್ನಡ ಅರ್ಥಕೋಶ

## ಕನ್ನಡದ ಯಾವತ್ತು ಹಳೆ, ಹೊಸ ಸಾಹಿತ್ಯಗಳಲ್ಲಿ ಬಳಸಿರುವ 20,000 ಶಬ್ದಗಳಿಗೆ ಅರ್ಥ.

ಪೌರಾಣಿಕ ಅಂಕಿತನಾಮುಗಳ ಚುಟುಕಿನ ಟಿಪ್ಪಣಿ ಸಹಿತ

ಡೆಮಿ $\frac{1}{8}$

**500** ಪುಟಗಳು

ಕೆಲಿಕೊ ರಟ್ಟು

102 ಕವಿಚು ಕಳಕಳಿ

—ಸಮಯ ಕಾವ್ಯಸಮಯ; ಕವಿಗೆ ವಿಶೇಷವಾದ ರೂಪ; ಕವಿಪದ್ಧತಿ.
ಕವಿಚು (ಕವಚು) ಮೊಗಚು, ಅಡಿಮೇಲಾಗು; ಆವರಿಸು, ಮುತ್ತು; ಮೇಲೆ ಹೋಗುವಂತೆ ಮಾಡು.
ಕವಿಲೆ (ದ್ಭ) ಕಪಿಲೆ, ಹಳದಿ ಕಂದು ಬಣ್ಣ.
ಕವಿಲ್ತಕಾಸೆ ಕಪಿಲ ಬಣ್ಣದ ವಸ್ತ್ರ.
ಕವುಚು (ನೋಡು: ಕವಿಚು).
ಕವುರು (ಕಮರು) ದುರ್ವಾಸನೆ; ಹೊತ್ತಿದ ನಾತ.
—ಇಡು ದುರ್ವಾಸನೆ ಹೊಡೆ.
—ಏಳು ನಾತ ಹೊರಡು.
ಕವುಳು ಕಪೋಲ, ಕೆನ್ನೆ;
ಕವುಳುಡೆ ತಲೆದಿಂಬು; ಗಾದಿ.
ಕವುಂಗು (ಕೌಂಗು) ಕಂಗು, ಕ್ರಮುಕ (ಸಂ), ಅಡಕೆಯ ಮರ.
ಕವೆ ಕೌರು, ಕವಲು; ರೆಂಬೆ.
ಕವ್ಯ ಪಿತೃಗಳಿಗೆ ಅರ್ಪಿಸುವ ಪಿಂಡ ಮೊದಲಾದುವು.
ಕವ್ವರಿ ಚಾಂಚಲ್ಯ, ಸುಳಿ; ಸಂಭ್ರಮ.
ಕಶೇರುಕ ಬೆನ್ನಿನ ಮುಖ್ಯ ನರ.
ಕಷ ಉಜ್ಜುವ, ತಿಕ್ಕುವ.
—ಣ ಉಜ್ಜುವಿಕೆ.
ಕಷಾಯ ಗಿಡಮೂಲಿಕೆಗಳನ್ನು ಬೇಯಿಸಿ ತೆಗೆದ ಸಾರ; ಭಾವಾತಿರೇಕ; ಕಾವಿ ಬಣ್ಣ.
ಕಷಾಯಾಂಬರ ಕಾವಿಬಟ್ಟೆ.
ಕಷ್ಟ ತೊಡಕು, ತೊಂದರೆ; ಸಂಕಟ.
ಕಸ ಉಪಯೋಗವಿಲ್ಲದ ವಸ್ತು, ಕೆಲಸಕ್ಕೆ ಬಾರದ ದೂಳು ಮೊದಲಾದುದು.
ಕಸರತ್ತು ಚಮತ್ಕಾರ; ಚಮತ್ಕಾರದ ಅಂಗ ಸಾಧನೆ; ವ್ಯಾಯಾಮ.
ಕಸರು ಬೇಸರ; ಕೊರತೆ; ಕೊಸರು; ಕೊಳೆ; ಬಿರುಕು ಬಿಡು; ಗಂಟಲುಕೆರೆ.
—ಇಕೆ ಬೇಸರಿಕೆ; ಕೊರತೆ.
ಕಸವರ (ದ್ಭ) ಕಾರ್ತಸ್ವರ (ಸಂ), ಆರ್ತಧ್ವನಿ; ಚೀರಾಟ; ಚಿನ್ನ, ಬಂಗಾರ, ಹೊನ್ನು; ದ್ರವ್ಯ.
ಕಸವಿಸಿ ಚೌಕಸಿ.
ಕಸಿ ಒಂದು ಗಿಡವನ್ನು ಇನ್ನೊಂದಕ್ಕೆ ಸೇರಿಸುವುದು.
ಕಸಿಕಿಸಿ ಸ್ಪರ್ಧೆ.
ಕಸುಗಾಯಿ ಕಸುರುಗಾಯಿ, ದೋರೆಕಾಯಿ, ಹಣ್ಣಾಗದ ಕಾಯಿ, ಅರೆಗಾಯಿ.
ಕಸುವು ತ್ರಾಣ, ಬಲ, ಶಕ್ತಿ.
ಕಸೂತಿ ಹೂಗೆಲಸ; ಹೊಲಿಗೆಯ ಮೂಲಕ ಚಿತ್ರ ಕೆಲಸ.
ಕಸೆ ಚಾಚು; ಒಂದು ಗಿಡಕ್ಕೆ ಇನ್ನೊಂದನ್ನು ಹೊಂದಿಸಿ ಕೃಷಿಮಾಡುವುದು; ಕಸಿ; ಕವಚ; ಕಟ್ಟುವ ಹಗ್ಗ; ದಾರ; ಹುರಿ.
ಕಸ್ತು ನೋವು; ಕಷ್ಟ.
ಕಸ್ತೂರಿ ಕತ್ತುರಿ, ಒಂದು ಜಾತಿಯ ಪ್ರಾಣಿಯಿಂದ ಹೊರಡುವ ಸುಗಂಧವಸ್ತು.
—ಮೃಗ ಕಸ್ತೂರಿ ಕೊಡುವ ಪ್ರಾಣಿ.
ಕಹಳೆ (ಕಾಳೆ) ತುತ್ತೂರಿ; ಒಂದು ವಾದ್ಯ.
ಕಹಿ ಒಂದು ರೀತಿಯ ರುಚಿ; ಅರುಚಿ.
ಕಹೋದ ಅಷ್ಟಾವಕ್ರನ ತಂದೆಯಾದ ಒಬ್ಬ ಬ್ರಾಹ್ಮಣ.
ಕಳ್ (ಕಳ್ಳು) ಮದ್ಯ, ಹೆಂಡ; ರಸ; ಕಳವು ಮಾಡು.
ಕಳ ಕಲ (ಸಂ), ಮನೋಹರ, ಮಧುರ; ಕಣ; ಯುದ್ಧಭೂಮಿ; ಜೂಜಿನ ರಂಗ.
ಕಳಕಳ ಕಲಕಲ, ಪಕ್ಷಿಗಳ ಧ್ವನಿ; ಗದ್ದಲ; ಜಂಕೆ.
ಕಳಕಳಿ ಮನೋವ್ಯಥೆ; ವ್ಯಾಕುಲತೆ, ಕಳವಳ; ಉತ್ಸಾಹ.

ಚಿಕ್ಕದಾಗಿ ತೋರಿಸಿದ ಮಾದರಿ ಪುಟ.

ಬೆಲೆ: $2\frac{1}{2}$ ರೂ.

ಈ ಸಂಸ್ಕರಣದಲ್ಲಿ ಸಹಕರಿಸಿದ ವಿದ್ವಾಂಸರು:—

ಶ್ರೀ. ಬಿ. ಶಂಕರನಾರಾಯಣ; ಶ್ರೀ. ಐ. ಶಿವರಾಮಯ್ಯ; ಶ್ರೀ. ಟಿ. ನಾರಾಯಣ ಭಟ್; ಶ್ರೀ. ಹು. ಚೆಂಗೇರಿ, ಎಮ್.ಎ., ಬಿ.ಟಿ.; ಶ್ರೀ. ವಿ. ಸೀತಾರಾಮಯ್ಯ, ಎಮ್.ಎ.

ಸಿರಿಗನ್ನಡ

# ಅರ್ಥ ಕೋಶ



ಸಂಪಾದಕ:—

**ಶಿವರಾಮ ಕಾರಂತ**




ವಿಕ್ರಮ ಸಂವತ್ಸರ] —೮೫— [ಸಂಕ್ರಾಂತಿಯ ಸಂಚಿಕೆ






ಮೈಸೂರು :
ಮೈಸೂರು ವಿಶ್ವವಿದ್ಯಾನಿಲಯ
೧೯೪೧

ಸಂಪುಟ ೨೨] [ಸಂಚಿಕೆ ೩

# ವಿಷಯ ಸೂಚಿಕೆ



ಸರ್ ಆಲಿವರ್ ಜೋಸೆಫ್ ಲಾಡ್ಜ್ ಅವರು (೧೮೫೧–೧೯೪೦)

ಪುಟ ೧೦೧]                [ಫೋಟೋ—ಡಾ|| ಎಲ್. ಶೀಬಯ್ಯನವರಿಂದ




ವಿಕ್ರಮ ಸಂವತ್ಸರ — ೮೫ — ಸಂಕ್ರಾಂತಿಯ ಸಂಚಿಕೆ

# ಅಶೋಕನ ವಿಜಯ

ದೇವಲೋಕದ ಗಂಗೆ, ದಿಗ್ದಿಗಂತಂ ಸೀಳೆ,
ಭೋರ್ಗರೆದು ನೊರೆನೊರೆಯ ಧೀರಪ್ರವಾಹದಲಿ
ಧರೆಗೆ ಧುಮ್ಮಿಕ್ಕಿದೊಲು ವೇಗಮಾತ್ರಧ್ಯಾನ
ಮಗ್ನ ತಾಪಸಿಯಾಗಿ ತೇರು ಮುಂಬರಿಯುತಿರೆ
ರಾತ್ರಿಯೆಲ್ಲವು ಇಂತು—ಖುರಪುಟಾಹತದೃಷತ್
ವಿಸ್ಫುಲಿಂಗಂ ನಿಶಿಯ ಸುಡುತಿರಲ್, ಓಟದಾ
ವಾತವೆಡಬಲ ಮರನಸಂಖ್ಯೆಗಳನೊಮ್ಮುಖದಿ
ಬಾಗಿಸುತಿರಲ್ ಬೀಸಿ, ಮೌರ್ಯರಾಜೇಶ್ವರನ
ಧವಳ ಕೀರ್ತಿಯ ಯಮಳರೂಪಗಳೊ ಎನೆ ಹೊಳೆವ
ಶ್ವೇತಾಶ್ವಯುಗ, ಯೋಗಿಶುದ್ಧಚಿತ್ತವ ಹೋಲಿ,

ಧಾವಿಸುತಿರಲ್, ಮುಖಂ ಹಿಮಶೈಲ ಶಿಖರದೊಲು
ನೊರೆಯೇರಿ ಮೆರೆಯುತಿರೆ, ತನುವನವುಗಳ ಮೇಲೆ
ಉತ್ತಾನಿಸವುಗಳಲೆ ಉಸಿರಾಡಿ ಅವುಗಳೊಡ
ನೋಡುತ್ತ ಬೆವರಿನಲಿ ಮುಳುಗಿರಲ್ ಸಾರಥಿಯು,
ಒಳಗೆ ಶಂಭುವ ತೆರದಿ ಶಾಂತಮಾನಸನಾಗಿ
ವೇಗದತ್ಯಂತಕ್ಕೆ ಯೋಗದತ್ಯಂತವನು
ಎದುರಿಸುತ ಕುಳಿತಿರಲ್ ಬೌದ್ಧಧರ್ಮಾಚಾರ್ಯ
ಉಪಗುಪ್ತ ಗುರುವರ್ಯ, ಚಿಂತಿಸುತ ಏಕಿಂತು
ಕರೆಯಕಳುಹಿದನೆನ್ನ ಜಿತಕಳಿಂಗೇಶ್ವರಂ,
ವಿಜಯವರ್ಧನನಾಗಿ ರವಿಯವೊಲು ರಾಜಿಸದೆ
ಮನದ ಕತ್ತಲೆಯಲ್ಲಿ ಮೊಗಮುಸುಕಿ ಮರುಗುವನು,
ಶೋಕವೇನಿದಶೋಕಸಾರ್ವಭೌಮನಿಗೆಂದು—
ತೇರು ಮುಂಬರಿಯುತಿರೆ ರಾತ್ರಿಯೆಲ್ಲವು ಇಂತು,
ಎದ್ದಿತು ದಿಗಂತದಲಿ ಶಿಬಿರಗಳ ಬಿಳಿನಗರ
ಸಾಗರವು ನಗುತಿಹುದೊ ಎನ್ನುವೊಲು ಮಿರುಗುತ್ತ
ನಿಮಿಷ ನಿಮಿಷಕು ಬರುತ ಬಳಿಬಳಿಗೆ ಬೆಳೆಬೆಳೆದು.
ಆ ಸಮಯದಲೆ ಸೂರ್ಯನುದಯಿಸಲ್ ಹರಿಸುತಲಿ
ಧಾರೆಧಾರೆಯಲತುಲ ವೀರ್ಯಮಂ ಜಗಕೆಲ್ಲ,
ಶಿಬಿರಗಳ ಮೇಲ್ಗಡೆಯ ಮುಗಿಲುಗಳು ಕೆಂಪುಂಡು
ಐಂದ್ರಜಾಲಿಕಮೆನಲು ಕಣ್ಮನಂ ಮೋಹಿಸುತ
ಕಟ್ಟಿದುವು ತೋರಣವ. ಕೊನೆಯ ಕಂಭವ ಕಂಡ
ಪಂದ್ಯಗಾರನ ತೆರದಿ ಸಾರಥಿಯು ನೂಕಿದನು
ಪ್ರಿಯದ ಹೆಸರನು ಕರೆದು ಚಪ್ಪರಿಸಿ ತೇಜಿಗಳ,
ನೊರೆಯ ಬೆರೆಯುವ ಬಾಯ ನೆತ್ತರನು ಗಮನಿಸದೆ.

ತುಟಿಗಳಿಗೆ ಬೆಟ್ಟಿಟ್ಟು ತೇರನೇ ನೋಡುತಿಹ
ದಿಙ್ಮೂಢ ಜನ ಸಾಲುಗಟ್ಟಿರ್ದ ಶಿಬಿರದೊಳು,
ಮೋಡಗೂಡಾರಗಳ ಮಧ್ಯದಲಿ ಗರುಡನೊಲು
ಓಡುತ್ತ ಹಿಮಗಿರಿಯ ಶಿಖರಗಳ ಸಂಖ್ಯೆಯಲಿ
ಏರಿ ಗೌರೀಶಂಕರವು ಮೇಲೆ ಮೆರೆಯುವೊಲು

ಮಿಕ್ಕೆಲ್ಲ ಶಿಬಿರಗಳ ಧಿಕ್ಕರಿಸಿ ವೈಭವದಿ
ಕನಕ ಕಲಶವ ತೋರಿ ತಾನೆ ತಾನಾಗೆಸೆವ
ಶ್ರೀ ಅಶೋಕನ ವಾಸವನು ಸೇರಿ ತೇರು ನಿಲೆ—
ಎದುರುಗೊಳ್ಳುತಶೋಕಾನುಜಂ ಕೈಗೊಡಲ್
ಕೆಳಗಿಳಿದು ಉಪಗುಪ್ತ ತೇಜಿಗಳ ವೈಸವರಿ
ಸಾರಥಿಯ ಬೆನ್‌ತಟ್ಟಿ ನೀರಿಗಿವನೊಯ್ಯೆಂದು
ನುಡಿದು ಶಿಬಿರದ ಕಡೆಗೆ ತಿರುಗಲಿಂತು ಮಹೇಂದ್ರ:
"ಸೂರ್ಯಕಿರಣದ ತೆರದಿ ಪೂರ್ವದಿಂ ಬರುತಿಹಿರಿ
ಆಶೆಯಂಕುರಿಸುತ್ತ ಹೃದಯದೊಳು, ಆಚಾರ್ಯ!
ನಿನ್ನೆ ಸಂಜೆಗೆ ಮೊದಲೆ ಜಯಲಕ್ಷ್ಮಿ ವರಿಸಿದಳು
ನಮ್ಮ ಪಕ್ಷವ. ವಿಜಯನೊಲು ಅಸಮಸಾಹಸದಿ
ಹೋರುತಿದ್ದಣ್ಣದಿರು ಅರಿನೃಪನ ಹಿರಿಮಗನ
ಶಿರವ ತರಿದೇಕೊ ಇದ್ದಂತೆ ಶಿಬಿರಕೆ ಮರಳಿ
ಏಕಾಂತಮೌನದಲಿ ಮರುಗುತಿರುವರು, ಗುರುವೆ.
ಜಯವಾರ್ತೆಯನು ಪೇಳೆ, ಕಣ್ಣುತೋಯುವ ವರೆಗು
ಗಾಳಿಯನು ನಿಟ್ಟಿಸುತ, ತಟ್ಟನಡಗಿಸಿ ಮೊಗವ
ಹಸ್ತಾಬ್ಜಸಂಪುಟದಿ, ಬಾಳಿನುಸಿರೆಲ್ಲವೂ
ಒಮ್ಮೆಗೇ ಪೋಪಂತೆ ಒಂದುಸಲ ನಿಡಿದಾಗಿ
ಸುಯ್ದರಕಟಕಟ! ಧಿಕ್ಕರಿಸುತಲಿ ಆಹಾರ
ನಿದ್ರೆಗಳ ಎಮ್ಮರಿವಿಗಳವಲ್ಲದೀತೆರಂ
ಕುಳಿತಿಹರು, ಗುರುವರ್ಯ. ಸಂಜೆ ಎನ್ನನು ಕರೆದು
'ಕಳುಹು ಉಪಗುಪ್ತರಿಗೆ, ಎನ್ನ ರಥವೇ ಪೋಕೆ!'
ಎಂದು, ನಿಶಿಯೆಲ್ಲ ಬಂದರೆ ಬಂದರೆನ್ನುತಲಿ
ಕಾಯುತಿರುವರು, ಗುರುವೆ."
ಎಂದು ಬಾಗಿಲಿಗೊಯ್ಯೆ—
"ವತ್ಸ, ಓ ವತ್ಸ!" ಎಂದೆನುತ ಧೇನುವಿನಂತೆ
ಉಪಗುಪ್ತನೊಳಹೊಗಲ್, ಕತ್ತಲಿನ ರಾಜ್ಯದಲಿ,
ಕೆಂಪು ಕಿರಣಗಳೆರಡು ಚುಂಬಿಸುವ ಬುದ್ಧಗುರು
ಭಾವಚಿತ್ರದ ಬುಡದಿ ಒಂದು ಮೊಣಕಾಲ್ಮರಿದು

ಇನ್ನೊಂದ ತೋಯಿಸುತ ಹಣೆಯು ಭಾರವ ಹೇರಿ
ಕೃಷ್ಣಮೇಘದ ತೆರದಿ ತೂಂಕುತಿದ್ದ ನೃಪಾಲ
ಉಪಗುಪ್ತನನು ಕೇಳಿ, "ಗುರುವೆ, ಓ ಗುರುವೆ!" ಎಂ
ದೆನುತ ಕರುವಿನ ತೆರದಿ ಹಾರಿ ಚರಣಗಳಪ್ಪಿ,
ಬಿಕ್ಕುಬಿಕ್ಕುಗಳಿಂದ ಕೋಮಲಾಂಗಂ ಕುಲುಕೆ,
ಹಸುಳೆಯೊಲು ಅಳತೊಡಗೆ, ಶಿರವನಾಘ್ರಾಣಿಸುತ
ತಾಯಂತೆ ಎದೆಗಿಟ್ಟು ಬೆನ್‌ತಡವುತಾಚಾರ್ಯ
ನೃಪಮನೋಬಾಧಕರ ಶೋಕವಿಷಮಂ ನುಂಗಿ,
ಮಳೆನೆನೆದ ನೆಲದಂತೆ ವಿಶದಿಸಲ್ ನೃಪಮುಖಂ,
ಬಳಿಯು ಆಸನದಲ್ಲಿ ಕುಳ್ಳಿರಿಸಿ ಇನ್ನೊಂದ
ತಾನಲಂಕರಿ"ಸಿಂತು ವ್ಯಸನವೇಕೆಂ"ದೆನಲು—
ಇಂತು ನುಡಿದನು ಅಶೋಕಾಧೀಶ್ವರಂ;
"ಗುರುವೆ!
ಕರೆಯಲಾಗದೆ ಮರಳಿ, ಕೈಮೀರಿದುದನಕಟ!
ಮರ್ತ್ಯಲೋಕದಿ ಮೃತ್ಯುವಿಗು ರೌದ್ರತರವಾಗಿ
ಮನವ ಹಿಂಸಿಸಿ ಹಿಂಸಿಸುವುದು ಈ ಯೋಚನೆಯು,
ಮನುಜಜೀವನ ರುದ್ರನಾಟಕಕೆ ಬಿತ್ತಾಗಿ.
ಕರಿಯ ಮೋಡದ ಬೆಳ್ಳಿ ಕಡಗದೊಲು ಉಂಟಿಲ್ಲು
ಕ್ಷಮೆಯು ಮಂಗಳರೇಖೆ. ಎಸಗಿದುದು ಎಸಗಿದೊಲೆ
ಆದೊಡಂ, ಗುರುವರ್ಯ, ಕ್ಷಮಿಸೆನ್ನ ಘೋರಮಂ.
ಏನ ಗೆಯ್ದೆನೊ ನಾನು! ಏನ ಗೆಯ್ದೆನೊ, ಗುರುವೆ!
ನಮ್ಮ ಪಕ್ಷದಿ ಮಡಿದರೆಪ್ಪತ್ತುಸಾವಿರದ
ಮಾನುಷರು, ಸಾವಿರಾರರ ಆನೆ ಕುದುರೆಗಳು.
ಅರಿಗಳಲಿ ಉರುಳಿದುವು ಕಾಲಾಳು ರಾಹುತರ
ಒಂದು ಲಕ್ಷದ ಶಿರವು, ಅದರ ಮುಮ್ಮಡಿಯನಿತು
ಗಾಯವಡೆದಂತಕನನೆದುರುನೋಡುತಲಿಹರು.
ನಿಲ್ಲದಿಲ್ಲಿಗೆ, ಗುರುವೆ. ಒಬ್ಬ ವೀರನ ಸಾವು
ಒಂದು ಮರದಂಕುರವನೊಮ್ಮೆಗೇ ತರಿಯುವುದು,
ಒಂದು ಮನೆದೀಪವನು ಒಮ್ಮೆಗೇ ಅಳಿಸುವುದು,

ನಶಿಸಿಪೋಪುದು ಅವನ ಸಂಬಿದ್ದ ಸಂಸಾರ.
ನಮ್ಮ ಪಕ್ಷದಲೆನಿತೊ, ಅರಿಗಳಲಿ ಇನ್ನೆನಿತೊ
ನರೆತವರು, ಹೆಂಗಸರು, ಹಸುಳೆಗಳು ಗೋಳೆತ್ತಿ
ಗಗನಮಂ ಬಿರಿಯುವರೊ! ಬರಿದಾದ ಹೊಟ್ಟೆಗಳ
ಬಡಿದುಕೊಳ್ಳುತ ಶೋಕದಲಿ ಪ್ರಿಯರ ಪೆಣಗಳನು
ಅರಸುತಿರುವರು ಎನಿತೊ! ತಾಯ್ನೆಲದಿ ತಾವಿಲ್ಲ
ಹೂಳಲಿಕು! ಸ್ವರ್ಗದಡಿ ಸ್ವೇಚ್ಛೆಯಲಿ ತಂಪಾಗಿ,
ಕಂಪಾಗಿ, ಇಂಪಾಗಿ ತೀಡುವಾ ಹೊಸಗಾಳಿ,
ತೆಳುನೀಲಿಯಾಗಸದಿ ತಟ್ಟೆಗಳ ಮುಗಿಲುಗಳ
ತೊಳಗುವೊಲು ಕಾಯಿಸುತ, ನೆಲವನೆಲ್ಲವನಂತೆ
ವಿಂಗಡಿಸಿ, ಬೆಳಗಿಸುತ, ಜೀವನದ ಮರ್ಮಗಳ
ವೇದಸತ್ಯಗಳೆಂತು ಸ್ಪಷ್ಟಗೊಳಿಪುವೊ ಅಂತು
ಜಗವನೆಲ್ಲವ ತೋರಿ ಮನಕೆ ತೇಜವ ಬೀರಿ
ಹಿಗ್ಗಿಸುವ ಹರಿದಶ್ವನಾ ಬಿಸಿಲು—ಇವು ಹೊಗದ
ಗವಿಯಂತೆ, ಕತ್ತಲೆಯ ಕಲ್ಮಷದ ಕ್ರಿಮಿಕೀಟ
ಮಯಮಾಗಿ, ಸಂಕಟದ ತವರಾದ ಈ ಜಗದಿ,
ಇದ್ದ ಕಿಂಡಿಯ ಮುಚ್ಚಿ, ಒಬ್ಬರಿನ್ನೊಬ್ಬರನು
ಕೊರಳಕೊಯ್ವೆವೆ ನಾವು, ಸಂಗ್ರಾಮ ಮಾರಿಯನು
ಎಬ್ಬಿಸುತ! ನಮ್ಮೊಳಗೆ ದ್ವೇಷಿಸುತ ನರಲೋಕ
ಶತ್ರುವಿಗೆ, ಯಮಗೆ, ಬೆಂಬಲವಾಗಿ ಕೋಟಿಯನು
ಬಿಟ್ಟುಕೊಡುತಿಹೆವಲ್ಲ! 'ದೇವಪದವಿಗೆ ಎದ್ದೆ
ಏರುವರು ಇನ್ನೊಂದು ಮೆಟ್ಟಲನು ನಾನೀಗ
ಸೂಲುತಿಹ ಸಂತತಿಯು,' ಎನುತ ಮರ ಹೊಸ ಎಲೆಯ
ನಿಡುವಂತೆ ಕ್ಷಿತಿ ಪೆತ್ತ ನಮ್ಮ ಈ ಸಂತತಿಯು
ಬೆಳೆವ ಪಾಲಲ್ಲರ್ಧ ಮೊಗ್ಗೆಯಲೆ ಅಳಿದುದೇ!
"ಇದಕೆ ಕಾರಣರಾರು? ಈ ರಕ್ತವಾಹಿನಿಯ
ಮಾತೊಂದರುಂಗುಟ ಸ್ಪರ್ಶದಲಿ ಹರಿಸಿದರು?
ತಾಯ್ನೆಲಂ ತನಗೆ ಜೀವವಸು ಒಂದನ್ನೀಯೆ,
ಐದು ಲಕ್ಷದ ಅವಳ ಮಕ್ಕಳ ಅಸೃಕ್ಪಾತ

ಮೇಣದರ ಐದರನಿತರ ಅಶ್ರುಪಾತದಿಂ
ತೋಯಿಸಿದರಾರವಳ, ಕೊಡಲಿಯಾ ಕಾವಂತೆ?
ಯಾರು ಆ ಮಾನವದ್ವೇಷಿ, ದೈವದ್ವೇಷಿ?
ನಿಮ್ಮ ಮುಂದಿನ ಪಾಪಿ! ಚಕ್ರವರ್ತಿ ಅಶೋಕ!
ತಕ್ಷಶಿಲೆಯಲಿ, ಒಮ್ಮೆ, ಸಹಪಾಠಿಯೊರ್ವನಿಗೆ
ಕುದುರೆಗೊರಸದು ತಗುಲೆ, ಕಡುಬಡವನೆನ್ನ
ಕೋಪದಲಿ ದೂಷಿಸಲು, ಕೆಳಗಿಳಿದು ಯಾಚಿಸಿದೆ
ಕ್ಷಮೆಯ ಇನ್ನೊಮ್ಮೆ, ಚಕ್ರೇಶನಾದಾಬಳಿಕ,
ಮಾರುವೇಷದಿ ಸಾರುತಿರೆ, ಕೋಮಲಾಂಗಿಯನು
ಪೋಗು ಪೋಗೆಂದೊರ್ವಸಟ್ಟುವುದ ಕಂಡು, ಮನ
ಕರಗಿ, ಸಹಿಸದೆ, ಹೋಗಿ ವಾದಿಸಿದೆ, ಒಪ್ಪಿಸಿದೆ.
ಎರಡು ವರ್ಷದ ಹಿಂದೆ, ಗುರುವರ್ಯ, ನಿಮ್ಮ ಬಳಿ
ಉಪದೇಶವನು ಪಡೆದುಪಾಸಕಂ ಆದೆನಲ!
ಅನಿತು ಮಿದುವಾದೆದೆಯಶೋಕನದು ನಿಜವಾಗಿ
ಇಂಥ ಘೋರಕೆ ಅವನ ಕೈಬಾಗಿಸಿದುದೇನು?
ಕೀರ್ತಿಕಾಮತೆ! ಕ್ಷಾತ್ರಧರ್ಮಪರಿಪಾಲನೆಯು!
ಕೊಳ್ಳಿದೆವ್ವಗಳಿವನು ಅನುಸರಿಸುತಾಚಾರ್ಯ
ಕೊಲೆಗಾರ ನಾನಾದೆ. ಬೇಟೆಯಾಡುತ ನರರ
ನೆತ್ತರನು ಹರಿಸುವರ ನರರೊಳಗ್ಗಳರೆಂದು
ನುತಿಪೆವೇ ನರರಾವು! ರಾಜರಿಗೆ ಧರ್ಮಮೇಂ
ರಾಜ್ಯತೃಷೆ? ನೆರೆಯ ದೇಶದ ಜನರು ಮೃಗಗಳೊಲು
ಕಚ್ಚಾಡಿ ಅಜ್ಞಾನದಲಿ ಕಣ್ಣುಕಾಣದಿರೆ
ದಂಡೆತ್ತಿ ತರುವುದವರನ್ನೊಂದು ನಿಯಮಕ್ಕೆ
ಒಳಿತು ಇದು. ಅಲ್ಲದಿರೆ ನೆಲದಾಸೆಗೋಸುಗಂ
ಪರರಾಷ್ಟ್ರವಾಕ್ರಮಿಸಿ, ನರಯಾಗವಾಚರಿಸೆ,
ರೌರವಂ ಕಾದಿಹುದು. ತನ್ನೊಂದು ಮಾತಿಂದ
ರಾಜ್ಯವನೆ ರಣಮಾರಿದಂಷ್ಟ್ರವಾಗಿಸಬಲ್ಲ
ರಾಜ ತಾ ಜ್ಞಾನಿಯಾಗಿರಬೇಕು; ಶಕ್ತಿಯನು
ದೇವನೊಲು ತೊಡಬೇಕು, ದಾನವನ ತೆರನಲ್ಲ.

ಅಸಿಯ ಬೀಸುವುದೊಂದೆ ಕ್ಷತ್ರಿಯನ ನೀತಿಯೇಂ?
ಚಂಡಮರುದಾಹತಂ ಸಾಗರಂ ಪೂರದಲಿ
ಕಲ್ಲೋಲ ಪಂಕ್ತಿಯಲಿ ವೇಗದಿಂ ಘೋಷಿಸುತ
ಕಾಡ ಸಲಗನ ತೆರದಿ ತೀರಪರ್ವತವನ್ನು
ಅಪ್ಪಳಿಸಿ ನೊರೆನೊರೆದು ಮೇಲೇರಿ ಬರ್ಪಂತೆ
ಎರಗಿದತ್ತೆಮ್ಮನು ಕಳಿಂಗರ ಮಹಾಸೇನೆ.
ಪಾದಭೂಮಿಯ ಬಿಡದೆ ಧೀರಪರ್ವತದಂತೆ
ತಡೆದೆವವರನು ನಾವು, ಕತ್ತಿ ಕತ್ತಿಗೆ ತೋರಿ
ಶಕ್ತಿಶಕ್ತ್ಯಾಯುಧಕೆ, ಶರ ಶರಕೆ, ಗದೆ ಗದೆಗೆ,
ಮುಷ್ಟಿಮುಷ್ಟಿಗೆ ಇಂತು. ಮದದಂತಿ ಬೃಂಹಿತಂ,
ಮಿಂಚುಗುದುರೆಯ ಹೇಷೆ, ರಥಿಕಶಂಖನಿನಾದ,
ಕಾಲಾಳ ಜಯಘೋಷ, ಆಹತ ಧರಾಧ್ವಾನ
ಮೇಳೈಸಿ ಸಿಡಿಲಾಗೆ, ಕಿವಿಯೊಡೆದು, ಎದೆಯಲ್ಲಿ
ಬಿಸಿರಕುತ ನೆರೆಯುಕ್ಕಿ, ಮೈಯರಿವು ಆರಿರಲು,
ಶೌರ್ಯವೊಂದೇ ಇಹುದು ಜಗದೊಳಗೆ ಎಂದೆನಿಸಿ,
ಬಾಹುವೊಂದೇ ಇಹುದು ದೇಹದಲಿ ಎಂದೆನಿಸಿ,
ಒಂದು ಆವೇಶದಲಿ ನುಗ್ಗಿದೆವು, ಕಾದಿದೆವು.
ದಿವ್ಯವಾ ವೀರ ವೀರಾವೇಶ! ಆದೊಡಂ
ಗುರುವರ್ಯ, ಆ ಅಮಿತಶಕ್ತಿಯನು ಒಳಿತಕ್ಕೆ
ವಾಹಿಸಲ್ ಏನಸಾಧ್ಯವು ನರಗೆ? ಹಿಮಗಿರಿಯಿ
ನುರುಳುರುಳ್ವ ಹಿಮಘನದ ರಾಶಿಯೊಲು, ಭೋರೆಂದು,
ಕಲ್ಲೊಡಲ ಸೀಳುತಲಿ, ಲಯಮಹಾವೃಷ್ಟಿಯೊಲು,
ಗಗನದೆತ್ತರದಿಂದ ನದಿಯು ಧುಮುಧುಮುಕುತಿರೆ,
ಶಕ್ತಿಯದನೊಗ್ಗಿಸುತ ಲೋಕದೀಪೋತ್ಸವವ
ಗೈಯುವೊಲು, ಮಾನವನ ಚಂಡಶಕ್ತಿಯನಿಂತು
ಪ್ರೇಮಶಕ್ತಿಯ ಗೈಯೆ, ನಂದನಂ ಭೂವನಂ!
ದೇವರ್ಕಳಾವ್ ನರರು! ಓ, ಎನ್ನ ಗುರುವರ್ಯ,
ಮಾಡಲಾರೆವೆ ಅಂತು? ಪೇಳು, ಪೇಳೆ"ಂದೆನುತ,
ಹಾರಿ ಆಸನದಿಂದ ಉಪಗುಪ್ತನೆದೆಯಲ್ಲಿ

ಮುಖವನೊತ್ತುತ ತವಕ ತೂರಿ ತೋರುವ ನೇತ್ರ
ತಾರಕಾದ್ವಯದಿಂದ ಬ್ರಹ್ಮತೇಜದ ಮುನಿಯ
ವದನಮಂ ಈಕ್ಷಿಸಲು—
ಉಪಗುಪ್ತ ಮುನಿವರಂ
ಸಾರ್ವಭೌಮನ ಹಣೆಯ ಮುಂಗುರುಳ ನೇವರಿಸಿ,
ದಯೆಯ ಕೌಮುದಿಯನ್ನು ಸುರಿಸುತಲಿ ಕಣ್ಗಳಿಂ,
ಗದ್ಗದದೊಳಿಂತು ನುಡಿದನು: "ವತ್ಸ! ಕಣಸು ಇದು
ನನಸಪ್ಪುದಪ್ಪುದೀ ನುಡಿ ದಿಟಂ. ಏಕೆನಲು
ಆಳದಲಿ ಮಾನವನು ಪ್ರೇಮಾತ್ಮ. ಚಾತಕವು
ಅಭ್ರಜಲಕಾರಿ ಬಾಯ್ ಕಾತರಿಸುವಂದದಲಿ
ಜಗದೊಲವಿಗಾಶಿಪನು ಮಾನವನು ಬಾಲ್ಯದಲಿ.
ಮಾತ್ಸರ್ಯಮಾರಿ ತಾನಗಿಯುತಿಹ ಈ ಜಗಂ
ತೆರೆದ ಬಾಯಿಗೆ ಮಣ್ಣುತುಂಬುವುದು, ಒಡಿಯುವುದು.
ಇಂತೆ ಇರದೆಂದಿಗೂ, ಸಂತತಿಗು ಸಂತತಿಗು,
ಉತ್ತುತ್ತು ಉಳುತಿರುವ ಕ್ಷೇತ್ರದೊಲು, ಮಾನವನ
ಚಿತ್ತ ಮೃದುವಾಗುತಿದೆ. ಬಂದೆ ಬರುವುದಶೋಕ,
ನಿನ್ನ ಕಣಸಿನಶೋಕ ರಾಜ್ಯವದು! ಚೇತನವು
ಮಣ್ಣಿನಲಿ ಮಲಗಿದ್ದು ಉಸಿರಾಡಿ ಸಸ್ಯದಲಿ
ಮೃಗಗಳಲಿ ಓಡಾಡಿ ಮನುಜನಲಿ ಚಿಂತಿಸಲು
ತೊಡಗಿಹುದು, ಅರಿತ ಸರಿಯನುಸರಿಸಿ ಒಂದುದಿನ
ಹೊಂದುವುದು ದಿವ್ಯತೆಯ, ಪ್ರಕೃತಿಯಾ ಹಿರಿಯಾಸೆ
ಪೂರ್ಣವಾಗುವುದಂತು. ಧರ್ಮಚಕ್ರವ ನೋಡು!
ಕಾಳಶಕ್ತಿಯ ನೀಳನಾಲಗೆಗೆ ನರರಕ್ತ
ಬಳಿಯುತಿದ್ದರು ಹಿಂದೆ. ವೇದಧರ್ಮವು ಯಜ್ಞ
ದಿಗ್ವಿಜಯ ಕರ್ಮಗಳನೊಪ್ಪಿಹುದು. ಆದರೊಳಿ
ತಿಹುದದರ ಒಳಸತ್ತ್ವ. ಎರಡುಸಾವಿರ ವರ್ಷ
ದಿರುಳ ಬಗಿಯುತ ನೋಡು. ಸುಪ್ರಭಾತದ ಸ್ವರ್ಣ
ಹರಡೆ ದೇವಾತಪವ, ಜಾಹ್ನವಿಯ ಪುಳಿನದಲಿ,
ನಿಂತು, ಕೈಗಳನೆತ್ತಿ, ಭಾಸ್ಕರನನಭಿನಮಿಸಿ,

'ಮಳೆಬಿದ್ದು ಬೆಳೆ ಎದ್ದು ಪೃಥ್ವಿಯೆಲ್ಲವು ತಣಿಯ
ಲೆಲ್ಲ ಜೀವಿಗು ಶಾಂತಿ, ಮಾಧುರ್ಯ, ನಲವಿರಲಿ!'
ಎಂದು ಸ್ವರವೆತ್ತುತಿಹ ಬ್ರಹ್ಮರ್ಷಿಗಳ ನೋಡು.
ಆ ಶುಭಾಶಯವನ್ನು, ಬಿಗಿವ ನಿಯಮಗಳಿಂದ,
ಬಿಡಿಸುತ್ತ ಬುದ್ಧಗುರು ತಿದ್ದಿದನು ಈ ಯುಗಕೆ.
ಕಾಲಕಾಲಕೆ ಬಾವಿ ಹೂಳ ತೆಗೆಸುವ ತೆರದಿ
ಧರ್ಮವನು ಯುಗಯುಗಕೆ ಸಂಸ್ಕರಿಸುತಿರಬೇಕು."
ಗುರುವರನ ವಾಣಿಯಾ ಕ್ಷೀರಧಾರೆಯು ನಿಲ್ಲೆ,
ತೃಪ್ತವತ್ಸದ ತೆರದಿ ಸುಮ್ಮನಿದ್ದನಶೋಕ
ಕೆಲವು ನಿಮಿಷಗಳಂತೆ. ಪ್ರೇಯಸಿಯ ಗುಣಗಳನು
ನೆನೆಯುತ್ತ ವಿರಹಿತನು ತನ್ನನೇ ಮರೆತಿರಲು,
ತಟ್ಟನರಿವಾಗಲ್ಕೆ, ವಿರಹಶೂಲದ ಬಾಧೆ
ಇಮ್ಮಡಿಯ ಕ್ರೌರ್ಯದಲಿ ಅವನ ತಿವಿಯುವ ತೆರದಿ,
ತನ್ನ ಘೋರದ ನೆನಪು ಮರಳಿ ಹಿಂಡಿತು ನೃಪನ:
"ನಿನ್ನೆದಿನ ಯುದ್ಧದಲಿ ಅರಿಬಲದ ಶಿರದಲ್ಲಿ
ನಿಂತು ನಡೆಸುತ ಬಲವನೆದುರಾದನೆನ್ನನ್ನು
ಅರಿನೃಪನ ಹಿರಿಮಗನು. ಉಬ್ಬಿದೆದೆ, ವಿಸ್ತಾರ
ಫಾಲದಲಿ ನವತಿಲಕ, ಯೌವನದ ಉತ್ಸಾಹ!
ನೆನಪಿಗೆ ಬರೆ ಕುನಾಲ, ನೆನೆದೆನೆಂತಾವುಗಳು
ರಾಜಧಾನಿಯ ಬಿಡುವ ಸಮಯದಿ, ಕುನಾಲನನು,
ಹಣೆಗೆ ತಿಲಕವನಿಟ್ಟು ಬಿಗಿದಪ್ಪಿ ಮುತ್ತಿಟ್ಟು,
ಎನ್ನ ಪದ್ಮಾವತಿಯು, ಆರತಿಯನೆತ್ತುತಲಿ,
ಪ್ರಾಚೀದಿಗಂಗನೆಯು ಸೂರ್ಯನನು ಕಳುಹುವೊಲು
'ವಿಜಯಿಯಾ'ಗೆಂದೆನುತ ಗದ್ಗದದಿ ಕಳುಹಿದುದ.
ಸ್ನೇಹದಲಿ ಮನತೊಯ್ಯಲಂಬು ಕೆಳಗಡೆ ಬೀಳೆ
ಅವನ ನೋಡುತಲಿರಲು, ತನುವು ನುಲಿಯುವ ತೆರದಿ
ನಾಂಟಿದುದು ಎದೆಯಲ್ಲಿ ಅವನು ನಗುತೆಚ್ಚೆಂಬು.
ರುಷ್ಟಸರ್ಪದ ತೆರದಿ ಅಸ್ತ್ರಶ್ರೇಷ್ಠವನೆಳೆದು
ಹೂಡಿ, ಬಲಬಿಟ್ಟೆಲ್ಲ, ಕಿವಿವರಂ ಸೆಳೆದಿಸಲ್,

ನಗುತಿದ್ದ ಮುಖವಂತೆ ಎದೆಯಿಂದ ನೆಗೆದತ್ತು.
ಕಟ್ಟೆಯೊಡೆಯಲು ದುಃಖ, ಬಿಕ್ಕಿಬಿಕ್ಕಿದೆಸೊಡನೆ
ಕೈಯೊಳಗೆ ಕಣ್ಮುಚ್ಚಿ. 'ರಥವ ಮರಳಿಸು' ಎಂದು
ಬಂದಿಲ್ಲಿ ಕಣ್ದೆರೆಯೆ ಕಂಡಿತದೆ ವೀರಮುಖ!
ಕ್ಷಮೆಯಿಲ್ಲವೇ ಎನಗೆ, ಕ್ಷಮೆಯಿಲ್ಲವೇ, ಗುರುವೆ?"
ದುಂಬಿಯೊಳಹೊಕ್ಕಿರುವ ತಾವರೆಯು ರಾತ್ರಿಯಲಿ
ಎಡಬಲಕೆ ಒಲೆವಂತೆ ನೃಪನು ಸಂಕಟಪಡುತ
ಗುರುವಿನಡಿಯಲಿ ಮುಡಿಯನೀಡಾಡುತಿರೆ, ಸೂರ್ಯ
ಕಿರಣದೊಲು ಗುರುವಾಣಿ ಅರಳಿಸಿತು ಇಂತವನ:
"ನಿನ್ನ ಪಶ್ಚಾತ್ತಾಪ ಸುಟ್ಟ ಪಾಪಗಳೆಲ್ಲ
ಕೊಚ್ಚಿ ಹೋದವು ನಿನ್ನ ಹೃದಯದೊಲವಿನ
ದೇವಗಂಗೆಯಲಿ. ಏಳ್, ಶುದ್ಧನಾಗಿಹೆ, ವತ್ಸ!
ನಿನ್ನ ಕಣಸಿನ ಭವಿಷ್ಯದ್ರಾಜ್ಯ ಸ್ಥಾಪನೆಗೆ
ಇನ್ನು ಮನಮಾಡೇಳು! ಬುದ್ಧಗುರುವಿನ ದಯದಿ
ಇಳೆಗೆ ಮಾದರಿಯಾಗಿ ಏಳಲಾ ರಾಜ್ಯವದು,
ಏಳಲಿ ಅಶೋಕರಾಜ್ಯವದು!"
ಎಂದುಪಗುಪ್ತ
ಚಕ್ರವರ್ತಿಯ ಶಿರದಿ ದಿವ್ಯಹಸ್ತವನಿರಿಸೆ,
ಅವನ ಮನ ಶಾಂತವಾದುದು. ತೋರಿ ಜೀವನಕೆ
ಹೊನ್ನಿನಾಗುರಿಯೊಂದು, ಆಶೆಯೊಂದಾ"ಚಾರ್ಯ!
ಬಾಳ್ದೆನಿಲ್ಲಿಯವರೆಗು ಬರಿಯುಪಾಸಕನಾಗಿ.
ಸಂಘೋಪಗತನಾದೆನಿಂದಿನಿಂ, ಸ್ವೀಕರಿಸಿ
ತಮ್ಮ ರಕ್ಷಾ ಪಕ್ಷದೊಳಗೆನ್ನ"ನೆಂದೆನಲು
ತರಣಿ ಏರಿಸಿಕೊಂಡ ಈಜುಗಾರನ ತೆರದಿ
ಹರ್ಷಿಸುತ ಉಪಗುಪ್ತ ಬುದ್ಧಚಿತ್ರಕ್ಕೆರಗಿ:
"ನಿನ್ನ ಧರ್ಮಕ್ಕಿಂದು ಕ್ಷಾತ್ರಭುಜ ದೊರಕಿಹುದು:
ನಿನ್ನ ಧರ್ಮಕ್ಕಿಂದಶೋಕಭುಜ ದೊರಕಿಹುದು!
ನಿನ್ನ ಧರ್ಮಂ ಗೆಲ್ಗೆ! ನಿನ್ನ ಧರ್ಮಂ ಬಾಳ್ಗೆ!"
ಎಂದೆದ್ದು ಉಪಗುಪ್ತ ಎರಗಿದ್ದಶೋಕನನು,

“ಏಳು, ವತ್ಸನೆ! ಏಳು ಮೌರ್ಯರಾಜೇಶ್ವರನೆ!
ಎದ್ದು, ನೂತನ ಜಗನ್ನಿರ್ಮಾಣಕರನಾಗು!
ಹರಿಪದದ ಶಿಖರವನು ರವಿ ಸಮೀಪಿಸುತಿಹನು.
ಹೊರಗೆ ಪ್ರಜೆಗಳು ನಿನಗೆ ಕಾತರದಿ ಕಾದಿಹರು,
ತಂದೆಗೆ ಚಿಕಿತ್ಸೆಮಾಡುತಲಿರಲು ಕಾಯುವೊಲು
ಅವನ ಮಕ್ಕಳು ಹೊರಗೆ, ಹರ್ಷಿಸವರನು ನಿನ್ನ
ಮುಖದಿಂದ, ಮಾತಿಂದ.” ಎನೆ, ಅಶೋಕನು ಎದ್ದ
ನಿರ್ವರೂ ಮತ್ತೊಮ್ಮೆ ಬುದ್ಧಗುರುವಿಗೆ ಬಾಗಿ
ಹೊರಬೀಳೆ ಶಿಬಿರದಿಂದ, ಮಹೇಂದ್ರನು ಕುನಾಲ
ರಾದಿಯಾಗೆಲ್ಲ ಕಾದಿರ್ದ ಮೌರ್ಯಜಗತ್ತು
ಆಗಸಂ ಬಿರಿವಂತೆ ಜಯಘೋಷಗೈದತ್ತು,
ಪೆರ್ಚಿತೋ ಎನೆ ಮಹಾಸಾಗರಂ ಪರ್ವದಲಿ.
ಮೌನ ನೆರೆಯಲು ಮತ್ತೆ, ನುಡಿದನಿಂತು ಅಶೋಕ:
“ನೀವು ತೋರ್ಪೀ ಮಹಾಪ್ರೇಮ ನಾಚಿಪುದೆನ್ನ!
ನಲವಿರ್ದರನು ನಿಮ್ಮ, ದಿಗ್ವಿಜಯ ಎಂದೆನುತ
ಸಾವ ಕೊಂಡೀಯುವೀ ಜವನ ಸಂತೆಗೆ ತಂದೆ.
ನಿಮ್ಮೊಳಗೆ ಲಕ್ಷ ಜನರಿಂದ ಕೊಳ್ಳಿಸಿ ಸಾವ,
ನಿರಪರಾಧಿ ಕಳಿಂಗರೊಳು ನಾಲ್ಕು ಲಕ್ಷಕ್ಕೆ
ಕೊಡಿಸಿ ನಿಮ್ಮಿಂ ಸಾವ, ಎನ್ನ ನೆಚ್ಚಿದ ನಿಮಗೆ
ಸಾವನಿಲ್ಲವೆ ಇಂತು ಪಾತಕವ ಪ್ರತಿಯಿತ್ತೆ.
ಸತ್ಯವಿದನೀಗರಿತೆ. ಕಳೆದುದನು ಮನ್ನಿಸಿರಿ.
ಎನ್ನ ಪೆರ್ಮೆಯ ಜನವೆ, ಎನ್ನ ಪ್ರೇಮದ ಜನವೆ,
ಅರಿತಿರ್ದೊಡಿಂತೆಸಗುತಿರ್ದೆನೇಂ? ಪೇಳಿಂ.
ಈ ಜಗಚ್ಚಕ್ಷುವಿನ, ಗುರುವಿನೀ ಸಾಕ್ಷ್ಯದಲಿ
ರಾಜವಚನವ ಕೊಡುವೆ ದಿಗ್ವಿಜಯವನು ತೊರೆದೆ
ನೆಂದೆಂದಿಗೂ ಎಂದು. ಪ್ರಾಣಪಡೆಯಿಪ ಪಡೆವ
ಪ್ರೇಮಲೋಕವೆ ನನ್ನ ಪರಮಧ್ಯೇಯವು ಇನ್ನು.
ಅದರ ದಾರಿಯ ಕಟ್ಟಿ ಜವನ ಪಟ್ಟವ ಘಟ್ಟಿ
ಗೈವೆಮ್ಮ ದ್ವೇಷಗಳ ಜಯಿಸುವುದೆ ನಿಜ ವಿಜಯ.

ಇದೆ ಗುರಿಯು ಇಂದಿನಿಂದೆಮಗೆಲ್ಲ, ವೀರರೇ !
ಈ ಎನ್ನ ನುಡಿಗಳನು ಸ್ತಂಭವೊಂದರ ಮೇಲೆ
ಕೊರೆಸಿ ನಿಲ್ಲಿಸುವೆ ಜಾಗಧಪುರದ ಮಧ್ಯದಲಿ,
ಕಂಡದನು ಮುಂದಾರು ಸಂಗ್ರಾಮಗೈಯದಂತು !
(ಏನೊ ಯೋಚನೆ ತೋರಿ ದನಿಯಿಳಿದು ಮಿದುವಾಯ್ತು)
ಇಂತು ಯತ್ನವ ಮಾಡೆ ನಾವಲ್ಲದಿರೆ ಬರುವ
ಸಂತತಿಯು ಕಾಣುವುದು ಪ್ರೇಮಜ್ಯೋತ್ಸ್ನೆಯ ಜಗವ !"
ಝಳದ ದಿನದೊಲು ಜನರು ಮೌನವಿದ್ದರು ನಿಮಿಷ.
ನಂತರಂ ಬಹ ಮಹಾವೃಷ್ಟಿಯೊಲು ಜಯಘೋಷ
ಉತ್ತರಕ್ಷಣ ನಭೋಮಂಡಲಕೆ ನೆಗೆದತ್ತು.
"ಬಾಳ್ಗೆ ಧರ್ಮಾಶೋಕ ಸಾರ್ವಭೌಮನ್ !" ಎನುತ.*

ಕೆ. ನರಸಿಂಹಮೂರ್ತಿ

* ಈ ವರ್ಷ ರಾಜಸೇವಾಸಕ್ತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರ "ರಜತ ಮಹೋತ್ಸವದ ಕನ್ನಡ ಪದಕ"ವನ್ನು ಪಡೆದ ಕವಿತೆ.

# ಭರತೇಶ ವೈಭವ

## ಕಾವ್ಯಗುಣಗಳು—ಮೆಚ್ಚಿಕೆಯೂದ ಪಾತ್ರಗಳು

**ಭರತ—**ರತ್ನಾಕರನು ತನ್ನ ಪಾತ್ರಗಳನ್ನು ರಚಿಸುವುದರಲ್ಲಿ ಅಸಾಧಾರಣವಾದ ಜಾಣ್ಮೆಯನ್ನು ತೋರಿದ್ದಾನೆ. ಮೊದಲನೆಯದಾಗಿ ಭತರನ ಪಾತ್ರವನ್ನೇ ತೆಗೆದು ಕೊಂಡು ವಿವೇಚಿಸೋಣ. "ಕಾವ್ಯಪತಿ ಚಕ್ರಿ ಸಾಮಾನ್ಯನಲ್ಲ." ಜೈನಪುರಾಣದ ಪ್ರಕಾರ ಚಕ್ರವರ್ತಿ ಜನ್ಮವೆಂಬುದು ಬಹು ಪುಣ್ಯದ ಫಲ. ಅದರಲ್ಲಿಯೂ ಭರತನು ಅಸಾಮಾನ್ಯ ಗುಣಗಳುಳ್ಳ ಷಟ್ಖಂಡಗಳ ಚಕ್ರವರ್ತಿ. ಪುರುಪರಮೇಶನ ಹಿರಿಯ ಕುಮಾರ, ನರಲೋಕಕ್ಕೆಲ್ಲಾ ಏಕಚ್ಛತ್ರಾಧಿಪತಿ. ಎಲ್ಲಕ್ಕಿಂತಲೂ ಹೆಚ್ಚಾಗಿ 'ಮುರಿದು ಕಣ್ಣಿಟ್ಟರೆ ಕ್ಷಣಕೆ ಮುಕ್ತಿಯ ಕಾಂಬ' ತೇಜಸ್ವಿ. ಹದಿನಾರನೆಯ ಮನುವೂ, ಪ್ರಥಮ ಚಕ್ರೇಶ್ವರನೂ ಆದ ಈತನ ಆಧಿಕ್ಯವನ್ನು ಒಂದು ಮಾತಿನಲ್ಲಿ ಹೇಳುವುದೆಂದರೆ "ಆ ಕ್ಷತ್ರಿಯ ಕುಲರತ್ನಗಾಹಾರವುಂಟು, ಮಲವಿಲ್ಲ ಮೂತ್ರವಿಲ್ಲೆಂದರೀ ಲೋಕದ ಬಳಕೆಗಾರರ ಪೇಳ್ವ ತೆರನೆ?". ಭರತನು ಆಗಲೇ ವೀತರಾಗನಾದ ಚಿದಂಬರಪುರುಷ ನಾಗಿಬಿಟ್ಟಿದ್ದಾನೆ. ಸಾಧನೆಯಿಂದ ಪರಿಪಕ್ವ ಚೇತನನಾಗಿರುತ್ತಾನೆ. ಅಂತಹವನು ಲೋಕದ ನಡವಳಿಕೆಯಲ್ಲಿ ಹೇಗೆ ಜಯಶೀಲನಾಗಿ ಮೋಕ್ಷಮಾರ್ಗದಲ್ಲಿ ನಡೆಯಬಹು ದೆಂಬುದನ್ನು ಭರತನು ತನ್ನ ಆದರ್ಶಜೀವನದಿಂದ ತೋರಿಸುತ್ತಾನೆ. ತ್ಯಾಗದ ಕಾಲ ಬರುವವರೆಗೂ ತ್ಯಾಗಿಯಾಗಬೇಕೆಂಬ ತವಕವಿಲ್ಲ; ಆಶೆಯಿಲ್ಲ. ತ್ಯಾಗವು ಸನ್ನಿಹಿತ ವಾದಾಗ ಭೋಗವಿರಹದ ಕಾತರತೆಯಿಲ್ಲ; ಕೊರಗಿಲ್ಲ. ಭೋಗಿಸುತ್ತಿದ್ದರೂ ಭೋಗಿ ಯಲ್ಲ. ಆಯುಸ್ಸು ಮುಗಿಯುವುದಕ್ಕೆ ಬಹು ಮುಂಚೆಯೇ ಆತ್ಮಸಾಕ್ಷಾತ್ಕಾರಕ್ಕೆ ಯೋಗ್ಯನಾಗಿದ್ದರೂ, ಸಂಸಾರವನ್ನು ತೊರೆಯುವುದಿಲ್ಲ. ಕಾರಣವೇನೆಂದರೆ, ಅವನು ಚಕ್ರವರ್ತಿಯಾಗಿ, ಪ್ರಜಾಪಾಲನಕಾರ್ಯವನ್ನು ಸಾಂಗವಾಗಿ ನೆರವೇರಿಸಿ, ತನ್ನ ದೊಡ್ಡ ಆಯುಷ್ಯದಲ್ಲಿ ಬಹುಭಾಗವನ್ನು ಕಳೆಯಬೇಕಾಗಿತ್ತು. ಸಂಸಾರತ್ಯಾಗಿ ಯಾಗಲು ಈ ಸನ್ನಿವೇಶವು ಒಂದು ದೊಡ್ಡ ಪ್ರತಿಬಂಧಕ. ಆದ್ದರಿಂದ ರಾಜನಾಗಿಯೇ ವಿರಕ್ತನಾಗಬೇಕಾಗಿದೆ. ಇವನ ಮಗ ಅರ್ಕಕೀರ್ತಿಯು ದೊಡ್ಡವನಾಗಿ ರಾಜನಾಗುವ ವರೆಗೂ ಭರತನು ಈ ಬಹಿರಾಡಂಬರದ ದೊಂಬರಾಟವನ್ನಾಡದೆ ಗತ್ಯಂತರವಿಲ್ಲ.

ಭರತನು ಮೇಲ್ನೋಟಕ್ಕೆ ಉಪಭೋಗಿಯಾಗಿದ್ದರೂ, ಪದ್ಮಪತ್ರದಮೇಲಿನ ಜಲದಂತೆ—ಕೆಸರಿನಲ್ಲಿ ಹುಟ್ಟಿದರೂ ಕಮಲವು ಊರ್ಧ್ವಮುಖವಾಗಿರುವಂತೆ—

ಅಂಟಿಯೂ ಅಂಟದ ರಾಜಯೋಗಿಯಾಗಿರುತ್ತಾನೆ. ಉಪಭೋಗಗಳು ಅವನ ಮನಸ್ಸನ್ನು ಸೆರೆಹಿಡಿಯಲಾರವು. ಅವುಗಳನ್ನು ಮೆಟ್ಟಿ ಊರ್ಧ್ವದೃಷ್ಟಿಯನ್ನು ಪಡೆದಿರುವ ಮಹಾವ್ಯಕ್ತಿ ಇವನು. ಇದಕ್ಕೆ ಅನುಗುಣವಾದ ಭರತನ ವ್ಯಕ್ತಿತ್ವವನ್ನು ನೋಡೋಣ.

ಭರತನಿಗೆ ಅನಾವಶ್ಯಕವಾದ ಉಪಭೋಗಗಳ ವರ್ಣನೆ ಇಲ್ಲಿ ಯಥೇಚ್ಛವಾಗಿ ಬರುವುದಾದರೂ, ಆ ವರ್ಣನೆಯು ಲೋಕೋದ್ಧಾರದ ದೃಷ್ಟಿಯಿಂದ ಅವಶ್ಯವೆಂದು ಕವಿಯ ಸಮಾಧಾನ. ತನ್ನ ಕಥಾನಾಯಕನು, ಸಂಸಾರಿಗಳಿಗೆ ಆದರ್ಶಪುರುಷನೆಂದು ಅವನ ಭಾವನೆ. ಶೃಂಗಾರಕ್ಕೆ ಗುರಿಯಿರಬೇಕೆಂದೂ, ಅದು ಮನುಷ್ಯನನ್ನು ಊರ್ಧ್ವಮುಖಕ್ಕೆ ಒಯ್ಯಬೇಕೆಂದೂ ಕವಿಯ ಇಷ್ಟ. ಆದ್ದರಿಂದ ಶೃಂಗಾರ ಬಂದೆಡೆಯಲ್ಲೆಲ್ಲಾ ಸುಪುಷ್ಟವಾಗಿ ಸುಂದರವಾಗಿ ಶೃಂಗಾರವರ್ಣನೆ ಬಂದರೂ, ಮರುನಿಮಿಷದಲ್ಲಿಯೇ ಚಿದಂಬರಧ್ಯಾನವು ಅದರ ಸ್ಥಾನವನ್ನು ಆಕ್ರಮಿಸುತ್ತದೆ. ಅಲೆಯಾದೊಡನೆಯೇ ಜೇರೊಂದಲೆಯು ಬರಿದಾದ ಸ್ಥಾನವನ್ನು ಆಕ್ರಮಿಸುವಂತೆ ಶೃಂಗಾರ, ಚಿದಂಬರಧ್ಯಾನಗಳು ಕಾವ್ಯದಲ್ಲೆಲ್ಲಾ 'ಮುಟ್ಟಿಸಾಟ'ವಾಡುತ್ತಿವೆ. ಭರತನ ಜೀವನದಲ್ಲಿಯೂ ಈ ಸಮತೂಕ ಕಂಡುಬರುತ್ತದೆ. ಅಡಿಗಡಿಗೆ ಒಡನುಡಿದಿರುವಂತೆ ಯೋಗಭೋಗಗಳ ಸಮತೂಕವನ್ನು ನಾವು ಕಾಣುತ್ತೇವೆ.

ಭರತನ ಕಥೆಯು ಹಿಂದೂಗಳಾದವರಿಗೆಲ್ಲರಿಗೂ ಚಿರಪರಿಚಿತವಾದುದು. ಈ ಕಥೆಯು ಭಾಗವತದಲ್ಲಿ ಕಂಡುಬರುತ್ತದೆ. ಭಾರತ ರಾಮಾಯಣಗಳನ್ನು ಜೈನರು ಕೆಲವು ಚಿಕ್ಕಚಿಕ್ಕ ಮಾರ್ಪಾಟುಗಳೊಡನೆ ಸ್ವೀಕರಿಸಿರುವಂತೆ ಭಾಗವತದ ಭರತನ ಕಥೆಯನ್ನೂ ಸ್ವಲ್ಪಮಟ್ಟಿಗೆ ಬದಲಾಯಿಸಿಕೊಂಡಿರುತ್ತಾರೆ. ಮೂಲದಲ್ಲಿ, ವೃಷಭಚಕ್ರವರ್ತಿಯ ಮಗನಾದ ಭರತನು ಮುಪ್ಪಿನಲ್ಲಿ ರಾಜ್ಯವನ್ನು ತನ್ನ ಮಗನಾದ ಸುಮತಿಗೆ ವಹಿಸಿ ವಾನಪ್ರಸ್ಥಾಶ್ರಮವನ್ನು ಸ್ವೀಕರಿಸುತ್ತಾನೆ. ಅಡವಿಯ ಆಶ್ರಮದಲ್ಲಿ ವಾಸಿಸುತ್ತಿರುವಾಗ ದಿಕ್ಕಿಲ್ಲದ ಜಿಂಕೆಯ ಮರಿಯೊಂದು ಗಂಟುಬಿದ್ದು, ಆತನ ಅತ್ಯಂತ ಪ್ರೀತಿಗೆ ಪಾತ್ರವಾಗುತ್ತದೆ. ಅಂತಿಮಕಾಲದಲ್ಲಿ ಸಹ ಭರತನಿಗೆ ಜಿಂಕೆಯ ಹಂಬಲೇ! ಅದರ ಫಲವಾಗಿ ಅವನು ಮರುಜನ್ಮದಲ್ಲಿ ಜಿಂಕೆಯಾಗಿಯೇ ಹುಟ್ಟುತ್ತಾನೆ. ಅನಂತರ ಪಶ್ಚಾತ್ತಾಪದಿಂದ ಪರಿಶುದ್ಧನಾಗಿ ಆ ಜನ್ಮವನ್ನು ಕಳೆದು, ಪುನರ್ಜನ್ಮದಲ್ಲಿ ಜಡಭರತನೆಂಬ ಅವಧೂತನಾಗಿ ಹುಟ್ಟಿ ಮೋಕ್ಷವನ್ನು ಪಡೆಯುತ್ತಾನೆ. ಈ ಭರತ ಚಕ್ರವರ್ತಿಯ ತಂದೆಯಾದ ವೃಷಭಚಕ್ರವರ್ತಿಯೇ ಜೈನರ ವೃಷಭತೀರ್ಥಂಕರನೂ, ಆ ಭರತನೇ ರತ್ನಾಕರನ ಪ್ರಕೃತಕಾವ್ಯದ ಕಥಾನಾಯಕನೂ ಆಗಿರುತ್ತಾರೆ. ಭಾಗವತದ ಭರತನ ಆದಿ ಅಂತ್ಯ ಜೀವನಗಳ ಮಂಜುಳಸಂಮಿಳನ ಸಾಮರಸ್ಯಗಳನ್ನು ಒಂದೇ ಜನ್ಮದಲ್ಲಿ ತಂದಿರುವ ಕೌಶಲ ರತ್ನಾಕರನದು.

ಭರತನ ಜೀವನ ಚಿತ್ರವು ಶ್ರೀ ಕೃಷ್ಣನ ಜೀವನ ಚಿತ್ರವನ್ನು ಬಹುಮಟ್ಟಿಗೆ ಹೋಲಿದೆ. ಕವಿಯ ಆವೇಶಕ್ಕೆ ಉದ್ಗಮಸ್ಥಾನವು ಕೃಷ್ಣನ ಮಹತ್ತಾದ, ಅದ್ಭುತವಾದ, ಅಸಾಮಾನ್ಯವಾದ ಜೀವನ ಚಿತ್ರವೇ ಇರಬೇಕು ಎನ್ನಿಸುತ್ತದೆ. ಇಬ್ಬರ ಜೀವನದ ಸಾರತತ್ವವೂ ಒಂದೇ. ಅವರ ವ್ಯಾಪ್ತಿಯು ಬೇರೆಬೇರೆಯಾಗಿರಬಹುದಾದರೂ ಇಬ್ಬರ ಮನೋವೃತ್ತಿಯೂ ಒಂದೇ. ಇಬ್ಬರೂ 'ಪದ್ಮ ಪತ್ರಮಿವಾಂಭಸ' ಜೀವಿಗಳು. ಕೃಷ್ಣನು ಹದಿನಾರುಸಾವಿರ ಗೋಪಿಕಾಸ್ತ್ರೀಯರಿಂದ ಪರಿವೃತನಾಗಿ ಲೋಲುಪ್ತಿ ಯಲ್ಲಿದ್ದರೂ ಬ್ರಹ್ಮಚಾರಿ. ತೊಂಬತ್ತಾರುಸಹಸ್ರ ರಾಣಿಯರಿಂದ ಸಂಸೇವ್ಯನಾಗಿ ಕೇವಲ ರಾಗರಸದಲ್ಲಿ ಮುಳುಗಿದಂತೆ ತೋರುತ್ತಿದ್ದರೂ ಭರತನು ಮಹಾಯೋಗಿ. ಹದಿನಾರುಸಾವಿರ ಸ್ತ್ರೀಯರೊಡನೆ ಹದಿನಾರುಸಾವಿರ ರೂಪಗಳಿಂದ ಶ್ರೀ ಕೃಷ್ಣನು ಸಂತೋಷಪಡಿಸಬಲ್ಲವನು. ಭರತನೂ ಕಡಮೆಯಲ್ಲ; ತೊಂಬತ್ತಾರುಸಾವಿರ ಭರತರಾಗಿ ತನ್ನ ಸತಿಯರನ್ನು ತಣಿಸಬಲ್ಲ. ಗೀತಾಜೀವನವನ್ನು ಅನುಸರಿಸುತ್ತಿದ್ದ ಕೃಷ್ಣನಂತೆ ಭರತನೂ ಅಧ್ಯಾತ್ಮ ಯೋಗಿಯಾಗಿದ್ದನು: ಅಂತರ್ಮುಖಿಯಾಗಿದ್ದನು; ಮುಮುಕ್ಷು ವಾಗಿದ್ದನು. ಕೃಷ್ಣನ ಭುವನೈಕ ಮೋಹನರೂಪದಂತೆ ಭರತನ ರೂಪಕ್ಕೂ ಎಣೆಯಿಲ್ಲ. "ನಸುನಗೆಯಿಂದ ಹೆಂಗಳ ನೋಡೆ ಜುಮ್ಮೆನಲೊಸರಿಸುವನು ಕರಣಗಳಾ." ಕಾವ್ಯವು ಇಂತಹುದೆಂದು ಹೇಳದೆ ಕೆಳಗಿನ ಪದ್ಯಗಳನ್ನು ಓದಿದಾಗ, ಅರಿಯದವರು ಇದನ್ನು ಕೃಷ್ಣನ ಕಾವ್ಯವೆಂದೇ ಭ್ರಮಿಸಬಹುದು.

ಸುಳಿದ ಮಾತ್ರದೊಳು ಮಾನಿನಿಯರ ಹೃದಯದ | ಸುಳುಹುಗಾಣ್ಬನು ಭಾವಿತಾತ್ಮ |
ಸುಳಿಗುರುಳಿನ ಸೊಬಗೆಯರ ತನ್ನಯ ಸುತ್ತ | ಸುಳಿದಾಡಿಸುವನು ಸೋಲದೊಳು ||
ಒಬ್ಬಳಮೇಲೆ ತನಗೆ ಸೋಲವಿದ್ದರೂ | ದುಬ್ಬಗಾಣಿಸನದ ನುಡಿದು |
ಒಬ್ಬ ಪುರುಷನೊಬ್ಬ ಸತಿಯೊಳಿಪ್ಪಂತಿಹ | ನುಬ್ಬಸವಿಲ್ಲದೆಲ್ಲರೊಳು ||
ಮಾರ್ಗವಲ್ಲೆಂಬಂತೆ ತೋರ್ಪುದನ್ಯರಿಗೆ ಸ | ನ್ಮಾರ್ಗದೊಳವನಿರುತಿಹನು |
ಆರ್ಗೆ ತಿಳಿಯಬಹುದಾತ್ಮ ವಿಜ್ಞಾನಿಯಂ | ತರ್ಗತವನು ಜಿನ ಬಲ್ಲಾ ||

ಕಟಕಿನುಡಿಗಳಿಂದ ಕೃಷ್ಣನನ್ನು ಸ್ತುತಿಸಿ ಮೈಯುಂಡವರಿಗೆ "ಠಕ್ಕರಂತಿಹನದು ಠಕ್ಕಲ್ಲ. ನಿಜವ ಕಣ್ಣಿಕ್ಕಿ ಕಂಡವನ ಲೀಲೆಯದು" ಎಂಬುದನ್ನು ಕೇಳಿದೊಡನೆಯೇ ಕೃಷ್ಣನ ಮೂರ್ತಿಯೇ ಕಣ್ಣೆದುರಿಗೆ ಬಂದು ನಿಲ್ಲುತ್ತದೆ. ಇಂತಹ ಆದರ್ಶಪುರುಷ ನಾದ ಭರತನ ಹೆಸರೇ ಭರತಖಂಡವೆಂಬ ಹೆಸರಿಗೆ ಮೂಲವೆಂಬುದನ್ನು ಕೇಳಿ ಸಂತೋಷಪಡೋಣ.

**ಬಾಹುಬಲಿ**—ಭರತನ ತಮ್ಮನಾದ ಭುಜಬಲಿಯು ಕಲಿಯುಗದ ಮದನ. ಮದನನಿಗಿರುವ ಶೃಂಗಾರಭೋಗಗಳೂ ಭೋಗಪರಿಕರಗಳೂ ಚಾಚೂ ತಪ್ಪದೆ

ಭುಜಬಲಿಯ ಕರಗತವಾಗಿವೆ. ಇಷ್ಟೇ ಅಲ್ಲ. ಕಾಮನ ಪರ್ಯಾಯನಾಮಗಳೂ ಭುಜಬಲಿಗೆ ಅರ್ಪಿತವಾಗಿವೆ. ಸಮಸ್ತ ವಿಚಾರಗಳಲ್ಲಿಯೂ ಈತನು ಪುರಾಣೋಕ್ತ ಮನ್ಮಥನೇ. ತನ್ನ ಹೆಸರೆಂತಂತೆ ಅದ್ವಿತೀಯ ಬಾಹುಬಲದಿಂದ ಪೌದನಪುರದಲ್ಲಿ ಆಳುತ್ತಿರುತ್ತಾನೆ. ಈತನು ಸೋಲದ ಹೊರತು ಭರತನಿಗೆ ಚಕ್ರವರ್ತಿಯೆಂಬ ಬಿರುದು ಸಲ್ಲದು. ಅದಕ್ಕಾಗಿಯೇ ಪೌದನಪುರವು ಸಮಿಾಪಿಸಿದೊಡನೆಯೇ ಚಕ್ರರತ್ನವು ಮುಂದೆ ಸಾಗದೆ ನಿಂತುಬಿಡುತ್ತದೆ. ಇತರ ಜೈನಕವಿಗಳ ದೃಷ್ಟಿಯಲ್ಲಿ ಬಾಹುಬಲಿಯೇ ಭರತನಿಗಿಂತಲೂ ಹೆಚ್ಚು ಸತ್ವಶಾಲಿ. ಭರತನೊಡನೆ ಜಲಯುದ್ಧ ದೃಷ್ಟಿಯುದ್ಧಗಳನ್ನು ನಡೆಸಿ ಜಯಶೀಲನಾಗುತ್ತಾನೆ. ಆದರೆ ರತ್ನಾಕರವರ್ಣಿಯು ಧೀರೋದಾತ್ತನಾದ ತನ್ನ ಕಥಾನಾಯಕನಿಗೆ ಹೆಚ್ಚು ಮಹತ್ತನ್ನು ಕಲ್ಪಿಸುವುದಕ್ಕಾಗಿ ಬಾಹುಬಲಿಯ ಪ್ರಭೆಯನ್ನು ತಗ್ಗಿಸಿರುತ್ತಾನೆ. ಬಾಹುಬಲಿಯು ಕ್ಷತ್ರಿಯೋಚಿತವಾದ ಯುದ್ಧ ಕಾರ್ಯಕ್ಕೆ ಹಿಂದೆಗೆಯನೇ ಹೊರತು ತನ್ನ ಅಣ್ಣನಲ್ಲಿ ಗೌರವವಿಲ್ಲದೇ ಇಲ್ಲ. "ಗುಣಕೆರಗುವೆನಹುದಣ್ಣನೆಂದೊಮ್ಮೆ ಝುಂಕಣೆಗೆರಗುವೆನೆ! ತಾನೀಗ ಅಣಿದೋರಿ ನಿಂದು ಬಣ್ಣಕೆ ನಿನ್ನ ಕಳುಹಿ ಪ್ರೇರಣಿಸುತಿದ್ದನು ಭಾಪು ನೋಡ!" ಎಂದು ತನ್ನಲ್ಲಿ ಸಂಧಾನಕ್ಕಾಗಿ ಬಂದ ದಕ್ಷಿಣಾಂಕನ ಮುಂದೆ ಹೇಳುತ್ತಾನೆ. ತನ್ನ ಅಣ್ಣನು ಈಗ ಬಂದಿರುವುದು ಚಕ್ರವರ್ತಿಯಾಗಿಯೇ ಹೊರತು ಅಣ್ಣನೆಂಬ ದೃಷ್ಟಿಯಿಂದಲ್ಲ. ಅಣ್ಣನು ದೂದಟ್ಟುವ ಪ್ರಮೇಯವೇನಿದೆ? ನೇರವಾಗಿ ತನ್ನ ಅರಮನೆಗೇ ಬಂದು ಇಳಿದುಕೊಳ್ಳಬಹುದಾಗಿತ್ತು. ಹಾಗೆ ಮಾಡಿದ್ದಲ್ಲಿ ತನ್ನ ರಾಜ್ಯವೆಲ್ಲಾ ಆತನದೆಂದೇ ಭಾವಿಸಿ ಗೌರವಿಸಬಹುದಾಗಿತ್ತು. ಹಾಗಲ್ಲದೆ "ಉತ್ತಮರಾಣಿಯ ಮಗನೊಬ್ಬ ನೆನ್ನನು ತೊತ್ತಿರ ಮಗನ ಕಾಂಬಂತೆ" ಕಾಣುತ್ತಿರುವನಲ್ಲ! "ಕೇಳಿಬ್ಬರರಸಿಯ ರುಂಟೈಸೆ ದೊರೆ ಪಾಟಿ ಊಳಿಗವೆಣ್ಣಿಲ್ಲ ಪಿತಗೆ!"

ರಾಜಧರ್ಮವನ್ನು ಪಾಲಿಸ ಹೊರಟಿರುವ ಬಾಹುಬಲಿಯು ಯುದ್ಧಕ್ಕೆ ಸಿದ್ಧನಾಗಿ ಹೊರಟುದು ನಿಜ. ಆದರೆ ಅಣ್ಣನ ಇದಿರಿನಲ್ಲಿ ಬಹಳ ವಿನಯದಿಂದ ನಡೆದುಕೊಳ್ಳು ತ್ತಾನೆ. ಅಣ್ಣನ ಮೃದುನುಡಿಗಳ ಕಾವಿನಲ್ಲಿ ಬೆಣ್ಣೆಯಂತೆ ಕರಗಿಹೋಗುತ್ತಾನೆ. ನವಿನುಡಿಗಳ ಕಶಾಹತಿಯು ಹೃದಯದ ಮೇಲೆ ಒಂದೇ ಸಮನೆ ಬೀಳುತ್ತಿದ್ದರೂ ಬುದ್ಧಿಯು ಕ್ರೋಧದ ಕಡೆಗೆ ತಿರುಗುವುದಿಲ್ಲ. ಅಣ್ಣನ ಮಾತುಗಳಿಗೆ ಪ್ರತಿ ನುಡಿಯುವುದಿರಲಿ, ತಾನು ಮಾಡಿದುದು ನ್ಯಾಯವೆಂದು ಸಾಧಿಸುವ ಸಾಹಸಕ್ಕೆ ಸಹ ಕೈಯಿಕ್ಕುವುದಿಲ್ಲ. ಮೌನದಿಂದ ಆತನಾಡುವುದೆಲ್ಲವನ್ನೂ ಕೇಳಿ ಕೃತ ಕಾರ್ಯಕ್ಕಾಗಿ ಪಶ್ಚಾತ್ತಾಪದಿಂದ ದಗ್ಧನಾಗಿ, ಆ ಅನುತಾಪದ ದಾವಾನಲದಲ್ಲಿ ತನ್ನ ಮೋಹಜಾಲಗಳನ್ನೆಲ್ಲಾ ಸುಟ್ಟು ಯೋಗಿಯಾಗುತ್ತಾನೆ. ಸ್ವತಃ ಮನ್ಮಥ

ನಾದವನು ಯೋಗಿಯಾಗುವುದೆಂದರೆ ನೀರಿಗೆ ಬೆಂಕಿ ಬಿದ್ದಂತೆ. ಇಂತಹ ಅಸಾಧ್ಯವಾದುದನ್ನು ಸಾಧ್ಯವಾಗುವಂತೆ ಮಾಡಿದುದರಿಂದಲೇ ಆತನ ಕೀರ್ತಿಯು ಆಚಂದ್ರಾರ್ಕವಾಗಿ ನಿಂತಿರುವುದು. ಆತನ ಪುಣ್ಯಮೂರ್ತಿಯು ಇಂದಿಗೂ ಗೊಮ್ಮಟೇಶ್ವರನೆಂಬ ಹೆಸರಿನಿಂದ ಜೈನರೆಲ್ಲರ ಆದರ ಗೌರವಗಳಿಗೆ ನೆಲೆಯಾಗಿ ಪೂಜಿಸಲ್ಪಡುತ್ತಿರುವುದು.

**ಪಂಡಿತೆ**—ಸ್ತ್ರೀ ವ್ಯಕ್ತಿಗಳನ್ನು ಚಿತ್ರಿಸುವುದರಲ್ಲಿ ಕವಿಯು ಅಪ್ರತಿಮವಾದ ಕುಶಲತೆಯನ್ನು ತೋರಿದ್ದಾನೆ. ತೊಂಬತ್ತಾರು ಸಹಸ್ರ ಸ್ತ್ರೀಯರನ್ನು ರಂಗದಲ್ಲಿ ತಂದಿರುವ ಈತನಿಗೆ ಸ್ತ್ರೀ ಪಾತ್ರಗಳ ಕಡೆಗೆ ಒಲವು ಹೆಚ್ಚು. ಭರತನ ಸಂಸಾರ ಚಿತ್ರವನ್ನು ವಿಮರ್ಶಿಸುವಾಗ ಇದನ್ನು ವಿಸ್ತಾರವಾಗಿ ವಿವೇಚಿಸೋಣ. ಸದ್ಯಕ್ಕೆ ಸ್ತ್ರೀ ಸಮೂಹದ ದಿಗ್ದರ್ಶಿಕೆಯಂತೆ ತೋರುವ ಪಂಡಿತೆಯನ್ನು ಕುರಿತು ಎರಡು ಮಾತುಗಳನ್ನು ಹೇಳುತ್ತೇವೆ. ಇದನ್ನು ನೋಡಿದರೆ ಕವಿಯು ಚಿಕ್ಕ ಚಿಕ್ಕ ವ್ಯಕ್ತಿಗಳನ್ನು ಕೂಡ ಎಷ್ಟು ರಸವತ್ತಾಗಿ ವರ್ಣಿಸುವನೆಂಬುದು ವ್ಯಕ್ತವಾಗುತ್ತದೆ. ಚಿಕ್ಕದು ದೊಡ್ಡದೆಂದು ತಾರತಮ್ಯವಿಲ್ಲದೆ ಕುಸುರಿಗೆಲಸವನ್ನು ಮಾಡಿರುವ ಕವಿಯ ಜಾಣ್ಮೆಯು ಎದ್ದು ಕಾಣುತ್ತದೆ.

ಪಂಡಿತೆಯು ರಾಯನ ಹೆಂಡಿರಿಗೆ ಅಲಂಕಾರ ಕಾವ್ಯಗಳನ್ನು ಹೇಳಿಕೊಟ್ಟಿರುವ ದಾದಿ. ದಾದಿಯಾದರೂ ತನ್ನ ಜಾಣ್ಮೆಯಿಂದ, ವಿದ್ವತ್ತಿನಿಂದ, ರಾಜನ ಮತ್ತು ರಾಣಿವಾಸದ ಗೌರವಕ್ಕೆ ಪಾತ್ರಳಾದವಳು. ಸಮಯ ಬಂದಾಗ ರಾಜನನ್ನಾಗಲಿ, ರಾಣಿಯನ್ನಾಗಲಿ ಝುಂಕಿಸಿ ನುಡಿದು ಬುದ್ಧಿಗಲಿಸುವಷ್ಟು ಸ್ವತಂತ್ರವಿದೆ ಅವಳಿಗೆ. ರಾಜನ ಚಿತ್ತವೃತ್ತಿಯನ್ನನುಸರಿಸಿ ಜಾಣ್ನುಡಿಯಿಂದ ಅವನ ಶೃಂಗಾರಜೀವನವನ್ನು ಮುಂದುವರಿಸುವವಳು. ಅವಳ ಜಾಣ್ನುಡಿಯು ಎಲ್ಲರನ್ನೂ ಸಂತೋಷಗೊಳಿಸುವಂತಹುದು. ರಾಜನು ಉಪ್ಪರಿಗೆಯಲ್ಲಿ ಓಲಗವನ್ನು ನೆರಹಿದ್ದಾನೆ. ರಾಣಿಯರೆಲ್ಲರೂ ಬಂದು ಕಪ್ಪಕಾಣಿಕೆಗಳನ್ನು ಒಪ್ಪಿಸುತ್ತಿದ್ದಾರೆ. ಒಬ್ಬಳು ಕಾಣ್ಕೆಯಾಗಿ ಪಾದರಿಯ ಅಲರನ್ನು ಅರ್ಪಿಸುತ್ತಿರುವಾಗ ಅದು ಜಾರಿ ಭರತನ ಅಡಿಯಲ್ಲಿ ಬಿತ್ತು. ಅವನು ಅದನ್ನು ಕಾಲಿನಿಂದ ನೂಕಿದ ಒಡನೆಯೇ ಪಂಡಿತೆಯು "ಪರದಾರ ಸೋದರ ನೊತ್ತಿಗೆ ಪಾದರಿ ಬರಬಹುದೇ ಭರತೇಶ? ಚರಣದಿಂದೊದೆದುದದಾಯ್ತು" "ಕಡುಶೀಲವತಿಯರು ನಿನ್ನ ಪೆಂಡಿರು ತಮ್ಮ ಕಡೆಗೊಬ್ಬ ಪಾದರಿ ಬರಲು, ಪಿಡಿ ತಂದು ನಿನಗೊಪ್ಪಿಸಿದರು ನೀನೊದೆದುದು ಬೆಡಗಾಯ್ತು ಶೀಲ ನಿಧಾನ" ಎಂದು ಅವನು ಮಾಡಿದ ಕೆಲಸವನ್ನು ಶ್ಲಾಘಿಸುವುದಲ್ಲದೆ, ಅದನ್ನು ತಂದೊಪ್ಪಿಸಿದ ರಾಣಿಗೂ ಖೇದವಿಲ್ಲದಂತೆ ಮಾಡುತ್ತಾಳೆ. ಮತ್ತೊಬ್ಬ ರಾಣಿಯು ಮುತ್ತೊಂದನ್ನು ತಂದು

ಭರತನಿಗೆ ಅರ್ಪಿಸಿದಳು. ಒಡನೆಯೇ ಪಂಡಿತೆಯು "ವದನ ವದನ ಸೋಂಕಿ ಮುತ್ತು ಕೊಡುವುದು ಲೋಕದೊಳುಂಟು ಭರತ ಚಕ್ರೇಶ; ಇದು ಚಿತ್ರ ಕರಯುಗ ಸೋಂಕಿ ಮುತ್ತೀವುದೆಂ"ದು ಹೇಳಿ ಎಲ್ಲರನ್ನೂ ನಗಿಸಿದಳು.

ಭರತ ಚಕ್ರೇಶ್ವರನು ತನ್ನ ಮೋಹದ ಮಡದಿ ಕುಸುಮಾಜಿಯು ರಚಿಸಿದ್ದ 'ರಾಜಲಾವಣ್ಯ'ವನ್ನು ಕೇಳಿ, ಅದನ್ನು ಬರೆದು ಓದಿದ ತನ್ನ ಅಮರಾಜಿ ಸುಮನಾಜಿಯರಿಗೆ ಮೆಚ್ಚೀಯಲು ಯತ್ನಿಸಿದಾಗ, ಬೇಡವೆಂದು ರಾಣಿಯರೆಲ್ಲರೂ ಕಾಲ್ಗೆರಗುವರು. ಇದರರ್ಥ ರಾಜನಿಗೆ ತಿಳಿಯದು. ಆಗ ಪಂಡಿತೆಯೇ "ಒರ್ವರೊರ್ವರಿಗೆರವಿಲ್ಲ ತಮ್ಮೊಳು ಸ್ನೇಹ ಪರ್ವಿಯೊಂದಾಗಿಹರರಸ" ಎಂದು ಸಮಾಧಾನ ಹೇಳಿದುದಲ್ಲದೆ ಸ್ವಲ್ಪ ಸರಸದ ಸ್ವಾತಂತ್ರ್ಯವನ್ನೂ ವಹಿಸಿ "ಅರಿಯೆಯಾ ನೀನಿದ ನಗೆಕಾರ ಬಗೆಕಾರ, ಮರೆಕಾರ ಬಲು ಟೌಳಿಕಾರ!" "ಸಾಕೆಮ್ಮ ದೇವಿಯರೆರಗಿ ಹೊತ್ತಾಯ್ತು ಪರಾಕು ಬೇಡೇಳಿರೆಂದೆನ್ನು" ಎಂದು ಝುಂಕಿಸಿ ನುಡಿಯುತ್ತಾಳೆ. ಆಗ ರಾಜನು ಪಂಡಿತೆಯ ಅಪ್ಪಣೆಯಂತೆ ಎಲ್ಲರನ್ನೂ ಏಳ ಹೇಳಿ ಅಮರಾಜಿ ಸುಮನಾಜಿಯರಿಗೆ ಆಲಿಂಗನದ ಮೆಚ್ಚಿತ್ತು ಸನ್ಮಾನ ಮಾಡುತ್ತಾನೆ. ಆದರೆ ಕುಸುಮಾಜಿ ಇದಕ್ಕೂ ಹೆಚ್ಚಿನ ಗೌರವಕ್ಕೆ, ಆದರಕ್ಕೆ, ಪಾತ್ರಳು; ಆದುದರಿಂದ ಆದಿನವನ್ನೆಲ್ಲಾ ಅವಳ ಮನೆಯಲ್ಲಿಯೇ ಕಳೆಯಬೇಕೆಂಬಾಸೆ. ತಾನೇ ಆ ನುಡಿಯನ್ನು ಬಾಯ್ಬಿಟ್ಟು ಆಡಲು ಸ್ವಲ್ಪ ಸಂಕೋಚ. ಅದಕ್ಕಾಗಿ ಪಂಡಿತೆಯನ್ನು ಕುರಿತು "ಪಂಡಿತೆ! ನಾವೆಮ್ಮ ಮನೆಯೊಳಿದ್ದನ್ನವ ಕೊಂಡರೊಳ್ಳಿತೊ ಭುಕ್ತಿಗೆಮ್ಮ ಪೆಂಡಿರೊಳೊರ್ವಳ ಮನೆಗೆ ಹೋಹುದು ಲೇಸೊ. . . .?" ಎಂದು ಕೇಳುತ್ತಾನೆ. ಇಂಗಿತಜ್ಞಳಾದ ಪಂಡಿತೆಯು ಆಲೋಚಿಸಿ ಹೇಳುವವಳಂತೆ ನಟನೆಮಾಡಿ, "ಒಡೆಯ! ಜಿನ್ನಹವಿಂದು ಕುಸುಮಾಜಿಯರ ಮನೆಗಡಿಯಿಟ್ಟರುತ್ತಮವೆಂದು" ಹೇಳಿದಳು. ಆದರೆ ಕುಸುಮಾಜಿಯ ಮನೆಗೇ ಏಕೆ? "ಹೊಸಕಾವ್ಯ ಮೂವರಿಂದಾದುದಿಬ್ಬರನೆ ಮನ್ನಿಸಿದೆಯಿನ್ನೊಬ್ಬಳಿಗಿಲ್ಲ. ಅಸಿಯಳ ಮನೆಗೆಯ್ದಿ ಮನ್ನಿಪುದುಚಿತ." ರಾಯನು ಈ ಮಾತನ್ನು ಕೇಳಿ 'ಎದೆಯೊಳಾನಂದ ಮುಖದೊಳಿಷ್ಟು ಮಾಂದ್ಯ ಭಾವದೊಳೊಡಬಟ್ಟ. . . .' ಅನಂತರ ಪಂಡಿತಳು ಕುಸುಮಾಜಿಯ ಕಡೆಗೆ ತಿರುಗಿ 'ಅಮ್ಮ! ರಾಯನಿಗಿಂದು ನಿನ್ನರಮನೆಯಲ್ಲಿ ಸಮ್ಮಾನ ಮುಂದೆ ನೀನೆಯ್ದಿ ಜಮ್ಮನೆ ಜೋಕೆ ಮಾಡೆಂದಳು.'

ಪಂಡಿತೆಯ ಪಾತ್ರವು ಒಳ್ಳೆಯ ಭಕ್ಷ್ಯಭೋಜ್ಯದ ನಡುವೆ ಉಪ್ಪಿನಕಾಯಿಯಿದ್ದಂತೆ ಇದೆ. ಸುಂದರವಾದ ಶೃಂಗಾರಮಯ ಸನ್ನಿವೇಶಗಳಲ್ಲಿ ಅವಳಾಡುವ ಒಂದೊಂದು ನುಡಿಯೇ ಎಷ್ಟೋ ಅಚ್ಚುಮೆಚ್ಚಿನವಾಗಿದೆ.

## ಭರತನ ಸಂಸಾರ ಚಿತ್ರ

ರತ್ನಾಕರನು ತನ್ನ ಸುತ್ತುಮುತ್ತಿನ ಜನಜೀವನದಿಂದಲೂ, ತನ್ನ ಸ್ವಂತ ಅನುಭವದಿಂದಲೂ ಸಂಸಾರ ಸೌಖ್ಯದ ಸಾರವೇನೆಂಬುದನ್ನು ಅರಿತುಕೊಂಡಿದ್ದವನಾಗಿರಬೇಕು. ಮನುಷ್ಯಕೃತವಾದುದು ಯಾವಾಗಲೂ ಅಸಂಪೂರ್ಣ. ಇಂತಹ ಅಸಂಪೂರ್ಣವಾದ—ಕುಂದುಕೊರತೆಗಳಿಂದ ಕೂಡಿದ—ಸಂಸಾರ ಚಿತ್ರದಲ್ಲಿ ಕೊರತೆಗಳ ಅಂಕು ಡೊಂಕುಗಳನ್ನು, ಯಾಚೆಕೋಚೆಗಳನ್ನು ಕೆತ್ತಿ ನೇರಮಾಡಿದ, ನಯಮಾಡಿದ, ಸುಂದರ ಸಂಸಾರಚಿತ್ರವನ್ನು ಕವಿಯು ಭರತನಲ್ಲಿ ಆರೋಪಿಸಿ ನಮ್ಮ ಕಣ್ಣಮುಂದೆ ಕಟ್ಟುತ್ತಾನೆ. ಕವಿಯ ಅನುಭವದ ಪರಿಪೂರ್ಣೀಕರಣವೇ ಒಂದು ಆದರ್ಶ ಸತ್ಯವನ್ನು ಸೃಷ್ಟಿಸಿಕೊಳ್ಳುವಂತೆ ಮಾಡಿ ಭರತನ ಸಂಸಾರಚಿತ್ರವನ್ನು ಕಟ್ಟಿದೆ. ಅವನು ರಾಜನಾಗಿ ನಡೆಯುತ್ತಿದ್ದುದೇ ಒಂದು ರೀತಿ, ಮನೆಯ ಜನಗಳೊಂದಿಗೆ ನಡೆಯುತ್ತಿದ್ದುದು ಬೇರೊಂದು ರೀತಿ. ಸಂಸಾರದ ನಡವಳಿಕೆಗಳಲ್ಲಿ ಭರತನು ಸಾಮಾನ್ಯ ಜನರಂತೆ ಹೇಗೆ ನಡೆದುಕೊಳ್ಳುತ್ತಿದ್ದನೆಂಬುದು ನಮಗೆ ಕಂಡು ಬರುತ್ತದೆ. ಇಲ್ಲಿಯೇ ರತ್ನಾಕರನ ಕವಿತೆಯು ಕಾಲದೇಶಗಳ ಎಲ್ಲೆಯಿಲ್ಲದೆ ಎಲ್ಲ ಜನರ ಬದುಕು ಸೌಖ್ಯಗಳಿಗೆ ಅನ್ವಯಿಸಿಕೊಳ್ಳಲು ಯೋಗ್ಯವಾದುದಾಗಿ ಕವಿಗೆ ಮಹತ್ತನ್ನು ಕೊಟ್ಟಿದೆ.

ಒಬ್ಬ ಸಂಸಾರಿಯ ಸ್ಥಾನವೇನು? ಮನುಷ್ಯನ ಜೀವನಕ್ಕೆ ನಿಕಟಸಂಬಂಧವನ್ನು ಉಳ್ಳ ಜನಸಂಖ್ಯೆ ಬಹಳ ಅಲ್ಪ. ಆ ಪರಿಮಿತಿಯುಳ್ಳ ಜನಸಮುದಾಯವೇ ಸಂಸಾರ. ಒಬ್ಬನೇ ಮನೆಗೆ ಯಜಮಾನನಾಗಿ, ತಮ್ಮನಿಗೆ ಅಣ್ಣನಾಗಿ, ಮಗನಿಗೆ ತಂದೆಯಾಗಿ, ಹೆಂಡತಿಗೆ ಗಂಡನಾಗಿ, ಸೇವಕನಿಗೆ ಯಜಮಾನನಾಗಿ, ತಂದೆತಾಯಿಗಳಿಗೆ ಮಗನಾಗಿ ಹೀಗೆಯೇ ಅನೇಕ ಸಂಬಂಧ ವಿಶೇಷಗಳಿಗೆ ಕೇಂದ್ರಸ್ಥಾನನಾಗಿರುವುದು ಸಂಸಾರಿಯ ಸ್ವರೂಪ. ಈ ಸಂಬಂಧ ವಿಶೇಷವು ಸ್ವಲ್ಪ ಹೆಚ್ಚು ಕಡಮೆಯಾಗಿ ಪ್ರಪಂಚದ ಎಲ್ಲ ಸಂಸಾರಿಗಳಿಗೂ ಉಂಟು. ಸಂಸಾರದ ಯಜಮಾನನು ತುರಾಯಿಯೊಳಗಣ ಗುಲಾಬಿ ಹುವ್ವಿನಂತಿರುತ್ತಾನೆ. ಉಳಿದ ಹೂಗಳೊಡನೆ ಇದಕ್ಕೆ ಸಾಮರಸ್ಯವಿರದಿದ್ದರೆ ತುರಾಯಿಯು ಸುಂದರವಾಗಿರಲಾರದು. ಭರತನಿಗೆ ತನ್ನ ಸಂಬಂಧದ ಆವರಣದಲ್ಲಿ ಸಾಮರಸ್ಯವಿತ್ತೆಂದೂ, ಅದರ ಆದರ್ಶಸೌಖ್ಯವನ್ನು ಅವನು ಅನುಭವಿಸುತ್ತಿದ್ದನೆಂದೂ ನಮಗೆ ತೋರಿಬರುತ್ತದೆ. ಬಾಹುಬಲಿಯು ಎದುರುಬಿದ್ದಾಗ ಭರತನ ಸೌಖ್ಯವೂ ಕದಡಿಹೋಗುವಂತಹ ಒಂದು ಸನ್ನಿವೇಶವು ಒದಗುತ್ತದೆ. ಆದರೆ ಸ್ವಲ್ಪದರಲ್ಲೇ ಅದು ನಿವಾರಣೆಯಾಗುತ್ತದೆ. ರತ್ನಾಕರನು ಸಾರುತ್ತಿರುವುದು ಮನಸ್ಸಿಗೆ ಶಾಂತಿಯಿರಬೇಕೆಂದು.

**ಹೆಂಡತಿಯರು**—ಭರತನು ಒಂದು ಸಂಗಮಸ್ಥಾನವಿದ್ದ ಹಾಗೆ. ಇದಕ್ಕೆ ಅನೇಕ ಆಹ್ಲಾದದ ತೊರೆಗಳು ಬಂದು ಸೇರುತ್ತವೆ. ಇವುಗಳಲ್ಲಿ ಅತಿ ಮುಖ್ಯವಾದುವು ಜೀವನವನ್ನು ಸುಖಮಯವಾಗಿ ಸಾಗಿಸಬಲ್ಲ ಹೆಂಡಿರು. ಯಾವ ದೃಷ್ಟಿಯಿಂದ ಇಬ್ಬರಿಗೂ ಪರಮ ಸುಖವುಂಟಾಗುವುದೋ ಅದನ್ನು ಸತಿಪತಿಗಳಿಬ್ಬರೂ ಪರಸ್ಪರ ಒದಗಿಸಬೇಕು. ಭರತನ ಆದರ್ಶಸಂಸಾರದಲ್ಲಿ ಇದು ಯಥೇಚ್ಛವಾಗಿದೆ. ನ್ಯಾಯ ವಾಗಿ ನೋಡಿದರೆ ಇವನಿಗೆ ಇರುವ ಸಮಸ್ಯೆಗಳು ಪ್ರಪಂಚದಲ್ಲಿ ಇನ್ನಾರಿಗೂ ಇರುವುದಿಲ್ಲ. ತೊಂಬತ್ತಾರುಸಾವಿರ ಹೆಂಡಿರು ಅವನಿಗೆ. ಸಾಮಾನ್ಯಜೀವನದಲ್ಲಿ ಒಬ್ಬ ಹೆಂಡತಿಯಿರುತ್ತಾಳೆ. ಬಹುಕಾಂತೆಯರಿರುವ ಕಡೆ ಸವತಿಮತ್ಸರವು ಅನಿವಾರ್ಯ. ಯಜಮಾನನು ಎಲ್ಲ ಹೆಂಡಿರನ್ನೂ ಸಮಾನತೆಯಿಂದ ನೋಡಬೇಕು ; ಬಹು ದಾಕ್ಷಿಣ್ಯ ಪರನಾಗಿರಬೇಕು. ಯಾವ ನಿಮಿಷಕ್ಕೆ ಎಲ್ಲಿ ಯಾರ ಮನಸ್ಸಿಗೆ ನೋವಾಗುವುದೋ ಎಂದು ಮೈಯೆಲ್ಲಾ ಕಣ್ಣಾಗಿ ವರ್ತಿಸಬೇಕಾಗುತ್ತದೆ. ತೊಂಬತ್ತಾರು ಸಾವಿರ ಹೆಂಡಿರಿದ್ದರೂ ಭರತನು ಇದನ್ನು ಬಹಳ ಸಮರ್ಥತೆಯಿಂದ ನಿರ್ವಹಿಸುತ್ತಾನೆ. ವ್ಯಕ್ತಿಗತವಾದ ರಾಗದ್ವೇಷಗಳಿಂದ ಪರಸ್ಪರ ಸವತಿಮತ್ಸರ ಹುಟ್ಟಲು ಭರತನ ಸಂಸಾರದಲ್ಲಿ ಸಾಧ್ಯವಿಲ್ಲ. ಅವನ ಹೆಂಡಿರು ಸವತಿಯರಲ್ಲ; ಅಕ್ಕತಂಗಿಯರು. ಭರತನು ಹಲವು ಹೆಂಡಿರನ್ನೂ ಏಕಕಾಲದಲ್ಲಿ ಸಂತೋಷಗೊಳಿಸಿ "ತನವರೂರ ಮರೆಯಿಸಿ, ನಿದ್ರೆಯ ತೊರೆಯಿಸಿ, ನವಿಗಳನರಿಯಿಸಿ . . . ದಿನರಾತ್ರಿಯೆನ್ನದೆ ಸುಖದೊಳೋಲಾಡಿ"ಸಿ ಬಿಡತಕ್ಕ ಪ್ರಭಾವವುಳ್ಳವನು.

ಭರತನ ರಾಣಿಯರು ಅವನಿಗೆ ತಕ್ಕವರು. ಅವರ ಹೆಸರುಗಳೇ ಸಾಕು. ಬಹು ಮುದ್ದಿನ ಹೆಸರುಗಳು. ಕನ್ನಾಜಿ, ಕಮಲಾಜಿ, ವಿಮಲಾಜಿ, ಸುಮನಾಜಿ, ಹೊನ್ನಾಜಿ, ಮಧುರಾಜಿ, ರನ್ನಾಜಿ, ಚೆನ್ನಾಜಿ, ಚಿನ್ನಾಜಿ, ಕಾಂತಾಜಿ, ಮುಕುರಾಜಿ, ಕುಸುಮ ಗಂಧಾಜಿ, ವಸಂತಾಜಿ, ಮಧುಮಾಧವಾಜಿ, ಅಂತರಂಗಾಜಿ, ಸುಖಾಜಿ, ಸುಖಾವತಿ, ಶಾಂತಾಜಿ, ಭೃಂಗಲೋಚನೆ, ನೀಲಲೋಚನೆ, ಕುರಂಗಲೋಚನೆ, ಪುಷ್ಪಮಾಲೆ, ಶೃಂಗಾರವತಿ, ಗುಣವತಿ, ಚಂದ್ರಮತಿ, ಸಾರಂಗಲೋಚನೆ, ವೀಣಾದೇವಿ, ವಿದ್ಯಾ ದೇವಿ, ಸುರದೇವಿ, ವಾಣೀದೇವಿ, ಶ್ರೀದೇವಿ, ಬಾಣಾದೇವಿ, ಭದ್ರಾದೇವಿ, ಕಲ್ಯಾಣೀ ದೇವಿ, ಅಂಜನಾದೇವಿ, ಕುಂಕುಮದೇವಿ, ಮಲ್ಲಿಕಾದೇವಿ, ಸುದೇವಿ, ಉತ್ಸಾಹಾದೇವಿ, ಚಿತ್ರವತಿ, ಚಿತ್ರಲೇಖೆ, ಪದ್ಮಾವತಿ, ನೇತ್ರಾವತಿ, ಚಂದ್ರಲೇಖೆ, ಮಿತ್ರಾವತಿ, ಪದ್ಮಲತೆ, ಲಲಿತಾಂಗಿ, ವಿಚಿತ್ರಾಂಗಿ, ಕನಕಲತೆ, ಕುಂದಲತೆ, ಕನಕಮಾಲೆ, ಜಿನಮತಿ, ಸಿದ್ಧಮತಿ, ರತ್ನಮಾಲೆ, ಮಣಿಮಾಲೆ, ಕಾಂತಿಮಾಲೆ. ಭರತನು ಬಹುಶಃ ಇವರ ಹೆಸರುಗಳನ್ನು ಅಮರಕೋಶವನ್ನು ಗಟ್ಟಿಮಾಡುವಂತೆ ಮಾಡಿದ್ದನೋ ಏನೋ!

ಎಲ್ಲರೂ ಪರಸ್ಪರ ಮೈತ್ರಿಯಿಂದಿರುತ್ತಿದ್ದುದು ಮಾತ್ರವೇ ಅಲ್ಲದೆ ತಮ್ಮ ಯಜಮಾನನ ಮನಸ್ಸು ಎಲ್ಲಿ ಸ್ವಲ್ಪ ನೊಂದೀತೋ ಎಂದು ಬಹಳ ಜಾಗರೂಕತೆಯಿಂದ ವರ್ತಿಸುತ್ತಾರೆ.

'ಎರಡು ಕರಿಯ ತಲೆಗಳು ಸೇರಿದರೆ ಸಂಸಾರಪ್ರಳಯ' ಎಂದು ಹೇಳುತ್ತಾರೆ. ಆದರೆ ಭರತನ ರಾಣಿಯರು ಹೊಂದಿಕೊಂಡು ಹೋಗುವ ಸುಂದರ ಚಿತ್ರವನ್ನು ನೋಡೋಣ. ಭರತರಾಜನು ಚಂದ್ರಗತಿ ಆದಿತ್ಯಗತಿಗಳೆಂಬ ಯೋಗೀಶ್ವರರ ಚರಿಗೆಯನ್ನು ತೀರಿಸಿ, ಕಾಲಾತೀತವಾಗಿದ್ದುದರಿಂದ ತನ್ನ ಮೋಹದ ಮಡದಿಯರನ್ನೂ ತನ್ನ ಜೊತೆಯಲ್ಲಿಯೇ ಊಟಕ್ಕೆ ಕುಳಿತುಕೊಳ್ಳುವಂತೆ ಬಲವಂತಪಡಿಸಿದನು. ಆಗ 'ಹಲವರು ರಾಯನ ಪಂತಿಯೊಳೂಟಕೆ ಕುಳಿತರು. ಮತ್ತವರಲ್ಲಿ ಕೆಲಬರಾರೋಗಣೆ ಗೆಡೆಮಾಡಲನುವಾಗಿ ಸುಳಿದಾಡುತಿರ್ದರರ್ತಿಯೊಳು.' ಆದರೆ 'ಇವಳು ಗಂಡನ ಪಂತಿಯೊಳು ಕುಳಿತುಂಬುವಳಿವಳಿಗಾನಿಕ್ಕುವಳೆಂಬಾ ಸವತಿ ಮತ್ಸರವಿಲ್ಲ. ತಾವೆಂದರವರೆಂಬ ಸುವಿನಯ ಮಿಗೆ ಬಡಿಸಿದರು.' ಊಟಮಾಡುತ್ತಿದ್ದವರಾದರೂ ಸ್ವಲ್ಪ ಗರ್ವದಿಂದ ಬೀಗಿದರೆ? ಇಲ್ಲ ಇಲ್ಲ. ಕೈತೊಳೆದುದೇ ತಡ "ಕುಳ್ಳಿರಿರಕ್ಕ ನೀವೆಲ್ಲ ಬಳಲಿದ್ದಿರೆಂದೊಳ್ಳಿತ ನುಡಿದು ಭಾವೆಯರು ಎಲ್ಲರಿಗುಣಬಡಿಸಿದರವರವರಂದದಲ್ಲಿಯೆ ಸವಿದರನ್ನವನು."

ಮತ್ತೊಂದುದಿನ ರಾಜನು ತನ್ನ ಉಪ್ಪರಿಗೆಯ ಮೇಲೆ ಓಲಗಗೊಟ್ಟನು. ರಾಣಿಯರೆಲ್ಲರೂ ಕೈಗಾಣಿಕೆಯೊಡನೆ ಆತನನ್ನು ಕಾಣಲು ಬರುತ್ತಿರುವಾಗ ಪರಸ್ಪರ ಮಾಡುವ ಸರಸ ವಿನೋದಗಳು ಬಹು ಮನೋಹರವಾಗಿವೆ. ಅವರಲ್ಲಿ ಮುಂದೆ ಹೋಗುತ್ತಿದ್ದವಳನ್ನು ಕುರಿತು, ಓಡು ಓಡು ನಿನ್ನರಸ ದೊಡ್ಡ ಮೆಚ್ಚುಕೊಡಲು ಕಾದಿದ್ದಾನೆ. ಪಾಪ ಎಷ್ಟುದಿನಗಳಿಂದ ಪತಿಯನ್ನು ಕಾಣಳೊ, ಎಂದು ಪ್ರೌಢೆಯೊಬ್ಬಳು ಅಣಕವಾಡಿದಳು. ಆಗ ಆ ಮುಗ್ಧೆಯು 'ಅವ್ವ! ನೀವೇನನಾಡಿರಿ ಚಕ್ರವರ್ತಿಯ ಸುವ್ವಲಾಲೆಯ ನಾಡಿಸುವರು?' ಎಂದು ಪ್ರತಿಹಾಸ್ಯಮಾಡುವಳು. ಮುಂದೆಹೋದರೆ ಹಾಸ್ಯವೆಂದು ಹಿಂದೆ ಬೀಳುವುದಕ್ಕುಂಟೆ? ಹಿಂದಿನವಳ ಗತಿಯನ್ನು ನೋಡಿ, "ಬರಲಾರಳವಳಿಗೆ ಕೈಗೊಡಿರೆದೆಯಲ್ಲಿ ಹಿರಿಯ ಹೊರೆಯ ಹೊತ್ತಳವಳು ಭರತಚಕ್ರೇಶಗೆ ಕೃಪೆಯಿಲ್ಲ ಮಾಡಕೆ ಬರಹೇಳಬಹುದೆ ನೋಡಿವಳಾ!" ಎಂದು ಅವಳನ್ನು ಗೇಲಿಗೆ ಹಚ್ಚಿದ್ದಾರೆ. ಮತ್ತೊಬ್ಬ ಮುಗ್ಧೆ, ಮಾತನಾಡಿದರೆ ಏನು ಫಜೀತಿಯೋ ಎಂದು ಸುಮ್ಮನೆ ಬರುತ್ತಿದ್ದಾಳೆ. ಆದರೆ ಅವಳನ್ನು ಸುಮ್ಮನಿರಗೊಡುವರೆ? "ಮೌನವೀಕೆಗೆ ತನ್ನ ಗಂಡನಂತಾತ್ಮನ ಜಾಪಿಸುತ್ತೈದುವ ಪರಿಯೊ!" ಎಂದು ಅವಳನ್ನು ಕೆಣಕುವರು. ಆಗ ಅವಳೂ ಮೂಕತನವನ್ನು ಬಿಟ್ಟು 'ಧ್ಯಾನಗೀನವು ನೀವು ನಿಮ್ಮರಸನು ಒಲ್ಲಿರಾನೇನ ಬಲ್ಲೆನಾ ಗುಸುಟ? ಈ ನಿಮ್ಮ ಸರಸಸಲ್ಲಾಪಕೆ ಮನದಲ್ಲಿ ಆನಂದಿಸುತ ಬಂದೆನಕ್ಕಾ" ಎಂದು ನುಡಿಯುವಳು. ಹೀಗೆ ಸರಸವ

ನ್ನಾಡುತ್ತಾ ಹೋಗುತ್ತಿರುವಾಗ ಒಬ್ಬಳು ಮತ್ತೊಬ್ಬಳ ಕಾಲಮೇಲೆ ಸ್ವಲ್ಪ ಮಸಿ ಮೆತ್ತಿರುವುದನ್ನು ಕಂಡು ಕೈಮುಟ್ಟಿ ಒರಸುತ್ತಾಳೆ. ಒಡನೆಯೇ ಆಕೆಯು ಝುಂಕಿಸಿ 'ಕಾಲಮೇಲದೆ ಕಪ್ಪು ತೊಡೆದುಕೊಳ್ಳೆಂದೊಲ್ದು ಹೇಳದೆ ತೊಡೆವರೆ ತಂಗಿ?' ಎಂದು ಮಿಡುಕುವಳು. ತಾನು ಮಾಡಿದುದು ಅಷ್ಟೇನೂ ಉಪಚಾರೋಕ್ತಿಗೆ ತಕ್ಕುದಲ್ಲವೆಂಬ ಭಾವನೆಯಿಂದ ಕಿರಿಯವಳು 'ಒಲಗ ಮುಟ್ಟಲಾದುದು ಸುಮ್ಮನೈದಕ್ಕ, ಕೇಳಬಹುದು ನಮ್ಮ ಮಾತು' ಎಂದು ಅವಳನ್ನು ಸುಮ್ಮನೆ ಮಾಡುವಳು.

ಈ ಸತಿಯರ ಪರಸ್ಪರ ಮೈತ್ರಿಯು ಅಸದೃಶವಾದುದು. ಕುಸುಮಾಜಿಯ 'ರಾಜಲಾವಣ್ಯ'ವನ್ನು ಕೇಳಿದ ರಾಜನು ಅವಳಲ್ಲಿ ಅನುರಕ್ತನಾಗಿ ಉಪಾಯದಿಂದ ಆ ದಿನವೆಲ್ಲಾ ಅವಳ ಮನೆಯಲ್ಲಿ ಕಳೆಯುವಂತೆ ಸನ್ನಿವೇಶವನ್ನು ಕಲ್ಪಿಸಿಕೊಳ್ಳುತ್ತಾನೆ. ಅವಳಿಗಾದ ಗೌರವಕ್ಕಾಗಲಿ, ಅವಳಿಗೆ ದೊರೆತ ಅಮೌಲ್ಯಭಾಗ್ಯಕ್ಕಾಗಲಿ ಸವತಿಯ ರಾರಿಗೂ ಸ್ವಲ್ಪವೂ ಕಸಿವಿಸಿಯಿಲ್ಲ. ತನಗಾಗಿರುವ ಸನ್ಮಾನಕ್ಕಾಗಿ ನಾಚುತ್ತಾ ಗೆಳತಿಯರೆದುರಿಗೆ ನಿಂತಿದ್ದ ಅವಳನ್ನು ಕುರಿತು, "ತಂಗಿ ಹೋಗಕ್ಕ ಹೋಗಾಣ್ಮ ನಾರೋಗಣೆಗಂಗನೆಗೆಡೆಮಾಳ್ಪ ಭಾಗ್ಯ ಸಂಗಡಿಸಿತು ನಿನಗದು ನಮ್ಮ ಭಾಗ್ಯ ವೆಂದಿಂಗಿತ ಮಿಗೆ ಕಳುಹಿದರು."

ಭರತನು ಪುರುಷರತ್ನನಾದರೆ ಅವನ ಸ್ತ್ರೀಯರು 'ಸುರುಚಿರ ರತ್ನಗಳು.' 'ಪತಿ ಲೇಸು' ಎಂದು ಹೇಳುವುದಾದರೆ ಸತಿಯರು 'ಲೇಸುಲೇಸು.' 'ಸೂಜಿಯ ಬಳಿಯ ನೂಲಂತೆ' ಪತಿಮಾರ್ಗವನ್ನು ಎಡೆಬಿಡದೆ ಅನುಸರಿಸುವವರು. ಇವರ ಪತಿಭಕ್ತಿಯೂ, ಅನುರಾಗವೂ ಎಷ್ಟು ಉನ್ನತವಾದುವೆಂದರೆ ಹುಡುಗಾಟಕ್ಕೆ ಸಹ ಪತಿಯ ಮನಸ್ಸಿಗೆ ನೋವಾಗುವಂತಹ ಸನ್ನಿವೇಶಗಳನ್ನು ತಂದೊಡ್ಡರು. ಪ್ರಣಯ ಕಲಹವು ಸಹ ಇವರಿಗೆ ಸಹಸವಾಗದು. ರಾಜನು ನಾಟಕವನ್ನು ನೋಡುತ್ತಾ ಕುಳಿತಿರುವಾಗ ಒಮ್ಮೆ ಮೊಗದಿರುಹಿದನೆಂದೂ, ಮಂತ್ರಿಯೊಡನೆ ಮಾತನಾಡಿದನೆಂದೂ, ಇದರಿಂದ ತಮಗೆ ಅವಮಾನವಾಯಿತೆಂದೂ ರೂಪಾಣಿ, ಪದ್ಮಿನಿಯರೆಂಬುವರು ಕೋಪಗೊಂಡು ರಾಜನೊತ್ತಿಗೆ ಬರದೆ ದೂರದಲ್ಲಿ ಕಂಬವನ್ನು ನೆಮ್ಮಿ ನಿಂತಿದ್ದರು. ರಾಜನ ಮೃದುವಚನಗಳ ಮೋಡಿಗೆ ರೂಪಾಣಿ ಕಟ್ಟುಬಿದ್ದರೂ, ಪದ್ಮಿನಿಯು ಮಾತ್ರ ಹುಸಿಮುನಿಸಿನಿಂದ ದೂರದಲ್ಲಿಯೇ ನಿಂತಿದ್ದಳು. ಉಳಿದ ರಾಣಿಯರೆಲ್ಲರೂ ಬೇಡಿದರೂ ಅವಳ ಕೋಪವು ಇಳಿಯಲಿಲ್ಲ. ಅವಳಿಗೆ ಗಂಡನೊಡನೆ ಪ್ರಣಯಕಲಹಮಾಡಬೇಕೆಂಬ ಹಿರಿಯಾಶೆ. ರಾಜನ ಮನಸ್ಸು ಎಲ್ಲಿ ನೊಂದುಕೊಳ್ಳುವುದೋ ಎಂದು ಉಳಿದ ಹೆಣ್ಣುಗಳ ಆತಂಕ. "ಏಕೆ ನಿಂದಳು ಮತ್ತೆ ಪದ್ಮಿನಿ ಬಾರದೆ? ಹಾ ಕಷ್ಟಗುಣವ ಕಲಿತಳು" ಎಂದು ಮಿಡುಕಿ "ಸಾಕಿನ್ನು ಬಾರಗೆ ಹೆಣ್ಣೆ" ಎಂದು ಗಜರುವರು. ಪದ್ಮಿನಿಯು

ಜೋರಿನವಳಾದರೂ ಎಲ್ಲರೂ ಒಂದಾಗಿರುವರಲ್ಲ ಎಂದು ಆತಂಕ. 'ಎಲ್ಲರೊಂದಾಗಿ ಕೊಂಡೊಬ್ಬಳ ಜಡಿವಿರಿ ಸಲ್ಲಗೆ ಹಿತವಾಗಿ ಯಕಟ' ಎಂದು ಮಿಡುಕುವಳು. "ಅರಸ ನುದಾಸೀನಗೈದರೇನೊತ್ತಿನ ತರುಣಿಯರೆನ್ನವರೆಂದು ಹಿರಿದು ನಂಬಿದ್ದೆನು. ನೀವು ನಿಮ್ಮರಸನ ಪರಿಯಾದಿರಕ್ಕ ಚೆನ್ನಾಯ್ತು" ಎಂದು ಹಳಹಳಿಸುವಳು. ರಾಜನಿಗೆ ಇದೊಂದು ವಿನೋದ. ಕಣ್ಣುಮುಚ್ಚಿ ತೆರೆಯುವುದರಲ್ಲಿ ಅವಳನ್ನು ಒಲಿಸಿಕೊಳ್ಳಬಹು ದೆಂಬ ನಂಬಿಕೆಯಿದೆ. ಆದುದರಿಂದ ಪದ್ಮಿನಿಯ ಕಡೆ ವಕಾಲತ್ತು ವಹಿಸಿದವನಂತೆ ಮುಂದೆ ಬಂದು "ಯುವತಿಯರಿರ, ನೀವು ನಿಲ್ಲಿ. ನಾನವಳ ಶಾಂತವ ಮಾಳ್ಪೆ" ಎಂದು ಉಪಾಯದಿಂದ ಅವಳ ಹೃದಯವನ್ನು ಸೂರೆಗೊಂಡು ಶರಣಾಗತಳನ್ನಾಗಿ ಮಾಡಿಕೊಳ್ಳುತ್ತಾನೆ. ಅನಂತರ ಶಾಖಾ ಶರೀರಿಯಾಗಿ ಹಲವು ಭರತರ ರೂಪಿನಿಂದ ಎಲ್ಲ ರಾಣಿಯರೊಡನೆಯೂ ಬೆರೆತು ಸಂತೋಷಗೊಳಿಸುತ್ತಾನೆ.

**ಅತ್ತೆ-ಸೊಸೆಯರು**—ಗಂಡನಲ್ಲಿ ಅಪಾರವಾದ ಭಕ್ತಿ ಪ್ರೀತಿಗಳಿದ್ದುದಷ್ಟೇ ಅಲ್ಲ. ಭರತನ ರಾಣಿಯರು ತಮ್ಮ ಅತ್ತೆಯಲ್ಲಿಯೂ ಅಷ್ಟೇ ಭಕ್ತಿ ವಿಶ್ವಾಸಗಳನ್ನು ಇಟ್ಟುಕೊಂಡಿದ್ದರು. ಯಶೋಮತೀದೇವಿಯೂ ಅಷ್ಟೆ. ಆದರ್ಶಮೂರ್ತಿಯಾದ ಅತ್ತೆ. ತನ್ನ ಮಗನ ಮೇಲೆ ಎಷ್ಟು ಮಮತೆ ಅಭಿಮಾನಗಳುಂಟೋ ಸೊಸೆಯರಲ್ಲಿಯೂ ಅಷ್ಟೇ ಅಭಿಮಾನ ಮಮತೆಗಳು. ಭರತಚಕ್ರವರ್ತಿಯು ದಿಗ್ವಿಜಯಕ್ಕಾಗಿ ಹೋಗುವ ಮುನ್ನ ಜನನಿಯ ಅಡಿಗಳಿಗೆರಗಿ ಹರಕೆಗೊಳುವನು. ಅವನ ರಾಣಿಯರೂ ಒಬ್ಬೊಬ್ಬ ರಾಗಿ ಬಂದು ನಮಸ್ಕರಿಸುತ್ತಿರುವರು. ಆಗ ಅತ್ತೆಯು "ಬನ್ನವೆಂಬುದ ನಿಮ್ಮ ಕನಸಿ ನೊಳಗೆ ಕಾಣದೆನ್ನನುಜನ ಸುತೆಯರಿರ, ನನ್ನ ಣುಗನ ಕೂಡೆ ಲೀಲೆಯೊಳೋಲಾಡಿ ಬನ್ನಿರೆಂದು . . ." ಹರಸುತ್ತಾಳೆ. ಹೋಗುವ ಕಾಲದಲ್ಲಿ ಹಿರಿಯರ ಹರಕೆಯೊಂದೇ ಸಾಲದು. "ಬುದ್ಧಿಯೇನತ್ತೆಮ್ಮ ನಮಗೆ?" ಎಂದು ಕೇಳಿದರು. ಅಸಾಮಾನ್ಯಪುರುಷ ನಾದ ತನ್ನ ಮಗನ ಒತ್ತಿನಲ್ಲಿರುವ ಆ ವನಿತೆಯರಿಗೆ ಬುದ್ಧಿ ಹೇಳುವುದಿನ್ನೇನು? "ನಿಮ್ಮ ಪತಿವೇಳ್ದ ಸೊಮ್ಮಿನೊಳಿಹುದದೆ ಬುದ್ಧಿ" ಎಂದು ಉತ್ತರ ಹೇಳುತ್ತಾಳೆ. ಆಗ ಸೊಸೆಯರು ಎಲ್ಲರೂ ಕಲೆತು ತಾವು ಪುನಃ ತಮ್ಮ ಅತ್ತೆಯ ಅಡಿದಾವರೆಗಳನ್ನು ಕಾಣುವತನಕ ಒಂದು ವ್ರತವನ್ನು ನಡೆಸಬೇಕೆಂದು ಸರ್ವಾನುಮತದಿಂದ ನಿಶ್ಚಯಿಸು ತ್ತಾರೆ. ಪರರಾಜ್ಯಕ್ಕೆಯ್ದುವ ಆ ಪೆಣ್ಗಳು ಸಂಚರವ್ರತವನ್ನು ಕೈಕೊಳ್ಳುವುದು ಅನಾ ವಶ್ಯಕ, ಬೇಡ ಎಂದು ಅತ್ತೆ ಹೇಳಿದರೂ 'ಎಲ್ಲಿ ಹೋದರೂ ಅದು ಭರತೋರ್ವಿಯೇ, ನಮ್ಮ ರಾಜ್ಯವೇ' ಎಂದು ಹೇಳಿ "ಮಲ್ಲಿಗೆಯನು ಸೂಡೆನೆಂದಳೊರ್ವಳು, ಜಾಜಿ ಯೊಲ್ಲೆನೆಂದೊರ್ವಳಾಡಿದಳು. ಮೊಲ್ಲೆ ಬೇಡೆನಗೆಂದಳೊರ್ವಳತ್ತ್ಯಮ್ಮನ ಮೆಲ್ಲಡಿಗಳ ಕಾಣ್ಬತನಕ. ಚಿಲುಪಾಲು ವ್ರತವೆಂದಳೊರ್ವಳು ಪೇಣಿಯ ಮೆಲ್ಲಲೊಲ್ಲೆನೆಂದ

ಳೊರ್ವಬಲೆ. ಎಳೆಯೆಲ್ಲ ವ್ರತವೆಂದಳೊರ್ವಳತ್ತ್ಯಮ್ಮನ ತಳಿರಡಿಗಳ ಕಾಣ್ಬತನಕ.'' ಹೀಗೆಯೇ ಒಬ್ಬಳು ಗೋರೋಚನವನ್ನೂ ಮತ್ತೊಬ್ಬಳು ಕಸ್ತೂರಿಯನ್ನೂ, ಮಗದೊಬ್ಬಳು ಪಟ್ಟೆವಸ್ತ್ರಗಳನ್ನೂ, ಇನ್ನೊಬ್ಬಳು ಹೊಸ ಸೀರೆಯನ್ನೂ ತೊರೆದಳು. ಒಬ್ಬರಲ್ಲ, ಇಬ್ಬರಲ್ಲ. ತೊಂಬತ್ತಾರುಸಾವಿರ ಸ್ತ್ರೀಯರು ಹೀಗೆ ಅತ್ತೆಯಲ್ಲಿ ಅನುರಕ್ತರಾಗಿದ್ದುದೂ ಇಷ್ಟು ಜನರನ್ನೂ ಅತ್ತೆಯು ಹೊಟ್ಟೆಯ ಮಕ್ಕಳಂತೆ ವಿಶ್ವಾಸದಿಂದ ನೋಡಿಕೊಳ್ಳುತ್ತಿದ್ದುದೂ ರತ್ನಾಕರನ ಭವ್ಯಕಾವ್ಯದ ಸುಂದರ ಆದರ್ಶಚಿತ್ರದಲ್ಲಿ ಮಾತ್ರ ಕಂಡುಬರಲು ಸಾಧ್ಯ.

**ಅತ್ತಿಗೆ ನಾದಿನಿಯರು**—ನಮ್ಮ ಸಮಾಜದ ಸಂಸಾರಗಳಲ್ಲಿ ತೋರಿಬರುವ ಹಲವು ಹೃದಯವಿದ್ರಾವಕವಾದ ಭೀಷಣ ಚಿತ್ರಗಳಲ್ಲಿ ಅತ್ತಿಗೆ ನಾದಿನಿಯರದೂ ಒಂದು. ಇಬ್ಬರಲ್ಲಿ ಒಬ್ಬರು ತಮ್ಮ ಪ್ರಾಶಸ್ತ್ಯವನ್ನು ಹೆಚ್ಚಿಸಿಕೊಂಡು ಮತ್ತೊಬ್ಬರನ್ನು ಗೋಳಿನಲ್ಲಿ ಮುಳುಗಿಸುತ್ತಾರೆ. ಅನೇಕ ವೇಳೆ ಸುಖಮಯವಾದ ಸಂಸಾರಕ್ಕೆ ಬೆಂಕಿಯಿಕ್ಕುವ ಕೊಳ್ಳಿಗಳಾಗಿರುತ್ತಾರೆ. ಭರತನ ಸೋದರಿಯರೂ ರಾಣಿಯರೂ ಅಂತಹರಲ್ಲ. ತಾವು ಷಟ್ಖಂಡ ಚಕ್ರೇಶ್ವರನ ಸೋದರಿಯರೆಂಬ ಜಂಭವಾಗಲಿ, ತಾವು ಲೋಕೇಶ್ವರನ ಕೈಹಿಡಿದವರೆಂಬ ಗಂಡಗರ್ವವಾಗಲಿ ಕಂಡುಬರದು. ಭರತನ ಸೋದರಿಯರಾದ ಗಂಗಾದೇವಿ ಸಿಂಧುದೇವಿಯರು ಪಟ್ಟದರಾಣಿ ಸುಭದ್ರೆಯ ಲಗ್ನಕ್ಕೆ ಹೋಗಿದ್ದರು. ಮದುವೆಗಾಗಿ ಸಿಂಗರಿಸಿರುವ ಹೆಣ್ಣನ್ನು ನೋಡಬೇಕೆಂಬ ಚಪಲ. ಅಣ್ಣನ ಅಪ್ಪಣೆಯನ್ನು ಬೇಡಿದರು. ಆಗ ಆತನು ಅವರನ್ನು ಪರೀಕ್ಷಿಸುವುದಕ್ಕಾಗಿ 'ಸ್ವೀಕಾರಬಟ್ಟು ಕರೆಸಿಕೊಂಡು ಹೋಗದೆ, ನೂಕಿ ಬಂಧುಗಳೆಯ್ದುಲವರು ಏಕವರ್ಜಂದರೊ ಕರೆದೆವೆ ಯೆಂಬರು. ತೂಕ ತಗ್ಗುವುದಕ್ಕಾ . . . ' ಎಂದನು. ಆದರೆ ಅವರು ನಾಡಾಡಿಯ ಹೆಣ್ಣುಗಳೇ ಹೆಚ್ಚು ಕುಂದನ್ನು ಗಮನಿಸುವುದಕ್ಕೆ? 'ನಾವೆಯ್ದೆ ಪರಿಭವವೇನಣ್ಣ ನಮಗೆ?' 'ಏನ ಮಾಡುವರಣ್ಣ ಪರರೆಮಗನರ ಸನ್ಮಾನವೇನೊಲಿದಿಟ್ಟುದೇನು?' ಎಂದು ಬಲವಂತದಿಂದ ಅಪ್ಪಣೆಯನ್ನು ಪಡೆದು ಸುಭದ್ರೆಯ ಬಳಿಗೆ ಹೋಗುತ್ತಾರೆ. ಅತ್ತಿಗೆ ನಾದಿನಿಯರಿಗೆ ಅದೇ ಪ್ರಥಮ ದರ್ಶನ. ಆದರೂ ಅತ್ತಿಗೆಯರು ತಮ್ಮ ಬಿಗುಮಾನವನ್ನೆಲ್ಲಾ ಬದಿಗೊತ್ತಿ ನಾದಿನಿಯನ್ನು ಮಾತನಾಡಿಸಲು—ಸರಸವಾಡಲು—ಪ್ರಯತ್ನಿಸುತ್ತಾರೆ. ಸುಭದ್ರೆಗೆ ಅವರ ಉತ್ತರಕ್ಕೆ ತಕ್ಕ ಉತ್ತರ ಕೊಡಲು ಬಿಗುಮಾನ. ಮುಗುಳ್ನಗೆಯನ್ನು ಸೂಸುತ್ತಾ ಸುಮ್ಮನಿರುತ್ತಾಳೆ. ಗಂಗಾದೇವಿ ಸಿಂಧೂದೇವಿಯರು ಅವಳನ್ನು ಮಾತನಾಡಿಸುವ ಚದುರನ್ನು ನೋಡಿ "ಈ ತಿಲಕವೆ ಚಕ್ರಧರನ ಸೋಲಿಪುದು? ಪೇಳೀ ತುರುಬೇ? ಮತ್ತೀ ಪೂವೆ? ಮಾತಾಡು ಹೆಣ್ಣೆ. . . . '' ಎಷ್ಟೋ ದಿನಗಳು ಪರಿಚಯವಿದ್ದವರು ಸಹ ಇಷ್ಟು

ಸರಸವಾಗಿರರು. "ಸರಸಗುಣಗಳಿಲ್ಲದಿವಳ ರೂಪೇನು ಕಾಸರಕನ ಹಣ್ಣಿನಂತೆಂದು ಕೆರಳಿಸಿ ನುಡಿವರು ಮಾತಾಡಬೇಕೆಂದು." ಆದರೆ ಇವರ ಮಾತಿಗೆಲ್ಲಾ ಒಂದೇ ಮಂತ್ರ—'ಶಿರಬಾಗಿ ನಗುತಿಹುದು.' ಆಗ ಮಧುವಾಣಿಯೆಂಬ ಅವಳ ಸಖಿಯು ಮಾತನಾಡುತ್ತಿರುವವರನ್ನು ಕುರಿತು "ನಿಮ್ಮ ಪಾಡೇನು ನಿಮ್ಮಣ್ಣನ ನುಡಿಗಳ ನೊಮ್ಮೊಮ್ಮೆ ಕಟ್ಟಿ ನಿಲ್ಲಿಪಳು. ನಮ್ಮ ದೇವಿಯ ಮುಂದೆ ಪರರಿಗೆ ಜಾಣ್ಮೆಯೆ?" ಎಂದು ಎದುರು ನೋಡಿಹಾಕುವಳು. 'ಅಲ್ಲವೆ ಪೇಳೀಕೆಗುರೆ ತನ್ನ ಪತಿಯೊಡನಲ್ಲದೆ ನುಡಿಯದ ಛಲವೆ!' ಎಂದು ಇನ್ನು ಸ್ವಲ್ಪಕಾಲ ವಿನೋದದಿಂದಿದ್ದು ಹಿಂತಿರುಗಿ ಅಣ್ಣನ ಬಳಿಗೆ ಬಂದು 'ಕಂಡೆವಾ ಮದುವೆಯ ಪೆಣ್ಣನಣ್ಣಾಜಿ. ಆಕೆಯ ಶೃಂಗಾರ ವಾಕೆಯ ಗಂಭೀರ ಸಾಕು. ಮತ್ತಾಕೆ ನೋಡಿದರೆ ಲೋಕದಂಗನೆಯೆ ಪೆಣ್ಣೆನಲೊಂದು ರತ್ನ ಶಲಾಕೆ ಹುಟ್ಟಿದುದೆಂದರೊಡನೆ!"

ಭರತೇಶ್ವರ ಸುಭದ್ರೆಯರ ಕಲ್ಯಾಣಮಹೋತ್ಸವವು ಮುಗಿದ ಮರುದಿನ ಅವನ ಸಹೋದರಿಯರಿಬ್ಬರೂ ಪುನಃ ಸುಭದ್ರೆಯ ಬಳಿಗೆ ಬರುತ್ತಾರೆ. ಈಗ ಸುಭದ್ರೆಯಾಗಲೇ ಸ್ವಲ್ಪ ಮೈ ಚಳಿಬಿಟ್ಟವಳಾಗಿದ್ದಾಳೆ. ಅವರನ್ನು ಕಂಡೊಡನೆ

'ರೋಡಾಡಿ ಹೋದಿರಿ ನಿನ್ನೆ ನೀವಿಂದೇನ ಮಾಡಬೇಕೆಂದೆಣಿಸಿದಿರಿ? ನೋಡ ಬಂದಿರೊ ಕಾಡಬಂದಿರೊ ಹೇಳಿ' ಎಂದಳು. ಅದಕ್ಕೆ ಅವರ ಉತ್ತರ "ಕಾಡಬಂದವ ರಲ್ಲ ನೋಡಬಂದವರೇ. ಆದರೆ ನಿನ್ನ 'ಕೊರಳಿಗಿಷ್ಟೇಕೆ ಚಂದನಲೇಪ? ಮುತ್ತಿನ ಸರ ಬಂದಿ ಮರೆಸವೆ ನೀರೆ?' 'ಕರಗಳೊಳ್ಳಿನ್ನಿನ ಬಳೆಗಳಿಂದಿಲ್ಲೀಗ ನೆರೆದಿವೆ ಹೊಸಬಳೆ' ಏಕೆ?" ಸುಭದ್ರೆಯೂ ಚದುರೆ. "ಹಳೆಯ ಬಳೆಯ ಬಿಟ್ಟು ಹೊಸ ಬಳೆ ತೊಟ್ಟರೇ ನಿಳೆಯೊಳು ಕೊರತೆಯೆ? ಅಹಹಾ ಬಳೆಗಳ ಕುರುಹು ಕಂಡುದು ಚಿತ್ರ. ನೀವೇನು ಬಳೆಗಾತಿಯರೊ!' ಎಂದು ಒಲೆದಾಡುತ್ತಾ ಕೇಳಿದಳು. ಹೀಗೆಯೇ ಸರಸಮಾಡುತ್ತಾ ಕೆಲವು ಹೊತ್ತು ಇದ್ದು ಹೊರಟುಹೋಗುವರು.

**ಮಕ್ಕಳು**—ಸ್ತ್ರೀಯರಿಗೆ ಮಕ್ಕಳಿಂದಾಗುವ ಸಂತೋಷಕ್ಕೆ ಎಲ್ಲೆ ಇಲ್ಲ. ಪ್ರಾಪಂಚಿಕ ವ್ಯವಹಾರಗಳಲ್ಲಿ ಆಕೆಯ ವ್ಯಾಪ್ತಿಯು ಪರಿಮಿತಿಯುಳ್ಳುದಾದುದರಿಂದ ಸಂಸಾರವೇ ಆಕೆಯ ಸರ್ವಸ್ವ. ಸಂಸಾರಸಾರವಾದ ಮಗುವಿನಲ್ಲಿ ಆಕೆಗೆ ಅಗಾಧ ಮಮತೆ. ಗಂಡಹೆಂಡಿರ ಪ್ರೇಮದ ಫಲವೇ ಮಗು. ಒಮ್ಮೆ ಮಗುವಾಯಿತೆಂದರೆ ದಂಪತಿಗಳ ಪ್ರೇಮವು ಹಂಚಿಹೋಗುತ್ತದೆ. ದಿಗ್ವಿಜಯಕ್ಕೆ ಹೋದ ಭರತನಿಗೆ ಮಕ್ಕಳಾದಮೇಲೆ, ಮಕ್ಕಳಾಟಿಕೆಯು ಹೆಚ್ಚು ಸಂತೋಷದಾಯಕವಾಗಿರುವಂತೆ ತೋರಿಬರುತ್ತದೆ. ಅಲ್ಲಿಂದ ಮುಂದೆ ಅವನ ಶೃಂಗಾರಜೀವನದ ವರ್ಣನೆ ಅಷ್ಟು ಹೆಚ್ಚಾಗಿ ಕಂಡುಬರುವುದಿಲ್ಲ. ಚ್ಯುತಿಯಿಲ್ಲದ, ಕಳಂಕವಿಲ್ಲದ, ಸಂತೋಷಸಾಗರಕ್ಕೆ

ಇವನು ಅಧಿಪತಿಯಾಗುತ್ತಾನೆ. ವಿಧೇಯರಾಗಿ ವಿನಯಪರರಾಗಿ ಪರಸ್ಪರ ಪ್ರೀತಿ ವಿಶ್ವಾಸಗಳಿಂದ ನಡೆಯುತ್ತಿರುವ ತನ್ನ ಮಕ್ಕಳನ್ನು ಕಂಡು ಭರತನು ಧನ್ಯನಾಗುತ್ತಾನೆ.

ಒಟ್ಟಿನಲ್ಲಿ ಭರತನ ಜೀವನ ರಸವತ್ತಾದ ಜೀವನ. ವಿರಸಗಳು ಬಂದರೂ ಅವುಗಳನ್ನು ಸರಸಕ್ಕೆ ತಿರುಗಿಸಿಕೊಳ್ಳಬಲ್ಲ ಜಾಣ್ಮೆ ಇದೆ ಇವನಿಗೆ. ಒರಟುಮೊರಟುಗಳನ್ನು ತಿದ್ದಿ ಹದಕ್ಕೆ ತಂದುಕೊಳ್ಳುವ ತಾಳ್ಮೆ ಇದೆ. ಇವನ ಭಾವಮೈದುನ ವಿನಮಿ ಕ್ಷಾತ್ರ ತೇಜಸ್ಸನ್ನು ಅವಲಂಬಿಸಿ ಭೂಮಿಗೂ ಆಕಾಶಕ್ಕೂ ಏಕವಾಗಿ ರೊಚ್ಚಿಟ್ಟಿಸಿದವನು. ಭರತನ ಮಹಿಮೆಯಿಂದ ಹಲ್ಲುಕಿತ್ತ ಹಾವಿನಂತಾಗಿ ತನ್ನ ತಂಗಿಯನ್ನು ಆತನಿಗೆ ಕೊಟ್ಟು ವಿವಾಹಮಹೋತ್ಸವವನ್ನು ಬೆಳೆಸುತ್ತಾನೆ. ಭರತನ ತಮ್ಮನಾದ ಬಾಹುಬಲಿಯೂ ಅಷ್ಟೆ. ತನ್ನ ಪರಾಕ್ರಮದ ಕೊಬ್ಬಿನಿಂದ ಇದಿರುಬಿದ್ದರೂ ಅಣ್ಣನ ಸೂನೃತವಚನದ ಮಂತ್ರದಿಂದ ಕಣ್ದೆರೆದು ತನ್ನ ಕೋಪಮೋಹಗಳನ್ನು ಕೊಚ್ಚಿ ಮುಕ್ತಿಮಾರ್ಗವನ್ನು ಹಿಡಿಯುತ್ತಾನೆ. ಕಾವ್ಯದಲ್ಲಿ ಸುಳಿದುಹೋಗುವ ಇತರ ವ್ಯಕ್ತಿಗಳೆಲ್ಲರೂ ಭರತನ ಆಜ್ಞಾನುವರ್ತಿಗಳಾಗಿ ಅವನ ಸುಖವನ್ನು ಹೆಚ್ಚಿಸುವುದರಲ್ಲಿಯೇ ತಮ್ಮ ಜೀವನದ ಸಾರ್ಥಕ್ಯವನ್ನು ಪಡೆಯುತ್ತಿದ್ದವರು. ಎಲ್ಲರೂ ನಾಯಕನ ಔನ್ನತ್ಯವನ್ನು ಚಿತ್ರಿಸಲು ಸಹಾಯಕವಾದ ಹಿನ್ನೆಲೆಯಾಗಿದ್ದಾರೆ.

## ಕಾವ್ಯದಲ್ಲಿ ಅಂತರ್ಗತವಾಗಿರುವ ಸಾಮಾಜಿಕ ಚಿತ್ರ

ಕವಿಯು ತಾನು ಕಂಡು ಅನುಭವಿಸಿದ ಸುಂದರ ಸನ್ನಿವೇಶಗಳನ್ನು ಮನಸ್ಸಿನ ಮೂಲೆಯಲ್ಲಿ ರಾಶಿಹಾಕಿಕೊಂಡು ತನಗೆ ಬೇಕಾದಾಗ ಬೇಕಾದುದನ್ನು ಬೈಲಿಗೆ ತರುತ್ತಾನೆ. ಹಾಗೆ ತರುವುದಕ್ಕೆ ಮುಂಚೆ ಅವುಗಳನ್ನು ತನ್ನ ಪ್ರತಿಭೆಯಿಂದ ಉಜ್ಜಿ ಉಜ್ವಲಗೊಳಿಸುತ್ತಾನೆ. ತನ್ನ ವಿದ್ವತ್ತಿನ ಅಡಿಗಲ್ಲಮೇಲೆ ಅವುಗಳ ಅಂಕುಡೊಂಕುಗಳನ್ನು ನೇರಮಾಡುತ್ತಾನೆ; ಜಾಣ್ಮೆಯಿಂದ ಅವುಗಳಿಗೆ ಆದರ್ಶದ ಮೆರುಗು ಹಾಕುತ್ತಾನೆ. ಆಗ ಅದು ಉತ್ತಮವಾದ ಕಾವ್ಯವಾಗುತ್ತದೆ. ರತ್ನಾಕರನು ತನ್ನ ಕಾವ್ಯರತ್ನದಲ್ಲಿ ತಂದಿರುವ ಹಲವು ಸುಂದರ ಸನ್ನಿವೇಶಗಳಿಗೆ ಅವನು ಕಂಡು ಅನುಭವಿಸಿದ ಕೆಲವು ಸಮಾಜಚಿತ್ರಗಳು ಕಣ್ಣೆದುರು ಕುಣಿಯುತ್ತಿದ್ದಿರಬೇಕು. ತಾನು ಸ್ವತಃ ರಾಜನ ಮಗ. ಅವನೂ ಯಾವುದಾದರೊಂದು ಚಿಕ್ಕ ಸಂಸ್ಥಾನಕ್ಕೆ ರಾಜನಾಗಿದ್ದರೂ ಇದ್ದಿರಬಹುದು. ರಾಜಾಸ್ಥಾನದ ಹಲವು ಆಗುಹೋಗುಗಳನ್ನಂತೂ ಅವನು ನೋಡಿರುವನೆಂಬುದು ನಿರ್ವಿವಾದ. ಅಲ್ಲಿಯ ಸಂಪತ್ತು, ಶೃಂಗಾರ, ವೈಭವ, ವೈಖರಿಗಳೆಲ್ಲವೂ ಹೆಪ್ಪುಗಟ್ಟಿ ಅವನ ಕಾವ್ಯದಲ್ಲಿ ಕುಳಿತಿವೆ. ಅವ್ಯಾಹತವಾಗಿ ಅಸದೃಶ ಸಂಪತ್ತಿನಿಂದ ಕೂಡಿ, ಕನ್ನಡನಾಡಿನ ಕೀರ್ತಿಧ್ವಜವನ್ನು ದಿಗಂತವಿಶ್ರಾಂತ

ವಾಗಿ ಹಬ್ಬಿ ಹರಿಸಿದ್ದ ವಿಜಯನಗರ ರಾಜ್ಯದ ವೈಭವವನ್ನು ಕವಿಯು ಕಣ್ಣಾರೆ ಕಂಡಿದ್ದನೆಂದು ತೋರುತ್ತದೆ. ಆ ರಾಜ್ಯದ ರಸಿಕರ ರಸಿಕತೆಗೆ ಕೊನೆಮೊದಲುಂಟೆ? ಅವರ ಭೋಗವೈಭವಕ್ಕೆ ಕೊರತೆಯುಂಟೆ? ಅವರ ಐಶ್ವರ್ಯಕ್ಕೆ ಎಲ್ಲೆಯುಂಟೆ? ಇದನ್ನು ಕಣ್ಣಾರೆ ಕಂಡು, ಮನವಾರೆ ತಣಿದು, ಹೊಸಲಾಗಿ ಉಕ್ಕಿಸಿರುವುದೇ ರತ್ನಾಕರನ 'ಭರತೇಶ ವೈಭವ'ವೆಂದು ತೋರುತ್ತದೆ.

ಸ್ತ್ರೀ ಪಾತ್ರಗಳನ್ನು ಚಿತ್ರಿಸುವಾಗ ಸಮಾಜದಲ್ಲಿ, ಸಂಸಾರದಲ್ಲಿ, ಅವರ ಸ್ಥಾನ ವೇನು ಎಂಬುದನ್ನು ಕವಿಯು ಸಮಗೆ ತೋರಿಸುತ್ತಾನೆ. ಸ್ತ್ರೀಯು ಬರಿಯ ಉಪ ಭೋಗವಸ್ತುವಷ್ಟೇ ಅಲ್ಲ. ಆಕೆಗೂ ಒಂದು ಆತ್ಮವಿದೆ. ಆ ಆತ್ಮವನ್ನು ಸಂತೋಷ ಗೊಳಿಸುವುದು ಪುರುಷನ ಧರ್ಮ. ಹೆಂಗಸು ಕಲಾಜೀವಿಯಾದರೆ ಗಂಡನನ್ನು ಸಂತೋಷಪಡಿಸುತ್ತಾಳೆ. ಅದಕ್ಕಾಗಿ ಪುರುಷನು ಅವಳಿಗೆ ತಕ್ಕ ಪರಿಕರಗಳನ್ನೂ ಆನುಕೂಲ್ಯಗಳನ್ನೂ ಒದಗಿಸಿ ಅವಳ ಜೀವನವನ್ನು ಪರಿಪೂರ್ಣವಾಗಿ ಮಾಡಬೇಕು. ಭರತನು ಇಂತಹ ಆನುಕೂಲ್ಯಗಳನ್ನೆಲ್ಲಾ ತನ್ನ ಹೆಂಡಿರಿಗೆ ಒದಗಿಸಿದ್ದನು. ಅವನ ಹೆಂಡಿರೆಲ್ಲರೂ ಪಂಡಿತೆಯ ಸಹಾಯದಿಂದ ಕಾವ್ಯಾಲಂಕಾರಗಳನ್ನು ತಿಳಿದವರು. ಅವ ರಲ್ಲಿ ಹಲವರು ಅನೇಕ ಕಲೆಗಳಲ್ಲಿ ಪ್ರತ್ಯುತ್ಪನ್ನಮತಿಗಳಾಗಿದ್ದಾರೆ. ಕುಸುಮಾಜಿಯು ಕಾವ್ಯಕಲೆಯಲ್ಲಿಯೂ ವೀಣಾವಾದನದಲ್ಲಿಯೂ ಅತ್ಯಂತ ಚತುರೆ. ಇದರಿಂದ ಭರತನ ಜೀವನವು ಸುಖಭರಿತವಾಗಿದೆ. ಪದ್ಮಿನಿಯೇ ಮೊದಲಾದ ಹಲವು ಸ್ತ್ರೀಯರು ನಾಟ್ಯ ವಿದ್ಯೆಯಲ್ಲಿಯೂ ಅಭಿನಯವಿದ್ಯೆಯಲ್ಲಿಯೂ ಅದ್ವಿತೀಯ ಚತುರೆಯರಾಗಿದ್ದಾರೆ. ಸಂಗೀತ, ನಾಟ್ಯ, ಅಭಿನಯಗಳು ಅವರಿಗೆ ಕರತಲಾಮಲಕವಾಗಿವೆ. ಸಂಗೀತಕ್ಕೆ ಇವರಿಂದ, ಇವರಿಗೆ ಸಂಗೀತದಿಂದ, ಪ್ರಾಶಸ್ತ್ಯವು ಬೆಳೆದಿರುವುದೆಂಬಂತೆ ತೋರುತ್ತಿದೆ.

## ರತ್ನಾಕರನ ವ್ಯಕ್ತಿತ್ವ

ರತ್ನಾಕರನ ಕವಿತಾಶಕ್ತಿಯನ್ನು ನೋಡಬೇಕಾದರೆ ಆತನು ಜಿನಸೇನಾದಿ ಇತರ ಕವಿಗಳ ಮಾರ್ಗವನ್ನು ಬಿಟ್ಟು ತಾನೇ ಪ್ರತ್ಯೇಕವಾಗಿ ಮಾಡಿಕೊಂಡಿರುವ ಹೊಸ ಮಾರ್ಪಾಟುಗಳನ್ನು ಗಮನಿಸಬೇಕು. ಇದು ಮುಖ್ಯವಾಗಿ ಭೋಗಸಂಧಿ· ಇದಲ್ಲದೆ ಕಾವ್ಯದಲ್ಲಿ ನಡುನಡುವೆ ಬರುವ ಹಲವು ವರ್ಣನೆಗಳು ನಾವು ನೋಡಲು ಯೋಗ್ಯವಾದುವು. ಅವು ಮೂಲದಲ್ಲಿಲ್ಲ; ರತ್ನಾಕರನ ಸ್ವಂತ ಆಸ್ತಿ.

ಮಹಾಕಾವ್ಯದಲ್ಲಿ ಅಷ್ಟಾದಶವರ್ಣನೆಗಳಿರಬೇಕೆಂಬ ಸ್ವರ್ಣಶೃಂಖಲೆಗೆ ಪಂಪ ನಂತಹ ಮಹಾಕವಿಯೂ ಒಳಗಾಗಿದ್ದಾನೆ. ಜಿನಸೇನನ ಕಾವ್ಯದಲ್ಲಿ ಇಲ್ಲದಿದ್ದರೂ ಪಂಪನು ತನ್ನ ಗ್ರಂಥದಲ್ಲಿ (ಆದಿಪುರಾಣ) ಯುದ್ಧೋದ್ಯೋಗಕ್ಕೆ ಮುನ್ನ ಜಲಕೇಳಿ,

ವನವಿಹಾರ ಇತ್ಯಾದಿ ವರ್ಣನೆಗಳನ್ನು ಎಳತಂದಿದ್ದಾನೆ. ಕೆಲವುವೇಳೆ ಇವುಗಳಿಗೆ ಔಚಿತ್ಯವನ್ನು ಕಲ್ಪಿಸುವುದು ಕೂಡ ಕಷ್ಟವಾಗುತ್ತದೆ. ರತ್ನಾಕರನ ಮನಸ್ಸಿಗೆ ಈ ಔಚಿತ್ಯದ ಕೊಲೆಯು ಸರಿಹೋಗಲಿಲ್ಲವೆಂದು ತೋರುತ್ತದೆ. "ಪ್ರಚುರದಿ ಪದಿನೆಂಟು ರಚನೆಯ ವಾಕ್ಯಕೆ ರಚಿಸುವರಾನಂತು ಪೇಳೆ. ಉಚಿತಕೆ ತಕ್ಕಷ್ಟು ಪೇಳ್ವೆ ಸಧ್ಯಾತ್ಮವೆ ನಿಚಿತ ಪ್ರಯೋಜನವೆನಗೆ" ಎಂದು ಘಂಟಾಘೋಷವಾಗಿ ಹೇಳುತ್ತಾನೆ. ತನ್ನ ಗ್ರಂಥದಲ್ಲಿ ವರ್ಣನೆಗಳೇ ಇಲ್ಲವೆಂದಲ್ಲ. ವರ್ಣನೆಗಳು ಸ್ವಾಭಾವಿಕವಾಗಿವೆ; ಬಲವಂತ ದಿಂದ ಮಾಘಸ್ನಾನಮಾಡಿಸಲು ಅವುಗಳನ್ನು ಎಳೆದುತಂದಿಲ್ಲ. ಇತರ ಕವಿಗಳಂತೆ ಈತನು ಸಮುದ್ರವರ್ಣನೆ ನಗರವರ್ಣನೆಗಳಿಂದ ಕಾವ್ಯವನ್ನು ಪ್ರಾರಂಭಿಸುವುದಿಲ್ಲ.

ಕವಿಯು ಗ್ರಂಥವನ್ನು ಬರೆಯುತ್ತಿರುವುದು ಜನರು ಅವುಗಳನ್ನು ಓದಿ ರಸಾ ಸ್ವಾದನೆಮಾಡಿ ಸಂತೋಷಪಡಲೆಂದೇ ಹೊರತು ವಿದ್ವಜ್ಜನಗೋಷ್ಠಿಯಲ್ಲಿ ಬಿರುದು ಬಾವುಟಗಳನ್ನು ಸಂಪಾದಿಸುವುದಕ್ಕಲ್ಲ. ಮನಸ್ಸುಮಾಡಿದ್ದರೆ ತಾನೂ 'ಒದು ಗಬ್ಬವ'ನ್ನು ಬರೆಯಬಲ್ಲ. ಆದರೆ ತನ್ನ ಗ್ರಂಥವು ಕಬ್ಬಿನಂತಿರಬೇಕೇ ಹೊರತು ಬಿದಿರಂತೆ ಆಗಬಾರದೆಂದು ಆಶೆ. ಅದಕ್ಕಾಗಿ 'ಹಾಡು ಗಬ್ಬ'ವನ್ನು ರಚಿಸಿದ್ದಾನೆ. ತನ್ನ ಗ್ರಂಥವನ್ನು ಓದಿದರೆ "ಅಯ್ಯಯ್ಯ ಚನ್ನಾದುದು" ಎಂದು ಕನ್ನಡಿಗರು ಹೇಳುವುದಷ್ಟೇ ಅಲ್ಲ. ಅದನ್ನು ಅರ್ಥಮಾಡಿಕೊಂಡು ತೆಲುಗರು "ರಯ್ಯಾ ಮಂಚಿದಿ" ಎಂದೂ, ತುಳುವರು "ಅಯ್ಯಯ್ಯ ಎಂಚ ಪೊರ್ಲಾಂಡೆ"ಂದೂ ಹೇಳುವಷ್ಟು ಸುಲಲಿತವಾಗಿರಬೇಕು ತನ್ನ ಕಾವ್ಯ. ಅದಕ್ಕಾಗಿ 'ರಳ ಕುಳ ಶಿಥಿಲ ಸಮಾಸ' ಮುಂತಾದುವುಗಳ 'ಕೋಟಲೆಯು' ತನ್ನ ಗ್ರಂಥದಲ್ಲಿಲ್ಲವೆಂದೂ, ಸಕಲಲಕ್ಷಣ ಗಳನ್ನೂ ತರಬೇಕೆಂಬ ಬಿರುದಿಗೆ ಬಿದ್ದು, ತನ್ನ ಕಾವ್ಯವನ್ನು ಬಿರುಸುಮಾಡಿ 'ಪುಸ್ತಕದ ಬದನೆಕಾಯಿ'ಯಾಗಿ ಮಾಡಲು ಆತನಿಗೆ ಇಷ್ಟವಿಲ್ಲ.

ಹೀಗೆ ರತ್ನಾಕರನು ಸ್ವತಂತ್ರ ಮಾರ್ಗಾವಲಂಬಿ; ಔಚಿತ್ಯ ನಿಯಮ ಪಾಲಕ; ಇತರ ನಿಯಮಗಳ ಕಟ್ಟುಪಾಡುಗಳಿಂದ ಸ್ವತಂತ್ರವಾಗಿರತಕ್ಕವನು. ಆರಂಭದಲ್ಲಿಯೇ ಇವನದೊಂದು ಹೊಸ ಮಾರ್ಗವಿದೆ. ವರ್ಣನೆಗಾಗಿ ವರ್ಣನೆಯಿಲ್ಲ. ಕಥೆಗಾಗಿ ವರ್ಣನೆಯಿದೆ. ವರ್ಣನೆಯಿಂದ ಕಥೆಯು ಮುಂದುವರಿಯುತ್ತದೆ.

ರತ್ನಾಕರನು ಶೃಂಗಾರರಸವನ್ನು ಚಿತ್ರಿಸಿರುವ ಬಗೆಯು ಇತರ ಎಲ್ಲ ಕವಿಗಳ ಮಾರ್ಗದಿಂದ ಬಹಳ ಭಿನ್ನವಾಗಿದೆ. ಈತನು ಶೃಂಗಾರರಸ ಪ್ರತಿಪಾದನೆಯಲ್ಲಿ ತನ್ನ ಜೀವನ ತತ್ವವನ್ನು ಬೋಧಿಸ ಹೊರಟಿದ್ದಾನೆ. ಕವಿಯು ತತ್ವಜ್ಞನೂ ಆಗಿರುತ್ತಾನೆ. ಇತರ ಜೈನಕವಿಗಳು ಹೇಳುವಂತೆ ಈ ಪ್ರಪಂಚದ ಕ್ಷಣಭಂಗುರತೆಯನ್ನು ಮನಸ್ಸಿ ನಲ್ಲಿಟ್ಟುಕೊಂಡಿರಬೇಕಾದರೂ, ದೂರದ ಫಲಗಳನ್ನು ನನೆದು ಕೈಲಿರುವುದನ್ನು

ಎಸೆಯುವುದು ಹುಚ್ಚುತನ; ಇಲ್ಲಿನ ಸುಖವನ್ನು ನಿರ್ದಿಷ್ಟರೀತಿಯಲ್ಲಿ ಸಾಧ್ಯವಾದಷ್ಟು ಸವಿದು ಪರಮಸುಖದ ಕಡೆಗೆ ಕೈನೀಡೋಣ; ಎಂಬುದು ಇವನ ತತ್ವ.

ತನು ರೂಪ ವಿಭವ ಯೌವನ
ಧನ ಸೌಭಾಗ್ಯಾಯುರಾದಿಗಳ್ಗಿಣೆ ಕುಡು ವಿಂ|
ಚಿನ ಪೊಳೆಪು ಮುಗಿಲ ನೆಳಲಿಂ
ದ್ರನ ಬಿಲ್ ಬೊಬ್ಬುಳಿಕೆಯುರ್ಬು ಪರ್ಬಿದ ಭೋಗಂ ||

ಎಂಬ ನಿರಾಶಾವಾದವನ್ನು ರತ್ನಾಕರನು ಖಂಡಿಸಿ, ಯೋಗಭೋಗಗಳ ಸಾಮರಸ್ಯ ತತ್ವವನ್ನು ಧೈರ್ಯದಿಂದ ಓದುಗರ ಮುಂದಿಡುತ್ತಾನೆ. ಇವನ ಮಾತುಗಳು ಗಿಳಿಯ ಮಾತುಗಳಲ್ಲ. ಅವನಿಗೆ ಜೀವನವು ತಮಾಷೆಯಲ್ಲ. ಪರೀಕ್ಷೆಯಿಂದ, ದೀರ್ಘಾಲೋಚನೆಯಿಂದ ಅದರ ಯೋಗ್ಯತೆಯನ್ನು ಕಂಡುಹಿಡಿದು, ಅದನ್ನು ತನ್ನ ಕಥೆಯ ಮೂಲಕ ಲೋಕದಲ್ಲಿ ಹರಹಿ ಲೋಕಕಲ್ಯಾಣಮಾಡಿದ್ದಾನೆ. ಹೀಗೆ ಈತನು ಧೈರ್ಯದಿಂದ ಹೊರಕ್ಕೆ ತಂದಿರುವ ಜೀವನ ತತ್ವದಿಂದ ತನ್ನ ಮಹತ್ತನ್ನು ಮತ್ತಷ್ಟು ಹೆಚ್ಚಿಸಿಕೊಂಡಿದ್ದಾನೆ.

## ರತ್ನಾಕರನ ಶೃಂಗಾರ ಚಿತ್ರಗಳು

ಈ ಕವಿಯು ಶೃಂಗಾರಕವಿ ಹಂಸರಾಜನೆಂಬ ತನ್ನ ಬಿರುದನ್ನು ಸಾರ್ಥಕಗೊಳಿಸಿ ಕೊಳ್ಳುವಂತೆ ಶೃಂಗಾರಚಿತ್ರಗಳನ್ನು ರಂಗುಗೊಳಿಸಿದ್ದಾನೆ. ಕಾವ್ಯದಲ್ಲಿ ಮೊದಲಿಂದ ಕಡೆಯ ವರೆಗೂ ನೂರಾರು ಶೃಂಗಾರ ಸನ್ನಿವೇಶಗಳು ಮೇಲೆಮೇಲೆ ಬರುತ್ತಿದ್ದರೂ ಎಲ್ಲಿಯೂ ಅವುಗಳು ಜುಗುಪ್ಸಾಕರವಾಗಿಲ್ಲ; ಎಲ್ಲಿಯೂ ಮಿತಿಯನ್ನು ಮೀರಿಲ್ಲ. ಎಲ್ಲಿಯಾದರೂ ಕವಿಯ ರಸಾವೇಶವು ಔಚಿತ್ಯದ ಎಲ್ಲೆಯನ್ನು ದಾಟುವಂತೆ ಕಂಡು ಬಂದರೆ ಒಡನೆಯೇ ಕವಿಯು ಅವುಗಳನ್ನು ಹೇಳಿಯೂ ಹೇಳದವನಂತೆ ನಟನೆಮಾಡಿ ನಿಂದೆಯಿಂದ ಪಾರಾಗುತ್ತಾನೆ.

ಭರತ ಚಕ್ರವರ್ತಿಗೆ ಕುಸುಮಾಜಿಯಲ್ಲಿ ಅಪಾರವಾದ ಮೋಹ. ಅವಳೊಡನೆ ಸುಖಸಂಕಥಾ ವಿನೋದದಲ್ಲಿರಬೇಕೆಂದು ನಿಶ್ಚಯಿಸಿರುತ್ತಾನೆ. ಕುಸುಮಾಜಿಯ ತಂಗಿ ಮಕರಂದಾಜಿಯು ರಾಜನನ್ನು ಭೋಜನಕ್ಕಾಗಿ ಆಹ್ವಾನಿಸಲು ಬಂದು 'ಅನುಕೂಲವಾದಃದಾರೋಗಣೆಗಿನ್ನೆಮ್ಮ ಮನೆಗೇಳು ಭಾವಾಜಿ' ಎಂದು ಕರೆದಳು. ಮಕರಂದಾಜಿಯು ಇನ್ನೇನು ವರ್ಷ ಆರು ತಿಂಗಳೆಂಬ ಹೊತ್ತಿಗೆ ಪ್ರಾಯದ ಹೊಸ್ತಿಲನ್ನು ಮೆಟ್ಟತಕ್ಕ ಸುಂದರಳಾದ ಹುಡುಗಿ; ರಸಜೀವಿಯಾದ ಭರತನಿಗೆ ಅವಳೊಡನೆ ಸ್ವಲ್ಪ ಸರಸಮಾಡಬೇಕೆಂಬ ಚಪಲ. 'ಎಮ್ಮ ಮನೆಗೆ' ಎಂದು ಹೇಳಿದುದನ್ನೆ ನೆಪಮಾಡಿಕೊಂಡು "ಇಂದಾನು ನಿನ್ನ ಮನೆಗೆ ಬಹುದುಚಿತವೆ?

ಬಂದರೆ, ಪರುಷದ ಮೇಲೆ ಬಂದು ನೀನೆನ್ನ ಕರೆದರಾನು ಬಹೆನು. . ." ಎಂದು ಸ್ವಲ್ಪ ಹಾಸ್ಯಮಾಡಿದ. ಷಟ್ಖಂಡ ಚಕ್ರವರ್ತಿಯೆಂಬ ಗೌರವದಿಂದ ಅವಳು ಅದಕ್ಕೆ ತಕ್ಕ ಪ್ರತ್ಯುತ್ತರ ಕೊಡದೆ "ಅಕ್ಕಾಜಿಯರ ಮನೆಗೇಕೆಂದೆ" ಎಂದು ಮಾತ್ರ ಹೇಳಿದಳು. ಅವಳು ಅತ್ಯಂತ ಚದುರೆಯೆಂಬುದು ರಾಜನಿಗೆ ಗೊತ್ತು. ಆದ್ದರಿಂದ ಅವಳನ್ನು ಅಷ್ಟಕ್ಕೆ ಸುಮ್ಮನಾಗಲು ಬಿಡದೆ "ತಕ್ಕುಕಾತಿಯೆ ನಿನ್ನ ಮನೆಗೆಂದೆಯೈಸೆ; ನಿನ್ನಕ್ಕನ ಹೆಸರ ಹೇಳಿದೆಯ?" ಎಂದು ಪ್ರಶ್ನಿಸಿದನು. ಇಷ್ಟು ಸಾಕು ಮಕರಂದಾಜಿಯನ್ನು ರೇಗಿಸುವುದಕ್ಕೆ. ವಾಗ್ಯುದ್ಧಕ್ಕೆ ಅನುವಾಗಿ—

ಮಕರಂದಾಜಿ :—"ಅಕ್ಕನ ಹೆಸರ ಹೇಳುವರಾಕೆ ಪಡೆದರೆ | ಮಕ್ಕಳು ಪೇಳ್ವವು ಮುಂದೆ |
ದಿಕ್ಕಿನೊಳೆನಗೇನು ಸಂಬಂಧ ಸಾಕೇಳು | ಸಿಕ್ಕಿನ ಮಾತನಾಡದಿರು ||

ಭರತ :— "ಸಾಕೇಳು ಸಲಹೇಳು ನೀನೆಂದು ತಾನೆನ್ನ | ನಾಕರುಷಣ ಮಾಡುತಹಳೆ |
ಈಕೆ ತಾನೇನು ಕಾತರೆಯೊ! . ."

ಮಕರಂದಾಜಿ :—"ಕಾತರಗೀತರವನು ನೀವು ನಿಮ್ಮಂಬು | ಜಾತಾಕ್ಷಿಯರು ಬಲ್ಲಿರೈಸೆ |
ಆ ತಳ್ಳಿಬಳ್ಳಿಯ ನಾವೇನ ಬಲ್ಲೆವು | ಮಾತು ಸಾಕಿನ್ನೇಳು ಭಾವಾ"

ರಾಜನು ತನ್ನ ದಪ್ತರವನ್ನು ಕೊಡವಿ ಕಟ್ಟಬೇಕಾದುದೇ! ಎದ್ದು ಅವಳನ್ನು ಹಿಂಬಾಲಿಸುವನು. ಅರಸಿಯ ಮನೆಯನ್ನು ಪ್ರವೇಶಿಸುತ್ತಿರುವಾಗಲೇ, ಮಕರಂದಾಜಿಯಿಂದ ಓದುಕಲಿತಿರುವ ಗಿಳಿ ಅವನಿಗೆ ಸುಖಾಗಮನವನ್ನು ಬಯಸಿತು :

"ಕ್ಷೇಮವೆ ಭಾವಾಜಿ ಮತ್ತು ನಿಮಗೆ ಪರಿ | ಣಾಮವೆ ಹೇಳು ಭಾವಾಜಿ |
ಈ ಮನೆಯತ್ತಲೇ ಕಡಿಗಡಿಗೆಯ್ತರೆ?"
"ಧರೆಯನಾಳಿದನೆಂಬ ಗರ್ವವೊ ನಮ್ಮಕ್ಕ | ನರಮನೆಗಡಿಗಡಿಗೇಕೆ |
ಬರಲೊಲ್ಲೆ ಬಂದಿನ್ನು ಪೋಪೆಯ ನಿನ್ನ ಕಾ | ಲ್ಗರುಲ ನಿಕ್ಕುವೆ ||
"ಸುಳಿಗುರುಳೆಂಬುರುಲುಂಟು ನಮ್ಮಕ್ಕನ | ನಳಿ ತೋಳ ಪಾಶಗಳುಂಟು |
ಹೊಳೆದಿನ್ನು ಹೋಹ ಭಾವನ ಕಾಣ್ಬೆ. . . ."
"ಸೋಂಕಿ ನಮ್ಮಕ್ಕನೊತ್ತಿನೊಳಿದ್ದರಿರು ಮೀರಿ | ಭೋಂಕನೆ ಪೋಪೆ ನೆಂಬಾಗ |
ಪಂಕಜಾಕ್ಷಿಯ ಕಡೆಗಣ್ಣ ಕಾಂತಿಯ ಬೆಳ್ಳಿ | ಸಂಕಲೆಗಳನಿಕ್ಕಿಸುವೆನು ||

ಇದನ್ನು ಹೇಳಿಕೊಟ್ಟ ಮಕರಂದಾಜಿಗೆ ರಾಜನಿಂದ ತಕ್ಕ ಸನ್ಮಾನವು ದೊರೆಯಿತು. ಆತನು ಅವಳನ್ನು ಬಿಗಿಯಪ್ಪಿ ಮುತ್ತಿಕ್ಕುವನು. ಮಾತಿಗೆ ಮಾತನ್ನು ಪೋಣಿಸುವ ವೈಯಾರಿ ಮಕರಂದೆಯು ಆದರಿಂದ ಕೋಪಿಸಿದವಳಂತೆ ನಟಿಸಿ ತನ್ನ ಭಾವೀಪತಿಯಾದ ಭರತನೊಡನೆ ಬೇಕಾದಷ್ಟು ವಾಗ್ಯುದ್ಧವನ್ನು ನಡೆಸಿ ಅವನನ್ನು ಮೆಚ್ಚಿಸುವಳು. ಈ ಭಾಗವು ಅತ್ಯಂತ ಸರಸವಾದುದು. ಸರಸಸಂಧಿಯೆಂದು ಈ ಭಾಗಕ್ಕಿಟ್ಟಿರುವ ಹೆಸರು ಸಾರ್ಥಕವಾಗಿದೆ.

ಮುಂದೆ ರಾಜನು ಕುಸುಮಾಜಿಗೆ ಸನ್ಮಾನ ಮಾಡುವುದೂ ಅತ್ಯಂತ ಸುಂದರವಾದ ಶೃಂಗಾರಮಯ ಚಿತ್ರ. ಗಂಡಹೆಂಡಿರಿಬ್ಬರೇ ಇರುವಾಗ ಆತನು ತನ್ನ ಹೆಂಡತಿಯನ್ನು ಎಷ್ಟು ವಿಧವಾಗಿ ಕರೆದರೂ ತೃಪ್ತಿಯಿಲ್ಲ. ಕುಸುಮಾಜಿಯೆಂಬ ಹೆಸರೇ ಮುದ್ದಾದುದು. ಮುದ್ದಾದ ಹೆಸರನ್ನು ಮತ್ತಷ್ಟು ಮುದ್ದಾಗಿ ಮಾಡಿ, ಅವಳ ಮನೆಯು ಅಚ್ಚುಕಟ್ಟನ್ನೆಲ್ಲಾ ಮೆಚ್ಚುವ ಸೋಗಿನಿಂದ ಅವಳನ್ನು ಹೆಸರಿಸುತ್ತಾನೆ.

"ಸಾರಣೆ ಚೆನ್ನಾಯ್ತು ಕುಸುಮೆ ಕುಂಕುಮದೊಂದು | ಸಾರಣೆ ಚೆನ್ನಾಯ್ತು ಕುಸುಮಿ ||
ತೋರಣ ಚೆನ್ನಾಯ್ತು ಕುಸುಮು . . ."

"ಚಳಯಗೊಟ್ಟುದು ಲೇಸು ಕುಸುಮಾಜಿ ಹೊಸ ರಂಗು | ವಲಿ ಲೇಸು ಕುಸುಮಾಂಗಿ ನಿನ್ನ ||
ನಿಳಯದ ಸಿಂಗಾರ ಸೊಗಸಾಯ್ತು ಕುಸುಮ ಕೋ | ಮಲೆ . . ."

ಹೀಗೆ ಕುಸುಮು, ಕುಸುಮಿ, ಕುಸುಮಾಜಿ, ಕುಸುಮೆ, ಕುಸುಮಾಂಗಿ, ಕುಸುಮಾಲೆ, ಕುಸುಮಿತಿ, ಕುಸುಮಿನಿ ಎಂದು ಅವಳ ಹಿಂದೆ ಹಿಂದೆಯೇ ಓಡಾಡುತ್ತಿರುವನೋ ಎನ್ನಿಸುವುದು.

ಅನಂತರ ಅವಳು ತಾನೇ ತನ್ನಾಣ್ಮನಿಗೆ ಕೈಮುಟ್ಟಿ ಬಡಿಸುವಳು. ಇಬ್ಬರೂ ಊಟಮಾಡಿದಮೇಲೆ ಶಯ್ಯಾಗೃಹದಲ್ಲಿ ಏಕತಲ್ಪದಮೇಲೆ ಸರಸವಾಡುತ್ತಾ ಕುಳಿತಿರುವಳು. ರಾಜನು ತನ್ನ ಮನದನ್ನೆಯು ಒಳಗೆ ಬಂದುದನ್ನು ಕಂಡು ಮುಸುಕಿನೊಳಗಿನಿಂದಲೇ "ಕುಸುಮಿ ತಾನೇಕೆ ಬಂದಳು?" ಎಂದು ಮಾತನಾಡಿಸುವನು. ಮತ್ತೊಬ್ಬರ ಎದುರಿನಲ್ಲಿ ಮೂಕಿಯಂತೆ ಕಾಣುವ ಕುಸುಮಾಜಿಯು ಏಕಾಂತ ಗೃಹದಲ್ಲಿ ತಾನೆಷ್ಟು ರಸಿಕಳೆಂಬುದನ್ನು ತೋರುವಂತೆ ನಸುನಗುತ್ತಾ "ಏಕೆ ಬಂದಳೋ ದೇವರೇ ಬಲ್ಲರಸಿಯಳಿಚ್ಛೆಯ" ಎಂದು ಉತ್ತರಗೊಡುವಳು. ಜಗಳಕ್ಕೆ ಬಂದಿರುವಂತೆ ಕಾಣುವುದಲ್ಲ? ಎಂದು ರಾಜನು ಪ್ರಶ್ನಿಸಿದರೆ, ಜಗಳಕ್ಕಲ್ಲವಂತೆ ಏನೋ ಗೂಢಾರ್ಥವನ್ನು ತನ್ನ ಆಣ್ಮನೊಡನೆ ಆಲೋಚಿಸಲು ಬಂದಿರುವಳಂತೆ ಎಂದು ಸವಿನುಡಿಯನ್ನು ನುಡಿಯುವಳು.

ಸರಸವಿನೋದಗಳಿಂದಲೂ ಭೋಗಭಾಗ್ಯಗಳಿಂದಲೂ ತಣಿದಮೇಲೆ ಕುಸುಮಾಜಿಯು ತನ್ನ ಗಾನಸುಧೆಯಿಂದ ರಾಜನನ್ನು ತಣಿಸುವಳು. ಕೇಳಿದಷ್ಟೂ ಕೇಳಬೇಕೆಂಬಾಶೆ ರಾಜನಿಗೆ. ಅವನು ಹೊಗಳಿದಷ್ಟೂ ರಾಗರಸಕ್ಕೆ ಕಳೆಯೇರುತ್ತಿದೆ. ರಾಗರಸವು ಕಳೆಯೇರಿದಷ್ಟೂ ರಾಜನ ಉತ್ಸಾಹವು ಹೆಚ್ಚುತ್ತಿದೆ. ಒಡನೆಯೇ ಅವಳನ್ನು ತಬ್ಬಿಕೊಂಡು ತನ್ನ ಮನಸ್ಸನ್ನು ತೃಪ್ತಿಪಡಿಸಬೇಕೆಂಬಾಶೆ. ಮೆಲ್ಲಗೆ ವೀಣೆಯನ್ನು ಸ್ವಲ್ಪ ಸರಿಸುವನು. ಆದರೂ ಗಾನರಸಕ್ಕೆ ಮನಸೋತು, ಪುನಃ 'ಇರಲಿ ಹಾಡು' ಎಂದು ಹಿಂದಕ್ಕೆ ಸರಿಯುವನು. ನಡುನಡುವೆ ಒಮ್ಮೊಮ್ಮೆ

"ಮಡದಿ ಹಾಡುವುದೊಂದು ಗಮಕಕೆ ಗಾಸದ| ಕಡುಸವಿಗೆದೆಯೊಳು ಹಿಗ್ಗಿ |
ಎಡದ ತೋಳಿಂದ ಕೊರಳಸಪ್ಪಿ ಚೆಂದುಟಿ| ವಿಡಿದು ಚುಂಬಿಸಿ ಸಕ್ಕು ಬಿಡುವಾ ||"

ಇಂತಹ ಸುಂದರವಾದ ನಿರ್ದುಷ್ಟ ಶೃಂಗಾರ ಚಿತ್ರಗಳು ಕನ್ನಡ ಕಾವ್ಯಪ್ರಪಂಚದಲ್ಲಿ ಹೇಳಿಕೊಳ್ಳುವಷ್ಟು ಹೆಚ್ಚಾಗಿ ಇಲ್ಲ. ರತ್ನಾಕರನ ಕಲಾಭವನದಲ್ಲಿ ಮಾತ್ರ ಇವುಗಳು ತಂಡತಂಡವಾಗಿ ಕಂಡುಬರುತ್ತವೆ.

## ರತ್ನಾಕರನ ಶೈಲಿ

ಕವಿಯು ತನ್ನ ಕಾವ್ಯವನ್ನು ಪಂಡಿತರಂಜನೆಗಾಗಿ ಬರೆದಿಲ್ಲ. ಸ್ತ್ರೀಯರು ಮನೆಯಲ್ಲಿ ಹಾಡಿಕೊಳ್ಳಲು ಅನುಕೂಲವಾಗುವಂತೆ ಸಾಂಗತ್ಯದಲ್ಲಿ ಬರೆದಿದ್ದಾನೆ. ಹೊನ್ನಮ್ಮನು ಹದಿಬದೆಯ ಧರ್ಮವನ್ನು ಬರೆದಿರುವಂತೆ ಸಾಂಗತ್ಯವು ಸ್ತ್ರೀಯರಿಗೆ ಇತರ ಎಲ್ಲಾ ರೀತಿಗಳಿಗಿಂತಲೂ ಹೆಚ್ಚು ಸಹಜವಾದುದು.

'The style expresses the man' ಎಂದು ಹೇಳುವುದುಂಟು. ಹಾಗೆಯೇ 'ಶೀಲಸ್ಯ ಇಯಂ ಶೈಲೀ' ಎಂದು ಹೇಳುತ್ತಾರೆ. ಕವಿಯ ಶೈಲಿಯಿಂದ ಅವನ ಮನೋಧರ್ಮವನ್ನು ನಾವು ಸುಲಭವಾಗಿ ಗ್ರಹಿಸಬಹುದು. ರತ್ನಾಕರನ ಶೈಲಿಯಿಂದ ಅವನ ಮನೋಭಾವವೇನೆಂಬುದನ್ನು ನಾವು ಕಂಡುಕೊಳ್ಳಬಹುದು. ಕಣ್ಣಿಗೆ ಕಾಣುವ ವಸ್ತುಗಳನ್ನು ವರ್ಣಿಸಲು ಹೆಚ್ಚು ಜಾಣತನ ಬೇಕಿಲ್ಲ. ಅದರ ಅನುಭವವು ವೇದ್ಯವಾಗಲು ಹೆಚ್ಚು ಕಷ್ಟವಾಗುವುದಿಲ್ಲ. ರತ್ನಾಕರನ ಶೈಲಿಯು ಸುಲಭವಾಗಿದೆ; ಸ್ವಾಭಾವಿಕವಾಗಿದೆ. ಇರುವ ವಸ್ತುವನ್ನು ಅದು ಇರುವ ಹಾಗೆ ವರ್ಣಿಸುವ ಚಾತುರ್ಯ ಕವಿಗೆ ಉಂಟು. ಹಾಗೆ ವರ್ಣಿಸುವಾಗ ಜನಸಾಮಾನ್ಯರ ಅನುಭವದಲ್ಲಿರುವ ಹೋಲಿಕೆಗಳನ್ನು ತರುವುದರಲ್ಲಿ ಬಹು ಜಾಣತನವನ್ನು ತೋರಿದ್ದಾನೆ. ಉದಾಹರಣೆಗೆ ಮಳೆಯ ವರ್ಣನೆಯನ್ನು ನೋಡಿ, "ಕಿರುಧಾರೆಯಲ್ಲ: ತೆಂಗಿನಮರಗಳ ತೋರದುರುವ ಧಾರೆಯೊಳೆಡೆಬಿಡದೆ" ಬರುತ್ತಿತ್ತು ಮಳೆ. "ಅಗಣಿತ ದೈವಗಳೊಂದು ಹಬ್ಬವಮಾಡಲಗಲದೊಳ್ಕೆರೆದೊತ್ತಲಾಗಿ ; ಗಗನವೆಂದೆಂಬ ಸೇವಗೆಯೊರಳಿಂದ ಸೇವಗೆಯಿಳಿವೊಲು ಮಳೆಯಾಯ್ತು." ಹಾಗೆಯೇ ಗುಡುಗನ್ನು ವರ್ಣಿಸುವಾಗ "ಕೊಡದ ಸಾಲಂದದ ಮುಗಿಲ ಕಾಮನ ಬಿಲ್ಲ ಬಡಿಗೆಯಿಂ ಬಡಿಯೆ ದೈವಗಳು ; ಒಡೆದಂತೆ ಗುಡುಗಾದುದೊಳಗಿದ್ದ ನೀರು ತೊಟ್ಟಿಡುವಂತೆ ಕರೆದುದು ವೃಷ್ಟಿ." ಈ ಕವಿಗೆ ನಿಜವಾದ ಅನುಭವವಿತ್ತು: ಚಿತ್ರಬರೆದಂತೆ ಕಣ್ಣಿಗೆ ಕಟ್ಟುವ ಕೌಶಲವಿತ್ತು.

ಕಣ್ಣಿಗೆ ಕಾಣಿಸದ, ಕಿವಿಯಿಂದ ಮಾತ್ರ ಕೇಳಬಲ್ಲ ವಸ್ತುಗಳಲ್ಲಿಯೂ ಅಷ್ಟೆ. ಇವನ ಸಂಗೀತ ವರ್ಣನೆ ಅಸ್ವಾದ್ಯವಾದುದು. ಅಲ್ಲಿ ಪಾರಿಭಾಷಿಕ ಶಬ್ದಗಳ

ಗೊಂದಲವಿಲ್ಲ. ಸಂಗೀತಶಾಸ್ತ್ರದ ಗಂಧವಿಲ್ಲದವನಿಗೂ ಕಣ್ಣಿಗೆ ಕಟ್ಟಿ ನಿಲ್ಲುತ್ತದೆ. ತಾನು ಅನುಭವಿಸಿ ಆ ಕವಿಯು ಆನಂದಪಟ್ಟಿದ್ದಾನೆ. ಆ ಆನಂದವನ್ನು ನಿರ್ವಂಚನೆಯಿಂದ ಓದುಗರ ಪಾಲುಮಾಡುತ್ತಾನೆ. ಅಲ್ಲಿಯ ಉಪಮಾನಗಳಂತೂ ಜೀವನದಿಂದ ತಾವಾಗಿಯೇ ಎದ್ದುಬಂದಿರುವಂತೆ ಕಾಣುತ್ತವೆ.

ಒಳಗುಣ್ಮಿದಾನಂದರಸ ತನ್ನ ತನುತುಂಬಿ| ತುಳುಕಿ ಹೊರಗೆ ಸೂಸುವಂ|
ತೆಳುವಸುರಿಂದ ಬಾಯ್ದೆರೆಯೊಳು ಸುಸ್ವರ| ಹೊಳೆದು ಮೋಹಿಸುತಿದ್ದುದಾಗ||
ಸುಳಿನಾಭಿಯೊಳು ಹುಟ್ಟಿ ಮೆಲ್ಲೆದೆಯೊಳು ಬೆಳೆ| ದೊಳಗೊರಲೊಳು ಪ್ರಾಯವಡೆದು|
ಎಳೆಯಳ ಬ್ರಹ್ಮರಂಧ್ರವನೇರಿ ಬಾಯ್ದೆರೆ| ಗಿಳಿದು ಮೋಹಿಸಿದುದಾಳಾಪ||
ಬೆಳಗಿನೊಳೋಲಾಡುವಂತೆ ಸಂಗೀತದ| ಸುಳಿಯೊಳು ತೇಲಾಡುವಂತೆ|
ತೆಳುಗಾಳಿಯೇರಿ ವೈಹಾಳಿಯ ಮಾಡುವಂ| ತೆಳವೆಂಗಳರಸಿ ಹಾಡಿದಳು||
ಕೆಂಬಾಯ ನಸುದೆರೆದಾಯೆಂದು ರಾಗವ| ನಂಬುಜಾನನೆ ತುಡುಕಿದಳು||—
ವೀಣೆಯ ನುಡಿಸುತ ಪಾಡಿದರವಳೀಗ| ವೀಣೆಗಳೆರಡನೊಂದಾಗಿ|
ಹೂಣಿ ನುಡಿಸುತಿದ್ದಳೆಂಬೊಲಿಹುದು ಮಝು| ರಾಣಿಯ ದನಿಯ ಚಲ್ವಿಕೆಯೆ||

ಎಷ್ಟು ಕಣ್ಣಿಗೆ ಕಟ್ಟಿದಂತಿದೆ ಸಂಗೀತದ ದೃಶ್ಯ! ಹೀಗೆಯೇ ನರ್ತನವೂ. ನಾಟ್ಯ ಕಾತಿಯರು ನಾಟ್ಯವಾಡುತ್ತಾ

"ನೋಟದೊಳಗೆ ಕೊಂದರೊಮ್ಮೆ ನೋಟಕರನು| ನಾಟಿಸಿ ನಸುನಗೆಯಿಂದ|
ಲೂಟಿ ಮಾಡಿದರು ಮೈಯೊಲೆದಾಟದಿಂದೆದೆ| ಗೋಟೆಯ ಕೊಂಡರೇನೆಂಬೆ||
ಸುಳಿದು ಸುತ್ತುವಳು ನಾಟ್ಯದೊಳು ಸಮ್ಮೋಹನ| ಜಳಧಿಯ ಸುಳಿಯೊ ಎಂಬಂತೆ|
ಬಲಕೆಡಕೊಲೆದು ಹರಿವೆಳವಿಸಿಲಲ್ಲಿ| ಯೆಳನಾಗ ಹರಿವಂತೆ ಮುರಿದು||

ಅತ್ಯಂತ ಗಹನವಾದ ವೇದಾಂತ ವಿಚಾರಗಳು ಕೂಡ ರತ್ನಾಕರನ ಕೈಯಲ್ಲಿ ಸುಲಿದ ಬಾಳೆಯ ಹಣ್ಣಿನಂತೆ ಸುಲಭವಾಗಿ ಬಿಡುತ್ತವೆ.—

ದೊರೆಯಿದ್ದು ಹೋಗೆನೆ ಹೋಗಿ ಬಾರೆಂದರೆ| ಬರುತಿಹ ಸೇವಕರಂತೆ|
ಕರಣ ನಾಲ್ಕಿಂದ್ರಿಯವೈದವನುಸುರಿದಂ| ತಿರುತಿಹವೇನ ಬಣ್ಣಿಪೆನು||
ಬೇಕಾದರಾಡಿಸಿ ಗಾಳಿಪಟವನರ್ತಿ| ಸಾಕಾಗೆ ಸುರುಳುವನಂತೆ|
ನೂಕಿ ಚಿತ್ತವ ಹೊರಗಾಡಿಸುವನು ತನ್ನೊ| ಳೇಕವಾಗಿರಿಸುವನೊಮ್ಮೆ||
ಹೆಣ್ಣು ಸೋಂಕದ ಮುನ್ನ ಪುಟವೇರುತಿಹುದದು| ಹೆಣ್ಣ ತೋಳ್ವಲೆಗೆ ಬಿದ್ದಾಗ|
ಪೊಣ್ಣ ಪೊಣ್ಣನೆ ಹಾರುವೆರಳೆ ಮೋಸದಿ ಕಾಲು| ಕಣ್ಣಿಗೆ ಸಿಲುಕಿದಂತಿಹುದು||
ಹೆಣ್ಣ ಹಿಡಿದಮೇಲೆ ಮಣ್ಣ ಹಿಡಿಯಬೇಕು| ಹೊನ್ನ ಹಿಡಿಯಬೇಕು ಸಹಜ|
ಹೆಣ್ಣು ಹೊನ್ನು ಮಣ್ಣು ಪಿಡಿದಾತ್ಮರೆಲ್ಲರು| ಮಣ್ಣುಹಿಡಿದ ಲೋಹದಂತೆ||

ಹೀಗೆ ಕವಿಯು ಮನಸ್ಸಿಗೆ ಮಾತ್ರ ವೇದ್ಯವಾಗಬಲ್ಲ ವಿಷಯಗಳನ್ನು ಸಹ, ಸಹಜ ವಾಗಿ, ಸುಂದರವಾಗಿ ಚಿತ್ರಿಸಬಲ್ಲ ಜಾಣನಾದ ಕಲೆಗಾರನಾಗಿದ್ದಾನೆ.

ಆದರೆ ರತ್ನಾಕರನು ಆಯ್ದುಕೊಂಡಿರುವ ವಸ್ತುವಿನಲ್ಲಿ ಹಲವುಬಗೆಯ ಭಾವಾವೇಗಗಳು ಬರಲು ಆಸ್ಪದವಿಲ್ಲ. ಉಗ್ರಭಾವಗಳಿಗೆ ಇಲ್ಲಿ ಎಡೆಯಿಲ್ಲ. ಆದ್ದರಿಂದ ಇವನ ಶೈಲಿಯಲ್ಲಿ ಒಂದು ಸತ್ವವು ಕಡಮೆಯಾದಂತೆ ತೋರಿಬರುತ್ತದೆ. ನಾಗಚಂದ್ರನಂತೆ ಇವನಲ್ಲಿಯೂ ಭಾವಕ್ಕನುಗುಣವಾದ ಪದಸಮೂಹವು ಕಂಡುಬರುವುದಿಲ್ಲ. ಕವಿಯ ಮನೋಭಾವ ಬಹು ಕೋಮಲವಾದುದು. ಮನಸ್ಸನ್ನು ಕೆರಳಿಸಬಲ್ಲ—ಕೆಚ್ಚಿನ ಕಿಚ್ಚನ್ನು ಹೆಚ್ಚಿಸಬಲ್ಲ—ಉಗ್ರಭಾವಗಳು ಅವನಲ್ಲಿ ಕಡಮೆ. ಅವನ ದೃಷ್ಟಿಯೆಲ್ಲವೂ ಸುಂದರವಾದ, ಕೋಮಲವಾದ, ಕಳಕಳಿಸುವ ಲಲಿತಕಲೆಯ ಕಡೆಗೆ.

ರತ್ನಾಕರನಲ್ಲಿ, ಅವನ ಶೈಲಿಯಲ್ಲಿ, ಕುಸುರಿಗೆಲಸ ಹೆಚ್ಚು. ವರ್ಣನೀಯ ವಸ್ತುವಿನ ಪ್ರತಿಯೊಂದು ಪದರವನ್ನೂ ಜಕಣಾಚಾರಿಯಂತೆ ಬಿಚ್ಚಿ ತೋರಿಸುವ ಸ್ವಭಾವ. ಓದುಗರ ಊಹೆಗೆ ಹೆಚ್ಚು ಅವಕಾಶವನ್ನೇ ಕೊಡುವುದಿಲ್ಲ. ತಾನು ಹಿಡಿದ ಕೆಲಸದಲ್ಲಿ ಮತ್ತೊಬ್ಬರು ಕೈಹಾಕದಂತಿರಬೇಕೆಂಬುದು ಇವನ ಮನೋಧರ್ಮ. ಅವನ ಶೈಲಿಯಲ್ಲಿ ಉದ್ದಕ್ಕೂ ಇದು ಕಂಡುಬರುತ್ತದೆ.

ಇವನ ಶೈಲಿಯಲ್ಲಿ ಆಡಂಬರವಿಲ್ಲ. ಯಾವುದನ್ನು ಹೇಳಬೇಕಾದರೂ ಅದರ ಉದ್ದಿಷ್ಟ ಪರಿಣಾಮವನ್ನು ಮನಸ್ಸಿನಲ್ಲಿಟ್ಟುಕೊಂಡು ಹೇಳಲು ಪ್ರಯತ್ನಿಸುತ್ತಾನೆ. ಒಂದು ರೀತಿಯಿಂದ ಮಿತಿಯೆಂಬುದು ಇವನ ಮನೆದೇವತೆ. ಆಯಾ ಸಂದರ್ಭಗಳಿಗೆ ಎಷ್ಟು ಪ್ರಕೃತವೊ ಅಷ್ಟು ಮಾತ್ರ ಹೇಳುತ್ತಾನೆ. ಸಂಗೀತದ ವಿಚಾರವನ್ನು ಎತ್ತಿದರೆ ಅದರಿಂದ ಬರುವ ಸಂತೋಷದ ವಿಚಾರವೆಷ್ಟೊ ಅಷ್ಟೇ ಹೊರತು ಒಂದು ಹೆಜ್ಜೆ ಆಚೆ ಈಚೆ ಇಡುವುದಿಲ್ಲ. ದೃಶ್ಯವೊಂದನ್ನೇ ಜೇರ್ಪಡಿಸಿ ನೋಡಿದಾಗ ಅದು ಸಂಪೂರ್ಣವಾಗಿದ್ದಂತೆ ತೋರುತ್ತದೆ. "ಉಚಿತಕ್ಕೆ ತಕ್ಕಷ್ಟು ಪೇಳ್ವೆನ್" ಎಂಬ ಈತನ ಸಂಕಲ್ಪವು ಈಡೇರಿದೆ.

## ರತ್ನಾಕರನ ಉಪಮೆಗಳು

ರತ್ನಾಕರನ ಉಪಮೆಗಳು ಮನಸ್ಸನ್ನು ಉದ್ರೇಕಿಸುವಷ್ಟು ಉಜ್ವಲವಾದವುಗಳಲ್ಲ. ಹೇಳುವುದನ್ನು ಮನದಟ್ಟಾಗುವಂತೆ ಹೇಳಲು ಮಾತ್ರ ಇವುಗಳು ಸಹಕಾರಿಯಾಗಿರುತ್ತವೆ. ಸಾಮಾನ್ಯವಾಗಿ ಪಾಠಕರ ಮನಸ್ಸಿಗೆ ಹಿಡಿಸುವಂತೆ ಮಾಡುವುದಕ್ಕಾಗಿ ಒಂದೇ ಬಾರಿಗೇ ಮೂರು ನಾಲ್ಕು ಉದಾಹರಣೆಗಳನ್ನು ಕೊಡುವುದಕ್ಕೂ ಕವಿಯು ಹಿಂಜರಿಯುವುದಿಲ್ಲ. ಎರಡು ಉದಾಹರಣೆಗಳಂತೂ ಎಲ್ಲಿಯೂ ತಪ್ಪುವುದಿಲ್ಲ. ಎಂದಮಾತ್ರಕ್ಕೆ ಈತನ ಉಪಮೆಗಳು ಕೀಳ್ತರದವುಗಳೆಂದು ಭಾವಿಸಬಾರದು. ಜನಸಾಮಾನ್ಯರ ಅನುಭವದೊಳಗೆ ಇರತಕ್ಕ ಉಪಮೆಗಳನ್ನೇ ಆರಿಸಿ ತೆಗೆದು ಅವರ

ಮುಂದಿಡಬೇಕೆಂಬುದು ಅವನ ಉದ್ದೇಶ. ಸಮಯ ಬಂದಾಗ ಉತ್ತಮವಾದ ಉಪಮೆಗಳನ್ನು ಕೊಡುತ್ತಾನೆ. ನಾಟಕರಂಗದಲ್ಲಿ ತೆರೆಯು ಓರೆಯಾದುದನ್ನು ಕುರಿತು "ಸಂಜೆಗೆಂಪೊಲೆವಂತೆ ತೆರೆ ತೊಲಗಿತು ಕಣ್ಗೆ| ಕಂಜಾಕ್ಷಿಯರು ಕಾಣಿಸಿದರು." ಎಷ್ಟು ಸುಂದರವಾದ ಭಾವ! ಪ್ರಕೃತಿಯಲ್ಲಿ ನಡೆವ ವ್ಯಾಪಾರಗಳನ್ನು ಕವಿಯು ಕಣ್ಣಿಟ್ಟುನೋಡುವ ಶಕ್ತಿಯುಳ್ಳವನಾಗಿದ್ದಾನೆ. ಸ್ವೈಸರ್ಗಿಕವಾದ ಇಂತಹ ಉಪಮೆಗಳು ಕಾವ್ಯದಲ್ಲಿ ಅಲ್ಲಲ್ಲಿ ಕಂಡು ಬರುತ್ತವೆ. ಆದರೆ ಅತ್ಯುತ್ತಮ ಕಾವ್ಯಲಕ್ಷಣವುಳ್ಳ ಉಪಮೆಗಳು ಇಲ್ಲಿ ಅಲ್ಪಸಂಖ್ಯಾತವಾಗಿವೆ.

## ಸಾಹಿತ್ಯದಲ್ಲಿ ರತ್ನಾಕರನ ಸ್ಥಾನ

ಕನ್ನಡ ಸಾಹಿತ್ಯಸಾಮ್ರಾಜ್ಯದಲ್ಲಿ ರತ್ನಾಕರನ ಸ್ಥಾನವಾವುದು ಎಂಬುದನ್ನು ಒಂದೇ ಮಾತಿನಲ್ಲಿ ಹೀಗೆ ಹೇಳಬಹುದು. ಭಾಮಿನಿಷಟ್ಪದಿಗೆ ಕುಮಾರವ್ಯಾಸನು ಹೇಗೋ, ರಗಳೆಗಳಿಗೆ ಹರಿಹರನು ಹೇಗೋ, ಸಾಂಗತ್ಯಕ್ಕೆ ರತ್ನಾಕರನು ಹಾಗೆ. ಅವನು ಕನ್ನಡ ಸಾಹಿತ್ಯ ಸಾಮ್ರಾಜ್ಯದ ಸ್ತಂಭಗಳಂತಿರುವ ಉತ್ತಮಕವಿಗಳ ಪಂಕ್ತಿಯಲ್ಲಿ ಅವರೊಡನೆ ಭುಜಕ್ಕೆ ಭುಜವಾನಿಸಿ ಕುಳಿತುಕೊಳ್ಳುವ ಯೋಗ್ಯತೆಯುಳ್ಳವನು; ತನ್ನ ಕಾವ್ಯರತ್ನದಿಂದ ಅಜರಾಮರವಾದ ಕೀರ್ತಿಯನ್ನು ಗಳಿಸಿರುವವನು.

ಜಗದೊಳ್ ಸನ್ನಿದಮಾದ ನಾಳ್ನುಡಿಗಳಂ ಛಂದಕ್ಕೆ ಬರ್ಪಂತೆ ನೆ
ಟ್ಟಗೆ ಮಾತಾಡುವ ಬಲ್ಮೆ ಚಿತ್ತದೊಳೊರಲ್ದಿರ್ದರ್ಥಮುಂ ಕೂಡೆ ನಾ
ಲಗೆಯಿಂ ರಂಜಿಸುವೊಂದು ಬಿನ್ನಣಮವಿನ್ನಾವಂಗೆ ಪುಣ್ಯೈಕ ಭಾ
ಗಿಗೆ ಸೈಪಿಂ ದೊರೆಕೊಳ್ಗು ಮಾತನೆ ವಲಂ ಶೃಂಗಾರರತ್ನಾಕರಂ ||—ಕವಿಕಾಮ

ಟಿ. ಎಸ್. ಶಾಮರಾವ್.

---

## ಅನುಬಂಧ

ಭರತೇಶವೈಭವದ ಕರ್ತೃ ಮೂಡಬಿದಿರೆಯವನೆಂಬುದಕ್ಕೆ ಕವಿಯ ಮಾತೇ ಆಧಾರವಾಗಿದೆ. ತ್ರಿಲೋಕಶತಕದ ೧೨೯ನೆಯ ವೃತ್ತದಲ್ಲಿ "ಮಣಿಶೈಲಂ ಗತಿಯಿಂದು ಶಾಲಿಶಕಕಾಲಂ ಸಂದಿರಲ್ **ತೌಳವಾಂಗಣದೊಳ್ ವೇಣುಪುರಾಂಕದೊಳ್** ಸೃಜಿಸಿದಂ ರತ್ನಾಕರಾರ್ಯಂ" ಎಂದಿದೆ. ಇಲ್ಲಿ ಹೇಳಲ್ಪಟ್ಟ ವೇಣುಪುರವೇ ಮೂಡಬಿದಿರೆ.

ಈ ವೇಣುಪುರವೇ ಮೂಡಬಿದಿರೆ ಎಂಬುದು ಹೇಗೆ? ಮೂಡಬಿದಿರೆಯನ್ನು ಅಲ್ಲಿ ದೊರಕುವ ಶಾಸನಗಳಲ್ಲೆಲ್ಲ ವೇಣುಪುರವೆಂದೇ ಕರೆದಿರುತ್ತದೆ. ಮೂಡಬಿದಿರೆಯ

'ಸಾವಿರಕಂಬದ ಬಸದಿ,'—'ಪೊಸಬಸದಿ,'—'ತ್ರಿಭುವನ ಚೂಡಾಮಣಿ'—ಎಂದು ಕರೆಯಲ್ಪಡುವ ಬಸದಿಯ ಒಂದು ಶಾಸನದಲ್ಲಿ "ಶಕನೃಪಕಾಲ ೧೩೫೧ನೆಯ ಸೌಮ್ಯ ಸಂವತ್ಸರದ ಮಾಘ ಶುದ್ಧ ಪಂಚಮಿ ಗುರುವಾರದಲ್ಲಿ ತ್ರಿಭುವನ ಚೂಡಾಮಣಿಯೆಂಬ ಮಹಾ ಚೈತ್ಯಾಲಯಮಂ ಪ್ರಾರಂಭಿಸಿ . . . **ವೇಣುಪುರದ** ಎಂಟು ಪ್ರಜೆ ಸೆಟ್ಟಿಗಾರರು . . . ದೇವರಾಯ ಮಹಾರಾಯರ ನಿರೂಪದಿಂ ಅಭಿನವ ಚಾರುಕೀರ್ತಿ ಪಂಡಿತ ದೇವರುಗಳಿಗೆ ನಿರ್ಮಾಣಾರ್ಥವಾಗಿ ಕೋಟೇಶ್ವರದಲ್ಲಿ ಶಾಲಿಕೆನಾಡು ಚವುಟರು ಮುಖ್ಯವಾದ ಅರುವರು ಬಲ್ಲಾಳುಗಳ ಸಹಾಯದಿಂ ತ್ರಿಭುವನ ಚೂಡಾಮಣಿಯೆಂಬ ಮಹಾಚೈತ್ಯಾಲಯಮಂ ಜಗದಾಶ್ಚರ್ಯಮಪ್ಪಂತು ಮಾಡಿಸಿದರ್." ಎಂದೂ

ಇನ್ನೊಂದು ಶಾಸನದಲ್ಲಿ ". . . ಆ ಮೂಡಬಿದಿರೆಯ ಹಲರು ತ್ರಿಭುವನ ಚೂಡಾಮಣಿ ಚೈತ್ಯಾಲಯಕ್ಕೆ ಶ್ರೀ ಚಂದ್ರಪ್ರಭತೀರ್ಥೇಶ್ವರರ ಪರಮೋದಾರಿತ ದಿವ್ಯಮೂರ್ತಿಯಂ . . . ನಿರ್ಮಲಿಸಿದರ್" ಎಂದೂ ಇದೆ. ಮೂಡಬಿದಿರೆ, ವೇಣುಪುರ—ಈ ಎರಡು ಹೆಸರುಗಳೂ ಸಮಾನವಾಗಿ ಬಳಕೆಯಲ್ಲಿದ್ದವು.

ಬೇರೊಂದು ಶಾಸನದಲ್ಲಿರುವ

"ಪುರುಹೂತೋರು ಪುರಾಭ ವೇಣುಪುರದೊಳ್ ಭವ್ಯರ್ ಪಲರ್ ಮಾಡಿಸಲ್
ವರಚಂದ್ರಪ್ರಭಗೇಹಮಂ ತ್ರಿಭುವನೀ ಚೂಡಾಮಣೀಖ್ಯಾತಮಂ
ಭರದಿಂ ಮಾಡಿಸಿದಂ ತೃತೀಯನಿಲಯಕ್ಕಾ ಚೈತ್ಯಗೇಹಾಗ್ರದೊಳ್
ಕರಚೆಲ್ವಾಗಿರೆ ತಾಮ್ರದಿಂ ಪೊದಕೆಯಂ ಶ್ರೀ ಭೈರವಕ್ಷ್ಮಾವರಂ ||"

ಎಂಬ ವೃತ್ತದಲ್ಲಿ ಮೂಡಬಿದಿರೆಯನ್ನು ವೇಣುಪುರವೆಂದೇ ಕರೆದಿರುತ್ತದೆ.

ಇದೆಲ್ಲ ಸರಿಯೇ; ಆದರೂ ವೇಣುಪುರವೆಂಬುದು ವೇಣೂರು ಏತಕ್ಕಾಗಬಾರದು? ಎಂಬ ಸಂಶಯವು ಕೆಲವರಿಗೆ ಬರಬಹುದು. ಆದರೆ ವೇಣೂರು ಎಂದು ಈಗ ಕರೆಯಲ್ಪಡುವ, ಅಜಿಲರ ರಾಜಧಾನಿಯಾದ, ಗೋಮಟೇಶ್ವರನ ಪ್ರತಿಮೆಯೊಂದಿದ್ದು ಪ್ರಸಿದ್ಧವಾಗಿರುವ, ಊರಿನ ಹೆಸರು ನಿಜವಾಗಿ ಏಣೂರು—ವೇಣೂರು ಅಲ್ಲ. ಇಲ್ಲಿ ಎರಡೂರು, ಮೂರೂರು, ನಾಕೂರು, ಐದೂರು, ಆರೂರು, ಏಣೂರು ಎಣ್ಮೂರು ಎಂಬ ಗ್ರಾಮಗಳಿವೆ.

ಆದಪ್ರಯುಕ್ತ ಭರತೇಶವೈಭವದ ಕರ್ತೃವು ಹೇಳುವ ವೇಣುಪುರವು, ಮೂಡಬಿದಿರೆಯೇ ಹೊರತು (ವೇಣೂರು) ಏಣೂರು ಅಲ್ಲ. ಈ ಭಾಗದಲ್ಲಿ ದೇವಚಂದ್ರನ ಹೇಳಿಕೆಯನ್ನು ನಂಬಬಹುದು.

ಉ. ಮಂಗೇಶರಾವ್.

---

# ಖನಿಜ ಪರಿಚಯ

ಮನುಷ್ಯನ ನಿತ್ಯಗಟ್ಟಳೆಯ ಜೀವನಕ್ಕೆ ಸಂಬಂಧಿಸಿರುವ ವಸ್ತುಗಳು ಅನೇಕ ವಾಗಿರುತ್ತವೆ. ಇವುಗಳಲ್ಲಿ ವಾಸಮಾಡತಕ್ಕ ಮನೆ, ಧರಿಸುವ ಉಡುಪು, ಸೇವಿಸುವ ಆಹಾರ ಪಾನೀಯಗಳು, ಉಪಯೋಗದಲ್ಲಿರುವ ಪಾತ್ರೆ ಪದಾರ್ಥಗಳು ಮುಖ್ಯ ವಾದವು. ಇವೆಲ್ಲವೂ ಒಂದೇ ಸ್ಥಳದಲ್ಲಿದ್ದು ಉಪಯೋಗಕ್ಕೆ ಬರುತ್ತಿದ್ದರೂ ಇವುಗಳ ಪರಸ್ಪರ ಗುಣಸ್ವರೂಪಗಳು ಬೇರೆ ಬೇರೆಯಾಗಿರುತ್ತವೆ. ಈ ವಸ್ತುಗಳನ್ನು ಮುಖ್ಯವಾದ ಎರಡು ಪಂಗಡಗಳಿಗೆ ಸೇರಿಸಬಹುದು.

೧. **ಜೀವಜನಿತ ವಸ್ತುಗಳು**—ಈ ವಸ್ತುಗಳು ಸಸ್ಯ ಮತ್ತು ಪ್ರಾಣಿ ವರ್ಗಗಳಿಗೆ ಸಂಬಂಧಪಟ್ಟಿರುತ್ತವೆ. ದೈನಂದಿನ ಉಪಯೋಗದಲ್ಲಿರುವ ಇವುಗಳಲ್ಲಿ ಕೆಲವು ಜೀವಸಹಿತವಾಗಿಯೂ (ಉದಾ.—ಸಾಕುಪ್ರಾಣಿಗಳು, ಗಿಡಮರಗಳು, ಪೈರು ಪಚ್ಚೆಗಳು) ಕೆಲವು ಜೀವರಹಿತಗಳಾಗಿಯೂ (ಉದಾ.—ಆಹಾರ ಪದಾರ್ಥಗಳು, ಕಟ್ಟಡದಲ್ಲಿನ ಮರಮುಂಡಿಗೆಗಳು) ಇರುತ್ತವೆ.

೨. **ಅಜೀವಜನಿತ ವಸ್ತುಗಳು**—ಇವು ಪ್ರಾಯಿಕವಾಗಿ ಕಲ್ಲುಮಣ್ಣುಗಳ ರೂಪದಿಂದ ಭೂಮಿಯಲ್ಲಿ ಸಿಕ್ಕುತ್ತವೆ.

ಕೋಲಾರದ ಚಿನ್ನದ ಗಣಿಗಳಲ್ಲಿ ಚಿನ್ನವು ಬೆಣಚುಕಲ್ಲಿನೊಂದಿಗೆ ಸಿಕ್ಕುತ್ತದೆ. ಭದ್ರಾವತಿ ಕಬ್ಬಿಣದ ಕಾರ್ಖಾನೆಯಲ್ಲಿ ಉಪಯೋಗಿಸುವ ಕಬ್ಬಿಣದ ಅದಿರು ಕೆಮ್ಮಣ್ಣುಗುಂಡಿಯ ಗಣಿಗಳಿಂದ ಬರುತ್ತದೆ. ಹೀಗೆ ಗಣಿಗಳಿಂದ ತೋಡಿ ತೆಗೆದು ಕೈಗಾರಿಕೆಗಳಲ್ಲಿ ಉಪಯೋಗಿಸತಕ್ಕ ಲೋಹಸಂಬಂಧವಾದ ಮತ್ತು ಇತರ ಕಲ್ಲು ಮಣ್ಣಿನ ರೂಪದಿಂದಿರುವ ಪದಾರ್ಥಗಳಿಗೆ ಖನಿಜಗಳೆಂದು ಹೆಸರು. ಖನಿಜಗಳ ಸ್ಥಾನವು ದೇಶದ ಸಂಪತ್ತಿನ ನಿರ್ಧಾರದಲ್ಲಿ ಬಹು ಮುಖ್ಯವಾದದ್ದು. ಯಾವುದಾದರೊಂದು ಲೋಹಶುದ್ಧಿಮಾಡುವ ಕಾರ್ಯಕ್ಷೇತ್ರಕ್ಕೆ ಹೋದರೆ ಅಲ್ಲಿ ಅನೇಕ ತರದ ಅದಿರುಗಳನ್ನು ಒಟ್ಟುಗೂಡಿಸಿ, ಪುಟಕ್ಕೆ ಹಾಕಿ ಲೋಹ ತೆಗೆಯುವುದನ್ನು ನೋಡಬಹುದು. ಉದಾಹರಣೆಗಾಗಿ ಭದ್ರಾವತಿಯಲ್ಲಿರುವ ಕೆಲವು ಕಾರ್ಖಾನೆಗಳನ್ನು ತೆಗೆದುಕೊಳ್ಳೋಣ. ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಗಳಲ್ಲಿ ಎರಡು ಮೂರು ತರದ ಕಬ್ಬಿಣದ ಅದಿರುಗಳನ್ನು ಮ್ಯಾಂಗನೀಸ್ ಅದಿರು, ಸುಣ್ಣಕಲ್ಲು ಮತ್ತು ಇದ್ದಿಲು ಮೊದಲಾದ ಪದಾರ್ಥಗಳೊಂದಿಗೆ ಸರಿಯಾದ ಪ್ರಮಾಣಗಳಲ್ಲಿ ಬೆರಸಿ "ಬ್ಲಾಸ್ಟ್ ಫರ್‌ನೇಸ್" ಎಂಬ ಆವಿಗೆಯಲ್ಲಿ ಸುರಿದು ಕಾಯಿಸುತ್ತಾರೆ.

ಕೆಲವು ಗಂಟೆಗಳನಂತರ ಕಬ್ಬಿಣವು ಅದಿರಿನಿಂದ ಬೇರ್ಪಟ್ಟು ಕರಗಿ ತಳದಲ್ಲಿ ನಿಲ್ಲುವುದು. ಈ ಕರಗಿದ ಕಬ್ಬಿಣವನ್ನು ಆಗಾಗ್ಗೆ ಆವಿಗೆಯ ಕೆಳಗಿನ ದ್ವಾರಗಳಿಂದ ತೆಗೆಯುತ್ತಾರೆ. ಸಿಮೆಂಟು ಕಾರ್ಖಾನೆಯಲ್ಲಿ ಸುಣ್ಣಕಲ್ಲು ಮತ್ತು ಜೇಡಿಮಣ್ಣನ್ನು ಸರಿಯಾಗಿ ಬೆರಸಿ, ಅರೆದು, ತಿರುಗುವ ಆವಿಗೆಯಲ್ಲಿ ಸುಡುತ್ತಾರೆ. ಬಿಳಿ ಜೇಡಿಮಣ್ಣಿನಿಂದ ಕಾವಿಟ್ಟಿಗೆಗಳನ್ನು ತಯಾರಿಸಿ ಆವಿಗೆಗಳನ್ನು ಕಟ್ಟಲು ಉಪಯೋಗಿಸುವರು.

ಈ ಕೈಗಾರಿಕೆಗಳಲ್ಲಿ ಬೇಕಾಗುವ ಖನಿಜಗಳೆಲ್ಲವೂ ಒಂದೆ ಕಡೆಯಲ್ಲಿ ಸಿಕ್ಕುವುದಿಲ್ಲ. ದೇಶದ ಅನೇಕ ಕಡೆಗಳಲ್ಲಿರುವ ಗಣಿಗಳಲ್ಲಿ ತೋಡಿ ತೆಗೆದ ಖನಿಜಗಳನ್ನು ಇಲ್ಲಿಗೆ ಸಾಗಿಸುತ್ತಾರೆ. ಇಲ್ಲಿ ಸಿಗದ ಪದಾರ್ಥಗಳನ್ನು ಹೊರ ದೇಶಗಳಿಂದ ತರಿಸುತ್ತಾರೆ. ಖನಿಜಗಳೆಲ್ಲವೂ ಒಂದೇ ಜಾಗದಲ್ಲಿ ಅಥವಾ ಹತ್ತಿರದ ಪ್ರದೇಶಗಳಲ್ಲಿ ಏತಕ್ಕೆ ಸಿಕ್ಕುವುದಿಲ್ಲ? ಹೊರಗಿನಿಂದ ತರಿಸತಕ್ಕ ಖನಿಜಗಳು ನಮ್ಮಲ್ಲಿ ಸಿಕ್ಕದಿರಲು ಕಾರಣ ವೇನು? ಇವೇ ಮೊದಲಾದ ಪ್ರಶ್ನೆಗಳು ತಲೆದೋರುವುದು ಸಹಜ. ಆದ್ದರಿಂದ ಖನಿಜಗಳು, ಇವುಗಳ ಗುಣಸ್ವರೂಪಗಳು, ಉತ್ಪತ್ತಿ, ಇವು ದೊರೆಯತಕ್ಕ ರೀತಿ, ತೆಗೆಯತಕ್ಕ ವಿಧಾನ ಮುಂತಾದ ವಿಷಯಗಳನ್ನು ಈ ಲೇಖನದಲ್ಲಿ ಸಂಗ್ರಹವಾಗಿ ತಿಳಿಸಲು ಪ್ರಯತ್ನಮಾಡಿದೆ.

## ೧. ಖನಿಜಗಳು

ಭೂಮಿಯ ಮೇಲ್ಮೈಯ್ಯ ಯಾವ ಕಲ್ಲನ್ನಾದರೂ ಪರೀಕ್ಷಿಸಿದರೆ ಅದರೊಳಗೆ ವಿವಿಧವಾದ ರೂಪ, ಪರಿಮಾಣ ಮತ್ತು ಬಣ್ಣಗಳಿಂದ ಕೂಡಿದ ಹರಳುಗಳು ಕಂಡು ಬರುವುವು. ಇದೇ ಕಲ್ಲನ್ನೆ ಬೆಳಕು ತೂರುವಂತೆ ತೆಳ್ಳನೆಯ ಪದರವಾಗಿ ತಿಕ್ಕಿ ಸೂಕ್ಷ್ಮದರ್ಶಕದಿಂದ ನೋಡಿದರೆ, ಈ ಹರಳುಗಳಲ್ಲಿನ ಪರಸ್ಪರ ವ್ಯತ್ಯಾಸಗಳು ಚೆನ್ನಾಗಿ ಗೋಚರವಾಗುವುವು. ಶಿಲಾಭಾಗಗಳಾದ ಈ ವಸ್ತುಗಳಿಗೆ ಖನಿಜ ಗಳೆಂದು ಹೆಸರು. ಹೀಗೆ ಪ್ರತಿಯೊಂದು ಕಲ್ಲು ಖನಿಜಮಯವಾಗಿದ್ದರೂ, ವ್ಯವ ಹಾರದಲ್ಲಿ, ಜನಸಾಮಾನ್ಯಕ್ಕೆ ಉಪಯೋಗವಾಗತಕ್ಕ ಲೋಹಗಳು, ಇವುಗಳ ಅದಿರು ಮುಂತಾದ ಅಜೀವ ಜನಿತವಸ್ತುಗಳನ್ನು ಮಾತ್ರ ಖನಿಜಗಳೆಂದು ಕರೆಯುವುದು ವಾಡಿಕೆಯಾಗಿದೆ. ಇದರಂತೆ ಒಂದು ದೇಶದ ಖನಿಜಸಂಪತ್ತೆಂದರೆ ದೈನಂದಿನ ಉಪಯೋಗಕ್ಕೆ ಬೇಕಾಗುವ ಮತ್ತು ಕೈಗಾರಿಕೆ, ಯಂತ್ರೋಪಕರಣಗಳ ಸಿದ್ಧತೆಗೆ ಒದಗತಕ್ಕ ಖನಿಜಗಳು ಆಯಾ ದೇಶಗಳಲ್ಲಿ ದೊರೆಯುತ್ತವೆಂದು ತಿಳಿಯ ಬೇಕು. ಖನಿಜವೆಂಬ ಪದಕ್ಕೆ ಗಣಿಯಲ್ಲಿ ಅಥವಾ ತೋಡಿದ ಜಾಗದಲ್ಲಿ ಹುಟ್ಟಿದ್ದು ಎಂದು ಅರ್ಥ.

## ಖನಿಜಗಳ ಸ್ವರೂಪ

ಖನಿಜಗಳನ್ನೊಳಕೊಂಡ ಕಲ್ಲುಗಳು ಅನೇಕ ತೆರನಾಗಿವೆ. ಕೆಲವು ಕಲ್ಲುಗಳಲ್ಲಿ ಒಂದು ಅಥವಾ ಎರಡು ಖನಿಜಗಳಿರುವುದುಂಟು. ಉದಾ: ಬೆಣಚುಕಲ್ಲು, ಸುಣ್ಣ ಕಲ್ಲು. ಸಾಮಾನ್ಯವಾಗಿ ನಾಲ್ಕಾರು (ಅಥವಾ ಇದಕ್ಕೂ ಹೆಚ್ಚಾದ) ಖನಿಜಗಳು ಕಲ್ಲುಗಳಲ್ಲಿರುವುದನ್ನು ನೋಡಬಹುದು. ಕೆಲವು ಖನಿಜಗಳು ಪ್ರಕೃತಿಯ ಒಂದು ಅಥವಾ ಎರಡು ಮೂಲಧಾತುಗಳಿಂದ ಕೂಡಿಯೂ (ಉದಾ: ಚಿನ್ನ, ಕಬ್ಬಿಣದ ಅದಿರು.) ಮಿಕ್ಕವು ಅನೇಕ ಮೂಲಧಾತುಗಳ ಸಂಯೋಜನೆಯಿಂದ ರೂಪ ಗೊಂಡೂ ಸಿಕ್ಕುತ್ತವೆ. ಈ ಮೂಲಧಾತುಗಳ ಸ್ವರೂಪಾನುಗುಣವಾಗಿ ಅವುಗಳ ಜೋಡಣೆಯಿಂದ ಹೆಚ್ಚು ಭಾಗ ಲೋಹಾಂಶಗಳನ್ನು ಹೊಂದಿದ, ಸ್ವಲ್ಪಭಾಗ ಲೋಹಾಂಶಗಳನ್ನುಳ್ಳ ಮತ್ತು ಲೋಹರಹಿತಗಳಾದ ಖನಿಜಗಳು ಬೇರೆಬೇರೆ ರೂಪ ಗಳಿಂದ ಸ್ವಭಾವಸಿದ್ಧವಾಗಿ ಪ್ರಕೃತಿಯಲ್ಲಿ ಬೇರ್ಪಟ್ಟು ಪ್ರಪಂಚದ ಎಲ್ಲಾ ಕಡೆಗಳಲ್ಲಿಯೂ ಸಿಕ್ಕುತ್ತಿವೆ. ಖನಿಜಗಳನ್ನು ಮುಖ್ಯವಾದ ಎರಡು ಪಂಗಡಗಳಿಗೆ ಸೇರಿಸಬಹುದು.

೧. **ಲೋಹ ಖನಿಜಗಳು**—ಲೋಹಗಳು, ಇವುಗಳ ಅದಿರುಗಳು ಈ ಪಂಗ ಡಕ್ಕೆ ಸೇರಿರುತ್ತವೆ.

೨. **ಶಿಲಾ ಖನಿಜಗಳು**—ಈ ಪಂಗಡದ ಖನಿಜಗಳಲ್ಲಿ ಹಲವು ಲೋಹಾಂಶ ವನ್ನು ಅತ್ಯಲ್ಪವಾಗಿ ಹೊಂದಿರುವುದರಿಂದ ಲೋಹಗಳನ್ನು ಲಾಭಕರವಾಗುವಂತೆ ಬೇರ್ಪಡಿಸಲು ಸಾಧ್ಯವಾಗುವುದಿಲ್ಲ. ಆದರೆ ಇತರ ಅನೇಕ ಕೈಗಾರಿಕೆಗಳಲ್ಲಿ ಈ ಖನಿಜಗಳು ಉಪಯೋಗಕ್ಕೆ ಬರುತ್ತವೆ. ಲೋಹರಹಿತಗಳಾದ ಖನಿಜಗಳೂ ಈ ಗುಂಪಿಗೆ ಸೇರಿರುತ್ತವೆ.

ಲೋಹ ಖನಿಜಗಳಲ್ಲಿ ಚಿನ್ನ, ಬೆಳ್ಳಿ, ಪ್ಲಾಟಿನಂ ಮತ್ತು ಕೆಲವೆಡೆಗಳಲ್ಲಿ ತಾಮ್ರ ಮತ್ತು ಕಬ್ಬಿಣ ಮುಂತಾದುವು ತಮ್ಮ ಸ್ವಸ್ವರೂಪದಲ್ಲಿಯೆ ಪ್ರಕೃತಿಯಲ್ಲಿ ಸಿಕ್ಕುತ್ತವೆ. ಉಳಿದ ಲೋಹಗಳು ಹಾಗೆ ಸಿಕ್ಕುವುದಿಲ್ಲ. ಈ ಲೋಹಾಂಶಗಳು ಆಮ್ಲ ಜನಕ, ಗಂಧಕ, ಇಂಗಾಲಾಮ್ಲ ಮತ್ತು ರಂಜಕಾಮ್ಲಗಳ ಸಂಗಡ ಕೆಲವುಕಡೆ ಒಟ್ಟಾಗಿಯೂ ಕೆಲವು ಕಡೆ ಬೇರೆಬೇರೆಯಾಗಿಯೂ ಕಲೆತು ಅದಿರಿನ ರೂಪದಿಂದ ದೊರೆಯುತ್ತವೆ. ಇವೆಲ್ಲಕ್ಕೂ ಹೆಚ್ಚಾಗಿ ಈ ಲೋಹಗಳು "ಸಿಲಿಕ" ಅಥವಾ "ಸಿಕತ"ವೆಂಬ ಧಾತುವಿನೊಂದಿಗೆ ಸೇರಿ ಅನೇಕ ಖನಿಜಗಳಾಗಿವೆ. ಇವುಗಳನ್ನು "ಸಿಲಿಕೇಟ್" ಖನಿಜಗಳೆಂದು ಕರೆಯುತ್ತಾರೆ. ಲೋಹಗಳ ಸಿಲಿಕೇಟ್ ಖನಿಜಗಳು, ಅನೇಕ ತರದ ಕಲ್ಲುಗಳ ನಿರ್ಧಾರ ಮತ್ತು ಗೊತ್ತುವಳಿಗೆ ಬಹಳ ಮುಖ್ಯವಾಗಿರುತ್ತವೆ.

ಅಲೋಹಗಳಾದ ವಜ್ರ, ಬರೆಯುವ ಸೀಸ, ಗಂಧಕ ಮುಂತಾದುವು ಶುದ್ಧ ರೂಪದಿಂದಲೆ ಪ್ರಕೃತಿಯಲ್ಲಿರುತ್ತವೆ. ಅಲೋಹ ಮೂಲಧಾತುಗಳ ಸಂಯೋಜನೆಯಿಂದ ಅನೇಕ ಖನಿಜಗಳು ರೂಪಗೊಂಡಿವೆ. ಕಲ್ಲಿದ್ದಲು, ಪೆಟ್ರೋಲಿಯಂ ಎಣ್ಣೆ ಮತ್ತು ಇವುಗಳಿಗೆ ಸಂಬಂಧಿಸಿದ ಅನಿಲಗಳು ಇಂಗಾಲ ಜಲಜನಕ ಸಂಯುಕ್ತಗಳಾಗಿವೆ. ಸಿಲಿಕಾನ್ ಎಂಬ ಮೂಲಧಾತು ಆಮ್ಲಜನಕದೊಂದಿಗೆ ಸೇರಿ ಬೆಣಚುಕಲ್ಲಿನ ರೂಪದಿಂದ ಎಲ್ಲೆಲ್ಲಿಯೂ ಇದೆ. ಸಾರಜನಕ, ಕ್ಲೋರೀನ್, ಫ್ಲೋರೀನ್ ಅನಿಲಗಳು (ಕೆಲವು ಸಂದರ್ಭಗಳಲ್ಲಿ ಆಮ್ಲಜನಕವೂ ಸೇರಿ), ಪೊಟಾಸಿಯಂ, ಸೋಡಿಯಂ, ಕ್ಯಾಲ್ಸಿಯಂ, ಮೆಗ್ನೀಶಿಯಂ ಮುಂತಾದ ಲೋಹಧಾತುಗಳೊಂದಿಗೆ ಮಿಳಿತವಾಗಿ ಉಪ್ಪು ಸಂಬಂಧವಾದ ಅನೇಕ ಖನಿಜಗಳ ರಚನೆಗೆ ಕಾರಣವಾಗಿವೆ. ಹಾಗೆಯೆ ವಿರಳ ಮೂಲಧಾತುಗಳಾದ ಬೆರಿಲಿಯಂ, ಥೋರಿಯಂ, ಯುರೇನಿಯಂ, ಸೀರಿಯಂ, ಮೊದಲಾದುವು ಆಮ್ಲಜನಕ, ರಂಜಕ ಮತ್ತು ಸಿಲಿಕದೊಂದಿಗೆ ಸೇರಿ ಅನೇಕ ಖನಿಜಗಳಾಗಿರುತ್ತವೆ.

ಇವಿಷ್ಟೂ ಖನಿಜಗಳಲ್ಲಿನ ಧಾತುಗಳಿಗೆ ಸಂಬಂಧಪಟ್ಟುವು. ಇವುಗಳ ಶೋಧನೆ ಮತ್ತು ಗೊತ್ತುವಳಿ, ರಸಾಯನಶಾಸ್ತ್ರದಿಂದ ಆಗಬೇಕು. ಖನಿಜಗಳನ್ನು ನೋಡಿದ ಕೂಡಲೆ ಅವುಗಳಲ್ಲಿನ ಧಾತುಸ್ವರೂಪಗಳು ತಿಳಿಯುವುದಿಲ್ಲವಾದ ಕಾರಣ, ಇವುಗಳನ್ನು ಕೆಲವು ಸ್ವಾಭಾವಿಕ ಭೌತಗುಣಗಳ ಪರಿಶೀಲನೆಯಿಂದ ತಿಳಿಯಬಹುದಾಗಿದೆ. ಈ ಗುಣಗಳಲ್ಲಿ ಮುಖ್ಯವಾದ ಕೆಲವನ್ನು ಇಲ್ಲಿ ತಿಳಿಸಿದೆ.

೧. **ರೂಪ**—ರೂಪನಿರ್ಧಾರದಲ್ಲಿ ಖನಿಜಗಳನ್ನು ಮೂರು ಪಂಗಡಗಳಿಗೆ ಸೇರಿಸಿರುತ್ತಾರೆ.

(i) ಸ್ಫಟಿಕ ಅಥವಾ ಹರಳು ರೂಪದಿಂದಿರುವ ಖನಿಜಗಳು.

(ii) ಸಣ್ಣಸಣ್ಣ ಹರಳುಗಳು ಒಂದುಗೂಡಿ ಹೊರಗಡೆ ನಿರ್ದಿಷ್ಟವಾದ ಆಕಾರವನ್ನು ಹೊಂದದೆ ಮುದ್ದೆಯಂತಿರುವ ಖನಿಜಗಳು.

(iii) ಸ್ವಭಾವಸಿದ್ಧವಾದ ಆಕಾರ, ರೂಪಗಳನ್ನು ಹೊಂದದೆ ಇರುವ ಖನಿಜಗಳು.

(i) ಮತ್ತು (ii)ನೆಯ ಪಂಗಡಗಳ ಖನಿಜಗಳಲ್ಲಿನ ರೂಪ ಮತ್ತು ಆಕಾರ ಸ್ವಭಾವಗುಣಗಳನ್ನು ಅನೇಕವರ್ಗ ಉಪವರ್ಗಗಳನ್ನಾಗಿ ವಿಂಗಡಿಸಿದ್ದಾರೆ. ಖನಿಜ ಶಾಸ್ತ್ರದ ಈ ಭಾಗವನ್ನು "ಸ್ಫಟಿಕರೂಪಶಾಸ್ತ್ರ"ವೆಂದು ಕರೆಯಬಹುದು.

೨. **ಗಾತ್ರ ಅಥವಾ ಪರಿಮಾಣ**—ಖನಿಜಗಳು ರೂಪಗೊಳ್ಳುವ ಕಾಲದಲ್ಲಿ ಕಾಲವ್ಯವಧಾನ ಸನ್ನಿವೇಶಗಳು ಅನುಕೂಲವಾಗಿದ್ದಲ್ಲಿ, ಅವು ಪೂರ್ಣ ಆಕಾರವನ್ನು ಹೊಂದಿ ಒಂದೇ ಹರಳು ಅನೇಕ ಅಂಗುಲಗಳ ಉದ್ದ, ಅಗಲ ಮತ್ತು ದಪ್ಪನಾಗಿರುವು

ದುಂಟು. ಖನಿಜಗಳ ಗಾತ್ರವು ಕಣ್ಣಿಗೆ ಗೋಚರಿಸದ ಸಣ್ಣ ಕಣಗಳಿಂದ ಪ್ರಾರಂಭವಾಗಿ ನಾಲ್ಕಾರು ಘನ ಅಂಗುಲಗಳಷ್ಟು ದಪ್ಪವಾಗಿರುತ್ತವೆ.

೩. **ಬಣ್ಣ**—ಗಾತ್ರದಂತೆಯೇ ಖನಿಜಗಳ ಬಣ್ಣವೂ ಅನೇಕ ವಿಧವಾಗಿವೆ. ಒಂದೇ ಖನಿಜವು ಅನೇಕ ಬಣ್ಣಗಳಿಂದಿರುವುದು ಸಾಮಾನ್ಯವಾದ ವಿಷಯ.

೪. **ಹೊಳಪು.**—ವಜ್ರ, ಕೆಂಪು, ಪಚ್ಚೆ ಮುಂತಾದ ರತ್ನಗಳು, ಅತ್ಯಂತ ಹೊಳಪಿನಿಂದಲೂ; ಅಭ್ರಕ, ಬೆಣಚುಕಲ್ಲು ಮುಂತಾದುವು ಸಾಧಾರಣ ಹೊಳಪಿನಿಂದಲೂ ಸುಣ್ಣಕಲ್ಲು, ಹಾಲುಗಲ್ಲು (magnesite), ಕಬ್ಬಿಣ ಮತ್ತು ಮ್ಯಾಂಗನೀಸ್ ಲೋಹಗಳ ಅದಿರುಗಳಲ್ಲಿ ಕೆಲವು ಹೊಳಪಿಲ್ಲದೆಯೂ ಇರುತ್ತವೆ. ಪ್ರತಿಯೊಂದು ಖನಿಜಕ್ಕೂ ಅದರ ಸಹಜವಾದ ಹೊಳಪಿರುವುದುಂಟು. ಈ ಗುಣನಿರ್ಣಯದಿಂದ ಕೆಲವು ಖನಿಜಗಳನ್ನು ಗೊತ್ತುಮಾಡಬಹುದು.

೫. **ಪೊರೆ**—ಅಭ್ರಕದ ಹಲ್ಲೆಯನ್ನು ತೆಳ್ಳನೆಯ ಪೊರೆಗಳನ್ನಾಗಿ ಸೀಳಬಹುದು. ಕೆಲವು ಖನಿಜಗಳು ಉದ್ದದಲ್ಲಿಯೂ, ಕೆಲವು ಅಗಲದಲ್ಲಿಯೂ ಸೀಳುವುದುಂಟು. ಸ್ಫಟಿಕರೂಪದಿಂದಿರುವ ಖನಿಜಗಳಲ್ಲಿ ಪೊರೆಯು ಅಧಿಕವಾಗಿರುವುದು.

೬. **ಒರೆ**—ಒರೆಗಲ್ಲಿನ ಮೇಲೆ ತಿಕ್ಕಿದಾಗ ಕಂಡುಬರುವ ಬಣ್ಣದಿಂದ ಕೆಲವು ಖನಿಜಗಳನ್ನು ಗುರುತಿಸಬಹುದು. ಲೋಹದ ಅದಿರುಗಳ ಗೊತ್ತುವಳಿಗೆ ಈ ಒರೆಯ ನಿರ್ಣಯವು ಬಹು ಸಹಾಯಕವಾಗಿದೆ.

೭. **ಗಟ್ಟಿ**—ಖನಿಜಗಳ ಹೊರಭಾಗವು ಕೆಲವುಗಳಲ್ಲಿ ಉಗುರಿನಿಂದ ಗೀರಬಹುದಾದಷ್ಟು ಮೃದುವಾಗಿಯೂ, ಕೆಲವುಗಳಲ್ಲಿ ಚಾಕುವಿನಿಂದ ಕೆರೆಯಬಹುದಾದಷ್ಟು ಗಟ್ಟಿಯಾಗಿಯೂ, ಇನ್ನು ಕೆಲವುಗಳಲ್ಲಿ ಅತಿ ಗಟ್ಟಿಯಾಗಿಯೂ ಇರುತ್ತದೆ. ಗಟ್ಟಿಗುಣದ ನಿರ್ಣಯವನ್ನು ಉಗುರಿನಿಂದ ಗೀರಬಹುದಾದ ಬಳಪದ ಕಲ್ಲಿನಿಂದ ಪ್ರಾರಂಭಿಸಿ, ಯಾವ ಪದಾರ್ಥದಿಂದಲೂ ಗೀರಲಶಕ್ಯವಾದ ವಜ್ರದ ವರೆಗೆ ೧೦ ಭಾಗಗಳನ್ನಾಗಿ ವಿಂಗಡಿಸಿದ್ದಾರೆ. ಈ ಗಟ್ಟಿಗುಣವನ್ನು ಸಂಖ್ಯೆಗಳಿಂದ ಸೂಚಿಸಬೇಕು. ಪಚ್ಚೆ, ಕೆಂಪು, ವಜ್ರ, ಪುಷ್ಯರಾಗ ಮುಂತಾದ ರತ್ನಗಳ ಗಟ್ಟಿಗುಣವು ೮ ರಿಂದ ೧೦ರ ವರೆಗಿರುವುದರಿಂದ ಈ ಹರಳುಗಳ ಹೊಳಪಿನ ಮುಖಗಳು ಕೆಡಲವಕಾಶವಿರುವುದಿಲ್ಲ.

೮. **ಗುರುತ್ವ**—ಲೋಹಾಂಶ ಭಾಗಗಳನ್ನು ಹೆಚ್ಚಾಗಿ ಹೊಂದಿದ ಖನಿಜಗಳು ಬಹಳ ಭಾರವಾಗಿರುತ್ತವೆ. ಸಾಮಾನ್ಯ ಖನಿಜಗಳ ತೂಕವು ಕಡಮೆಯಾಗಿರುವುದು. ಈ ಗುಣವನ್ನು ಸಂಖ್ಯೆಯಿಂದ ಸೂಚಿಸುತ್ತಾರೆ. ಇದರ ನಿರ್ಧಾರಕ್ಕೆ ಒಂದು ಘನ ಅಳತೆಯ ನೀರಿನ ತೂಕವನ್ನು ಒಂದೆಂದು ಪರಿಗಣಿಸಿ, ಅದೇ ಪ್ರಮಾಣದ ಘನ ಪದಾರ್ಥವನ್ನು ತೂಕಮಾಡಿ, ಅದನ್ನು ನೀರಿನೊಂದಿಗೆ ಹೋಲಿಸುತ್ತಾರೆ. ಖನಿಜದ

ಸಾಂದ್ರತೆಯು ೨ ಎಂದು ಸೂಚಿಸಿದರೆ ಅದು ನೀರಿಗಿಂತ ಎರಡರಷ್ಟು ಭಾರವಾದ ದ್ದೆಂದು ತಿಳಿಯಬೇಕು. ಖನಿಜಗಳ ಭಾರವು ಸಾಮಾನ್ಯವಾಗಿ ೨ರಿಂದ ೪–೫ರ ವರೆಗಿದ್ದು, ಹೆಚ್ಚು ಬೆಲೆಬಾಳುವ ಚಿನ್ನ, ಪ್ಲಾಟಿನಂ ಲೋಹಗಳ ಭಾರವು ೧೯ ಮತ್ತು ೨೨ ಇರುತ್ತದೆ. ತೂಕದ ನಿರ್ಣಯದಿಂದ ಅನೇಕ ಖನಿಜಗಳನ್ನು ಕಂಡುಹಿಡಿಯ ಬಹುದು.

೯. **ಕಾವು ಮತ್ತು ಬೆಳಕಿಗೆ ಸಂಬಂಧಪಟ್ಟ ಗುಣಗಳು**—ಬೆಂಕಿಯಿಂದ ಕಾಯಿಸಿದ ಕೂಡಲೆ ಕೆಲವು ಖನಿಜಗಳು ರೂಪಭೇದ ಹೊಂದಿ, ಅವುಗಳ ಗುಣವನ್ನು ವ್ಯಕ್ತಪಡಿಸುತ್ತವೆ.

ಬೆಳಕು ಸಂಬಂಧವಾದ ಗುಣವು ಖನಿಜಗಳ ನಿರ್ಧಾರದಲ್ಲಿ ಬಹಳ ಮುಖ್ಯ ವಾದದ್ದು. ಶಿಲಾ ಪರೀಕ್ಷೆಯ ಸೂಕ್ಷ್ಮದರ್ಶಕವು ಬೆಳಕು ಸಂಬಂಧವಾದ ಗುಣ ಗಳನ್ನು ಅನೇಕ ರೀತಿಯಿಂದ ಪ್ರದರ್ಶಿಸುತ್ತದೆ.

ಖನಿಜ ಹರಳುಗಳ ಮೂಲಕ ಎಕ್ಸ್‌ರೇ ಕಿರಣಗಳನ್ನು ಪ್ರಸರಿಸಿ, ಅವುಗಳ ಅಣುರಚನೆಗಳನ್ನು ಕಂಡುಕೊಳ್ಳಬಹುದು. ಈ ಭಾಗದಲ್ಲಿ ಇತ್ತೀಚೆಗೆ ಅನೇಕ ಶೋಧನೆಗಳನ್ನು ನಡೆಸಿರುತ್ತಾರೆ.

೧೦. **ಕಾಂತದ ಆಕರ್ಷಣ ಮತ್ತು ವಿದ್ಯುಚ್ಛಕ್ತಿ ಸಂಬಂಧವಾದ ಗುಣಗಳು**—ಕೆಲವು ಖನಿಜಗಳು ಸ್ವಭಾವದಿಂದಲೆ ಆಕರ್ಷಣಶಕ್ತಿಯನ್ನು ಹೊಂದಿರು ತ್ತವೆ. ಉದಾ.—ಸೂಜಿಗಲ್ಲು ಅದಿರು (ಕಬ್ಬಿಣ). ಇನ್ನು ಕೆಲವು ಸೂಜಿಗಲ್ಲಿನಿಂದ ಆಕರ್ಷಿಸಲ್ಪಡುತ್ತವೆ.

ವಿದ್ಯುತ್ಪ್ರವಾಹವುಂಟಾದಾಗ ಕೆಲವು ಖನಿಜಗಳು ಭೇದವನ್ನು ತೋರ್ಪಡಿಸುತ್ತವೆ.

ಇವೇ ಅಲ್ಲದೆ ಇನ್ನೂ ಕೆಲವು ಸಾಮಾನ್ಯಗುಣಗಳು ಖನಿಜಗಳ ಭೌತಸ್ವರೂಪ ನಿರ್ಣಯಕ್ಕೆ ಸಂಬಂಧಪಟ್ಟಿರುತ್ತವೆ.

ಮೇಲೆ ತಿಳಿಸಿದಂತೆ ಭೂಮಿಯ ಮೇಲ್ಮೆಯ್ಯ ಪ್ರತಿಯೊಂದು ಕಲ್ಲು ಖನಿಜ ಮಯವಾಗಿದ್ದರೂ ಅನೇಕ ಕಲ್ಲುಗಳಲ್ಲಿ ಉಪಯೋಗಕ್ಕೆ ಬರುವ ಖನಿಜಗಳಿರುವುದಿಲ್ಲ. ಲೋಹಗಳು ಮತ್ತು ಇವುಗಳ ಅದಿರುಗಳು ಸಾಮಾನ್ಯವಾಗಿ ಬೆಣಚುಕಲ್ಲಿನೊಂದಿಗೂ ಮತ್ತು ಕೆಲವುಜಗೆಯ ಕಪ್ಪು ಹಸುರುಬಣ್ಣದ ಶಿಲೆಗಳಲ್ಲಿಯೂ ಸಿಕ್ಕುತ್ತವೆ. ಈ ಎರಡನೆಯ ವಿಧದ ಕಲ್ಲುಗಳಲ್ಲಿ ಕಬ್ಬಿಣ ಮತ್ತು ಮೆಗ್ನೀಶಿಯಾ ಧಾತುಗಳು ಅಧಿಕ ವಾಗಿರುವ ಕಾರಣ, ಇವುಗಳ ತೂಕವು ಇತರ ಕಲ್ಲುಗಳಿಗಿಂತ ಹೆಚ್ಚಾಗಿರುವುದು.

ಉಪಯುಕ್ತವಾದ ಕೆಲವು ಖನಿಜಗಳು ಕಣಶಿಲೆಗಳ ಸಂಗಡಲೂ, ಸುಣ್ಣಕಲ್ಲು ಬಂಡೆಗಳ ಸಂಗಡಲೂ ದೊರೆಯುತ್ತವೆ. ಕಲ್ಲಿದ್ದಲು ಶಿಲಾರೂಪದಿಂದ ಇತರ ಕಲ್ಲುಗಳ

ಸಂಗಡ ಸಿಕ್ಕುವುದು. ಪದರಶಿಲೆಗಳೊಂದಿಗೂ, ಜಲಶಿಲೆಗಳೊಂದಿಗೂ ಹಲವು ಖನಿಜಗಳು ಸೇರಿರುತ್ತವೆ. ಪೆಟ್ರೋಲಿಯಂ ಎಣ್ಣೆಯು "ಟರ್ಷಿಯರಿ" ಯುಗದ ಮರಳುಮಿಶ್ರವಾದ ಒಂದು ಜಾತಿಯ ಶಿಲಾಭಾಗದಲ್ಲಿ ದೊರೆಯುವುದು.

ಖನಿಜಗಳಲ್ಲಿ ಕೆಲವು ಜ್ವಾಲಾಮುಖಿಯಿಂದ ದ್ರವರೂಪವಾಗಿ ಮೇಲೆಬಂದು ಹರಿದು ಹೆಪ್ಪುಗಟ್ಟಿದ ಕಲ್ಲಿನ ಸಂಗಡಲೂ ಮತ್ತು ಕರಗಿದ ಶಿಲಾಪಾಕವು ಬರುವ ಮುಂಚೆ ಹೊರಡತಕ್ಕ ನಾನಾವಿಧವಾದ ಅನಿಲಗಳ ಸಂಯೋಜನೆಯಿಂದ ಕಣರೂಪ ವಾಗಿ ಒಂದುಗೂಡಿಯೂ ಅಗ್ನಿಪರ್ವತ ಪ್ರದೇಶಗಳಲ್ಲಿ ದೊರೆಯುತ್ತವೆ.

ಇವೇ ಅಲ್ಲದೆ ಇತರ ರೂಪಗಳಿಂದಲೂ ಉಪಯುಕ್ತವಾದ ಖನಿಜಗಳು, ದೇಶದ ನಿಧಿಯಂತಿದ್ದು ಕಾಲಾನುಗುಣವಾಗಿ ಉಪಯೋಗಕ್ಕೆ ಬರುತ್ತಿವೆ.

## ಖನಿಜಗಳ ಉತ್ಪತ್ತಿ

ಈ ವಿಷಯದಲ್ಲಿ ಭೂಶಾಸ್ತ್ರಜ್ಞರು ಅನೇಕ ಶೋಧನೆಗಳನ್ನು ನಡೆಸಿರುತ್ತಾರೆ. ಕಲ್ಲುಗಳು ಖನಿಜಮಯವಾಗಿರುವುದರಿಂದ, ಖನಿಜಗಳ ಉತ್ಪತ್ತಿಯನ್ನು ಇವುಗಳ ನ್ನೊಳಕೊಂಡ ಕಲ್ಲುಗಳೊಂದಿಗೆ ಗೊತ್ತುಮಾಡಬೇಕು. ಖನಿಜಗಳ ಉತ್ಪತ್ತಿ ವಿಷಯದಲ್ಲಿ ಸಾಮಾನ್ಯವಾಗಿ ತಿಳಿದುಬಂದಿರುವ ಕೆಲವು ಅಂಶಗಳನ್ನು ಇಲ್ಲಿ ಕೊಟ್ಟಿದೆ. ನಾಲ್ಕು ವಿಧದ ಕಲ್ಲುಗಳ ಸಂಗಡ ಖನಿಜಗಳು ದೊರೆಯುತ್ತವೆ.

೧. ಅಗ್ನಿಶಿಲೆಗಳು.

೨. ಜಲಶಿಲೆಗಳು.

೩. ರೂಪಾಂತರ ಶಿಲೆಗಳು.

೪. ಮೃಣ್ಮಯ ಮತ್ತು ಶೇಷಶಿಲೆಗಳು.

**ಅಗ್ನಿಶಿಲೆಗಳು**—ಜ್ವಾಲಾಮುಖಿಯಿಂದ ಹೊರಟುಬರುವ ಕಾದು ಕರಗಿದ ಕಲ್ಲುಗಳಿಂದಲೂ ಮತ್ತು ಇತರ ವಿಜ್ಞಾನಶಾಸ್ತ್ರ ಶೋಧನೆಗಳಿಂದಲೂ, ಭೂಮಿಯ ಹೊದಿಕೆಯ ಕೆಳಗೆ ನೂರಾರು ಮೈಲಿಗಳ ಆಳದಲ್ಲಿ ಕಲ್ಲುಗಳೆಲ್ಲವೂ ದ್ರವರೂಪ ದಿಂದಿರುವುವೆಂದು ಗೊತ್ತಾಗಿದೆ. ಆಗಾಗ್ಗೆ ಪ್ರಾಪ್ತವಾಗುವ ಭೂಭಾಗಗಳ ಏರು ಮುಳುಗುಗಳೇ ಮೊದಲಾದ ಕಾರಣಗಳಿಂದ ಈ ಕರಗಿದ ಶಿಲಾಪಾಕವು ಒತ್ತಲ್ಪಟ್ಟು ಮೇಲಕ್ಕೆ ನುಗ್ಗಿಬರುತ್ತದೆ. ಬಿಸಿಯಾದ ಶಿಲಾಪಾಕವು ಆರಿ ರೂಪಗೊಂಡಿರುವ ಕಲ್ಲುಗಳಿಗೆ ಅಗ್ನಿಶಿಲೆಗಳೆಂದು ಹೆಸರು. (ಚಿತ್ರ ೧. ಇದರಲ್ಲಿ ಕಾಣುವ ಬೆಟ್ಟವು ಕಣಶಿಲೆಯಿಂದ ಕೂಡಿದೆ. ಬೆಟ್ಟದ ಇಳಿವಿನಲ್ಲಿರುವ ಕಲ್ಲುಗುಂಡುಗಳನ್ನು ಕಾಣ ಬಹುದು.)

ಪಾತಾಳದಿಂದ ಮೇಲೆ ಬಂದು ರೂಪುಗೊಳ್ಳತಕ್ಕ ಶಿಲಾಪಾಕವು ಮೂರು ವಿಧವಾದ ಕಲ್ಲುಗಳ ರಚನೆಗೆ ಕಾರಣವಾಗಿದೆ.

(i) ಕರಗಿದ ಶಿಲಾದ್ರವವು ಮೇಲ್ಭಾಗದ ಹೊದಿಕೆಯನ್ನು ಭೇದಿಸಿಕೊಂಡು, ಕೊಳವಿಗಳ ಮೂಲಕ ಭೂಮಿಯ ಮೇಲೆ ಬಂದು, ಹರಿದು, ಆರಿ, ಹೆಪ್ಪುಗಟ್ಟಿ ಬಂಡೆಗಳಾಗುತ್ತದೆ. ಈ ಕಲ್ಲುಗಳನ್ನು ಜ್ವಾಲಾಶಿಲೆಗಳೆಂದು ಕರೆಯಬಹುದು.

ರತ್ನಗಳಲ್ಲಿ ಅತ್ಯಂತ ಬೆಲೆಬಾಳುವ ವಜ್ರವು "ಬ್ಲೂಗ್ರೌಂಡ್" ಎಂಬ ಹಸಿರು ಬೂದುಬಣ್ಣದ ಜ್ವಾಲಾಶಿಲೆಯೊಂದಿಗೆ ದಕ್ಷಿಣ ಆಫ್ರಿಕಖಂಡದಲ್ಲಿ ಸಿಕ್ಕುತ್ತದೆ. ಗಂಧಕ, ಬೋರಿಕ್ ಪುಡಿ, ಜ಼ಿಯೋಲೈಟ್ಸ್ ಎಂಬ ಖನಿಜಗಳು ಜ್ವಾಲಾಶಿಲೆಯೊಂದಿಗಿರುತ್ತವೆ.

(ii) ಕರಗಿದ ಕಲ್ಲು ಭೂಮಿಯ ಮೇಲ್ಭಾಗದವರೆಗೂ ಬಂದು, ಹೊರಗೆ ಬರದೆ, ಸ್ವಲ್ಪ ಆಳದಲ್ಲಿಯೇ ರೂಪುಗೊಳ್ಳುತ್ತದೆ. ಈ ವಿಧದಿಂದ ಜನಿಸಿದ ಕಲ್ಲುಗಳನ್ನು ಗೋಡೆಕಲ್ಲುಗಳೆಂದು ಕರೆಯಬಹುದು. ಬಂಡೆಕಲ್ಲು ಪ್ರದೇಶಗಳಲ್ಲಿ ಸಾಮಾನ್ಯವಾಗಿ ಕಾಣುವ ಕರಿಗುಂಡುಗಳು ಈ ರೀತಿ ರೂಪಗೊಂಡವಾಗಿರುತ್ತವೆ.

(iii) ಆಳದಲ್ಲಿ ಕರಗಿದ ಕಲ್ಲು ಸ್ವಲ್ಪದೂರ ಮಾತ್ರವೆ ಬಂದು, ಆರಿ, ಅನೇಕ ತರದ ಶಿಲೆಗಳ ರಚನೆಗೆ ಕಾರಣವಾಗಿದೆ. ಒಂದೇ ಶಿಲಾಪಾಕದಿಂದ ಅನೇಕ ವಿಧವಾದ ಕಲ್ಲುಗಳು ಬೇರ್ಪಟ್ಟು ರೂಪಗೊಂಡಿರುತ್ತವೆ. ಹೀಗೆ ಜನಿಸಿದ ಕಲ್ಲುಗಳನ್ನು ಗರ್ಭಾಂತಶಿಲೆಗಳೆಂದು ಕರೆಯಬಹುದು. ಉದಾ: ಕಣಶಿಲೆಗಳು (ಚಿತ್ರ ೧.)

ಮೇಲಿನ ಮೂರು ವಿಧದ ಕಲ್ಲುಗಳು ಅವುಗಳು ರೂಪಗೊಂಡ ಸ್ಥಳವನ್ನು ಸೂಚಿಸುತ್ತವೆ. ಆದರೆ ನಾನಾತರದ ಕಲ್ಲುಗಳ ವ್ಯತ್ಯಾಸಗಳು ಖನಿಜಗಳಿಂದಲೆ ಗೊತ್ತಾಗಬೇಕು. ಕಾದು ಕರಗಿರುವ ಶಿಲಾಪಾಕದಲ್ಲಿ ಅನೇಕ ಧಾತುಗಳು ಒಂದೇ ಹದದಲ್ಲಿ ಬೆರೆತಿರುತ್ತವೆ. ಶಿಲಾಪಾಕವು ಆರಿದ ಹಾಗೆಲ್ಲಾ ಇದರಲ್ಲಿನ ಧಾತುಗಳು ಸ್ವರೂಪಾನುಗುಣವಾಗಿ ಬೇರೆ ಬೇರೆ ಪ್ರಮಾಣಗಳಿಂದ ಒಟ್ಟುಗೂಡಿ ಅನೇಕ ಖನಿಜಗಳಾಗಿ ರೂಪುಗೊಳ್ಳುತ್ತವೆ. ಈ ಬೇರೆಯಾಗುವಿಕೆಯಲ್ಲಿ ಒಂದು ಗೊತ್ತಾದ ನಿಯಮವಿದೆ.

ಖನಿಜಗಳ ರಚನೆಗೆ ಸಂಬಂಧಪಟ್ಟ ಧಾತುಗಳಲ್ಲಿ ಅಲ್ಯೂಮಿನಿಯಂ, ಪೊಟ್ಯಾಸಿಯಂ, ಸಿಲಿಕ ಮುಂತಾದುವು ಆಮ್ಲಾಯಕಾರಕಗಳೆಂದೂ ಕಬ್ಬಿಣ, ಮೆಗ್ನೀಶಿಯಾ, ಸೋಡಿಯಂ ಮುಂತಾದುವು ಪ್ರತ್ಯಾಮ್ಲಕಾರಕಗಳೆಂದೂ ಗೊತ್ತಾಗಿದೆ. ಕರಗಿದ ಕಲ್ಲು ಆರುವಾಗ ಮೊದಲು ಪ್ರತ್ಯಾಮ್ಲಭಾಗಗಳನ್ನು ಅಧಿಕವಾಗಿ ಹೊಂದಿದ ಖನಿಜಗಳು ಬೇರೆಯಾಗುತ್ತವೆ. ಅನಂತರ ಅಮ್ಲಪ್ರತ್ಯಾಮ್ಲ ಭಾಗಗಳನ್ನು ಬೇರೆ ಬೇರೆ ಪ್ರಮಾಣಗಳಿಂದ ಹೊಂದಿದ ಖನಿಜಗಳೂ, ಕೊನೆಯಲ್ಲಿ ಪ್ರತ್ಯಾಮ್ಲಭಾಗವನ್ನು



ಚಿತ್ರ ೧. ಕಣಶಿಲೆಯಿಂದ ಕೂಡಿದ ಬೆಟ್ಟ



ಚಿತ್ರ ೨. ಷಹಬಾದಿನ ಹತ್ತಿರವಿರುವ ಪದರಕಲ್ಲಿನ ಗಣಿ



ಚಿತ್ರ ೩. ಬಾಬಾಬುಡರ್ನ್ ಬೆಟ್ಟದ ಒಂದು ಭಾಗ, ಅದರಲ್ಲಿ ಕಬ್ಬಿಣ ಮತ್ತು ಬೆಣಚು ಪದರಶಿಲೆಗಳ ಸಾಲುಗಳು



ಚಿತ್ರ ೪. ಜಂಬಿಟ್ಟಿಗೆ ಗುಡ್ಡ

ಹೊಂದದೆಯೆ ಇರತಕ್ಕ ಆಮ್ಲೀಯ ಖನಿಜಗಳೂ ಪ್ರತ್ಯೇಕವಾಗುತ್ತವೆ. ಆರತಕ್ಕ ಶಿಲಾಪಾಕಕ್ಕೆ ಹೆಚ್ಚಿನ ಕಾಲವ್ಯವಧಾನವಿದ್ದರೆ, ರೂಪಗೊಳ್ಳತಕ್ಕ ಖನಿಜಗಳು ಪೂರ್ಣ ಆಕಾರದ ಹರಳುಗಳಾಗಿ ಕ್ರಮದಿಂದ ಬೇರೆಯಾಗುತ್ತವೆ. ಗರ್ಭಾಂತಶಿಲೆಗಳಲ್ಲಿ ಈ ಪರಿಪೂರ್ಣತೆಯನ್ನು ನೋಡಬಹುದು. ಜ್ವಾಲಾಶಿಲೆಗಳಲ್ಲಿಯೂ ಗೋಡೆ ಕಲ್ಲುಗಳಲ್ಲಿಯೂ ಇರತಕ್ಕ ಖನಿಜಗಳು ಸಾಧಾರಣವಾಗಿ ಸಣ್ಣವಾಗಿಯೂ, ಅನೇಕ ವೇಳೆ ಪೂರ್ಣ ಆಕಾರಗಳನ್ನು ಹೊಂದದೆಯೂ ಇರುತ್ತವೆ. ಶಿಲಾಪಾಕಕ್ಕೆ ಆರಲು ಇದ್ದ ಕಡಮೆ ಕಾಲವ್ಯವಧಾನವೇ ಈ ಭೇದಕ್ಕೆ ಕಾರಣವಾಗಿರುತ್ತದೆ. ಖನಿಜಗಳ ಆಧಾರದ ಮೇಲೆ ಅಗ್ನಿಶಿಲೆಗಳನ್ನು ಐದು ಪಂಗಡಗಳನ್ನಾಗಿ ವಿಂಗಡಿಸಬಹುದು.

(i) ಅತಿಪ್ರತ್ಯಾಮ್ಲ ಶಿಲೆಗಳು.
(ii) ಪ್ರತ್ಯಾಮ್ಲ ಶಿಲೆಗಳು.
(iii) ಆಮ್ಲಪ್ರತ್ಯಾಮ್ಲ ಶಿಲೆಗಳು.
(iv) ಆಮ್ಲ ಶಿಲೆಗಳು.
(v) ಅತ್ಯಾಮ್ಲ ಶಿಲೆಗಳು.

ಉಪಯುಕ್ತವಾದ ಖನಿಜಗಳು ದೊರೆಯುವ ದೃಷ್ಟಿಯಿಂದ (i), (iv) ಮತ್ತು (v)ನೆಯ ಪಂಗಡಗಳ ಶಿಲೆಗಳು ಮುಖ್ಯವಾಗಿದೆ. ಅತಿಪ್ರತ್ಯಾಮ್ಲ ಶಿಲೆಗಳಲ್ಲಿ ಸಿಲಿಕೇಟ್ ಖನಿಜಗಳು ಬೇರೆಯಾಗುವ ಮೊದಲೇ ಪ್ಲಾಟಿನಂ, ಕ್ರೋಮೈಟ್ ಮತ್ತು ಸೂಜಿಗಲ್ಲು ಅದಿರುಗಳು ಪ್ರತ್ಯೇಕವಾಗುತ್ತವೆ. ಅನಂತರ ಕಬ್ಬಿಣ ಮೆಗ್ನೀಶಿಯಂ ಧಾತುಗಳು ಸಿಲಿಕದೊಂದಿಗೆ ಕಲೆತು ಕಪ್ಪು, ಹಸಿರು ಬಣ್ಣಗಳಿಂದ ಕೂಡಿದ ಹಲವು ಖನಿಜಗಳಾಗುತ್ತವೆ. ಇವುಗಳಲ್ಲಿನ ಕೆಲವದರ ರೂಪವ್ಯತ್ಯಾಸದಿಂದ ಕಲ್ನಾರು, ಹಾಲುಗಲ್ಲು, ಬಳಪದಕಲ್ಲು ಮುಂತಾದ ಖನಿಜಗಳು ಜನಿಸಿವೆ. ಕೆಲವು ಪ್ರತ್ಯಾಮ್ಲ ಶಿಲೆಗಳಲ್ಲಿ ತಾಮ್ರದ ಅದಿರೂ ಬರೆಯುವ ಸೀಸವೂ ಸಿಕ್ಕುತ್ತವೆ. (iv)ನೆಯ ವರ್ಗದ ಬೆಣಚು ಸಿರಗಳಲ್ಲಿಯೂ, (v)ನೆಯ ವರ್ಗದ ಕಲ್ಲುಗಳ ಸಂಗಡಲೂ, ಲೋಹಗಳು ಮತ್ತು ಇವುಗಳ ಅದಿರುಗಳು ಸಾಮಾನ್ಯವಾಗಿ ಸಿಕ್ಕುತ್ತವೆ. ಸೀಸ, ತಾಮ್ರ, ತವರ, ಸುರುಮ, ಚಿನ್ನ, ಬೆಳ್ಳಿ ಮುಂತಾದುವುಗಳೆಲ್ಲವೂ ಬೆಣಚುಕಲ್ಲಿನೊಂದಿಗೆ ಪ್ರಪಂಚದ ಅನೇಕ ದೇಶಗಳಲ್ಲಿ ದೊರೆಯುತ್ತವೆ. ಅಭ್ರಕ, ಬೆರಿಲ್, ಮೊನಸೈಟ್, ಸಾಮಸ್‌ಕೈಟ್ ಮುಂತಾದ ಖನಿಜಗಳೂ ಬೆಣಚುಕಲ್ಲಿನೊಂದಿಗಿರುತ್ತವೆ. ಈ ಖನಿಜಗಳಲ್ಲಿ ಅನೇಕ ವಿರಳ ಮೂಲ ಧಾತುಗಳಿರುವುದುಂಟು.

ಭೂಮಿಯೊಳಗಿನಿಂದ ಮೇಲೆ ಬರುವ ಕಾದ ನೀರಿನಲ್ಲಿ ಹಲವು ಧಾತುಗಳಿರುತ್ತವೆ. ಈ ಧಾತುಗಳು ಸುತ್ತಲಿನ ಕಲ್ಲಿನಲ್ಲಿರುವ ಧಾತುಗಳೊಂದಿಗೆ, ಕೆಲವುಕಡೆ ಮಿಳಿತವಾಗಿ

ಹೊಸ ಖನಿಜಗಳ ರಚನೆಗೆ ಕಾರಣವಾಗಿವೆ. ಈ ಖನಿಜಗಳಲ್ಲಿ ಸಾಮಾನ್ಯವಾಗಿ ವಿರಳ ಅನಿಲಾಂಶಗಳಿರುತ್ತವೆ.

ಲೋಹಗಳು, ಇವುಗಳ ಅದಿರು ಮತ್ತು ಇತರ ಉಪಯುಕ್ತವಾದ ಶಿಲಾ ಖನಿಜಗಳು ಅಗ್ನಿ ಶಿಲೆಗಳಲ್ಲಿಯೇ ಹೆಚ್ಚಾಗಿ ಸಿಕ್ಕುತ್ತವೆ.

**ಜಲಶಿಲೆಗಳು**—ಮಳೆಗಾಲದಲ್ಲಿ ಗುಡ್ಡ ಬೆಟ್ಟಗಳಿಂದ ಹರಿದು ಬರುವ ಝರಿಗಳು ಮತ್ತು ಹಳ್ಳಗಳು ನೀರಿನೊಂದಿಗೆ ಕಲ್ಲು, ಮರಳು, ಮಣ್ಣುಗಳನ್ನು ಹೊಡೆದುಕೊಂಡು ಬಂದು ತಗ್ಗಿನ ಪ್ರದೇಶಗಳಲ್ಲಿ ಹರಡುವುದು ಸಾಮಾನ್ಯವಾಗಿ ತಿಳಿದ ವಿಷಯ. ಇಂತಹ ಅನೇಕ ಹಳ್ಳಗಳು ಸೇರಿ ನದಿಗಳಾಗುತ್ತವೆ. ನೀರಿನೊಂದಿಗೆ ಬಂದ ಕಲ್ಲು ಮಣ್ಣುಗಳು ನದಿಗಳ ಮೂಲಕ ಸಾಗಿ ಸಾಗರ ಸರೋವರಗಳ ತಳದಲ್ಲಿ ಶೇಖರ ವಾಗುತ್ತವೆ. ಹೀಗೆ ನದಿಗಳು ಪ್ರತಿವರ್ಷ ಲಕ್ಷಾಂತರ ಟನ್ನುಗಳ ತೂಕದ ಮಣ್ಣು ಮರಳುಗಳನ್ನು ತಂದು ಸಮುದ್ರದ ತಳದಲ್ಲಿ ಹಾಕುತ್ತವೆ. ಸಾವಿರಾರು ವರ್ಷಗಳು ಈ ಕಾರ್ಯವು ನಡೆಯುತ್ತಾ ಬಂದು ಭೂಭಾಗಗಳ ಮೇಲಿನ ಕಲ್ಲುಗಳು ಶಿಥಿಲ ಹೊಂದಿ, ಪುಡಿಯಾಗಿ ನೀರಿನ ಜೊತೆಯಲ್ಲಿ ಹರಿದು ದೊಡ್ಡ ಜಲಾಶಯಗಳ ತಳದಲ್ಲಿ ಶೇಖರವಾದಾಗ, ಅಲ್ಲಿ ಹೊಸ ಮಾದರಿಯ ಶಿಲಾಭಾಗಗಳಾಗುವುವು. ನೀರಿನ ತಳದಲ್ಲಿ ಒಂದುಗೂಡಿ ರೂಪಗೊಂಡ ಶಿಲಾಸಮುದಾಯಗಳಿಗೆ ಜಲಶಿಲೆಗಳೆಂದು ಹೆಸರು.

(ಚಿತ್ರ ೨. ಅಗಲವಾಗಿ ಹಾಸುಬಂಡೆಗಳಂತಿರುವ ಪದರ ಕಲ್ಲುಗಳನ್ನು ನೋಡ ಬಹುದು. ಷಹಬಾದಿನ ಹತ್ತಿರವಿರುವ ಪದರ ಕಲ್ಲಿನ ಗಣಿ).

ಸಾಗರ ಸರೋವರಗಳ ಬುಡದಲ್ಲಿ ರೂಪಗೊಂಡ ಈ ಕಲ್ಲುಗಳು ಭೂಮಿಯೊಳಗಿನ ಶಿಲಾಪಾಕದ ಚಲನೆಯಿಂದಲೂ ಮತ್ತು ಇತರ ಭೂಭಾಗಗಳ ಏರುಮುಳುಗುಗಳಿಂದಲೂ ಕಾಲಾಂತರದಲ್ಲಿ ನೀರಿನ ಮೇಲೆದ್ದು ನಿಲ್ಲುತ್ತವೆ. ಭೂಮಿಯ ಅನೇಕ ಭಾಗಗಳಲ್ಲಿ ಜಲಶಿಲೆಗಳು ಸಮುದ್ರ ಮಟ್ಟದಿಂದ ಸಾವಿರಾರು ಅಡಿಗಳ ಎತ್ತರದಲ್ಲಿರುವುದನ್ನು ನೋಡಬಹುದು. ಉದಾ. ಹಿಮಾಲಯ, ಆಲ್ಪ್ಸ್ ಪರ್ವತಗಳು.

ಗಾಳಿಮಳೆಗಳ ಪ್ರಭಾವದಿಂದ ಕಲ್ಲುಗಳು ಶಿಥಿಲವಾದಾಗ ಅವುಗಳಲ್ಲಿರುವ ಖನಿಜಗಳು, ಮರಳು ಮಣ್ಣುರೂಪಗಳಿಂದ ಬೇರೆಯಾಗುತ್ತವೆ. ಮಳೆಗಾಲದಲ್ಲಿ ನೀರಿನೊಂದಿಗೆ ಕೊಚ್ಚಿ ತಗ್ಗಿನ ಪ್ರದೇಶಗಳಲ್ಲಿ ಶೇಖರವಾಗುತ್ತವೆ. ಪೂರ್ವದ ಕಲ್ಲುಗಳಲ್ಲಿ ಉಪಯುಕ್ತವಾದ ಲೋಹಗಳು ಮತ್ತು ಇತರ ಖನಿಜಗಳಿದ್ದಲ್ಲಿ ಇವು ಗಳನ್ನು ಆಯಾ ಪ್ರದೇಶಗಳ ಜಲಶಿಲೆಗಳಲ್ಲಿ ಕಾಣಬಹುದು. ಅನೇಕ ಖನಿಜಗಳು, ನೀರಿನ ಮತ್ತು ಇದರೊಳಗೆ ಕರಗಿರತಕ್ಕ ಧಾತುಗಳ ಪ್ರಭಾವದಿಂದ, ರೂಪಭೇದ ಹೊಂದಿರುತ್ತವೆ.

ನದಿಗಳಲ್ಲಿ ಕೊಚ್ಚಿಬರುವ ಮೆಕ್ಕಲು ಮಣ್ಣು ಮರಳುಗಳು ಸರೋವರ, ಸಮುದ್ರ ಜಲಾಶಯಗಳಲ್ಲಿ ಮಿಳಿತವಾಗುವಾಗ ಅವುಗಳು ತಮ್ಮ ಪರಿಮಾಣ ಮತ್ತು ತೂಕಕ್ಕನುಗುಣವಾಗಿ ವಿಂಗಡಿಸಲ್ಪಟ್ಟು ಶೇಖರವಾಗುತ್ತವೆ. ಹೇಗೆಂದರೆ—ದಪ್ಪ ಕಲ್ಲುಗಳು ದಡದ ಸಮೀಪದಲ್ಲಿಯೂ ಮರಳು ಸ್ವಲ್ಪ ಆಳ ಪ್ರದೇಶದಲ್ಲಿಯೂ ಮತ್ತು ಮಣ್ಣು ರೂಪದಿಂದಿರುವ ಧೂಳಿನ ಕಣಗಳು ಬಹಳ ಆಳದಲ್ಲಿಯೂ ಬೇರೆ ಬೇರೆಯಾಗಿ, ಹಾಸುಬಂಡೆಗಳಂತೆ ಸಮಮಟ್ಟಕ್ಕೆ ಸ್ವಲ್ಪ ಓರೆಯಾಗಿ ರೂಪಗೊಳ್ಳುತ್ತವೆ. ಹೀಗೆ ಜನಿಸಿರತಕ್ಕ ಕಲ್ಲುಗಳು ನಾಲ್ಕು ತೆರನಾಗಿವೆ.

(i) ಕಡಬುಗಲ್ಲು.
(ii) ಮರಳುಗಲ್ಲು.
(iii) ಮಣ್ಣುಕಲ್ಲು.
(iv) ಸುಣ್ಣಕಲ್ಲು.

ಜಲಶಿಲೆಗಳಲ್ಲಿ ಉಪಯುಕ್ತವಾದ ಅನೇಕ ಖನಿಜಗಳು ಸಿಕ್ಕುತ್ತವೆ. ಕಲ್ಲಿದ್ದಲು, ಕಬ್ಬಿಣದ ಅದಿರು, ಪೆಟ್ರೋಲಿಯಂ, ಸುಣ್ಣಕಲ್ಲು, ಜೇಡಿಮಣ್ಣು ಮುಖ್ಯವಾದುವು. ಪ್ರಾಚೀನ ಯುಗಗಳಲ್ಲಿ ಮರಗಳಿಂದ ಕೂಡಿದ ದಟ್ಟವಾದ ಕಾಡುಪ್ರದೇಶಗಳು ಕುಸಿದು, ಅವುಗಳ ಮೇಲೆ ಮರಳು ಮಣ್ಣುಗಳು ತುಂಬಿದಾಗ, ಆಳದಲ್ಲಿನ ಭೂಶಾಖ ಮತ್ತು ಮೇಲಿನ ಒತ್ತಡಗಳಿಂದ, ಮರದ ಭಾಗಗಳೆಲ್ಲವೂ ಮಾರ್ಪಟ್ಟು, ಕಲ್ಲಿದ್ದಲಾದುವು. ಇದೇ ರೀತಿಯಲ್ಲಿ ಮರದೆಲೆಗಳು, ರೆಂಬೆಗಳು, ಸಣ್ಣಗಿಡಗಳು ಭೂಗರ್ಭದ ಬಿಸಿಯಾದ ನೀರು ಮತ್ತು ಇತರ ಧಾತುಗಳೊಂದಿಗೆ ಕೊಳೆತು ಪೆಟ್ರೋಲಿಯಂ ಎಣ್ಣೆಯಾಗಿ ಭೂಮಿಯ ಕೆಲವು ಪ್ರದೇಶಗಳಲ್ಲಿ ದೊರೆಯುತ್ತಿದೆ. ಜಲಶಿಲೆಗಳು ಹಾಸುಬಂಡೆಗಳಂತಿರುವುದರಿಂದ ಇವುಗಳನ್ನು ಪದರ ಕಲ್ಲುಗಳನ್ನಾಗಿ ಸೀಳಬಹುದು. ನೆಲಕ್ಕೆ ಹಾಸುವ ಕಡಪಾಕಲ್ಲು, ಷಹಬಾದುಕಲ್ಲು (ಚಿತ್ರ. ೨.) ಅಮೃತಶಿಲೆ ಮುಂತಾದುವು ಕಟ್ಟಡಗಳಿಗೆ ಬಹಳ ಉಪಯುಕ್ತವಾಗಿವೆ. ಕ್ಷಾರಸಂಬಂಧವಾದ ಖನಿಜಗಳು ಕೆಲವು ಕಡೆ ಸಿಕ್ಕುತ್ತವೆ. ಹಾಗೆಯೆ ಲೋಹದ ಅದಿರುಗಳೂ ಜಲಶಿಲೆಗಳೊಂದಿಗೆ ಇರುತ್ತವೆ. ಸಿಮೆಂಟು ತಯಾರಿಕೆಗೆ, ಈ ಶಿಲಾಸಮುದಾಯದಲ್ಲಿನ ಸುಣ್ಣಕಲ್ಲು ಮತ್ತು ಮಣ್ಣುಕಲ್ಲುಗಳು ಬಹಳ ಉಪಯೋಗವಾಗಿವೆ.

**ರೂಪಾಂತರ ಶಿಲೆಗಳು**—ಅಗ್ನಿ ಮತ್ತು ಜಲಶಿಲೆಗಳು ಭೂಮಿಯೊಳಗಿನ ಕಾವು ಮತ್ತು ಒತ್ತಡಗಳಿಗೆ ಸಿಕ್ಕಿ ರೂಪಭೇದ ಹೊಂದುತ್ತವೆ. ಸಾಮಾನ್ಯವಾಗಿ ಶಿಲಾಪಾಕಗಳು ಪಾತಾಳದಿಂದ ಮೇಲಕ್ಕೆ ಉಕ್ಕಿಬಂದು ಅವುಗಳ ಕಾವು ಮೇಲಿನ ಮತ್ತು ಸುತ್ತಲಿನ ಪೂರ್ವಶಿಲೆಗಳಲ್ಲಿ ಪ್ರಸರಿಸಿದಾಗ ಅನೇಕ ಖನಿಜಗಳು ಮಾರ್ಪಾಟು

ಹೊಂದುತ್ತವೆ. ಒತ್ತಡವು ಭೂಭಾಗಗಳ ಏರು ಮುಳುಗುಗಳಿಂದಲೂ ಮತ್ತು ಮೇಲೆ ಪ್ರಸರಿಸಿದ ಅಗ್ನಿ ಶಿಲೆಗಳ ತೂಕದಿಂದಲೂ ಜನಿಸಿ, ಕಲ್ಲುಗಳನ್ನು ಜಿಲ್ಲಿನಂತೆ ಬಗ್ಗಿಸಿ, ಕೆಲವು ಕಡೆ ಕಲ್ಲಿನ ಪದರಗಳನ್ನು ಅನೇಕ ತಿರುವು ಮುರುವುಗಳನ್ನಾಗಿ ಮಾಡುತ್ತದೆ. ಈ ಒತ್ತಡಕ್ಕೆ ತಡೆಯದ ಕಲ್ಲುಗಳು ಅನೇಕ ಕಡೆ ಮುರಿದು, ತುಂಡಾದ ಶಿಲಾ ಬಾಹುಗಳು ಬೇರೆ ಶಿಲಾಸಮುದಾಯಗಳ ಸಂಗಡ ಬೆರೆತಿರುವುದನ್ನು ಕಾಣಬಹುದು. ಶಾಖ ಮತ್ತು ಒತ್ತಡಗಳೆರಡೂ ಒಂದುಗೂಡಿ ಪೂರ್ವಶಿಲೆಗಳ ಮೇಲೆ ಪ್ರಸರಿಸಿದಾಗ ಅವು ಸಂಪೂರ್ಣವಾಗಿ ರೂಪಭೇದ ಹೊಂದಿ ಬೇರೆ ಖನಿಜಗಳು ಜನಿಸಿ, ಹೊಸ ಮಾದರಿಯ ಕಲ್ಲುಗಳಾಗುತ್ತವೆ. ಹೀಗೆ ರೂಪಗೊಂಡ ಕಲ್ಲುಗಳಿಗೆ ರೂಪಾಂತರ ಶಿಲೆಗಳೆಂದು ಹೆಸರು. (ಚಿತ್ರ ೩. ಈ ಚಿತ್ರದಲ್ಲಿ ಕಬ್ಬಿಣ ಮತ್ತು ಬೆಣಚು ಪದರಶಿಲೆಗಳ ಸಾಲುಗಳನ್ನು ಬೆಟ್ಟದ ಮೇಲೂ ಮತ್ತು ತಗ್ಗು ಪ್ರದೇಶಗಳಲ್ಲಿಯೂ ಕಾಣಬಹುದು. ಬಾಬಾಬುಡನ್ ಬೆಟ್ಟ).

ರೂಪಾಂತರಶಿಲೆಗಳಲ್ಲಿ ಎರಡು ಪಂಗಡಗಳಿವೆ. ಪದರಕಲ್ಲು ಅಥವಾ ಪತ್ರಶಿಲೆ ಮತ್ತು ಶೀಣೀಕಲ್ಲು. ಇವುಗಳಲ್ಲಿ ಅನೇಕ ಮುಖ್ಯವಾದ ಖನಿಜಗಳಿರುತ್ತವೆ. ಕುರಂದದ ಕಲ್ಲು, ಕೆಂಪುಹರಳು, ಕಯನೈಟ್, ಸಿಲಿಮನೈಟ್ ಎಂಬ ಅಲ್ಯೂಮಿನಿಯಂ ಸಿಲಿಕದ ಸಂಯುಕ್ತಗಳು ಮುಖ್ಯವಾದುವು. ಕೆಲವುಕಡೆ ಪೂರ್ವಶಿಲೆಯ ಕಬ್ಬಿಣ ಮತ್ತು ಬೆಣಚುಭಾಗಗಳು ಒತ್ತಡಕ್ಕೆ ಸಿಕ್ಕಿ ಪದರಶಿಲೆಗಳಾಗಿವೆ. ಈ ಕಲ್ಲುಗಳಲ್ಲಿ ಕಬ್ಬಿಣದ ಅದಿರುಗಳು ಹೇರಳವಾಗಿ ಅನೇಕ ದೇಶಗಳಲ್ಲಿ ದೊರೆಯುತ್ತವೆ. ಇದರಂತೆ ಸುಣ್ಣಕಲ್ಲು ಮತ್ತು ಇತರ ಕೆಲವು ಪತ್ರಶಿಲೆಗಳ ಸಂಗಡ ಮ್ಯಾಂಗನೀಸ್ ಲೋಹದ ಅದಿರುಗಳು ಸಿಕ್ಕುತ್ತವೆ.

**ಮೃಣ್ಮಯ ಮತ್ತು ಶೇಷಶಿಲೆಗಳು**—ಭೂಮಿಯೊಳಗಿನ ಕಾದ ನೀರು ಮತ್ತು ಕಲ್ಲುಗಳ ಸಂದಿನಲ್ಲಿ ಒಳಗಿಳಿಯತಕ್ಕ ಮೇಲಿನ ಜಲದಿಂದ ಕಲ್ಲುಗಳು ಶಿಥಿಲವಾಗಿ ಮಣ್ಣುರೂಪದಿಂದಿರುವ ಅನೇಕ ಖನಿಜಗಳು ರೂಪಗೊಂಡಿರುತ್ತವೆ. ಮೃಣ್ಮಯಶಿಲೆಗಳಲ್ಲಿ ಜಂಬಿಟ್ಟಿಗೆ (ಚಿತ್ರ ೪. ಸಂದಗುಡಿ ಸಮೀಪದಲ್ಲಿರುವ ಜಂಬಿಟ್ಟಿಗೆ ಗುಡ್ಡ. ಈ ಕಲ್ಲಿನ ಜೇನುಗೂಡಿನಂತಿರುವ ಆಕಾರವನ್ನು ಈ ಚಿತ್ರದಲ್ಲಿ ನೋಡಬಹುದು). ಸುದ್ದೆ ಮಣ್ಣು, ಬಿಳೀಜೇಡಿ, ಕೆರೆಜೇಡಿ ಮುಖ್ಯವಾದುವು. ಉಪಯುಕ್ತವಾದ ಖನಿಜಗಳಲ್ಲಿ ಚೌಳುಪ್ಪು, ಬಿಳಿಜೇಡಿ (ಚಿತ್ರ ೫. ಜಂಬಿಟ್ಟಿಗೆ ಬುಡದಲ್ಲಿರುವ ಬಿಳಿ ಜೇಡಿಮಣ್ಣಿನ ರಾಶಿಗಳು ಇಲ್ಲಿ ಕಾಣುತ್ತವೆ). ಸುಣ್ಣಕರಲು, ಬಾಕ್ಸೈಟ್ ಎಂಬ ಅಲ್ಯೂಮಿನಿಯಂ ಲೋಹದ ಅದಿರು, ಕೆಂಪು, ಗೋಪಿ ಮುಂತಾದ ಕಾವಿ ಕಲ್ಲುಗಳು ಮುಖ್ಯವಾದುವು. ಜ್ವಾಲಾ ಮುಖಿ ಪ್ರದೇಶಗಳಲ್ಲಿರುವ ಗಂಧಕ, ಬೋರಿಕ್ ಪುಡಿ ರಾಶಿಗಳನ್ನೂ, ವಾಯು



ಚಿತ್ರ ೫. ಜಂಬಿಟ್ಟಿಗೆ ಬುಡದಲ್ಲಿರುವ ಜೇಡಿಮಣ್ಣಿನ ರಾಶಿಗಳು



ಚಿತ್ರ ೬. ಕುದುರೆಕೊಂಡದ ಸಮೀಪದಲ್ಲಿ ಚಿನ್ನವನ್ನು ಜಾಲಿಸಿ
ತೆಗೆಯುತ್ತಿರುವ ವಿಧಾನ—ದೊಡ್ಡ ಮರಳುಕಲ್ಲುಗಳನ್ನು ಜಾಲಿಸುವುದು



ಚಿತ್ರ ೭. ಆಳವಾಗಿರುವ ತಟ್ಟೆಗಳಲ್ಲಿ ಚೂರು ಬಂಗಾರವನ್ನು ತೆಗೆಯುವುದು



ಚಿತ್ರ ೮. ಬೈರಾಪುರದ ಕ್ರೋಮೈಟ್ ಗಣಿಯ ಒಂದು ಭಾಗ

ಶೇಖರಗಳಾದ ಮಣ್ಣುರಾಶಿಗಳನ್ನೂ ಈ ಪಂಗಡಕ್ಕೆ ಸೇರಿಸಬಹುದು. ಯಾವ ರೀತಿಯಿಂದಲಾದರೂ ಈ ತರದ ಖನಿಜಗಳು ರೂಪಗೊಳ್ಳಲು ಲಕ್ಷಾಂತರ ವರ್ಷಗಳ ಕಾಲ ಬೇಕು.

ಹೀಗೆ ಅನೇಕ ವಿಧಗಳಲ್ಲಿ ಉಪಯುಕ್ತವಾದ ಖನಿಜ ನಿಕ್ಷೇಪಗಳು ಜನಿಸಿ, ಭೂಮಿಯ ಮೇಲ್ಮೈಯ್ಯ ಶಿಲಾಸಂಯೋಜನೆಯಲ್ಲಿದ್ದು ಕೆಲವುಕಡೆ ಹೆಚ್ಚಾಗಿಯೂ ಕೆಲವುಕಡೆ ಸಾಮಾನ್ಯವಾಗಿಯೂ ದೊರೆತು, ಕಾಲಕ್ರಮದಲ್ಲಿ ಮನುಷ್ಯನ ಉಪ ಯೋಗಕ್ಕೆ ಒದಗುತ್ತಿವೆ.

## ೨. ಖನಿಜನಿಕ್ಷೇಪಗಳ ಶೋಧನೆ

ಭೂಶಾಸ್ತ್ರಜ್ಞರು ತಮ್ಮ ಪ್ರವಾಸಗಳಲ್ಲಿ ಬೆಟ್ಟಗುಡ್ಡಗಳಲ್ಲಿಯೂ, ಹಳ್ಳಕೊಳ್ಳ ಗಳಲ್ಲಿಯೂ ಇರತಕ್ಕ ಕಲ್ಲುಗಳನ್ನು ಪರೀಕ್ಷೆಮಾಡುತ್ತಾರೆ. ಈ ಕಲ್ಲುಗಳಲ್ಲಿ ಉಪಯುಕ್ತವಾದ ಖನಿಜಗಳು ಕಂಡುಬಂದಲ್ಲಿ ಆ ಪ್ರದೇಶವನ್ನು ಹೆಚ್ಚು ಗಮನದಿಂದ ಶೋಧಿಸುತ್ತಾರೆ. ಖನಿಜಗಳಿರುವ ಸೂಚನೆಯು ಅನೇಕ ಕಡೆಗಳಲ್ಲಿ, ಹಳ್ಳಗಳ ಪಾತ್ರಗಳಲ್ಲಿ ಹರಡಿರುವ ಕಲ್ಲು ಮಣ್ಣುಗಳಿಂದ ಗೊತ್ತಾಗುವುದು. ಇವು ಗಳಿಂದ ಮೂಲಪ್ರದೇಶಗಳನ್ನು ಗೊತ್ತುಮಾಡಬಹುದು. ನೆಲದೊಳಗೆ ಚೆನ್ನಾಗಿ ಹಬ್ಬಿರುವ ಸಿರಗಳನ್ನು ಕಂಡುಹಿಡಿದು ಖನಿಜಗಳ ಮಾದರಿಯನ್ನು ತೆಗೆದುಕೊಂಡು, ಅವುಗಳ ಲೋಹಾಂಶ ಮತ್ತು ಇತರ ಗುಣಗಳನ್ನು ಪರೀಕ್ಷೆಮಾಡುತ್ತಾರೆ. ಇದಾದಮೇಲೆ ಆ ಪ್ರದೇಶದ ವಿಸ್ತಾರ, ಖನಿಜಸಿರಗಳ ಅಗಲ, ಆಳದಲ್ಲಿ ಇಳಿದಿರ ಬಹುದಾದ ಸೂಚನೆಗಳನ್ನು ಗೊತ್ತುಮಾಡಿ, ಖನಿಜನಿಕ್ಷೇಪಗಳು ಎಷ್ಟು ಸಾವಿರ ಮಣ ಅಥವಾ ಟನ್ನುಗಳ ತೂಕ ಅದಿರನ್ನು ದೊರಕಿಸಬಹುದೆಂಬ ಅಂದಾಜನ್ನು ಮಾಡುತ್ತಾರೆ. ಪ್ರಾರಂಭದಲ್ಲಿ ಖನಿಜಸಿರಗಳ ಮೇಲೆ ಅಡ್ಡಗುಂಡಿಗಳನ್ನು ಹೊಡೆದು ಆಳದಲ್ಲಿರುವ ಕಲ್ಲುಗಳ ಮಾದರಿಯನ್ನು ತೆಗೆಯುತ್ತಾರೆ. ಈ ಪ್ರಾರಂಭ ಶೋಧನೆ ಗಳಿಂದ ಉತ್ತೇಜನ ದೊರೆತರೆ, ಗಣಿಗಳನ್ನು ತೋಡಿ ಖನಿಜಗಳನ್ನು ಬೇರೆಮಾಡ ಬಹುದು.

ಪ್ರಾರಂಭ ಶೋಧನೆಯಲ್ಲಿ ಗುಂಡಿಗಳನ್ನು ಅಗೆಯುವುದರ ಬದಲು ಬೋರಿಂಗ್ ಯಂತ್ರಗಳ ಮೂಲಕ ಖನಿಜ ನಿಕ್ಷೇಪಗಳ ಮೇಲೆ ತೋಡಿ ಖನಿಜ ಸಿರಗಳ ವಿಸ್ತಾರ ಮತ್ತು ಅವುಗಳ ಮಾದರಿಯನ್ನು ಕಂಡುಕೊಳ್ಳಬಹುದು. ಹೀಗೆ ೫೦೦ ರಿಂದ ೧,೦೦೦ ಅಡಿಗಳ ಆಳದ ವರೆಗೂ ತೋಡಬಹುದು. ಗಣಿ ಕೆಲಸದ ಅಂದಾಜಿಗೆ ಬೋರಿಂಗ್ ಯಂತ್ರಗಳ ಶೋಧನೆಯು ಬಹಳ ಸಹಕಾರಿಯಾಗಿದೆ.

ಭೂಮಿಯ ಮೇಲೆ ಕೆಲವು ಕಡೆ ಖನಿಜ ಸಿರಗಳ ಸೂಚನೆಯೇ ಕಾಣದೆ, ಆಳದಲ್ಲಿ ಉತ್ತಮವಾದ ನಿಕ್ಷೇಪಗಳಿರುವುವು. ಮೇಲ್ಭಾಗದ ಪರೀಕ್ಷೆಯಿಂದ ಇದನ್ನು ತಿಳಿಯಲವಕಾಶವಿರುವುದಿಲ್ಲ. ಇತ್ತೀಚೆಗೆ ಕೆಲವು ಭೂ-ಭೌತ ಸಲಕರಣೆಗಳಿಂದ, ಅಂತರಾಳದಲ್ಲಿರುವ ಖನಿಜಸಿರಗಳನ್ನು ಗೊತ್ತುಮಾಡುತ್ತಿದ್ದಾರೆ. ಶಿಲೆಗಳಲ್ಲಿ ವಿದ್ಯುತ್‌ಪ್ರವಾಹವನ್ನು ಪ್ರಸರಿಸಿದರೆ, ಅವುಗಳ ಸ್ವರೂಪಾನುಗುಣವಾಗಿ ಬೇರೆ ಬೇರೆ ವೇಗದಿಂದ ಕಲ್ಲುಗಳಲ್ಲಿ ವಿದ್ಯುತ್ಸಂಚಾರವಾಗುತ್ತದೆ. ಲೋಹದ ಅದಿರುಗಳು ಮತ್ತು ಇತರ ಖನಿಜ ನಿಕ್ಷೇಪಗಳು ಈ ಸಂಚಾರ ಮಾರ್ಗದಲ್ಲಿದ್ದರೆ, ವಿದ್ಯುತ್-ಆಕರ್ಷಣವು ಹೆಚ್ಚಾಗುವುದರಿಂದ ಒಂದು ವೈವಿಧ್ಯವನ್ನು ಮೇಲಿನ ಯಂತ್ರಗಳು ತೋರಿಸುತ್ತವೆ. ವೈವಿಧ್ಯ ಕಂಡು ಬರುವ ಜಾಗಗಳನ್ನು ಗೊತ್ತುಮಾಡಿ ಗಣಿಗಳನ್ನು ತೋಡಬಹುದು. ಭೂಭೌತ ಶೋಧನೆ ಸಲಕರಣೆಗಳಿಂದ ಮೈಸೂರು ಭೂಶೋಧನ ಇಲಾಖೆಯವರು ಖನಿಜ ನಿಕ್ಷೇಪಗಳ ಶೋಧನೆ ನಡೆಸುತ್ತಿದ್ದಾರೆ.

ಪ್ರಾರಂಭದ ಶೋಧನ ಕಾರ್ಯವು ಬಹಳ ಮುಖ್ಯವಾದದ್ದು. ಹೆಚ್ಚು ಜವಾಬ್ದಾರಿಯುಳ್ಳದ್ದು. ಈ ಕೆಲಸಕ್ಕೆ ಹೆಚ್ಚಿನ ಅನುಭವಸ್ಥರನ್ನು ನಿಯಮಿಸುವುದು ಒಳ್ಳೆಯದು. ಹಾಗೆ ಮಾಡದೆ ಶೋಧನೆ ಮತ್ತು ಗಣಿ ಕಾರ್ಯದಲ್ಲಿ ಅಪಾರ ದ್ರವ್ಯವನ್ನು ವೆಚ್ಚಮಾಡಿ ಪ್ರತಿಫಲವನ್ನು ಹೊಂದದೆ ಇರತಕ್ಕವರು ಅನೇಕರಿರುತ್ತಾರೆ.

## ಖನಿಜಗಳನ್ನು ತೆಗೆಯುವ ವಿಧಾನ

**ಗಣಿಗಳು**—ಖನಿಜಗಳಿಗಾಗಿ ತೋಡುವ ಪ್ರದೇಶಗಳಿಗೆ ಗಣಿಗಳೆಂದು ಹೆಸರು. ಗಣಿಗಳು ಇವೊತ್ತಿನವೆಂದು ಹೇಳುವಂತಿಲ್ಲ. ಪೂರ್ವದಲ್ಲಿಯೂ ಲೋಹದ ಅದಿರುಗಳಿಗಾಗಿ ಗುಂಡಿಗಳನ್ನು ತೆಗೆದು ಖನಿಜಗಳನ್ನು ಕಲ್ಲುಗಳಿಂದ ಪ್ರತ್ಯೇಕಿಸಿ ಪುಡಿಮಾಡಿ, ಕಾಸಿ, ಕರಗಿಸಿ ಲೋಹಗಳನ್ನು ಬೇರೆಮಾಡುತ್ತಿದ್ದರು. ಇದಕ್ಕೆ ನಿದರ್ಶನವಾಗಿ ಚಿನ್ನ, ತಾಮ್ರ, ಸೀಸ, ಕಬ್ಬಿಣ ಮೊದಲಾದ ಲೋಹಗಳಿಗಾಗಿ ಕೆಲಸಮಾಡಿರತಕ್ಕ ಪ್ರದೇಶಗಳನ್ನು ಸುಲಭವಾಗಿ ಗುರುತಿಸಬಹುದಾಗಿದೆ. ನಮ್ಮ ಸೀಮೆಯಲ್ಲಿಯೂ ಚಿನ್ನವನ್ನು ತೆಗೆಯುತ್ತಿದ್ದ ಅನೇಕ ಸ್ಥಳಗಳನ್ನು ಅಲ್ಲಿ ಬಿದ್ದಿರತಕ್ಕ ಪುಡಿಮಾಡಿದ ಬೆಣಚುಕಲ್ಲಿನ ರಾಶಿಗಳಿಂದ ಗೊತ್ತು ಮಾಡಬಹುದಾಗಿದೆ. ಇದರಂತೆ ಗೋಲ್ಕೊಂಡ ವಜ್ರಕರೂರು, ರಾಮಲಿಕೋಟ ಮುಂತಾದ ಸ್ಥಳಗಳಲ್ಲಿ ವಜ್ರಕ್ಕಾಗಿ ತೋಡಿರುವ ಹಲವು ಆಳವಾದ ಗಣಿಗಳಿರುತ್ತವೆ. ಚಿತ್ರದುರ್ಗದ ಸಮೀಪದಲ್ಲಿ ತಾಮ್ರ ಮತ್ತು ಸೀಸಗಳಿಗೆ, ಬೆಟ್ಟದ ಕಿಬ್ಬಿಯಲ್ಲಿ ಆಳವಾದ ಬಾವಿ ಸುರಂಗಗಳನ್ನು ಕೊರೆದು ಪೂರ್ವಿಕರು ಕೆಲಸ ಮಾಡಿರುತ್ತಾರೆ. ಕಬ್ಬಿಣದ ಅದಿರುಗಳು ಸಿಕ್ಕತಕ್ಕ ಪ್ರದೇಶಗಳಲ್ಲಿ ನಾಡು

ಕಬ್ಬಿಣದ ಮತ್ತು ಉಕ್ಕಿನ ತಯಾರಿಕೆಯು ಮುಖ್ಯವಾದ ಕಸುಬಾಗಿದ್ದಿತು. ಯಂತ್ರಗಳಿಂದ ಲೋಹ ಶುದ್ಧಿಕಾರ್ಯವು ಪ್ರಚಾರಕ್ಕೆ ಬಂದಮೇಲೆ, ಈ ಸಣ್ಣ ಉದ್ಯಮಗಳೆಲ್ಲವೂ ಸಂಪೂರ್ಣವಾಗಿ ನಿಂತುಹೋದುವು.

ಗಣಿಗಳು ಮೂರು ವಿಧವಾಗಿರುತ್ತವೆ.—

(i) ಪ್ಲೇಸರ್ಸ್ ಗಣಿಗಳು. ನದಿ ಅಥವಾ ಹಳ್ಳಗಳ ಪಾತ್ರಗಳಲ್ಲಿ ಉರುಳಿ ಬಂದು ಶೇಖರವಾದ ಖನಿಜಗಳನ್ನು ನೀರಿನಲ್ಲಿ ಜಾಲಿಸಿ ತೊಳೆಯುವುದು.

(ii) ಭೂಮಿಯ ಮೇಲ್ಭಾಗದಲ್ಲಿ ತೋಡುವ ಗಣಿಗಳು.

(iii) ಭೂಮಿಯ ಒಳಗೆ ಸುರಂಗಗಳ ಮೂಲಕ ತೋಡುವ ಗಣಿಗಳು.

**ಪ್ಲೇಸರ್ಸ್ ಗಣಿಗಳು**—ಮಳೆಗಾಲದ ಪ್ರವಾಹಗಳೊಂದಿಗೆ ಮಣ್ಣು ಮರಳುಗಳು ತಗ್ಗಿನ ಪ್ರದೇಶಗಳಿಗೆ ಕೊಚ್ಚಿ ಬಂದಾಗ ಅಗಲವಾದ ಹಳ್ಳಗಳ ಪಾತ್ರಗಳಲ್ಲಿ ಭಾರವಾದ ಖನಿಜ ಭಾಗಗಳು ಪ್ರತ್ಯೇಕಿಸಲ್ಪಟ್ಟು ಶೇಖರವಾಗುತ್ತವೆ. ಈ ಮಣ್ಣು ಮರಳುಗಳನ್ನು ನೀರಿನಿಂದ ತೊಳೆದು ಜಾಲಿಸಿದರೆ ಭಾರವಾಗಿರುವ ಲೋಹಗಳೂ, ಇತರ ಖನಿಜಗಳೂ ಹಿಂದುಳಿಯುವುವು. ಜಲಗಾರರೆಂಬವರು ಚಿನ್ನ, ಪ್ಲಾಟಿನಂ, ರತ್ನಗಳು ಮುಂತಾದ ಬೆಲೆಬಾಳುವ ಖನಿಜಗಳು ಸಿಕ್ಕುವ ಪ್ರದೇಶಗಳಲ್ಲಿರತಕ್ಕ ಮಣ್ಣು ಮರಳುಗಳನ್ನು ಗುಡ್ಡೆಮಾಡಿ, ಮಳೆಗಾಲದಲ್ಲಿ ನೀರಿನಲ್ಲಿ ತೊಳೆಯುತ್ತಾರೆ. ಸಿಲೋನ್, ಬರ್ಮಾ ದೇಶಗಳಲ್ಲಿ ಕೆಂಪು ಮತ್ತು ಪಚ್ಚೆಕಲ್ಲುಗಳನ್ನು ಈ ಮೂಲಕ ಹೆಚ್ಚಾಗಿ ತೆಗೆಯುತ್ತಾರೆ. ತುಂಗಭದ್ರಾನದಿಯ ಮರಳಿನಲ್ಲಿ ಸ್ವಲ್ಪ ಭಾಗ ಚಿನ್ನವಿರುತ್ತದೆ. ಇದನ್ನು ಜಾಲಿಸಿ ತೆಗೆದಿರುತ್ತಾರೆ. ವಜ್ರಗಳಿಗೂ ಹೀಗೆಯೇ ಪ್ರಪಂಚದ ಕೆಲವು ಭಾಗ ಗಳಲ್ಲಿ ಕೆಲಸಮಾಡುತ್ತಾರೆ. ಚೆನ್ನಾಗಿ ಲಾಭ ಕೊಡುತ್ತಿರುವ ಪ್ಲೇಸರ್ಸ್ ನಿಕ್ಷೇಪಗಳು ಆಫ್ರಿಕಾ ಆಸ್ಟ್ರೇಲಿಯಾ ಖಂಡಗಳಲ್ಲಿಯೂ ಮತ್ತು ಯೂರಲ್ ಪರ್ವತದ ಪ್ರದೇಶ ಗಳಲ್ಲಿಯೂ ಅನೇಕವಾಗಿರುತ್ತವೆ. ಚಿತ್ರ ೬ ಮತ್ತು ೭ರಲ್ಲಿ ಶಿವಮೊಗ್ಗ ಡಿಸ್ಟ್ರಿಕ್ಟಿನಲ್ಲಿರುವ ಕುದುರೆಕೊಂಡದ ಸಮೀಪದಲ್ಲಿ ಚಿನ್ನವನ್ನು ಜಾಲಿಸಿ ತೆಗೆಯುತ್ತಿರುವ ವಿಧಾನವನ್ನು ನೋಡಬಹುದು. ದೊಡ್ಡ ಮರುಳು ಕಲ್ಲುಗಳನ್ನು ಮೊದಲು ಜಾಲಿಸಿ (ಚಿತ್ರ. ೬) ಅನಂತರ ಮಧ್ಯೆ ಆಳವಾಗಿರುವ ತಟ್ಟೆಗಳಲ್ಲಿ (ಚಿತ್ರ. ೭) ಚೂರು ಭಂಗಾರ ವನ್ನು ತೆಗೆಯುತ್ತಾರೆ.

**ಭೂಮಿಯ ಮೇಲೆ ಅಗೆದು ತೋಡುವ ಗಣಿಗಳು**—ಇವು ಆಕಾರದಲ್ಲಿ ಚೌಕ ಅಥವಾ ಉದ್ದವಾಗಿದ್ದು, ಮೇಲ್ಭಾಗದಲ್ಲಿ ಆವರಣವಿಲ್ಲದೆ ಇರುತ್ತವೆ. ಈ ವಿಧವಾದ ಗಣಿಗಳನ್ನು ಅಗೆಯಬೇಕಾದರೆ ಖನಿಜ ಸಿರಗಳು ಬಹಳ ದೊಡ್ಡವಾಗಿರ ಬೇಕು. ಖನಿಜ ನಿಕ್ಷೇಪಗಳ ಸಾಲುಗಳನ್ನು ಮಧ್ಯದಲ್ಲಿ ಬಿಟ್ಟುಕೊಂಡು ಸುತ್ತಲೂ

ಅಗೆಯಬೇಕು. ಅನುಕೂಲವಾದ ಜಾಗಗಳಲ್ಲಿ ಗಣಿಗಳು ಆಳಕ್ಕಿಳಿದ ಹಾಗೆಲ್ಲಾ ಚಡಿತಗಳನ್ನು ಬಿಟ್ಟು, ಆಳದ ಪ್ರದೇಶಗಳಿಗೆ ಹೋಗಲು ಅಗಲವಾದ ಇಳಿಜಾರು ಮೆಟ್ಟಲುಗಳಿರಬೇಕು. ಗಣಿಯ ಯಾವ ಭಾಗವನ್ನೂ ಕಡಿದಾಗಿಯೂ ಮೇಲ್ಮುಖ ನಾಗಿಯೂ ಬಿಡಬಾರದು. ತೋಡಿ ತೆಗೆದ ಖನಿಜಗಳನ್ನು ಜೊತೆಯ ಕೆಟ್ಟ ಕಲ್ಲುಗಳಿಂದ ಪ್ರತ್ಯೇಕಿಸಿ ಮೇಲಕ್ಕೆ ತಂದು ಚೌಕವಾಗಿ ಗುಡ್ಡೆ ಹಾಕಬೇಕು. ಇತರ ಕೆಟ್ಟ ಕಲ್ಲು ಮಣ್ಣುಗಳನ್ನು ದೂರ ಪ್ರದೇಶಕ್ಕೆ ಸಾಗಿಸುವುದು ಒಳ್ಳೆಯದು.

ಕಲ್ಲಿದ್ದಲು ಮತ್ತು ಕಬ್ಬಿಣದ ಅದುರಿನ ಗಣಿಗಳು ನೂರಾರು ಅಡಿಗಳ ಉದ್ದ, ಅಗಲ ಮತ್ತು ಆಳವಾಗಿರುತ್ತವೆ. ಕೆನಡಾ ದೇಶದ ಟೆತ್‌ಫರ್ಡ್ ಬಳಿ ಇರುವ ಕಲ್ನಾರಿನ ಗಣಿಯು ೧೨೦೦ ಅಡಿಗಳ ಉದ್ದ, ೧೦೦೦ ಅಡಿಗಳ ಅಗಲ ಮತ್ತು ೪೫೦ ಅಡಿಗಳ ಆಳಕ್ಕೆ ಇಳಿದಿದೆ. ನಮ್ಮ ದೇಶದಲ್ಲಿಯೂ ೫೦ ಅಡಿಗಳಿಂದ ೧೦೦ ಅಡಿಗಳ ಆಳದ ವರೆಗೆ ತೋಡಿರುವ ಗಣಿಗಳು ಅನೇಕವಿವೆ. ಇವುಗಳಲ್ಲಿ ಮ್ಯಾಂಗನೀಸ್, ಕ್ರೋಮೈಟ್, ಹಾಲುಗಲ್ಲು, ಕಬ್ಬಿಣ, ಕಲ್ನಾರು ಮತ್ತು ಬಿಳಿ ಜೇಡಿಗಳಿಗಾಗಿ ತೆಗೆದಿರುವ ಗಣಿಗಳು ಮುಖ್ಯವಾದುವು. (ಚಿತ್ರ. ೮) ಹಾಸನ ಡಿಸ್ಟ್ರಿಕ್ಟಿನಲ್ಲಿರುವ ಬೈರಾಪುರದ ಕ್ರೋಮೈಟ್ ಗಣಿಯ ಒಂದು ಭಾಗ. ಇದರಲ್ಲಿ ಆಳಕ್ಕೆ ಹೋಗಲು ಇರುವ ಇಳಿಜಾರು ಪ್ರದೇಶಗಳನ್ನೂ ಅದುರಿನ ಬಳಿ ಕೆಲಸಮಾಡುತ್ತಿರುವುದನ್ನೂ ಕಾಣಬಹದು.

**ಭೂಮಿಯ ಕೆಳಗೆ ಸುರಂಗಗಳ ಮೂಲಕ ತೆಗೆಯತಕ್ಕ ಗಣಿಗಳು—** ಪ್ರಪಂಚದ ಅನೇಕ ದೇಶಗಳಲ್ಲಿ ಈ ಮೂಲಕ ಗಣಿಗಳನ್ನು ತೋಡುವುದು ಪ್ರಚಾರಕ್ಕೆ ಬಂದಿದೆ. ಅನುಕೂಲವಾದ ಸ್ಥಳಗಳಲ್ಲಿ ಖನಿಜಸಿರಗಳ ಮೇಲೆ ಮತ್ತು ಅವುಗಳಿಗೆ ಸ್ವಲ್ಪ ದೂರದಲ್ಲಿ ಆಳವಾದ ಬಾವಿಗಳನ್ನು ನೇರವಾಗಿ ತೋಡುತ್ತಾರೆ. ಬಾವಿಯ ಬುಡದಿಂದ ಖನಿಜಸಿರಗಳ ಮೇಲೆ ಸುರಂಗಗಳನ್ನು ಕೊರೆದು, ಅಲ್ಲಿ ಬಂದ ಖನಿಜ ಗಳನ್ನು ಬಾವಿಯ ಬುಡಕ್ಕೆ ಸಾಗಿಸಿ ಬಾನೆಗಳ ಮೂಲಕ ಮೇಲಕ್ಕೆ ಸೇದುತ್ತಾರೆ. ಜನರು ಇಳಿಯುವುದಕ್ಕೆ ಅಲ್ಲಲ್ಲಿ ಅಟ್ಟಣೆಗಳ ಮೇಲೆ ಏಣಿಗಳನ್ನು ಬಿಗಿದಿರುತ್ತಾರೆ. (ಚಿತ್ರ ೯, ೧೦. ೯ ನೆಯ ಚಿತ್ರದಲ್ಲಿ ಮುಖ್ಯ ಭಾವಿಯ ಮೇಲ್ಭಾಗವನ್ನೂ ಪವರ್ ಹೌಸನ್ನೂ ನೋಡಬಹುದು. ಏಣಿಯ ಮೇಲೆ ಒಬ್ಬನು ಹತ್ತುತ್ತಿದ್ದಾನೆ. ಗಣಿಯೊಳಗೆ ಬಿಡತಕ್ಕ ಹಗ್ಗ, ಬಾನೆ, ಮುಂತಾದುವೂ, ಒಳಗಿನಿಂದ ಬಂದಿರುವ ನೀರಿನ ಕೊಳಾಯಿಯೂ ಕಾಣುತ್ತವೆ. ೧೦ ನೆಯ ಚಿತ್ರದಲ್ಲಿ ಸಾಧಾರಣವಾದ ಸುರಂಗಗಳ ಗಣಿಯು ಒಳಗೆ ಕಾಣುವುದನ್ನು ಚಿತ್ರಿಸಿರುತ್ತದೆ. ಗಣಿಯ ಭಾಗಗಳೆಲ್ಲವನ್ನೂ ತೋರಿಸಿದೆ. ಈ ಎರಡು ಚಿತ್ರಗಳು ಮೈಸೂರು ಡಿಸ್ಟ್ರಿಕ್ಟ್ ತಳೂರು ಕ್ರೋಮೈಟ್ ಗಣಿಗೆ ಸಂಬಂಧಪಟ್ಟುವು.)



ಚಿತ್ರ ೯. ತಳೂರು ಕ್ರೋಮೈಟ್ ಗಣಿಯ ಮೇಲು ನೋಟ




ಚಿತ್ರ ೧೦. ತೆಳೂರು ಕ್ರೋಮೈಟ್ ಗಣಿಯ ಒಳನೋಟ

ಅಳತೆ: ೧ ಅಂಗುಲ = ೨೦ ಅಡಿಗಳು

ಹಲವು ಖನಿಜಸಿರಗಳು ಕೆಳಗಿನ ನೇರಕ್ಕೆ ಸ್ವಲ್ಪ ಓರೆಯಾಗಿ ಇಳಿದಿರುವುದುಂಟು. ಇಂತಹ ಸಂದರ್ಭಗಳಲ್ಲಿ ಮುಖ್ಯಬಾವಿಯ ಬುಡದಿಂದ ಅಡ್ಡಸುರಂಗಗಳನ್ನು ಕೊರೆದು ಖನಿಜಸಿರಗಳನ್ನು ಮುಟ್ಟಬೇಕು. ಅಲ್ಲಿಂದ ಇವುಗಳ ಮೇಲೆ ಸರಿಯಾದ ಸುರಂಗಗಳನ್ನು ಕೊರೆಯಬಹುದು. ಕೆಲಸಮಾಡುವ ಜಾಗಗಳು ಕತ್ತಲಾಗಿರುವುದರಿಂದ ಮೇಣದ ಬತ್ತಿಯ ಬೆಳಕಿನಿಂದ ಕೂಲಿಕಾರರು ಕೆಲಸಮಾಡುತ್ತಾರೆ. ಗಣಿಗಳಲ್ಲಿ ಯಾವ ಭಾಗವೂ ಕುಸಿಯದಂತೆ ಅಡ್ಡಮರ, ಹಲಿಗೆಗಳನ್ನು ಬಿಗಿದು ಭದ್ರಪಡಿಸಬೇಕು. ಗಾಳಿ ಸಂಚಾರಕ್ಕೆ ಅನುಕೂಲವಾಗುವಂತೆ ಬೇರೊಂದು ಬಾವಿಯನ್ನು ಸಮೀಪದಲ್ಲಿ ತೋಡಿ ಎರಡೂ ಬಾವಿಗಳನ್ನು ಸುರಂಗಗಳ ಮೂಲಕ ಸೇರಿಸಿದರೆ ಗಾಳಿಸಂಚಾರಕ್ಕೆ ಅನುಕೂಲವಾಗುವುದು. ಇದಲ್ಲದೆ, ದೊಡ್ಡ ದೊಡ್ಡ ಬೀಸಣಿಗೆಗಳನ್ನಿಟ್ಟು ಗಾಳಿ ಸಂಚಾರಕ್ಕೆ ಅನುಕೂಲಮಾಡುತ್ತಾರೆ.

ಗಣಿಯ ಕೆಲಸಕಾರ್ಯಗಳನ್ನು ಕೆಲವು ಕಾಲದ ವರೆಗೆ ಕೈಕೆಲಸದಿಂದಲೇ ನಿರ್ವಹಿಸಬಹುದು. ಹೆಚ್ಚಿನ ಆಳಕ್ಕಿಳಿದನಂತರ ಅನೇಕತರದ ತೊಂದರೆಗಳು ಪ್ರಾರಂಭವಾಗುತ್ತವೆ. ಮೇಲ್ಭಾಗದಲ್ಲಿ ಮೆತ್ತನಾಗಿದ್ದ ಮಣ್ಣು ಕ್ರಮೇಣ ಚೆಟ್ಟಿನಂತೆ ಗಟ್ಟಿಯಾಗಿ, ಬುಡದಲ್ಲಿ ಗಟ್ಟಿ ಬಂಡೆಗಳಂತಿರುತ್ತವೆ. ಇದನ್ನು ಒಡೆಯಲು ಮದ್ದನ್ನು ಉಪಯೋಗಿಸುವರು. ಅಗೆದ ಕಲ್ಲು ಮಣ್ಣುಗಳನ್ನು ಜಾಗ್ರತೆ ಮೇಲಕ್ಕೆಳೆಯಲು ಯಂತ್ರಗಳಿಂದ ಸುತ್ತುವ ರಾಟೆಗಳನ್ನು ಉಪಯೋಗಿಸುವರು. ಗಣಿಯ ಬುಡದಲ್ಲಿಯೂ ಮತ್ತು ಮೇಲೂ ಕಲ್ಲು ಮಣ್ಣು ಮತ್ತು ಖನಿಜಗಳನ್ನು ದೂರಪ್ರದೇಶದಿಂದ ತರಲು ಮತ್ತು ಸಾಗಿಸಲು ರೈಲುಕಂಬಿಗಳನ್ನು ಹಾಸಿ ಸಣ್ಣ ಬಂಡಿಗಳ ಮೂಲಕ ರವಾನಿಸುತ್ತಾರೆ.

ಗಣಿಗಳು ಆಳಕ್ಕಿಳಿದಕೂಡಲೆ ನೀರಿನ ಮಟ್ಟಬರುವುದು. ಈ ನೀರನ್ನು ಒಂದೆಡೆಯಲ್ಲಿ ಶೇಖರಿಸಿ ಪಂಪುಗಳ ಮೂಲಕ ಎತ್ತುತ್ತಾರೆ.

ತೋಡತಕ್ಕ ಬಾವಿಗಳ ಆಕಾರ, ಕೆಲಸದಲ್ಲಿ ಉಪಯೋಗಿಸಬೇಕಾದ ಯಂತ್ರೋಪಕರಣಗಳು, ಮುಂತಾದುವನ್ನು ಅಲ್ಲಿ ಸಿಕ್ಕುವ ಖನಿಜಗಳ ಬೆಲೆಯೂ ಸ್ಥಳದ ಇತರ ಅನುಕೂಲತೆಗಳೂ ನಿರ್ಧರಿಸುತ್ತವೆ.

ಕೋಲಾರದ ಚಿನ್ನದ ಗಣಿಗಳನ್ನು ನೋಡಿರುವವರು ಅಲ್ಲಿಯ ಕೆಲಸಕಾರ್ಯಗಳಲ್ಲಿ ಉಪಯೋಗದಲ್ಲಿರತಕ್ಕ ಅಗಾಧವಾದ ಯಂತ್ರಗಳನ್ನು ನೋಡಬಹುದು. ಈ ಗಣಿಗಳು ೫ರಿಂದ ೯ ಸಾವಿರ ಅಡಿಗಳ ಆಳಕ್ಕಿಳಿದಿರುವುದರಿಂದ, ಕೆಲಸಮಾಡತಕ್ಕ ಜನರೂ, ಬೇಕಾಗುವ ಸಾಮಾನುಗಳೂ, ಅಗೆದ ಕಲ್ಲು ಮಣ್ಣುಗಳೂ ಮೇಲಕ್ಕೂ ಕೆಳಕ್ಕೂ ಹೋಗಿಬರಲು ದೊಡ್ಡ ಪಂಜರಗಳಂತಿರುವ ಬಾನೆಗಳನ್ನು ಇಟ್ಟಿದ್ದಾರೆ.

ಈ ಪಂಜರಗಳನ್ನು ದಪ್ಪ ಉಕ್ಕಿನ ಹಗ್ಗಗಳ ತುದಿಗೆ ತಗುಲಿಸಿ, ಹಗ್ಗವನ್ನು ಸುತ್ತುವ ಯಂತ್ರದ ರಾಟೆಗೆ ಸೇರಿಸಿರುತ್ತಾರೆ. ಒಂದೇ ಹಗ್ಗವು ಅಷ್ಟು ಆಳದ ವರೆಗೂ ಹೋಗುತ್ತದೆ. ಕೆಲವು ಗಣಿಗಳಲ್ಲಿ ೨-೩ ಜೊತೆ ತೊಟ್ಟಿಲುಗಳನ್ನಿಟ್ಟಿರುತ್ತಾರೆ. ಒಳಗಿನ ಶಾಖವನ್ನು ಕಡಮೆಮಾಡುವಂತೆ ಶೇಖರಿಸಿದ ಗಾಳಿಯನ್ನು ಕೊಳವಿಗಳ ಮೂಲಕ ಒಳಗೆ ಬಿಟ್ಟು ಅಲ್ಲಿ ಅದನ್ನು ತಣ್ಣಗೆಮಾಡಲು ತಕ್ಕ ಸಲಕರಣೆಗಳನ್ನಿಟ್ಟಿರುತ್ತಾರೆ. ಹೀಗಿದ್ದರೂ ಕೆಲಸಮಾಡತಕ್ಕ ಪ್ರದೇಶಗಳಲ್ಲಿನ ಕಾವು ೧೨೦ ಡಿಗ್ರಿಯಿಂದ ೧೩೦ ಡಿಗ್ರಿಯ ವರೆಗಿರುತ್ತದೆ. ಖನಿಜಗಳನ್ನು ತೆಗೆದ ಸುರಂಗ ಪ್ರದೇಶಗಳು ಕುಸಿಯದಂತೆ ದಪ್ಪನೆಯ ಮರದ ದಿಮ್ಮಿಗಳನ್ನೂ ಇಟ್ಟಿಗೆ, ಕಲ್ಲುಗಾರೆ ಕಂಬಗಳನ್ನೂ ಕಟ್ಟಿರುತ್ತಾರೆ. ಮೂಲಬಾವಿಗಳೂ, ಮುಖ್ಯಸುರಂಗಗಳೂ ಕೊನೆಯ ವರೆಗೂ ಇಟ್ಟಿಗೆ ಗಾರೆ ಕಟ್ಟಡಗಳಾಗಿರುತ್ತವೆ. ಇಷ್ಟು ಎಚ್ಚರಿಕೆ ತೆಗೆದುಕೊಂಡರೂ ಗಣಿಗಳ ಪ್ರಮಾಣವು ಅಗಾಧವಾಗಿರುವುದರಿಂದ ಕೆಲವು ಭಾಗಗಳು ಕುಸಿದು ಬೀಳುತ್ತವೆ. ಹೀಗೆ ಕುಸಿದಾಗ ಅನೇಕವೇಳೆ ಪ್ರಾಣಹಾನಿಯಾಗುವುದು. ಇದೇ ರೀತಿಯಲ್ಲಿ ಪ್ರಪಂಚದ ಆಳವಾದ ಗಣಿಗಳೆಲ್ಲವೂ ಕೆಲಸಮಾಡುತ್ತಿವೆ. ಆಯಾ ದೇಶ ಕಾಲ ವರ್ತಮಾನಗಳಿಗನುಸಾರವಾಗಿ ಇತರ ಅನೇಕ ಸಲಕರಣೆಗಳನ್ನು ಒದಗಿಸಿಕೊಳ್ಳುತ್ತಾರೆ.

ಪೆಟ್ರೋಲಿಯಂ ಎಣ್ಣೆಯನ್ನು ಬೋರಿಂಗ್ ಯಂತ್ರಗಳ ಮೂಲಕ ತೋಡಿ ನಳಿಗೆಗಳ ಮಾರ್ಗವಾಗಿ ಮೇಲಕ್ಕೆತ್ತುತ್ತಾರೆ.

ಪ್ರಪಂಚದ ಆಳವಾದ ಗಣಿಗಳಲ್ಲಿ ಕೋಲಾರದ ಚಿನ್ನದ ಗಣಿಗಳ ಪೈಕಿ ಉರಿಗಾಂ ಗಣಿಯು ಎರಡನೆಯದಾಗಿದೆ. ಈ ಗಣಿಯು ನೆಲಮಟ್ಟದಿಂದ (ಇದರ ನೆಲಮಟ್ಟವು ಸಮುದ್ರಮಟ್ಟಕ್ಕೆ ೨೯೬೭ ಅಡಿಗಳ ಎತ್ತರದಲ್ಲಿದೆ) ೯೦೦೦ ಅಡಿಗಳ ಆಳಕ್ಕೆ ಇಳಿದಿದೆ. ದಕ್ಷಿಣ ಆಫ್ರಿಕಾ ಖಂಡದಲ್ಲಿನ ರ್‍ಯಾಂಡ್ ಗಣಿಯು ೯೫೦೦ ಅಡಿಗಳ ಆಳಕ್ಕೆ ಇಳಿದಿದೆ. ಆದರೆ ಆಫ್ರಿಕದ ಗಣಿಗಳು ಸಮುದ್ರಮಟ್ಟಕ್ಕೆ ೫೬೦೦ ಅಡಿಗಳ ಎತ್ತರದಲ್ಲಿರುವುದರಿಂದ ಅವುಗಳ ಆಳವು ಸಮುದ್ರಮಟ್ಟಕ್ಕಿಂತ ೩೦೦೦ ಅಡಿಗಳ ಕೆಳಗಿದೆ. ಕೋಲಾರದ ಗಣಿಗಳು ರ್‍ಯಾಂಡ್ ಗಣಿಗಳಿಗಿಂತ ತಗ್ಗಿನ ಪ್ರದೇಶಗಳಲ್ಲಿರುವುದರಿಂದ ಸಮುದ್ರಮಟ್ಟಕ್ಕೆ ಸುಮಾರು ೬೦೦೦ ಅಡಿಗಳಷ್ಟು ಕೆಳಗೆ ತೋಡಲ್ಪಟ್ಟಿವೆ. (ಸುಮಾರು ೧$\frac{1}{2}$ ಮೈಲಿ) ಭೂಮಿಯ ಮೇಲೆ ಎಲ್ಲಿಯೂ ಇಷ್ಟು ಆಳದಲ್ಲಿ ಕೆಲಸ ನಡೆಯುತ್ತಿಲ್ಲ. ಈ ಆಳದಲ್ಲಿಯೂ ಚಿನ್ನದಿಂದ ಕೂಡಿರುವ ಬೆಣಚು ಸಿರಗಳು ಪ್ರಸರಿಸಿರುವುದರಿಂದ ಇನ್ನೂ ಸಾವಿರಾರು ಅಡಿಗಳ ಆಳಕ್ಕೆ ತೋಡುವ ಅಂದಾಜಿನಿಂದ ಕೆಲಸಗಳು ಮುಂದುವರಿಯುತ್ತಿವೆ.

ಗಣಿಗಳಿಂದ ತೋಡಿ ತೆಗೆದ ಖನಿಜಗಳನ್ನು ಮೇಲಕ್ಕೆ ತಂದು ಕೆಟ್ಟ ಕಲ್ಲುಗಳಿಂದ ಪ್ರತ್ಯೇಕಿಸಿ ಗುಡ್ಡೆಹಾಕುತ್ತಾರೆ. ಪುಡಿಯಾದ ಭಾಗವನ್ನು ನೀರಿನಲ್ಲಿ ತೊಳೆದು ಜಾಲಿಸುತ್ತಾರೆ. ಹೀಗೆ ತೆಗೆದ ಖನಿಜಗಳು ಲೋಹಶುದ್ಧಿಗೂ ಮಾರಾಟಕ್ಕೂ ಇತರ ಪದಾರ್ಥಗಳ ತಯಾರಿಕೆಗೂ ಸಿದ್ಧವಾಗಿರುವುದು.

ಖನಿಜ ನಿಕ್ಷೇಪಗಳು ಸಾಧಾರಣವಾಗಿ ಆಯಾ ದೇಶದ ಆಡಳಿತ ಸರ್ಕಾರದ ಅಧೀನವಾಗಿರುತ್ತವೆ. ಗಣಿಗಳನ್ನು ತೋಡಲಪೇಕ್ಷಿಸುವವರು ಸರ್ಕಾರದಿಂದ ಲೈಸೆನ್ಸನ್ನು ಪಡೆಯಬೇಕು. ಇದಕ್ಕೆ ಪ್ರತಿಯಾಗಿ ನಿಯತವಾದ ರೀತಿಯಲ್ಲಿ ಗಣಿಯ ಮಾಲೀಕರು, ರಾಜಾದಾಯವನ್ನು ಕ್ರಮವಾಗಿ ಸರ್ಕಾರಕ್ಕೆ ಸಲ್ಲಿಸುತ್ತಾರೆ.

ದೇಶದ ಆಡಳಿತದಲ್ಲಿರುವ ಖನಿಜ ನಿಕ್ಷೇಪಗಳು ಜನಾಂಗಗಳ ನಾಗರಿಕತೆಯ ದೃಷ್ಟಿಯಿಂದ ಬಹು ಮುಖ್ಯವಾದದ್ದು. ಸಾಧ್ಯವಾದಮಟ್ಟಿಗೂ ತೆಗೆದ ಖನಿಜಗಳನ್ನು ತಮ್ಮಲ್ಲಿಯೇ ಉಪಯೋಗಿಸಬೇಕು. ಇದರಿಂದ ದೇಶದಲ್ಲಿ ಕೈಗಾರಿಕೆಗಳು ಹೆಚ್ಚಿ, ಜನರಿಗೆ ಉದ್ಯೋಗಸಿಕ್ಕುವುದು. ಮೂಲ ಖನಿಜಗಳ ನಿಕ್ಷೇಪಗಳನ್ನು ಬಹುಭಾಗ ಕೂಡಿಸಿಟ್ಟಿರುವುದು ಒಳ್ಳೆಯದು. ಯಾವ ದೇಶವೂ ತನ್ನ ಉಪಯೋಗಕ್ಕೆ ಬೇಕಾಗುವ ಎಲ್ಲಾ ಖನಿಜಗಳನ್ನೂ ಪಡೆದಿರುವುದಿಲ್ಲ. ತಮ್ಮಲ್ಲಿಲ್ಲದಿರುವ ವಸ್ತುಗಳನ್ನು ಹೊರದೇಶಗಳಿಂದ ಹೆಚ್ಚಿನ ಬೆಲೆಗೆ ಕೊಂಡುಕೊಳ್ಳುತ್ತಾರೆ. ಮಾರಾಟ ಮಾಡತಕ್ಕ ದೇಶಗಳು ತಮಗೆ ಬೇಕಾಗುವುದಕ್ಕಿಂತ ಹೆಚ್ಚುಭಾಗ ಖನಿಜಗಳನ್ನು ಹೊಂದಿದ್ದರೆ, ಅಥವಾ ಸಿಕ್ಕತಕ್ಕ ಖನಿಜಗಳನ್ನು ಉಪಯೋಗಿಸಲು ಸೌಕರ್ಯವಿಲ್ಲದಿದ್ದಲ್ಲಿ ಮಾತ್ರ ಮಾರಲು ಪ್ರಯತ್ನಮಾಡಬೇಕು. ದಿನದಿನಕ್ಕೂ ಬೆಳೆಯುತ್ತಿರುವ ನಾಗರಿಕತೆಯಿಂದ ಪ್ರತಿಯೊಂದು ದೇಶದಲ್ಲಿಯೂ ಕೈಗಾರಿಕೆಗಳು ಹೆಚ್ಚಿ, ಅನೇಕ ಖನಿಜಗಳು ಮತ್ತು ಇತರ ಕಚ್ಚಾ ಪದಾರ್ಥಗಳು ಉಪಯೋಗಕ್ಕೆ ಬಂದಿವೆ. ಹೀಗಿರುವಾಗ ಮಾರಾಟಮಾಡುವ ದೇಶಗಳು ತಮ್ಮಲ್ಲಿಯೇ ಕೈಗಾರಿಕೆಗಳನ್ನು ಅಭಿವೃದ್ಧಿಗೊಳಿಸಲು ಯತ್ನಿಸಬೇಕು. ಕಬ್ಬಿಣ, ಇತರ ಮುಖ್ಯ ಲೋಹಗಳು, ಕಲ್ಲಿದ್ದಲು, ಎಣ್ಣೆ ಮುಂತಾದುವುಗಳ ಮಾರಾಟ ಕಡಮೆಯಾದರೆ ಉತ್ತಮ.

ಗಣಿಯ ಮಾಲೀಕರೂ, ಕೈಗಾರಿಕೆ ಕ್ಷೇತ್ರದವರೂ ಖನಿಜಗಳನ್ನು ದುರುಪಯೋಗಪಡಿಸಬಾರದು. ಸರ್ಕಾರವು, ಖನಿಜಗಳನ್ನು ತೆಗೆಯುವುದು, ಮಾರಾಟ ಮಾಡುವುದು, ಕೈಗಾರಿಕೆ ಕೇಂದ್ರಗಳಲ್ಲಿ ಉಪಯೋಗಿಸುವುದು, ಮುಂತಾದ ವಿಷಯಗಳಲ್ಲಿ ಹೆಚ್ಚುಗಮನವಿಟ್ಟು ದೇಶದ ನಿಧಿಯು ದುರುಪಯೋಗವಾಗದಂತೆ ನೋಡಿಕೊಂಡರೆ, ದೇಶದ ಹಿತಸಾಧನೆ ಮಾಡಿದಂತಾಗುವುದು.

ಈ ಲೇಖನದ ಚಿತ್ರಗಳಲ್ಲಿ ಮೊದಲನೆಯ ಒಂಬತ್ತರ ಪಡಿಯಚ್ಚುಗಳನ್ನು ಉಪಯೋಗಿಸಿಕೊಳ್ಳಲು ಅನುಮತಿಯಿತ್ತುದಕ್ಕೂ ಉಪಯುಕ್ತವಾದ ಕೆಲವು ಸಲಹೆಗಳನ್ನು ನೀಡಿದ್ದಕ್ಕೂ, ಮೈಸೂರು ಭೂಶಾಸ್ತ್ರದ ಇಲಾಖೆಯ ಡೈರೆಕ್ಟರವರಾದ ಶ್ರೀಮಾನ್ ಬಿ. ರಾಮರಾಯರವರಿಗೆ ನಾನು ಕೃತಜ್ಞನಾಗಿರುತ್ತೇನೆ. ಹತ್ತನೆಯ ಚಿತ್ರವಾದ ತಳೂರುಗಣಿಯ ನಕ್ಷೆಯನ್ನು ಶ್ರೀಯುತ ಕೆ. ಶಂಕರರಾಯರವರು ಬರೆದು ಕೊಟ್ಟು ಉಪಕಾರ ಮಾಡಿದ್ದಾರೆ.

ಟಿ. ಪಿ. ಕೃಷ್ಣಾಚಾರ್, ಎಂ.ಎಸ್‌ಸಿ.

# ಉದಯನ ಚರಿತ್ರ ಸಂಗ್ರಹ

## ಎರಡನೆಯ ಲಾವಾಣಕಾಂಡ

ವಾಸವದತ್ತೆಯೊಡನೆ ಉದಯನನ ಬರವನ್ನು ಕೇಳಿದ ಜಯಂತೀನಗರದವರು ಮಿಗಿಲು ಸಂತಸಗೊಂಡು ಎಲ್ಲ ಬೀದಿಗಳಲ್ಲೂ ಉದ್ದಕ್ಕೂ ಕಾವಣ ಕಟ್ಟಿ ಕೆಳಗೆ ಹೂವುಗಳನ್ನು ಹರವಿ, ಹಣ್ಣಡಕೆಗೊನೆ, ಗೊನೆಯಬಾಳೆ, ಕಬ್ಬು, ಮೊದಲಾದುವನ್ನು ಎರಡು ಪಕ್ಕಗಳಲ್ಲೂ ಕ್ರಮವಾಗಿ ಕಟ್ಟಿ, ಮುತ್ತುಮಾಲೆಗಳನ್ನೂ ಹವಳಮಾಲೆಗಳನ್ನೂ ಅಲ್ಲಲ್ಲೆ ನೇತುಹಾಕಿ, ಪ್ರತಿ ಬಾಗಿಲಿನಲ್ಲೂ ತೋರಣಗಂಬಗಳನ್ನು ನಾಟಿ ದೊಡ್ಡ ಬಾವುಟಗಳನ್ನೂ ಕಿರುಬಾವುಟಗಳನ್ನೂ ಕಟ್ಟಿ, ಇನ್ನೂ ಹಲವು ಬಗೆಯ ಅಲಂಕಾರಗಳನ್ನು ಮಾಡಿದರು. ಆಗ ಬಿಸಿದುಃಖಕೊಡುವ ಅರಿದಾದ ಕರ್ಮವನ್ನು ನಾಶಮಾಡಿದ ಅರ್ಹನನ್ನು ಇಂದ್ರಲೋಕ ಎದುರುಗೊಂಡಂತೆ ಅವರುಗಳು ಉದಯನನನ್ನು ಎದುರುಗೊಂಡರು. ಮುರಜಗಳು ಮೊಳಗಿದವು; ಹಲವು ಬಗೆಯ ವಾದ್ಯಗಳು ಧ್ವನಿಗೈದುವು. ಹೆಂಗಸರೂ ಮಕ್ಕಳೂ ಬಾಗಿಲುಗಳಲ್ಲಿ ಬಂದು ನಿಂತು ಅವನನ್ನೂ ವಾಸವದತ್ತೆಯನ್ನೂ ಕಂಡು ಕಣ್ತಣಿದು ಮನವುಬ್ಬಿ, "ನಮ್ಮ ತೊಂದರೆಯೆಂಬ ಇರುಳನ್ನು ಹೋಗಿಸುವುದಕ್ಕಾಗಿ ಸೂರ್ಯನ ಹಾಗೆ ಬಂದ ಅರಳು ಹೂಮಾಲೆಯರಸೇ! ಹೊಗು ಬಾ" ಎನ್ನುವವರೂ, "ದೈವ ಆನೆಯನ್ನು ಪಡೆಯ ಬಯಸಿ ಸೇನೆಯಿಲ್ಲದೆ ತನಿಯಾಗಿ ಹೋಗಿ ಹಗೆಯಿಂದ ಹಿಡಿಯಲ್ಪಟ್ಟು ಉಜ್ಜೈನಿಗೆ ಹೋಗಿ ಗೆದ್ದು ಆ ಹಗೆಯ ಸಿರಿಗುವರಿಯನ್ನು ಕೈವಶಪಡಿಸಿಕೊಂಡು ಕರೆದುಕೊಂಡು ಬಂದ ಗಂಡು ಸಿಂಗವೇ! ಬಾ" ಎನ್ನುವವರೂ, "ನೀನಿಲ್ಲದ ಸಮಯವನ್ನು ನೋಡಿ ಕೌಶಾಂಬೀನಗರವನ್ನು ಕೈವಶಪಡಿಸಿಕೊಂಡಿರುವ ಆರುಣಿಯರಸನನ್ನು ಗೆದ್ದು ಮಕ್ಕಳಾಗಿರುವ ನಮ್ಮನ್ನು ಕಾಪಾಡಿ ಧರ್ಮದಿಂದ ರಾಜ್ಯವಾಳಿಕೊಂಡು ಬಹುಕಾಲ ಬಾಳುವವನಾಗು" ಎನ್ನುವವರೂ, "ಶ್ರೀ ಮಹಾವಿಷ್ಣುವಿನ ಎದೆಯನ್ನು ಸಾರಿ ಸುಖಹೊಂದಿ ಇರುವ ಸಿರಿದೇವಿಯಂತೆ ನಮ್ಮರಸನನ್ನು ಸಾರಿ ಸುಖಹೊಂದು ವುದಕ್ಕೆ ಹಿಂದಿನ ಹುಟ್ಟಿನಲ್ಲಿ ತಪಸ್ಸುಮಾಡಿದ ಪುಣ್ಯದ ಬೊಂಬೆಯೇ, ನಮ್ಮನ್ನು ಕಾಪಾಡಿ ಕರುಣಿಸುವವಳಾಗು" ಎನ್ನುವವರೂ, "ಕೆಂದಾವರೆಯ ಕಣ್ಣವನಾಗಿರುವ ನಮ್ಮರಸನೊಡನೆ ಪ್ರದ್ಯೋತನ ಚಕ್ರವರ್ತಿಯ ಅರುಮೆಮಗಳಾದ ವಾಸವದತ್ತೆ ಸಂತೋಷಗೊಂಡು ಬಂದದ್ದನ್ನು ಕಂಡೆವು; ನಾವೇ ಬಹಳ ಪುಣ್ಯವಂತರು;

ಈ ಹುಟ್ಟಿನಲ್ಲಿ ಇನ್ನು ನಾವು ಪಡೆಯಬೇಕಾದ ಫಲ ಯಾವುದಿದೆ?" ಎನ್ನುವವರೂ, "ಪ್ರದ್ಯೋತನನ ಹೆಣ್ಣುಗಳು ಹಲವರಲ್ಲಿ ವಾಸವದತ್ತೆಯೆಂಬವಳು ಬಹು ಚೆಲುವುಳ್ಳವಳೆಂದೂ ಕಾಣಲರಿದಾದವಳೆಂದೂ ಕೇಳಿದ್ದುದುಂಟು; ಕಂಡದ್ದಿಲ್ಲ. ಆ ಕಡು ಚೆಲುವೆಯನ್ನು ನಾವು ಸುಲಭದಲ್ಲಿ ಕಂಡು ಕಣ್ಣು ಹೊಂದಿದ್ದಕ್ಕೆ ತಕ್ಕ ಫಲವನ್ನು ಪಡೆಯುವಂತೆ ಕರೆದುಕೊಂಡು ಬಂದು ನಮಗೆ ತೋರಿಸಿದ ಅರಸರರಸನು ನೆಲೆಯಾಗಿ ಬಾಳಲಿ!" ಎನ್ನುವವರೂ, "ಪ್ರದ್ಯೋತನನು ಕಾಡಿನಲ್ಲಿ ಮಾಯದಾನೆಯನ್ನು ತೋರಿಸಿ ವಂಚಿಸಿ ನಮ್ಮ ಪೆರ್ಮನನ್ನು ಹಿಡಿಸಿ ತನ್ನ ನಗರಕ್ಕೆ ಬರಿಸಿ ಸೆರೆಪಡಿಸಿದ ಸುದ್ದಿಯನ್ನು ಕೇಳಿ ತಾನು ಸತ್ತುಹೋದದ್ದಾಗಿ ಎಲ್ಲರೂ ನೆನೆಯುವಂತೆ ಮಾಡಿಬಿಟ್ಟು ಮಾರುವೇಷ ತೊಟ್ಟು ಉಜ್ಜಯಿನಿಯಲ್ಲಿ ಹೊಕ್ಕು ಮಾಡುವುದಕ್ಕೆ ಅರಿದಾದುವನ್ನು ಮಾಡಿ ತನ್ನ ತಲೆವನನ್ನು ಸೆರೆಯಿಂದ ಬಿಡಿಸಿ ಹಗೆದೊರೆಯ ಮಗಳನ್ನು ಕೈಕೊಂಡು ನಡೆಯೆಂದು ಹೇಳಿ ಹೋಗಿ ಬನ್ನಿ ಎಂದು ಕಳಿಸಿದ ಪೇರಾರ್ಪುಳ್ಳ ಯೂಗಿ ಈ ಲೋಕದಲ್ಲಿ ನಿಡುಗಾಲ ಬಾಳುವವನಾಗಲಿ" ಎನ್ನುವವರೂ, "ನಮ್ಮರಸನಿಗೆ ಬಂದ ಪೊಡ್ಡು ತೊಂದರೆ ಕೊನೆಯಲ್ಲಿ ವಾಸವದತ್ತೆಯನ್ನು ಅವನು ಪಡೆಯುವಂತೆ ಮಾಡಿದ್ದಲ್ಲದೆ ನಮ್ಮ ದುಃಖವನ್ನೂ ತೀರಿಸಿಬಿಟ್ಟಿತು. ಆದ್ದರಿಂದ ಇದು ಬಹಳ ಆಶ್ಚರ್ಯವನ್ನುಂಟುಮಾಡುವುದು" ಎಂದು ಅವನ ಪುಣ್ಯವನ್ನು ಹೊಗಳುವವರೂ, "ವೀಣೆಯಲ್ಲಿ ಬಹಳ ಪರಿಣತಿ ಹೊಂದಿ ಸೊಕ್ಕಿ ಎಣೆಯಿಲ್ಲದೆ ಬೆಳಗುವ ಉದಯನನಿಗೆ ವಾಸವದತ್ತೆಯನ್ನು ಮದುವೆಮಾಡಿಕೊಡಬೇಕೆಂದು ಎಣಿಸಿದ ಪ್ರದ್ಯೋತನನು, 'ನಮ್ಮ ಮಗಳನ್ನು ಮದುವೆಮಾಡಿಕೊಳ್ಳುವಂತೆ ಕೇಳಿಕೊಳ್ಳುವೆವಾದರೆ ಇವನು ಮಾಡಿಕೊಳ್ಳುವುದಿಲ್ಲ. ಇವಳನ್ನು ಅವನ ಬಳಿ ಕಳಿಸಿ ಅವನಿಗೆ ಮದುವೆಮಾಡಿಸುವೆವಾದರೆ ಕುಲದಲ್ಲಿ ಕೀಳಾದವನೆಂದು ನಮ್ಮನ್ನು ಲೋಕ ತೆಗಳುವುದು' ಎಂದು ನಾಚಿ ಆನೆಯ ಮೋಸದಿಂದ ನಮ್ಮ ಸೇನೆಯೊಡೆಯನನ್ನು ಹಿಡಿಸಿ ಸೆರೆಪಡಿಸಿ ವಾಸವದತ್ತೆಗೆ ವೀಣೆಕಲಿಸುವಂತೆ ಏರ್ಪಡಿಸಿ ಅವಳ ಚೆಲುವಿನಲ್ಲಿ ಸಿಕ್ಕಿಕೊಳ್ಳುವಂತೆ ಮಾಡಿ ಅವನೊಡನೆ ಅವಳನ್ನು ಕಳಿಸಿದನು. ಮಗಳು ಕೊಡುವವರ ಗುರಿ ಇದು" ಎನ್ನುವವರೂ, ತಮತಮಗೆ ತೋರಿದ ಹಾಗೆಯೇ ಇನ್ನೂ ಇದೇ ರೀತಿಯ ಹಲವನ್ನು ಆಡುವವರೂ ಆಗಿ ಅಲ್ಲಲ್ಲೆ ನಿಲ್ಲಲು; ಉದಯನನು ಅಮರಾವತಿಯನ್ನು ಹೊಗುವ ಇಂದ್ರನಂತೆ ಜಯಂತೀನಗರದಲ್ಲಿ ಹೊಕ್ಕು ಅರಮನೆಯನ್ನು ಸೇರಿ ಮಿಂಡಿಸಿ ಬೆಳಗುವವನಾದನು.

ಹಾಗೆ ಬೆಳಗುವ ಕಾಲದಲ್ಲಿ ಒಂದು ದಿನ ಕೊಡೆಯನ್ನು ಹಿಡಿದುಕೊಂಡು ನಡೆಯುವುದು, ಪೀಠದಲ್ಲಿ ಕೂರುವುದು, ಕಿರಮೆಟ್ಟಿಕೊಂಡು ಹೋಗುವುದು, ಸೇನೆ

ಎದುರೇಳುವುದು, ಆನೆ, ದಂಡು, ಮೊದಲಾದ ಮರ್ಯಾದೆಗಳನ್ನು ತನ್ನ ಕಲ್ಪಿಯ ಹಿರಿಮೆಯಿಂದ ಪಡೆದವನಾಗಿರುವ ಪೌರ್ಣಿಕನೊಬ್ಬನು ಬಂದು ಮದುವೆಮಾಡುವು ದಕ್ಕೆ ತಕ್ಕ ಒಳ್ಳೆಯ ದಿನವನ್ನು ತಿಳಿಸಿದನು. ತಿಳಿಸಲಾಗಿ, ಉತ್ಸವ ದಿನ, ಪಡೆಯ ದಿನ, ಮದುವೆಯ ದಿನ, ಎಂಬ ದಿನಗಳಲ್ಲಲ್ಲದೆ ಉಳಿದ ದಿನಗಳಲ್ಲಿ ಮುರಜ ಬಾರಿಸದ ವಳ್ಳುವ ಮುದುಕನು ಬಿಳಿಯ ಗಂಧ ಪೂಸಿ ಬಿಳಿಮಲರ ಮಾಲೆಯನ್ನು ಹಾಕಿಕೊಂಡು ಬಿಳಿಯ ಒಟ್ಟೆಯನ್ನುಟ್ಟು ಹೋಗಿ, ಹೊನ್ನಬಾರು ಬಿಗಿದು ಮುತ್ತುಮಾಲೆ ಹೂಮಾಲೆ ಗಳನ್ನಲಂಕರಿಸಿ ಎತ್ತಿನ ಚರ್ಮ ಹೊದಿಸಿದ ಅರಸನ ಗೆಲ್‌ಮುರಜವನ್ನು ಹಿರಿಯ ಮುರಜಶಾಲೆಯಲ್ಲಿ ಪೂಜಿಸಿ ವಿಜಯೆಯನ್ನು ಸ್ತುತಿಸಿ ಅದನ್ನು ಆನೆಯ ದೊಡ್ಡ ಹೆಡತಲೆಯ ಮೇಲೆ ಏರಿಸಿ ಹಲವರು ತನ್ನನ್ನು ಸುತ್ತಿಬರಲು ತಾನು ಆ ಆನೆಯ ಬೆನ್ನ ಮೇಲಿರುವ ಪೀಠದಲ್ಲಿ ಕೂತುಕೊಂಡು ತೇರೋಡುವ ಬೀದಿಗಳಲ್ಲೆಲ್ಲ ಹೋಗಿ ನಗರದವರೆಲ್ಲರೂ ಅರಿಯುವಂತೆ, "ಅರಸನ ಈಟಿ ಗೆಲ್ಗೊಂಡು ಬೆಳಗಲಿ! ಹೂಮಗಳು ಅವನನ್ನು ಸೇರಲಿ! ಮಣ್ಮಗಳು ಹುಲುಸಾಗಲಿ! ನಗರದವರೇ, ನಾನು ಹೇಳುವುದನ್ನು ಕೇಳಿ. ಪಾಪಕೆಲಸಗಳನ್ನು ನೀಗಿ ಸಿರಿಯುಳ್ಳವರಾಗಿ ಹೊಗಳುಪಡೆದು ಬೆಳಗಿರಿ. ಪ್ರದ್ಯೋತನ ಚಕ್ರವರ್ತಿಯ ಕುಲಮಗಳಾದ ವಾಸವದತ್ತೆಯನ್ನು ನಮ್ಮ ಅರಸರ ಪೆರ್ಮೆ ಮದುವೆಮಾಡಿಕೊಳ್ಳುವ ದಿನ ಇಂಥದು" ಎಂದು ತುಂಡು ಕುಣುಕಿನಿಂದ ಆ ಮುರಜವನ್ನು ಬಡಿದು ತಿಳಿಸಿದನು. ಕೇಳಿದ ನಗರದವರು ಸಂತೋಷಿಸಿ ಬಹಳ ಪ್ರೀತಿಯಿಂದ ತಂತಮ್ಮ ಬಾಗಿಲುಗಳಲ್ಲಿ ತೋರಣಗಳನ್ನು ಕಟ್ಟಿ ಬಹಳ ವಿಶಾಲವಾದ ಹಂದರಗಳನ್ನು ಹಾಕಿಸಿ ಅವುಗಳ ಒಳಗೂ ಹೊರಗೂ ವಿಚಿತ್ರವಾದ ಅಲಂಕಾರ ಗಳನ್ನು ಮಾಡಿಸಿದರು.

ಹಲಬಗೆಯ ಹಣ್ಣುಗಳೂ ವೀಳೆಯದೆಲೆಯೂ ಹಲಬಗೆಯ ಅಡಕೆಗಳೂ ತುಂಬಿದ ಪೆಟ್ಟಿಗೆಗಳನ್ನೂ ದೊಡ್ಡ ಸುಣ್ಣದ ಕೊಡಗಳನ್ನೂ ತಮ್ಮ ಪಕ್ಕದಲ್ಲಿಟ್ಟುಕೊಂಡು ಬಂದವರಿಗೆ ಎಲ್ಲೆಯಿಲ್ಲದಂತೆ ಅವನ್ನು ಕೊಡುವವರ ಮೊಳಗೂ, ಹೋರುಗೋಲಿನ ಆಳುಗಳ ಕಾವಲು ಸುತ್ತಲ್ಪಟ್ಟು ಕೆಳಗೆ ಬಿಳಿಮರಳು ಹರಡಿದ ತಣ್ಣೆಳಲ ಹಂದರನ್ನು ಅಕ್ಕಪಕ್ಕದಲ್ಲಿ ಉಳ್ಳವೂ ಅಡಿಗೆ ಕೆಲಸದಲ್ಲಿ ಗಟ್ಟಿಗರಾದ ಅಡಿಗೆ ಬಾಳ್ಕೆಯವರಿಂದ ತುಂಬಿದವೂ ಆದ ಧರ್ಮಾರ್ಥವಾಗಿ ಅನ್ನಹಾಕುವ ಅಡಿಗೆಮನೆಗಳ ಒಳಗೂ ಹೊರಗೂ ಬ್ರಾಹ್ಮಣರಿಗೂ ಅಲ್ಲದ ಉಳಿದವರಿಗೂ ಅಮೃತದಂಥ ಅಡಿಗೆಗಳನ್ನೂ ನೆಯ್ಯಲ್ಲಿ ಮಾಡಿದ ಕಿರುತಿಂಡಿಗಳನ್ನೂ ಯಾವಾಗ ಬಯಸಿದರೂ ಆವಾಗಲೇ ಕೊಡುವುದನ್ನು ತಪ್ಪದೆ ಮಾಡುವರ ಮೊಳಗೂ, ಕೊಡುವವರು ಬೀಳಿಸಿದ ಕುಂಕುಮದ ಮುದ್ದೆಯೂ ಹೂವೂ ವೇದಬಲ್ಲವರುಗಳ ಮನೆ ಬಾಗಿಲುಗಳಲ್ಲಿ

ಚೆಲ್ಲಿರುವ ಸಮಿತ್ತುಗಳೂ ಸುವಾಸನೆಯ ವಸ್ತುಗಳನ್ನು ಕೂಡಿಸುವವರ ಮನೆ ಬಾಗಿಲುಗಳಲ್ಲಿ ಚೆಲ್ಲಿರುವ ಪರಿಮಳಪುಡಿಗಳೂ ಬಲವುಮುನಿಸಿನ ಮಡದಿಯರು ಎಸೆದ ಮಲರ್ಮಾಲೆಗಳೂ ಬೀದಿಗಳಲ್ಲಿ ದೇವತೆಗಳಿಗೆ ಕೊಡಲ್ಪಟ್ಟ ಬಲಿಗಳೂ ತಂಬುಲವೂ ಮೊದಲಾದ ಕುಪ್ಪೆಗಳನ್ನು ಗುಡಿಸಿ ಚಂದನದ ಕೆಸರಿನಲ್ಲಿ ದೂಳಡಗಿಸಿ ಅರಳುಮೊಗ್ಗು ಹಲವನ್ನು ಹರಡಿರುವ ಬಾಗಿಲುಗಳಲ್ಲಿ ಮಾಡಿರುವ ಅಲಂಕಾರ ಗಳನ್ನು ಉರುಳಿಸಿಬಿಟ್ಟ ಚಿಕ್ಕ ಮಕ್ಕಳನ್ನು ಹಿಡಿದುಕೊಂಡು ಹೋಗಿ ಅವರುಗಳ ತಪ್ಪುಕೆಲಸಗಳನ್ನು ತಾಯಿಯರಿಗೆ ತಿಳಿಯಹೇಳುವ ಕೆಲಸದ ಹೆಂಗಸರ ಮೊಳಗೂ, ಚಕ್ರರೂಪವಾದ ಆರು ಯಂತ್ರಗಳು ಬಂದಕ್ಕೊಂದು ಮಾರಾಗಿ ನಿಂತು ನೀರನ್ನು ಸುರಿಯುತ್ತ ನಿಲ್ಲಲು ಚಂದ್ರಾದಿತ್ಯ ಮೊದಲಾದ ಮುಕ್ಕೊಡೆಗಳು ಯಂತ್ರದಿಂದ ಅಲುಗಾಡುತ್ತ ಇರಲು ಬೆಳಗುವ ಜಿನಾಲಯಗಳಲ್ಲಿ ತೀರ್ಥಂಕರರುಗಳ ಚಾತ್ರೆಗಳನ್ನು ಬೆಳಗುವಂತೆ ಎತ್ತಿಹೇಳಿ ಹಿರಿಯರುಗಳು ಅರುಹನನ್ನು ಪೂಜಿಸುವ ಮೊಳಗೂ, ಕಣ್ಣಲ್ಲಿ ಕಂಡವನ್ನು ಕೈಯಲ್ಲಿ ಮಾಡುವ ನಿಪುಣರಾದ ಕಲೆಗಾರರು ಓಲೆಗರಿ, ಬೆಂಡು, ಬಟ್ಟೆ ಮೊದಲಾದುವುಗಳಿಂದ ಕಂಪು ಕಾಣ್ಕೆಗಳಲ್ಲಿ ಸ್ವಲ್ಪವೂ ಬೇರ್ಪಾಟಿಲ್ಲದಂತೆ ಮಾಡಿದ ಎಲೆ, ಚಿಗುರು, ಮುಗುಳು, ಅರಳುಮೊಗ್ಗು, ಮಲರು—ಇವುಗಳನ್ನುಳ್ಳ ಹಲಬಗೆಯ ಮರಗಳನ್ನು ಅಲ್ಲಲ್ಲಿ ಹಂದರುಕಂಬಗಳಲ್ಲೆಲ್ಲ ಕಟ್ಟಿ ಹಾಗೆಯೇ ಮುಂಗೋಡೆಗಳಲ್ಲಿ ಚಿತ್ರಗಳನ್ನು ಬರೆದು ಕಾಲವನ್ನು ತೋರಿಸುವ ಯಂತ್ರಗಳನ್ನು ತಕ್ಕ ಎಡೆಗಳಲ್ಲಿ ಇಟ್ಟು ನೋಡಿದವರ ಕಣ್ಣುಗಳನ್ನು ಮರಳಲು ಬಿಡದಂತೆ ಇನ್ನೂ ಮಾಡಬೇಕಾದ ಅಲಂಕಾರ ಗಳನ್ನೆಲ್ಲ ಅಲ್ಲಲ್ಲಿ ಮಾಡುವವರೆಡೆಯಲ್ಲಿ ಉಂಟಾದ ಮೊಳಗೂ, ಅರಸನ ಕೆಲಸಗಾರರಲ್ಲಿ ಮುದಿಯರಾದವರು ಹಲವರು ನಾಲ್ಕು ಕಡೆಗಳಲ್ಲೂ ಇರುವ ಅಂಗಡಿಬೀದಿಗಳಿಗೆಲ್ಲ ಬಂದು, "ಕಿರೀಟವಲ್ಲದ ಹಿರಿಯೊಡವೆ ಯಾವುದನ್ನಾದರೂ ಯಾರು ಕೇಳಿದರೂ ಒಡನೆ ಪ್ರೀತಿಯಿಂದ ಅವನ್ನು ಕೊಟ್ಟುಬಿಡತಕ್ಕದ್ದು; ಕೊಟ್ಟವಕ್ಕೆ ಇಮ್ಮಡಿಯಾಗಿ ಅರಸ ಆಮೇಲೆ ಸಂತೋಷದಿಂದ ಕೊಡುವುದು ನಿಶ್ಚಯ" ಎಂದು ವರ್ತಕರಿಗೆ ಹೇಳುವ ದೊಡ್ಡ ಮೊಳಗೂ, ಅಲಂಕಾರವಿಲ್ಲದೆ ಸುಮ್ಮನೆ ಓಡಿಹೋಗಿ ಆಟವಾಡು ತ್ತಿರುವ ತಮ್ಮ ಮಕ್ಕಳನ್ನು ಕರೆದು, "ನಮ್ಮಪ್ಪಗಳಿರಾ, ಇಲ್ಲಿ ಬನ್ನಿ. ಹೊಸ ಒಡವೆಗಳನ್ನು ಅಲಂಕರಿಸಿಕೊಂಡು ನಿಮ್ಮ ತಂದೆಗಳೊಡನೆ ನಮ್ಮ ಅರಸರೊಡೆಯನ ಕಲ್ಯಾಣಮಂಟಪಕ್ಕೆ ಹೋಗುವಿರಂತೆ" ಎಂದು ಹೇಳಿ ಒಳ್ಳೆಯ ಉಡೆಗಳನ್ನುಡಿಸಿ ಅವರ ನೆತ್ತಿಯಿಂದ ಕಾಲವರೆಗೂ ಅಲಂಕರಿಸಬೇಕಾದವನ್ನು ಅಲಂಕರಿಸಿ ತಪ್ಪಿ ಮುತ್ತುಕೊಟ್ಟು ಅವರುಗಳನ್ನು ಕಳಿಸುವ ಹೆಂಗಸರ ಮೊಳಗೂ, ಕುಡಿದವರು ಕೈಬಿಡಲಾಗದ ಹಲಬಗೆಯ ಪಾನಗಳನ್ನು ತಮ್ಮ ಮನೆಗಳಲ್ಲಿ ಕೂಡಿಟ್ಟು, "ಬಟ್ಟಲಿಗೆ

ಹೊಯ್ಯಿರಿ; ಬೇರೆಯವರಿಗೂ ಕೊಡಿ; ತೆಗೆದುಕೊಳ್ಳಿ" ಎಂದು ಮಿಗಿಲು ಉತ್ಸಾಹದಿಂದ ಹೇಳುವ ಕಳ್ಳುಣಿಗಳ ಪೆರ್ಮೆಗಳಗೂ, ಹಗೆವರನ್ನು ಗೆದ್ದು ಅವರ ಕರುಳನ್ನು ಮಾಲೆಯಾಗಿ ಸೂಡುವುವೂ, ಮುತ್ತವರು, ಹೆಂಗಸರು, ತೊರವಿಗಳು, ಮಕ್ಕಳು— ಇವರಿಗೆ ಒಂದು ಸಮಯದಲ್ಲೂ ತೊಂದರೆಮಾಡದವೂ ಉತ್ತಮ ಲಕ್ಷಣಗಳುಳ್ಳವೂ ಆಗಿರುವ ಸಾವಿರದೆಂಟು ಆನೆಗಳನ್ನು ಅಲಂಕರಿಸಿ ಅರಸ ಮಿಾಯುವುದಕ್ಕೆ ತಕ್ಕ ಮಿಾಹದ ನೀರುತರುವುದಕ್ಕಾಗಿ ಅವನ್ನು ನಡಸುತ್ತಿರುವ ಮಾವುತರ ದೊಡ್ಡ ಮೊಳಗೂ, ಮಿಗಿಲು ಚೆಲುವುಳ್ಳವರೂ ಹೆತ್ತವರನ್ನೂ ಎದುರುನಿಂತು ನೋಡದವರೂ ಆದ ಕನ್ನೆಯರಲ್ಲಿ 'ಮಿಾಹದ ನೀರು ಹೊರುವುದಕ್ಕೆ ತಕ್ಕ ಪುಣ್ಯವುಳ್ಳವರೇ ಬನ್ನಿ' ಎಂದು ಎದುರುಗೊಳ್ಳುವ ಅರಮನೆಯ ಹೆಂಗಸರ ಪಾಡಗದ ಇನಿದನಿಯೂ, ಇವನ್ನು ಹೋಲುವ ಹಲವುಸಾವಿರ ಘೋಷಗಳೂ ತಮ್ಮಲ್ಲಿ ಒಟ್ಟುಗೂಡಿ ಕಲಕಲ್ಪಟ್ಟು ನಗರ ಹೊಸ ಮದುವೆಯ ಸೊಬಗಿನಿಂದ ಬೆಳಗಿತು. ಕಲ್ಯಾಣಕ್ಕೆ ಬೇಕಾದ ಎಲ್ಲವೂ ಅಣಿಗೊಳಿಸಲಾಯಿತು.

ಆಗ ಜೋಯಿಸರು ಒಂದು ಮುಹೂರ್ತಕಾಲವನ್ನು ತಿಳಿಸಿದರು. ಆರು ಕರ್ಮಮೂಬೆಂಕಿಗಳ ಅರಿದು ದಾರಿಯಲ್ಲಿ ನಡೆಯುವ ವೇದಪಾರಾಯಣಮಾಡುವ ನಾಲಗೆಯುಳ್ಳ ಪುರೋಹಿತನು ಬಂದು ಮದುವೆಯ ಮಂಟಪದಲ್ಲಿ ಉದಯನನನ್ನೂ ವಾಸವದತ್ತೆಯನ್ನೂ ಪೀಠದಲ್ಲಿ ಕೂರಿಸಿ ಎದುರಿನಲ್ಲಿ ಅಗ್ನಿಯನ್ನು ಬೆಳಸಿ ತಕ್ಕ ವಸ್ತುಗಳನ್ನು ತೆಗೆದುಕೊಂಡು ಆಹುತಿಮಾಡಿ ದಿಕ್ಕುಗಳಲ್ಲೆಲ್ಲ ತಕ್ಕ ದೇವತೆಗಳನ್ನು ಪ್ರತಿಷ್ಠೆಮಾಡಿ ಪೂಜಿಸಿ ನಿವೇದಿಸಿ, ಸಾಣೆಯಕಲ್ಲಿನ ಮೇಲೆ ಏರಿಸುವುದು ಮೊದಲಾದ ವಿಶೇಷ ಕ್ರಿಯೆಗಳನ್ನು ನಡಸಿ,

"ನಲ್ನೆಲೆಯ ಲೋಕದಲಿ ಜಂಬುದೀವದ ವೋಲು,
ಹೊನ್ನ ಸಿಡುಮಲೆವೋಲು ನೆಲೆಯಾಗಿ ನಿಲಲಿನರು".

ಎಂದು ಹರಸಿದನು. ಬಳಿಕ ವಾಸವದತ್ತೆಯ ಮುಂಗೈಯನ್ನು ಹಿಡಿದುಕೊಂಡು ಉದಯನ ಬೆಂಕಿಯನ್ನು ಬಲವಂದನು. ಅರುಂಧತಿ ತೋರಿಸುವುದು ಮೊದಲಾದ ಮಿಕ್ಕ ಕರ್ಮಗಳೂ ವಿಧಿಪ್ರಕಾರವಾಗಿ ನೆರವೇರಿದ ಮೇಲೆ ಇಬ್ಬರನ್ನೂ ಮಂಚವೇರಿಸಿದರು.

ಆಮೇಲೆ ಆರನೆಯ ತಿಂಗಳಲ್ಲಿ ಹಿರಿಯ ಜ್ಯೋತಿಷ್ಕ ಸಂಘದವರೂ ಗಣಕರೂ ಉಳಿದವರೂ ಒಂದು ಒಡಲಕೂದಲು ತೆಗಸುವ ವಿಶೇಷವನ್ನೂ ವಿಧಿಪ್ರಕಾರವಾಗಿ ನೆರವೇರಿಸಿದರು.

ಬಳಿಕ, ಉದಯನನಿಗೆ ಮಜ್ಜನಮಾಡಿಸುವುದಕ್ಕಾಗಿ ಮಂತ್ರಿ, ಪುರೋಹಿತ, ಸೇನಾಪತಿ, ದೂತ, ಚಾರಣರೆಂಬ ಐದು ಪರಿವಾರದವರೂ ಗಣಕರು, ಕರ್ಮಕಾರರು,

ಕನಕಪರಿವಾರ, ಬಾಗಿಲುಕಾವಲವರು, ನಗರಜನರು, ಪಡೆಯ ನಾಯಕರು, ಆನೆವೀರರು, ಕುದುರೆವೀರರು ಎಂಬ ಎಂಟು ಆಯದವರೂ ನಿಷ್ಠೆಯುಳ್ಳ ಸಮೀಪ ಪರಿವಾರದವರೂ ಇತರರೂ ಪಕ್ಕಗಳಲ್ಲಿ ದಟ್ಟೈಸಿ ಬರುತ್ತಿರಲು, ಸಾವಿರದೆಂಟು ಆನೆಗಳ ಮೇಲೆ ಕೊಡೆ ಕವಿಸಿ ಸಾವಿರದೆಂಟು ಹೊಂಗೊಡಗಳು ನಡೆದವು. ಆ ಕೊಡಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಅವುಗಳ ಎರಡು ಪಕ್ಕಗಳಲ್ಲೂ ಕನ್ನೆಯರು ಕೂತಿದ್ದರು. ಮೃದಂಗವೂ ಬೇರೆಯ ವಾದ್ಯಗಳೂ ಮೊಳಗಿದವು; ಮುರಜಗಳು ಶಬ್ದಮಾಡಿದವು; ಶಂಖಗಳು ಉಲಿಗೈದವು; ಕಿರುಗುಡಿಗಳೂ ಪೆರ್ಗುಡಿಗಳೂ ಎತ್ತರಕ್ಕೆ ಏರಿ ಅಲುಗಾಡುತ್ತ ಬೆಳಗಿದುವು. ಮೇಲ್ಕಟ್ಟುಗಳ ಕೆಳಗೆ ಹದಿನಾರು ಮಂಗಳವಸ್ತುಗಳನ್ನು ತೆಗೆದು ಕೊಂಡು ಮಂಗಳಮಡದಿಯರು ಮುಂದೆ ಹೋದರು. ಈಟಿ, ಕತ್ತಿ, ಕೋಲು— ಇವನ್ನು ಕೈಯಲ್ಲಿ ಹಿಡಿದುಕೊಂಡ ಕಾವಲುಭಟರು ಕಾಯುತ್ತ ನಡೆದರು. ಈ ರೀತಿಯ ವೈಭವದಿಂದ ನಡೆದು ಬಂದು ಬಾವಿಯಲ್ಲಿ ನೀರನ್ನು ಮೊಗೆದು ತೆಗೆದುಕೊಂಡು ಬಂದು ಉದಯನನ ಎಡಪಕ್ಕದಲ್ಲಿ ವಾಸವದತ್ತೆಯನ್ನು ಕೂರಿಸಿ ಇಬ್ಬರಿಗೂ ವಿಧಿಪ್ರಕಾರವಾಗಿ ಮಜ್ಜನಮಾಡಿಸಿ ಅಲಂಕರಿಸಿದರು. ಆಮೇಲೆ ನಡೆಯಬೇಕಾದುವೆಲ್ಲ ಯಥಾಕ್ರಮವಾಗಿ ನಡೆದುವು. ಬಳಿಕ ಇಬ್ಬರೂ ಇನಿಯ ಉಣವುಗಳನ್ನುಂಡು ಮಿಗಿಲು ಪ್ರೀತಿಗೊಂಡವರಾಗಿ ಸುಖಹೊಂದುವವರಾದರು.

ಆ ಕಾಲದಲ್ಲಿ ಅರಿತವರು ಕೆಲವರು ಉದಯನನ ಬಳಿ ಬಂದು, "ದೇವಾಲಯ ವನ್ನೂ ನಗರವನ್ನೂ ಬಲವರುವುದು ವಿವಾಹಕ್ಕೆ ತಕ್ಕ ವಿಧಿಯಾಗುವುದು" ಎಂದು ಹೇಳಲು ಉದಯನನು ಅದನ್ನು ಅಂಗೀಕರಿಸಿ ಕ್ರಮಪ್ರಕಾರವಾಗಿ ವಾಸವದತ್ತೆ ಯೊಡನೆ ದೇವಸ್ಥಾನಕ್ಕೆ ಹೋಗಿ ಮುಕ್ಕೊಡೆಯ ಕೆಳಗೆ ಬೆಳಗುವ ಅರುಮೆತಪದಲ್ಲಿ ಹಿರಿಯನಾದ ಅರುಹದೇವನನ್ನು ದರ್ಶಿಸಿ, ತನ್ನ ಪ್ರಾರ್ಥನೆಯನ್ನು ನೆರವೇರಿಸಿಕೊಂಡು ಹೊರಕ್ಕೆ ಹೋಗಿ ಮಿಗಿಲು ವೈಭವದಿಂದ ನಗರವನ್ನು ಬಲವಂದನು. ಆಗ ಅವನ ಹೊಸ ಮದುವೆ ವೇಷವನ್ನೂ ವಾಸವದತ್ತೆಯನ್ನೂ ಮೆರವಣಿಗೆಯ ಸೊಗಸನ್ನೂ ನೋಡುವುದಕ್ಕೆ ನಗರದಲ್ಲಿದ್ದ ಗಂಡಸರು ಹೆಂಗಸರೆಲ್ಲರೂ ಬಾಗಿಲುಮಾಡಗಳ ಮೇಲೂ ಕಟ್ಟುಮಲೆಗಳ ಮೇಲೂ ನಗರಸೋಟದ ಅಟ್ಟಣೆಯ ಮೇಲೂ ಏರಿ ಕಂಡು ಹಿಗ್ಗಿದರು. ಅದಾದ ಮೇಲೆ ಆ ಇಬ್ಬರೂ ಅರಮನೆಯನ್ನು ಹೋಗಿ ಸೇರಿ ಒಬ್ಬರ ನ್ನೊಬ್ಬರು ಬಿಟ್ಟಗಲದೆ ಮಿಗಿಲೊಲವುಳ್ಳವರಾಗಿ ಎಣೆಯಿಲ್ಲದ ಆನಂದವನ್ನು ಹೊಂದಿ ಬಾಳುವವರಾದರು.

ಅವರಿಬ್ಬರೂ ಹೀಗೆ ಬಾಳುತ್ತ ಬರುವಲ್ಲಿ, ಹೂಗಳಿನ ಪೆರ್ಮೆಯನ್ನೂ ಬೇರೆ ಬೇರೆ ಎಡೆಗಳಲ್ಲಿ ಹುಟ್ಟಿದ ಆಕಳ ಹಾಲೂ ಜೇನೂ ಕಲೆತಂತೆ ಗೆಳೆಯರು ಬೇರ್ಪಟ್ಟು

ಹೋದರೂ ಅಗಲಿಹೋಗದ ಮಿಗಿಲೊಲವುಳ್ಳ ನಣ್ಪಿನ ಬೆಸುಗೆಯನ್ನೂ ರಾಜಕಾರ್ಯಗಳಲ್ಲಿ ಸುರಿತು ಗುರುತಾದ ಅಮಾತ್ಯತನದ ಬಲ್ಮೆಯನ್ನೂ ಇವನ್ನು ಹೋಲುವ ಇತರ ಗುಣಗಳನ್ನೂ ತನ್ನಲ್ಲಿ ತಾಳಿ ಉಜ್ಜೈನಿಯಲ್ಲಿ ಎಲ್ಲವುಗಳಲ್ಲಿಯೂ ಗೆಲ್ಗೊಂಡು ಬೆಳಗಿದ ಯೂಗಿ, 'ಉದಯನನು ಸೆರೆಪಟ್ಟು ಸಿರಿಯನ್ನು ತೊರೆದನೆಂ'ದು ನೆನೆಯದಂತೆ 'ಪ್ರದ್ಯೋತನನು ತನ್ನ ಮಗಳು ವಾಸವದತ್ತೆಯನ್ನು ಅವನಿಗೆ ಪ್ರೀತಿಯಿಂದ ಕೊಟ್ಟದ್ದರಿಂದಲೇ ತಾನೆ ಅವನು ಪಿಡಿಯ ಮೇಲೆ ಏರಿಸಿಕೊಂಡು ತನ್ನ ನಗರಕ್ಕೆ ಹೋದನು' ಎಂಬುದನ್ನೂ ಬೇರೆ ಸಂಗತಿಗಳನ್ನೂ

ಅರಮನೆಯ ಅಂಗಳದಿ, ಬಾಗಿಲಿನ ಪಕ್ಕದಲಿ,
ಹೊಸಸುದ್ದಿ ತುಂಬಿರುವ ಹೊಸಬರಿರುವೆಡೆಗಳಲಿ,
ಆನೆಯೆಡೆಗಳಲರುಮೆ ತಪದರಾಶ್ರಮಗಳಲಿ,
ದಂಡುಕೇರಿಗಳಲ್ಲಿ, ತಾನೊರೆವ ಭಾಷೆಯನು
ತಿಳಿಯದಾ ದೇಸಿಗರ ಕೇರಿಯಲಿ, ಓದುವರ
ಶಾಲೆಯಲಿ, ಬಿಡದಾವಗಂ ಜೂಜು ನಡೆಯುತಿಹ
ಜೂಜು ಕಟ್ಟೆಗಳ ಬಳಿ, ಕರೆಯಿರದ ನಲ್ಲದಿದು
ಕೆಟ್ಟುದಿದು ಎಂದರಿದು ಅಡಗಿಸದೆ ಕುಡಿಕುಡಿದು
ನಲಿವ ಹೆಂಗಳ ದುಷ್ಟಕೇರಿಯಲಿ, ಚೆಲುವ ನೆರೆ
ಮಾರುವಾ ಕಪ್ಪುಕೊನೆಹೊಳಪುಗಣ್ ನಿಡುಬಳ್ಳಿ
ಮಡದಿಯರು ನೆಲಸಿರುವ ಕಡೆಗಳಲಿ, ಕುದುರೆ ಸಾ
ಲೆಡೆಗಳಲಿ, ಬಟ್ಟೆನೇಯುವರಿರುವ ಕಡೆಗಳಲಿ,
ಮನಕೆ ಮಿಗೆ ಮಂಕು ಕವಿಸುವ ಬೀದಿಯೆಡೆಗಳಲಿ,
ನೀರು ಘಟ್ಟಗಳಲ್ಲಿ, ನಾಟ್ಯ ಕೇರಿಗಳಲ್ಲಿ,
ಸಭೆಗಳಲಿ, ಚೌಕಗಳಲಿ. . . .

(೨, ೮ : ೫೬—೭೦)

ಇವೇ ಮೊದಲಾದ ಎಡೆಗಳಲ್ಲಿ ಹೇಳಿಸಿ ನಗರದವರೆಲ್ಲರೂ ಅರಿಯುವಂತೆ ಮಾಡಿ, ಅಲ್ಲಲ್ಲೆ ಇರುವವರು ಹೇಳುವುವನ್ನೆಲ್ಲ ಕೇಳಿ, ಮಹಾಕಾಳವನದಲ್ಲಿ ಕಾಳಿ ಗುಡಿಯಲ್ಲಿದ್ದ ತನ್ನ ಸಂಗಾತಿಗಳನ್ನೂ ವೀರರುಗಳನ್ನೂ ಉಳಿದವರನ್ನೂ ಒಂದೆಡೆ ಸೇರಿಸಿ ಪ್ರೀತಿಯ ಮಾತು ಹೇಳಿ "ಈ ನಗರ ಬರಿದಾಗುವ ಹಾಗೆ ಇನ್ನು ನೀವುಗಳು ದೊಡ್ಡ ದಾರಿಯಲ್ಲಿ ಹೋಗದೆ ಬೇರೆ ಬೇರೆ ದಾರಿಯಲ್ಲಿ ತನಿತನಿಯಾಗಿ ಹೋಗಿ ಬೇಗನೆ ನಮ್ಮ ದೊರೆಯನ್ನು ಸೇರುವರಾಗಿ" ಎಂದು ಹೇಳಿ, ಅವರುಗಳು ಹೊರಡುವಂತೆ ಮಾಡಿದನು.

ಆ ಮೇಲೆ ಅವನು ಆಗಬೇಕಾದುವನ್ನು ಯೋಚಿಸಿದವನಾಗಿ ತೊರೆದವರ ವೇಷಧರಿಸಿ ನಗರದವರ ಮನಗಳನ್ನು ವಶಪಡಿಸಿಕೊಂಡು ಕಾರ್ಯಗಳನ್ನು ನೆರವೇರಿಸುವವರಾಗಿ ಹೋಗಿ ಮುನಿಗಳ ಆಶ್ರಮದಲ್ಲಿರುವ ತನ್ನ ಗೆಳೆಯರನ್ನು ಕಂಡು ಅಲ್ಲಿರುವ ಮುನಿಗಳು ತಿಳಿದುಕೊಳ್ಳದ ಹಾಗೆ ಬೇರೆಯವನೆಂಬಂತೆ ತನ್ನನ್ನು ತೋರಿಸಿಕೊಂಡು ಹೇಳಬೇಕಾದುವನ್ನು ಹೇಳಿ ಅವರನ್ನು ಉದಯನನ ಬಳಿ ಹೋಗುವಂತೆ ಕಳಿಸಿದನು. ಬಳಿಕ ಅಲ್ಲಿದ್ದ ಮುನಿಗಳೊಡನೆ ಮತವಿಕಲ್ಪಗಳನ್ನೂ ನೀತಿಗಳನ್ನೂ ಕುರಿತು ಹಗಲೆಲ್ಲ ಮಾತಾಡುತ್ತಲೇ ಇದ್ದುಬಿಟ್ಟು ರಾತ್ರಿಯಲ್ಲಿ ಹೊರಹೊರಟು ತನ್ನೊಡನೆ ಮೊದಲೇ ಬಂದು ಆಗಬೇಕಾದುವನ್ನು ಬೇರೆಯವರರಿಯದಂತೆ ಮಾಡುತ್ತಿದ್ದ ಚಾತಕನೆಂಬ ಕುಂಬಾರನ ಮನೆಯನ್ನು ಸೇರಿ ಅಲ್ಲಿದ್ದ ಶಾಂಕಿಯತ್ತ್ಯಾಯನ್ನು ಕಂಡು ನಡೆದುವನ್ನೂ ನಡಸಬೇಕಾಗಿರುವುವನ್ನೂ ಅವಳಿಗೆ ಹೇಳಿ ಹಸಿವನ್ನೂ ಸೆಕೆಯನ್ನೂ ಹೋಗಿಸುವ ಔಷಧಿಯೊಡನೆ ಕಲಸಿದ ಅವಲಕ್ಕಿಯ ಗಂಟನ್ನೂ ತಣ್ಣೀರ ಗಡಿಗೆಯನ್ನೂ ತೆಗೆದುಕೊಂಡು ಹೊರಡುವುದಕ್ಕೆ ಸಿದ್ಧವಾಗಿರುವಂತೆ ಅವಳಿಗೆ ಹೇಳಿದನು.

ಬಳಿಕ ಯೂಗಿ, ಉದಯನನಿಗೆ ಹಿತವನಾದ ಯವನಬೀಡಿನ ನಾಯಕನನ್ನು ಹೋಗಿ ಕಂಡು ಹೇಳಬೇಕಾದುವನ್ನೂ ತಾನು ಹೊರಟುಹೋಗುವುದನ್ನೂ ಅವನಿಗೆ ಹೇಳಿ ಅವನು ಕೊಟ್ಟ ಎತ್ತುಗಳಿಲ್ಲದೆ ಯಂತ್ರದಿಂದ ಮುಂದೆ ಸಾಗುವ ಯಂತ್ರ ಬಂಡಿಯನ್ನು ಕೈಕೊಂಡು, "ಇಲ್ಲಿ ಉಳಿದಿರುವ ಗೆಳೆಯರನ್ನೆಲ್ಲ ಹೊರಹೊರಡುವಂತೆ ಮಾಡಿಬಿಟ್ಟೇ ನೀನು ಹೊರಟು ಬರತಕ್ಕದ್ದು" ಎಂಬುದನ್ನು ಅವನಿಗೆ ಹೇಳಿ ತನಗೆ ಬೇಕಾಗುವವನ್ನೆಲ್ಲ ಆ ಬಂಡಿಯಲ್ಲಿ ಇಟ್ಟುಕೊಂಡು ಶಾಂಕಿಯತ್ತ್ಯಾಯನ್ನೂ ಅದರಲ್ಲಿ ಏರಿಸಿಕೊಂಡು ಅದನ್ನು ಹತ್ತಿ ಹೊರಟು ಹೊರನಗರವನ್ನು ದಾಟಿ ಭೂಮಿಯಲ್ಲಿ ವಿಮಾನವೇರಿಹೋಗುವ ಇಂದ್ರಕುಮಾರನನ್ನು ಹೋಲಿ ಪುಷ್ಪಕನಗರವನ್ನು ಕುರಿತು ನಡೆದನು. ಆಗ ಬೇರೆಯವರರಿಯದಂತೆ ತಂಗಬೇಕಾದ ಎಡೆಗಳಲ್ಲಿ ತಂಗಿ ನಡೆದು ನಾನೂರುನಲವತ್ತು ಎಲ್ಲೆಯಲ್ಲಿ ಆ ಬಂಡಿಯನ್ನು ನಿಲ್ಲಿಸಬೇಕಾದ ಕ್ರಮದ ಪ್ರಕಾರವಾಗಿಯೇ ನಿಲ್ಲಿಸಿ ಶಾಂಕಿಯತ್ತ್ಯಾಯನ್ನು ಒಂದು ರಕ್ಷಣೆಯುಳ್ಳ ಸ್ಥಳದಲ್ಲಿ ಇಳಿಸಿ, ಹಿಂದಿನಿಂದ ಬರುವಂತೆ ಹೇಳಿಬಿಟ್ಟು ತಾನು ಮಾತ್ರ ಪುಷ್ಪಕನಗರವನ್ನು ರಾತ್ರಿ ಹೊತ್ತು ಹೋಗಿ ಸೇರಿ ಯಾರೂ ತಿಳಿದುಕೊಳ್ಳದಂತೆ ತನ್ನ ಬಂಡಿಯನ್ನು ಬಿಚ್ಚಿ ಒಂದು ಕಡೆ ಇಟ್ಟುಬಿಟ್ಟು ವೃಷಭಕನನ್ನು ಕಂಡು ದೊರೆಯ ಸೌಖ್ಯವನ್ನು ಕೇಳಿ ತನ್ನ ಬಳಲಿಕೆಯನ್ನೆಲ್ಲ ಅಲ್ಲಿ ರಾತ್ರಿಯಲ್ಲಿ ಪರಿಹರಿಸಿಕೊಂಡು ಆ ಮೇಲೆ ಆಗಬೇಕಾದುವನ್ನು ಆಲೋಚಿಸಲೆಣಿಸಿ ಬಿಸಿಬಲ್ಮೆಯ ಮ್ಲೇಚ್ಛರು ಬಂದವರನ್ನು ತೊಲಗಿಸುತ್ತಾ ಕಾಯುತ್ತಿರುವ ಮಂತ್ರಶಾಲೆಯಲ್ಲಿ ಅವನೊಡನೆ ರಹಸ್ಯವಾಗಿದ್ದು, ಆನೆಯ

ಮೋಸದಿಂದ ಹಿಡಿಯಲ್ಪಟ್ಟು ಸೆರೆಯಲ್ಲಿ ಸಿಕ್ಕಿದ ಉದಯನನನ್ನು ಬಿಡಿಸಬೇಕೆಂದು ತಾನು ಸತ್ತುಹೋದದ್ದಾಗಿ ಹೆಸರುಮಾಡಿ ಉಜ್ಜೈನಿಯನ್ನು ಸೇರಿದ್ದು ಮೊದಲಾದ ಸುದ್ದಿಗಳನ್ನೆಲ್ಲ ಅವನಿಗೆ ಹೇಳಿದನು. ಕೇಳಿದ ವೃಷಭಕನು.

"ಕೆಟ್ಟಕಾಲದಲಿ ಕೈಬಿಟ್ಟರಿವರೆನ್ನಿ ಸದೆ
ಕೆಳೆಯರೆಂಬುದನು ಸಲೆ ನಾಟಿ ನೆಲೆಗೊಳಿಸಿದೈ"

(೨, ೯ : ೧೧೮–೯)

ಎಂದು ಕೊಂಡಾಡಿದನು.

ಆ ಮೇಲೆ, "ಉದಯನನು ನೀರಹಬ್ಬದಲ್ಲಿ ವಾಸವದತ್ತೆಯನ್ನು ಪಿಡಿಯು ಮೇಲೇರಿಸಿಕೊಂಡು ಬಂದ ಬಳಿಕ ನಡೆದ ಸಂಗತಿಗಳನ್ನು ಹೇಳು" ಎಂದು ಯೂಗಿ ಕೇಳಲು ವೃಷಭಕನು, "ಭದ್ರಾವತಿ ಐನೂರೆಲ್ಲೆಯಷ್ಟು ದೂರ ಓಡಿ ಪಾಲೆ ನೆಲದೆಡೆ ಯಲ್ಲಿ ಪ್ರಾಣಬಿಟ್ಟಿತು. ಉದಯನ ಮೊದಲಾದವರು ನಡೆದು ಬಂದು ಹಗಲುಕಾಲ ಮುಗಿಯುವ ವರೆಗೆ ಒಂದು ಮುಳ್ಳಿಲವ ಮರದ ತೋಪಿನಲ್ಲಿ ಮರಸಿಕೊಂಡು ತಂಗಿದರು. ರಾತ್ರಿಯಲ್ಲಿ ಪಡೆಗಳನ್ನು ಕೂಡಿಸಿಕೊಂಡು ಹೋಗುವುದಕ್ಕೆ ವಸಂತಕನು ಸನ್ನ ಬಳಿ ಬಂದನು. ಉದಯನನು ವಾಸವದತ್ತೆಯನ್ನು ಕಾಪಾಡಿಕೊಂಡು ಒಬ್ಬನೇ ಅಲ್ಲಿದ್ದನು. ಇರುವಲ್ಲಿ ಸೂರ್ಯ ಉದಿಸಿದ ಮೇಲೆ ಆ ಕಾಡಿನಲ್ಲಿರುವ ಶಬರರೂ ಪುಳಿಂದರೂ ಇವರು ಗಳ ಅಡಿಗುರುತುಗಳನ್ನೂ ಪಿಡಿಯ ಅಡಿಗುರುತುಗಳನ್ನೂ ನೋಡಿಕೊಂಡೇ ಬಂದು ಉದಯನನನ್ನು ಕಂಡು ಸುತ್ತಿಕೊಂಡು ಯುದ್ಧಮಾಡತೊಡಗಿದರು. ಅವರುಗಳನ್ನು ಕಂಡು ಸಂಕಟಪಟ್ಟ ವಾಸವದತ್ತೆಯನ್ನು ಕುರಿತು, ಉದಯನನು, 'ಅಂಜಬೇಡ' ಎಂದು ಹೇಳಿ ಕಾಂಚನೆಯೊಡನೆ ಅವಳನ್ನು ತನಿಯಾಗಿ ನಿಲ್ಲಿಸಿಬಿಟ್ಟು ಹೋಗಿ ಬಿಲ್ಲನ್ನು ಬಗ್ಗಿಸಿ ಅಂಬುಗಳನ್ನೆಚ್ಚು ನಲವತ್ತೊಂಬತ್ತುಮಂದಿ ಕಾಡುಬೇಡರುಗಳನ್ನು ಬೀಳಿ ಸಿದನು. ಬೀಳಿಸಲು ಸತ್ತವರ ಸಂಟರು ಭಯಗೊಂಡು ಯುದ್ಧಮಾಡುವುದನ್ನು ನಿಲ್ಲಿಸಿ ಆ ತೋಪಿನ ನಾಲ್ಕು ಕಡೆಯೂ ಬೆಂಕಿಯಿಟ್ಟು ಹೊತ್ತಿಸಿಬಿಟ್ಟು ಓಡಿದರು" ಎಂದು ಹೇಳಿದ ಒಡನೆ ಯೂಗಿ ಮೂರ್ಛೆಗೊಂಡು ದಿಢೀರೆಂದು ಕೆಳಗೆ ಬಿದ್ದನು. ವೃಷಭಕನು ಅವನನ್ನು ಹಿಡಿದುಕೊಂಡು ತಬ್ಬಿ ಆ ಸುದ್ದಿಯನ್ನು ತಾನು ಹೇಳಬೇಕಾದ ಕ್ರಮಪ್ರಕಾರ ವಾಗಿಯೇ ಮೆಲ್ಲನೆ ಹೇಳದೆ ಹೋದದಕ್ಕೆ ಬಹಳ ವ್ಯಥೆಪಟ್ಟು ಶೈತ್ಯೋಪಚಾರಮಾಡಿ ತಿಳಿವುಂಟಾಗಿಸಿ, "ಉದಯನ ಉಸಿರೊಡನೆ ಇದ್ದಾನೆ" ಎಂದು ಹೇಳಿದನು. ಒಡನೆ ಯೂಗಿ ಎದ್ದು ಕೂತು, "ಆ ಮೇಲೆ ನಡೆದುವನ್ನು ಹೇಳು" ಎಂದು ಕೇಳಿದನು.

ಆಗ ವೃಷಭಕನು, "ಆಡುಗಳ ನಡುವೆ ಹಾಯುವ ಸಿಂಹದಂತೆ ಆ ಬೇಡರ ಕೂಟದ ನಡುವೆ ಉದಯನನು ಹಾಯ್ದು ಯುದ್ಧಮಾಡತೊಡಗುವುದನ್ನು ಕಂಡ

ವಾಸವದತ್ತೆ ಬಹಳ ಅಂಜಿ ನಡುಗಿದಳು. ಅವಳನ್ನು ಮೆಲ್ಲನೆ ನಡಿಸಿಕೊಂಡು ಒಂದೆಡೆಯಲ್ಲಿ ಅವನು ನಿಲ್ಲಲು, ರೋಹಿಣಿಯೊಡನೆ ನಿಂತ ತಿಂಗಳನ್ನು ಸುತ್ತಿದ ಪರಿವೇಷದಂತೆ ಬೇಡರುಗಳು ಅವರನ್ನು ಬಳಸಿಕೊಂಡು ತೊಂದರೆ ಉಂಟುಮಾಡಲು ಆರಂಭಿಸಿದರು. ಉದಯನನು 'ನಾವು ಹೂತಿಟ್ಟಿರುವ ದ್ರವ್ಯಗಳನ್ನು ನಿಮಗೆ ತೋರಿಸುವೆವು; ತೊಂದರೆ ಉಂಟುಮಾಡದೆ ಇರಿ' ಎಂದನು. ಅದನ್ನು ಕೇಳಿ ಅವರುಗಳು ಸುಮ್ಮನೆ ನಿಂತರು. ಆಗ ನಾವುಗಳು ಸೇನೆಗಳೊಡನೆ ಹೋದೆವು. ಉದಯನ ನಮ್ಮನ್ನು ಅರಿಯದವನ ಹಾಗೆಯೇ ಅವರುಗಳೊಡನೆ ಸೇರಿ ಮೊದಲಲ್ಲಿದ್ದು ಬಿಟ್ಟು ಆ ಮೇಲೆ ವಾಸವದತ್ತೆಯೊಡನೆ ಒಂದು ಪಕ್ಕದಲ್ಲಿ ನಿಂತನು. ಸೇನೆಯ ಹೆಚ್ಚಿಗೆಯನ್ನು ಕಂಡು ಆ ಬೇಡರು ಓಡಿಬಿಟ್ಟರು. ಬಳಿಕ ಅವರಿಬ್ಬರನ್ನೂ ಕ್ರಮಪ್ರಕಾರವಾಗಿ ಕರೆದುಕೊಂಡು ಜಯಂತಿ ನಗರವನ್ನು ಸೇರಿ ಮದುವೆಮಾಡಿಸಿದೆವು. ಉದಯನನು ವಾಸವದತ್ತೆಯೊಡನೆ ಸುಖಪಟ್ಟು ಬಾಳುವನಾದನು. ಸೂರ್ಯಚಂದ್ರರು ಉದಿಸುವುದೂ ಅಸ್ತಮಿಸುವುದೂ ಅವನಿಗೆ ತಿಳಿಯವು. ತನ್ನ ರಾಜಧಾನಿಯಾಗಿರುವ ಕೌಶಾಂಬಿಯನ್ನು ಕೈವಶಪಡಿಸಿಕೊಂಡು ಆರುಣಿಯೆನ್ನುವ ಅರಸನು ಆಳಿಕೊಂಡು ಬರುವುದನ್ನೂ ಅರಿತಿಲ್ಲ. ಪ್ರಾಣವನ್ನು ಹೋಲುವ ತನ್ನ ತಮ್ಮಂದಿರಾದ ಪಿಂಗಳ ಕಟಕರನ್ನೂ ನೆನೆಯುತ್ತಿಲ್ಲ. ನಹುಷರಾಜನ ಹಾಗೆಯೇ ಕಾಮಸುಖವೊಂದನ್ನೇ ನೆನೆದು ಅದನ್ನೇ ಮೆಚ್ಚಿಕೊಂಡಾಡಿಕೊಂಡು ಉಳಿದುವಕ್ಕೆ ಸಮಯವನ್ನು ಕೊಡದವನಾಗಿದ್ದಾನೆ. ನಾವೇನು ಮಾಡೋಣ!" ಎಂದು ವ್ಯಥೆಗೊಂಡು ಹೇಳಿದನು. ಕೇಳಿದ ಯೋಗಿ, ಹುಲುಸಗು ನಕ್ಕು "ಗೆಳೆಯನೇ! ಇದುವರೆಗೂ ದುಃಖಗೊಂಡಿದ್ದ ಅರಸ ಎಡೆಬಿಡದಂತೆ ಸುಖವನ್ನು ಅನುಭವಿಸುವುದು ಸ್ವಾಭಾವಿಕವೇ ಸರಿ" ಎಂದು ಮೊದಲಲ್ಲಿ ಹೇಳಿಬಿಟ್ಟು ಆಮೇಲೆ ಅಲ್ಲಿ ಬಂದಿದ್ದ ಶಾಂಕಿಯತ್ತಾಯನ್ನು ಬರಿಸಿ ಅವಳ ಬಳಿ ಧರ್ಮಸ್ವರೂಪವನ್ನು ಕೇಳುವವನ ಹಾಗೆಯೇ ಸ್ವಲ್ಪಹೊತ್ತು ಮಾತಾಡುತ್ತಿದ್ದು ಬಿಟ್ಟಗಲದೆ ಹತ್ತಿರದಲ್ಲಿ ನಿಲ್ಲುವ ಬೇಹಿನವರಂಥವರಿಗೆ ಒಂದೊಂದು ಕಾರ್ಯವನ್ನು ಹೇಳಿ ಕಳಿಸಿಬಿಟ್ಟು ಅವಳನ್ನು ಕುರಿತು, "ಉದಯನನನ್ನು ಇನ್ನುಮೇಲೂ ಕಾಪಾಡುವುದು ನಿಮ್ಮ ಕರ್ತವ್ಯವಾಗಿದೆ.

"ಕೇಡಡಸದಂತೆ ಕಾವಲ್ಲಿ ವೀರದಹಾಗೆ
ದೋಷದಿಂ ಕಾವಲ್ಲಿ ಗುರುಗಳಂತೊಂದಾಗಿ
ಕೂಡಿನಡೆವಲ್ಲಿ ಮೇಣುಸಿರಂತೆ, ಮೈಯುಂಡ
ನಲ್ಲದಲ್ಲದುದ ಕಡಿದೊಗೆದು ಸರಿಗೈವುದಕೆ
ತಕ್ಕುದಲ್ಲದುದನೆಸಗುವುದರಿಂ ಹಗೆಯಂತೆ

(೨.೯ : ೨೧೯—೨೩)

ನಡೆದುಕೊಳ್ಳುವುದು. ಪ್ರೀತಿಯುಳ್ಳವರ ಕಾರ್ಯವೆಂಬುದು ನೀವು ಅರಿತಿರುವುದೇ. ಉದಯನನು ಸುಖಭೋಗದ ಕೆಸರಿನಲ್ಲಿ ಇಳಿದಿದ್ದಾನೆ. ಆದ್ದರಿಂದ ಇನ್ನು ಲಾವಾಣ ನಗರದ ಪಕ್ಕದಲ್ಲಿರುವ ಮಲೆಯ ಕಿಬ್ಬರಿಯಲ್ಲಿರುವ ವನವೊಂದರಲ್ಲಿ ,ಅವನನ್ನು ವಿಹರಿಸುವಂತೆ ಮಾಡಿ ಅವನು ಹಾಗೆ ಮಾಡುವ ಕಾಲದಲ್ಲಿ ಒಂದುದಿನ ವಾಸವದತ್ತೆಯನ್ನು ಅವನಿಂದ ಅಗಲಿಸಿ, ಹಾಗೆ ಅಗಲಿಹೋಗುವಲ್ಲಿ ಅವಳಿದ್ದ ಮನೆಯನ್ನು ಬೆಂಕಿಗೆ ಆಹುತಿಯಾಗಿಸಿ ಅವಳನ್ನು ಸುರಂಗದ ದಾರಿಯಲ್ಲಿ ಕರೆದುಕೊಂಡು ಬಂದು ನೀವು ನನ್ನಬಳಿ ಸೇರಿಸಬೇಕು. ನಿಡುದೂರದ ದಾರಿಯ ಪ್ರಯಾಣಕ್ಕಾಗಿ ಇಟ್ಟುಕೊಂಡಿದ್ದ ಅವಲಕ್ಕಿಯನ್ನು ತಿಂದು ಬಿಕ್ಕಳಿಕೆ ಬಂದು ನಾನು ಸತ್ತುಬಿಟ್ಟೆನೆಂಬುದನ್ನು ಅವನಿಗೆ ಹೇಳಿ. ಅವನನ್ನು ಅರಸಾಳ್ಕೆಗೆ ತಕ್ಕ ಅಧಿಕಾರವುಳ್ಳವನಾಗಿ ಮಾಡುವುದು ನಿಮ್ಮ ಕರ್ತವ್ಯ. ಇದು ನಾವುಗಳೆಲ್ಲರೂ ಆಲೋಚಿಸಿದ ಸಂಗತಿ" ಎಂದು ಹೇಳಿ, ಇಂಥ ಎಡೆಯಲ್ಲಿ ತನ್ನನ್ನು ಬಂದು ಕಾಣಬೇಕು ಎಂದು ಅವಳಿಗೂ ಗೆಳೆಯರಿಗೂ ತಿಳಿಸಿಬಿಟ್ಟು ಅವಲಕ್ಕಿ ತಿಂದು ಬಿಕ್ಕಿ ಸತ್ತವನ ಹಾಗೆಯೇ ತನ್ನನ್ನು ತೋರಿಸಿಕೊಂಡನು. ಒಡನೆಯೆ ವೃಷಭಕನೂ ಉಳಿದವರೂ "ನಮ್ಮ ಜೀವಗೆಳೆಯನಾದ ಯೂಗಿ ಸತ್ತಮೇಲೆ ನಾವು ಇನ್ನು ಜೀವದೊಡನೆ ಬಾಳೆವು" ಎಂದು ಅತ್ತು ತಮ್ಮ ದುಃಖವನ್ನು ಹೆರರಿಗೆ ತೋರ್ಪಡಿಸಿದರು. ಬಳಿಕ ಅವರುಗಳು, "ಶ್ರೇಷ್ಠವಾದ ಅರಿವುಳ್ಳವನಾದ ಇವನನ್ನು ಸುಡುವುದು ಕ್ರಮವಲ್ಲ. ಇವನ ಒಡಲನ್ನು ಗಂಗಾ ತೀರದಲ್ಲಿ ಇಡುವುದೇ ತಾನೆ ಕ್ರಮ" ಎಂದು ಹೇಳಿ, ಹೆರರರಿಯದಂತೆ ಅವನ ದೇಹವನ್ನು ಮರಸಿಟ್ಟರು. ಶಾಂಕಿಯತ್ತಾಯನ್ನು ಕುರಿತು, "ನೀವು ಹೋಗಿ ಅರಸನೆಡೆಯಲ್ಲೂ ಅರಸಿಯೆಡೆಯಲ್ಲೂ ಹಿಂದಿನಂತೆಯೇ ಪ್ರೀತಿಯಿಂದ ನಡೆದುಕೊಳ್ಳಬೇಕು. ಯೂಗಿ ಹೇಳಿರುವುವನ್ನು ತಕ್ಕ ಕಾಲದಲ್ಲಿ ನೆರವೇರಿಸಬೇಕು" ಎಂದು ಅವಳನ್ನು ಉದಯನನ ಬಳಿಗೆ ಕಳಿಸಿದರು. ಅದೇ ರೀತಿ ಅವಳು ಹೊರಹೊರಟು ಮರುದ ನೆಲವುಳ್ಳ ದೊಡ್ಡ ಜಯಂತಿ ನಗರವನ್ನು ಹೋಗಿ ಸೇರಿದಳು.

ತಿಂದ ಅವಲಕ್ಕಿ ಬಿಕ್ಕಿಕೊಂಡದ್ದರಿಂದ ಯೂಗಿ ಸತ್ತನೆಂಬ ಸುದ್ದಿ ಎಲ್ಲೆಲ್ಲೂ ಹರಡಿತು.

ಜಯಂತಿ ನಗರವನ್ನು ಸೇರಿದ ಶಾಂಕಿಯತ್ತಾಯಿ ಉದಯನ ಕುಮಾರನನ್ನು ಕಂಡಳು. ತಾಯನ್ನು ಕಂಡ ಕರುವಿನಂತೆ ಅವನು ಪ್ರೀತಿಗೊಂಡು ಉಪಚರಿಸಿ ಪೀಠವೊಂದರಲ್ಲಿ ಅವಳನ್ನು ಕೂರಿಸಿದನು. ಅವಳು ಉದಯನನಿಗೆ ಉಪಚಾರದ ಮಾತುಗಳನ್ನಾಡಿ "ವಾಸವದತ್ತೆಯನ್ನು ಕರೆದುಕೊಂಡು ಬಂದಮೇಲೆ ಉಜ್ಜೈನಿ ನಗರದಲ್ಲಿ ನಡೆದುವು ಇವು" ಎಂದು ಕೆಲವು ಸುದ್ದಿಗಳನ್ನು ಹೇಳಿದಳು. ಆಗ ಅವನು

"ಇನಿಯ ಗೆಳೆಯರ ಕರ್ತವ್ಯಗಳನ್ನು ಮುಗಿಸಿದ ಯೂಗಿ ನಿನ್ನೊಡನೆ ಬಂದಿಲ್ಲವೋ?" ಎಂದು ಪ್ರಶ್ನೆಮಾಡಲು, ಅವಳು ಒಡನೆ ಉತ್ತರ ಹೇಳದೆ ಸ್ವಲ್ಪ ಹೊತ್ತು ಯೋಚಿಸಿ ಆಮೇಲೆ, "ನೀನು ವಾಸವದತ್ತೆಯನ್ನು ಆನೆಯ ಮೇಲೆ ಏರಿಸಿಕೊಂಡು ಬಂದ ರಾತ್ರಿ ಅಲ್ಲಿ ಯುದ್ಧಮಾಡುವುದಕ್ಕೆ ಬಂದ ವೀರರುಗಳನ್ನೆಲ್ಲ ಗೆದ್ದು ಆ ನಗರದ ಒಳಗೂ ಹೊರಗೂ ಉಳ್ಳವರು ತಮತಮಗೆ ತೋರಿದಂತೆಯೇ ಹೇಳುವುವನ್ನೆಲ್ಲ ಕೇಳಿ, ಅವನು ಆಮೇಲೆ ಮಾಡಿಸಬೇಕಾದುವನ್ನೆಲ್ಲ ಅಲ್ಲಿ ಮಾಡಿದನು. ಆಗ ರಾತ್ರೆ ಹೊತ್ತಿನಲ್ಲಿ ಮರೆಸಿಕೊಂಡು ಯಂತ್ರಬಂಡಿಯೊಂದರಲ್ಲಿ ನನ್ನನ್ನೂ ಏರಿಸಿಕೊಂಡು ಈ ಕಡೆ ಬಂದು ತಕ್ಕ ಕಾವುಳ್ಳ ಎಡೆಯೊಂದರಲ್ಲಿ ನನ್ನನ್ನು ಇರುವಂತೆ ಮಾಡಿ, 'ಬೇಡರುಗಳ ಇರ್ಕೆಯೆಡೆಯಾಗಿರುವ ಈ ಎಡೆಯಲ್ಲಿ ಮಾಡಬೇಕಾಗಿರುವ ಕಾರ್ಯಗಳನ್ನು ಮಾಡಿ ಬರುವೆನು. ನೀವು ಅರಸನ ಬಳಿ ಹೋಗಿ' ಎಂದು ಹೇಳಿ ನನ್ನನ್ನು ಕಳಿಸಿ ತಾನು ಹಿಂದೆ ತಂಗಿಬಿಟ್ಟನು" ಎಂದಳು. ಉದಯನನು ಅವಳನ್ನು ಕುರಿತು, "ವಾಸವದತ್ತೆಯನ್ನು ನೋಡಿಬಿಟ್ಟು ಬನ್ನಿ" ಎಂದನು.

ಶಾಂಕಿಯತ್ತಾಯಿ ಕರುವನ್ನು ಕಾಣುವ ಕರೆವಾವಿನಂತೆ ಬಹು ಬಯಕೆಯಿಂದ ಹೋಗಿ ವಾಸವದತ್ತೆಯನ್ನು ಕಂಡಳು. ಎಳವೆಯಿಂದಲೂ ತನ್ನನ್ನು ಕಾಪಾಡಿಕೊಂಡು ಬಂದ ಸಾಕುತಾಯಿಯಾದ್ದರಿಂದ ಅವಳನ್ನು ಕಂಡ ಒಡನೆ ಎದ್ದು ನಲಿವಿನ ಕಣ್ಣೀರು ಉಕ್ಕಿಬರಲು ವಾಸವದತ್ತೆ ಅವಳನ್ನು ತಬ್ಬಿಕೊಂಡು ಬಹುವಾಗಿ ಕೊಂಡಾಡಿದಳು. ಒಡನೆ ಶಾಂಕಿಯತ್ತಾಯಿ, "ಹದಿನಾರುಸಾವಿರ ತಾಯಿಯರೂ ಗೆಳತಿಯರೂ ಉಳಿದವರೂ ನಿನ್ನ ಬಿರಿವನ್ನು ತಾಳಲಾರದವರಾಗಿ ಹಲುಬುತ್ತಿರುವಾಗ ಪ್ರದ್ಯೋತನನು 'ವಾಸವದತ್ತೆಯನ್ನು ಉದಯನನೊಡನೆ ಕಳಿಸಿದೆನು' ಎಂದು ಹೇಳಲು ಕೇಳಿ ಅವರುಗಳು ವ್ಯಥೆ ತಣಿದು ಬದುಕಿಕೊಂಡರು" ಎಂದು ಹೇಳಲಾಗಿ ವಾಸವದತ್ತೆ ಮತ್ತೂ ತಮ್ಮವರನ್ನು ನೆನೆದು ದುಃಖಪಡುವವಳಾದಳು. ಶಾಂಕಿಯತ್ತಾಯಿ ಅವಳ ಕಣ್ಣೀರನ್ನು ತನ್ನ ಬೆರಳಿನಿಂದ ತೊಡೆದು, "ನನ್ನ ಬೊಂಬೆಯೇ, ಹುಟ್ಟಿದ ಮನೆಯವರನ್ನೇ ನೆನೆದು ನೀನು ಹೀಗೆ ದುಃಖಪಡಬೇಡ. ಹಾಗೆ ಮಾಡುವುದು ಮಂಗಳ ಮಡದಿಯರ ರೀತಿಯಲ್ಲ" ಎಂದು ಹೇಳಿ ಅವಳನ್ನು ಒಡನೆ ಕರೆದುಕೊಂಡು ಹೋಗಿ ಅಲ್ಲಿ ಬಹಳ ಎತ್ತರವಾಗಿದ್ದ ಮಾಡುಬೆಟ್ಟವೊಂದರ ಮೇಲೆ ಹತ್ತಿಸಿ ಅದರ ನೆತ್ತಿಯಲ್ಲಿ ನಿಲ್ಲಿಸಿ, "ಮಗಳೇ! ನೋಡು. ಅದೋ ಅಲ್ಲಿ ಕಾಣುತ್ತದೆಯಲ್ಲಾ ಅದೇ ಅರಸರ ಪೆರ್ಮನಾಗಿರುವ ನಿಮ್ಮ ತಂದೆಯ ನಗರ. ಏಕೆ ಚಿಂತೆಪಡುತ್ತೀಯೆ?" ಎಂದು ಅವಳು ಸಂತೋಷಪಡುವಂತೆ ಹೇಳಿ, ಬಳಿಕ ಕಾಮಸುಖದಲ್ಲಿ ಮುಳುಗಿ ತನ್ನ ಅರಸುಬಾಧ್ಯತೆಯನ್ನೂ ನಗರವನ್ನು ಹಗೆ ತೆಗೆದುಕೊಂಡಿರುವುದನ್ನೂ

ನೆನೆಯದೆ ಇರುವ ಉದಯನನಿಗೆ ಒಳ್ಳೆಯ ಅರಿವುಂಟಾಗಿಸುವುದಕ್ಕಾಗಿ ಯೂಗಿ ಹೇಳಿದ ಬೆಂಕಿ ಕರ್ಮವನ್ನು ಗುಟ್ಟಾಗಿ ತಿಳಿಸಿದಳು. ಅದರಿಂದ,

"ನಲ್‌ನಿರಿಯ ಶಾಸ್ತ್ರಮಾರ್ಗವನು ನೆರೆಯರಿತವನು
ಬಳಲಿ ನವೆಯುತ ನೋಂತು ಗೈದರುವೆಂತಪದಂತೆ
ಮುಂದೆ ಫಲವಿರುವುದನು"

(೨, ೧೦ : ೭೯—೮೧)

ವಾಸವದತ್ತೆ ತಿಳಿದು ಸಮಾಧಾನ ಹೊಂದಿದಳು.

ಆಗ ಶಾಂಕಿಯತ್ತಾಯಿ ಮರೆಯಲ್ಲಡಗಿದ್ದ ಯೂಗಿಯ ಬಳಿ ಹೋಗಿ ನಡೆದುವನ್ನು ಹೇಳಲಾಗಿ, ಅವನು ಉದಯನನ ರೂಪವನ್ನು ಹೋಲುವ ಚಿತ್ರವೊಂದನ್ನು ಪಟದಲ್ಲಿ ಬರೆದು ಆ ರೂಪದಲ್ಲಿ ನಾಲ್ಕು ಕಣ್ಣುಗಳನ್ನು ಬರೆದು ಅವುಗಳಲ್ಲಿ ಮೇಲುಗಡೆ ಇರುವ ಕಣ್ಣನ್ನು ಉಜ್ಜಿ ಮಸುಕಾಗಿ ಮಾಡಿ ಆ ಪಟವನ್ನು ಅವಳಿಗೆ ಕೊಟ್ಟು "ಇದನ್ನು ಉದಯನನಿಗೆ ತೋರಿಸಿ" ಎಂದನು. ಅವಳು ಹೋಗಿ ವಾಸವದತ್ತೆಯೊಡನೆ ಅವನು ಕೂತಿದ್ದ ಸಮಯವನ್ನು ನೋಡಿ ಆ ಪಟವನ್ನು ತೋರಿಸಿದಳು. ಅವನು ಅದನ್ನು ನೋಡಿ ಅದರಲ್ಲಿ ಮಾಡಿದ್ದ ನಯಗೆಲಸಗಳನ್ನು ಕಂಡು ಆಶ್ಚರ್ಯಪಟ್ಟು ಮನುಷ್ಯರ ಅಂಗಗಳಲ್ಲಿ, 'ಅಡಿಗಳೇ ಆಳುಗಳು; ತೋಳ್ ಮಡದಿ; ಹಲ್ಲು ಮಕ್ಕಳು; ಕಣ್ಣು ಗೆಳೆಯರು, ತಲೆ ತಂದೆತಾಯಿಗಳು' ಎಂಬ ಗ್ರಂಥದ ಭಾವವನ್ನು ಅರಿತವನಾದ್ದರಿಂದ ಕಣ್ಣುಗಳು ನಾಲ್ಕರಲ್ಲಿ ಮೇಲಾದ ಕಣ್ಣು ಮಸುಕಾಗಿದ್ದುದನ್ನರಿತು, "ನಮ್ಮ ಗೆಳೆಯರು ನಾಲ್ವರಲ್ಲಿ ಮೇಲ್ಪಟ್ಟವನಾದ ಯೂಗಿಗೆ ಏನೋ ತೊಂದರೆಯುಂಟು" ಎಂದು ಕಳವಳಗೊಂಡು ನೋಡಿದ ಕಾಲದಲ್ಲಿ ಶಾಂಕಿಯತ್ತಾಯಿ, "ಉಜ್ಜೈನಿಯಿಂದ ಬರುತ್ತಿರುವಾಗ ಅವಲಕ್ಕಿಯನ್ನು ತಿಂದು ಬಿಕ್ಕಿ ಅವನು ಸತ್ತುಹೋದನು" ಎಂದಳು. ಒಡನೆ ಉದಯನನು ಕೀಲು ಕೆಟ್ಟ ಯಂತ್ರದಂತೆ ಕಣ್ ಸೊರಗಿ ಕೆಳಗೆ ಬಿದ್ದು ಮೈಮರೆತು ಕೆಡೆದನು. ಅದನ್ನು ಕಂಡ ವಾಸವದತ್ತೆಯೂ ಸಿಡಿಲೇಟು ತಿಂದ ನಾಗದಂತೆ ದುಃಖಗೊಂಡು ಅವನ ಎದೆಯ ಮೇಲೆ ಬಿದ್ದಳು. ಅದನ್ನು ತಿಳಿದು ಅರಮನೆಯಲ್ಲಿದ್ದವರೆಲ್ಲರೂ ದುಃಖಪಟ್ಟರು. ಆಗ ಹತ್ತಿರದಲ್ಲಿದ್ದವರು ಶೈತ್ಯೋಪಚಾರದಿಂದ ಉದಯನನ ಮೂರ್ಛೆಯನ್ನು ಹೋಗಿಸಲಾಗಿ ಅವನು ಎದ್ದು ಕಣ್ಣಿನಿಂದ ಸಂಕಟದ ಕಣ್ಣೀರು ಉಕ್ಕಲು,

"ಬಾಸ್ಮುಟ್ಟುವಾ ಕಾನೊಳಾನೆಬೇಟೆಯಲಿ ಸೆರೆ
ಕೊಳಪಟ್ಟು ನಾನು ಗತಿಗೆಟ್ಟು ಹೋದಾ ಬಳಿಕ

ಮರೆಗೊಂಡು ಮೋಸದಿಂ ಹೊಳೆಕರೆಯ ಹಬ್ಬದಲಿ
ಹಗೆದೊರೆಯು ಸಲ್ಮೆಕಾದಲೆ ಪಡೆದ ಕುವರಿಯನು
ತಬ್ಬಿ ನಡೆತರುವೊಲೊಡಗೂಡಿ ಕಳಿಸುತ ಹಿಂದೆ
ಬರುವೆನಾನೆಂದೆಯೈ ! ಹುಸಿ ನುಡಿಯ ನುಡಿದೆಯೈ !

(೨, ೧೦ : ೧೨೫—೩೦)

ಇನ್ನು ಬಾಳಲಾರೆ. ಎಳವೆಯಿಂದಲೂ ತಾಯಿಗಿಂತಲೂ ಹೆಚ್ಚಾಗಿ ನನ್ನಲ್ಲಿ ಪ್ರೀತಿಯುಳ್ಳವನಾಗಿದ್ದೆಯಲ್ಲಾ! ನನ್ನನ್ನು ಒಡನೆ ಕರೆದುಕೊಂಡು ಹೋಗಬೇಕಲ್ಲವೇ? ನೀನು ಮಾತ್ರ ಮೊದಲೆ ತನಿಯಾಗಿ ಹೋಗುವುದು ಕ್ರಮವೇ?" ಎಂದು ಹಲವು ರೀತಿಯಲ್ಲಿ ವಿಲಾಪಿಸಿದನು.

ಅಲ್ಲಿದ್ದ ಅರಿತವರು, "ವಿರೋಧಿಗಳ ಎದುರಿಗೆ ಹೀಗೆ ನೀನು ವ್ಯಥೆಪಡುವುದು ರಾಜತ್ವಕ್ಕೆ ತಕ್ಕದ್ದಲ್ಲ. ಮನಸ್ಸು ಸಡಿಲಬಿಡದೆ ಇರಬೇಕು. ಸತ್ಕರ್ಮ ನೆರವು ಮಾಡುವುದಾದರೆ ಯೂಗಿಯನ್ನು ನೀನು ಪಡೆಯಲಾದೀತು" ಎಂದು ಸಮಾಧಾನ ಪಡಿಸಲು ಅವನು ಮುಂದೆ ಆಗಬೇಕಾದುವನ್ನು ನೆನೆದು ಸ್ವಲ್ಪ ಮಟ್ಟಿಗೆ ವ್ಯಥೆ ತಣಿದು ಸಮಾಧಾನಗೊಂಡನು. ಆದರೂ ಯೂಗಿಯ ನೆನವಿನಿಂದ, ಅಪರ ಪಕ್ಷದಲ್ಲಿ ತಿಂಗಳು ಕಳೆಕುಂದುವುದರ ಹಾಗೆ ಅವನು ಎಲ್ಲ ಬಗೆಯಲ್ಲೂ ಕೊರೆಪಡುವುದನ್ನು ಅರಿತ ಗೆಳೆಯರು, ಅರಸನಿಗೆ ಸೇರಿದ ಎಲ್ಲ ಕಾರ್ಯಗಳನ್ನೂ ಯೂಗಿಯಂತೆಯೇ ಮಾಡುವುದಕ್ಕೆ ತಕ್ಕವನು ರುಮಣ್ವಂತನೇ ಎಂದರಿತು ಆ ಕಾರ್ಯಗಳನ್ನೆಲ್ಲ ಅವನಲ್ಲಿಯೇ ಸೇರಿಸಿದರು. ಅವನು ಹಾಗೆಯೇ ಅರಸನಿಗೆ ಆಗಬೇಕಾದ ಎಲ್ಲವನ್ನೂ ಅರಿತು ಮಾಡುವವನಾದನು.

ಹಾಗೆ ನಡೆಯುತ್ತಿದ್ದ ಕಾಲದಲ್ಲಿ ಒಂದು ದಿನ ರುಮಣ್ವಂತ ಗೆಳೆಯರನ್ನು ಕುರಿತು, "ಅರಸನ ದುಃಖವನ್ನು ನೀಗಿಸತಕ್ಕ ಪರಿಹಾರಮಾರ್ಗಗಳು ಹಲವಿವೆ. ಅವು ಹಗೆಗಳನ್ನು ಗೆದ್ದು ಅವರು ಕೊಡುವ ಕಪ್ಪಗಳನ್ನು ತಂದು ಮುಂದಿಡುವುದು, ಹೆಂಗಸರೊಡನೆ ತೆಪ್ಪದಲ್ಲೇರಿಸಿ ನೀರಾಟವಾಡುವಂತೆ ಮಾಡುವುದು, ಔತಣದೂಟ ಉಣಿಸುವುದು, ಮೊದಲಾದುವು. ಅವುಗಳಲ್ಲಿ ಯಾವುದಾದರೊಂದರಿಂದ ಅರಸನ ಸಂಕಟವನ್ನು ಹೋಗಲಾಡಿಸುವುದರೊಡನೆ ಮಲೆಯ ತಪ್ಪಲಿನಲ್ಲಿರುವ ಮುನಿಗಳ ಹತ್ತಿರ ಹೋಗಿ ಕೇಳಿದರೆ, ನಡೆದುವನ್ನೂ ನಡೆಯುವುವನ್ನೂ ತಿಳಿಸುವರು ಎಂಬುದನ್ನು ಹೇಳಿ ಹಾಗೆಯೇ ಕೇಳಿಸಿಯೂ ಅವನ ದುಃಖವನ್ನು ಹೋಗಿಸಬೇಕು" ಎಂದನು. ಅದನ್ನು ಹೇಳಬೇಕಾದ ಕ್ರಮಪ್ರಕಾರವಾಗಿಯೇ ಉಳಿದ ಗೆಳೆಯರು ಉದಯನನಿಗೆ ಹೇಳಿದರು.

ಕೇಳಿದ ಉದಯನನು, "ಹಾಗೆ ಹೇಳುವ ಮುನಿಗಳೂ ಇದ್ದಾರೋ?" ಎಂದು ಕೇಳಿದಾಗ ಅರುಗಿನಲ್ಲೆ ಇದ್ದ ರುಮಣ್ವಂತ, "ಅರಸೇ, ನಿನ್ನನ್ನು ಬಸಿರಿನಲ್ಲಿ ಹೊತ್ತು ಪೂರ್ಣ ಗರ್ಭಿಣಿಯಾಗಿದ್ದ ಮೃಗಾವತಿ ಬೆಳುದಿಂಗಳು ಮಚ್ಚಿನಲ್ಲಿ ಕೆಂಪನೆಯ ಬಟ್ಟೆಯನ್ನು ಹೊದೆದುಕೊಂಡು ನಿದ್ದೆಮಾಡುತ್ತಿದ್ದಾಗ ಅವಳನ್ನು ಮಾಂಸದ ಮುದ್ದೆಯೆಂದು ಶರಭಪಕ್ಷಿಯೊಂದು ಎತ್ತಿಕೊಂಡು ಹೋಗಿ ವಿಪುಲಗಿರಿಯಲ್ಲಿಡಲು ನೀನು ಅಲ್ಲಿ ಹುಟ್ಟಿ ಬೆಳೆದು ಕಲ್ತು ತೇರಿದವನಾಗಿ ನಿನ್ನ ಸೋದರಮಾವ ವಿಕ್ರನಿಂದ ಹೇಹಯಕುಲಕ್ಕೆ ಸೇರಿದ ದೊರೆತನವನ್ನು ಪಡೆದು ಅರಸಾಳ್ಕೆ ಮಾಡಿಕೊಂಡಿದ್ದೆ; ಆಗ, ಈ ಸಂಗತಿಯನ್ನು ಸ್ವಲ್ಪವೂ ಅರಿಯದ ನಿನ್ನ ತಂದೆ ಕೌಶಾಂಬೀ ನಗರದ ಪಕ್ಕದ್ದಾಗಿರುವ ವನದಲ್ಲುಳ್ಳ ಒಬ್ಬ ಮುನಿಗಳನ್ನು ಬಳಿಸಾರಿ ಮಣಿದು ತನ್ನ ಕೊರತೆಯನ್ನು ಬಿನ್ನಹ ಮಾಡಿಕೊಂಡನು. ಆ ಮುನಿಗಳು ನಡೆದುವನ್ನೂ ನಡೆಯುವುವನ್ನೂ ತಮ್ಮ ಜ್ಞಾನದಿಂದ ಅರಿತು ಹೇಳಿದರು. ಅದನ್ನು ಕೇಳಿದ ಶತಾನೀಕನು ನಿನ್ನನ್ನೂ ನಿನ್ನ ತಾಯನ್ನೂ ಕೌಶಾಂಬಿಗೆ ಕರೆದುಕೊಂಡು ಹೋಗಿ ತನ್ನ ಅರಸಾಳ್ಕೆಯನ್ನು ನಿನ್ನೆಡೆ ಒಪ್ಪಿಸಿ ತೊರೆದನು. ಹಾಗೆಯೇ ಈಗಲೂ ಒಬ್ಬ ಮುನಿಗಳ ಬಳಿಸಾರಿ ಕೇಳಿದರೆ ಎಲ್ಲವನ್ನೂ ತಿಳಿದುಕೊಳ್ಳಬಹುದು. ಯೂಗಿ ಮುನ್ನಿನಂತೆಯೇ ಸತ್ತು ಮುಗಿಸುವ ಕಾರ್ಯ ಯಾವುದಾದರೂ ಇದ್ದರೂ ಇರಬಹುದು. ಅದು ಚೆನ್ನಾಗಿ ತಿಳಿಯಲಿಲ್ಲ" ಎಂದನು. ಕೇಳಿದ ಉದಯನನು ಭೋಜನವಿಹಾರಕ್ಕೆ ಒಡಂಬಟ್ಟನು. ಗೆಳೆಯರೂ ಅದು ಸತ್ಯವಾದದ್ದು ಎಂದರು. ಆ ಸುದ್ದಿಯನ್ನು ವಳ್ಳುವ ಮುದುಕನು ಮುರಜು ಬಾರಿಸಿ ಸಾರಿ ನಗರದವರಿಗೆ ತಿಳಿಸಿದನು.

ಒಡನೆಯೆ ಮುದ್ದುಮಾತಿನ ಮಡದಿಯರೂ ತರುಣರೂ ಬಾನ್ಪೂತಂತಿರುವ ಆ ನಗರ ಬರಿದಾಗುವಂತೆ ಬೇಕಾದುವನ್ನು ತೆಗೆದುಕೊಂಡು ಒಳ್ಳೆಯ ದಿನದಲ್ಲಿ ಹೊರಹೊರಟು ತೇರು ಮೊದಲಾದುವನ್ನೇರಿ ಒಂದು ಕಾಲದಲ್ಲಿ ಬೆಟ್ಟವನ್ನು ಸುತ್ತುವರಿಯುವುದಕ್ಕೆ ಕಡಲು ಎಡೆ ಬದಲಿಸುವ ಹಾಗೆ ಹೋಗಿ ಲಾವಾಣ ನಗರದ ಹತ್ತಿರದಲ್ಲಿರುವುದೂ, ತಕ್ಕವರು ವಾಸಿಸುವ ತಾಪಸಾಶ್ರಮಗಳನ್ನೂ ಕಲ್ತವರು ವಾಸಿಸುವ ದೇವತಾಸ್ಥಾನಗಳನ್ನೂ ಮಿಾಯಲು ಒಳಹೊಕ್ಕವರು ಮರಳುವುದಕ್ಕೆ ಮನಸ್ಸು ಬರದ ದೋಣಿಗಳನ್ನೂ ಹೊಳೆಗಳನ್ನೂ ಗುಡಿಗಳನ್ನೂ ಗುಡಿಸಲುಗಳನ್ನೂ ತನ್ನಲ್ಲಿ ಒಳಕೊಂಡಿರುವುದೂ, ಹಲಸು ಮೊದಲಾದ ಹಲವು ಬಗೆಯ ಮರಗಳು, ಬಳ್ಳಿ ಹಂದರ, ಮೊದಲಾದುವುಗಳಿಂದ ದಟ್ಟವಾದದ್ದೂ ಆದ ಬೆಟ್ಟದ ಕಿಬ್ಬರಿಯನ್ನು ಸೇರಿದರು. ಉದಯನನು ವಾಸವದತ್ತೆ ಮೊದಲಾದವರೊಡನೆಯೂ ಉಳಿದ ಪರಿಜನಗಳೊಡನೆಯೂ ಬಂದು ಅಲ್ಲಿ ತಂಗಿದನು. ಬಿಳಿಯ ಗುಡಾರ, ತೊಲೆಯ ಮಂಟಪ, ಹಲ

ಮಣಿಗಳ ತೆರೆ, ಪತಾಕೆಯ ಶಾಲೆ, ತೊಟ್ಟಿ ಮೊದಲಾದುವನ್ನು ಎರಡು ಕಡೆಗಳಲ್ಲೂ ಇಟ್ಟಿರುವ ಬೀದಿಗಳಿಂದಲೂ ಅಲ್ಲಲ್ಲೆ ಇರುವ ಸಭೆಗಳಿಂದಲೂ ಸೊಗಸುಗೊಂಡು, ಇಂದ್ರನು ತನ್ನ ನಂದನವನದೊಡನೆಯೂ ಅಂತಃಪುರ ಪರಿವಾರದೊಡನೆಯೂ ಬಂದು ತಂಗಿರುವುದನ್ನು ಹೋಲುವ ಚೆಲುವು ಪಡೆದು ಬೆಳಗಿತು ಆ ಬೀಡು. ಗಂಡಸರೂ ಹೆಂಗಸರೂ ದೊಣೆಹೂವ ಕೊಯ್ದೂ, ಸಾಲವನ್ನು ಸೂಡಿಯೂ, ಕೊಂಬೆ ಹೂವನ್ನು ಅಲಂಕರಿಸಿಕೊಂಡೂ, ಬಳ್ಳಿಹೂ ಕೊಯ್ದೂ, ವಕುಳದ ಬಟ್ಟ ಹೂವುಗಳನ್ನು ಕಟ್ಟಿಯೂ, ಅಶೋಕದ ಕೆಂದಳಿರುಗಳಿಂದ ದಂಡೆ ಕಟ್ಟಿಯೂ, ಮಾಲೆ ಹೆಣೆದೂ ಮಲೆಯ ಸಮೃದ್ಧಿಯನ್ನು ಹೊಗಳಿಯೂ, ಕುರವೆ ನಾಟ್ಯವಾಡಿಯೂ ನವಿಲುಗಳ ಆಟಗಳನ್ನು ಕಂಡು ನಲಿದೂ, ಗಿಳಿಗಳ ಮುದ್ದುಮಾತುಗಳನ್ನು ಕೇಳಿ ಸಂತೋಷಪಟ್ಟೂ, ಹಲವು ಹೆಂಗಸರ ನಡುವೆ ಆನಂದಗೊಂಡು ಬೆಳಗುವ ಅರಸರುಗಳಂತೆ ಹಲವು ಪಿಡಿಗಳ ನಡುವೆ ವಿಹಾರಮಾಡುತ್ತ ಸೊಕ್ಕಿ ನಿಂತ ಕಳಿತರು ಗುಂಪುಗಳನ್ನು ನೋಡಿಯೂ, ನೀರಾಟ ಪಾಡಿಯೂ ನವಣೆ ಹೊಲಗಳಲ್ಲಿಯೂ ದೊಣೆಯನ್ನು ಸುತ್ತುವರಿದ ಬಂಡೆಗಳಲ್ಲಿಯೂ ಬಹು ಎತ್ತರವಾದ ಮರಗಳು ದಟ್ಟವಾಗಿರುವ ಕಾಡುಗಳಲ್ಲಿಯೂ ಹೂತೋಪು ಗಳಲ್ಲಿಯೂ ಬಳ್ಳಿಮಾಡಗಳಲ್ಲಿಯೂ 'ಬೆಂಗೊಡದ ಪಡೆಯ ದೊರೆಯನ್ನು' ಸ್ತೋತ್ರ ಮಾಡಿ ಆರದೊಲವಿನಿಂದ ಸಂತೋಷಗೊಂಡು ವಿಹರಿಸಿ ತಣಿಯದವರಾಗಿ,

ಆಡುತುಂ ಪಾಡುತುಂ ಕೂಡುತುಂ ಅಗಲುತುಂ
ಮುನಿಯುತುಂ ತಣಿಯುತುಂ ಓಡುತುಂ ಅಡಗುತುಂ
ಹುಡುಕುತುಂ ನಲಿಯುತುಂ ಸೊಗವ ಕೊಂಡಾಡುತುಂ

(೨, ೧೨ : ೧೫೨—೪)

ವಿಹಾರಮಾಡಿ ಸಂತೋಷಪಡುವವರಾದರು.

ಹೀಗೆ ಗಂಡಸರೂ ಹೆಂಗಸರೂ ಆ ಮಲೆಯ ಕಿಬ್ಬರಿಯಲ್ಲಿ ವಿಹರಿಸುತ್ತಿರುವಲ್ಲಿ ಐದು ಪರಿವಾರದವರೂ ಎಂಟಾಯದವರೂ ಉದಯನನಿಗೆ ಅಲ್ಲಲ್ಲಿದ್ದ ಇನಿಯ ನೋಟಗಳನ್ನು ತೋರಿಸುತ್ತ ಹೋಗಿ ಅವನನ್ನು ಜೊತೆಗೊಂಡೇ ಬರುವ ಅಂತಃಪುರ ಪರಿವಾರದವರನ್ನು ಹಿಂದೆ ಬರುವಂತೆ ಮಾಡಿ ಅವರುಗಳಿಗೆ ತಕ್ಕ ಕಾಪನ್ನಿಟ್ಟುಬಿಟ್ಟು ಪ್ರಾಚೀನ ಶಾಸ್ತ್ರಗಳ ಹುರುಳನ್ನರಿತು ಬೇರೆಯವರಿಗೂ ಅರಿವುಂಟಾಗಿಸಿ ತಪಸ್ಸು ಮಾಡಿ ಬೆಳಗುವ ಒಬ್ಬ ಮುನಿಗಳ ತಪದೆಡೆಯಾದ ವನವೊಂದನ್ನು ಹೋಗಿ ಸೇರಿದರು. ಮುಕ್ಕೊರೆಗಳನ್ನೂ ನೀಗಿಸಿರುವ ಹಿರಿಯರು ನೆಲಸಿದ್ದುದರಿಂದ ಕೆಟ್ಟ ಮೃಗಗಳು ಮೊದಲಾದುವುಗಳಿಂದ ಉಂಟಾಗುವ ಭಯಕ್ಕೆ ಅದರಲ್ಲಿ ಸ್ವಲ್ಪವೂ ಎಡೆಯಿಲ್ಲ; ಕಾವಲೇ ಬೇಕಾಗಿಲ್ಲದ್ದು ಅದು. ಮೇಲೂ ಮಿಗಿಲಾದ ಸಮೃದ್ಧಿಯುಳ್ಳದ್ದಾಗಿ ಐದು

ತಿಣೆಯ ಮರಗಳೂ ಹಸಿ ತಳಿರಬಳ್ಳಿಗಳೂ ದಟ್ಟವಾಗಿ ತುಂಬಿ ಬಿಸುಪು ಕಳೆದು ನೀರಲ್ಲಿ ಹೊಕ್ಕರೆ ಹೇಗೋ ಹಾಗೆ ತಣ್ಮೆ ಹೊಂದಿ ಊರಿನ ಒಳಒಡೆಯನ್ನು ಹೋಲುವ ವಿಸ್ತಾರವಾದ ಎಡೆಗಳುಳ್ಳದ್ದಾಗಿ, 'ಮಲರ್ಮಣೆಕೊಟ್ಟು, ತಳಿರ್ಕೊಡೆಯೆತ್ತಿ, ಹೂಗೊನೆ ಚವರಿಯ ಪಕ್ಕದಿ ಬೀಸಿ, ಬಗೆಬಗೆಯ ತುಂಬಿಗಳೂ ಕೋಗಿಲೆಗಳೂ ಹಾಡುವ ಮುದ್ದು ಹಾಡುಗಳಿಂದ ಕೇಳುವವರ ಮನಸ್ಸನ್ನು ವಶಪಡಿಸುವುದಾಗಿ, ಬೇರೆಯವರಿಗೆ ಕೊಡಬೇಕೆಂದೆಣಿಸಿ ಹಿಡಿದಿಟ್ಟುಕೊಂಡಿರುವಂತೆಯೇ ತೋರುವ ಹಾಗೆ ಅಮೃತಮಯವಾದ ಹಣ್ಣು ಹಿಡಿದು ಫಲತುಂಬಿದ ಮರಗಳನ್ನೇ ಎಲ್ಲೆಲ್ಲೂ ಪೂರ್ತಿಯಾಗಿ ಪಡೆದು ಬೆಳಗುವುದು ಆ ವನ.

ಅವರುಗಳು ಅದರ ಹೊರಭಾಗವನ್ನು ಸಾರಿ, "ಉದಯನನು ಒಂದು ಕಾರ್ಯವನ್ನು ನೆನೆದು ದರ್ಶಿಸುವುದಕ್ಕೆ ಬಂದಿದ್ದಾನೆ" ಎಂಬುದನ್ನು ಆ ಮುನಿಗಳಿಗೆ ಕ್ರಮಪ್ರಕಾರವಾಗಿಯೇ ಹೇಳಿಕಳಿಸಿದರು. ಮುನಿಗಳು ಅವನ ಹಿರಿಕುಲದ ಹುಟ್ಟನ್ನೂ ಅರುಮೆಗುಣಸಿರಿಯನ್ನೂ ನೆಲೆಯುಸಿರಿಗಳನ್ನು ತನ್ನ ಸಿರಿಸಂತೆಯೇ ಎಣಿಸಿ ಕಾಪಾಡುವ ಕರ್ತವ್ಯವನ್ನೂ ಮನದಂದು ಅವನನ್ನು ಕಾಣಬಯಸಿ ಇಂದ್ರನನ್ನು ಎದುರುಗೊಳ್ಳುವ ದೇವಮುನಿಗಳಂತೆ ಕ್ರಮಪ್ರಕಾರವಾಗಿ ಬರಮಾಡಿಕೊಂಡು ಅಶೋಕ ಮರದ ಅಣಿನೆಳಲಲ್ಲಿ ಮರಳ ಮೇಲೆ ಕೆಡೆದಿದ್ದ ಹಲಬಗೆಯ ಮಲರೊಟ್ಟಿಲ ರೂಪವಾದ ಮಾಡದ ಪೀಠದ ಮೇಲೆ ಕೂತುಕೊಳ್ಳುವಂತೆ ಕೈಯಿಂದ ಸೂಚಿಸಿದರು. ಅವನು ಆ ಮುನಿಗಳಿಗೆ ನಮಸ್ಕಾರಮಾಡಿ ಅವರು ತೋರಿಸಿದ ಎಡೆಯಲ್ಲಿ ಕೂತುಕೊಂಡನು. ಸ್ವಲ್ಪ ಹೊತ್ತಿನ ಮೇಲೆ ಆ ಮರದ ಬುಡವನ್ನು ಸೇರಿ ಯೂಗಿಯನ್ನೇ ನೆನೆದು ಚಿಂತೆಗೊಂಡಿದ್ದನು. ಹಾಗಿರುವಲ್ಲಿ ಅವನು ಹಿಡಿದುಕೊಂಡಿದ್ದ ಬಿಳಿಯ ಹೂವೊಂದು ಕೈಯಿಂದ ಜಾರಿ ಕಾಲ ಕೆಳಗೆ ಬಿತ್ತು. ಅವನ್ನೆಲ್ಲಾ ಅರಿತ ಮುನಿಗಳು ನಿಮಿತ್ತ ಫಲವನ್ನರಿತು ಹೇಳುವುದರಲ್ಲಿ ಮಿಗಿಲು ಬಲ್ಲಿದರಾದ್ದರಿಂದ ಅವನನ್ನು ಕುರಿತು, "ಅರಸ, ನೀನು ಹಸಿಯ (ಜೀವದ) ಮರವನ್ನು ಸೇರಿ ಕುಳಿತದ್ದರಿಂದ ಅದು ನಿನ್ನ ಜೀವಗೆಳೆಯ ಜೀವದಿಂದಿರುವುದನ್ನೂ ಅವನು ಮತ್ತೆ ಬಂದು ನಿನ್ನನ್ನು ಸೇರುವುದನ್ನೂ ಚೆನ್ನಾಗಿ ತೋರಿಸುತ್ತದೆ; ಇದು ತಪ್ಪದು; ತಿಳಿಯುವವನಾಗು. ಹಿಡಿದಿದ್ದ ಬಿಳಿ ಹೂವಿನ ಬೀಳು ನೀನು ಈಗ ಅನುಭವಿಸುವ ಭೋಗಕ್ಕೆ ವಿಘ್ನ ಉಂಟೆಂಬುದನ್ನು ತೋರಿಸುತ್ತದೆ. ಆ ಹೂವು ಬೇರೆಡೆಗೆ ಹೋಗದೆ ನಿನ್ನ ಕಾಲಿನ ಕೆಳ ಎಡೆಯನ್ನು ಹೋಗಿ ಸೇರಿದ್ದರಿಂದ ಆ ಭೋಗವನ್ನು ಮತ್ತೂ ಪಡೆಯುವೆ. ನೀನು ಭೂಮಿಯ ಮೇಲೆ ಕೂತಿದ್ದದ್ದರಿಂದ ನಿನ್ನ ತಲೆ ನಗರವನ್ನೂ ನಾಡನ್ನೂ ಪಡೆದು ಅರಸುಬಾಳ್ವಿಕೆಯನ್ನೂ ಪಡೆಯುವೆ. ಸ್ವಲ್ಪವೂ ಸಂದೇಹವಿಲ್ಲ. ಮುಂದಿನ ಕಾಲದಲ್ಲಿ ನಿನಗೆ ಚಾರಣರ

ಉಪದೇಶವೂ ಉಂಟು. ನಿನ್ನ ಆಯುರ್ದಿನದ ಅಳವು ಇಷ್ಟು" ಎಂದು ಹೇಳಿದರು. ಉದಯನನು, "ಇವರ ಅನುಗ್ರಹ ನುಡಿ ನಿಶ್ಚಯವಾಗಿಯೇ ಇರಬೇಕು" ಎಂದೆಣಿಸಿ, ಯೋಗಿಯನ್ನು ಪಡೆದವನಂತಾಗಿ ನಮಸ್ಕರಿಸಿ ಅವರಿಂದ ಅಪ್ಪಣೆ ಪಡೆದು ಹೊರ ಹೊರಟು ಹೋಗಿ ವಾಸವದತ್ತೆಯನ್ನು ಸೇರಿ ಅವಳೊಡನೆ ಅಲ್ಲಿ ತನಗೆ ಅಣಿಮಾಡಿದ್ದ ಪಟಮಾಡದಲ್ಲಿ ವಾಸಮಾಡುವವನಾದನು.

ಹಾಗೆ ವಾಸಮಾಡಿದ ಉದಯನನು ಒಂದು ರೀತಿ ಚಿಂತೆ ತೀರಿ ವಾಸವದತ್ತೆಯೊಡನೆ ಹೋಗಿ ಕಾಡುತೊರೆಗಳ ಕಡಿದು ಹೊನಲಲ್ಲಿ ನಿಂತು ನೀರಾಡಿಯೂ, ಹಲರಂಗು ಮಲರುಗಳು ಹೂತು ಮೇಲುಮುಚ್ಚಳ ತೆರೆದ ಒಡವೆ ಪೆಟ್ಟಿಗೆಯಂತೆ ತೋರುವ ಕಿರುಬಾಯ್ದೊಣೆ ನೀರಿನಲ್ಲಿ ಮದ್ದಳೆಯುಲಿಯನ್ನು ಉಂಟುಮಾಡಿ ಆ ತಾಳಕ್ಕೆ ತಕ್ಕಂತೆ ಹಾಡಿಯೂ, ಕಾಡಿನಲ್ಲಿರುವ ವನದೇವತೆಗಳನ್ನು ಹೋಲುವವರೂ ಓಲೆಹಾಕಿಕೊಂಡವರೂ ಹೂದಂಡೆ ಮುಡಿದವರೂ ಒಡವೆತೊಟ್ಟವರೂ ಗೊಂಚಲೆಲೆತಳೆದವರೂ ಮಾಲೆ ಧರಿಸಿದವರೂ ಆದ ಹಲವು ಬಗೆಯ ಹೆಂಗಸರ ನಡುವೆ ನಿಂತು ಅವರುಗಳ ಆಟವನ್ನು ಕಂಡು ಹಾಡುಗಳನ್ನು ಕೇಳಿ ಸಂತೋಷಪಟ್ಟೂ, ಬಂಡೆಯ ಒರಳಿನಲ್ಲಿ ಕಾಡುನೆಲ್ಲನ್ನು ಸುರಿದು ಆನೆಯ ಕೊಂಬಿನ ಒನಕೆಯಿಂದ ತವೊತ್ರಡೆಯರ . ಗುಣಗಳನ್ನು ಹೊಗಳಿಕೊಂಡು ಹಸಿಯುವಲಕ್ಕಿ ಕುಟ್ಟುವ ಬೇಡ ಹೆಂಗಸರ ಸುವ್ವಿ ಒನಕೆ ಹಾಡುಗಳನ್ನು ಕೇಳಿಯೂ, ಅರ್ಬಿಗಳಲ್ಲಿ ನೀರಾಡಿಯೂ, ದೋಣಿಗಳಲ್ಲಿ ವಿಹಾರಮಾಡಿಯೂ, ಹೂವಿನೋಲೆಯ ಹೆಂಗಸರು ಹೊಂಬಟ್ಟಲಲ್ಲಿ ಎತ್ತಿಹಿಡಿದ ತಿಳಿಗಳ್ಳನ್ನೂ ಜೇನನ್ನೂ ಕುಡಿದೂ, ಒಂದು ಜೀವವುಳ್ಳ ಇರೆತಲೆ ಹಕ್ಕಿಯಂತೆ ಒಂದಾಗಿ ಸುಖಪಟ್ಟೂ, ಆ ಮಲೆಯ ತಪ್ಪಲಲ್ಲಿ ಉಂಡಾಡಿ ವಿಹರಿಸಿದನು.

ಒಡನೆ ಬಂದ ಮಗಳುದಿರು ಬಿಳಿಮುತ್ತುಗಳಿಂದ ಕಿರುಮನೆಗಳನ್ನು ಕಟ್ಟಿಯೂ, ಕೋಂಗು ಹೂವುಗಳನ್ನು ಕಿತ್ತು ಇವು ಹೊನ್ನೊಡವೆಗಳೆಂದು ಬೊಂಬೆಗಳ ತಲೆಯಲ್ಲಿಟ್ಟೂ, ಅಶೋಕದ ಕೊಂಬೆಗಳಲ್ಲಿ ಕಟ್ಟಲ್ಪಟ್ಟಿರುವ ಎಲೆಬಳ್ಳಿಯ ಹಗ್ಗದ ಉಯ್ಯಾಲೆಗಳಲ್ಲಿ ಕೂತು ಆಡಿಯೂ, ಮೊಲ್ಲೆಮೊಗ್ಗುಗಳನ್ನು ಕಿತ್ತು ಬಗೆಬಗೆಯ ದಂಡೆಮಾಲೆಗಳನ್ನು ಹೆಣೆದೂ, ತಳಿರುಗಳನ್ನು ಕೈಯಲ್ಲಿ ತೆಗೆದುಕೊಂಡು ಹಲವು ವಿಚಿತ್ರ ರೂಪಗಳು ತೋರುವಂತೆ ಗೀರಿ ತೆಗೆದೂ, ಸಂಪಗೆ ಗುಂಪನ್ನು ಹೋಗಿ ಸೇರಿ ಹಾಡುತ್ತ ಎಲೆಯುಡೆಗಳನ್ನು ರಚಿಸಿಯೂ, ವಾಸವದತ್ತೆಯ ಸಂಪತ್ತನ್ನೂ ವೈಭವವನ್ನೂ ಕುರಾ ಮರದ ನೆರಳಲ್ಲಿ ಬಳೆಗಳುಲಿಯಲು ಎದುರುನಿಂತು ಕುರವೈ ನಾಟ್ಯವಾಡಿಯೂ, ಚೆಂಡಾಡಿಯೂ ಬೊಂಬೆಗಳನ್ನಲಂಕರಿಸಿಯೂ ತಳಿರಹಾಸಿಗೆಯ ಮೇಲೆ ಮಲಗಿ ನಿದ್ರಿಸಿಯೂ ಬಗೆಬಗೆಯ ಪಾನಗಳನ್ನು ಕುಡಿದೂ ವಿಹರಿಸಿದರು.

ಉಳಿದವರುಗಳೂ ತಂತಮಗೆ ಆದಷ್ಟು ಮಟ್ಟಿಗೆ ಹೀಗೆಯೇ ವಿಹಾರಮಾಡಿ ಆನಂದಿಸಿ ಸುಖಪಟ್ಟರು.

ಹೀಗೆ ಉಂಡಾಡಿ ವಿಹರಿಸುತ್ತಿದ್ದ ಕಾಲದಲ್ಲಿ ಒಂದು ದಿನ ಯಾತ್ರೆ ಮಾಡುವವರು ಬಂದು ತಂಗುವ ಮಂಟಪಗಳನ್ನೂ ಬಳ್ಳಿಹಂದರಗಳನ್ನೂ ಇನ್ನೂ ಇವನ್ನು ಹೋಲುವ ಇನಿದಾದ ಹಲವೆಡೆಗಳನ್ನೂ ಉಳ್ಳದ್ದಾಗಿ, ಕಾಣುವನಾದರೆ ಇಂದ್ರನೂ ಬೇರೆಡೆಗೆ ಹೋಗಲು ಮನಸ್ಸುಮಾಡದ ಮಿಗಿಲು ಚೆಲುವು ಪಡೆದು, ಇನಿದಾದ ಹಣ್ಣುಗಳನ್ನೂ ನರುಗಂಪಿನ ಹೂಮರಗಳನ್ನೂ ತನ್ನಲ್ಲಿ ಒಳಕೊಂಡು ನವಿಲು ಮೊದಲಾದ ಹಕ್ಕಿಗಳ ಗುಂಪುಗಳನ್ನುಳ್ಳದ್ದಾಗಿ, ಯಾವಾಗಲೂ ದುಃಖ ಪಡುವವರು ಇಲ್ಲವಾದ್ದರಿಂದ ಜೀವಿಸಮೂಹಗಳು ಚಿಂತೆಯಿಲ್ಲದೆ ಬಾಳುವ ಸೊಗಸುಳ್ಳದ್ದಾಗಿ ಬೆಳಗುವ ಪುಳಿಲೊಂದರಲ್ಲಿ ಮರದೊವಲಿನುಡುಗೆಯನ್ನೂ ಕೆಂಜಡೆಯನ್ನೂ ಸತ್ಯಜ್ಞಾನವನ್ನೂ ವ್ರತವನ್ನೂ ಪಡೆದವರಾದ ಮುನಿಗಳೊಬ್ಬರು ತಪಸ್ಸು ಮಾಡುವ ಆಶ್ರಮವನ್ನು ಸೇರಿ ಅಶೋಕಮರದ ನೆರಳಲ್ಲಿ ಮರಳ ಹಾಸಿನಲ್ಲಿ ಉದಯನನು ವಸಂತಕನೊಡನೆ ಕೂತುಕೊಂಡನು.

ಆ ಹೊತ್ತು ಅವನ ಅನುಮತಿ ಪಡೆದು ವಾಸವದತ್ತೆ ಕಾಂಚನೆಯೊಡನೆ ವನಸಮೃದ್ಧಿಯನ್ನು ನೋಡುವುದಕ್ಕೆ ಹೋದಳು. ಕೆಲಸದಾಳುಗಳೂ ಒಂದೊಂದು ಕೆಲಸವನ್ನು ಮುಂದಿಟ್ಟು ಬೇರೆಬೇರೆ ಎಡೆಗೆ ಹೋದರು. ಅರಸಾಳ್ಕೆಯನ್ನು ತೊರೆದು ಹೆಂಡತಿಯೊಡನೆ ಬಂದು ಅಲ್ಲಿ ತಪಸ್ಸುಮಾಡಿಕೊಂಡಿದ್ದ ಒಬ್ಬ ಅರಸುಮುನಿಗಳ ಪುತ್ರಿಯೂ ಬಹು ಚೆಲುವೆಯೂ ಆದ ವಿರಚಿಕೆಯೆಂಬ ಹೆಸರುಳ್ಳ ಕಿರುಹರೆಯದವಳೊಬ್ಬಳು ಅಲ್ಲಿ ಇದ್ದಳು. ಅವಳು ಮುನಿಗಳನ್ನಲ್ಲದೆ ಬೇರೆ ಗಂಡಸರು ಯಾರನ್ನೂ ಕಂಡರಿಯದವಳು. ಅವಳು ಉದಯನನನ್ನು ಕಂಡು "ಇವನು ಕಾಮನು" ಎಂದೆಣಿಸಿ ಕಾದಲುಗೊಂಡು ತಾನಿಟ್ಟುಕೊಂಡಿದ್ದ ಬೊಂಬೆ ಚೆಂಡುಗಳನ್ನು ಒಂದು ಕಡೆ ಇಟ್ಟುಬಿಟ್ಟು ಮೆಲ್ಲನೆ ಹೋಗಿ, ನಂದ್ಯಾವರ್ತ, ನಾಗ, ಸಿಂಧುವಾರ, ಶೇಫಾಲಿಕೆ, ಕುರುಕತ್ತಿ, ಸುಳ್ಳಿ, ಕಿರುಶೇಷ, ಚಂಪಕ, ಮೊದಲಾದುವುಗಳ ಹೂಗಳನ್ನು ಕೊಯ್ದು ತನ್ನ ಬೊಗಸೆಯಲ್ಲಿ ತುಂಬಿಕೊಂಡು ಬಂದು ಉದಯನನನ್ನು ಬಳಿಸಾರಿ, "ಅಯ್ಯಾ, ಈ ಹೂವುಗಳನ್ನು ಮಾಲೆಗಳಾಗಿ ಕಟ್ಟಿಕೊಡಿ. ಕೊಟ್ಟರೆ ಬೊಂಬೆಯೂ ನಾನೂ ಅಲಂಕರಿಸಿಕೊಳ್ಳುವೆವು" ಎಂದು ನುಡಿದು ಬೇಡಿ ಆ ಮಲರುಗಳನ್ನು ಕೊಟ್ಟಳು. ಅವನು ಅವಳನ್ನು ನೋಡಿ, "ಈ ತಪೋವನದಲ್ಲಿ ವಾಸಮಾಡುವ ಸಿರಿದೇವಿಯೋ ಇವಳು" ಎಂದು ಮೊದಲು ಯೋಚಿಸಿ ಅವಳ ಕಣ್ಣುಗಳ ಎವೆಗಳು ಆಡುವುದನ್ನೂ ಅಲಂಕರಿಸಿಕೊಂಡಿದ್ದ ಮಾಲೆಗಳು ಬಾಡುವುದನ್ನೂ ಕಂಡು "ಇವಳು ಮುನಿಗಳ

ಮಗಳೇ" ಎಂದು ತಿಳಿದುಕೊಂಡು, ದೈವಚಕ್ರವನ್ನು ಪಡೆದಿರುವ ಅರಸರ ಮಡದಿಯರಿಗಿರುವ ಶ್ರೇಷ್ಠವಾದ ಲಕ್ಷಣಗಳನ್ನು ಅವಳಲ್ಲಿ ಕಂಡು, ವೀಣೆಯ ಸರವನ್ನು ಮೀಟುವುದರಿಂದಲೂ ಆಯುಧಗಳನ್ನು ಹಗೆವರ ಮೇಲೆ ಎಸೆಯುವುದರಿಂದಲೂ ಕಲೆಯಾಗಿ ತಿದ್ದಿದ ಅಂಗೈಯಿಂದ ತನ್ನ ಮೇಲ್ಬಟ್ಟೆಯನ್ನು ಹರಡಿ ಅದರಲ್ಲಿ ಆ ಮಲರುಗಳನ್ನು ತೆಗೆದುಕೊಂಡು ಹಲವು ಬಣ್ಣದ ಮಣಿಗಳು ಬಣ್ಣ ಮಾರ್ಪಡುವಂತೆ ಕೆತ್ತಲ್ಪಟ್ಟಿರುವ ರತ್ನಮಾಲೆಯಂತೆ ತೋರುವಹಾಗೆ ಹಲವು ಬಗೆಯ ಬಣ್ಣವುಳ್ಳ ಆ ಹೂವುಗಳನ್ನು ತಕ್ಕ ಎಡೆಗಳಲ್ಲಿಟ್ಟು ಹಲವು ಬಗೆಯ ಮಾಲೆಗಳನ್ನು ಕಟ್ಟಿ ಅವಳಿಗೆ ಕೊಡಲು, ಅವಳು ಆ ಮಾಲೆಯನ್ನು ತಕ್ಕಂತೆ ಅಲಂಕರಿಸಿಕೊಳ್ಳುವುದಕ್ಕೆ ಅರಿಯದವಳಾಗಿ ನೊಂದು ಸಂಕಟಪಟ್ಟಳು. ಅದನ್ನರಿತ ಅವನು, "ಇಲ್ಲಿ ಬಾ" ಎಂದು ಕರೆದು ಅವಳನ್ನು ತನ್ನ ತೊಡೆಯಮೇಲೆ ಕೂರಿಸಿಕೊಂಡು ಅವನ್ನು ಅವಳ ನೆತ್ತಿಯಲ್ಲೂ ತಲೆಯ ಪಕ್ಕದಲ್ಲೂ ಕೂದಲುಗಂಟಿನಲ್ಲೂ ಅಲಂಕಾರವಾಗಿ ಮುಡಿಸಿ ಕೊಂಡಾಡಿ "ಮೆಲ್ಲಗೆ ಹೋಗು" ಎಂದು ಬಿಟ್ಟು ಕಳುಹಲು ವಿರಚಿಕೆ ಹೊರಟುಹೋದಳು.

ಉದಯನನನ್ನು ಬಿಟ್ಟಗಲಿದ ಸ್ವಲ್ಪ ಹೊತ್ತನ್ನು ಒಂದು ವರ್ಷವೆಂದು ನೆನೆದು ಅವನ ಬಿರಿವನ್ನು ತಾಳಲಾರದೆ ಸಂಕಟಪಟ್ಟು, ತಳಿರುಗಳನ್ನೂ ಮಾಲೆಗಳನ್ನೂ ತಳೆದು ಬಳ್ಳಿಯ ಹೂ ಕೊಂಬೆ ನಡೆವಂತೆ ಬೇಗಬೇಗ ಬರುವ ವಾಸವದತ್ತೆ ತನ್ನ ಮುಂದೆ ಬರುವ ವಿರಚಿಕೆಯನ್ನೂ ಅವಳ ತಲೆಗೂದಲಲ್ಲಿ ಅಲಂಕರಿಸಿರುವ ಮಾಲೆಗಳನ್ನೂ ಕಂಡು ಆ ಮಾಲೆಗಳು ಉದಯನನಿಂದ ಕಟ್ಟಿ ಮುಡಿಸಲ್ಪಟ್ಟುವೆಂಬುದನ್ನು ಅರಿತು ಮುನಿದು ಕಣ್ಣುಗಳಿಂದ ಬೆನ್ನೀರ ಹನಿಗಳನ್ನು ಸುರಿಸುತ್ತ ಕೈಯಲ್ಲಿದ್ದ ಮಾಲೆಗಳನ್ನೂ ಎಲೆಗಳನ್ನೂ ಎಸೆದುಬಿಟ್ಟು, "ಕೈಗೆ ಸಿಕ್ಕಿದ ತಾವರೆಹೂವಿನಲ್ಲುಳ್ಳ ಜೇನನ್ನು ಕುಡಿಯದೆ ನಿಡುದೂರದಲ್ಲಿರುವ ನೈದಿಲೆ ಹೂವಿನಲ್ಲಿರುವ ಜೇನನ್ನು ಕುಡಿಯುವುದಕ್ಕೆ ಹೋಗುವ ದುಂಬಿಯನ್ನು ಹೋಲುವವರು ಗಂಡಸರು ಎಂಬುದನ್ನು ಇಂದು ಕಣ್ಣಾರ ಕಂಡೆ" ಎಂದು ಕಡು ಕೋಪಗೊಂಡು ಒಡನೆ ಬರುವ ಶಾಂಕಿಯತ್ತಾಯನ್ನೂ ಕಾಂಚನೆಯನ್ನೂ ಕುರಿತು, "ನನ್ನ ತಂದೆಯ ಬೆಲುವುನಗರಕ್ಕೆ ನನ್ನನ್ನು ಕಳಿಸಿಬಿಡಿ" ಎಂದು ಹೇಳಿ ತನ್ನ ಅಲಂಕಾರಗಳನ್ನು ಕೆಡಿಸಿಕೊಳ್ಳುತ್ತಲೇ ಆ ಮರಗುಂಪಿನ ಒಂದು ಪಕ್ಕಕ್ಕೆ ಹೋಗುವವಳಾದಳು. ಅದನ್ನು ಕಾಂಚನೆಯಿಂದ ಅರಿತ ಉದಯನನು ಭಯಪಟ್ಟು ಹೋಗಿ ಅವಳನ್ನು ತಬ್ಬಿ ಅವಳ ಮುಡಿಯೊಡವೆಗಳನ್ನು ತಿದ್ದಿಯೂ ಪಾದಕಿಂಕಿಣಿಗಳನ್ನು ತೊಡೆದು ದೂಳು ಹೋಗಿಸಿಯೂ ಕೂದಲೊಡವೆಗಳನ್ನು ಕಟ್ಟಿಯೂ ಬಳೆಗಳನ್ನು ಕೈಯಲ್ಲಿ ಸರಿಯಾಗಿ ಏರಿಸಿಯೂ ಕಣ್ಣೀರ ಹನಿಗಳನ್ನು ತೊಡೆದೂ ಕಿವಿಯೊಡವೆಗಳನ್ನು ಸರಿಯಾಗಿ ಅಲಂಕರಿಸಿಯೂ ಹೊಸ ತಳಿರುಗಳನ್ನು ಕೈಯಲ್ಲಿ

ಕೊಟ್ಟೂ ಬೆನ್ನು ಸವರಿಯೂ, "ನೀನು ಹೀಗೆ ಕೋಪಿಸುವೆಯಾದರೆ ನನ್ನ ಪ್ರಾಣಕ್ಕೆ ದೊಡ್ಡ ಕೇಡು ತಂದವಳಾಗುತ್ತೀಯೆ" ಎಂದು ಹೇಳಿಯೂ ಹಲವು ಬಗೆಯಲ್ಲಿ ಸಮಾಧಾನ ಮಾಡಿದನು. ಸಮಾಧಾನ ಮಾಡಿದರೂ ಅವಳು ಕೊಂಚವೂ ಮುನಿಸು ತಣಿಯದೆ ಕಡುಕೋಪದಿಂದಲೇ ಇದ್ದಳು. ಆಗ ಆ ಮಲೆಯ ತಪ್ಪಲಲ್ಲಿದ್ದ ಒಂದು ಹಲಸಿನ ಮರದಿಂದ ಗಂಡು ಕಪಿಯೊಂದು ದಿಢೀರೆಂದು ನೆಗೆದುಬಂತು. ಅದನ್ನು ಕಂಡ ವಾಸವದತ್ತೆ ಅಂಜಿ ನಡುನಡುಗಿ ಬೇಗ ಅವನನ್ನು ತಬ್ಬಿಕೊಂಡಳು. ಅವನು ಮನಹಿಗ್ಗಿ ಬೇರೆ ಯಾವುದೊಂದು ಚಿಂತೆಯೂ ಇಲ್ಲದವನಾಗಿ ಆ ಕಾನಿನಲ್ಲಿ ಅವ ಳೊಡನೆ ಕಾಲವನ್ನು ಇನಿದಾಗಿ ಕಳೆಯುವವನಾದನು.

ಲಾವಾಣಕ ನಗರದ ಹೊರಗೆ ಅಡಗಿ ಇದ್ದ ಯೂಗಿ ಆ ನಗರದಲ್ಲುಳ್ಳ ಅರಮ್ಮ ನೆಗೂ ತಾನಿರುವ ಎಡೆಗೂ ಹೆರರರಿಯದಂತೆ ಒಂದು ಸುರಂಗದ ದಾರಿಯನ್ನು ಮಾಡಿಸಿ ಆ ಮೇಲೆ ಮಾಡಬೇಕಾದುವನ್ನು ರುಮಣ್ವಂತನಿಗೂ ವಸಂತಕನಿಗೂ ತಿಳಿಯಪಡಿಸಿದನು. ಶಾಂಕಿಯುತಾಯಿ ಉದಯನನ ಬಳಿ ಸಾರಿ, "ಅರಸೇ, ಕ್ರೂರ ಮೃಗಗಳು ಓಡಾಡುವ ಮಲೆಯ ತಪ್ಪಲಲ್ಲಿ ಇದ್ದರೆ ಒಂದು ವೇಳೆ ಯಾವುದಾದ ರೊಂದರಿಂದ ವಾಸವದತ್ತೆ ಭಯಪಡಬಹುದು. ಆದ್ದರಿಂದ ಇನ್ನು ಮೇಲೆ ಲಾವಣ ನಗರದಲ್ಲಿರುವ ಅರಮ್ಮನೆಯನ್ನು ಸೇರಿ ಅಲ್ಲಿರುವುದು ಒಳ್ಳೆಯದು" ಎಂದಳು. ಉದಯನನು ಅದನ್ನು ಅಂಗೀಕರಿಸಿ ವಾಸವದತ್ತೆಯೊಡನೆ ಹೊರಟು ಆ ನಗರವನ್ನು ಸೇರಿ ಅರಮ್ಮನೆಯಲ್ಲಿ ಬಾಳುವವನಾದನು. ಹೀಗೆ ಕೆಲದಿನಗಳು ಕಳೆದವು.

ಹೀಗಿರುವಲ್ಲಿ ಗೆಳೆಯರು ಉದಯನನನ್ನು ಕುರಿತು, "ಒಂದು ಕೆಲಸವೂ ಇಲ್ಲದೆ ಸುಮ್ಮನೆ ಇದ್ದರೆ ಸಿರಿದೇವಿ ನಮ್ಮಲ್ಲಿ ಬೇಸರಪಟ್ಟುಕೊಳ್ಳುವಳು. ಆದ್ದರಿಂದ ಎಲ್ಲಿ ಯಾದರೂ ಹೋಗಿ ಬರಬೇಕು" ಎಂದು ಹೇಳಿದರು. ಕೇಳಿದ ಉದಯನನು ವಾಸವದತ್ತೆಯ ಅಗಲಿಕೆಗೆ ಅಂಜಿ ಅದಕ್ಕೆ ಒಡಂಬಡಲಿಲ್ಲ. ಕೆಲವು ದಿನ ಕಳೆದ ಬಳಿಕ ಅಗಲುವುದಕ್ಕೆ ತಕ್ಕ ಅದೃಷ್ಟಕರ್ಮ ಬಂದದ್ದರಿಂದ, ಅರಸನನ್ನು ಕುರಿತು ವಾಸವದತ್ತೆ "ಅಡಿಗಳೇ, ಬೇಟೆಗೆ ಹೋಗಿ ಮೊಗ್ಗು ಮಲರು ತಳಿರು ಎಂಬವುಗಳಿಂದ ಮಾಲೆಕಟ್ಟಿ ನನಗೆ ತಂದುಕೊಡಿ" ಎಂದು ಬೇಡಿದಳು. ಅದನ್ನು ಮಾಡಬಯಸಿದ ಉದಯನನು ಮರುದಿನಬೆಳಗ್ಗೆ ಕುದುರೆಯನ್ನೇರಿ ಕಾಡಿಗೆ ಹೋದನು. ಮಂತ್ರಿಗಳು ತಾವೆಣಿಸಿದ್ದನ್ನು ನೆರವೇರಿಸುವುದಕ್ಕೆ ಅದೇ ಒಳ್ಳೆಯ ಸಮಯವೆಂದು ನೆನೆದು, "ಅರಸನು ಕಾಮ ಸುಖವನ್ನೇ ಮೆಚ್ಚಿ ಉತ್ಸಾಹವಿಲ್ಲದವನಾದನೆಂದು ಬೇಡರು ಊರನ್ನು ಸುಡುವುದಕ್ಕೆ ಬಂದು ಮುತ್ತಿಕೊಂಡರು" ಎಂಬ ಹೇಳಿಕೆ ಎಲ್ಲೆಲ್ಲಿಯೂ ಹರಡುವಂತೆ ಮಾಡಿ ಕೆಲಸ ದಾಳುಗಳಿಂದ ಅರಮ್ಮನೆಯ ನಾಲ್ಕು ಕಡೆಯನ್ನೂ ಬೆಂಕಿಗೆ ತುತ್ತಾಗಿಸಿ ಅಂತಃಪುರಕ್ಕೆ

ಹೋಗಿ, ಹೊರಕ್ಕೆ ಹೊರಟುಹೋಗುವುದಕ್ಕೆ ಸಾಧ್ಯವಾಗದೆ ಬೇಗುದಿಗೊಂಡು ಪೇಚಾಡುತ್ತ ನಿಂತ ವಾಸವದತ್ತೆಯನ್ನೂ ಶಾಂಕಿಯತ್ತಾಯಿಯನ್ನೂ ಕಂಡು, "ಈ ಸುರಂಗಮಾರ್ಗವಾಗಿ ಹೋಗಿ" ಎಂದು ಅವರುಗಳನ್ನು ಕಳಿಸಿಬಿಟ್ಟು, ಅವರುಗಳಿದ್ದ ಎಡೆಯಲ್ಲಿ ಕೊಲೆಸೆರೆಯಾಳುಗಳಿಬ್ಬರನ್ನು ಬಲ್ಮೆಯಿಂದ ಹೊಗಿಸಿ, ವಾಸವದತ್ತೆಯ ಅಡಿಯೊಡವೆ ಮೊದಲುಗೊಂಡು ತಲೆಯೊಡವೆ ಕೊನೆಯಾಗಿ ಉಳ್ಳ ಆಭರಣಗಳನ್ನೆಲ್ಲ ಒಂದೆಡೆಯಲ್ಲಿ ಚೆದರಿಸಿಟ್ಟರು. ಅರಮ್ಮನೆಯ ನಾಲ್ಕು ಕಡೆಯನ್ನೂ ಬೆಂಕಿಗೆ ತುತ್ತಾಗಿಸಿದ ಹುಸಿ ಕಳ್ಳರನ್ನು ಅಟ್ಟಿಕೊಂಡು ರುಮಣ್ವಂತ ಒಂದು ಕಡೆ ಹೋಗುವವನಾದನು.

ಆಗ ಶಾಂಕಿಯತ್ತಾಯಿ ಬಿಸಿಯುಸಿರು ಬಿಟ್ಟು ನಡುಗುವ ವಾಸವದತ್ತೆಯನ್ನು ಸುರಂಗದ ದಾರಿಯಲ್ಲಿ ಕರೆದುಕೊಂಡು ಯೂಗಿ ಇರುವ ಎಡೆಯನ್ನು ಹೋಗಿ ಸೇರಿದಳು. ಹೋಗುವಾಗ ವಾಸವದತ್ತೆಯನ್ನು ಕುರಿತು ಅವಳು, "ನೀನು ಸ್ವಲ್ಪವೂ ಅಂಜಬೇಡ. ನಿನ್ನ ಪ್ರಾಣನಾಯಕನಿಗೆ ಏಳಿಗೆ ತರಬಯಿಸಿ ಅವನ ಪ್ರಾಣಸ್ನೇಹಿತನಾದ ಯೂಗಿ ಮಾಡಿದ ಮಾಯದ ಆಲೋಚನೆ ಇದು" ಎಂದು ಹೇಳಿದಳು. ಆ ಸಮಯ ದಲ್ಲಿ ಯೂಗಿ ತಾನೆಣಿಸಿದ್ದು ನೆರವೇರಿತೆಂದು ಮುಗುಳುನಗು ನಗುತ್ತ ಅಲ್ಲಿ ಬಂದು ನಮಸ್ಕಾರಮಾಡಿ, "ತಾಯೇ, ವೀರಮಹಾಸೇನನ ಒಲವಿನ ಮಗಳೇ, ಕೇಳಿ ಕೃಪೆಮಾಡು. ನಿಮ್ಮ ತಂದೆ ಸೇನೆಗಳಿಂದ ಮುತ್ತಿ ಉದಯನನನ್ನು ಸೆರೆಪಡಿಸಿ ಕಟ್ಟಿ ಹಾಕಿದ್ದರಿಂದ ಪಾಂಚಾಲರಾಯನು ಕೌಶಾಂಬೀ ನಗರವನ್ನು ಕೈವಶಪಡಿಸಿಕೊಂಡನು. ಪಿಂಗಳ ಕಟಕರು ಅಂಜಿ ಓಡಿದರು. ಅವನ್ನು ಅರಿಯದ ನಿನ್ನ ನಾಯಕನು ಯಾವು ದೊಂದನ್ನೂ ನೆನೆಯದೆ ಚಿಂತೆಯನ್ನು ಬಿಟ್ಟು ನಿನ್ನೊಡನೆ ಎಡೆಬಿಡದೆ ವಾಸಮಾಡುವವ ನಾದನು. ಹಗೆಯನ್ನು ಕೊಂದು ಅವನನ್ನು ಒಳ್ಳೆಯ ಪದವಿಯಲ್ಲಿ ನಿರಿಸಬೇಕಾದರೆ ನೀನು ಕೆಲವು ದಿನ ಅಗಲಿರಲೇಬೇಕಾಗಿದೆ. ಆದ್ದರಿಂದ ನಿಮ್ಮ ಕುಲಕ್ಕೆ ಬಂದ ಪಳಿಸೊಲ್ಲು ನೀಗಿಹೋಗುವಂತೆ ಹಿತಹೇಳುವ ಪ್ರಾಣವನ್ನು ಹೋಲುವ ನನ್ನನ್ನು ನೋಡಿಯೂ ನಿನ್ನ ಕುಲವನ್ನು ನೋಡಿಯೂ ನೆಲ ನೆಲೆಮಾರಿದರೂ ಆಕಾಶ ಬಂದು ಕೆಳಗಿಳಿದರೂ ಕೊಂಚವೂ ಕಲಕದ ನಿನ್ನ ದೈವಿಕ ಪಾತಿವ್ರತ್ಯವನ್ನು ನೋಡಿಯೂ ಈ ವರವನ್ನು ಅನುಗ್ರಹಿಸಬೇಕು" ಎಂದು ಬಹಳವಾಗಿ ಬೇಡಿ ಕೇಳಿಕೊಂಡನು. ವಾಸವದತ್ತೆ, "ನಮ್ಮ ಅರಸರ ಪೆರ್ಮೆನಿಗೆ ತಕ್ಕ ಶಾಸ್ತ್ರಗಳಲ್ಲಿ ಬಲ್ಲಿದರಾದ ಮಂತ್ರಿಗಳು ನಾಲ್ವರಲ್ಲಿ ಯೂಗಿ ಸತ್ತನು. ಇಲ್ಲಿ ಬೇಡುತ್ತಿರುವವನು ವೃಷಭಕ ಮೊದಲಾದ ಮೂವರಲ್ಲಿ ಒಬ್ಬನೂ ಅಲ್ಲ. ಇವನು ಯಾರೋ?" ಎಂದು ಎಣಿಸಿ ಚಿಂತೆಗೊಂಡು ಬೇಗ ಉತ್ತರಕೊಡದೆ ಆಲೋಚಿಸುವವಳಾದಳು. ಅವಳ ನೆಲೆಯನ್ನರಿತ ಶಾಂಕಿ

ಯತ್ತಾಯಿ, "ಇವನು ಯೂಗಿಯೇ. ಅರಸನು ಚಿಂತೆತೊರೆದಿರುವುದನ್ನು ಮಾರ್ಪಡಿಸುವುದಕ್ಕಾಗಿಯೇ ತಾನು ಸತ್ತುಹೋದದ್ದಾಗಿ ಹೆಸರು ಮಾಡಿಬಿಟ್ಟು ಇವನು ಇಲ್ಲಿ ಬಂದಿದ್ದಾನೆ. ನೀನು ಚಿಂತೆಯನ್ನು ಬಿಟ್ಟುಬಿಡು" ಎಂದು ತಿಳಿಸಲಾಗಿ ಅವಳು ಸಮಾಧಾನಗೊಂಡಳು. ಯೂಗಿ ಹೇಳಿದ ನ್ಯಾಯಗಳನ್ನೆಲ್ಲ ಮನಸ್ಸಿಗೆ ತಂದುಕೊಂಡವಳಾದರೂ ಅವಳು ಉದಯನನ ಬಿರಿವನ್ನು ನೆನೆದು ಸಂಕಟಪಟ್ಟು ಬಳಿಕ, "ಇವನು ಎಣಿಸಿರುವುದು ಒಳ್ಳೆಯ ಫಲ ಕೊಡುವುದಾಗುವುದು" ಎಂದು ನಿಶ್ಚಯಿಸಿ, "ಎನ್ನೆರೆಯನು ಹಿಂದೆ ಮಾಯದಾನೆಯಿಂದ ಸೆರೆಪಟ್ಟ ಕಾಲದಲ್ಲಿ ಅವನನ್ನು ಬಿಡಿಸುವುದಕ್ಕೆ ಸುಳ್ಳು ಸಾವಿನಲ್ಲಿ ಬಲ್ಲಿದನಾದ ನೀತಿಯಾಳ! ನೀನು ಬಯಸಿದ್ದನ್ನು ಮಾಡುವವನಾಗು" ಎಂದು ಅವನಿಗೆ ಉಪಚಾರದ ಮಾತುಗಳನ್ನು ಹೇಳಿ ಒಂದು ಬಗೆಯಲ್ಲಿ ಚಿಂತೆ ತೊರೆದಿದ್ದಳು.

ವಾಸವದತ್ತೆಯ ಬಿರಿವಿನಿಂದ ಅರಸನು ಕೇಡಿಲ್ಲದೆ ಇರುವುದನ್ನು ಅರಿತುಕೊಳ್ಳುವವರೆಗೂ ಆ ಎಡೆಯಲ್ಲೇ ಇರುವುದಕ್ಕೆ ನಿಶ್ಚಯಿಸಿಕೊಂಡು ಯೂಗಿ ಮುಂದೆ ಆಗಬೇಕಾದ ಕಾರ್ಯಗಳನ್ನು ಕುರಿತು ಆಲೋಚಿಸುವವನಾಗಿ ಆ ಇಬ್ಬರೊಡನೆಯೂ ಅಲ್ಲಿ ಇದ್ದನು.

ಉದಯನ ಕುಮಾರನು ವಾಸವದತ್ತೆ ಬಯಸಿದಂತೆಯೇ ತಳಿರನ್ನೂ ಬಗೆಬಗೆಯ ಹೂಮಾಲೆಗಳನ್ನೂ ತೆಗೆದುಕೊಂಡು ಕುದುರೆಯನ್ನೇರಿ ಅವಳನ್ನು ಕಾಣುವುದಕ್ಕೆ ಬೇಗಬೇಗನೆ ಬರುತ್ತಿರುವಾಗ, ಎಡಗಣ್ಣು ಅದುರಿತು; ಎಡದೋಳು ಅಲುಗಿತು; ಇನ್ನೂ ಕೆಲವು ದುರ್ನಿಮಿತ್ತಗಳೂ ಕೆಟ್ಟ ಶಕುನಗಳೂ ತೋರಿದುವು. ಅವುಗಳ ಫಲವನ್ನು ಆರೈದು ನೋಡುವಲ್ಲಿ "ಪ್ರಾಣನಾಯಕಿ ಬಿಟ್ಟುಹೋದಳು; ಇಲ್ಲಿಲ್ಲ; ಅವಳನ್ನು ಕಾಣದ ಸಂಕಟದಿಂದ ಗೆಳೆಯರೊಡನೆ ತಾನು ಕೆಲಕಾಲ ಹೊರಗೇ ಸುತ್ತಬೇಕಾದೀತು" ಎಂಬುದು ತಿಳಿಯಬಂತು. ಅದರಿಂದ ಮಿಗಿಲು ಕಳವಳಗೊಂಡಿದ್ದ ಅವನು ಎದುರಿನಲ್ಲಿ ಹೆಜ್ಬೊಗೆಯೇಳುವುದನ್ನು ಕಂಡು ಬಹು ವೇಗವಾಗಿ ಬರುವಲ್ಲಿ ವಾಸವದತ್ತೆಯಿದ್ದೆಡೆಯಲ್ಲೂ ಬೆಂಕಿ ಹರಡಿ ತೋರುವುದನ್ನು ಕಂಡನು. ಕಂಡು ಉತ್ಸಾಹಕುಂದಿದವನಾಗಿ ನಡೆಯುವಾಗ ತನಗೆ ಒಂದು ಬಳಲಿಕೆಯೂ ಉಂಟಾಗದಂತೆ ರುಮಣ್ವಂತನೂ ವಸಂತಕನೂ ಹುಸಿಗಳ್ಳರನ್ನು ಗುಂಪಿನೊಡನೆ ಹೊಡೆದೋಡಿಸುವವರಾಗಿ ತನ್ನ ಬರವನ್ನು ನೋಡುತ್ತ ಎದುರಿನಲ್ಲಿ ನಿಂತದ್ದನ್ನು ಕಂಡನು. ಆಗ ಕಾಂಚನಮಾಲೆ,

"ಜಂಬುದೀವವನು ಹಗೆಗಳನೋಡಿಸುತ ಕಾವ
ಸಿರಿದೊರೆಯ ಮಗಳೆ! ಗುಂಪೋಲೆ ಮುಗುದೆಯೇ!

ನೆಲಕೆಲ್ಲ ಬೆಳಕಾಗಿ ವರದಿಂದ ಬಂದವಳೆ!
ಹೆಣ್ಗಳಿಗೆ ಬೆಳಕಾಗಿ ಮೆರೆವರುಮೆ ಮಡದಿಯೇ!
ಹೊನ್ನೇ! ಸಿರಿಯೇ! ತಾಯೇ! ಚೆಲುವೇ!
ನಲ್ಲವಳೆ! ನರುಗಂಪುಮಾಲೆಯಳೆ! ವೀಣೆಗುರೆ
ತಕ್ಕವಳೆ! ಬೆರಗೆಸೆವ ರೂಪದಳೆ! ಜೇನೆಣೆಯ
ನುಡಿಯವಳೆ! ತುಂಬು ತಿಳಿವನು ತಳೆದ ಕಿರಿಯವಳೆ!
ಉದಯನ ಕುಮಾರನುಸಿರೂರೆಯುಹ ದೇವಿಯೇ!
ಹುದಿವ ಬೆಂಕಿಯ ಬಸಿರ ಹೊಕ್ಕೆಯಾ!"

(೨, ೧೮ : ೭೬—೮೫)

ಎಂದು ಕಾಡುಬೆಂಕಿಯ ನಡುವೆ ಸಿಕ್ಕಿಬಿದ್ದು ಸಂಕಟಪಡುವ ನವಿಲಿನಂತೆ ಎಡೆಬಿಡದೆ ಹಲುಬಿ ಪೇಚಾಡಿ ಬಿದ್ದು ಹೊರಳಿ ಹೊರಳಿ ಅಳುವುದನ್ನು ಉದಯನನು ಕಂಡನು. ವಾಸವದತ್ತೆಗೆ ಯಾವುದೋ ಒಂದು ದುಃಖ ಬಂದುಬಿಟ್ಟಿತೆಂದು ನಿಶ್ಚಯಿಸಿ ಅರಿವು ಮರುಳಾಗಿ ಸೊರಗಿ ಸೋತು ಕೀಲುಕಿತ್ತ ಬೊಂಬೆಯಂತೆ ಕುದುರೆಯ ಮೇಲಿಂದ ದಿಢೀರೆಂದು ನೆಲದಮೇಲೆ ಬಿದ್ದನು. ಹಾಗೆ ಅರಿವುಗೆಟ್ಟು ಬೀಳುವ ಅರಸನನ್ನು ಗೆಳೆಯರು ಹತ್ತಿರಹೋಗಿ ಮೂರ್ಛೆ ತಿಳಿಸುವುದಕ್ಕೆ ತಕ್ಕ ವಸ್ತುಗಳನ್ನು ತಂದು ಪರಿಹರಿಸಲು, ಏಳು ಹುಟ್ಟಿನಿಂದ ಸೇರಿ ಬಂದ ಪ್ರೀತಿಯುಳ್ಳ ಅವಳನ್ನು ನೆನೆದು ಕೂಗುತ್ತಲೇ ಅವನು ಎದ್ದನು. ಅವನನ್ನು ಅವರು ಬಳಸಿಕೊಂಡು ಹಲವು ಬಗೆಯಾಗಿ ಸಮಾಧಾನಗಳನ್ನು ಹೇಳಿ ಆರಿಸಿದರೂ ಅವನು ಸಮಾಧಾನಗೊಳ್ಳದೆ "ನನ್ನ ಪ್ರಾಣನಾಯಕಿ ಮುಳುಗಿದ ಬೆಂಕಿಯಲ್ಲಿ ನಾನೂ ಹೊಗುವೆನು" ಎಂದು ಆ ಬೆಂಕಿಯಲ್ಲಿ ಹೊಗುವವನಾದನು. ಆಗ ಗೆಳೆಯರು, "ನಿನ್ನ ಹಗೆಗಳು ಹಿಗ್ಗುವಂತೆ ನೀನು ಈ ರೀತಿ ಎಣಿಸುವುದು ದೊಡ್ಡ ತಪ್ಪಾಗುವುದು. 'ಯೂಗಿ ಇಲ್ಲದೆ ಹೋದರೆ ಉದಯನನಿಗೆ ಯಾವುದೂ ಮಾಡಲಾಗುವುದಿಲ್ಲ' ಎಂದು ಅರಿವಿಲ್ಲದವರು ಆಡುವ ಮಾತು ನಮ್ಮ ಮನಸ್ಸನ್ನು ಸುಡುತ್ತಿರುವುದು. ಅದನ್ನು ನೀನು ಅರಿತು ನಿನ್ನ ಕುಲವನ್ನು ಉದ್ಧಾರಮಾಡುವುದೊಳ್ಳೆಯದು" ಎಂದು ತಪ್ಪಿಸಲು, ಕಡಲು ಕರೆಯನ್ನು ಮೀರದ ಹಾಗೆ ಅವನು ಗೆಳೆಯರ ಮಾತನ್ನು ಮೀರದವನಾಗಿ "ನನ್ನ ಜೀವಾಧಾರೆಯ ಒಡಲನ್ನು ನೋಡಬೇಕು. ಆದ್ದರಿಂದ ಬೇಗನೆ ಬೆಂಕಿಯನ್ನಾರಿಸಿ ಅದನ್ನು ತೋರಿಸಿ" ಎಂದನು.

ಅವರುಗಳು, "ಅರಸರು ಕರಿಕುಹೆಣವನ್ನು ನೋಡುವುದು ಪದ್ಧತಿಯಲ್ಲ" ಎಂದು ಒತ್ತಿ ಒತ್ತಿ ತಿಳಿಸಲು ಅವನು ತಡೆಪಡದೆ ನೋಡುವುದನ್ನೇ ಬಯಸಿ ದುಃಖ

ಪಟ್ಟನು. "ನಮ್ಮ ಮಹಾದೇವಿ ಪ್ರಾಣಬಿಡುವಂತೆ ಇವರು ನೋಡಿ ಸುಮ್ಮನಿರರೆಂದು ಅರಸನು ಎಣಿಸುವನಾದರೆ, ಅದು ನಾವು ಎಣಿಸಿರುವ ಕಾರ್ಯಕ್ಕೆ ಅಡ್ಡಿಯಾಗುವುದು" ಎಂದು ಗೆಳೆಯರು ಅವನನ್ನು ಕರೆದುಕೊಂಡು ಒಂದು ಬಗೆಯಾಗಿ ದೊಡ್ಡ ಸೆಜ್ಜೆಮನೆಗೆ ಹೋಗಿ ಅಲ್ಲಿ ಮಾಡಿದ್ದ ಸುರಂಗ ಅವನಿಗೆ ಕಾಣದಹಾಗೆ ಅದರ ಬಾಗಿಲನ್ನು ಚೆನ್ನಾಗಿ ಮೊದಲು ಮರೆಮಾಡಿಬಿಟ್ಟು ಅಲ್ಲಿ ಕರಕಾಗಿ ಕೆಡೆದಿದ್ದ ಎರಡು ಕೊರೆಹೆಣಗಳನ್ನು ತೋರಿಸಿ, "ಶಾಂಕಿಯತ್ತಾಯೂ ದತ್ತೆಯೂ ಸತ್ತದ್ದು ಸುಳ್ಳಲ್ಲ; ನಿಜವೇ" ಎಂದು ಮನಗೊಳ್ಳುವಂತೆ ಮಾಡಿ ಅಲ್ಲಲ್ಲೆ ಚೆದರಿ ಬಿದ್ದಿರುವುವೂ ಬೆಂಕಿಯಲ್ಲಿ ಮುಳುಗಿದ್ದರಿಂದ ಕಳೆಹೊಮ್ಮಿ ಬೆಳಗುವುವೂ ಆದ ಅವಳ ಆಭರಣಗಳನ್ನು ಎತ್ತಿಕೊಂಡುಬಂದು ಅವನ ಮುಂದೆ ಇಟ್ಟರು. ಹೊನ್ನಮಣಿಮಾಲೆ, ಹಣೆಬಟ್ಟು, ತಿಲಕ, ಕಿವಿಯೊಡವೆ, ಬಂಗಾರಬಳ್ಳಿ, ಎಲೆಯೊಡವೆ, ಹೃದಯವಾಸನೆ, ಕಳಿಕೆ, ಮುತ್ತಿನಹಾರ, ಹಲಮಣಿದಂಡೆ, ಕಿರುಮಣಿತಾಲಿ, ಮುತ್ತಣಿಸರ, ಸರಪಣಿ, ಚಿತ್ರವಾದ ನೆತ್ತಿಮಲಕು, ದಾರ, ತೋಳಲಂಕಾರ, ನಡುವೊಡವೆ, ಬೆರಳೊಡವೆ ಮೊದಲಾದ ಅಲಂಕಾರದೊಡವೆಗಳಲ್ಲಿ ಒಂದೊಂದನ್ನೂ ಅವನು ತನಿತನಿಯಾಗಿ ಎತ್ತೆತ್ತಿ ನೋಡಿ ನೋಡಿ ಕೂಗಿ ಕೂಗಿ ಹಲವುರೀತಿ ಹಲುಬಿ ಗೋಳಾಡಿದನು.

ಆ ಮೇಲೆ ಅವನ ಆಯಾಸವನ್ನೂ ಚಿಂತೆಯನ್ನೂ ಅರಿತ ಮಂತ್ರಿಗಳು, "ಇವನು ನೊರಗಿರುವುದನ್ನರಿತು ಪಾಂಚಾಲರಾಯನು ಯುದ್ಧಮಾಡುವುದಕ್ಕೆ ಬರುವನಾದರೆ ಈ ನಗರದೊಳಕ್ಕೆ ಬರಬಿಡದಂತೆ ತಡೆದುಬಿಡತಕ್ಕದ್ದು" ಎಂದು ಹೇಳಿ ಚತುರಂಗಪಡೆಗಳೊಡನೆ ವೀರರುಗಳನ್ನು ಆ ನಗರವನ್ನು ಸುತ್ತಿಕೊಂಡಿರುವಂತೆ ಮಾಡಿ, ಅವರುಗಳಿಗೂ ಸೇನೆಗಳಿಗೂ ಬೇಕಾದ ಯುದ್ಧಸಾಧನಗಳನ್ನು ಕೊಟ್ಟು ಆಹಾರವಸ್ತುಗಳನ್ನೂ ಅಲ್ಲಲ್ಲೆ ತುಂಬ ಇಟ್ಟದ್ದಲ್ಲದೆ ದೊಡ್ಡಪಡೆಗಳನ್ನು ದಿಕ್ಕುದಿಕ್ಕಿಗೂ ಕಳಿಸಿ ಕಾಪುಕಾಯುವಂತೆ ಮಾಡಿಸಿ ಉದಯನನಿಗೆ ಅದನ್ನು ತಿಳಿಸಿ ಅವನ ದುಃಖವನ್ನು ಒಂದು ರೀತಿಯಲ್ಲಿ ತೀರಿಸುತ್ತಿದ್ದರು. ಮತ್ತೂ ಅವರುಗಳು ಕಾಮದಿಂದುಂಟಾಗುವ ಕೇಡುಗಳನ್ನು ಹಲವು ಬಗೆಯಲ್ಲಿ ಎತ್ತೆತ್ತಿ ಹೇಳಿ ಅವನ ಕೊರಗನ್ನು ಹೋಗಲಾಡಿಸಲು ಅವನು ಸಮಾಧಾನಗೊಂಡಿದ್ದನು.

ಅದನ್ನರಿತ ಗೆಳೆಯರು, "ಅರಸನಿಗೆ ಯಾವುದೊಂದು ಕೆಡುಕೂ ಇಲ್ಲ. ಇನ್ನು ಬೇರೆ ಎಡೆಗೆ ಹೋಗುವುದೊಳ್ಳೆಯದು" ಎಂದು ಯೂಗಿಗೆ ತಿಳಿಸಲು ಅವನು ವಾಸವದತ್ತೆಗೆ ಆ ಸುದ್ದಿಯನ್ನು ತಿಳಿಸಿದನು. ಅವಳು ಮಂತ್ರದಿಂದ ಕಟ್ಟಲ್ಪಟ್ಟ ನಾಗಕನ್ನಿಕೆಯಂತೆ ಯೂಗಿಯ ನೀತಿವಚನಗಳಿಂದ ಕಟ್ಟಲ್ಪಟ್ಟವಳಾಗಿ ತನ್ನ ಕೊರತೆಯನ್ನು ಹೊರಪಡಿಸದೆ ತನ್ನ ನಾಯಕನು ಏಳಿಗೆ ಹೊಂದುವುದನ್ನೇ ದೊಡ್ಡ ಫಲವಾಗಿ

ನೆಸೆದು ಸಮಾಧಾನ ಹೊಂದಿದಳು. ಬಳಿಕ ಆ ಮೂವರೂ ಒಡಲನ್ನು ಬೇರ್ಪಡಿಸು ವುದಾಗಿರುವ ಮದ್ದೊಂದರಿಂದ ಬೇರೆ ಬಣ್ಣವನ್ನು ಹೊಂದಿ ಬ್ರಾಹ್ಮಣರೂಪವನ್ನು ತಾಳಿ ಮೆಲ್ಲನೆ ಹೊರಹೊರಟು ಒಂದು ಮಲೆಯನ್ನು ಸೇರಿ ಅಲ್ಲಿ ತಪಸ್ಸುಮಾಡಿ ಕೊಂಡಿದ್ದ ರುಮಣ್ವಂತನ ತಂದೆಯಾದ ಮುನಿಗಳ ಬಳಿ ಹೋಗಿ ತಾವಿಂಥವರೆಂದು ಅವರಿಗೆ ತಿಳಿಯಪಡಿಸದೆ ಆಗಬೇಕಾದುವನ್ನು ಅವರ ಬಳಿ ಹೇಳಿ ಬಹಳ ಹತ್ತಿರಕ್ಕೂ ಹೋಗದೆ ಬಹಳ ಅಗಲಿಯೂ ಇರದೆ ಅವರ ಆಶ್ರಮದಲ್ಲಿ ತಂಗಿದ್ದರು.

ವಾಸವದತ್ತೆಯ ಬಿರಿವನ್ನು ತಾಳಲಾರದೆ ಬಹಳ ವ್ಯಥೆಗೊಂಡ ಕಾಂಚನೆಗೆ ತಾವು ಎಣಿಸಿರುವ ಕಾರ್ಯವನ್ನು ರುಮಣ್ವಂತನು ಗುಟ್ಟಾಗಿ ತಿಳಿಸಿ ಸಮಾಧಾನ ಪಡಿಸಿ ಅವಳನ್ನು ಕರೆದುಕೊಂಡು ಬಂದು ವಾಸವದತ್ತೆಯ ಬಳಿ ಸೇರಿಸಿಬಿಟ್ಟು ಹೋದನು. ಅವಳು ವಾಸವದತ್ತೆಯನ್ನು ಸಮಾಧಾನಗೊಳಿಸಿ ಅವಳೊಡನೆ ಇದ್ದಳು. ಆಗ ಒಂದುದಿನ ಆ ನಾಲ್ವರೂ, "ನಾವು ಇಲ್ಲಿರುವುದನ್ನು ಪಕ್ಕದವರು ಅರಿತರೆ ನಮ್ಮ ಕಾರ್ಯ ಕೆಟ್ಟುಹೋಗುವುದು" ಎಂದೆಣಿಸಿ, "ಇನ್ನು ನಾವಿರುವುದಕ್ಕೆ ತಕ್ಕ ಎಡೆ ಯಾವುದು?" ಎಂದು ಆಲೋಚಿಸಿ ಒಬ್ಬರಿಗೂ ತಿಳಿಯದಂತೆ ಹೊರಟು ರುಮಣ್ವಂತನ ತಂದೆಯ ಗೆಳೆಯನೂ ಉಗ್ರಕುಲದಲ್ಲಿ ಹುಟ್ಟಿದವನೂ ಆದ ವಿಜಯ ವರನೆಂಬ ಅರಸನ ರಾಜಧಾನಿಯೂ ಅಂಗನಾಡಿನಲ್ಲಿರುವುದೂ ಆದ ಚಂಪೆಯೆಂಬ ಪೆರ್ನಗರದಲ್ಲಿ ಬಾಳುವ ಹಿರಿಯ ಸಿರಿವಂತನಾದ ಮಿತ್ರಕಾಮನೆಂಬ ವರ್ತಕರೊಡೆಯನ ಮನೆಯಲ್ಲಿ ತಂಗಿ ಕಾಲಕಳೆಯುವವರಾದರು.

---

# ಪರಮಾಣು ರಚನೆ

ನಾವು ಪ್ರಪಂಚದಲ್ಲಿ ನಮ್ಮ ಸುತ್ತಲೂ ವಿಧವಿಧವಾದ ಪದಾರ್ಥಗಳನ್ನು ನೋಡುತ್ತಿರುವೆವು. ಕಬ್ಬಿಣ, ಉಪ್ಪು, ಕಲ್ಲುಸಕ್ಕರೆ, ನೀರು ಮುಂತಾದುವನ್ನು ಸಾಮಾನ್ಯವಾಗಿ ನಿತ್ಯವೂ ಕಾಣಬಹುದು. ಅವುಗಳನ್ನು ನಾವು ಅನುಸರಿಸಿ ನಮ್ಮ ನಿತ್ಯ ಜೀವನದಲ್ಲಿ ಉಪಯೋಗಿಸುತ್ತಿರುವೆವು. ಕಬ್ಬಿಣದ ತುಂಡನ್ನು ಎರಡು ಭಾಗವಾಗಿ ಕತ್ತರಿಸಿದರೆ ಪ್ರತಿಯೊಂದು ಭಾಗವನ್ನೂ ಕಬ್ಬಿಣದ ತುಂಡೆಂದೇ ಹೇಳುತ್ತೇವೆ. ಪುನಃ ಒಂದು ಭಾಗವನ್ನು ಎರಡುಚೂರು ಮಾಡಿದರೆ ಕಬ್ಬಿಣದ ತುಂಡುಗಳೆಂದೇ ಕರೆಯುತ್ತೇವೆ. ಈ ತೆರನಾದ ವಿಭಾಜ್ಯತಾಗುಣವು ಎಲ್ಲಾ ಪದಾರ್ಥಗಳಿಗೂ ಇರುವುದಾಗಿ ನಾವೆಲ್ಲರೂ ನಂಬಿದ್ದೇವೆ. ಆದರೆ ಹೀಗೆಯೇ ವಿಭಾಗಿಸುತ್ತಾ ಹೋದರೆ ನಮಗೆ ಎಲ್ಲಾದರೂ ತಡೆಯುಂಟೇ? ಕಟ್ಟಕಡೆಯಲ್ಲಿ ಈ ವಿಭಾಜ್ಯತಾಗುಣಕ್ಕೆ ಏನಾದರೂ ಲೋಪ ಕಂಡುಬರುವುದೇ? ಇಲ್ಲದಿದ್ದರೆ ವಿಭಾಗಮಾಡುವುದರಿಂದ ವಸ್ತುವಿನ ಸಾಮಾನ್ಯ ಗುಣಗಳು ವ್ಯತ್ಯಾಸಹೊಂದುವುವೇ? ಇಂತಹ ಪ್ರಶ್ನೆಗಳು ಅನೇಕವಾಗಿ ತಲೆದೋರುವುವು. ಉಪ್ಪಿನ ಹರಳನ್ನು ಪುನಃ ಪುನಃ ವಿಭಾಗಿಸುತ್ತಾ ಹೋದರೆ ಉಪ್ಪಿನ ಮುಖ್ಯ ಗುಣವಾದ ಕ್ಷಾರತ್ವವನ್ನು ತೋರುವ ಬಹು ಸಣ್ಣ ಕಣವೊಂದು ಉಳಿಯುವುದು. ಈ ಕಣವನ್ನು ಪುನಃ ವಿಭಾಗಮಾಡಿದರೆ ಕ್ಷಾರತ್ವವು ಮಾಯವಾಗುವುದು; ಉಪ್ಪಿನ ಕಣವೇ ಇಲ್ಲದಂತಾಗುವುದು. ಹೀಗೆ ಉಪ್ಪಿನ ಎಲ್ಲಾ ಗುಣಗಳನ್ನೂ ಒಳಗೊಂಡು ಸ್ವತಂತ್ರವಾಗಿರಬಲ್ಲ ಸಣ್ಣ ಕಣಗಳನ್ನು ಉಪ್ಪಿನ "ಅಣು"ಗಳೆಂದು ಕರೆಯುತ್ತಾರೆ. ಇದರಂತೆಯೇ ಕಲ್ಲುಸಕ್ಕರೆ, ಕಬ್ಬಿಣ, ನೀರು ಮುಂತಾದ ವಸ್ತುಗಳನ್ನೂ ಆಯಾ ಅಣುಸಮುದಾಯಗಳೆಂದೇ ತಿಳಿಯಬೇಕು. ಕಲ್ಲುಸಕ್ಕರೆಯ ಅಣುವನ್ನು ಪುನಃ ವಿಭಾಗಿಸಲು ಯತ್ನಿಸಿದರೆ, ಕಲ್ಲುಸಕ್ಕರೆಯ ಸವಿಯೇ ಹಾರಿಹೋಗುವುದು. ಅಂದರೆ ನಮ್ಮ ಸುತ್ತಲಿರುವ ಪದಾರ್ಥಗಳ ವಿಭಾಜ್ಯತೆಗೆ ಎಲ್ಲೆಯುಂಟೆಂದು ಹೇಳಿದ ಹಾಗಾಯಿತು. ಈ ಎಲ್ಲೆಯನ್ನು ಮೀರಿದರೆ ಪದಾರ್ಥದ ಸ್ವರೂಪವೇ ಮಾರ್ಪಡುವುದೆಂದು ಒಪ್ಪಿದಂತಾಯಿತು. ಆದರೆ ಕಬ್ಬಿಣದ ಅಣುವನ್ನು ವಿಭಾಗಿಸಲು ಯತ್ನಿಸೋಣ. ಈ ಪ್ರಯತ್ನದ ಫಲವಾಗಿ ಕಬ್ಬಿಣದ ಪರಮಾಣುಗಳೆಂಬ ಅತಿ ಸೂಕ್ಷ್ಮವಾದ ಕಣಗಳು ದೊರೆಯುತ್ತವೆ. ಅಂದರೆ ಕಬ್ಬಿಣದ ಪರಮಾಣುಗಳಿಂದ ಕಬ್ಬಿಣದ ಅಣುಗಳು ನಿರ್ಮಿತವಾಗುವುವೆಂದು ತಿಳಿಯಬೇಕು. ಕಬ್ಬಿಣ, ಚಿನ್ನ, ಗಂಧಕ, ರಂಜಕ, ಬೆಳ್ಳಿ ಮುಂತಾದ ವಸ್ತುಗಳು ಆಯಾ

ಪರಮಾಣುಗಳಿಂದಲೇ ಕೂಡಿದ ಅಣುಸಮುದಾಯನೆಂದು ತಿಳಿಯಬೇಕು. ಇಂತಹ ಮೂಲವಸ್ತುಗಳನ್ನು "ಭೂತ"ಗಳೆಂದು ಕರೆಯುತ್ತಾರೆ. ಅಂದರೆ ಪ್ರತಿಯೊಂದು ಭೂತವೂ ಅದರದರ ಪರಮಾಣುಗಳ ಸಮೂಹವೆಂಬ ಅಂಶವನ್ನು ಜ್ಞಾಪಕದಲ್ಲಿಡಬೇಕು. ಶಾಸ್ತ್ರಜ್ಞರು ಈ ವಿಧವಾದ ಭೂತಗಳು ತೊಂಬತ್ತೆರಡು ಇವೆಯೆಂದು ತಿಳಿಸಿರುವರು. ಉಪ್ಪು, ಕಲ್ಲುಸಕ್ಕರೆ, ನೀರು ಮುಂತಾದ ಪದಾರ್ಥಗಳ ಅಣುಗಳು ಭೂತಪರಮಾಣುಗಳ ಸಂಯೋಗದಿಂದ ಉಂಟಾಗಿರುತ್ತವೆ. ಈಗ ನಮಗೆ ತಿಳಿದಿರುವ ಭೂತಗಳಲ್ಲಿ ಜಲಜನಕ ಮತ್ತು ಆಮ್ಲಜನಕ ಎಂಬ ಎರಡು ಭೂತಾನಿಲಗಳಿವೆ. ಜಲಜನಕದ ಎರಡು ಪರಮಾಣುಗಳೊಡನೆ ಆಮ್ಲಜನಕದ ಒಂದು ಪರಮಾಣುವು ಸಂಯೋಗವಾದರೆ ಒಂದು ನೀರಿನ ಅಣುವಾಗುವುದು. ವಿದ್ಯುದ್ವಿಭಜನೆಯಿಂದ ನೀರಿಗೆ ಕಾರಣವಾದ ಜಲಜನಕ, ಆಮ್ಲಜನಕಗಳನ್ನು ಬೇರ್ಪಡಿಸಬಹುದು. ಜಲಜನಕದ ಅಥವಾ ಆಮ್ಲಜನಕದ ಪರಮಾಣುಗಳಿಗೆ ನೀರಿನ ಅಣುವಿನ ಗುಣಗಳ ಸಂಬಂಧವು ಲೇಶಮಾತ್ರವೂ ಇಲ್ಲ. ಉಪ್ಪಿನ ಅಣುವಿನಲ್ಲಿರುವ ಪರಮಾಣುಗಳಿಗೆ ಉಪ್ಪಿನ ಕ್ಷಾರ ಸ್ವಭಾವವು ಇರುವುದಿಲ್ಲ. ಹೀಗೆ ಬೇರೆ ಬೇರೆ ಭೂತಗಳ ಪರಮಾಣುಗಳ ಸಂಯೋಗದಿಂದ ಉಂಟಾಗುವ ಪದಾರ್ಥಗಳನ್ನು ಸಂಯುಕ್ತಗಳೆಂದು ಕರೆಯುತ್ತೇವೆ. ನಾವು ನಿತ್ಯವೂ ನೋಡುವ, ಉಪಯೋಗಿಸುವ, ಲಕ್ಷಾಂತರ ಪದಾರ್ಥಗಳಲ್ಲಿ ಅನೇಕ ಸಂಯುಕ್ತಗಳಿವೆ. ಭೂತಗಳು ತೊಂಬತ್ತೆರಡೇ ಇದ್ದರೂ, ಸಂಯುಕ್ತಗಳು ಮಾತ್ರ ಲೆಕ್ಕವಿಲ್ಲದಷ್ಟಿರುವುವು; ಅಲ್ಲದೆ ರಾಸಾಯನಿಕರು ಪ್ರಯೋಗಶಾಲೆಗಳಲ್ಲಿ ಹೊಸ ಸಂಯುಕ್ತಗಳನ್ನು ಆಗಾಗ ಕಂಡುಹಿಡಿಯುತ್ತಲೇ ಇರುವರು. ಒಟ್ಟಿನಲ್ಲಿ ಭೂತವೇ ಆಗಲಿ ಸಂಯುಕ್ತವೇ ಆಗಲಿ ಎಲ್ಲವೂ ಪರಮಾಣುಗಳಿಂದ ಕೂಡಿವೆಯೆಂದೂ, ಇಂತಹ ಪರಮಾಣುಗಳು ತೊಂಬತ್ತೆರಡಕ್ಕೆ ಮೀರಿಲ್ಲವೆಂದೂ ಸಿದ್ಧವಾಯಿತು.

ಇನ್ನು ಮುಂದೆ ಪರಮಾಣುಗಳ ಸ್ವರೂಪವನ್ನು ವಿಚಾರಮಾಡೋಣ. ಪ್ರತಿಯೊಂದು ಭೂತಕ್ಕೂ ಅದಕ್ಕೆ ಸಂಬಂಧಪಟ್ಟ ಪರಮಾಣುವು ಇರುವುದಾಗಿ ತಿಳಿಸಲ್ಪಟ್ಟಿದೆ. ಈಗ ಪರಮಾಣುಗಳನ್ನೂ ವಿಭಾಗಿಸಲು ಯತ್ನಿಸೋಣ. ಇವುಗಳಲ್ಲೆಲ್ಲಾ ಸಾಮಾನ್ಯವಾಗಿ ಯಾವುದಾದರೊಂದು ಪ್ರಕೃತಿಯು ಇರುವುದೇ ಎಂದು ಶೋಧನೆಮಾಡೋಣ. ಹತ್ತೊಂಬತ್ತನೆಯ ಶತಮಾನದ ಪ್ರಾರಂಭದಲ್ಲಿ ಜಾನ್ ಡಾಲ್ಟನ್ನೆಂಬ (೧೮೧೦) ಶಾಸ್ತ್ರಜ್ಞನು ಪರಮಾಣುಮತವನ್ನು ಪ್ರಚುರಪಡಿಸಿದನು. ಪ್ರತಿಯೊಂದು ವಸ್ತುವೂ ಅತಿ ಸೂಕ್ಷ್ಮವಾದ ಪರಮಾಣುಗಳಿಂದ ಕೂಡಿದೆಯೆಂಬುದೂ, ಈ ಪರಮಾಣುಗಳ ವಿಭಜನೆಯು ಅಸಾಧ್ಯವೆಂಬುದೂ ಡಾಲ್ಟನ್ ಮತದ ಮುಖ್ಯ ತತ್ತ್ವ. ಆದರೆ ಸುಮಾರು ಐವತ್ತು ವರ್ಷಗಳು ಕಳೆದಮೇಲೆ

ಪರಮಾಣುಗಳ ವಿಭಜನೆಯು ಸಾಧ್ಯವೆಂದು ಸೂಚಿಸುವ ಹಲವು ಪ್ರಯೋಗಗಳನ್ನು ವೈಜ್ಞಾನಿಕರು ಮಾಡತೊಡಗಿದರು. ಒಂದು ಗಾಜಿನ ಕೊಳವಿಯೊಳಗಿನ ಶೂನ್ಯಾಕಾಶದಲ್ಲಿ ಪ್ರೇರಕಯಂತ್ರದಿಂದ ವಿದ್ಯುತ್ಪ್ರವಾಹವನ್ನುಂಟುಮಾಡಿದರೆ ಋಣಾಂಶಗಳೆಂಬ ವಿದ್ಯುತ್ತಿನ ಕಣಗಳು ಧನಧ್ರುವದ ಕಡೆಗೆ ಪ್ರವಹಿಸುವುವೆಂದು ಪ್ರಯೋಗಗಳಿಂದ ತೋರಿಸಬಹುದು. ಈ ಪ್ರವಾಹದ ಹಾದಿಯಲ್ಲಿ ಯಾವುದಾದರೂ ಘನಪದಾರ್ಥವಿದ್ದರೆ ಅದರ ನೆರಳನ್ನು ಗಾಜಿನ ಕೊಳವಿಯ ಗೋಡೆಯಮೇಲೆ ಕಾಣಬಹುದೆಂದು ಹಿಟ್ಟಾರ್ಫ್‌ಸು (೧೮೬೯) ತೋರಿಸಿದನು. ಘನವಸ್ತುವಿನಿಂದ ತಡೆಯಲ್ಪಡದಿರುವ ಋಣಾಂಶಗಳು ಕೊಳವಿಯ ಗೋಡೆಗೆ ತಗಲಿದಾಗ ಒಂದು ವಿಧವಾದ ಬೆಳಕನ್ನುಂಟುಮಾಡುವುವು. ಕ್ರೂಕ್ಸ್ (೧೮೭೯) ಎಂಬಾತನು ಈ ಋಣಾಂಶಪ್ರವಾಹವು ಒತ್ತಡವನ್ನುಂಟುಮಾಡುವುದೆಂದು ಪ್ರದರ್ಶಿಸಿದನು; ಅಲ್ಲದೆ ಈ ಒತ್ತಡದಿಂದಲೇ ತಿರುಗುವ ಒಂದು ಗಿರುಗಟ್ಟಿಯನ್ನು ಸಹ ಮಾಡಿದನು. ಋಣಾಂಶಗಳ ಹೊಡೆತಕ್ಕೆ ಸಿಕ್ಕಿದ ವಸ್ತುಗಳ ಶಾಖಮಾನವು ಹೆಚ್ಚುವುದೆಂದು ಗೊತ್ತಾಯಿತು. ಭೌತ ಮತ್ತು ರಾಸಾಯನಿಕ ಬದಲಾವಣೆಗಳನ್ನುಂಟುಮಾಡುವ ಶಕ್ತಿಯೂ ಋಣಾಂಶಗಳಿಗಿದೆಯೆಂದು ಗೊತ್ತಾಯಿತು. ಅಯಸ್ಕಾಂತ ಕ್ಷೇತ್ರದಲ್ಲಿ ಋಣಾಂಶಗಳ ಹಾದಿಯು ವಕ್ರವಾಗುವುದೆಂದು ಪ್ಲೂಕರನು (೧೮೫೮) ತೋರಿಸಿದನು; ಈ ಪ್ರಯೋಗದ ಆಧಾರದಿಂದಲೇ ಈ ಕಣಗಳಲ್ಲಿ ಋಣವಿದ್ಯುದಂಶವಿದೆಯೆಂದು ಸಮರ್ಥಿಸಬಹುದು. ಋಣಾಂಶಗಳಲ್ಲಿರುವ ಋಣವಿದ್ಯುನ್ಮಾನವು ಸ್ವಲ್ಪವಾದರೂ ಹೆಚ್ಚುಕಡಮೆಯಾಗದೆ ಯಾವಾಗಲೂ ಒಂದೇ ಸಮನಾಗಿರುತ್ತದೆ. ಆದಕಾರಣ ಋಣಾಂಶದ ವಿದ್ಯುದಂಶವನ್ನು ವಿದ್ಯುನ್ಮಾನದ ಮೂಲಮಾನವಾಗಿ ಇನ್ನುಮುಂದೆ ಅಂಗೀಕರಿಸೋಣ. ತಮಗೆ ಜನ್ಮವಿತ್ತ ಭೂತವು ಯಾವುದೇ ಆದರೂ ಋಣಾಂಶಗಳ ಸಹಜಗುಣಗಳು ಬದಲಾವಣೆ ಹೊಂದುವುದಿಲ್ಲ. ಶೂನ್ಯಾಕಾಶದಲ್ಲಿ ಜಲಜನಕ, ಸಾರಜನಕ ಮುಂತಾದ ಅನಿಲಗಳ ಪರಮಾಣುಗಳೂ, ರಂಜಕ, ಪಾದರಸಗಳ ಪರಮಾಣುಗಳೂ ವಿದ್ಯುತ್ಪ್ರೇರಣೆಯಿಂದ ಒಂದೇ ರೀತಿಯಲ್ಲಿ ವರ್ತಿಸುವ ಋಣಾಂಶಗಳನ್ನು ಹೊರಗೆಡುಹುವುವು. ಇದರಿಂದ ಥಾಮ್ಸನ್ನನು (೧೮೯೭) ಎಲ್ಲಾ ಭೂತಗಳ ಪರಮಾಣುಗಳಲ್ಲಿಯೂ ಋಣಾಂಶಗಳಿರಬೇಕೆಂದು ಸಾಧಿಸಿದನು. ಭೂತಗಳಲ್ಲೆಲ್ಲಾ ಅತ್ಯಂತ ಹಗುರವಾದ ಜಲಜನಕದ ಪರಮಾಣುವಿನ ತೂಕದಲ್ಲಿ $\frac{೧}{೧೮೫೦}$ನೆ ಭಾಗದ ತೂಕವು ಋಣಾಂಶಕ್ಕಿದೆ. ಅಂದರೆ ಋಣಾಂಶಗಳ ತೂಕವು ಪರಮಾಣುಗಳ ತೂಕಕ್ಕಿಂತ ಕೇವಲ ಕಡಮೆಯೆಂದು ತಿಳಿಯಬೇಕು. ಏಕೆಂದರೆ ಪರಮಾಣುಗಳಲ್ಲೆಲ್ಲಾ ಕಡಮೆ ಭಾರವುಳ್ಳದ್ದು ಜಲಜನಕದ ಪರಮಾಣು; ಅರ್ಕಾನಿಲದ ಪರಮಾಣುವು ಇದಕ್ಕೆ ನಾಲ್ಕರಷ್ಟು,

ಪಾದರಸದ ಪರಮಾಣುವು ಇನ್ನೂರರಷ್ಟು ಹೆಚ್ಚು ತೂಕವುಳ್ಳವೆಂದು ಗೊತ್ತಾಗಿದೆ. ಒಟ್ಟಿನಲ್ಲಿ ಭೂತಗಳ ಪರಮಾಣುಗಳು ಅಭೇದ್ಯವೆಂಬ ಡಾಲ್ಟನ್ ಮತವು ಮಾಯವಾದಂತಾಯಿತು. ಎಲ್ಲಾ ಪರಮಾಣುಗಳಲ್ಲಿಯೂ ಅತ್ಯಲ್ಪ ತೂಕವುಳ್ಳ ಋಣಾಂಶಗಳಿರಬೇಕೆಂದು ಸಮರ್ಥಿಸಿದಂತಾಯಿತು.

ಪರಮಾಣುಗಳನ್ನು ಋಣಾಂಶಗಳ ಸಮೂಹವೆಂದೇ ಅಂಗೀಕರಿಸಿದರೆ ನಾವು ಬೇರೆ ಎರಡು ತೊಂದರೆಗಳಿಗೆ ಈಡಾಗುವೆವು. ಏಕೆಂದರೆ ಪರಮಾಣುಗಳೂ, ಅವುಗಳ ಸಂಯೋಗದಿಂದ ಉಂಟಾಗಿರುವ ಅನೇಕಾನೇಕ ವಸ್ತುಗಳೂ ಋಣವಿದ್ಯುದಂಶವನ್ನೇ ತೋರ್ಪಡಿಸಬೇಕಾಗುವುದು. ಆದರೆ ಕಬ್ಬಿಣ, ಕಲ್ಲುಸಕ್ಕರೆ, ಉಪ್ಪು ಇವುಗಳ ಸ್ಪರ್ಶದಿಂದ ನಮಗೆ ವಿದ್ಯುತ್ಕ್ಷೋಭೆಯಾಗುವುದಿಲ್ಲವೆಂದು ಬಲ್ಲೆವು. ಆದಕಾರಣ ಪರಮಾಣುಗಳಲ್ಲಿ ಬರಿಯ ಋಣಾಂಶಗಳೇ ಇರುವುವೆಂದು ಅಂಗೀ ಕರಿಸಲಾಗುವುದಿಲ್ಲ. ಸಾಮಾನ್ಯಸ್ಥಿತಿಯಲ್ಲಿ ಎಲ್ಲಾ ಪದಾರ್ಥಗಳೂ ವಿದ್ಯುದಂಶರಹಿತವಾಗಿರುವುದರಿಂದ ನಮಗೆ ಈ ಸಂದೇಹ ಬರಲು ಕಾರಣವಾಗಿದೆ. ಅಲ್ಲದೆ ಋಣಾಂಶಗಳ ತೂಕವು ಅತ್ಯಲ್ಪವೆಂದು ಮೇಲೆ ತಿಳಿಸಿರುವಾಗ, ಪರಮಾಣುಗಳಿಗೆ ಸಹಜವಾದ ಹೆಚ್ಚು ಭಾರವು ಎಲ್ಲಡಗಿದೆಯೆಂದು ಯೋಚಿಸಬೇಕಾಗುವುದು. ಈ ಸಮಸ್ಯೆಗಳಿಗೆ ಬಂದ ಉತ್ತರಗಳಲ್ಲಿ ರದರ್ಫರ್ಡಿನ (೧೯೧೧) ಮತವು ಈಗ ಎಲ್ಲರಿಂದಲೂ ಅಂಗೀಕೃತವಾಗಿದೆ. ಪರಮಾಣುವಿನ ಕೇಂದ್ರದಲ್ಲಿ ಬಹು ಸೂಕ್ಷ್ಮವಾದ ಒಂದು ಬೀಜಕಣದ ಮೇಲೆ ಧನವಿದ್ಯುತ್ತಿದೆಯೆಂಬುದೂ, ಅದರಿಂದ ಅನತಿ ದೂರದಲ್ಲಿ ಋಣಾಂಶಗಳು ಅದನ್ನು ಎಡಬಿಡದೆ ಸುತ್ತುತ್ತಿರುವುವೆಂಬುದೂ ರದರ್ಫರ್ಡಿನ ಶೋಧನೆಗಳ ಮುಖ್ಯಾಂಶಗಳು. ಬೀಜಕಣವನ್ನು ಸುತ್ತುವಾಗ ಋಣಾಂಶಗಳ ವೇಗವು ನಿಮಿಷಕ್ಕೆ ೬೦,೦೦೦ ಮೈಲಿಗಳಿಗೆ ಮೀರಿರುತ್ತದೆ. ಬೀಜಕಣದಲ್ಲಿರುವ ಧನವಿದ್ಯುನ್ಮಾನವು ಪರಮಾಣುವಿನಲ್ಲಿರುವ ಒಟ್ಟು ಋಣಾಂಶಗಳ ಋಣವಿದ್ಯುನ್ಮಾನಕ್ಕೆ ಸಮನಾಗಿರಬೇಕು; ಹೀಗಿದ್ದರೆ ಎಲ್ಲಾ ಪರಮಾಣುಗಳೂ ಅದರಿಂದ ಉಂಟಾಗುವ ಸಮಸ್ತ ವಸ್ತುಗಳೂ ವಿದ್ಯುದಂಶರಹಿತವಾಗಿ ಕಂಡುಬರುವುವು. ಪ್ರತಿಯೊಂದು ಪರಮಾಣುವೂ ಋಣಾಂಶಗಳ ಹೊದಿಕೆಯಿಂದ ಕೂಡಿದ ಧನವಿದ್ಯುತ್ತಿನ ಬೀಜಕಣವೆಂದು ಹೇಳಿದ ಹಾಗಾಯಿತು. ಋಣಾಂಶಗಳು ಎಲ್ಲಾ ಪರಮಾಣುಗಳ ಬೀಜಕಣಗಳಿಗೂ ಸಾಮಾನ್ಯವಾದ ಹೊದಿಕೆಯಾಗಿರುವುದರಿಂದ ಪರಮಾಣುಗಳನ್ನು ಗುರುತಿಸುವ ಶಕ್ತಿಯು ಬೀಜಕಣಗಳ ಸಹಜಗುಣವೆಂದೇ ತಿಳಿಯಬೇಕು. ಪರಮಾಣುವು ಗಾತ್ರದಲ್ಲಿ ಸುಮಾರು $\frac{೧}{೨೫೦,೦೦೦,೦೦೦}$ ಅಥವಾ ೪ × ೧೦^{-೯} ಅಂಗುಲದಷ್ಟು ಪುಟ್ಟದಾದರೂ ಇದರೊಳಗೆ ಬೀಜಕಣದ ಗಾತ್ರವು ಇನ್ನೂ ಬಹು ಸೂಕ್ಷ್ಮ. ಇದರ ಗಾತ್ರವು

$\frac{೧}{೧೦,೦೦೦,೦೦೦,೦೦೦,೦೦೦}$ ಅಥವಾ $೧೦^{-೧೩}$ ಅಂಗುಲದಷ್ಟು ಕಮ್ಮಿಯೆಂದು ತಿಳಿದುಬಂದಿದೆ. ಆದರೆ ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದೆಂಬ ಗಾದೆಯು ಬೀಜಕಣಗಳಿಗೂ ಅನ್ವಯಿಸುತ್ತದೆ. ಗಾತ್ರದಲ್ಲಿ ಬಹು ಸಣ್ಣದಾದರೂ ಪರಮಾಣುವಿನ ಸಂಪೂರ್ಣ ತೂಕವೂ ಬೀಜಕಣದಲ್ಲೇ ಅಡಗಿರುತ್ತದೆ. ಜಲಜನಕದ ಪರಮಾಣುವಿನ ತೂಕವು $೧.೬೬ \times ೧೦^{-೨೪}$ ಗ್ರಾಂ ಎಂದು ಕಂಡುಹಿಡಿದಿರುವರು. ಋಣಾಂಶದ ತೂಕವು ಇದರ $\frac{೧}{೧೮೫೦}$ನೆಯ ಭಾಗವೆಂದು ಮೊದಲೇ ತಿಳಿಸಿರುವುದರಿಂದ, ಪರಮಾಣುವಿನ ತೂಕಕ್ಕೆ ಹೋಲಿಸಿದರೆ ಋಣಾಂಶಗಳ ತೂಕವನ್ನು ಬಹು ಸ್ವಲ್ಪವೆಂದು ಲೆಕ್ಕದಿಂದ ನಿರಾಕರಿಸಬಹುದು. ಇದರಿಂದ ಜಲಜನಕದ ಬೀಜಕಣದ ತೂಕವು ಬಹುಮಟ್ಟಿಗೆ ಅದರ ಪರಮಾಣುವಿನ ತೂಕಕ್ಕೆ ಸಮಾನವೆಂದು ತಿಳಿಯಬೇಕು. ಹೀಗೆ ಜಲಜನಕದ ಪರಮಾಣುವಿಗೆ ಸಮತೂಕವುಳ್ಳ ಅದರ ಬೀಜಕಣವನ್ನು ಧನಕಣವೆಂದು ಕರೆಯುತ್ತಾರೆ. ಇಷ್ಟೇ ತೂಕವಿದ್ದರೂ ವಿದ್ಯುದಂಶರಹಿತವಾಗಿರುವ ಶೂನ್ಯಕಣವೊಂದನ್ನು ಛಾಡ್ವಿಕ್ (೧೯೩೨) ಎಂಬಾತನು ಕಂಡುಹಿಡಿದಿರುವನು. ಧನಕಣಗಳೂ ಶೂನ್ಯಕಣಗಳೂ ಸೇರಿ ಬೇರೆ ಬೇರೆ ಬೀಜಕಣಗಳಾಗುವುದನ್ನು ಬೇರೊಂದೆಡೆಯಲ್ಲಿ ತಿಳಿಸುತ್ತೇನೆ. ಜಲಜನಕದ ಪರಮಾಣುವಿಗೆ ನಾಲ್ಕರಷ್ಟು ತೂಕವುಳ್ಳ ಅರ್ಕಾನಿಲದ ಪರಮಾಣುವಿನ ಭಾರವೂ ಅದರ ಬೀಜಕಣದಲ್ಲೇ ಅಡಕವಾಗಿರುವುದು. ಒಟ್ಟಿನಲ್ಲಿ ಪರಮಾಣುವಿನ ಗಾತ್ರಕ್ಕೆ ಹೋಲಿಸಿದರೆ ಬಹು ಸೂಕ್ಷ್ಮವೆಂದು ತೋರುವ ಬೀಜಕಣದ ತೂಕವು ಪರಮಾಣುವಿನ ಇಡೀ ತೂಕಕ್ಕೆ ಸಮಾನವೆಂದು ಅರ್ಥಮಾಡಿಕೊಳ್ಳಬೇಕು. ಜಲಜನಕದ ಪರಮಾಣುವಿಗಿಂತ ೧೯೭ರಷ್ಟು ತೂಕವುಳ್ಳ ಚಿನ್ನದ ಪರಮಾಣುವಿನ ತೂಕವು ಚಿನ್ನದ ಬೀಜಕಣದಲ್ಲಿರುತ್ತದೆ. ಹೀಗೆಯೇ ಮಿಕ್ಕ ಎಲ್ಲಾ ಪರಮಾಣುಗಳ ವಿಷಯದಲ್ಲೂ ತಿಳಿದುಕೊಳ್ಳಬೇಕು. ಹಿಂದೆಯೇ ಹೇಳಿರುವಂತೆ ಪರಮಾಣುವಿನ ಗಾತ್ರವು ಅತ್ಯಲ್ಪವಾಗಿ ಕಂಡುಬಂದರೂ, ಬೀಜಕಣದ ಗಾತ್ರದೊಡನೆ ಹೋಲಿಸಿದರೆ ಪರಮಾಣುವು ಹತ್ತುಸಾವಿರ ಪಾಲಿಗಿಂತ ಹೆಚ್ಚು ದೊಡ್ಡದಾಗಿ ಕಾಣುವುದು. ಹೀಗೆ ಬೀಜಕಣದಿಂದ ದೂರದಲ್ಲಿ ಪ್ರದಕ್ಷಿಣೆಮಾಡುತ್ತಿರುವ ಋಣಾಂಶಗಳನ್ನು ನೋಡಬಹುದಾದರೆ, ಪರಮಾಣುವೂ ಒಂದು ಸೌರವ್ಯೂಹದಂತೆಯೇ ಕಾಣಬಹುದು. ಸೂರ್ಯನ ಸ್ಥಾನದಲ್ಲಿ ಧನವಿದ್ಯುತ್ತಿನ ಬೀಜಕಣವೂ, ಗ್ರಹಗಳ ಬದಲು ಋಣಾಂಶಗಳೂ ಇವೆಯೆಂದು ಸಾಮಾನ್ಯವಾಗಿ ಹೋಲಿಸಬಹುದು. ಗ್ರಹಗಳು ತಮ್ಮ ಅಕ್ಷಗಳ ಸುತ್ತ ತಿರುಗುತ್ತಾ ಸೂರ್ಯನನ್ನು ಪ್ರದಕ್ಷಿಣೆ ಮಾಡುವಂತೆಯೇ, ಋಣಾಂಶಗಳೂ ಬೀಜಕಣವನ್ನು ಸುತ್ತುಗಟ್ಟುತ್ತಿವೆಯೆಂದು ಗೊತ್ತಾಗಿದೆ. ಆದರೆ ಉಪಮಾನಗಳಿಗೆ ಯಾವಾಗಲೂ ಹೆಚ್ಚು ಪ್ರಾಮುಖ್ಯತೆಯನ್ನು ಕೊಟ್ಟು ಚರ್ಚೆ

ಮಾಡಬಾರದು. ಏಕೆಂದರೆ ಸೌರವ್ಯೂಹದಲ್ಲಿನ ಚಲನೆಯು ಗುರುತ್ವಾಕರ್ಷಣಬಲದಿಂದ ನಡೆಯುತ್ತಿರುವಾಗ, ಪರಮಾಣುವಿನಲ್ಲಿ ಋಣಾಂಶಗಳು ವಿದ್ಯುದಾಕರ್ಷಣಬಲದಿಂದ ಬೀಜಕಣವನ್ನು ಸುತ್ತುತ್ತಿವೆ.

ತೊಂಬತ್ತೆರಡು ಬಗೆಯಾದ ಪರಮಾಣುಗಳಿವೆಯೆಂದು ಹಿಂದೆಯೇ ತಿಳಿಸಲ್ಪಟ್ಟಿದೆ. ಬೇರೆಬೇರೆ ಪರಮಾಣುಗಳಲ್ಲಿರುವ ಋಣಾಂಶಗಳ ಸಂಖ್ಯೆಗೂ, ಆಯಾ ಪರಮಾಣುಗಳಿಗೂ ಇರುವ ಸಂಬಂಧವನ್ನು ಸ್ವಲ್ಪ ವಿಚಾರಮಾಡೋಣ. ಮೆಂಡಲೀಫ್ (೧೮೬೯) ಎಂಬಾತನು ಪರಮಾಣುಗಳನ್ನೆಲ್ಲಾ ಒಂದು ಪರ್ಯಾಯ ಪದಕದಲ್ಲಿ ಅವುಗಳ ತೂಕವು ಹೆಚ್ಚಿದ ಹಾಗೆಲ್ಲಾ ವಿಂಗಡಿಸಿ ತೋರಿಸಿರುವನು. ಈ ಪದಕದಲ್ಲಿ ಒಂದೇ ರಾಸಾಯನಿಕ ಸ್ವಭಾವವುಳ್ಳ ಪರಮಾಣುಗಳು ತಂಡತಂಡವಾಗಿ ಕಂಡುಬರುವುವು. ಪರಮಾಣುಗಳ ನಿಜಸ್ವರೂಪವು ತಿಳಿಯುವ ಮೊದಲೇ ರಚಿಸಿದ ಈ ಪರ್ಯಾಯಪದಕಕ್ಕೆ ಈಚೆಗೆ ಇನ್ನೂ ಹೆಚ್ಚು ಪ್ರಾಮುಖ್ಯತೆಯು ಬಂದಿದೆ. ಮೆಂಡಲೀಫನು ಪರಮಾಣುಗಳಿಗೆ ಈ ಪದಕದಲ್ಲಿ ಕೊಟ್ಟಿರುವ ಸ್ಥಾನಾಂಕಗಳಿಗೆ ಆತನು ಕನಸಿನಲ್ಲಿಯೂ ಕಾಣದ ಪ್ರಶಸ್ತಿ ದೊರೆತಿದೆ. ವಿಜ್ಞಾನದ ಪರಿಶೋಧನೆಗಳ ಆಧಾರದ ಮೇಲೆ ಈ ಸ್ಥಾನಾಂಕವೂ ಪರಮಾಣುವಿನಲ್ಲಿರುವ ಋಣಾಂಶಗಳ ಸಂಖ್ಯೆಯೂ ಒಂದೇ ಎಂದು ಅಂಗೀಕರಿಸಬೇಕು. ಹಾಗಾದರೆ ಪರ್ಯಾಯಪದಕದಲ್ಲಿ ಅಗ್ರಸ್ಥಾನವನ್ನು ಪಡೆದಿರುವ ಜಲಜನಕದ ಪರಮಾಣುವಿನಲ್ಲಿ ಒಂದೇ ಒಂದು ಋಣಾಂಶವಿದೆಯೆಂದೂ, ದ್ವಿತೀಯಸ್ಥಾನದಲ್ಲಿರುವ ಅಕರ್ಗಸಿಲದ ಪರಮಾಣುವಿನಲ್ಲಿ ಎರಡು ಋಣಾಂಶಗಳಿವೆಯೆಂದೂ, ಇಂಗಾಲದ ಪರಮಾಣುವಿನಲ್ಲಿ ಆರು ಋಣಾಂಶಗಳಿವೆಯೆಂದೂ, ಆಮ್ಲಜನಕದ ಪರಮಾಣುವಿನಲ್ಲಿ ಎಂಟು ಋಣಾಂಶಗಳಿವೆಯೆಂದೂ ತಿಳಿಯಬೇಕು. ಇದೇ ರೀತಿಯಲ್ಲಿ ಕಬ್ಬಿಣ, ತಾಮ್ರ, ಸತುಗಳ ಪರಮಾಣುಗಳಲ್ಲಿ ಕ್ರಮವಾಗಿ ೨೬, ೨೯, ೩೦ ಋಣಾಂಶಗಳಿರುವುದಾಗಿಯೂ, ಮಹಾರಜತ, ಚಿನ್ನ, ಪಾದರಸಗಳ ಪರಮಾಣುಗಳಲ್ಲಿ ೭೮, ೭೯, ೮೦ ಋಣಾಂಶಗಳಿರುವುದಾಗಿಯೂ ಭಾವಿಸಬೇಕು. ಹೀಗೆಯೇ ಮಿಕ್ಕ ಎಲ್ಲಾ ಭೂತಗಳ ಪರಮಾಣುಗಳಲ್ಲೂ ಪರ್ಯಾಯ ಪದಕದಲ್ಲಿ ಅವಕ್ಕಿರುವ ಸ್ಥಾನಾಂಕಕ್ಕೆ ಸಮವಾಗಿ ಋಣಾಂಶಗಳಿವೆಯೆಂದು ಅರ್ಥಮಾಡಿಕೊಳ್ಳಬೇಕು. ಇದರಿಂದ ಇನ್ನೊಂದು ಬಹುಮುಖ್ಯವಾದ ವಿಚಾರವು ಹೊರಬೀಳುವುದು. ಪಾದರಸದ ಪರಮಾಣುವಿನ ಮೇಲ್ಮೈಯಲ್ಲಿ ಎಂಬತ್ತು ಋಣಾಂಶಗಳಿರುವುದಾದರೆ, ಅದರ ಬೀಜಕಣದಲ್ಲಿ ಧನ ವಿದ್ಯುತ್ತಿನ ಎಂಬತ್ತು ಮೂಲ ಮಾನಗಳಿರಬೇಕು. ಇದೇ ರೀತಿಯಲ್ಲಿ ಪ್ರತಿಯೊಂದು ಪರಮಾಣುವಿನ ಬೀಜಕಣದಲ್ಲಿಯೂ ಪರ್ಯಾಯ ಪದಕದಲ್ಲಿ ಅದರ ಸ್ಥಾನಾಂಕಕ್ಕೆ

ಸಮವಾಗಿ ಧನವಿದ್ಯುತ್ತಿನ ಮೂಲಮಾನಗಳಿರುತ್ತವೆ. ಆದುದರಿಂದ ಸ್ಥಾನಾಂಕವನ್ನು ಬೀಜಕಣದ ಮೇಲಿರುವ ಧನವಿದ್ಯುತ್ತಿನ ಮೂಲಮಾನದ ಸಂಖ್ಯೆಯೆಂದೇ ಕರೆಯಬಹುದು. ಹಾಗಾದಮೇಲೆ ಈ ಸ್ಥಾನಾಂಕವು ಬೀಜಕಣದಲ್ಲಿರುವ ಧನವಿದ್ಯುನ್ಮಾನವನ್ನಾಗಲಿ, ಬೀಜಕಣವನ್ನು ಸುತ್ತುಗಟ್ಟುತ್ತಿರುವ ಋಣಾಂಶಗಳ ಸಂಖ್ಯೆಯನ್ನಾಗಲಿ, ತೋರಿಸುವುದೆಂದು ಎರಡು ವಿಧವಾಗಿ ವ್ಯಾಖ್ಯಾನಮಾಡಿದಂತಾಯಿತು. ಪರಮಾಣುಗಳ ಸಾಮಾನ್ಯಸ್ಥಿತಿಯಲ್ಲಿ ಇವೆರಡಕ್ಕೂ ಯಾವ ವ್ಯತ್ಯಾಸವೂ ಇರುವುದಿಲ್ಲ. ಆದರೆ ವಿದ್ಯುತ್ಪ್ರೇರಣೆಯಿಂದ ಪರಮಾಣುಗಳು ವಿಪ್ಲವ ಹೊಂದಿದಾಗ ಅವುಗಳಲ್ಲಿರುವ ಕೆಲವು ಋಣಾಂಶಗಳು ಕಳಚಿಹೋಗುವುವು. ಹಿಂದೆ ಗಾಜಿನ ಕೊಳವಿಯಲ್ಲಿ ಕಂಡ ಋಣಾಂಶ ಪ್ರವಾಹಕ್ಕೆ ಇದೇ ಕಾರಣ. ವಿದ್ಯುಚ್ಛಕ್ತಿಯಿಂದ ಬೇರ್ಪಟ್ಟ ಋಣಾಂಶಗಳು ಧನಧ್ರುವದಿಂದ ಆಕರ್ಷಿತವಾಗಿ ಆ ಕಡೆಗೆ ಓಡಿಹೋಗುತ್ತಿದ್ದುವು. ಇಂತಹ ಸಮಯಗಳಲ್ಲಿ ವಿಪ್ಲವಗೊಂಡ ಪರಮಾಣುಗಳಲ್ಲಿರುವ ಋಣಾಂಶಗಳ ಸಂಖ್ಯೆಯು ಸ್ಥಾನಾಂಕಕ್ಕೆ ಸಮನಾಗಲಾರದು. ಆದರೆ ಈ ವಿಧವಾದ ಯಾವ ಅಡಚಣೆಯೂ ಇಲ್ಲದೆ ಸ್ಥಾನಾಂಕವನ್ನು ಸದಾಕಾಲದಲ್ಲೂ ಪರಮಾಣುವಿನ ಬೀಜಕಣದ ಧನವಿದ್ಯುನ್ಮಾನವೆಂದು ಹೇಳಬಹುದು. ಅಂದರೆ ಬೀಜಕಣದ ಧನವಿದ್ಯುನ್ಮಾನದಿಂದಲೇ ಅದು ಯಾವ ಪರಮಾಣುವಿಗೆ ಸೇರಿದ್ದೆಂದು ತಡೆಯಿಲ್ಲದೆ ಹೇಳಬಹುದು. ಯಾವುದೋ ಒಂದು ಬೀಜಕಣದ ಮೇಲೆ ೭೯ ಧನವಿದ್ಯುತ್ತಿನ ಮೂಲಮಾನಗಳಿವೆಯೆಂದು ಗೊತ್ತಾದರೆ, ಪರ್ಯಾಯ ಪದಕವನ್ನು ನೋಡಿ ಒಡನೆಯೇ ಅದನ್ನು ಚಿನ್ನದ ಬೀಜಕಣವೆಂದು ಗುರುತಿಸಬಹುದು. ಪರಮಾಣುಗಳ ತೂಕದಲ್ಲಿ ವ್ಯತ್ಯಾಸವಿದ್ದರೂ ಚಿಂತೆಯಿಲ್ಲ; ಅವುಗಳ ಬೀಜಕಣಗಳ ಧನವಿದ್ಯುನ್ಮಾನವು ಒಂದೇ ಆಗಿದ್ದರೆ ಯಾವ ಭೂತವೆಂದು ತಕ್ಷಣವೇ ಗುರುತಿಸಬಹುದು. ಪಾದರಸದ ಪರಮಾಣುಗಳ ತೂಕದ ಪರೀಕ್ಷೆಯಿಂದ ನಾನಾ ತೂಕವುಳ್ಳ ಬೀಜಕಣಗಳಿವೆಯೆಂದು ತಿಳಿದು ಬಂದಿದೆ. ಆಮ್ಲಜನಕದ ಪರಮಾಣುವಿನ ತೂಕವನ್ನು ೧೬ ಎಂದು ಭಾವಿಸಿದರೆ, ಪಾದರಸದ ಬೇರೆ ಬೇರೆ ಬೀಜಕಣಗಳ ತೂಕವು ೧೯೮, ೧೯೯, ೨೦೦, ೨೦೧, ೨೦೨, ೨೦೪ ಇರುವುದಾಗಿ ಪ್ರಯೋಗಗಳಿಂದ ನಿಶ್ಚಯಿಸಿದ್ದಾರೆ. ಆದರೆ ಪಾದರಸದ ಪರಮಾಣುಗಳ ತೂಕವು ಎಷ್ಟಾದರೂ ಇರಲಿ; ಬೀಜಕಣಗಳ ಧನವಿದ್ಯುನ್ಮಾನವು ಮಾತ್ರ ೮೦ ಇರಲೇಬೇಕು. ಸ್ಥಾನಾಂಕಭೇದವಿಲ್ಲದೆ, ಬೇರೆ ಬೇರೆ ತೂಕವುಳ್ಳ ಪರಮಾಣುಗಳನ್ನು ಭೂತದಲ್ಲಿರುವ ಸಕ್ಷೇತ್ರಗಳೆಂದು ಕರೆಯೋಣ. ಈ ಸಕ್ಷೇತ್ರಗಳ ತೂಕವನ್ನು ಯಾವಾಗಲೂ ಪೂರ್ಣಾಂಕಗಳಿಂದಲೇ ತೋರಿಸಬಹುದು. ಪರ್ಯಾಯಪದಕದಲ್ಲಿ ೭೭ನೆಯ ಸ್ಥಾನದಲ್ಲಿರುವ

‘ಇರಿಡಿಯಂ’ ಎಂಬ ಭೂತದಲ್ಲಿರುವ ಸಕ್ಷೇತ್ರಗಳನ್ನು ಕಂಡು ಹಿಡಿಯಲು ನನ್ನ ಪೂಜ್ಯಗುರುಗಳಾದ ಶ್ರೀ ವೆಂಕಟೇಶಾಚಾರ್ಯರೂ ನಾನೂ ಮೈಸೂರು ವಿಶ್ವವಿದ್ಯಾನಿಲಯದ ಭೌತಶಾಸ್ತ್ರಪ್ರಯೋಗಶಾಲೆಯಲ್ಲಿ ೧೯೩೫ ರಲ್ಲಿ ಯತ್ನಿಸಿದೆವು. ಈ ಪ್ರಯತ್ನದ ಫಲವಾಗಿ ಇರಿಡಿಯಮ್ಮಿನಲ್ಲಿ ೧೯೧ ಮತ್ತು ೧೯೩ ತೂಕವುಳ್ಳ ಎರಡು ಸಕ್ಷೇತ್ರಗಳಿವೆಯೆಂದು ಕಂಡು ಹಿಡಿಯಲ್ಪಟ್ಟಿತು. ಅಲ್ಲದೆ ಚಿನ್ನದಲ್ಲಿ ೧೯೭ ತೂಕವುಳ್ಳ ಪರಮಾಣುಗಳು ಮಾತ್ರ ಇವೆಯೆಂದೂ, ಮಹಾರಜತದಲ್ಲಿ ೧೯೪, ೧೯೫, ೧೯೬, ೧೯೮ ತೂಕವುಳ್ಳ ಸಕ್ಷೇತ್ರಪರಮಾಣುಗಳಿವೆಯೆಂದೂ ತೋರಿಸಿರುವೆವು. ಇಷ್ಟೇ ಅಲ್ಲದೆ ಈ ಸಕ್ಷೇತ್ರಗಳ ಬಾಹುಳ್ಯವೂ ಮುಖ್ಯವಾದ ವಿಷಯ. ೧೯೧ ತೂಕವುಳ್ಳ ಇರಿಡಿಯಂ ಪರಮಾಣುಗಳಿಗೆ ಎರಡರಷ್ಟು ಹೆಚ್ಚಾಗಿ ೧೯೩ ತೂಗುವ ಪರಮಾಣುಗಳಿವೆಯೆಂದು ತೋರಿಸಿ, ತನ್ಮೂಲಕ ಇರಿಡಿಯಮ್ಮಿಗೆ ಈಗ ಅಂಗೀಕೃತವಾಗಿರುವ ಪರಮಾಣು ತೂಕವು ತಪ್ಪೆಂದು ನಿಶ್ಚಯಿಸಿರುವೆವು. ಸಕ್ಷೇತ್ರಗಳಿಗೆ ಸ್ಥಾನಾಂಕ ಒಂದೇ ಆದಾಗ್ಯೂ, ತೂಕವ್ಯತ್ಯಾಸವು ಶೂನ್ಯಕಣಗಳ ಜೋಡಣೆಯಿಂದ ಉಂಟಾಗುವುದೆಂದು ಎಲ್ಲರೂ ಒಪ್ಪಿದ್ದಾರೆ. ೭೭ ಧನಕಣಗಳೊಂದಿಗೆ ೧೧೪ ಶೂನ್ಯಕಣಗಳು ಸೇರಿದರೆ ತೂಕವು ೧೯೧ ಆಗಿ, ಸ್ಥಾನಾಂಕವು ೭೭ ಆಗುವುದು; ಇದು ಇರಿಡಿಯಮ್ಮಿನ ಬೀಜಕಣ. ಇದಕ್ಕೆ ಇನ್ನೂ ೨ ಶೂನ್ಯಕಣಗಳು ಸೇರಿದರೆ ಇರಿಡಿಯಮ್ಮಿನ ೧೯೩ ತೂಗುವ ಸಕ್ಷೇತ್ರವು ಉಂಟಾಗುವುದು. ಹೀಗೆಯೇ ಪ್ರತಿಯೊಂದು ಪರಮಾಣುವಿನ ಬೀಜಕಣದಲ್ಲಿಯೂ ಅದರ ತೂಕಕ್ಕೂ ಸ್ಥಾನಾಂಕಕ್ಕೂ ಇರುವ ವ್ಯತ್ಯಾಸಕ್ಕೆ ಸಮನಾಗಿ ಶೂನ್ಯಕಣಗಳಿವೆಯೆಂದು ಭಾವಿಸಬೇಕು. ಒಟ್ಟಿನಲ್ಲಿ ಪ್ರತಿಯೊಂದು ಭೂತಕ್ಕೂ ಪರ್ಯಾಯಪದಕದಲ್ಲಿ ಒಂದು ಸ್ಥಾನಾಂಕವಿರುವುದೆಂದೂ, ಈ ಸ್ಥಾನಾಂಕವು ಅದರ ಬೀಜಕಣದ ಧನವಿದ್ಯುನ್ಮಾನಕ್ಕೆ ಸಮವಾಗಿದೆಯೆಂದೂ, ಭೂತಗಳಲ್ಲಿ ಅನೇಕಕ್ಕೆ ಸಕ್ಷೇತ್ರಗಳಿವೆಯೆಂದೂ ತಿಳಿಸಿಕೊಟ್ಟಂತಾಯಿತು.

ಬೀಜಕಣವನ್ನು ಸುತ್ತುತ್ತಿರುವ ಋಣಾಂಶಗಳ ಸಂಖ್ಯೆಯು ಪರಮಾಣುವಿನ ಸಾಮಾನ್ಯಸ್ಥಿತಿಯಲ್ಲಿ ಅದರ ಸ್ಥಾನಾಂಕಕ್ಕೆ ಸಮವಾಗಿರುವುದೆಂದು ಹಿಂದೆಯೇ ತಿಳಿಸಿದೆ. ಹೀಗಿರುವಲ್ಲಿ ಈ ಋಣಾಂಶಗಳು ಯಾವ ರೀತಿಯಲ್ಲಿ ಬೀಜಕಣದ ಸುತ್ತಲೂ ಹಂಚಲ್ಪಟ್ಟಿವೆಯೆಂಬ ಪ್ರಶ್ನೆಯು ಬರುವುದು. ಏಕೆಂದರೆ ಪಾದರಸದ ಪರಮಾಣುವಿನಲ್ಲಿರುವ ೮೦ ಋಣಾಂಶಗಳು ಯಾವ ನಿಯಮಕ್ಕೂ ಒಳಗಾಗದೆ ಜೇನುಹುಳುಗಳಂತೆ ಗುಂಪುಕಟ್ಟಿ ಬೀಜಕಣವನ್ನು ಸುತ್ತುತ್ತಿಲ್ಲ. ಈ ಋಣಾಂಶಗಳು ಬೀಜಕಣದ ಸುತ್ತಲೂ ವರ್ತುಳಾಕಾರವಾದ ಅಂಡಾಕಾರವಾದ ಬೇರೆ ಬೇರೆ




ಭೂತ ಪರಮಾಣುಗಳ ಬೇರೆ ಬೇರೆ ಪಥಗಳಲ್ಲಿ ಋಣಾಂಶಗಳ ಹಂಚಿಕೆಯನ್ನು ತೋರಿಸುವ

**ನೂತನ ಪರ್ಯಾಯ ಪದಕ**

ಪಥಗಳಲ್ಲಿ ತಿರುಗುತ್ತಿರುವುದಾಗಿ ಗೊತ್ತುಮಾಡಿರುವರು. ಈ ಪಥಗಳಲ್ಲಿ ಋಣಾಂಶಗಳ ಹಂಚಿಕೆಗೆ ಆಧಾರವಾದ ಒಂದು ಹೊಸನಿಯಮವನ್ನು ಪೌಲಿ (೧೯೨೫) ಎಂಬ ಭೌತಶಾಸ್ತ್ರಜ್ಞನು ಕಂಡುಹಿಡಿದನು. ಈ ನಿಯಮಕ್ಕನುಸಾರವಾಗಿ ಬೀಜಕಣದಿಂದ ಹೊರಗಣ ೧, ೨, ೩, ೪ನೆಯ ಪಥಗಳಲ್ಲಿ ಕ್ರಮವಾಗಿ ಋಣಾಂಶಗಳು ೨, ೮, ೧೮, ೩೨ ಕ್ಕಿಂತ ಹೆಚ್ಚಾಗಿರಲಾಗದು. ಜಲಜನಕದ ಪರಮಾಣುವಿನಲ್ಲಿರುವ ಒಂದೇ ಒಂದು ಋಣಾಂಶವು ಮೊದಲನೆಯ ಪಥದಲ್ಲಿ ಧನಕಣವನ್ನು ಸುತ್ತುತ್ತಿರುವುದು. ಆರ್ಗಾನಿಲದ ಮೊದಲನೆಯ ಪಥದಲ್ಲಿ ಎರಡು ಋಣಾಂಶಗಳಿರುವುವು. ಇಲ್ಲಿಗೆ ಮೊದಲನೆಯ ಪಥವು ಭರ್ತಿಯಾಯಿತೆಂದು ತಿಳಿಯಬೇಕು. ಲಿಥಿಯಂ ಪರಮಾಣುವಿನಲ್ಲಿ ಮೊದಲನೆಯ ಪಥದಲ್ಲಿ ೨ ಋಣಾಂಶಗಳೂ, ಎರಡನೆಯ ಪಥದಲ್ಲಿ ಒಂದು ಋಣಾಂಶವೂ ಇರುವುವು. ಹೀಗೆಯೇ ಆಮ್ಲಜನಕದ ಪರಮಾಣುವಿನಲ್ಲಿ ಮೊದಲನೆಯ ಪಥದ ೨ ಋಣಾಂಶಗಳೊಂದಿಗೆ ಎರಡನೆಯ ಪಥದಲ್ಲಿ ೬ ಋಣಾಂಶಗಳಿರುವುವು. ನಿಯಾನ್ ಎಂಬ ಅನಿಲದ ಪರಮಾಣುವಿನಲ್ಲಿ ಎರಡನೆಯ ಪಥವೂ ೮ ಋಣಾಂಶಗಳಿಂದ ಭರ್ತಿಯಾಗುವುದು. ಇನ್ನು ಮುಂದಿನ ಪರಮಾಣುಗಳ ಹೆಚ್ಚು ಋಣಾಂಶಗಳು ಮೂರನೆಯ ಪಥವನ್ನು ಸೇರುವುವು. ಭೂತಪರಮಾಣುವಿನ ಬೇರೆ ಬೇರೆ ಪಥಗಳಲ್ಲಿ ಋಣಾಂಶಗಳ ಹಂಚಿಕೆಯನ್ನು ತೋರಿಸುವ ಒಂದು ನೂತನ ಪರ್ಯಾಯಪದಕವನ್ನು ಇಲ್ಲಿ ಕೊಟ್ಟಿರುವೆನು. ಅದನ್ನು ಸ್ವಲ್ಪ ಸಾವಧಾನದಿಂದ ನೋಡಿದರೆ ಪರಮಾಣುರಚನೆಯ ವಿಧಾನವು ಮುಂದಟ್ಟಾಗುವುದು. ಪರಮಾಣುವಿನ ಆಂಗ್ಲೇಯ ಸಂಕೇತದ ಹಿಂದಿರುವ ಸ್ಥಾನಾಂಕಕ್ಕೆ ಸಮವಾದ ಧನವಿದ್ಯುನ್ಮಾನವು ಕೇಂದ್ರದಲ್ಲಿರುವ (Z) ಬೀಜಕಣದಲ್ಲಿರುವುದೆಂದು ಭಾವಿಸಿ, ಒಂದರಿಂದ ಹಿಡಿದು ಸ್ಥಾನಾಂಕವನ್ನು ಸೇರುವ ವರೆಗೂ ಒಂದೊಂದು ಋಣಾಂಶವನ್ನು ನಿರ್ದಿಷ್ಟ ಸ್ಥಾನಗಳಲ್ಲಿ ಹಂಚಿದರೆ ಆ ಭೂತದ ಪರಮಾಣುವಿನ ರಚನೆಯು ಗೊತ್ತಾಗುವುದು. ಉದಾಹರಣೆಗಾಗಿ S ಎಂಬ ಸಂಕೇತವುಳ್ಳ ಗಂಧಕದ ಪರಮಾಣುವನ್ನು ನೋಡಿದರೆ ಅದರ ಸ್ಥಾನಾಂಕವು ೧೬ ಎಂದು ತಿಳಿದುಬರುವುದು. Z ಎಂಬ ಬೀಜಕಣದಲ್ಲಿ ೧೬ ಧನವಿದ್ಯುನ್ಮಾನಗಳಿವೆಯೆಂದು ಭಾವಿಸಿ, ೧, ೨, ೩, . . . . ೧೪, ೧೫, ೧೬ ಎಂದು ತೋರಿಸಿರುವ ಸ್ಥಾನಗಳಲ್ಲಿ ಕ್ರಮವಾಗಿ ೧೬ ಋಣಾಂಶಗಳನ್ನು ಹಂಚಿದರೆ ಗಂಧಕದ ಪರಮಾಣುವಿನ ರಚನೆಯು ವಿಶದವಾಗುವುದು. ಹೀಗೆಯೇ ಇತರ ಪರಮಾಣುಗಳ ವಿಷಯದಲ್ಲೂ ತಿಳಿಯಬೇಕು. ಆದರೆ ಈ ಸಂದರ್ಭದಲ್ಲಿ ಎರಡು ಮುಖ್ಯ ವಿಚಾರಗಳನ್ನು ಜ್ಞಾಪಕದಲ್ಲಿಡಬೇಕು. ಚಿತ್ರದಲ್ಲಿ ತೋರಿಸಿರುವಂತೆ ಋಣಾಂಶಗಳು ಸ್ತಂಭೀಭೂತವಾಗಿ ನಿಂತಿರದೆ ಸದಾಕಾಲದಲ್ಲೂ ಬೀಜಕಣವನ್ನು

ಸುತ್ತುತ್ತಿರುವುವು. ಅಲ್ಲದೆ ಪಥಗಳನ್ನೆಲ್ಲಾ ಚಿತ್ರದಲ್ಲಿ ವೃತ್ತಾಕಾರವಾಗಿ ಒಂದೆ ಮಟ್ಟದಲ್ಲಿ ಬರೆದಿದ್ದರೂ, ಪರಮಾಣುವಿಗೆ ಗೋಳಾಕಾರ ತೋರುವಂತೆ ಆಕಾಶದಲ್ಲಿ ಎಲ್ಲೆಡೆಯಲ್ಲಿಯೂ ಋಣಾಂಶಗಳು ತಿರುಗಬಹುದೆಂದು ತಿಳಿಯಬೇಕು. ಪರಮಾಣುಗಳ ಹೊರಗಣ ಪಥದಲ್ಲಿರುವ ಋಣಾಂಶಗಳು ಆಯಾ ಭೂತಗಳ ಭೌತ ಮತ್ತು ರಾಸಾಯನಿಕ ಗುಣಲಕ್ಷಣಗಳನ್ನು ಗೊತ್ತುಮಾಡುವುವು. ವಿದ್ಯುತ್ಪ್ರೇರಣೆಯಿಂದ ಪರಮಾಣುಗಳು ಹೊರಸೂಸುವ ಬೆಳಕಿಗೆ ಈ ಋಣಾಂಶಗಳೇ ಕಾರಣ. ಅಲ್ಲದೆ ರಾಸಾಯನಿಕ ಸಂಯೋಗಗಳಲ್ಲಿ ಭೂತಪರಮಾಣುಗಳು ತೋರ್ಪಡಿಸುವ ಸಂಯೋಗ ಶಕ್ತಿಯನ್ನು ಅರ್ಥಮಾಡಿಕೊಳ್ಳುವುದಕ್ಕೂ ಈ ಹೊರಗಣ ಪ್ರಾಕಾರದ ಋಣಾಂಶಗಳೇ ಮುಖ್ಯ. ಈ ವಿಷಯಗಳನ್ನು ವಾಚಕರಿಗೆ ಬೇರೊಂದೆಡೆಯಲ್ಲಿ ತಿಳಿಸುತ್ತೇನೆ. ಈ ವರೆಗೆ ಪರಮಾಣುಗಳ ರಚನೆಯನ್ನು ಮಾತ್ರ ವಿವರಿಸಲು ಯತ್ನಿಸಿರುವೆನು. ಒಂದೊಂದು ಪರಮಾಣುವಿನಲ್ಲಿಯೂ ಬೀಜಕಣದ ಸುತ್ತಲೂ ಎಡಬಿಡದೆ ಬೇರೆ ಬೇರೆ ಪಥಗಳಲ್ಲಿ ಚಲಿಸುವ ಋಣಾಂಶಗಳಿವೆಯೆಂದು ಸ್ಥಾಪಿಸಿರುವೆನು.

—ಡಾ|| ಎಲ್. ಸೀಬಯ್ಯ, ಡಿ.ಎಸ್‌ಸಿ., ಎಫ್.ಎ.ಎಸ್‌ಸಿ.

## ಪದಸೂಚಿ

Atom = ಪರಮಾಣು
Atomic Number = ಸ್ಥಾನಾಂಕ
Compound = ಸಂಯುಕ್ತ
Electric Shock = ವಿದ್ಯುತ್‌ಕ್ಷೋಭೆ
Electrolysis = ವಿದ್ಯುದ್ವಿಭಜನೆ
Electron = ಋಣಾಂಶ
Electrostatic Attraction = ವಿದ್ಯುದಾಕರ್ಷಣ
Element = ಭೂತ
Gravitational Attraction = ಗುರುತ್ವಾಕರ್ಷಣ
Helium = ಅರ್ಕಾನಿಲ
Induction Coil = ಪ್ರೇರಕಯಂತ್ರ
Isotope = ಸಕ್ಷೇತ್ರ
Magnetic Field = ಅಯಸ್ಕಾಂತ ಕ್ಷೇತ್ರ
(Meson, Mesotron = ಕಣಾಂಶ)
Molecule = ಅಣು
(Neutrino = ಶೂನ್ಯಾಂಶ)
Neutron = ಶೂನ್ಯಕಣ
Nucleus = ಬೀಜಕಣ
Periodic Table = ಪರ್ಯಾಯ ಪದಕ
Platinum = ಮಹಾರಜತ
(Positron = ಧನಾಂಶ)
Proton = ಧನಕಣ
Unit = ಮೂಲಮಾನ
Vacuum = ಶೂನ್ಯಾಕಾಶ

# ಶಾಂತರಸ ಉಂಟೆ?

ಭರತನು ನಾಟ್ಯಶಾಸ್ತ್ರದಲ್ಲಿ ಶೃಂಗಾರ, ಹಾಸ್ಯ, ಕರುಣ, ರೌದ್ರ, ವೀರ, ಭಯಾನಕ, ಭೀಭತ್ಸ, ಅದ್ಭುತಗಳೆಂಬ ಎಂಟೇ ರಸಗಳನ್ನು ಹೇಳಿದ್ದಾನೆ. ಇವುಗಳಲ್ಲಿ ಶೃಂಗಾರ ವೀರ, ರೌದ್ರ, ಭೀಭತ್ಸ ಇವು ನಾಲ್ಕು ಮೂಲರಸಗಳೆಂದೂ ಇವುಗಳಿಂದ ಕ್ರಮವಾಗಿ ಹಾಸ್ಯ, ಕರುಣ, ಅದ್ಭುತ, ಭಯಾನಕ ರಸಗಳು ಹುಟ್ಟುತ್ತವೆಯೆಂದೂ, ಶೃಂಗಾರದ ಅನುಕರಣವೇ ಹಾಸ್ಯ, ರೌದ್ರವೀರಗಳ ಕಾರ್ಯವು ಕರುಣ, ಭೀಭತ್ಸ ರೂಪವುಳ್ಳದ್ದು ಭಯಾನಕವೆಂದೂ ಹೇಳಿದೆ. ಅವುಗಳಿಗೆ ಅನುಗುಣವಾದ ಸ್ಥಾಯಿಗಳು ಎಂಟೆಂದು ಹೇಳಿದೆ. (ನಾ. ಶಾ. VI ೧೫, ೧೬, ೧೭ ಶ್ಲೋಕಗಳು) ಬಹುದಿನಗಳಿಂದ ಕವಿಗಳು ಎಂಟೇ ರಸಗಳನ್ನು ಹೇಳಿದ್ದಾರೆ. ಕಾಳಿದಾಸನು 'ವಿಕ್ರಮೋರ್ವಶೀಯ' ನಾಟಕದಲ್ಲಿ 'ಮುನಿನಾ ಭರತೇನ ಯಃ ಪ್ರಯೋಗೋ ಭವತೀಷ್ವಷ್ಟರಸಾಶ್ರಯೋ ನಿಯುಕ್ತಾಃ' ಎಂದು ಎಂಟೇ ರಸಗಳನ್ನು ಹೇಳಿದ್ದಾನೆ. ವರರುಚಿಯ 'ಉಭಯಾಭಿಸಾರಿಕ'ದಲ್ಲಿ ಎಂಟು ರಸಗಳು ಹೇಳಿವೆ. 'ಅಮರಕೋಶ'ದಲ್ಲಿ ಎಂಟು ರಸಗಳು ಬಂದಿವೆ. ಭಾಮಹ, ದಂಡಿ ಮೊದಲಾದ ಪ್ರಾಚೀನ ಲಾಕ್ಷಣಿಕರು ಕೂಡ ಭರತನಂತೆ ರಸಗಳು ಎಂಟೆಂಬ ಅಭಿಪ್ರಾಯವನ್ನು ವ್ಯಕ್ತಗೊಳಿಸಿದ್ದಾರೆ.

ರಸಗಳು ಒಂಬತ್ತು ಎಂದು ಸ್ಥಾಪಿಸಿದ ಪ್ರಾಚೀನ ಲಕ್ಷಣಗ್ರಂಥವಾವುದಾದರೂ ಇದೆಯೆ? ನಾರದನಿಗಾಗಿ ವಾಸುಕಿಯಿಂದ ಪ್ರಣೀತವಾದ ನಾಟ್ಯಶಾಸ್ತ್ರವನ್ನು ಕುರಿತ ಗ್ರಂಥವೊಂದರಲ್ಲಿ ರಸಗಳು ಒಂಬತ್ತೆಂಬ ಅಭಿಪ್ರಾಯವಿದೆಯೆಂದು ಶಾರದಾತನಯನು ತನ್ನ 'ಭಾವಪ್ರಕಾಶನ'ದಲ್ಲಿ ತಿಳಿಸುತ್ತಾನೆ. ಇದು ನಂಬಲು ಅರ್ಹವೆಂದು ತೋರುವುದಿಲ್ಲ; ಏಕೆಂದರೆ ಭರತನು ವಾಸುಕಿಯ ಹೆಸರನ್ನು ಹೇಳಿಲ್ಲ. ಭರತನಿಗೆ ಈ ವಿಷಯ ತಿಳಿದಿದ್ದರೆ ಅವಶ್ಯವಾಗಿ ವಾಸುಕಿಯ ಹೆಸರನ್ನು ಹೇಳುತ್ತಿದ್ದನು. ಧರ್ಮಸೂರಿಯನ್ನು ನಂಬುವುದಾದರೆ ಕೋಹಳನೊಬ್ಬ ಶಾಂತವನ್ನು ಪ್ರತಿಪಾದಿಸುವ ಆಲಂಕಾರಿಕ. ಅಭಿನವಗುಪ್ತನು ಇವನ ವಿಷಯ ಹೇಳಿಲ್ಲವಾದುದರಿಂದ ಇವನನ್ನೂ ನಂಬಲು ಬರುವಂತಿಲ್ಲೆಂದು ತೋರುತ್ತದೆ.

ಭರತನ ನಾಟ್ಯಶಾಸ್ತ್ರದಲ್ಲಿ ಮೊದಲು ಎಂಟೇ ರಸಗಳಿದ್ದು, ಇತರರು ಶಾಂತವನ್ನು ರಸವೆಂದು ಪರಿಗಣಿಸಲು ಆರಂಭಿಸಿದಾಗ ನಾಟ್ಯಶಾಸ್ತ್ರದಲ್ಲಿ ಈಚೆಗೆ ಕಂಡುಬಂತೆ ಪಾಠಾಂತರವಾಯಿತೆಂದು ಅಭಿನವಗುಪ್ತರು ಅಭಿಪ್ರಾಯಪಡುತ್ತಾರೆ.

ಶೃಂಗಾರ ಹಾಸ್ಯಕರುಣಾಃ ರೌದ್ರವೀರ ಭಯಾನಕಾಃ
ಭೀಭತ್ಸಾದ್ಭುತ ಶಾಂತಾಶ್ಚ ನವ ನಾಟ್ಯೇ ರಸಾಸ್ಸ್ಮೃತಾಃ

ಹೀಗೆಯೇ ಸ್ಥಾಯಿಭಾವಗಳೂ ಒಂಬತ್ತಾದುವು.—

ತತ್ರ ಶಾಂತಸ್ಯ ಸ್ಥಾಯೀ ವಿಸ್ಮಯ ಶಮಾಃ

'ಕಾವ್ಯಾಲಂಕಾರ ಸಾರಸಂಗ್ರಹ'ದಲ್ಲಿ ಕಂಡಂತೆ ಶಾಂತವನ್ನು ಶಾಸ್ತ್ರೀಯವಾಗಿ ಒಪ್ಪಿಕೊಳ್ಳುವ ಪ್ರಥಮಲಾಕ್ಷಣಿಕ ಉದ್ಭಟ. ಇವನೇ ನಾಟ್ಯಶಾಸ್ತ್ರಕ್ಕೆ ವ್ಯಾಖ್ಯಾನ ವನ್ನು ಬರೆದವರಲ್ಲಿ ಮೊದಲನೆಯವನು. ಆದುದರಿಂದ ಇವನೇ ನಾಟ್ಯಶಾಸ್ತ್ರದ ಪಾಠವನ್ನು ಬದಲಾಯಿಸಿದ್ದರೂ ಇರಬಹುದು.

ಭರತನು ವ್ಯಭಿಚಾರಿಭಾವಗಳನ್ನು ವಿವರಿಸುವಾಗ ತತ್ವಜ್ಞಾನದಿಂದ ನಿರ್ವೇದ, ತಪೋನಿಯಮದಿಂದ ಗ್ಲಾನಿ, ವಿಜ್ಞಾನದಿಂದ ಧೃತಿ, ಶೌಚಾಚಾರ ಗುರುಭಕ್ತಿಗಳಿಂದ ಸ್ಮೃತಿ, ನಾನಾ ಶಾಸ್ತ್ರವಿಚಿಂತನದಿಂದ ಮತಿ ಇವು ಬರುತ್ತವೆಂದು ಹೇಳಿದ್ದಾನೆ. ನಾಟ್ಯವು ತ್ರೈಲೋಕ್ಯಾನುಕರಣವೆಂಬುದನ್ನು ತಿಳಿಸಿದ್ದಾನೆ. ನಾಟ್ಯಶಾಸ್ತ್ರದಲ್ಲಿ ಬರುವ—

i. ಕ್ವಚಿದ್ಧರ್ಮಃ ಕ್ವಚಿತ್ ಕ್ರೀಡಾ ಕ್ವಚಿದರ್ಥಃ ಕ್ವಚಿತ್ ಶಮಃ
ii. ದುಃಖಾರ್ತಾನಾಂ ಶ್ರಮಾರ್ತಾನಾಂ ಶೋಕಾರ್ತಾನಾಂ ತಪಸ್ವಿನಾಮ್
ವಿಶ್ರಾಂತಿ ಜನನಂ ಕಾಲೇ ನಾಟ್ಯಮೇತತ್ ಭವಿಷ್ಯತಿ
iii. ಬ್ರಹ್ಮರ್ಷೀಣಾಂ ಚ ವಿಜ್ಞೇಯಂ ನಾಟ್ಯಂ ವೃತ್ತಾಂತದರ್ಶನಮ್

ಈ ವಾಕ್ಯಗಳಿಂದ ಮುನಿಯಾದ ಭರತನು ಶಮವನ್ನು ಸರಿಯಾಗಿ ಊಹಿಸಿದ್ದನೆಂದೂ, ಆದರೆ ಶಾಂತರಸವೆಂದು ಮಾತ್ರ ಹೇಳಲಿಲ್ಲವೆಂದೂ ಊಹಿಸಬೇಕಾಗುತ್ತದೆ. ಭರತನ ಕಾಲಕ್ಕೆ ಮೋಕ್ಷಪ್ರತಿಪಾದನೆ ಮಾಡುವ, ವಿರಾಗಿಗಳಿಗೆ ಮಾತ್ರ ಪ್ರಿಯವಾದ, ನಾಟಕಗಳಿದ್ದಿರಲಿಕ್ಕಿಲ್ಲ. ಆದರೆ ಮಹಾಭಾರತದಲ್ಲಿ ಶಾಂತರಸವು ಪ್ರವಾಹದಂತೆ ಹರಿಯುತ್ತಿರುವುದನ್ನು ಗುರುತಿಸಬಹುದು. ಅದನ್ನು ಬಿಟ್ಟರೆ ಅಶ್ವಘೋಷನ ಕಾವ್ಯ ನಾಟಕಗಳಲ್ಲಿ ಶಾಂತರಸವು ಪ್ರತಿಪಾದಿತವಾಗಿರುವುದನ್ನು ನೋಡಬಹುದು.

ಜೈನ ಮತ್ತು ಬೌದ್ಧ ಕವಿಗಳು ತತ್ತ್ವಪ್ರತಿಪಾದನೆಗಾಗಿ ಕಾವ್ಯನಾಟಕಗಳನ್ನು ಬರೆದುದರಿಂದ ಶಾಂತರಸವನ್ನು ಆಧಿಕಾರಿಕವಾಗಿ ಸ್ವೀಕರಿಸಬೇಕಾಗಿ ಬಂದಿರಬಹುದು. ರಾಹುಲನೆಂಬವನು ನಾಟ್ಯಶಾಸ್ತ್ರಕ್ಕೆ ವಾಖ್ಯಾನ ಬರೆದನೆಂಬುದೂ ನಮಗೆ ತಿಳಿದ ವಿಷಯ. ವಿಂಟರ್‌ನಿಟ್ಜ್‌ರ ಅಭಿಪ್ರಾಯದಂತೆ ಸು. ೫ನೆಯ ಶತಮಾನದ ಮಧ್ಯಭಾಗದಲ್ಲಿ ರಚಿತವಾದ 'ಅಣೋಗದಾರ ಸುತ್ತ' ಎಂಬ ಜೈನಗ್ರಂಥದಲ್ಲಿ ಭರತನ ಎಂಟು

ರಸಗಳಿಗೆ ಪ್ರಶಾಂತವೆಂಬ ಹೊಸ ರಸವನ್ನು ಸೇರಿಸಿ ನವರಸಗಳನ್ನು ಹೇಳಿದೆ ಎಂದು ಎಸ್. ಕೆ. ಡೆ ಅವರು ಹೇಳುತ್ತಾರೆ.

ಶಾಂತವನ್ನು ರಸವೆಂದು ಒಪ್ಪುವವರಿಗೆಲ್ಲ ಆಧಾರವಾಗಿರುವ 'ನಾಗಾನಂದ' ನಾಟಕವು ಲಾಕ್ಷಣಿಕರ ಮನೋರಾಜ್ಯದಲ್ಲಿ ಕ್ರಾಂತಿಯನ್ನೆಬ್ಬಿಸಿತೆಂದು ತೋರುತ್ತದೆ. ಇದರಿಂದ ಲಾಕ್ಷಣಿಕರಲ್ಲಿ ಹೆಚ್ಚಿನ ಚರ್ಚೆಗೆ ಆಸ್ಪದವಾಯಿತು.

ಶಾಂತವನ್ನು ರಸವೆಂದು ಒಪ್ಪದವರ ಆಕ್ಷೇಪಣೆಗಳು ಇವು :—

(೧) ಭರತನು ಶಾಂತರಸವನ್ನು ಹೇಳಿಲ್ಲ.

(೨) ಅಭಿನಯಾತ್ಮಕವಾದ ನಾಟಕಾದಿಗಳಲ್ಲಿ ಶಮ ಸ್ಥಾಯಿಯಾಗುವುದಿಲ್ಲ. ಶಮವೆಂದರೆ ಚಿತ್ತವಿಕಾರವಿಲ್ಲದಿರುವಿಕೆ. ಇದರಿಂದ ಯಾವ ವ್ಯಾಪಾರವೂ ಇಲ್ಲ. ಆದುದರಿಂದ ಇದನ್ನು ಅಭಿನಯಿಸುವುದಕ್ಕಾಗುವುದಿಲ್ಲ. ಇದಲ್ಲದೆ ಶಾಂತರಸದ ಪರ್ಯಂತಭೂಮಿಯನ್ನು ನಟರು ಪ್ರದರ್ಶಿಸಲಾರರು.

ಇದಕ್ಕೆ ಸಮಾಧಾನ ಹೀಗೆ ಹೇಳಬಹುದು. ಶಾಂತರಸದ ಪರ್ಯಂತಭೂಮಿ ಮಾತ್ರ ಈ ದೋಷಕ್ಕೆ ಪಾತ್ರವಾಗಿಲ್ಲ; ಸಕಲ ರಸಗಳ ಪರ್ಯಂತಭೂಮಿಯೂ ಸ್ವಭಾವದಲ್ಲಿ ಒಂದೇ. ಅವುಗಳನ್ನು ಪ್ರದರ್ಶಿಸುವುದು ಆಗುವುದಿಲ್ಲ. ಶೃಂಗಾರದ ಪರ್ಯಂತಭೂಮಿಯಾದ ಸಂಭೋಗವನ್ನೂ, ರೌದ್ರದ ಪರ್ಯಂತಭೂಮಿಯಾದ ಸಂಹಾರವನ್ನೂ ರಂಗದ ಮೇಲೆ ತೋರಿಸಲು ಸಾಧ್ಯವಿಲ್ಲೆಂದ ಮಾತ್ರಕ್ಕೆ ಈ ರಸಗಳೇ ಇಲ್ಲವೆನ್ನುವುದು ನ್ಯಾಯವೇ? ಶಾಂತವನ್ನು ರಸವೆಂದು ಒಪ್ಪಿದರೆ ದುಸ್ಸಾಧ್ಯವಾದುದನ್ನೂ ಸಾಧ್ಯವೆಂಬಂತೆ ರಂಗದಲ್ಲಿ ಪ್ರದರ್ಶಿಸಲೇಬೇಕೆಂಬ ಬಲಾತ್ಕಾರವೇಕೆ? ಇಷ್ಟು ತುತ್ತತುದಿಗೆ ಹೋಗದೆ ಯತಮಾನನ ಧರ್ಮಪರಾಯಣತೆ, ಜಪತಪ, ಕಾಮಾದಿ ರಾಗಗಳ ಮೇಲೆ ಅವನ ವಿಜಯಗಳು, ಸತ್ಯಶಾಂತಿಗಳಿಗಾಗಿ ಮಾಡುವ ಪ್ರಯತ್ನಗಳು ಇತ್ಯಾದಿಗಳನ್ನು ಕಷ್ಟವಿಲ್ಲದೆ ತೋರಿಸಬಹುದು. ಅವನಲ್ಲಿ ಬೇಕಾದಷ್ಟು ಕ್ರಿಯಾಶಕ್ತಿಗಳಿರುತ್ತವೆ. ಜನಕನಂಥ ಸಿದ್ಧಪುರುಷನು ಲೋಕಸಂಗ್ರಹದಲ್ಲಿ ನಿರತನಾಗಬಹುದು. 'ಕುರ್ಯಾದ್ವಿದ್ವಾಂಸ್ತಥಾಸಕ್ತಃ ಚಿಕೀರ್ಷುಃ ಲೋಕಸಂಗ್ರಹಂ' ಎಂದು ಭಗವದ್ಗೀತೆಯಲ್ಲಿ ಹೇಳಿದೆ; ಸ್ಥಿತಪ್ರಜ್ಞನು ಮಾಡುವ ಅನೇಕ ಕಾರ್ಯಗಳನ್ನೂ ಅವನ ಲಕ್ಷಣಗಳನ್ನೂ ಸವಿಸ್ತರವಾಗಿ ಹೇಳಿದೆ.

(೩) ಭರತನು ಶಾಂತರಸಕ್ಕೆ ವಿಭಾವ, ಅನುಭಾವ, ವ್ಯಭಿಚಾರಿಭಾವ ಇತ್ಯಾದಿಗಳನ್ನು ಹೇಳಿಲ್ಲವೆಂಬುದು ಇನ್ನೊಂದು ಆಕ್ಷೇಪಣೆ.

ಅಭಿನವಗುಪ್ತನು ಇವುಗಳನ್ನು ಹೇಳಿದ್ದಾನೆ. ನಾಟ್ಯಶಾಸ್ತ್ರದ ಪಾಠಾಂತರವೂ ಇವುಗಳನ್ನು ಹೇಳುತ್ತದೆ. ಇದರ ವಿಭಾವಗಳು ತತ್ತ್ವಜ್ಞಾನ, ವೈರಾಗ್ಯ, ಆಶಯ

ಶುದ್ಧಿಗಳೆಂದು ಹೇಳಿದೆ. ಇದರ ಅನುಭಾವಗಳು ಯಮ, ನಿಯಮ, ತಪಸ್ಸು ಮುಂತಾದುವುಗಳು. ಎಲ್ಲ ಭಾವಗಳೂ ಇದಕ್ಕೆ ವ್ಯಭಿಚಾರಿಗಳಾಗಬಹುದು. ಅಭಿನವ ಗುಪ್ತನು ವಿಭಾವಗಳಿಗೆ ಸಾಧುಸಮಾಗಮ, ಸತ್ಸಂಪರ್ಕ, ಪೂರ್ವಕೃತಪುಣ್ಯ, ದೇವತಾನುಗ್ರಹ, ಶಾಸ್ತ್ರಾಧ್ಯಯನಗಳನ್ನು ಸೇರಿಸುತ್ತಾನೆ. ಕಾಮಕ್ರೋಧ ಹೋಗುವುದು, ಧೃತಿ, ಮತಿ ಉತ್ಸಾಹ, ರತಿ (ದೇವರಲ್ಲಿ) ಶ್ರದ್ಧೆ ಇವೆಲ್ಲ ಅನುಭಾವಗಳು ಶಾಂತರಸದಲ್ಲಿ ಕಂಡುಬರುತ್ತವೆ.

(೪) ಇನ್ನೊಂದು ಕಾರಣವೇನೆಂದರೆ ಶಾಂತರಸ ಮನುಷ್ಯಮಾತ್ರರಿಗೆ ಇತರ ರಸಗಳಂತೆ ಸರ್ವಸಾಮಾನ್ಯವಾಗುವುದಿಲ್ಲ. ಏಕೆಂದರೆ ಪ್ರಪಂಚವೆಲ್ಲ ಅವಿದ್ಯೆ ಮತ್ತು ರಾಗದ್ವೇಷಗಳಲ್ಲಿ ಮುಳುಗಿದೆ; ಎಂಟು ರಸಗಳೇ ಮಾನವವರ್ಗಕ್ಕೆ ಹೊಂದಿಕೊಳ್ಳುತ್ತವೆ. ಧೃತಿಮತಿಗಳು ಶಮಕ್ಕೆ ಸಹಾಯವಾಗುವುದಿಲ್ಲ. ಇವೆಲ್ಲ ರಾಗದ್ವೇಷಗಳಿಂದ ಕೂಡಿವೆ. ಕಾರ್ಯರಾಹಿತ್ಯವು ಸತ್ಯಾನ್ವೇಷಣೆಗೆ ನೆರವಾಗುವುದಿಲ್ಲ.—ಇತ್ಯಾದಿಯಾಗಿ ಕೆಲವರು ಆಕ್ಷೇಪಿಸುತ್ತಾರೆ.

ಶಾಂತರಸ ಮಾನವಸಾಮಾನ್ಯಕ್ಕೆ ಅಪೂರ್ವವೆಂದ ಮಾತ್ರಕ್ಕೆ ಪ್ರಪಂಚದಲ್ಲಿ ಯೋಗಿಗಳೂ, ಸಂನ್ಯಾಸಿಗಳೂ ಇಲ್ಲವೆಂದು ಹೇಳಲಾಗುವುದೆ? ಆಧ್ಯಾತ್ಮಿಕ ವಿಚಾರಗಳಲ್ಲಿ ಜಿಜ್ಞಾಸೆ ನಡೆಸಲು ಬಯಸುವವರು ಕೆಲವರಾದರೂ ಇರುತ್ತಾರೆ. ಅವರಿಗಾದರೂ ಶಾಂತರಸ ಪ್ರಿಯವಾಗುವುದರಲ್ಲಿ ಅಭ್ಯಂತರವಿಲ್ಲವಷ್ಟೆ? ಅಂಥವರಿಗೆ ಶೃಂಗಾರವೀರಾದಿಗಳಲ್ಲಿಯೇ ಅಭಿರುಚಿ ಕಡಮೆಯೆಂದು ಹೇಳಬಹುದು. ಹೀಗೆಂದ ಮಾತ್ರಕ್ಕೆ ಶೃಂಗಾರವೀರಾದಿಗಳು ರಸವಲ್ಲವೆನ್ನಲಾಗುವುದೆ?

(೫) 'ಕ್ರೀಡನೀಯಕಮಿಚ್ಛಾಮೋ ದೃಶ್ಯಂ ಶ್ರವ್ಯಂ ಚ ಯದ್ಭವೇತ್' ಎಂಬಂತೆ ನಾಟ್ಯ ಕ್ರೀಡೆಗಾಗಿ ಹುಟ್ಟಿದುದು; ತ್ರಿವರ್ಗಫಲ ವ್ಯುತ್ಪತ್ತಿಗಾಗಿ ಬರೆದದ್ದು, ಅಂತೆಯೇ ಇದು ಕ್ರೀಡೆಯನ್ನೂ ಮೂರು ಪುರುಷಾರ್ಥಗಳನ್ನೂ ಹೇಳಬೇಕು. ಎಲ್ಲ ನಾಟಕಗಳೂ ಹೀಗೆಯೆ. ಯಾವ ನಾಟಕದಲ್ಲಿಯೂ ಶಾಂತರಸ ಪ್ರತಿಪಾದಿತವಾಗಿಲ್ಲ. ನಾಗಾನಂದದಲ್ಲಿ ಶಾಂತರಸವಿದೆಯೆಂದು ಹೇಳಲಾಗುವುದಿಲ್ಲ. ಇಲ್ಲಿ ಫಲ ಮೋಕ್ಷವಲ್ಲ; ವಿದ್ಯಾಧರಚಕ್ರವರ್ತಿಪದವಿ. ಅಲ್ಲಿ ಶೃಂಗಾರದ ವಸ್ತು ಉದ್ದಿಷ್ಟವಾಗಿದೆ. ಶೃಂಗಾರಕ್ಕೂ ಶಾಂತಕ್ಕೂ ಎಣ್ಣೆ ಸೀಗೆಯ ಸಂಬಂಧ. ಆದ್ದರಿಂದ ದಯಾವೀರ ಶೃಂಗಾರಗಳೇ ನಾಗಾನಂದದಲ್ಲಿ ಮುಖ್ಯವೆಂಬುದು ಮತ್ತೊಂದು ಆಕ್ಷೇಪಣೆ.

ಮೇಲಿನ ಕಾರಣಗಳಾವುವೂ ನಿಲ್ಲುವುದಿಲ್ಲ. ಶಾಂತವು ರಸವೆಂದು ಒಪ್ಪಲೇಬೇಕಾಗಿರುವಂತೆ ತೋರುತ್ತದೆ. ಶೃಂಗಾರಾದಿಗಳಂತೆ ಪ್ರಸಿದ್ಧವಲ್ಲದಿರಬಹುದು. ಆದರೆ ಅಸತ್ಯವೆಂದು ಅಲ್ಲಗಳೆಯಲು ಆಗುವುದೆ? ಶಮ ಪ್ರಪಂಚದ ಒಂದು ಅಂಶ

ಮಾತ್ರವಲ್ಲ; ಒಂದು ಮಹದಂಶ. ನಾಟಕದಲ್ಲಿಯೂ ಹೀಗೆಯೆ. ಕೇವಲ ತ್ರಿವರ್ಗಗಳಲ್ಲಿ ಕಾವ್ಯ ನಾಟಕಗಳು ತೃಪ್ತಿಹೊಂದುವುದು ಸರಿಯಲ್ಲ; ತ್ರಿವರ್ಗಗಳಿಗೂ ಮೀರಿದ ಅತ್ಯುನ್ನತವಾದ ಪರಮಪುರುಷಾರ್ಥವನ್ನು ಕೂಡ ತಿಳಿಸಬೇಕು. ಮೋಕ್ಷವನ್ನು ಬಯಸುವವನ ಪ್ರವೃತ್ತಿಪ್ರಯತ್ನಗಳನ್ನು ಪ್ರತಿಪಾದಿಸುವ ನಾಟಕದಲ್ಲಿ ಶಾಂತವೇ ರಸ. (ಅಭಿನವಭಾರತಿ)

ರಾಗದ್ವೇಷಗಳನ್ನು ನಿರ್ಮೂಲವಮಾಡುವುದು ಅಸಾಧ್ಯವೆಂದು ಹೇಳುವುದು ಋಷಿಪರಂಪರೆಗೆ, ಧರ್ಮಬುದ್ಧಿಗೆ ಕಳಂಕ ತಂದಂತೆ. ಶಾಂತರಸವನ್ನು ಆಸ್ವಾದಿಸುವವರು ಬಹು ಜನರಿದ್ದಾರೆ. ಸಾಹಿತ್ಯವು ಧರ್ಮ ಅರ್ಥ ಕಾಮಗಳಿಂದ ಮೇಲೆ ಏರದಿರುವುದನ್ನು ನೋಡಿದರೆ ನಾವು ಮರುಗಬೇಕಾಗುತ್ತಿದೆ. ಎಲ್ಲರೂ ಎಲ್ಲ ರಸಗಳಿಂದ ಚಿತ್ತಸಂವಾದವನ್ನು ಪಡೆಯಲಾರರು. ಭಯ ಜುಗುಪ್ಸೆಗಳು ನೀಚಪ್ರಕೃತಿಭಾವಗಳೆಂದು ಭರತನೇ ಹೇಳಿದ್ದಾನೆ. ಉತ್ತಮ ಸಾಮಾಜಿಕನಿಗೆ ಅದರಿಂದ ಚಿತ್ತಸಂವಾದವಾಗಲಾರದು. ವಿಟರು ಶೃಂಗಾರದಲ್ಲಿ ಮಗ್ನರಾದರೆ, ತುಷ್ಟರಾದರೆ, ವೀತರಾಗರು ಶಾಂತದಲ್ಲಿ ಮಗ್ನರಾಗುವರು, ತುಷ್ಟರಾಗುವರು. ಆನಂದವರ್ಧನನ ಅಭಿಮತದಂತೆ ಮಹಾಭಾರತದಲ್ಲಿ ಶಾಂತರಸವಿದೆ. ಸ್ವಯಂವರ, ದ್ಯೂತ, ಪಾಂಡವರ ಸಂಕಷ್ಟ, ಯುದ್ಧ ಇವುಗಳಲ್ಲಿ ಕೆಲವರು ಇಷ್ಟವುಳ್ಳವರಾಗಿದ್ದರೆ, ಮತ್ತೆ ಕೆಲವರು ಅದರಲ್ಲಿಯ ಉದಾತ್ತತತ್ತ್ವ, ಧರ್ಮ, ಶಮ, ಮೋಕ್ಷ ಇವುಗಳ ವಿಷಯದಲ್ಲಿ ಮನಸೋತವರಾಗಿದ್ದಾರೆ.

ಶಾಂತವನ್ನೇ ಪ್ರತಿಪಾದಿಸುವ ಪ್ರತ್ಯೇಕವಾದ ಸಾಹಿತ್ಯಪರಂಪರೆಯೇ ಬಂದಿದೆ. ಮಹಾಭಾರತದಲ್ಲಿ ಆನಂದವರ್ಧನನು ಶಾಂತರಸದ ಸ್ಥಾನವನ್ನು ಸ್ಫುಟವಾಗಿ ಪುಷ್ಟೀಕರಿಸಿದ್ದಾನೆ. ಅಶ್ವಘೋಷನ 'ಶಾರೀಪುತ್ರ ಪ್ರಕರಣ'ದಲ್ಲಿ ಶಾಂತವಿದೆ. ಕೃಷ್ಣಮಿಶ್ರನ ಪ್ರಬೋಧ ಚಂದ್ರೋದಯದಲ್ಲಿಯೂ ಶಾಂತ ಬಂದಿದೆ. ಶಿವ, ವಿಷ್ಣು ಮುಂತಾದವರ ವಿಷಯದ ನಾಟಕಗಳಲ್ಲಿಯೂ ಶಾಂತರಸ ಬರುತ್ತದೆ, ಇವಲ್ಲದೆ 'ಮುಕ್ತಿಪರಿಣಯ', 'ಜೀವನ್ಮುಕ್ತಕಲ್ಯಾಣ', 'ಭಕ್ತಿವೈಭವನಾಟಕ' ಹೀಗೆ ನೂರಾರು ನಾಟಕಗಳು ಈಚೆಗೆ ತಲೆಯೆತ್ತಿವೆ.

ಸಾಮಾನ್ಯವಾಗಿ ಎಲ್ಲ ಆಲಂಕಾರಿಕರು ಒಂದಲ್ಲೊಂದು ರೀತಿಯಿಂದ ಶಾಂತರಸವನ್ನು ಒಪ್ಪುತ್ತಾರೆ. ಉದ್ಭಟ ತನ್ನ 'ಕಾವ್ಯಾಲಂಕಾರ ಸಾರಸಂಗ್ರಹ'ದಲ್ಲಿ ಶಾಂತದ ಹೆಸರನ್ನಷ್ಟೇ ಹೇಳಿದ್ದಾನೆ. ಇವನು ತನ್ನ ಅನುಪಲಬ್ಧವಾದ ನಾಟ್ಯಶಾಸ್ತ್ರದ ಟೀಕೆಯಲ್ಲಿ ಇದರ ವಿಷಯ ವಿಸ್ತಾರವಾಗಿ ಹೇಳಿರಬಹುದು. ಲೊಲ್ಲಟನೂ ಶಾಂತರಸವನ್ನು ಒಪ್ಪಿರುವಂತೆ ಕಾಣುತ್ತದೆ. ರುದ್ರಟ ಶಾಂತವನ್ನು ಒಪ್ಪಿ ಸಮ್ಯಕ್‌ಜ್ಞಾನ

ಅಥವಾ ತತ್ತ್ವಜ್ಞಾನ ಇದರ ಸ್ಥಾಯಿಯೆಂದು ಹೇಳಿದ್ದಾನೆ. ನಮಿಸಾಧು ಶಾಂತರಸವನ್ನು ಅಲ್ಲಗಳೆಯುವುದು ಅಯೋಗ್ಯವೆಂದು ಹೇಳಿದ್ದಾನೆ. ರಾಜಶೇಖರ ರುದ್ರಟನನ್ನು ಅನುಸರಿಸಿರುವುದರಿಂದ ಶಾಂತವನ್ನು ಒಪ್ಪಿರಬೇಕು. ಆನಂದವರ್ಧನಾಚಾರ್ಯರು ಶಾಂತವನ್ನು ಒಪ್ಪಿ ಉದಾಹರಣೆಗಾಗಿ 'ನಾಗಾನಂದ'ವನ್ನು ಹೇಳಿ ತೃಷಾಕ್ಷಯ ಸುಖ ಇದರ ಸ್ಥಾಯಿಭಾವವೆಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಗೊಳಿಸಿದ್ದಾರೆ. ಭಟ್ಟತೌತನು ಶಾಂತ ಪ್ರಧಾನರಸವೆಂದು ಹೇಳಿ ವಿರುದ್ಧಪಕ್ಷದವರನ್ನು ಸಮರ್ಪಕವಾದ ಉತ್ತರದಿಂದ ಖಂಡಿಸಿದನೆಂದು ಅಭಿನವಗುಪ್ತನಿಂದ ಸೂಚಿತವಾಗಿವೆ. ಅಭಿನವಗುಪ್ತನಿಗೆ ಶಾಂತರಸ ಪರಮಪ್ರಿಯವಾದ, ಮೋಕ್ಷದಾಯಕವಾದ ಸರ್ವ ಸ್ಥಾಯಿಗಳಿಗೂ ಮೂಲಭೂತವಾದ ಉತ್ಕೃಷ್ಟರಸ, ಕನ್ನಡ ಆಲಂಕಾರಿಕರಾದ ನೃಪತುಂಗ, ನಾಗವರ್ಮ ಮುಂತಾದವರೂ ಶಾಂತರಸವನ್ನು ಹೇಳಿದ್ದಾರೆ.

ಧ್ವನ್ಯಾಲೋಕದ ಚಂದ್ರಿಕಾ ವ್ಯಾಖ್ಯಾನಕಾರನು ಶಾಂತವನ್ನು ಒಪ್ಪಿದರೂ ಅದು ನಾಯಕರಸವಾಗಿ ನಾಟಕದಲ್ಲಿ ಬರಬಾರದೆಂದು ಹೇಳಿದ್ದಾನೆ. ಶಾಂತರಸದ ಚರಿತ್ರೆಯಲ್ಲಿ ಚಂದ್ರಿಕಾಕಾರನ ಮತವು ಒಂದು ಘಟ್ಟವನ್ನು ಸೂಚಿಸುತ್ತದೆ. ಇವನು ಶಾಂತರಸವನ್ನು ಒಪ್ಪಿ ಅಧೀನರಸವೆಂದು ಅಭಿಪ್ರಾಯಪಡುತ್ತಾನೆ.

ಇದರ ಎರಡನೆಯ ಘಟ್ಟದಲ್ಲಿ ಶಾಂತವನ್ನು ಕಾವ್ಯದಲ್ಲಿ ಆಧಿಕಾರಿಕ ರಸವೆಂದು ಒಪ್ಪಿ ನಾಟಕದಲ್ಲಿ ಇದು ಎಂದಿನಂತೆ ಪ್ರಾಸಂಗಿಕವಾಗಿ ಬರಬೇಕೆಂದು ಅಭಿಪ್ರಾಯಪಡುತ್ತಾರೆ.

ಕೊನೆಯ ಘಟ್ಟ ಶಾಂತರಸವು ನಾಟ್ಯದಲ್ಲಿಯೂ ಆಧಿಕಾರಿಕವಾಗಿ ಬರಬಹುದೆಂದು ಒಪ್ಪಿಕೊಳ್ಳಬಹುದು. ಭಟ್ಟನಾಯಕನೂ ಅಭಿನವಗುಪ್ತ ಭಟ್ಟತೌತರಂತೆ ಶಾಂತರಸದ ಹಿರಿಮೆಯನ್ನು ಹೇಳುವವನಾಗಿದ್ದಾನೆ.

ಕ್ಷೇಮೇಂದ್ರನು ಮಹಾಭಾರತದಲ್ಲಿ ಶಾಂತರಸವನ್ನು ಒಪ್ಪಿ, ತನ್ನಿಂದ ರಚಿತವಾದ ಗ್ರಂಥಗಳಲ್ಲಿ ಈ ರಸವನ್ನು ಪ್ರತಿಪಾದಿಸಿದ್ದಾನೆ. 'ಸರಸ್ವತೀ ಕಂಠಾಭರಣ', 'ಶೃಂಗಾರಪ್ರಕಾಶ' ಇವೆರಡರಲ್ಲಿಯೂ ಭೋಜರಾಜನು ಶಾಂತವನ್ನು ಪ್ರತಿಪಾದಿಸಿದ್ದಾನೆ. ಮಮ್ಮಟ ಮೊದಲು ಎಂಟೇ ರಸಗಳನ್ನು ಹೇಳಿ ತರುವಾಯ ಶಾಂತವನ್ನೂ ಸೇರಿಸಿ ನಿರ್ವೇದವು ಅದರ ಸ್ಥಾಯಿಭಾವವೆಂದು ಹೇಳುತ್ತಾನೆ.

ಶಾಂತರಸವನ್ನು ಒಪ್ಪದೆ ಇರುವವರು ಕೇವಲ ನಾಟ್ಯಶಾಸ್ತ್ರವನ್ನೂ ದಶರೂಪಕವನ್ನೂ ಕುರಿತ ಗ್ರಂಥಗಳನ್ನು ಬರೆದ ಲಾಕ್ಷಣಿಕರು. ಇವರು ಶಾಂತವನ್ನು ತಿರಸ್ಕರಿಸಿ ಭರತನಿಗೆ ವಿಧೇಯತೆಯನ್ನು ತೋರಿಸಿದ್ದಾರೆ. ದಶರೂಪಕದಲ್ಲಿ ಈ ಮನೋಭಾವ ಮೊದಲಾಗುತ್ತದೆ. ಧನಂಜಯ ಧನಿಕರಿಬ್ಬರೂ ಶಾಂತರಸದ ಅಭಾವವನ್ನು ಸಾಧಿಸಿ

ದ್ದಾರೆ. ಸಿಂಗಭೂಪಾಲನು ಎಂಟೇ ರಸಗಳನ್ನು ಹೇಳಿ, ಶಾಂತವನ್ನು ಸೇರಿಸಿದ ಭೋಜನನ್ನು ಖಂಡಿಸಿದ್ದಾನೆ.

ಕೆಲವರು ಶಾಂತರಸಕ್ಕೆ ಅಷ್ಟು ವಿರುದ್ಧವಾಗಿಲ್ಲ. ಇವರು ಅಭಾವವಾದಿಗಳಲ್ಲ; ಅಂತರ್ಭಾವವಾದಿಗಳು. ಶಾಂತವೆಂಬುದು ಕಾವ್ಯನಾಟಕಗಳಲ್ಲಿದೆ; ಆದರೆ ಅದಕ್ಕೆ ಶಾಂತವೆಂದು ವಿಶೇಷ ಅಭಿಧಾನ ಕೊಡುವುದು ಆವಶ್ಯಕವಲ್ಲವೆಂದು ಅವರ ಮತ. ಏಕೆಂದರೆ ಭರತನು ಅದನ್ನು ಹೇಳಿಲ್ಲ. ಭರತನು ಹೇಳಿದ ಇನ್ನಿತರ ರಸಗಳಲ್ಲಿ ಅದನ್ನು ಪರಿಗಣಿಸಬೇಕೆಂಬುದು ಅವರ ವಾದ.

ಅಭಿನವಗುಪ್ತನ ಪ್ರಕಾರ ತತ್ತ್ವಜ್ಞಾನ ಅಥವಾ ಆತ್ಮಸ್ವರೂಪವೇ ಶಾಂತ ರಸಕ್ಕೆ ಸ್ಥಾಯಿ. ಈ ತತ್ತ್ವಜ್ಞಾನದಿಂದಲೇ ಮೋಕ್ಷಪ್ರಾಪ್ತಿ. ಈ 'ಆತ್ಮ' ಸ್ಥಾಯಿಯ ಸ್ವರೂಪವು ಬೇರೆ ಸ್ಥಾಯಿಗಳಂತೆ ಅಲ್ಲ. ಇದು ಎಲ್ಲ ಸ್ಥಾಯಿಗಳಿಗೆ ಮೂಲಾಧಾರವಾದುದು. ವಿಶ್ವವೆಲ್ಲ ಇದಕ್ಕೆ ಉದ್ದೀಪನವಿಭಾವವಾಗಬಹುದು; ದೈವಭಕ್ತಿ, ಬ್ರಹ್ಮವಾಸನೆಗಳು ಆಲಂಬನವಿಭಾವವಾಗಬಹುದು. ಎಲ್ಲ ವ್ಯಭಿಚಾರಿ ಭಾವಗಳೂ ಇದಕ್ಕೆ ನೆರವಾಗಬಹುದು. ಭರತನು ಅದನ್ನು ಒಪ್ಪಿಲ್ಲವೆಂದು ಹೇಳದೆ ಬಿಟ್ಟಿಲ್ಲ, ಆದರೆ ಅದನ್ನು ಹೇಳದಿದ್ದರೂ ಗಂಭೀರವಾದ ಮೌನದಿಂದ ಪ್ರತಿಪಾದಿಸಿ ದ್ದಾನೆ ಎಂದು ಮುಂತಾಗಿ ಹೇಳಿ ಅಭಿನವಗುಪ್ತನು 'ಏಕ ಏವ ತಾವತ್ ಪರಮಾರ್ಥ ತೋ ರಸಃ' ಎಂದು ರಸಸಂಯೋಜನೆಮಾಡಿ ಶಾಂತರಸಕ್ಕೆ ಪ್ರಧಾನ ಪಟ್ಟ ಕಟ್ಟಿದ್ದಾನೆ.

ಈ ಎಲ್ಲ ವಾದವಿವಾದ ಮತ್ತು ಅಭಿನವಗುಪ್ತನ ನಿರ್ಣಯಗಳನ್ನು ಪರಿಶೀಲಿಸಿದರೆ ಭರತನು ಹೇಳಿರುವುದು ಎಂಟೇ ರಸಗಳೆಂದೂ, ಶಾಂತರಸವನ್ನು ಈಚಿನವರು ಒಪ್ಪಿ ಕೊಂಡು ಅದಕ್ಕೆ ಆಧಾರವನ್ನು ಬಹು ಕ್ಲೇಶದಿಂದ ಭರತನಲ್ಲಿ ಕಂಡುಹಿಡಿಯುತ್ತಿರುವ ರೆಂದೂ ಗೊತ್ತಾಗುತ್ತದೆ. ಶಾಂತಕ್ಕೆ ಸ್ಥಾಯಿಯನ್ನು ಹೇಳುವಾಗ 'ದೆಹಲೀ ದೀಪನ್ಯಾಯ' 'ಮಂಗಲ ಅಮಂಗಲ' ಇವುಗಳನ್ನು ಆಶ್ರಯಿಸಿ ಕಷ್ಟಪಟ್ಟು ಭರತನಲ್ಲಿಯೇ ಇರುವ ನಿರ್ವೇದ, ಶಮ ಇತ್ಯಾದಿಗಳನ್ನು ಹುಡುಕಿಕೊಳ್ಳುತ್ತಾರೆಂದು ತೋರುತ್ತದೆ. ರಾಗದ್ವೇಷಾದಿಗಳಿಂದ ಚಿತ್ತವು ಕ್ಷುಭಿತವಾದಾಗ ನಾನಾ ಅನುಭಾವ ಗಳು ಉಂಟಾಗುತ್ತವೆ. ಹಾಗಲ್ಲದೆ ಚಿತ್ತವು ತನ್ನಲ್ಲಿ ತಾನು ನಿರುದ್ಧವಾಗಿ ಇಲ್ಲವೆ ಶಾಂತವಾಗಿ ಬಾಹ್ಯವಿಷಯಗಳಲ್ಲಿ ಪ್ರವರ್ತಿಸದಿದ್ದರೆ ಶಾರೀರಕವಾದ ಬಾಹ್ಯವಿಕಾರ ಗಳೂ ಕಾರ್ಯಗಳೂ ಉಂಟಾಗುವುದಿಲ್ಲ; ಉಂಟಾದರೂ ಅವು ಸೂಕ್ಷ್ಮವಾಗಿರು ವುವು. ನಾಟ್ಯದಲ್ಲಿ ಅಭಿನಯವೇ ಪ್ರಧಾನವಾಗಿರುವುದರಿಂದ ಅನುಭಾವಗಳೇ ಇಲ್ಲದ ಅಥವಾ ಇದ್ದರೂ ಸೂಕ್ಷ್ಮವಾಗಿಯೂ ಅಲ್ಪವಾಗಿಯೂ ಇರುವ ಶಾಂತವನ್ನು

ಅಭಿನಯಿಸುವುದು ಕಷ್ಟ. ಅಲ್ಲದೆ ಇದರಿಂದ ಭಾವಾಂತರಗಳು ಉಂಟಾಗುವುದಿಲ್ಲ. ರಸವಾಗಬೇಕಾದರೆ ಭಾವಾಂತರಗಳು ಹುಟ್ಟಿ ಅವುಗಳ ಅಭಿನಯದಿಂದ ಸ್ಥಾಯಿ ಪುಷ್ಟಿಗೊಳ್ಳಬೇಕು. ಶ್ರವ್ಯಕಾವ್ಯದಲ್ಲಿ ಶಾಂತಕ್ಕೆ ವಿಭಾವಾದಿಗಳನ್ನು ಚೆನ್ನಾಗಿ ಕಲ್ಪಿಸಿ ಅದರಿಂದಾಗುವ ಫಲಗಳನ್ನು ವಿಸ್ತಾರವಾಗಿ ತೋರಿಸಿ ಪುಷ್ಟಿಗೊಳಿಸುವುದು ಸಾಧ್ಯ. ಆದ್ದರಿಂದ ಆಲಂಕಾರಿಕರು ಇದನ್ನು ಕಾವ್ಯದಲ್ಲಿ ಒಪ್ಪಿಕೊಂಡಿರುವರೆಂದು ತೋರುತ್ತದೆ.

ರಾಮಚಂದ್ರರಾವ್ ಪಟ್ವಾರಿ.

---

# ಸರ್ ಆಲಿವರ್ ಲಾಡ್ಜ್ ಮತ್ತು ಭೂತಶಾಸ್ತ್ರ

ಸರ್ ಆಲಿವರ್ ಜೋಸೆಫ್ ಲಾಡ್ಜ್ ಅವರು ಇಂಗ್ಲೆಂಡ್ ದೇಶದ ಸ್ಟ್ಯಾಫರ್ಡ್‌ಷೈರ್‌ನಲ್ಲಿ ಕ್ರಿ.ಶ. ೧೮೫೧ನೆಯ ಜೂನ್ ತಿಂಗಳಲ್ಲಿ ಹುಟ್ಟಿದರು. ಇವರ ತಂದೆ ತಾಯಿಗಳು ಇವರನ್ನು ವ್ಯಾಪಾರಕಾರ್ಯಕ್ಕೆ ಹಾಕಬೇಕೆಂದು ಉದ್ದೇಶಿಸಿದ್ದರು. ಆದರೆ ಇವರಿಗೆ ವಿಜ್ಞಾನಶಾಸ್ತ್ರದಲ್ಲಿ ಹೆಚ್ಚು ಅಭಿರುಚಿ ಇದ್ದುದರಿಂದ ಕ್ರಿ.ಶ. ೧೮೭೨ರಲ್ಲಿ ಇವರು ಲಂಡನ್ ವಿಶ್ವವಿದ್ಯಾನಿಲಯದ ಕಾಲೇಜನ್ನು ಸೇರಿ ಪ್ರೌಢವಿದ್ಯಾಭ್ಯಾಸವನ್ನು ಮಾಡಿದರು. ೧೮೭೫ರಲ್ಲಿ ಬೆಡ್‌ಫರ್ಡ್ ಕಾಲೇಜಿನಲ್ಲಿ ಪ್ರಕೃತಿತತ್ವಶಾಸ್ತ್ರದ ಪಂಡಿತರಾಗಿ ಸೇರಿ ೧೮೭೭ರಲ್ಲಿ ಲಂಡನ್ ವಿಶ್ವವಿದ್ಯಾನಿಲಯದಲ್ಲಿ ಗಣಿತಶಾಸ್ತ್ರದ ಅಧ್ಯಾಪಕರಾದರು. ಎರಡು ವರ್ಷಗಳನಂತರ ಲಿವರ್ಪೂಲ್ ವಿಶ್ವವಿದ್ಯಾನಿಲಯದಲ್ಲಿ ಭೌತಶಾಸ್ತ್ರದ ಮುಖ್ಯ ಪಂಡಿತರಾಗಿ ನೇಮಿಸಲ್ಪಟ್ಟರು. ೧೯೦೦ರಲ್ಲಿ ಹೊಸದಾಗಿ ಸ್ಥಾಪಿಸಲ್ಪಟ್ಟ ಬರ್ಮಿಂಗ್‌ಹ್ಯಾಮ್ ವಿಶ್ವವಿದ್ಯಾನಿಲಯದ ಮುಖ್ಯಾಧಿಕಾರಿ ಪದವಿಗೆ ಏರಿಸಲ್ಪಟ್ಟರು.

ಸರ್ ಆಲಿವರ್ ಲಾಡ್ಜ್ ಅವರು ಭೌತಶಾಸ್ತ್ರದಲ್ಲಿ ಅನೇಕ ಪರಿಶೋಧನೆಗಳನ್ನು ಮಾಡಿರುವರು. ವಿದ್ಯುಚ್ಛಕ್ತಿ ವಿಷಯಕವಾದ ಪರಿಶೋಧನೆಗಳಲ್ಲಿ ಇವರ ಹೆಸರು ಪ್ರಖ್ಯಾತವಾಗಿದೆ. ಮಿಂಚಿನ ಸ್ವರೂಪ, ವಿದ್ಯುತ್ಕಣಗಳ ಸ್ವರೂಪ, ಆಕಾಶದ ಅಲೆಗಳು (wireless waves) ಮುಂತಾದುವುಗಳ ವಿಷಯದಲ್ಲಿ ಇವರು ಗಹನವಾದ ಪರಿಶೋಧನೆಗಳನ್ನು ನಡೆಸಿರುವರು. ಇಷ್ಟೇ ಅಲ್ಲದೆ ಜನಸಾಮಾನ್ಯರಿಗೆ ಸುಲಭವಾಗಿ ವಿಜ್ಞಾನಶಾಸ್ತ್ರದ ತತ್ವಗಳನ್ನು ತಿಳಿಸುವ ಅನೇಕ ಗ್ರಂಥಗಳನ್ನೂ ಬರೆದಿರುವರು. ೧೯೦೭ರಲ್ಲಿ ಇವರಿಗೆ ನೈಟ್‌ಹುಡ್ ಪ್ರಶಸ್ತಿಯೂ ರಾಯಲ್ ಸೊಸೈಟಿ ಎಂಬ ವಿದ್ವತ್ ಸಂಸ್ಥೆಯ ಸದಸ್ಯತ್ವವೂ ದೊರೆತುವು. ೧೯೧೦ರಲ್ಲಿ ಸರ್ ಆಲಿವರ್ ಲಾಡ್ಜ್ ಅವರಿಗೆ ಆ ಕಾಲದಲ್ಲಿ ಹೆಚ್ಚು ಲೋಕಪ್ರಸಿದ್ಧಿಗೆ ಬಂದಿದ್ದ ಭೂತಶಾಸ್ತ್ರದಲ್ಲಿ (Spiritualism) ಆಸಕ್ತಿಯು ಉಂಟಾಯಿತು. ಮರಣವನ್ನು ಹೊಂದಿದವರ ಕೂಡ ನಾವು ಮಾತನಾಡಬಹುದು ; ಮರಣಹೊಂದಿದವರು ಭೂತರೂಪದಲ್ಲಿ ಇರುವರು ಎಂಬ ಭೂತಶಾಸ್ತ್ರದ ಪ್ರಮೇಯದಲ್ಲಿ ಇವರಿಗೆ ನಂಬಿಕೆ ಬಂದಿತು. ೧೯೧೪–೧೮ರಲ್ಲಿ ನಡೆದ ಮಹಾಯುದ್ಧದಲ್ಲಿ ಇವರ ಮಗನಾದ ರೇಮಂಡ್ ಎಂಬಾತನು ಮಡಿದ ಮೇಲೆ ಇವರಿಗೆ ಈ ವಿಷಯದಲ್ಲಿದ್ದ ನಂಬಿಕೆಯು ಹೆಚ್ಚು ದಾರ್ಢ್ಯವನ್ನು ಹೊಂದಿತು. ೧೯೧೬ರಲ್ಲಿ ಗತಿಸಿಹೋದ ತಮ್ಮ ಮಗನ ಆತ್ಮವು ತಮಗೆ ತಿಳಿಸಿದ ವಿಷಯಗಳನ್ನು 'ರೇಮಂಡ್'

ಎಂಬ ಗ್ರಂಥದಲ್ಲಿ ಉಲ್ಲೇಖಿಸಿರುವರು. ಇದೇ ಕಾಲದಲ್ಲಿ ಭೂತಶಾಸ್ತ್ರಕ್ಕೆ ಸಂಬಂಧ ಪಟ್ಟ ಇನ್ನೂ ಅನೇಕ ಗ್ರಂಥಗಳನ್ನು ಬರೆದು ೧೯೨೦ರಲ್ಲಿ ಅಮೇರಿಕಾ ದೇಶದಲ್ಲಿ ಬಹಳವಾಗಿ ಸಂಚಾರಮಾಡಿ ಅನೇಕ ಉಪನ್ಯಾಸಗಳನ್ನು ಮಾಡಿದರು. ೧೯೧೯ರಲ್ಲಿ ರಾಯಲ್ ಸೊಸೈಟಿ ಆಫ್ ಆರ್ಟ್ಸ್ ಎಂಬ ಸಂಸ್ಥೆಯು ಇವರಿಗೆ ಪಾರಿತೋಷಕ ವನ್ನು ಕೊಟ್ಟಿತು. ಅನಂತರದಲ್ಲಿ ಲಂಡನ್ ಪಟ್ಟಣದ ಅತ್ಯಂತ ಗೌರವಸಂಸ್ಥೆಗಳಾದ ಫಿಸಿಕಲ್ ಸೊಸೈಟಿ, ಸೊಸೈಟಿ ಫಾರ್ ಸೈಕಿಕಲ್ ರಿಸರ್ಚ್, ರೇಡಿಯೊ ಸೊಸೈಟಿ ಮತ್ತು ರಾಂಜೆನ್ ಸೊಸೈಟಿ ಮುಂತಾದ ಘನ ಸಂಸ್ಥೆಗಳ ಅಧ್ಯಕ್ಷರಾಗಿ ಬಹಳ ದಕ್ಷತೆಯಿಂದ ಕೆಲಸಮಾಡಿದರು. ಈ ವರ್ಷದ ಆಗಸ್ಟ್ ತಿಂಗಳಲ್ಲಿ ಸರ್ ಆಲಿವರ್ ಲಾಡ್ಜ್ ಅವರು ದಿವಂಗತರಾದರು.

ಸರ್ ಆಲಿವರ್ ಲಾಡ್ಜ್ ಅವರು ದಿವಂಗತರಾದಾಗ ಅವರಿಗೆ ೮೯ ವರ್ಷ ವಯಸ್ಸಾಗಿತ್ತು. ತಮ್ಮ ಜೀವಮಾನದ ಕೊನೆಯ ಮೂವತ್ತು ವರ್ಷಗಳಲ್ಲಿ ಅವರು ಭೂತಶಾಸ್ತ್ರದಲ್ಲಿ ನಿಸ್ಸೀಮವಾದ ಶ್ರದ್ಧೆಯನಿಟ್ಟಿದ್ದರು. ವಿಜ್ಞಾನಶಾಸ್ತ್ರದಲ್ಲಿ ಅದ್ವಿತೀಯ ರಾಗಿ ಮೇಧಾವಿಗಳಾದ ಅಂಥವರು ಈ ಶಾಸ್ತ್ರದಲ್ಲಿ ದೀಕ್ಷೆಯನ್ನು ವಹಿಸಿದ್ದರೆ ಅದರಲ್ಲಿ ಏನಾದರೂ ತಿರುಳು ಇರಲೇಬೇಕು. ಆದುದರಿಂದಲೂ ಮತ್ತು ನಮ್ಮ ದೇಶದಲ್ಲಿ ಭೂತ ಶಾಸ್ತ್ರದ ತಿಳಿವಳಿಕೆಯು ಹೆಚ್ಚು ಪ್ರಸಿದ್ಧಿಯಲ್ಲಿ ಇರದಿರುವುದರಿಂದಲೂ ಆ ಶಾಸ್ತ್ರದ ವಿಷಯದಲ್ಲಿ ನಾಲ್ಕಾರು ಮಾತುಗಳನ್ನು ಹೇಳಿದರೆ ಔಚಿತ್ಯ ಭಂಗವಾಗಲಾರದು.

ಆಧುನಿಕ ಭೂತಶಾಸ್ತ್ರವು ೧೮೪೮ರಲ್ಲಿ ಜನ್ಮವನ್ನು ತಾಳಿತು. ಇದಕ್ಕೂ ಪೂರ್ವದಲ್ಲಿ ಭೂತಶಾಸ್ತ್ರಕ್ಕೆ ಸಂಬಂಧಿಸಿದ ಅನೇಕ ಅಮಾನುಷ ಅನುಭವಗಳು ಪ್ರಸಿದ್ಧ ವಾಗಿದ್ದುವು. ಗ್ರಹಚೇಷ್ಟೆ, ಮೈಮೇಲೆ ಬರೋಣ, ಭೂತವು ಕಾಣಿಸೋಣ ಇವೇ ಮುಂತಾದುವುಗಳು ಬಹಳ ಹಿಂದಿನ ಕಾಲದಿಂದಲೂ ಪ್ರಸಿದ್ಧಿಯಲ್ಲಿವೆ. ಆದರೆ ಇವೆಲ್ಲ ಅನುಭವಗಳನ್ನೂ ಕ್ರೋಡೀಕರಿಸಿ ಸಮನ್ವಯಮಾಡಿ ಅವುಗಳ ಹಿಂದೆ ಅಡಗಿರುವ ತತ್ವವನ್ನು ವಿಚಾರಮಾಡಲು ಪ್ರಾರಂಭವಾದುದು ಕ್ರಿ.ಶ. ೧೮೪೮ರಿಂದಲೇ. ೧೮೩೨ರಲ್ಲಿ ಲೌಡನ್ ಎಂಬ ಊರಿನ ಸನ್ಯಾಸಿನಿಯರ ಮಠದಲ್ಲಿದ್ದ ಸನ್ಯಾಸಿನಿಯರಿ ಗೆಲ್ಲಾ ಇದ್ದಕ್ಕಿದ್ದ ಹಾಗೆಯೇ ಒಂದು ವಿಚಿತ್ರವಾದ ಉನ್ಮಾದ ರೋಗವು ಪ್ರಾಪ್ತ ವಾಯಿತು. ಈ ಖಾಯಿಲೆಯು ಭೂತಗಳಿಂದ ಪ್ರಾಪ್ತವಾದುದೆಂದೂ ಅದಕ್ಕೆ ಈ ಮಠದ ಪುರೋಹಿತನಾದ ಗ್ರಾಂಡಿಯರ್ ಎಂಬವನು ಕಾರಣನೆಂದೂ ಆ ಊರಿನ ಜನರು ಅವನನ್ನು ಹಿಡಿದು ಸುಟ್ಟುಹಾಕಿದರು. ೧೬೬೧ರಲ್ಲಿ ಟೆಡ್‌ವರ್ತ್ ಎಂಬ ಊರಿನಲ್ಲಿ ಬಬ್ಬ ತಮಟೆಯವನಿದ್ದನು. ಯಾವುದೋ ಒಂದು ಕಾರಣದಮೇಲೆ ಇವನು ದಸ್ತಗಿರಿಯಾಗಿ ಇವನ ತಮಟೆಯನ್ನು ಆ ಊರಿನ ನ್ಯಾಯಾಧೀಶನ ಮನೆಯಲ್ಲಿ

ಇಟ್ಟಿದ್ದರು. ರಾತ್ರಿಕಾಲದಲ್ಲಿ ವಿಪರೀತ ಶಬ್ದ ಗಲಾಟೆಗಳು ಆಗುತ್ತಿದ್ದುವು. ಕೊಠಡಿಗಳಲ್ಲಿದ್ದ ಸಾಮಾನುಗಳು ತಮ್ಮಷ್ಟಕ್ಕೆ ತಾವೇ ಸ್ಥಾನಪಲ್ಲಟವನ್ನು ಹೊಂದುತ್ತಿದ್ದುವು; ಬಟ್ಟೆಗಳು ಚಲ್ಲಾಪಿಲ್ಲಿಯಾಗಿ ಎಸೆಯಲ್ಪಟ್ಟವು; ನ್ಯಾಯಾಧೀಶನ ಕುದುರೆಯ ಹಿಂಗಾಲು ಅದರ ಬಾಯಲ್ಲಿ ಸಿಕ್ಕಿಕೊಂಡಿತ್ತು. ಇದೇ ರೀತಿಯಲ್ಲಿ ಇನ್ನೂ ಅನೇಕ ಅನನ್ವಯ ವ್ಯಾಪಾರಗಳು ನಡೆದುವು. ತಮಟೆಯುವನು ಗಡೀಪಾರಾಗಿ ಹೋದಮೇಲೆ ಈ ಗಲಾಟೆಗಳೆಲ್ಲವೂ ನಿಂತುಹೋಗಿದ್ದುವು. ಅವನು ಮರಳಿ ಬಂದಮೇಲೆ ಪುನಃ ಪ್ರಾರಂಭವಾದುವು. ೧೮೩೪ರಲ್ಲಿ ಜೀಲಿಂಗ್ಸ್ ಕ್ಯಾಸಲ್ ಎಂಬ ಭವ್ಯಭವನದಲ್ಲಿ ಗಂಟೆಗಳು ತಮ್ಮಷ್ಟಕ್ಕೆ ತಾವೇ ಬಾರಿಸುತ್ತಿದ್ದುವು. ಇವು ಹೇಗೆ ಬಾರಿಸುವುವೆಂದು ಕಂಡುಹಿಡಿಯಲು ಎಷ್ಟು ಪ್ರಯತ್ನಪಟ್ಟರೂ ಸಾಧ್ಯವಾಗಲಿಲ್ಲ. ಇದೇ ರೀತಿಯಲ್ಲಿ ಇನ್ನೂ ಅನೇಕವಾದ ಅಮಾನುಷ ವ್ಯಾಪಾರಗಳ ವಿಷಯವಾಗಿ ಚಾರಿತ್ರಿಕ ಆಧಾರಗಳು ಇರುವುವು. ಹಿಂದಿನ ಕಾಲದಿಂದಲೂ ಈ ವ್ಯಾಪಾರಗಳಿಗೆ ಕಾರಣಗಳು ಸತ್ತುಹೋದ ಮನುಷ್ಯರ ಪ್ರೇತಗಳು ಎಂಬ ನಂಬಿಕೆಯು ಅನುಸ್ಯೂತವಾಗಿ ಬಂದಿದೆ. ಈ ನಂಬಿಕೆಯು ೧೮೪೮ರಿಂದ ಹೆಚ್ಚು ಪ್ರಾಮುಖ್ಯತೆಗೆ ಬಂದಿತು.

೧೮೪೮ರಲ್ಲಿ ಅಮೇರಿಕಾ ದೇಶದ ನ್ಯೂಯಾರ್ಕ್ ಪಟ್ಟಣದ ಹತ್ತಿರದಲ್ಲಿರುವ ಹೈಡ್ಸ್‌ವಿಲ್ ಎಂಬ ಹಳ್ಳಿಯಲ್ಲಿ ನಡೆದ ಕೆಲವು ವಿಚಿತ್ರವಿದ್ಯಮಾನಗಳು ಆಧುನಿಕ ಭೂತಶಾಸ್ತ್ರದ ಬೆಳವಣಿಗೆಗೆ ಪ್ರಥಮಸೋಪಾನ. ಆ ಹಳ್ಳಿಯಲ್ಲಿ ಜಾನ್ ಫಾಕ್ಸ್ ಎಂಬ ರೈತನು ಒಂದು ಮನೆಯಲ್ಲಿ ಮಾರ್ಗರೆಟ್ ಎಂಬ ಹೆಂಡತಿ ಮತ್ತು ಮಾರ್ಗರೆಟ್ಟ್, ಕ್ಯಾಥರೀನ್ ಎಂಬ ಇಬ್ಬರು-ಹೆಣ್ಣುಮಕ್ಕಳೊಡನೆ ಕೂಡಿ ವಾಸವಾಗಿದ್ದನು. ಒಂದು ದಿವಸ ರಾತ್ರಿ ಮನೆಯಲ್ಲಿ ತಟ್ಟುವ ಶಬ್ದಗಳು ಮತ್ತು ಇತರ ಶಬ್ದಗಳು ಇವರಿಗೆ ಕೇಳಬಂದವು. ಅಂದಿನಿಂದ ಸಾಮಾನ್ಯವಾಗಿ ಈ ತೆರನಾದ ಶಬ್ದಗಳು ಹೆಚ್ಚಾಗಿ ಕೇಳಿ ಬರುತ್ತಿದ್ದುವು. ತಟ್ಟುವ ಶಬ್ದಗಳು ಕೇಳುವ ಪ್ರಶ್ನೆಗಳಿಗೆ ಉತ್ತರರೂಪವಾಗಿ ಬರುತ್ತಿದ್ದುವು. ಆದುದರಿಂದ ಶಬ್ದವನ್ನು ಮಾಡುವ ಕಾರಣವು ಬುದ್ಧಿಯುಳ್ಳ ವಸ್ತುವೆಂದೂ ಪ್ರಾಯಶಃ ಪ್ರೇತವಿರಬಹುದೆಂದೂ ನಂಬಲು ಅವಕಾಶವಾಯಿತು. ಈ ವಿಚಿತ್ರವನ್ನು ನೋಡಲು ಸಾವಿರಾರು ಜನಗಳು ಬಂದರು. ಜಾನ್‌ಫಾಕ್ಸ್, ಅವನ ಹೆಂಡತಿ ಮತ್ತು ಹೆಣ್ಣುಮಕ್ಕಳುಗಳು ಇರುವ ಕಡೆಗಳಲ್ಲೆಲ್ಲಾ ಈ ವಿದ್ಯಮಾನಗಳು ನಡೆಯುತ್ತಿದ್ದುವು. ಮಾರ್ಗರೆಟ್ಟಳು ತನ್ನ ಅಕ್ಕನ ಮನೆಗೆ ಹೋದಾಗ ಅಲ್ಲಿಯೂ ಈ ವಿಚಿತ್ರಗಳು ನಡೆದವು. ಪ್ರೇತಗಳು ಇವರಲ್ಲಿ ಆವಿಷ್ಟವಾಗಿ ಈ ವಿದ್ಯಮಾನಗಳನ್ನು ನಡೆಸುವುವೆಂದು ನಂಬಿಕೆಯು ಪ್ರಾರಂಭವಾಯಿತು. ಪ್ರೇತಗಳು ಕೆಲವರಲ್ಲಿ ಮಾತ್ರ ನಿಂತು ಈ ವ್ಯಾಪಾರಗಳನ್ನು ನಡೆಸುವುವು; ಅವರುಗಳಿಗೆ ಸಾಧನವ್ಯಕ್ತಿಗಳೆಂದು

(Mediums) ಹೆಸರು. ಅನೇಕರು ಇವೆಲ್ಲವೂ ನೈಜವಾದುವುಗಳಲ್ಲವೆಂದೂ ಮತ್ತು ಕೇವಲ ಮೋಸಗಾರಿಕೆಯೆಂದೂ ಅಭಿಪ್ರಾಯಪಟ್ಟರು. ಮಾರ್ಗರೆಟ್ಟ ಮತ್ತು ಕ್ಯಾಥರೀನ್ ಇವರುಗಳನ್ನು ಪರೀಕ್ಷೆಮಾಡಲು ಅನೇಕ ಪ್ರಯತ್ನಗಳು ನಡೆದುವು. ಅವರ ಮೊಣಕಾಲಿನ ಗಿಣ್ಣನ್ನು ಹಿಡಿದು ಪಾದಗಳನ್ನು ಚಲಿಸಲು ಆಗದಂತೆ ಮಾಡಿದಾಗ ತಟ್ಟುವಿಕೆ ಮುಂತಾದುವು ನಡೆಯಲಿಲ್ಲ. ಆದುದರಿಂದ ಅಕ್ಕತಂಗಿಯರು ಮೊಣಕಾಲಿನ ಗಿಣ್ಣಿನ ನಟುಕೆಯಿಂದ ಶಬ್ದಮಾಡುವರೇ ಹೊರತು ಪ್ರೇತಗಳ ವ್ಯಾಪಾರವೇನೂ ಇಲ್ಲ ಎಂದು ಕೆಲವರು ವಾದಿಸಿದರು. ಆ ಮೇಲೆ ನಾರ್ಮನ್ ಕಲ್ವರ್ ಎಂಬ ಫಾಕ್ಸ್ ಸಂಸಾರದ ಸಂಬಂಧಿಕಳು, ಕ್ಯಾಥರೀನಳು ಈ ಶಬ್ದಗಳನ್ನು ಮೊಣಕಾಲಿನ ಗಿಣ್ಣಿನಿಂದ ಉಂಟುಮಾಡುತ್ತಿದ್ದೆನೆಂದು ಒಪ್ಪಿಕೊಂಡಳು ಎಂಬುದಾಗಿ ತನ್ನ ಡೈರಿಯಲ್ಲಿ ಬರೆದಿದ್ದದ್ದು ಸಿಕ್ಕಿತು. ಹೀಗೆ ಫಾಕ್ಸ್ ಹುಡುಗಿಯರು ಕೇವಲ ಮೋಸಗಾರರೆಂದು ಬಹಿರಂಗವಾದರೂ ಭೂತಶಾಸ್ತ್ರದ ಬೆಳವಣಿಗೆಗೆ ಏನೂ ಅಡ್ಡಿ ಬರಲಿಲ್ಲ. ವಿಸ್‌ಕಾನ್‌ಸಿನ್ ಎಂಬ ಪ್ರದೇಶದ ಗೌರ್ನರಾದ ಟಾಲ್‌ಮಾಡ್ಜ್ ಅವರು ಈ ಫಾಕ್ಸ್ ಅಕ್ಕತಂಗಿಯರಲ್ಲಿ ಬಹಳ ನಂಬಿಕೆಯನ್ನಿಟ್ಟು ಭೂತಶಾಸ್ತ್ರದಲ್ಲಿ ಆಸಕ್ತರಾಗಿದ್ದರು. ತಮ್ಮ ಹದಿಮೂರು ವರ್ಷದ ಮಗಳು ಒಂದು ದಿನವೂ ಪಿಯಾನೋ ಎಂಬ ವಾದ್ಯವನ್ನು ಕೈಯಿಂದ ಮುಟ್ಟದಿದ್ದವಳು ಅಕಸ್ಮಾತ್ತಾಗಿ ಪಿಯಾನೋ ವಾದ್ಯದಲ್ಲಿ, ಪ್ರಸಿದ್ಧನಾದ ಬೀಥೋವನ್ ಎಂಬ ಸಂಗೀತಜ್ಞನ ಮಧುರಕೃತಿಗಳನ್ನು ಬಾರಿಸುತ್ತಿದ್ದಳು; ಇದು ಅವಳಲ್ಲಿ ಆವಿಷ್ಟವಾಗಿದ್ದ ಭೂತದ ವ್ಯಾಪಾರವೆಂದು ಗೌರ್ನರ್ ಟಾಲ್‌ಮಾಡ್ಜ್‌ರವರು ಬರೆದಿರುವರು. ಈ ಕಾಲದಲ್ಲಿ ಫಾಕ್ಸ್ ಸಂಸಾರದಂತೆ ಇನ್ನೂ ಅನೇಕ ಸಂಸಾರಗಳಲ್ಲಿ ಈ ವಿದ್ಯಮಾನಗಳು ನಡೆದುವು. ೧೮೫೦ರಲ್ಲಿ ಡಾಕ್ಟರ್ ಫೆಲ್ಪ್ಸ್ ಎಂಬ ಪಾದ್ರಿಗಳು ಕನ್ನೆಕ್ಟಿಕಟ್ ಎಂಬ ಪ್ರದೇಶದಲ್ಲಿದ್ದರು. ಇವರ ಮನೆಯಲ್ಲಿಯೂ ಸಹ ತಟ್ಟುವಿಕೆ, ಸಾಮಾನುಗಳನ್ನು ಚಲ್ಲಾಪಿಲ್ಲಿಯಾಗಿ ಎಸೆಯೋಣ ಮುಂತಾದುವುಗಳು ನಡೆದುವು. ಒಂದು ದಿನ ಇವರು ಸುಂದರವಾದ ಹನ್ನೊಂದು ಅಮಾನುಷ ಆಕಾರಗಳನ್ನು ಕಂಡರು. ಅನೇಕವೇಳೆ ಅವರ ಕೊಠಡಿಯಲ್ಲಿದ್ದ ಬರಿಯ ಕಾಗದದ ಮೇಲೆ ಬರವಣಿಗೆಗಳು ಕಾಣಿಸುತ್ತಿದ್ದುವು. ಚಾಪೆಯಿಂದ ಹೂವುಗಳು ಎದ್ದು ಬರುತ್ತಿದ್ದುವು. ಇವರ ಮಗನು ಒಂದು ಕೊಠಡಿಯಿಂದ ಮತ್ತೊಂದು ಕೊಠಡಿಗೆ ಹಠಾತ್ತನೆ ಒಯ್ಯಲ್ಪಟ್ಟನು. ಸಂಡರ್‌ಲ್ಯಾಂಡ್ ಎಂಬ ಪತ್ರಿಕೋದ್ಯೋಗಿಯು ಇವೆಲ್ಲವೂ ಯಥಾರ್ಥವಾದುವೆಂದು ಪ್ರಚುರಪಡಿಸಿದನು. ಇದರಿಂದ ಅಮೇರಿಕಾ ದೇಶದ ಜನರಿಗೆ ಭೂತಶಾಸ್ತ್ರದಲ್ಲಿ ಆದರವು ಅಭಿವೃದ್ಧಿಯಾಯಿತು. ಫೆರ್ಗೂಸನ್ ಎಂಬ ಕ್ರೈಸ್ತ ಪಾದ್ರಿಗೆ ಇದರಲ್ಲಿ ನಂಬಿಕೆ ಇರಲಿಲ್ಲ. ಆದರೆ ೧೮೫೪ರಲ್ಲಿ ಓಹಿಯೋ ಪಟ್ಟಣದಲ್ಲಿ ನಡೆದ ಕೆಲವು ವಿದ್ಯಮಾನಗಳಿಂದ ಫೆರ್ಗೂಸನ್ ಅವರಿಗೆ

ಭೂತಶಾಸ್ತ್ರದಲ್ಲಿ ನಂಬಿಕೆಯುಂಟಾಯಿತು. ಈ ವಿದ್ಯಮಾನಗಳು ಯಾವುದಾದರೂ ಒಂದು ವ್ಯಕ್ತಿಯ ಸನ್ನಿಧಾನದಲ್ಲಿ ನಡೆಯುವುವು. ಆ ವ್ಯಕ್ತಿಗೆ ಸಾಧನವ್ಯಕ್ತಿಯೆಂದು ಹೆಸರು. ಸಾಧನವ್ಯಕ್ತಿಯು ಒಂದು ಕೊಠಡಿಯಲ್ಲಿ ಕುಳಿತಿರುವಾಗ ಅವನಲ್ಲಿ ಭೂತಗಳು ಆವಿಷ್ಟವಾಗಿ ಅವನ ಬಾಯಿಂದ ಮಾತನಾಡುವುದು, ಸಾಧನವ್ಯಕ್ತಿಸನ್ನಿಧಾನದಲ್ಲಿ ಸ್ಥೂಲಭಾವವನ್ನು ಹೊಂದುವುದು, ಭಾರವಾದ ಪದಾರ್ಥಗಳನ್ನು ಎತ್ತುವುದು ಇವೇ ಮೊದಲಾದ ಕಾರ್ಯಗಳನ್ನು ಭೂತಗಳು ಮಾಡುವುವು ಎಂಬುದು ಭೂತಶಾಸ್ತ್ರದ ವಾದ. ಈ ವಿದ್ಯಮಾನಗಳು ನಡೆಯಲು ಕೆಲವು ಸನ್ನಿವೇಶಗಳು ಒದಗಬೇಕು. ಸಂಧ್ಯಾಕಾಲದಲ್ಲಿ ಸಾಧನವ್ಯಕ್ತಿಯು ಒಂದು ಆಸನದಲ್ಲಿ ಕುಳಿತಿರುವನು. ಪ್ರೇಕ್ಷಕರು ಅವನ ಸುತ್ತಲೂ ಒಬ್ಬರ ಕೈಯನ್ನೊಬ್ಬರು ಹಿಡಿದುಕೊಂಡು ಕುಳಿತಿರುವರು. ದೀಪವು ನಂದಿಸಲ್ಪಟ್ಟಮೇಲೆ ಪ್ರೇಕ್ಷಕರು ಮೃದುವಾದ ಸಂಗೀತವನ್ನು ಹಾಡುವರು. ಅನಂತರದಲ್ಲಿ ಸಾಧನವ್ಯಕ್ತಿಯು ಮೂರ್ಛಾವಸ್ಥೆಗೆ ಸಮನಾದ ಅವಸ್ಥಾವಿಶೇಷ ದಲ್ಲಿರುವನು. ಆ ಕಾಲದಲ್ಲಿ ವಿಚಿತ್ರವಿದ್ಯಮಾನಗಳು ನಡೆಯುವುವು. ಪ್ರೇಕ್ಷಕರು ಕೇಳುವ ಪ್ರಶ್ನೆಗಳಿಗೆ ಸಾಧನವ್ಯಕ್ತಿಯಲ್ಲಿ ಆವಿಷ್ಟವಾದ ಭೂತಗಳು ಉತ್ತರ ಕೊಡುವುವು. ಭೂತಗಳು ತಾವು ಹಿಂದೆ ಯಾರಾಗಿದ್ದರು ಮತ್ತು ಹೇಗೆ ಮರಣ ಹೊಂದಿದರು ಎಂಬುದನ್ನು ತಿಳಿಸುವುವು. ಅನೇಕವೇಳೆ ತಾವು ಪ್ರಸಿದ್ಧರಾದ ವಾಷಿಂಗ್‌ಟನ್, ಸರ್ ಐಸಾಕ್ ನ್ಯೂಟನ್, ಫ್ರಾಂಕ್ಲಿನ್, ಇವೇ ಮೊದಲಾದವ ರೆಂದು ಈ ಭೂತಗಳು ಹೇಳಿಕೊಳ್ಳುತ್ತಿದ್ದುವು. ಪ್ರೇಕ್ಷಕರಲ್ಲಿ ಕೆಲವರಿಗೆ ಮಾತ್ರ ತಿಳಿದ ಮತ್ತು ಸಾಧನವ್ಯಕ್ತಿಗೆ ತಿಳಿಯದಿದ್ದ ಅನೇಕ ವಿಷಯಗಳನ್ನು ಇವುಗಳು ಹೇಳುತ್ತಿದ್ದುವು. ಕೆಲವುವೇಳೆ ಆಫ್ರಿಕಾದೇಶದ ಭಾಷೆಗಳಲ್ಲಿ ಮಾತನಾಡುತ್ತಿದ್ದುವು. ಆ ಭಾಷೆಗಳು ಪ್ರೇಕ್ಷಕರಿಗೂ ಸಾಧನವ್ಯಕ್ತಿಗೂ ಗೊತ್ತಿರುತ್ತಿರಲಿಲ್ಲ. ಪ್ರೇಕ್ಷಕರು ಭೂತಗಳ ರೂಪವನ್ನು ನೋಡಬೇಕೆಂದು ಬಯಸಿದರೆ ಕೆಲವುವೇಳೆ ರೂಪಗಳು ಕಾಣುತ್ತಿದ್ದುವು. ಕೊಠಡಿಯಲ್ಲಿದ್ದ ಪದಾರ್ಥಗಳು ಮತ್ತೊಂದು ಬಾಗಿಲು ಹಾಕಿ ಭದ್ರಮಾಡಿದ್ದ ಕೊಠಡಿಗೆ ಸುಲಭವಾಗಿ ಸಾಗಿಸಲ್ಪಡುತ್ತಿದ್ದುವು. ಈ ವಿದ್ಯಮಾನಗಳು ನಡೆಯುವ ಸನ್ನಿವೇಶದ ಏರ್ಪಾಡಿಗೆ ಸೀಯಾನ್ಸ್ (Seance) ಎಂದು ಹೆಸರು. ಫೆರ್ಗೂಸನ್‌ರವರು ಓಹಿಯೋ ಪಟ್ಟಣದಲ್ಲಿ ನಡೆದ ಈ ರೀತಿಯ ಸೀಯಾನ್ಸ್ ಎಂಬು ದನ್ನು ನೋಡಿದಾಗ ಅವರಿಗೆ ಭೂತಶಾಸ್ತ್ರದಲ್ಲಿ ನಂಬಿಕೆ ಬಂದಿತು. ಅನಂತರದಲ್ಲಿ. ಇವರ ಹೆಂಡತಿ ಮತ್ತು ಮಕ್ಕಳು ಸಾಧನವ್ಯಕ್ತಿಗಳೆಂದು ಗೊತ್ತಾಗಿ ಅವರಿಂದ ಅನೇಕ ವಿಚಿತ್ರವ್ಯಾಪಾರಗಳು ಜರುಗಿದುವು. ಫೆರ್ಗೂಸನ್‌ರವರು ಬಹಳ ಗೌರವ ವ್ಯಕ್ತಿಗಳಾಗಿದ್ದುದರಿಂದ ಅವರ ನಂಬಿಕೆಯು ಭೂತಶಾಸ್ತ್ರದ ಬೆಳವಣಿಗೆಗೆ ಅಮೇರಿಕಾ ದೇಶದಲ್ಲಿ ಬಹಳ ಉತ್ತೇಜನವನ್ನು ಕೊಟ್ಟಿತು. ಜಾನ್ ಸ್ಪಿಯರ್ ಎಂಬ ಪಾದ್ರಿಗಳು

೧೮೫೧ರಲ್ಲಿ ಈ ಭೂತಶಾಸ್ತ್ರದ ಕಡೆಗೆ ಸೆಳೆಯಲ್ಪಟ್ಟರು. ಒಂದು ದಿವಸ ಇವರ ಕೈ ಹಠಾತ್ತಾಗಿ ಒಂದು ಸಂದೇಶರೂಪವಾದ ಬರವಣಿಗೆಯನ್ನು ಬರೆಯಿತು. ಸಂದೇಶವು ಇವರ ಸ್ನೇಹಿತನದಾಗಿದ್ದು ಮರಣ ಹೊಂದಿದ್ದ ಆಲಿವರ್ ಎಂಬವನಿಂದ ಬಂದ ಹಾಗೆ ಇತ್ತು. ಸ್ಪಿಯರರು ಒಂದು ಹತ್ತಿರ ಹಳ್ಳಿಯಲ್ಲಿದ್ದ ವೈನಿಂಗ್ ಎಂಬವನ ಹತ್ತಿರ ಹೋಗಬೇಕೆಂಬುದು ಆ ಸಂದೇಶವಾಗಿತ್ತು. ಅವರು ಹಳ್ಳಿಗೆ ಹೋಗಿ ವೈನಿಂಗ್ ಎಂಬಾತನನ್ನು ಹುಡುಕಿದಾಗ ಆತನು ರೋಗದಿಂದ ನರಳುತ್ತಿದ್ದನು. ಸ್ಪಿಯರರು ಅವನನ್ನು ಸ್ಪರ್ಶಮಾಡಿದುದರಿಂದ ಆತನ ಖಾಯಿಲೆಯು ಗುಣಮುಖವಾಯಿತು. ಇದೇ ರೀತಿಯಲ್ಲಿ ಸ್ಪಿಯರರಿಗೆ ಇನ್ನೂ ಅನೇಕ ಸಂದೇಶಗಳು ಆಗಿಂದಾಗ್ಗೆ ಬರುತ್ತಿದ್ದುವು. ಭೂತಶಾಸ್ತ್ರವು ಸತ್ಯವಾದುದೆಂದೂ ಮರಣಾನಂತರ ಆತ್ಮವು ಇರುವುದೆಂದೂ ಜನರಿಗೆ ತಿಳಿಸಬೇಕೆಂಬುದು ಈ ಸಂದೇಶಗಳ ಮುಖ್ಯ ತಾತ್ಪರ್ಯವಾಗಿತ್ತು. ಸ್ಪಿಯರರು ಆ ಸಂದೇಶಾನುಗುಣವಾಗಿಯೇ ಭೂತಶಾಸ್ತ್ರ ಪ್ರಚಾರದಲ್ಲಿಯೇ ತಮ್ಮ ಜೀವಮಾನವನ್ನು ಕಳೆದರು.

ಅಮೇರಿಕಾ ದೇಶದಲ್ಲಿ ನಡೆದ ಈ ವಿದ್ಯಮಾನಗಳ ಸುದ್ದಿಯು ಇಂಗ್ಲೆಂಡ್ ದೇಶವನ್ನು ಮುಟ್ಟಿತ್ತು. ಇಂಗ್ಲೆಂಡ್ ದೇಶದಲ್ಲಿಯೂ ಸಹ ಅಲ್ಲಲ್ಲಿ ಒಂದೊಂದು ವಿಚಿತ್ರ ವಿದ್ಯಮಾನಗಳು ನಡೆಯುತ್ತಿದ್ದುವು. ಆದರೆ ಆಧುನಿಕ ಭೂತಶಾಸ್ತ್ರವು ಇಂಗ್ಲೆಂಡ್ ದೇಶದಲ್ಲಿ ಕಾಲಿಟ್ಟದ್ದು ೧೮೫೨ರಲ್ಲಿ. ೧೮೫೨ರಲ್ಲಿ ಸ್ಟ್ರೋನ್ ಎಂಬ ಉಪನ್ಯಾಸಕನು ಹೈಡನ್ ಎಂಬ ಅಮೇರಿಕಾ ದೇಶದ ಮಹಿಳಾಸಾಧನ ವ್ಯಕ್ತಿಯನ್ನು ಕರೆದುಕೊಂಡು ಬಂದು ಅನೇಕ ಪ್ರದರ್ಶನಗಳನ್ನು ಏರ್ಪಡಿಸಿದನು. ಅನಂತರ ಇನ್ನೂ ಅನೇಕ ಸಾಧನ ವ್ಯಕ್ತಿಗಳು ಅಮೇರಿಕಾ ದೇಶದಿಂದ ಬಂದರು. ಇವರು ಹೊಸದಾಗಿ ಬಂದಾಗ ವೃತ್ತಾಂತ ಪತ್ರಿಕೆಗಳು ಇವರನ್ನು ಹಾಸ್ಯಮಾಡಿದುವು. ಕ್ರಮೇಣ ಅನೇಕ ಗೌರವಸ್ಥರಿಗೆ ಭೂತಶಾಸ್ತ್ರದಲ್ಲಿ ನಂಬಿಕೆಯುಂಟಾಯಿತು. ೧೮೬೦ ರಿಂದ ೧೮೭೦ರ ವರೆಗೂ ಇಂಗ್ಲೆಂಡ್ ದೇಶದ ಜನರಿಗೆ ಈ ಶಾಸ್ತ್ರದಲ್ಲಿ ಆಸಕ್ತಿಯು ವೃದ್ಧಿಯಾಯಿತು. ಭೂತಶಾಸ್ತ್ರದ ಪ್ರಯೋಗದ ವಿಷಯಗಳನ್ನು ಜನರಿಗೆ ತಿಳಿಸಲು ಅನೇಕ ಗೌರವವಾದ ಪತ್ರಿಕೆಗಳು ಹೊರಟವು. ಅಮೇರಿಕಾ ದೇಶದಿಂದ ಸ್ಲೇಡ್ ರೆಡ್‌ಮ್ಯಾನ್ ಫಾಸ್ಟರ್ ಡೇವೆನ್ ಪೋರ್ಟ್ ಬ್ರದರ್ಸ್ ಹೋಮ್ಸ್ ಮುಂತಾದ ಅನೇಕ ಸಾಧನವ್ಯಕ್ತಿಗಳು ಬಂದು ಅವರಲ್ಲಿ ಅನೇಕ ಪರೀಕ್ಷಾ ಪ್ರಯೋಗಗಳು ನಡೆದುವು. ಇವರಲ್ಲಿ ಕೆಲವರು ಮೋಸಗಾರರೆಂದು ಕೆಲವು ಸಂದರ್ಭಗಳಲ್ಲಿ ಗೊತ್ತಾಯಿತು. ಡೇವೆನ್‌ಪೋರ್ಟ್ ಅಣ್ಣತಮ್ಮಂದಿರು ಮಾಡುತ್ತಿದ್ದ ಕೆಲವು ಚಮತ್ಕಾರಗಳನ್ನು ಮ್ಯಾಸ್ಕಲೀನ್ ಎಂಬ ಪ್ರಸಿದ್ಧ ಯಕ್ಷಿಣಿಗಾರನು ತಾನೂ ಪ್ರದರ್ಶನಮಾಡಿ ತೋರಿಸಿ ಅವರು ಮಾಡುತ್ತಿದ್ದುದು ಕೇವಲ ಮೋಸವೆಂದು ಪ್ರಸಿದ್ಧಿಪಡಿಸಿದನು. ಹೋಮ್ಸ್

ಎಂಬಾತನು ಬಹಳ ಗೌರವಶಾಲಿಯಾಗಿ ರಾಜಮನೆತನದವರ ಕೂಡ ಓಡಾಡುತ್ತಿದ್ದುದರಿಂದ ಅವನು ಮೋಸಗಾರನೆಂದು ನಂಬಲು ಸಾಧ್ಯವಿಲ್ಲದೆ ಅವನಿಂದ ನಡೆದ ವಿದ್ಯಮಾನಗಳಲ್ಲಿ ಅನೇಕ ಗೌರವಸ್ಥರು ನಂಬಿಕೆಯಿಟ್ಟರು. ಮೋಸಮಾಡಲು ಲವಲೇಶವೂ ಅವಕಾಶವಿಲ್ಲದ ಸಂದರ್ಭಗಳಲ್ಲಿಯೂ ಈ ವಿದ್ಯಮಾನಗಳು ನಡೆಯುತ್ತಿದ್ದುದರಿಂದ ರಸಾಯನಶಾಸ್ತ್ರ ಮತ್ತು ಭೌತಶಾಸ್ತ್ರದಲ್ಲಿ ಪ್ರವೀಣರಾಗಿದ್ದ ಸರ್ ವಿಲಿಯಂ ಕ್ರೂಕ್ಸ್‌ರವರೂ ಸಹ ಈ ಭೂತಶಾಸ್ತ್ರದಲ್ಲಿ ನಂಬಿಕೆಯನ್ನು ಹೊಂದಿದರು. ಅವರು ಅನೇಕ ಸೀಯಾನ್ಸ್‌ಗಳನ್ನು ಪರೀಕ್ಷಿಸಿ ಭೂತಶಾಸ್ತ್ರದಲ್ಲಿ ಅಲ್ಪಸ್ವಲ್ಪ ಸತ್ಯಾಂಶವಿದೆ ಎಂದು ತಿಳಿದರು. ಫ್ಲಾರೆನ್ಸ್ ಕುಕ್ ಎಂಬ ಸಾಧನವ್ಯಕ್ತಿಯಲ್ಲಿ ಕೇಟಿ ಎಂಬ ಪ್ರೇತವು ಆಗಾಗ್ಗೆ ಬರುತ್ತಿತ್ತು. ಒಂದು ಸಲ ಈ ಪ್ರೇತವು ಸ್ಥೂಲರೂಪವನ್ನು ಹೊಂದುವುದಾಗಿ ಹೇಳಿತು. ಫ್ಲಾರೆನ್ಸ್ ಕುಕ್ ಎಂಬವಳನ್ನು ಸರ್ ವಿಲಿಯಂ ಕ್ರೂಕ್ಸ್‌ರವರು ಒಂದು ಕುರ್ಚಿಯ ಮೇಲೆ ಮಲಗಿಸಿ ತಾವು ಓಡಾಡುತ್ತಿದ್ದಾಗ ಕೇಟಿ ಎಂಬ ಪ್ರೇತವು ಸ್ಥೂಲಭಾವವನ್ನು ಹೊಂದಿ ಇವರ ಜೊತೆಗೂ ಓಡಾಡುತ್ತಿತ್ತು. ಕುರ್ಚಿಯ ಮೇಲೆ, ಫ್ಲಾರೆನ್ಸಳು ಕುಳಿತೇ ಇದ್ದಳು. ಸರ್ ವಿಲಿಯಂ ಕ್ರೂಕ್ಸರು 'ಆ ಪ್ರೇತವನ್ನು ಚುಂಬಿಸಿದೆ ಅದು ಯಥಾರ್ಥವಾದುದೆಂದು ನನ್ನ ನಂಬಿಕೆ' ಎಂದು ಬರೆದಿರುವರು.

ಇದೇ ಕಾಲದಲ್ಲಿ ಪ್ರೇತಗಳ ಭಾವಚಿತ್ರವನ್ನು ತೆಗೆಯಲು ಸಾಧ್ಯ ಎಂದೂ ಕಂಡುಬಂದಿತು. ಆರ್ಚ್‌ಬಿಷಪ್ ಕಾಲಿ ಎಂಬವರು ಡಾಕ್ಟರ್ ಮೂಂಕ್ ಎಂಬ ಸಾಧನವ್ಯಕ್ತಿಯ ಸನ್ನಿಧಾನದಲ್ಲಿ ಅಭಿವ್ಯಕ್ತವಾದ ಪ್ರೇತಗಳ ಭಾವಚಿತ್ರಗಳನ್ನು ತೆಗೆದಿರುವರು. ಇದರಲ್ಲಿರುವ ವಿಚಿತ್ರವೇನೆಂದರೆ ಭಾವಚಿತ್ರವನ್ನು ತೆಗೆಯುವ ಕಾಗದದ ಪೆಟ್ಟಿಗೆಯಲ್ಲಿರುವ ಯಾವ ಕಾಗದದ ಮೇಲೆ ನಾವು ಚಿತ್ರವು ಬರಲೆಂದು ಕೇಳುವೆವೋ ಅದರ ಮೇಲೆಯೇ ಪ್ರೇತದ ಭಾವಚಿತ್ರವು ಬರುವುದೆಂದು ಪ್ರೊಫೆಸರ್ ಹೆನ್ಸ್‌ಲೋ ಎಂಬವರು ಹೇಳಿರುವರು. ಪ್ರೊಫೆಸರ್ ಹೆನ್ಸ್‌ಲೋ ಅವರು ಆರ್ಚ್‌ಬಿಷಪ್ ಕಾಲಿಯವರನ್ನು ಬಹಳ ಗೌರವದಿಂದ ಸಂಬೋಧಿಸುವರು. ಆದರೆ ಐವರ್ ಟಕೆಟ್ ಎಂಬವರು ಆರ್ಚ್‌ಬಿಷಪ್ ಕಾಲಿಯವರು ಅಯೋಗ್ಯರು, ನಂಬಿಕೆಗೆ ಅನರ್ಹರು ಎಂದು ಹೇಳಿರುವರು. ಭೂತಶಾಸ್ತ್ರದ ವಿಷಯದಲ್ಲಿ ಯಾವುದು ಸತ್ಯ, ಯಾವುದು ಅಸತ್ಯ ಎಂದು ನಿರ್ಣಯಿಸುವುದು ಬಹಳ ಕಷ್ಟವಾದುದು.

೧೮೬೯ರಲ್ಲಿ ಭೂತಶಾಸ್ತ್ರದ ವಿಷಯಕವಾದ ವಿದ್ಯಮಾನಗಳನ್ನು ಪರೀಕ್ಷಿಸಿ ಅವುಗಳ ತಥ್ಯಾಂಶವನ್ನು ನಿರ್ಣಯಿಸಲು ಲಂಡನ್ ಡಯಲೆಕ್ಟಿಕಲ್ ಸೊಸೈಟಿ ಎಂಬ ಸಂಸ್ಥೆಯು ಒಂದು ಸಮಿತಿಯನ್ನೇರ್ಪಡಿಸಿತು. ಸಮಿತಿಯವರು ವಿಚಾರಮಾಡಿ ಭೂತಶಾಸ್ತ್ರದಲ್ಲಿ ಅಲ್ಪಸ್ವಲ್ಪ ವಾಸ್ತವಾಂಶವಿದೆ ಮತ್ತು ಅವನ್ನು ವೈಜ್ಞಾನಿಕ ದೃಷ್ಟಿಯಿಂದ ಪರಿಶೋಧಿಸಬೇಕು ಎಂದು ಅಭಿಪ್ರಾಯಪಟ್ಟರು. ೧೮೮೨ರಲ್ಲಿ

ಪ್ರೊಫೆಸರ್ ಬ್ಯಾರೆಟ್ ಎಂಬವರು "ಭೂತಶಾಸ್ತ್ರ ಸಂಶೋಧಕ ಸಂಸ್ಥೆ" (Society for Psychical Research) ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಪ್ರೊ. ಸೆಡ್ಜ್‌ವಿಕ್ ಎಂಬವರು ಸಂಸ್ಥೆಯ ಪ್ರಥಮ ಅಧ್ಯಕ್ಷರಾಗಿದ್ದರು. ಅಂದಿನಿಂದ ಆ ಸಂಸ್ಥೆಯ ಆಶ್ರಯದಲ್ಲಿ ಭೂತಶಾಸ್ತ್ರದ ಸಂಶೋಧನೆಗಳು ಬಹಳವಾಗಿ ನಡೆದಿರುತ್ತವೆ.

ಸರ್ ಆಲಿವರ್ ಲಾಡ್ಜ್, ಸರ್ ಆರ್ಥರ್ ಕಾನನ್ ಡಾಯಲ್ ಮುಂತಾದ ಘನವ್ಯಕ್ತಿಗಳು ಈ ಸಂಸ್ಥೆಗೆ ಸೇರಿ ಉತ್ತೇಜನವನ್ನು ಕೊಟ್ಟರು. ಸರ್ ಆಲಿವರ್ ಲಾಡ್ಜ್ ಅವರು ಈ ಭೂತಶಾಸ್ತ್ರದಲ್ಲಿ ವಿಶೇಷ ನಂಬಿಕೆಯನ್ನಿಟ್ಟಿದ್ದರು. ಭೂತಶಾಸ್ತ್ರದ ಮುಖ್ಯತತ್ವವೇನು, ಅದನ್ನು ನಂಬುವುದು ಹೇಗೆ ಎಂಬುದನ್ನು ಅವರು ಸೈನ್ಸ್ ಅಂಡ್ ಹ್ಯೂಮನ್ ಪ್ರೋಗ್ರೆಸ್ ಎಂಬ ತಮ್ಮ ಪುಸ್ತಕದ ಕೊನೆಯ ಪ್ರಕರಣದಲ್ಲಿ ಹೀಗೆ ತಿಳಿಸಿರುವರು. "ವಿಜ್ಞಾನಶಾಸ್ತ್ರವು ಎಂದಾದರೂ ಒಂದು ದಿನ ಸಾವಿನ ಸಮಸ್ಯೆಯನ್ನು ಪರಿಹರಿಸಲೇಬೇಕಾಗುವುದು. ಸಾವು ಎಂಬುದು ಜೀವನದ ಪರಮಾವಧಿಯೇ? ಜೀವನದಲ್ಲಿದ್ದ ಆಸೆಗಳು, ಅಭಿಮಾನಗಳು, ಜ್ಞಾನಾಜ್ಞಾನಗಳು ಸಾವಿನಲ್ಲಿ ನಶಿಸಿಹೋಗುವುವೆ? ಅಥವಾ ಸಾವು ಎಂಬುದು ಕೇವಲ ಒಂದು ಬದಲಾವಣೆಯೆ? ಸಾವಿನನಂತರ ಏನಾದರೂ ತತ್ವವು ನಾಶಹೊಂದದೆ ಉಳಿವುದೆ? ಇವೆಲ್ಲವನ್ನೂ ವಿಚಾರಮಾಡಬೇಕಾದ ಕಾಲವು ಬಂದೇಬರುವುದು. ಸಾವಿನನಂತರ ದೇಹವು ನಾಶವಾದರೂ ಪ್ರೇತವು ನಾಶಹೊಂದುವುದಿಲ್ಲ ಎಂದು ನಂಬಲು ಸಾಕಷ್ಟು ಆಧಾರಗಳಿರುವುವು. ಎಲ್ಲರೂ ಎಂದಾದರೂ ಇದನ್ನು ಒಪ್ಪಲೇಬೇಕಾಗುವುದು. ಪುನರ್ಜನ್ಮವು ಈಗಿನ ವಿಜ್ಞಾನಶಾಸ್ತ್ರಜ್ಞರಿಗೆ ಕರ್ಣಕಠೋರ. ಆದರೂ ಅದು ಸಾಧ್ಯ. ಆತ್ಮನು ನಿತ್ಯ, ಅವಿನಾಶಿ. ಆತ್ಮನು ದೇಹದಿಂದ ಕೆಲಸಮಾಡುವನು. ಆತ್ಮರು ಅನಂತರು. ಆತ್ಮರು ಅನೇಕ ದರ್ಜೆಯ ಅವಸ್ಥೆಗಳಲ್ಲಿ ಇರುವರು. ಉತ್ತರೋತ್ತರ ಉತ್ತಮಾವಸ್ಥೆಗೆ ಬರಲು ಅವರು ಸರ್ವದಾ ಪ್ರಯತ್ನಪಡುತ್ತಿರುವರು. ಮೃತ್ಯುವಿಗೆ ಅಂಜುವುದು ತಿಳಿಗೇಡಿತನ. ಮರಣಹೊಂದಿದ ಮೇಲೆ ನಾವು ಇನ್ನೂ ಉತ್ತಮ ಸ್ಥಾನಕ್ಕೆ ಹೋಗಬಹುದು. . . . ಇವೆಲ್ಲವೂ ಸತ್ಯವೆಂದು ನನ್ನ ದೃಢವಾದ ನಂಬಿಕೆ. . . . ನನ್ನ ಮಗನಾದ ರೇಮಂಡನ ಸಮಾಧಿಯನ್ನು ನೋಡಲು ನಾನು ಎಂದೂ ಹೋಗಿಲ್ಲ. ಅವನು ಅಲ್ಲಿ ಇಲ್ಲ. ಅಲ್ಲಿಗೆ ಹೋಗಕೂಡದೆಂದು ನನಗೆ ಹೇಳಿದ್ದಾನೆ. . . . ಸ್ಥೂಲಪ್ರಕೃತಿಯು ಆತ್ಮನಿಗೆ ಉತ್ತಮಸ್ಥಿತಿಯನ್ನು ಹೊಂದಲು ಸಹಕಾರಿ. ನಾವುಗಳು ಸರಿಯಾದ ನಡತೆಯಿಂದಿದ್ದು ಧರ್ಮವನ್ನು ಗಳಿಸಿದರೆ ನಾವು ಉತ್ತಮಸ್ಥಿತಿಯನ್ನು ಹೊಂದುವೆವು. . . ."

ಬಿ. ಎ. ಕೃಷ್ಣಸ್ವಾಮಿರಾವ್.

---

# ಮೃಚ್ಛಕಟಿಕ

(ನಾಟಕ ಕಥೆ)

ಉಜ್ಜಯಿನೀ ಪುರದಲ್ಲಿ ಚಾರುದತ್ತನೆಂಬ ಬ್ರಾಹ್ಮಣನಿದ್ದನು. ಈತನು ಕುಲೀನ, ಸುಂದರ; ಅತ್ಯುದಾರ. ಬ್ರಾಹ್ಮಣನಾದರೂ ವಾಣಿಜ್ಯವನ್ನವಲಂಬಿಸಿದ್ದನು. ಸಾಮಾನ್ಯವಾಗಿ ಒಂದೇ ಕಡೆಯಲ್ಲಿ ಸೇರದ ಹಣವೂ, ಗುಣವೂ, ಅರಿವೂ ಇವನಲ್ಲಿ ಒಟ್ಟಿಗೆ ಸೇರಿದ್ದವು. "ತನ್ನ ಪ್ರಾಣವನ್ನಾದರೂ ಕೊಡುವನೇ ಹೊರತು ಮರೆ ಹೊಕ್ಕವರನ್ನು ಬಿಡುವವನಲ್ಲ." ವಿವೇಕಿ; ನಿರಹಂಕಾರಿ. ಪ್ರಾಣ ಹೋಗುವಂತಿದ್ದರೂ ಸುಳ್ಳುಹೇಳುವವನಲ್ಲ. "ತಾನು ಪರರಿಗೆ ಮಾಡಿದ ಉಪಕಾರವನ್ನು ಬಾಯಿಂದಲೂ ಹೇಳತಕ್ಕವನಲ್ಲ." ಹೆಚ್ಚಾಗಿ ಹೇಳುವುದೇನು! ಸರ್ವಸುಗುಣಗಳ ಗಣಿಯೆನ್ನಬಹುದು. ಆದರೆ ಇವನು ಯಾವ ದುರ್ಗುಣವೂ ಇಲ್ಲದ, ಕೈಹಿಡಿದ ಹೆಂಡತಿಯಿದ್ದರೂ ಅದೇ ಉಜ್ಜಯಿನಿಯ ಸುಂದರಾಂಗಿಯೂ, ಯುವತಿಯೂ ಆದ ವಸಂತಸೇನೆಯೆಂಬ ವೇಶ್ಯೆಯಲ್ಲಿ ಅನುರಕ್ತನಾಗಿದ್ದನು. ವಸಂತಸೇನೆಯು ವೇಶ್ಯೆಯ ಕುಲದಲ್ಲಿ ಹುಟ್ಟಿದ್ದರೂ ಕೆಸರಿನಲ್ಲಿ ಹುಟ್ಟಿದ ತಾವರೆಯ ಹೂ ಎನ್ನಬಹುದು. ಅವಳು ಹಣಕ್ಕಾಗಿ ಚಾರುದತ್ತನಿಗೆ ತನ್ನನ್ನು ಮಾರಿಕೊಂಡವಳಲ್ಲ. ಆತನ ಗುಣಕ್ಕಾಗಿ ಮೆಚ್ಚಿ ತನ್ನನ್ನೇ ಕಾಣಿಕೆಯಾಗಿ ಅರ್ಪಿಸಿಕೊಂಡವಳು. ಐಶ್ವರ್ಯದಲ್ಲೂ ಔದಾರ್ಯದಲ್ಲೂ ಆತನನ್ನು ಮೀರಿಸಿದವಳು. ಆಶ್ರಿತರಕ್ಷಕಳು. ಕೋಟಿದ್ರವ್ಯಕ್ಕಾದರೂ ಆಸೆಪಟ್ಟು, ಚಾರುದತ್ತನನ್ನು ಹೊರತು ಬೇರೆಯವನನ್ನು ಕನಸಿನಲ್ಲೂ ಕಣ್ಣೆತ್ತಿ ನೋಡಳು. "ಇತರರ ರಹಸ್ಯವನ್ನು ನಾನೇಕೆ ಕೇಳಲಿ!" ಎಂದು, ತನ್ನನ್ನು ತಾನೆ ನಿಯಮಿಸಿಕೊಳ್ಳುವವಳು.

ಚಾರುದತ್ತನ ಅತ್ಯೌದಾರ್ಯವೇ ಅವನನ್ನು ಕೇಡಿಗೆ ಈಡುಮಾಡಿತು. ಅವನು ಬಡವರಿಗೂ ಆರ್ತರಿಗೂ ಬಗೆಬಗೆಯಲ್ಲಿ ಸಹಾಯಮಾಡಿ, ಕಾಲಕ್ರಮದಲ್ಲಿ ಹಣವು ಮುಗಿದುದರಿಂದ ಬಡವನಾದನು. ದೊಡ್ಡದಾಗಿದ್ದ ತನ್ನ ಮನೆಯನ್ನು ಸರಿಪಡಿಸುವುದಕ್ಕೆ ಕೂಡ ಹಣವಿಲ್ಲ. ಅತಿಥಿಗಳ ಸತ್ರವಾಗಿದ್ದ ಆ ಮನೆಯು ಇಲಿ ಹೆಗ್ಗಣ ಹುಳುಹುಪ್ಪಟೆಗಳ ನಿವಾಸವಾಗಿದೆ. ಅವನಿಗೆ ಸರಿಯಾದ ಬಟ್ಟೆಯಿಲ್ಲ. ಇದನ್ನು ಕೇಳಿ ಕನಿಕರಗೊಂಡ ಸ್ನೇಹಿತನೊಬ್ಬನು ಒಂದು ಬಹಿರ್ವಾಸವನ್ನು ಅವನಿಗೆ ಕಳುಹಿಸಿಕೊಡುವನು. ಅಂತಹ ದುಸ್ಥಿತಿಯಲ್ಲಿ ವಸಂತಸೇನೆಯ ಮನೆಗೆ ಹೋಗುವುದಕ್ಕೆ ನಾಚಿಕೆ. "ಬಡತನಕ್ಕಿಂತಲೂ ಸಾವೇ ಮೇಲು" ಎನಿಸುವುದು.

ಅಷ್ಟಾದರೂ, ತನ್ನನ್ನು ದರಿದ್ರನೆಂದು ತಿಳಿದು ಅತಿಥಿಗಳು ಬಾರದೇ ಹೋದಾರಲ್ಲ ಎಂಬ ದುಃಖವೇ ಹೆಚ್ಚು. ತನ್ನ ನಿತ್ಯಕರ್ಮಾದಿ ಕರ್ತವ್ಯದಲ್ಲಿ ಸ್ವಲ್ಪವೂ ಅನಾದರ ವಿಲ್ಲ. ಸಾಮಾನ್ಯವಾಗಿ "ಬಡತನವು ಬಂದಾಗ ಹೆಂಡತಿಯೂ ತಿರಸ್ಕರಿಸುವಳು" ಎನ್ನುವರು. ಆದರೆ ಈ ವಿಚಾರದಲ್ಲಿ ಚಾರುದತ್ತನೇ ಪುಣ್ಯಶಾಲಿ. ಇಂತಹ ಹೀನ ಸ್ಥಿತಿಗೆ ಬಂದಿದ್ದರೂ ಪೂರ್ವದಿಂದಲೂ ಅನುಸರಿಸಿದ್ದ ಮಿತ್ರರೂ ಕೆಲವರು ಸೇವಕರೂ ಅನುರಾಗದಿಂದ ಬಿಡಲಾರದೆ ಅವನನ್ನು ಸೇವಿಸುವರು. 'ಸೂಳೆಯಾದರೂ ಸಚ್ಚರಿತ್ರೆಯೂ ಉಜ್ಜಯಿನಿಗೇ ಅಲಂಕಾರಪ್ರಾಯಳೂ' ಆದ ವಸಂತಸೇನೆಗೂ ಅವನಲ್ಲಿ ಭಕ್ತಿಯು ಎಳ್ಳಷ್ಟೂ ಕಡಮೆಯಿಲ್ಲ, ಹೆಚ್ಚೆಂದೇ ಹೇಳಬಹುದು. ಆತನು ತನ್ನ ಮನೆಗೆ ಬಹಳ ದಿನಗಳಿಂದ ಬಾರದಿರಲು ನೋಡಿಕೊಂಡು ಹೋಗಬೇಕೆಂದು ಅವನ ಮನೆಗೆ ತಾನೇ ಬರುವಳು.

ಆ ಕಾಲದಲ್ಲಿ ಉಜ್ಜಯಿನಿಗೆ ಪಾಲಕನೆಂಬವನು ದೊರೆಯಾಗಿದ್ದನು. ಅವನಿಗೆ ಶಕಾರನೆಂಬ ಮೈದುನನಿದ್ದನು. ಶಕಾರನು ಅವಿವೇಕಿ, ಕುಡುಕ, ಸ್ತ್ರೀಲೋಲ, ದುರ್ಗುಣನಿಧಿ. ತನ್ನ ಸುಖಕ್ಕಾಗಿ ಯಾವ ಅಕಾರ್ಯವನ್ನು ಮಾಡಲೂ ಹಿಂದೆಗೆಯನು. ದೊರೆಯೇ ಅವನ ಭಾವನಾಗಿರುವಾಗ ಅವನು ಏನು ಮಾಡಿದರೆತಾನೆ ಕೇಳುವರಾರು? ಆ ದುಷ್ಟನು ವಸಂತಸೇನೆಯ ರೂಪಕ್ಕೆ ಬೆರಗಾಗಿ ಅವಳು ಚಾರುದತ್ತನ ಮನೆಗೆ ಹೋಗುತ್ತಿರುವಾಗ ದಾರಿಯಲ್ಲಿ ಬಂದು, ಬಗೆಬಗೆಯಲ್ಲಿ ನಯಭಯಗಳಿಂದ ವಶಪಡಿಸಿಕೊಳ್ಳಲು ಯತ್ನಿಸುವನು. "ಅನುರಾಗಕ್ಕೆ ಗುಣವೇ ಕಾರಣವಲ್ಲದೆ ಬಲಾತ್ಕಾರವಲ್ಲ" ಎಂದು ಅವನಿಗೆ ಹೇಳಿ, ಕತ್ತಲೆಯಾಗಿದ್ದುದರಿಂದಲೂ ಶಕಾರನು ಕುಡಿದು ಮೈಮರೆತವನಾಗಿದ್ದುದರಿಂದಲೂ, ಶಕಾರನಿಗೆ ಮಿತ್ರನಾದರೂ ಸುಗುಣಿಯಾದ ವಿಟನು ಸಹಾಯ ಮಾಡಿದುದರಿಂದಲೂ, ತಪ್ಪಿಸಿಕೊಂಡು ವಸಂತಸೇನೆಯು ಚಾರುದತ್ತನ ಮನೆಯನ್ನು ಸೇರಿದಳು. ಶಕಾರನು—"ವಸಂತಸೇನೆಯನ್ನು ನೀನೇ ತಂದು, ನನಗೊಪ್ಪಿಸದಿದ್ದಲ್ಲಿ ನಿನಗೂ ನನಗೂ ಎಷ್ಟು ದಿನವಾದರೂ ವೈರವು ಹೋಗುವುದಿಲ್ಲ—ಎಂದು ಆ ದರಿದ್ರ ಚಾರುದತ್ತನಿಗೆ ನಾನು ಹೇಳಿದೆನೆಂಬುದಾಗಿ ಹೇಳು" ಎಂದು ಚಾರುದತ್ತನ ಮಿತ್ರನಾದ ಮೈತ್ರೇಯನಿಗೆ ತಿಳಿಸಿ ಹೊರಟುಹೋದನು. ಕೆಲವು ದಿನಗಳಲ್ಲೇ ಮತ್ತೆ ಅವಳ ತಾಯಿಯ ಮೂಲಕ ಹೇಳಿಸಿ ಪ್ರಾರ್ಥಿಸಿದನು. ಆದರೂ ಅವಳ ಮನಸ್ಸು ಚಲಿಸಲಿಲ್ಲ. ಆದುದರಿಂದ ಅವಳಿಗೇನಾದರೂ ತೊಂದರೆಯನ್ನುಂಟುಮಾಡಬೇಕೆಂದು ಅವನು ಸಮಯವನ್ನು ಕಾಯುತ್ತಿದ್ದನು.

ಇತ್ತ ಚಾರುದತ್ತನ ಮನೆಯನ್ನು ಸೇರಿದ ವಸಂತಸೇನೆಯು ರಾತ್ರಿಯ ಕಾಲದಲ್ಲಿ ಧರಿಸಿಕೊಂಡು ಹೋಗಬಾರದೆಂದು ಹೇಳಿ, ಕೆಲವು ಆಭರಣಗಳನ್ನು ಚಾರುದತ್ತನಲ್ಲಿಟ್ಟು,

ತನ್ನ ಮನೆಗೆ ಹೋದಳು. ಅವನ್ನಿಡಲು ಅವನಿಗೆ ಪೆಟ್ಟಿಗೆಯಿಲ್ಲ. ಮನೆಯೋ ಹಳೆಯದು. ಕಳ್ಳರು ಸುಲಭವಾಗಿ ಹೊಗಬಹುದು. ಆದುದರಿಂದ ಆ ಒಡವೆಗಳನ್ನು ಹಗಲು ವರ್ಧಮಾನಕನೆಂಬ ಆಳು ನೋಡಿಕೊಳ್ಳಬೇಕೆಂದೂ, ರಾತ್ರಿ ಮೈತ್ರೇಯನು ನೋಡಿಕೊಳ್ಳಬೇಕೆಂದೂ ಚಾರುದತ್ತನು ಏರ್ಪಡಿಸಿದನು. ಅದರಂತೆ ಮೂರನೆಯ ದಿನ ರಾತ್ರಿ ಒಡವೆಯ ಗಂಟು ಮೈತ್ರೇಯನ ವಶಕ್ಕೆ ಬಂದಿತು. ಆ ರಾತ್ರಿ ಸಂಗೀತವನ್ನು ಕೇಳಲು ಹೋಗಿದ್ದ ಚಾರುದತ್ತನು ಮನೆಗೆ ಬರುವ ವೇಳೆಗೆ ಅರ್ಧರಾತ್ರಿಯು ಮೀರಿರುವುದು. ಬಂದು ಮಲಗಿ, ನಿದ್ರಿಸುವನು. ಅದುವರೆಗೂ ಎಚ್ಚರಗೊಂಡಿದ್ದ ಮೈತ್ರೇಯನಿಗೂ ಚೆನ್ನಾಗಿ ನಿದ್ದೆ ಬಂದುಬಿಡುವುದು. ಆ ವೇಳೆಗೆ ಸರಿಯಾಗಿ, ವಸಂತಸೇನೆಯಲ್ಲಿ ಸೇವೆಗೆ ಸೇರಿಕೊಂಡಿದ್ದ ಮದನಿಕೆಯೆಂಬ ಸೂಳೆಯಲ್ಲಿ ಅನುರಕ್ತನಾಗಿ ಅವಳನ್ನು ಸೇವೆಯಿಂದ ಬಿಡಿಸಿ ಕರೆದುಕೊಂಡು ಹೋಗಲು ಹಣವನ್ನು ಸಂಪಾದಿಸುವುದಕ್ಕೆ ಬೇರೆ ದಾರಿಯಿಲ್ಲದೇ ಕದಿಯುವುದನ್ನೇ ಉಪಾಯವಾಗಿ ಯೋಚಿಸಿದ ಶರ್ವಿಳಕನೆಂಬ ಬ್ರಾಹ್ಮಣನು ಚಾರುದತ್ತನ ಮನೆಗೆ ಕನ್ನ ಹಾಕಿ, ನುಗ್ಗುವನು. ಎಲ್ಲಿ ಕಳ್ಳರು ಬರುವರೋ ಎಂದು ಯೋಚಿಸುತ್ತ ಮಲಗಿದ್ದ ಮೈತ್ರೇಯನು ಒಡವೆಯ ಗಂಟಿನ ವಿಚಾರವಾಗಿಯೇ ಕನವರಿಸುವನು. ಅದನ್ನರಿತ ಕಳ್ಳನು ಮೈತ್ರೇಯನಲ್ಲಿದ್ದ ಆ ಗಂಟನ್ನು ತೆಗೆದುಕೊಂಡು ಹೊರಟುಹೋಗುವನು.

ಸ್ವಲ್ಪ ಹೊತ್ತಾದ ಬಳಿಕ ಎಚ್ಚರಗೊಂಡ ಚಾರುದತ್ತನೇ ಮೊದಲಾದವರಿಗೆ ಮನೆಗೆ ಕನ್ನ ಬಿದ್ದಿರುವುದು ತಿಳಿಯುವುದು. ಇತರರಿಗಾದರೆ ಎಷ್ಟು ಗಾಬರಿಯೊ, ಭಯವೊ! ಚಾರುದತ್ತನಿಗೆ ಹಾಗಾಗಲಿಲ್ಲ. ಅವನು "ಆಸೆಯಿಂದ ಶ್ರಮಪಟ್ಟು ಕನ್ನ ಹಾಕಿ ಬಂದವನಿಗೆ ತನ್ನ ಮನೆಯಲ್ಲಿ ಏನೂ ಸಿಕ್ಕದೇ ಎಷ್ಟು ಸಂಕಟಪಟ್ಟುಕೊಂಡು ಹೋದನೊ!" ಎಂದು ಮರುಗುವನು. ಬಳಿಕ ವಿದೂಷಕನ ವಶದಲ್ಲಿದ್ದ ಒಡವೆಯ ಗಂಟು ಹೋಯಿತೆಂದು ತಿಳಿಯಿತು. ತನ್ನದು ಹೋಗಿದ್ದರೆ ಅವನಿಗೆ ಸ್ವಲ್ಪವೂ ವ್ಯಥೆಯಿರಲಿಲ್ಲ. ಮತ್ತೊಬ್ಬರ ಒಡವೆಯು ಹೋದುದಕ್ಕಾಗಿ ವ್ಯಥೆಪಟ್ಟು, ಮೂರ್ಛೆಗೊಳ್ಳುವನು. ಆಗ—

ವಿದೂಷಕ (ಮೈತ್ರೇಯ).—ಮಿತ್ರನೇ, ಸಮಾಧಾನಮಾಡಿಕೊ; ಕಂಡವರ ಒಡವೆ ಹೋದುದಕ್ಕೆ ನೀನೇಕೆ ಹೀಗೆ ವ್ಯಥೆಪಡಬೇಕು!

ಚಾರುದತ್ತ.—ಮಿತ್ರನೇ! ನಮಗೆ ಇಂತಹ ಬಡತನ ಬಂದಾಗ ಕಳ್ಳರು ಒಡವೆಯನ್ನು ಕದ್ದುಕೊಂಡು ಹೋದರೆಂದರೆ ಯಾರುತಾನೆ ನಂಬಿಯಾರು? ಅಯ್ಯೊ! ಕ್ರೂರವಾದ ದೈವವು ನನ್ನ ಐಶ್ವರ್ಯವನ್ನು ಮಾತ್ರವೇ ಅಪಹರಿಸಿತ್ತು. ಈಗ ಯಶಸ್ಸನ್ನೂ ಅಪಹರಿಸಿತಲ್ಲ!

ವಿದೂಷಕ.—ಏಕಿಷ್ಟು ಅಧೈರ್ಯಪಡುವೆ! ಅವಳು ನಿನಗೆ ಒಡವೆಯನ್ನು ಕೊಟ್ಟುದಕ್ಕೆ ಸಾಕ್ಷಿ ಯಾರು?

ಚಾರುದತ್ತ.—ಮೈತ್ರೇಯನೆ, ಭಿಕ್ಷವನ್ನು ಮಾಡಿಯಾದರೂ ಆ ಪದಾರ್ಥಕ್ಕೆ ತಕ್ಕ ಹಣವನ್ನು ಕೊಡುವೆನೇ ಹೊರತು ನಾನೆಂದಿಗೂ ಸುಳ್ಳಾಡೆನು.

ಧೂತಾದೇವಿಯು ಚಾರುದತ್ತನಿಗೆ ತಕ್ಕ ಹೆಂಡತಿ; ಪತಿಯ ಸಂತೋಷವೇ ಅವಳ ಸಂತೋಷ, ಆತನ ದುಃಖವೇ ಅವಳ ದುಃಖ. ಒಬ್ಬನಿಗೆ ಕ್ರಮವಾಗಿ ಮದುವೆಯಾದ ಹೆಂಡತಿಯರೇ ಇಬ್ಬರಿದ್ದರೆ ಕಷ್ಟ. ಅವರು ಒಬ್ಬರನ್ನೊಬ್ಬರು ದ್ವೇಷಿಸುವುದು ಸಾಧಾರಣವಾಗಿದೆ. ಹೀಗಿರುವಾಗ ತನ್ನ ಪತಿಯು ಸೂಳೆಯಲ್ಲಿ ಅನುರಕ್ತನಾಗಿದ್ದರೂ ಧೂತಾದೇವಿಗೆ ಪತಿಯಲ್ಲಾಗಲಿ ವಸಂತಸೇನೆಯಲ್ಲಾಗಲಿ ಸ್ವಲ್ಪವೂ ಅಸಮಾಧಾನವಿಲ್ಲ. ತಮ್ಮ ತೌರುಮನೆಯಲ್ಲಿ ಕೊಟ್ಟಿದ್ದ ಬೆಲೆಯುಳ್ಳ ರತ್ನಹಾರವೊಂದನ್ನು ವಸಂತಸೇನೆಗೆ ಕಳೆದುಹೋದ ಒಡವೆಗಳಿಗೆ ಬದಲಾಗಿ ಕೊಡುವಂತೆ ಹೇಳಿ (ಚಾರುದತ್ತನು ತೆಗೆದುಕೊಳ್ಳಲು ಸಂಕೋಚಪಡಬಹುದೆಂದು ಯೋಚಿಸಿ) ವಿದೂಷಕನ ಕೈಯಲ್ಲಿ ತಾನಾಗಿ ಕೊಡುವಳು. ಇದನ್ನು ತಿಳಿದ ಚಾರುದತ್ತನಿಗೆ ಸಂತೋಷದುಃಖಗಳು ಏಕಕಾಲದಲ್ಲಿ ಉಂಟಾಗುವುವು. ನಿಜವಾದ ವಿಚಾರವನ್ನು ತಿಳಿಸಿದರೆ ವಸಂತಸೇನೆಯು ಹಾರವನ್ನೆಲ್ಲಿ ತೆಗೆದುಕೊಳ್ಳದಿರುವಳೋ! ಇತರರು ತನ್ನ ವಿಷಯದಲ್ಲಿ ಏನಾಡಿಕೊಳ್ಳುವರೋ! ಎಂದು ಶಂಕಿಸಿ, "ಒಡವೆಯ ಗಂಟನ್ನು ನಮ್ಮದೆಂದು ಭಾವಿಸಿ, ಜೂಜಿನಲ್ಲಿ ಸೋತೆವು. ಅದನ್ನು ತೆಗೆದುಕೊಂಡವರು ಎಲ್ಲೋ ಹೊರಟುಹೋದರು. ಆದುದರಿಂದ ಅದಕ್ಕೆ ಬದಲಾಗಿ ಈ ರತ್ನಹಾರವನ್ನು ಕೊಡುವಂತೆ ಚಾರುದತ್ತನು ಕಳುಹಿಸಿದನು" ಎಂದು ಹೇಳಿ, ವಸಂತಸೇನೆಗೆ ಕೊಟ್ಟು ಬರುವಂತೆ ಮೈತ್ರೇಯನನ್ನೇ ಕಳುಹಿಸಿದನು.

ಅಷ್ಟರಲ್ಲಿ ಶರ್ವಿಳಕನು ತಾನು ಕದ್ದ ಒಡವೆಯನ್ನು ತೆಗೆದುಕೊಂಡುಹೋಗಿ, ವಸಂತಸೇನೆಯ ಸೇವೆಯಲ್ಲಿದ್ದ ಮದನಿಕೆಯನ್ನು ಹೊರಗೆ ಕರೆದು, ಅವಳ ಕೈಯಲ್ಲಿ ಕೊಟ್ಟು, ಅದನ್ನು ಗುಟ್ಟಾಗಿ ಇಟ್ಟುಕೊಂಡಿರುವಂತೆ ಹೇಳಿ ವಸಂತಸೇನೆಗೊಪ್ಪಿಸಿ, ಬಿಡುಗಡೆಯನ್ನು ಹೊಂದಿ ಬರುವಂತೆ ಅವಳಿಗೆ ಹೇಳುವನು. ಹೊರಗೆ ಇವರು ಮಾತನಾಡುತ್ತಿದ್ದುದು ತನ್ನ ವಿಚಾರವಾದುದರಿಂದ ಮಹಡಿಯಲ್ಲಿ ಮರೆಯಾಗಿ ನಿಂತು ವಸಂತಸೇನೆಯು ಅದನ್ನು ಕೇಳುತ್ತಿದ್ದಳು. ಪಾಪ! ಆ ಒಡವೆಗಳು ವಸಂತಸೇನೆಯವೆಂದು ಶರ್ವಿಳಕನೇನುಬಲ್ಲನು! ಅವುಗಳನ್ನು ನೋಡಿ,

ಮದನಿಕೆ—ಇವುಗಳನ್ನು ನಾನು ಮುಂಚೆ ಎಲ್ಲೋ ನೋಡಿದ್ದೆನು. ನೀನು ಎಲ್ಲಿಂದ, ಹೇಗೆ, ತಂದೆ? ಹೇಳು.

ಶರ್ವಿಳಕ—ನಿನಗೋಸ್ಕರವಾಗಿ ನಾನು ಕಳ್ಳತನಮಾಡಿದೆನು. ನಾನು ಕದ್ದ ಮನೆಯು ಚಾರುದತ್ತನದೆಂದು ಮಾರನೆಯ ದಿನ ತಿಳಿಯಿತು.

ಇದನ್ನು ಕೇಳಿ, ಚಾರುದತ್ತನಿಗೇನು ಅಪಾಯವಾಯಿತೋ ಎಂಬ ಭೀತಿಯಿಂದ ವಸಂತಸೇನೆಯೂ ಮದನಿಕೆಯೂ ಮೂರ್ಛೆಗೊಂಡು ಸ್ವಲ್ಪ ಹೊತ್ತಿನ ಮೇಲೆ ಎಚ್ಚರಗೊಳ್ಳುವರು. ಚಾರುದತ್ತನೇ ಮೊದಲಾದವರಿಗಾರಿಗೂ ಏನೂ ತೊಂದರೆ ಮಾಡಿಲ್ಲವೆಂದೂ ತಾನು ಅಷ್ಟು ಕ್ರೂರಕೃತ್ಯ ಮಾಡಲಾರೆನೆಂದೂ ಶರ್ವಿಳಕನು ಹೇಳಲು, ಅವರಿಗೆ ಸಮಾಧಾನವಾಗುವುದು. ಬಳಿಕ ಆ ಒಡವೆ ವಸಂತಸೇನೆಯದೇ ಎಂದು ನಿರ್ಣಯವಾದುದರಿಂದ ತಾನು ಈ ಕೆಲಸವನ್ನು ಮಾಡಿದುದು ಬಹು ಅಸಂಗತವಾಯಿತೆಂದು ಶರ್ವಿಳಕನು ವ್ಯಥೆಪಡುವನು. ಮುಂದೇನುಮಾಡಬೇಕೆಂದು ತೋರದೆ ಚಿಂತಿಸುವನು. ಮದನಿಕೆಗೆ ಸಮಯಕ್ಕೆ ತಕ್ಕ ಆಲೋಚನೆ ತಟ್ಟನೆ ಹೊಳೆಯಿತು. "ಚಾರುದತ್ತನು ಈ ಒಡವೆಗಳನ್ನು ನಿನಗೆ ಕೊಡುವಂತೆ ಹೇಳಿದನು ಎಂದು ವಸಂತಸೇನೆಗೆ ಕೊಟ್ಟುಬಿಡು, ತೊಂದರೆಯಿಲ್ಲ" ಎಂದಳು. ಶರ್ವಿಳಕನು ಹಾಗೆಯೇ ಮಾಡಿದನು.

ವಿಚಾರವನ್ನೆಲ್ಲಾ ಅರಿತ ವಸಂತಸೇನೆಯು ತಿಳಿಯದವಳಂತೆ ಒಡವೆಗಳನ್ನು ತೆಗೆದುಕೊಂಡು, "ಈ ಒಡವೆಗಳನ್ನು ತಂದುಕೊಟ್ಟವನಿಗೆ ಮದನಿಕೆಯನ್ನು ಕೊಡಬೇಕೆಂದು ಚಾರುದತ್ತನು ಆಜ್ಞಾಪಿಸಿದ್ದನು. ಈಗ ಆತನೇ ಕೊಟ್ಟನೆಂದು ಪರಿಗ್ರಹಿಸು" ಎಂದು ಮದನಿಕೆಯನ್ನು ಅವನಿಗೊಪ್ಪಿಸಿದಳು. ಸೆರೆಮನೆಗೆಲ್ಲಿ ಹೋಗಬೇಕಾಗುವುದೋ ಎಂದು ಹೆದರಿದ್ದ ಶರ್ವಿಳಕನು ಈ ಕಾರ್ಯಗಳಿಂದ ಬೆರಗಾಗಿ ಏನು ಹೇಳುವುದಕ್ಕೂ ತೋರದೆ ಮದನಿಕೆಯೊಡನೆ ಸಂತೋಷದಿಂದ ಹೊರಟುಹೋದನು.

ಬಳಿಕ ಮೈತ್ರೇಯನು ಮುತ್ತಿನಹಾರವನ್ನು ತಂದು, ಚಾರುದತ್ತನು ಹೇಳಿಕೊಟ್ಟಿದ್ದಂತೆ ಹೇಳಿ, ವಸಂತಸೇನೆಗೆ ಕೊಡುವನು. ಅವಳು ಚಾರುದತ್ತನ ಗುಣಾತಿಶಯಕ್ಕೆ ಮನಸ್ಸಿನಲ್ಲೇ ಹಿಗ್ಗುತ್ತ ತೆಗೆದುಕೊಂಡು, "ವಿಚಾರವನ್ನು ಈಗಲೇ ತಿಳಿಸಬಾರದು, ಎದುರಿಗೆ ಹೋಗಿ ಹಾಸ್ಯಮಾಡಬೇಕು" ಎಂದುಕೊಂಡು, "ಸಾಯಂಕಾಲಕ್ಕೆ ಸರಿಯಾಗಿ ನಾನು ಬರುವೆನೆಂದು ಆ ಜೂಜುಗಾರನಿಗೆ ಹೇಳು" ಎನ್ನುವಳು. ಅವಳು ತನ್ನ ಒಡವೆಗಳಿಗಾಗಿ ಕೊಟ್ಟ ಹಾರವು ಸಾಲದೆಂದು ಇನ್ನೂ ಏನನ್ನಾದರೂ ಕೇಳಲು ಬರುವಳೆಂದು ಭಾವಿಸಿ, ಹಾಗೆಂದು ಚಾರುದತ್ತನೊಡನೆ ಹೇಳುವನು.

ಸಾಯಂಕಾಲ ಚಾರುದತ್ತನ ಮನೆಗೆ ವಸಂತಸೇನೆ ಚೇಟಿಯೊಡನೆ ಬಂದಳು. ವಸಂತಸೇನೆಯು ಚಾರುದತ್ತನನ್ನು ಜೂಜುಗಾರನೆಂದು ಹಾಸ್ಯಮಾಡುತ್ತಾ "ಆರ್ಯನು ಕೊಟ್ಟ ರತ್ನಹಾರವನ್ನು ನಮ್ಮ ಒಡತಿಯು ಜೂಜಿನಲ್ಲಿ ತನ್ನದೆಂದು

ಭಾವಿಸಿ ಸೋತುಬಿಟ್ಟಳು. ಅದನ್ನು ತೆಗೆದುಕೊಂಡವರೆಲ್ಲೋ ಹೋದರು. ನಾವು ಅದನ್ನು ತರುವವರೆಗೂ ಈ ಒಡವೆಯ ಗಂಟು ಅದಕ್ಕೆ ಬದಲಾಗಿ ನಿಮ್ಮಲ್ಲಿರಲಿ" ಎಂದು ಚೇಟಿಯಿಂದ ಹೇಳಿಸಿ ಕೊಡಿಸುವಳು. ಒಡವೆಗಳನ್ನು ನೋಡಿದ ವಿದೂಷಕನು ಆಶ್ಚರ್ಯದಿಂದ ಭ್ರಾಂತನಾಗುವನು. ಆಮೇಲೆ ಚಾರುದತ್ತನಿಗೂ ಅವು ತನ್ನ ಮನೆಯಲ್ಲಿ ಹೋದ ಒಡವೆಗಳೇ ಎಂದು ತಿಳಿಯಿತು. ಏನು ಹೇಳಿಯಾನು! ದಿಗ್ಭ್ರಮೆ.

ವಸಂತಸೇನೆ, "ಆರ್ಯನೆ! ಈ ರತ್ನಾವಳಿಯನ್ನು ಧರಿಸಲು ನಾನು ಯೋಗ್ಯಳೆ?" ಎಂದು ಅದನ್ನೂ ಹಿಂದಕ್ಕೆ ಕೊಡುವಳು. ಚಾರುದತ್ತನು "ಒಡವೆಗಳನ್ನು ಕಳ್ಳರು ತೆಗೆದುಕೊಂಡು ಹೋದರೆಂದರೆ ಯಾರೂ ನಂಬಲಾರರೆಂದು ಲೋಕಾಪವಾದಕ್ಕಂಜಿ ರತ್ನಹಾರವನ್ನು ಕಳುಹಿಸಿದೆನು, ಕ್ಷಮಿಸು" ಎಂದು ಸಮಾಧಾನಪಡಿಸುವನು. ವಸಂತಸೇನೆಯು ಸಂತೋಷದಿಂದ ಆ ರಾತ್ರಿ ಚಾರುದತ್ತನ ಮನೆಯಲ್ಲಿಯೇ ಇರುವಳು.

ಮರುದಿನ ಬೆಳಗಿನ ಜಾವದಲ್ಲೇ ಎದ್ದ ಚಾರುದತ್ತನು ಪುಷ್ಪಕರಂಡಕವೆಂಬ ಉದ್ಯಾನವನಕ್ಕೆ ವಸಂತಸೇನೆಯನ್ನು ಕರೆದುಕೊಂಡು ಬರುವಂತೆ ವರ್ಧಮಾನಕ ನೆಂಬ ಗಾಡಿಯವನಿಗೆ ಹೇಳಿ, ತಾನು ವಿದೂಷಕನೊಡನೆ ಅಲ್ಲಿಗೆ ಮುಂಚೆಯೇ ಹೋಗುವನು. ಬೆಳಗ್ಗೆ ಎದ್ದ ಬಳಿಕ ವಸಂತಸೇನೆಗೆ ಈ ವಿಚಾರವು ತಿಳಿಯುವುದು. ಅಷ್ಟರಲ್ಲಿ ರೋಹಸೇನನೆಂಬ ಚಾರುದತ್ತನ ಮಗು ಅಳುತ್ತಿರುವುದು. ರದನಿಕೆಯೆಂಬ ಚೇಟಿ ಸಮಾಧಾನಪಡಿಸುತ್ತಿರುವಳು.

ವಸಂತಸೇನೆ.—ಇವನೇಕೆ ಅಳುತ್ತಾನೆ?

ರದನಿಕೆ.—ಇವನಿಗೆ ಆಡುವುದಕ್ಕೆ ನೆರೆಮನೆಯಿಂದ ಒಂದು ಚಿನ್ನದ ಗಾಡಿ ಯನ್ನು ತಂದು ಕೊಟ್ಟಿದ್ದೆವು. ಅವರು ಅದನ್ನು ತೆಗೆದುಕೊಂಡು ಹೋದರು. ಅದಕ್ಕಾಗಿ ಇವನು ಅಳುವುದನ್ನು ನೋಡಿ, ಈ ಮಣ್ಣಿನ ಬಂಡಿಯನ್ನು ಮಾಡಿ ಕೊಟ್ಟೆನು. "ಈಗ ನನಗೆ ಈ ಮಣ್ಣಿನ ಬಂಡಿ ಬೇಡ, ಚಿನ್ನದ ಬಂಡಿಯೇ ಬೇಕು" ಎಂದು ಅಳುವನು.

ಈ ಮಾತನ್ನು ಕೇಳಿ ವಸಂತಸೇನೆಯು ವಿಧಿಯನ್ನು ನಿಂದಿಸುತ್ತ, ಕಣ್ಣೀರು ಸುರಿಸಿ, "ಮಗುವೇ, ಅಳಬೇಡ, ಪುನಃ ಚಿನ್ನದ ಗಾಡಿಯನ್ನೇ ಮಾಡಿಸಿಕೊಂಡು ಆಡುವೆ" ಎನ್ನುವಳು.

ರೋಹಸೇನ.—ಈಕೆ ಯಾರು?

ರದನಿಕೆ.—ನಿಮ್ಮ ತಾಯಿ.

ರೋಹ.—ರದನಿಕೆ, ನೀನು ಹೇಳುವುದು ಸುಳ್ಳು, ನಮ್ಮ ತಾಯಿಗೆ ಒಡವೆಯೆಲ್ಲಿ ಬಂದೀತು!

ಮಗುವಿನ ಈ ಮಾತನ್ನು ಕೇಳಿ, ಯಾರುತಾನೆ ಮರುಗದಿರುವರು? ವಸಂತ ಸೇನೆಯು, "ಮಗು, ನಿನ್ನ ಮುದ್ದುಮಾತನ್ನು ಕೇಳಿದರೆ ನನ್ನ ಮನಸ್ಸು ಕರಗಿ ಹೋಗುವುದು" ಎಂದು ಅಳುತ್ತ ಒಡವೆಗಳನ್ನು ತೆಗೆದು, "ಈಗ ನಾನು ನಿಮ್ಮ ತಾಯಿ ಯಾದೆ; ಈ ಒಡವೆಗಳನ್ನು ತೆಗೆದುಕೊಂಡು ಚಿನ್ನದ ಬಂಡಿಯನ್ನು ಮಾಡಿಸಿಕೊ" ಎಂದು ಕೊಡುವಳು.

ರೋಹಸೇನ.—ಹೋಗು ಹೋಗು, ನಾನು ತೆಗೆದುಕೊಳ್ಳುವುದಿಲ್ಲ. ನೀನು ಅಳುತ್ತೀಯೆ.

ವಸಂತಸೇನೆ ಕಣ್ಣೀರನ್ನೊರಸಿಕೊಂಡು, "ಮಗು, ನಾನು ಅಳುವುದಿಲ್ಲ. ಚಿನ್ನದ ಬಂಡಿಯನ್ನು ಮಾಡಿಸಿಕೊಂಡು ಆಡು, ಹೋಗು," ಎಂದು ಒಡವೆಗಳನ್ನು ಆ ಮಣ್ಣಿನ ಬಂಡಿಯಲ್ಲಿ ತುಂಬುವಳು.

ವಸಂತಸೇನೆಗೆ ಉದ್ಯಾನವನಕ್ಕೆ ಹೋಗಲು ಗಾಡಿ ಸಿದ್ಧವಾಗಿದೆಯೆಂದು ತಿಳಿಯುವುದು. ಉಚಿತವಾದ ಅಲಂಕಾರಮಾಡಿಕೊಂಡು ಬಂದು, ಬಾಗಿಲಲ್ಲಿ ನಿಂತಿದ್ದ ಗಾಡಿಯನ್ನೇರಿ, ಮನಸ್ಸಿನಲ್ಲೇ ಮಂಡಿಗೆಯನ್ನು ಮಾಡಿಕೊಳ್ಳುತ್ತಾ ಹೋಗುವಳು. ಉದ್ಯಾನವು ಸಿಕ್ಕಿತು. ಗಾಡಿಯಿಂದಿಳಿಯಬೇಕು. ಆಹ! ಪಕ್ಕದಲ್ಲೇ ಶಕಾರ! ಚಾರುದತ್ತನಿಲ್ಲವೇ ಇಲ್ಲ! "ಅಯ್ಯೋ! ಮೋಸಹೋದೆನು. ಇದೇನು? ಈ ಹಾಳು ಶಕಾರನು ಇಲ್ಲೇ ಇರುವನಲ್ಲ! ನನಗೇನೋ ಭಯವಾಗುವುದು. ಈಗ ಏನು ಮಾಡಲಿ! ಯಾರನ್ನು ಮರೆಹೊಗಲಿ?" ಎಂದುಕೊಂಡು ದಿಕ್ಕುತೋಚದೆ ವ್ಯಥೆಪಡುವಳು. ಗಾಡಿಯಲ್ಲಿರುವವಳು ವಸಂತಸೇನೆಯೆಂದು ತಿಳಿದ ಶಕಾರನ ಆಶ್ಚರ್ಯಾನಂದಗಳಿಗೆ ಎಲ್ಲೆಯಿಲ್ಲ!

ಶಕಾರನ ಹತ್ತಿರಕ್ಕೆ ವಸಂತಸೇನೆಯು ಹೇಗೆ ಬಂದಳು? ಶಕಾರನು ಬೆಳಗ್ಗೆ ವಿನೋದಕ್ಕಾಗಿ ಉದ್ಯಾನವನಕ್ಕೆ ಹೋಗಿದ್ದನು. ಮಧ್ಯಾಹ್ನ ಹಿಂದಿರುಗಿ ಮನೆಗೆ ಬರಲು ಗಾಡಿಯನ್ನು ತರುವಂತೆ ತನ್ನ ಗಾಡಿಯ ಆಳಿಗೆ ಹೇಳಿದ್ದನು. ಚಾರುದತ್ತನು ಹೇಳಿದ್ದ ಗಾಡಿಯವನು, "ಗಾಡಿಯು ಬಾಗಿಲಲ್ಲಿ ಸಿದ್ಧವಾಗಿದೆ" ಎಂದು ವಸಂತ ಸೇನೆಗೆ ಹೇಳಿದನು. ಆದರೆ ಗಾಡಿಗೆ ಮೆತ್ತೆಯನ್ನು ಹಾಸಿಕೊಂಡು ಬರಲು ಮರೆತಿದ್ದನು. ಆದ್ದರಿಂದ ಅವಳು ಅಲಂಕರಿಸಿಕೊಂಡು ಬರುವಷ್ಟರೊಳಗೆ ಹಾಕಿಕೊಂಡು ಬರೋಣ ವೆಂದು, ಅದನ್ನವಳಿಗೆ ತಿಳಿಸದೆಯೇ ಗಾಡಿಯನ್ನು ಹಿಂದಕ್ಕೆ ತನ್ನ ಮನೆಯ ಹತ್ತಿರಕ್ಕೆ ಅಟ್ಟಿಕೊಂಡು ಹೋದನು. ಆ ವೇಳೆಗೆ ಸರಿಯಾಗಿ ಶಕಾರನ ಆಳು ಅವನ ಗಾಡಿಯನ್ನು ಹೊಡೆದುಕೊಂಡು ಬಂದು, ರಸ್ತೆಯ ತುಂಬ ಗಾಡಿಗಳ ಗದ್ದಲವಿದ್ದದ್ದರಿಂದ ಮುಂದೆ ಹೋಗಲಾರದೆ ಚಾರುದತ್ತನ ಮನೆಯ ಮುಂದೆಯೇ ತನ್ನ ಗಾಡಿಯನ್ನು ನಿಲ್ಲಿಸಿ

ಕೊಂಡಿದ್ದನು. ಒಳಗಿನಿಂದ ಬಂದ ವಸಂತಸೇನೆ ಆ ಗಾಡಿಯೇ ತನಗಾಗಿ ನಿಂತಿದೆಯೆಂದು ತಿಳಿದುಕೊಂಡು, ಅದರಲ್ಲೇರಿದಳು. ಶಕಾರನ ಆಳು ಇದನ್ನು ಗಮನಿಸದೇ ಗಾಡಿಯನ್ನು ಶಕಾರನ ಸಮೀಪಕ್ಕೆ ಹೊಡೆದುಕೊಂಡು ಹೋದನು. ಹೀಗೆ ವಸಂತಸೇನೆ ಶಕಾರನ ಕೈಗೆ ಸಿಕ್ಕಿದಳು.

ಅತ್ತ ಚಾರುದತ್ತನ ಬಂಡಿಯವನು ಮೆತ್ತೆಯನ್ನು ಹಾಸಿಕೊಂಡು ಬಂದು ಗಾಡಿಯನ್ನು ಚಾರುದತ್ತನ ಮನೆಯ ಬಾಗಿಲಲ್ಲಿ ನಿಲ್ಲಿಸುವನು. ಆ ವೇಳೆಗೆ ಸರಿಯಾಗಿ ಪಾಲಕರಾಜನ ಸೆರೆಯಿಂದ ತಪ್ಪಿಸಿಕೊಂಡು ಒಂದು ಕಾಲಿನ ಸಂಕಲೆಯೊಡನೆ ಓಡಿಹೋಗುತ್ತಿದ್ದ ಆರ್ಯಕನೆಂಬವನು ಆ ಗಾಡಿಯನ್ನು ಹತ್ತುವನು. ಗಾಡಿಯವನು, ಕಾಲಿನ ಸಂಕಲೆಯ ಲೋಹಶಬ್ದದಿಂದ ವಸಂತಸೇನೆಯೆ ಗಾಡಿಯನ್ನೇರಿದಳೆಂದು ಭಾವಿಸಿ ಗಾಡಿಯನ್ನು ಚಾರುದತ್ತನ ಬಳಿಗೆ ತೆಗೆದುಕೊಂಡು ಹೋಗುವನು. ಗಾಡಿಯಿಂದಿಳಿದು ಮರೆಹೊಕ್ಕ ಆರ್ಯಕನಿಗೆ ಚಾರುದತ್ತನು ಅಭಯವನ್ನಿತ್ತು ಕಳುಹಿಸಿ ವಸಂತಸೇನೆಯು ಬಾರದಿರುವುದಕ್ಕಾಗಿ ಚಿಂತಿಸುತ್ತಾ ಮನೆಗೆ ಹೋದನು.

ಇತ್ತ ವಸಂತಸೇನೆಯ ಗತಿಯೇನಾಯಿತೆಂದು ನೋಡೋಣ. ತನ್ನನ್ನು ಮೋಹಿಸಿ ಬಂದಳೆಂದು ಉಬ್ಬಿದ ಶಕಾರನು ಅವಳ ಕಾಲಿಗೆ ಬಿದ್ದು ಕ್ಷಮಾಪಣೆಯನ್ನು ಕೇಳಿ ಪ್ರಾರ್ಥಿಸಿದನು. ಉಪಯೋಗವಾಗಲಿಲ್ಲ. ಬಗೆಬಗೆಯಲ್ಲಿ ಹೆದರಿಸಿದನು, ಬಲಾತ್ಕರಿಸಿದನು. ಅವಳ ಮನಸ್ಸು ಸ್ವಲ್ಪವೂ ಚಲಿಸಲಿಲ್ಲ. ತನಗೆ ಪ್ರಯೋಜನವಿಲ್ಲದ ಅವಳನ್ನು ಕೊಂದೇಬಿಡಬೇಕೆಂದು ನಿಶ್ಚಯಿಸಿ, ಶಕಾರನು ಮಿತ್ರನಾದ ವಿಟನಿಗೂ ಗಾಡಿಯವನಾದ ಸ್ಥಾವರಕನಿಗೂ ಅವಳನ್ನು ಕೊಂದರೆ ಬಹುಮಾನ ಕೊಡುವುದಾಗಿ ಹೇಳಿದನು. ಅವರು ಕೊಲ್ಲಲೊಪ್ಪಲಿಲ್ಲ. ಅವನಿಗೇ ಬುದ್ಧಿವಾದವನ್ನು ಹೇಳಿದರು. ಬಳಿಕ ಅವರನ್ನು ದೂರ ಕಳುಹಿಸಿ ತಾನೇ ಕೊಂದುಬಿಡಬೇಕೆಂದು ಯೋಚಿಸಿದ ಆ ಘಾತುಕನು, "ನೀವು ಇಲ್ಲಿದ್ದರೆ ಇವಳು ನನ್ನಲ್ಲಿ ಪ್ರೀತಿಯನ್ನು ತೋರಿಸಲು ನಾಚುವಳು" ಎಂದು ಅವರನ್ನು ದೂರವಾಗಿ ಕಳುಹಿಸಿ, ಕೂಗಿಕೊಳ್ಳಲು ಕೂಡ ನಾಚುವ ಆ ಕೋಮಲೆಯನ್ನು ಕತ್ತುಹಿಸಿಕಿ ಎಸೆದು ತರಗೆಲೆಗಳಿಂದ ಮುಚ್ಚಿಬಿಟ್ಟನು. ಸ್ವಲ್ಪ ಹೊತ್ತಿನಮೇಲೆ ಬಂದ ವಿಟನಿಗೂ ಗಾಡಿಯವನಿಗೂ ವಸಂತಸೇನೆಯು ಅಲ್ಲಿಲ್ಲದ್ದರಿಂದಲೂ ಶಕಾರನ ಮುಖವಿಕಾರದಿಂದಲೂ ಅವಳನ್ನು ಕೊಂದಿರಬೇಕೆಂದು ಸಂದೇಹವುಂಟಾಗುವುದು. ಶಕಾರನನ್ನು ಕೇಳಲು ಅವನು ಅವರ ಕಾಲಿಗೆ ಬಿದ್ದು, ಪ್ರಕಟಮಾಡದಂತೆ ಹೇಳಿ, ವಸಂತಸೇನೆಯ ದೇಹವನ್ನು ತೋರಿಸುವನು. ವಿಟನು, "ಈ ಪಾಪಿಯ ಸಹವಾಸದಿಂದ ನಾನೂ ಪತಿತನಾದೆನು. ಹಾ! ವಸಂತಸೇನೆ!

ನೀನು ಇನ್ನೊಂದು ಜನ್ಮದಲ್ಲಾದರೂ ಸೂಳೆಯಾಗದೆ ಸತ್ಕುಲದಲ್ಲಿ ಜನಿಸು" ಎಂದು ದುಃಖಿಸುತ್ತ ಆರ್ಯಕನಲ್ಲಿಗೆ ಓಡಿಹೋಗುವನು. ಗಾಡಿಯವನಿಂದ ತನ್ನ ತಪ್ಪು ಪ್ರಕಟವಾದೀತೆಂದು ಶಂಕಿಸಿ, ಶಕಾರನು ಅವನಿಗೆ ಒಂದು ಆಭರಣವನ್ನು ಕೊಟ್ಟು, "ನಾನು ಬರುವವರೆಗೆ ನೀನು ನಮ್ಮ ಮನೆಯ ಉಪ್ಪರಿಗೆಯ ಮೇಲಿರು, ಹೋಗು" ಎಂದು ಕಳುಹಿಸಿ ತಾನು ಮನೆಗೆ ಬಂದ ಬಳಿಕ ಅವನ ಕಾಲಿಗೆ ಬೇಡಿಯನ್ನು ತೊಡಿಸಿ ಬಂಧನದಲ್ಲಿಟ್ಟನು.

ಶಕಾರನು ಅಷ್ಟಕ್ಕೆ ಸುಮ್ಮನಿರದೆ ತನ್ನ ತಪ್ಪನ್ನು ನಿರಪರಾಧಿಯಾದ ಚಾರುದತ್ತನ ಮೇಲೆ ಹಾಕಿ, ಅವನನ್ನೂ ಕೊಲ್ಲಿಸುವ ಉಪಾಯವನ್ನು ಯೋಚಿಸಿ, ಮರುದಿನ ನ್ಯಾಯಸ್ಥಾನಕ್ಕೆ ಹೋದನು. ಶಕಾರನ ವ್ಯಾಜ್ಯವೆಂದರೆ ನ್ಯಾಯಾಧಿಪತಿಗೂ ಯೋಚನೆ. ಆ ದಿನ ಬೇರೆ ವ್ಯಾಜ್ಯಗಳು ವಿಚಾರಕ್ಕಿರುವುದರಿಂದ ಮಾರನೆಯದಿನ ಅವನದನ್ನು ಕೇಳುವುದಾಗಿ ತಿಳಿಸಿದನು. ಅದೆಲ್ಲಿ ಸಾಧ್ಯ, ಮಹಾರಾಜನೇ ಅವನಕ್ಕನ ಗಂಡನಾಗಿರುವಾಗ! ಆದುದರಿಂದ ಆ ದಿನವೇ ವಿಚಾರಮಾಡಬೇಕಾಯಿತು. "ಉಜ್ಜಯಿನಿಗೇ ಅಲಂಕಾರವಾಗಿದ್ದ ವಸಂತಸೇನೆಯನ್ನು ವಿಜನವಾದ ನನ್ನ ಉದ್ಯಾನವನದಲ್ಲಿ ಯಾವನೋ ದುಷ್ಟನು ಒಡವೆಯ ಆಸೆಯಿಂದ ಕತ್ತನ್ನು ನುಲಿದು ಕೊಂದುಹಾಕಿರುವನು" ಎಂದು ತಿಳಿಸಿದನು. "ಒಡವೆಯ ಆಸೆಯಿಂದ ಕತ್ತನ್ನು ನುಲಿದು" ಎಂದುದರಿಂದಲೂ ಮತ್ತೆ ಕೆಲವು ಅಸಂಗತವಾದ ಮಾತುಗಳಿಂದಲೂ ನ್ಯಾಯಾಧಿಪತಿಗೆ ಮೊದಲು ಅವನ ಮೇಲೆ ಸಂದೇಹವುಂಟಾಯಿತು. ಆದರೆ ದೊರೆಯ ಮೈದುನನೆಂಬ ಭೀತಿ. ವಸಂತಸೇನೆಯ ತಾಯನ್ನು ಕರೆಯಿಸಿದರು. ಮಗಳ ಅವಸ್ಥೆಯನ್ನು ತಿಳಿಯದ ಆ ಮುದುಕಿಯು, "ವಸಂತಸೇನೆ ಅವಳ ಪ್ರಿಯನಾದ ಚಾರುದತ್ತನ ಮನೆಗೆ ಹೋದಳು, ಇನ್ನೂ ಮನೆಗೆ ಬರಲಿಲ್ಲ" ಎಂದಳು. ಚಾರುದತ್ತನ ಮೇಲೆ ತಪ್ಪನ್ನು ಹೊರಿಸಲು ಶಕಾರನಿಗೆ ಬಲವಾದ ಆಧಾರ ಸಿಕ್ಕಿತು. ಚಾರುದತ್ತನು ವಿಚಾರಣೆಗೆ ಬರಬೇಕಾಯಿತೆಂದು ಹೇಳಬೇಕಾದುದೇ ಇಲ್ಲ. ನ್ಯಾಯಾಧಿಪನಿಗೂ ಚಾರುದತ್ತನಲ್ಲಿ ಗೌರವ. ಅವನ ಮೇಲೆ ಸಂಶಯವೇನೂ ಇಲ್ಲ. ಬಂದೊಡನೆ ಅವನಿಗೆ ಕುಳಿತುಕೊಳ್ಳಲು ಪೀಠವೂ ಸಿಕ್ಕುವುದು. ಶಕಾರನು, "ನ್ಯಾಯಾಧಿಪತಿಗಳೆ! ವ್ಯವಹಾರವು ಒಳ್ಳೆಯದಾಯಿತು, ಧರ್ಮವಾಯಿತು! ಸ್ತ್ರೀಘಾತುಕನು ಬಂದರೆ ಪೀಠವನ್ನು ಕೊಡುವಿರಾ? ಕೊಡಿ, ಕೊಡಿ!" ಎಂದು ಹೆದರಿಸಿ, ಚಾರುದತ್ತನನ್ನು "ಈಕೆಯ ಮಗಳೊಡನೆ ನಿನಗೆ ಪ್ರೀತಿಯುಂಟೋ?" ಎಂದು ಮುದುಕಿಯನ್ನು ತೋರಿಸಿ ಕೇಳಿದನು. ಚಾರುದತ್ತನು ಸುಮ್ಮನಿರಲು ನ್ಯಾಯಾಧಿಪತಿಯು "ಈ ವೇಶ್ಯೆಯ ಮಗಳು ನಿಮಗೆ ಸಖಿಯೋ?" ಎಂದು ಪ್ರಶ್ನೆಮಾಡಿದನು.

ಚಾರುದತ್ತನು ನಾಚಿಕೆಯಿಂದ ತಲೆಯನ್ನು ತಗ್ಗಿಸುವನು. ಶಕಾರನು "ಸುಮ್ಮನಿರುವುದೇ ಈತನು ದೋಷಿಯೆನ್ನಲು ಆಧಾರ" ಎನ್ನುವನು.

ಲೇಖಕ.—ಅಯ್ಯಾ, ಲಜ್ಜೆಪಡಬೇಡ, ಹೇಳು.

ಚಾರುದತ್ತನು.—"ಈ ವೇಶ್ಯೆಯ ಮಗಳು ನನಗೆ ಸಖಿಯೆಂದು ಲಜ್ಜೆಯಿಲ್ಲದೆ ಹೇಗೆ ಹೇಳಿಕೊಳ್ಳಲಿ? ಯೌವನವು ಕೆಟ್ಟದ್ದು" ಎನ್ನುವನು.

ಕಡೆಗೆ ನಿರ್ವಾಹವಿಲ್ಲದೆ ತಾನು ವಸಂತಸೇನೆಯಲ್ಲಿ ಅನುರಕ್ತನೆಂದೂ, ಅವಳು ತನ್ನ ಮನೆಗೆ ಬಂದಿದ್ದು ಮತ್ತೆ ಅವಳ ಮನೆಗೇ ಹೊರಟುಹೋದಳೆಂದೂ ಹೇಳಿದನು. ಆದರೆ ವಸಂತಸೇನೆಯು ಯಾವಾಗ ಯಾರ ಸಂಗಡ ಹೇಗೆ ಮನೆಗೆ ಹೋದಳೆಂಬುದನ್ನು ಅವನು ಹೇಳಲಾರ. (ಅವನಿಗೇ ತಿಳಿಯದು.) ಶಕಾರನು ಅದನ್ನೇ ಆಧಾರವಾಗಿಟ್ಟುಕೊಂಡು, "ಧನಕ್ಕೆ ಆಸೆಪಟ್ಟು, ಚಾರುದತ್ತನೇ ವಸಂತಸೇನೆಯನ್ನು ಕೊಂದಿರುವನು" ಎಂದು ಸಾಧಿಸುವನು.

ನ್ಯಾಯಾಧಿಪತಿ.—ಈತನ ಮೇಲೆ ದೋಷಾರೋಪಣೆಮಾಡುವುದಕ್ಕೆ ಆಗುವುದಿಲ್ಲ. ಈತನು ಆರ್ಯ ಚಾರುದತ್ತನಲ್ಲವೆ! ತನ್ನ ಐಶ್ವರ್ಯವನ್ನೆಲ್ಲಾ ಪರರಿಗೋಸ್ಕರ ವಿನಿಯೋಗಿಸಿದ ಈ ಮಹಾನುಭಾವನು ಇತರರ ದ್ರವ್ಯಕ್ಕಾಸೆಪಟ್ಟು ಇಂತಹ ಅಕಾರ್ಯವನ್ನೆಂದಿಗೆ ಮಾಡಿಯಾನು!

ಶಕಾರ.—ಇದೇ ನ್ಯಾಯಾಧಿಪರ ಪಕ್ಷಪಾತವನ್ನು ತೋರಿಸುತ್ತದೆ.

ಮುದುಕಿಯು, "ಹಿಂದೆ ನಾವು ಕೊಟ್ಟಿದ್ದ ಒಡವೆಗಳನ್ನು ಕಳ್ಳರು ತೆಗೆದುಕೊಂಡು ಹೋಗಲು ಅದನ್ನು ಹೇಳಲಾರದೆ ಅದಕ್ಕೆ ಬದಲಾಗಿ ಲೋಕೋತ್ತರವಾದ ರತ್ನಹಾರವನ್ನು ಕೊಟ್ಟು ಕಳುಹಿಸಿದ ಈ ಸತ್ಯಸಂಧನು ಇಂತಹ ಕೆಲಸವನ್ನು ಮಾಡಿಯಾನೆ? ಹಾ, ಪುತ್ರಿ, ಎಲ್ಲಿಹೋದೆ!" ಎಂದಳುವಳು. ಅಷ್ಟರಲ್ಲಿ ಚಾರುದತ್ತನ ಗಾಡಿಯವನು ವಸಂತಸೇನೆಯನ್ನು ಉದ್ಯಾನವನಕ್ಕೆ ಚಾರುದತ್ತನ ಬಳಿಗೆ ಕರೆದುಕೊಂಡು ಹೋಗುತ್ತಿದ್ದನೆಂಬ ವಿಚಾರವೂ ನ್ಯಾಯಸ್ಥಾನಕ್ಕೆ ತಿಳಿಯುವುದು. ನ್ಯಾಯಾಧಿಪನು, "ನಾವು ವಿಚಾರಮಾಡಿದಷ್ಟೂ ಸಂಕಟವೇ ಸಂಭವಿಸುವುದು!" ಎಂದುಕೊಂಡು, ಚಾರುದತ್ತನನ್ನೇ ನಿಜವನ್ನು ಹೇಳುವಂತೆ ಕೇಳುವನು. ಅವನು ಏನು ಹೇಳಬಹುದು! "ಹೂ ಕೊಯ್ಯಲು ಬಳ್ಳಿಯನ್ನು ಬಾಗಿಸಿದರೆ ಎಲ್ಲಿ ನೋಯುವುದೋ ಎಂದು ಯೋಚಿಸುವ ನಾನು ಅಂತಹ ಕೋಮಲಾಂಗಿಯನ್ನು ಕೊಂದೇನೇ!" ಎಂದನು. ಆ ವೇಳೆಗೆ ವಸಂತಸೇನೆಯು ರೋಹಸೇನನಿಗೆ ಗಾಡಿಯನ್ನು ಮಾಡಿಸಿಕೊಳ್ಳಲು ಕೊಟ್ಟಿದ್ದ ಒಡವೆಗಳನ್ನು ಹಿಂದಕ್ಕೆ ಅವಳಿಗೇ ಕೊಟ್ಟುಬರಲು ಚಾರುದತ್ತನು ಕಳುಹಿಸಿದ್ದ ಮೈತ್ರೇಯನು ಚಾರುದತ್ತನ ಈ ವಿಚಾರವನ್ನು ಕೇಳಿ ಒಡವೆಯ

ಗಂಟನ್ನೂ ಕಂಕುಳಲ್ಲೇ ಇಟ್ಟುಕೊಂಡು ಆ ಸ್ಥಾನಕ್ಕೆ ಬಂದು, ಚಾರುದತ್ತನನ್ನು "ಇದೇನು?" ಎಂದು ದುಃಖದಿಂದ ಕೇಳಿದನು. ಶಕಾರನೇ ವಿವರವಾಗಿ ಹೇಳಿದನು. ಮೈತ್ರೇಯನು "ಉಜ್ಜಯಿನಿಗೇ ಅಲಂಕಾರವಾಗಿರುವ ಈ ಗುಣಶಾಲಿ ಎಂದಿಗಾದರೂ ಇಂತಹ ಅಕಾರ್ಯವನ್ನು ಮಾಡಿಯಾನೆ! ಎಲೋ ನೀಚ! ಅನ್ಯಾಯವನ್ನು ಹೇಳುವೆಯಾ!" ಎಂದು ಕೋಪದಿಂದ ಶಕಾರನನ್ನು ಹೊಡೆಯಲು ಹೋಗುವನು. ಆಗ ಅವನ ಕಂಕುಳಲ್ಲಿದ್ದ ಒಡವೆಯ ಗಂಟು ಕೆಳಗೆ ಬೀಳುವುದು. ನಿರಪರಾಧಿಯೆಂದು ಸ್ಥಾಪಿಸಲು ಬಂದ ಮಿತ್ರನೇ ಚಾರುದತ್ತನು ಅಪರಾಧಿಯೆಂದು ನಿರ್ಧರಿಸುವಂತಾಯಿತು. ಕಂಕುಳಿಂದ ಬಿದ್ದ ಒಡವೆಗಳು ವಸಂತಸೇನೆಯವೆಂಬುದನ್ನು ಹೇಳಬೇಕಾಗಿಯೇ ಇಲ್ಲ. ಅವಳಾಗಿಯೇ ಕೊಟ್ಟಿದ್ದಳೆಂದರೆ ನಂಬುವರಾರು! ಶಕಾರನ ಇಷ್ಟಾರ್ಥಸಿದ್ಧಿಯಾಯಿತು. ವಸಂತಸೇನೆಯ ತಾಯಿ, ಚಾರುದತ್ತನ ಮೇಲೆ ತಪ್ಪು ಸ್ಥಿರಪಡಬಾರದೆಂದು ಆ ಒಡವೆಗಳು ತನ್ನ ಮಗಳವಲ್ಲವೆಂದೇ ಸಾಧಿಸಿದರೂ ಪ್ರಯೋಜನವಾಗಲಿಲ್ಲ. ಅವು ತನ್ನ ಮನೆಯಿಂದ ಬಂದುವೆಂದು ಚಾರುದತ್ತನೇ ಹೇಳಿದನು. ಬೇರೆ ಆಧಾರವೇಕೆ? ನ್ಯಾಯಾಧಿಪತಿಗೇ ಸಂದೇಹವಾಗಿದ್ದರೂ ತಪ್ಪು ಸ್ಥಿರಪಟ್ಟಿತು. "ಈಗಲಾದರೂ ಸತ್ಯವನ್ನು ಹೇಳು" ಎನ್ನುವನು.

ಚಾರುದತ್ತನು ತನ್ನನ್ನು ಪಾತಕಿಯೆಂದು ನ್ಯಾಯಾಧೀಶರೂ ಇತರರೂ ತಿಳಿದ ಬಳಿಕ ತಾನು ಪಾತಕಿಯಲ್ಲದಿದ್ದರೂ ಫಲವಿಲ್ಲ. "ವಸಂತಸೇನೆಯಿಲ್ಲದೇ ನಾನು ಬದುಕಿತಾನೆ ಪ್ರಯೋಜನವೇನು?" ಎಂದುಕೊಂಡು ದುಃಖವನ್ನು ತಡೆಯಲಾರದೆ "ನಾನು ಇಹಪರಜ್ಞಾನವಿಲ್ಲದೆ ರತಿಸಮಳಾದ ಸ್ತ್ರೀಯನ್ನು . . ." ಎಂದು ಮುಂದೆ ಮಾತನಾಡಲಾಗದೇ ನಿಲ್ಲಿಸುವನು.

ಬಳಿಕ ತಪ್ಪು ಸ್ಥಿರಪಟ್ಟಿತೆಂದೂ ದಂಡನೆಯನ್ನು ರಾಜನೇ ವಿಧಿಸಬೇಕಾಗಿರುವುದರಿಂದ ಅವನಿಗೇ ವಿಜ್ಞಾಪಿಸುವುದಾಗಿಯೂ ತೀರ್ಮಾನವಾಗುವುದು. ವೃದ್ಧೆಯು, "ನನ್ನ ಮಗಳನ್ನು ಈತನು ಕೊಂದಿದ್ದರೂ ಚಿಂತೆಯಿಲ್ಲ, ಬಿಟ್ಟುಬಿಡಿ" ಎಂದು ಬಹಳವಾಗಿ ಬೇಡಿಕೊಂಡಳು. ಉಪಯೋಗವಾಗಲಿಲ್ಲ. ಯಾವ ಒಡವೆಗಳಿಗಾಗಿ ವಸಂತಸೇನೆಯನ್ನು ಕೊಂದನೋ ಅದೇ ಒಡವೆಗಳನ್ನು ಅಪರಾಧಿಯ ಕೊರಳಿಗೆ ಕಟ್ಟಿ, ಬೀದಿಯಲ್ಲಿ ಮೆರವಣಿಗೆಮಾಡಿ, ಅಪರಾಧವನ್ನು ಸಾರುತ್ತ ಕರೆದುಕೊಂಡು ಹೋಗಿ ಶ್ಮಶಾನದಲ್ಲಿ ಶೂಲಕ್ಕೆ ಹಾಕುವಂತೆ ರಾಜಾಜ್ಞೆಯಾಗುವುದು.

ಚಾರುದತ್ತನು ಮೈತ್ರೇಯನ ಮೂಲಕವೇ ತನ್ನ ತಾಯಿಗೂ ಪತ್ನೀಪುತ್ರರಿಗೂ ಅಂತ್ಯಸಂದೇಶವನ್ನು ತಿಳಿಸುವನು. ಬಳಿಕ ವಧಕರು ಅವನ ಕೊರಳಿಗೆ ಕೆಂಪು ಕಣಿಗಲೆ ಹೂವಿನ ಮಾಲೆಯನ್ನೂ ಆ ಒಡವೆಗಳನ್ನೂ ಹಾಕಿ ವಾದ್ಯವನ್ನು ಬಾರಿಸುತ್ತ

ಅವನನ್ನು ಕರೆದುಕೊಂಡು ಹೋಗುವರು. ಬೀದಿಗಳ ಚೌಕಗಳಲ್ಲಿ ಅವನ ತಂದೆ ತಾತಂದಿರ ಹೆಸರನ್ನು ಹೇಳಿ, ಅಪರಾಧವನ್ನು ಸಾರುವರು. ಶಕಾರನ ಹೊರತು ಉಳಿದ ಉಜ್ಜಯಿನಿಯೇ ಚಾರುದತ್ತನ ದುರ್ದೆಸೆಗಾಗಿ ದುಃಖಿಸುವುದು. ಚಾರುದತ್ತನಿಗೆ ತಾನು ಸಾಯುವುದಕ್ಕೆ ವ್ಯಥೆಯಿಲ್ಲ; ತನ್ನ ವಂಶವನ್ನು ಚಂಡಾಲರು ಸಾರುವಂತಾದುದಕ್ಕೆ ವ್ಯಥೆ. ಕಿವಿಗಳನ್ನು ಮುಚ್ಚಿಕೊಳ್ಳುವನು. "ಹಾ! ಪ್ರಿಯೆ, ವಸಂತಸೇನೆ" ಎಂದು ಅಡಿಗಡಿಗೆ ಹಂಬಲಿಸುವನು. ಮಗನನ್ನೂ ಹೆಂಡತಿಯನ್ನೂ ತಾಯನ್ನೂ ನೆನೆಸಿಕೊಂಡು ಅಳುವನು.

ಆ ವೇಳೆಗೆ ರೋಹಸೇನನು ವಿದೂಷಕನೊಡನೆ, "ಹಾ! ಅಪ್ಪಾ! ನನ್ನನ್ನು ಬಿಟ್ಟು ಎಲ್ಲಿ ಹೋಗುವೆ!" ಎಂದಳುತ್ತ ಬರುವನು. ಚಾರುದತ್ತನು, "ಚಂಡಾಲರೆ, ರೋಹಸೇನನನ್ನು ನನಗೆ ತೋರಿಸಿ" ಎಂದು ಬೇಡುವನು. ಅವರು, "ನಾವು ಚಂಡಾಲರಲ್ಲ. ಸತ್ಪುರುಷರನ್ನು ಸಂಕಟಪಡಿಸುವವರೇ ಚಂಡಾಲರು" ಎಂದು ಸಂಕಟಪಡುತ್ತಾ ರೋಹಸೇನನನ್ನೂ ಮೈತ್ರೇಯನನ್ನೂ ಚಾರುದತ್ತನ ಹತ್ತಿರಕ್ಕೆ ಬಿಡುವರು. ಅವರು ಚಾರುದತ್ತನಿಗೆ ಬದಲಾಗಿ ತಮ್ಮನ್ನು ಕೊಲ್ಲಬೇಕೆಂದು ವಧಕರನ್ನು ಬೇಡಿದರು. ಅದು ಹೇಗೆ ಸಾಧ್ಯ! ಮುಂದೆ ಹೋಗುವಾಗ ಶಕಾರನ ಮನೆ. ಆ ಮನೆಯ ಮಹಡಿಯಲ್ಲಿ, ಕಾಲಿಗೆ ಬೇಡಿಯನ್ನು ಹಾಕಿ ಇಟ್ಟಿದ್ದ ಸ್ಥಾವರಕನೆಂಬ ಗಾಡಿಯವನು ಸಾರುತ್ತಿರುವುದನ್ನು ಕೇಳಿ, ಅನ್ಯಾಯವಾಗಿ ಧರ್ಮಾತ್ಮನಾದ ಚಾರುದತ್ತನಿಗೆ ಮರಣವಾಗುವುದನ್ನು ಸಹಿಸಲಾರದೆ, ತನ್ನ ಪ್ರಾಣದ ಮೇಲೂ ಆಸೆಯಿಡದೆ, ಚಾರುದತ್ತನನ್ನುಳಿಸಿದರೆ ತನಗೆ ಪರಲೋಕವುಂಟೆಂದು ಮಹಡಿಯಿಂದ ಧುಮಿಕಿ, ತಾನು ನಿಲ್ಲಿಸಿದ್ದ ಗಾಡಿಯಲ್ಲಿ ತಿಳಿಯದೇ ವಸಂತಸೇನೆಯು ಏರಿ, ಶಕಾರನ ಉದ್ಯಾನವನಕ್ಕೆ ಬಂದಳೆಂದೂ, ಅಲ್ಲಿ ಪಾಪಿ ಶಕಾರನೇ ಅವಳನ್ನು ಕೊಂದನೆಂದೂ, ಚಾರುದತ್ತನು ನಿರಪರಾಧಿಯೆಂದೂ ಕೂಗಿಕೊಳ್ಳುವನು. ಅವನ ಮಾತನ್ನು ಕೇಳುವವರಾರು? ಶಕಾರನು—"ನನ್ನ ಮನೆಯಲ್ಲಿ ಕಳ್ಳತನಮಾಡಿದುದರಿಂದ ಇವನನ್ನು ಬಂಧನದಲ್ಲಿಟ್ಟಿದ್ದೆನು. ಆ ದ್ವೇಷದಿಂದ ಹೀಗೆ ಹೇಳುವನು" ಎಂದುಬಿಟ್ಟನು.

ಶಕಾರನಿಗೆ ಚಾರುದತ್ತನನ್ನು ಕೊಲ್ಲಿಸಿದುದರಿಂದಲೂ ತೃಪ್ತಿಯಿಲ್ಲ. ಅವನ ಮಗನನ್ನೂ ಕೊಲ್ಲುವಂತೆ ಚಂಡಾಲರಿಗಾಜ್ಞಾಪಿಸಿದನು. ಆದರೆ ಅವರು, "ದೊರೆಯು ಹಾಗೆ ಅಪ್ಪಣೆಮಾಡಿಲ್ಲ" ಎಂದರು. ಇಬ್ಬರು ಚಂಡಾಲರಲ್ಲಿ ಒಬ್ಬನಿಗೂ ಚಾರುದತ್ತನನ್ನು ಕೊಲ್ಲಲು ಇಷ್ಟವಿಲ್ಲ. "ನೀನು ಕೊಲ್ಲು, ನೀನು ಕೊಲ್ಲು" ಎಂದು ವಾದ. ಕೊನೆಗೆ ಸರದಿ ಯಾರದೋ ಅವನೇ ಕೊಲ್ಲಬೇಕೆಂದು ನಿರ್ಣಯವಾಯಿತು. ಆಗ

ಸರದಿಯ ವಧಕನು “ನಮ್ಮಪ್ಪನು, ನೀನು ಯಾರನ್ನಾದರೂ ಕೊಲ್ಲಬೇಕಾದಾಗ ಆದಷ್ಟು ತಡಮಾಡು. ಅಷ್ಟರಲ್ಲಿ ಯಾವುದಾದರೊಂದು ಕಾರಣದಿಂದ ಮರಣದಂಡನೆ ತಪ್ಪಿದರೆ ಸಾಯುತ್ತಿದ್ದ ಒಬ್ಬನನ್ನು ಉಳಿಸಿದ ಪುಣ್ಯ ಬರುತ್ತದೆ ಎಂದು ಸಾಯುವಾಗ ಹೇಳಿದ್ದಾನೆ” ಎಂದು ತಡಮಾಡುವನು.

ಅತ್ತ ಉದ್ಯಾನವನದಲ್ಲಿ ಶಕಾರನು—ವಸಂತಸೇನೆಯ ದೇಹವನ್ನು ತರಗೆಲೆಯಲ್ಲಿ ಮುಚ್ಚಿ ಬಂದನಷ್ಟೆ. ಆಗ ಅವಳಿಗೆ ನಿಜವಾಗಿ ಪ್ರಾಣ ಹೋಗಿರಲಿಲ್ಲ. ಮೂರ್ಛೆಗೊಂಡಿದ್ದಳು. ಶಕಾರನು ಅವಳು ಸತ್ತಳೆಂದೇ ಭಾವಿಸಿದ್ದನು. ಆದ್ದರಿಂದ ಬಹಳ ಹೊತ್ತಿನ ಮೇಲೆ ಪ್ರಾಣಶಕ್ತಿ ಕೂಡಿಕೊಳ್ಳುವುದು, ಆದರೂ ಜ್ಞಾನವಿಲ್ಲ. ಆ ಸಮಯಕ್ಕೆ ಸರಿಯಾಗಿ ಆ ವನದ ಕೊಳಕ್ಕೆ ತನ್ನ ಬಟ್ಟೆಯನ್ನೊಗೆಯಲು ಬಂದಿದ್ದ ಜೈನ ಸನ್ಯಾಸಿಯೊಬ್ಬನು ಒಗೆದ ಬಟ್ಟೆಯನ್ನು ಆ ತರಗೆಲೆಯ ರಾಸಿಯ ಮೇಲೆ ಹರವಿ, ಹತ್ತಿರದಲ್ಲೇ ಕುಳಿತುಕೊಂಡನು. ಸ್ವಲ್ಪಹೊತ್ತಿನಲ್ಲೇ ಉಸಿರಾಡುವ ಶಬ್ದ ಕೇಳಿಸಿತು. ತರಗಿನ ಮೇಲೆ ಒದ್ದೆಯ ಬಟ್ಟೆಯನ್ನು ಹಾಕಿದುದುರಿಂದ ಹಾಗೆ ಶಬ್ದವಾಗಬಹುದೆಂದುಕೊಂಡನು. ಇನ್ನು ಸ್ವಲ್ಪ ಹೊತ್ತಿಗೆ ಕೈಗಳು ಕಾಣಿಸಿದವು. ಅವನು ಆಶ್ಚರ್ಯದಿಂದಲೂ ಗಾಬರಿಯಿಂದಲೂ ತರಗನ್ನು ತೆಗೆದು ನೋಡಿದನು. ಹೆಂಗಸು! ಆಹಾ ಮೊದಲು ಎಲ್ಲೋ ನೋಡಿದಂತಿದೆ! ಜ್ಞಾಪಕವಾಯಿತು. ವಸಂತಸೇನೆ! ಅವನು ಸನ್ಯಾಸಿಯಾಗುವುದಕ್ಕೆ ಮುಂಚೆ ಜೂಜಿನಲ್ಲಿ ಸೋತು, ಹಣಕ್ಕಾಗಿ ಜೂಜುಗಾರರಿಂದ ಏಟುತಿಂದು, ಪಾಡುಪಟ್ಟು ಬಂದು ಮರೆಹೊಗಲು ತನ್ನ ಕೈಬಳೆಯನ್ನು ಉಚಿತವಾಗಿ ಕೊಟ್ಟು ಅವನನ್ನು ಕಾಪಾಡಿದ್ದವಳು. ಅವನಿಗೆ ಬಹಳ ಸಂಕಟವಾಗುವುದು. ವಸಂತಸೇನೆಯು ನೀರು ಬೇಕೆಂದು ಸನ್ನೆಮಾಡಿದಳು. ಹತ್ತಿರದಲ್ಲಿ ನೀರಿಲ್ಲದುದರಿಂದ ಒದ್ದೆಯ ಬಟ್ಟೆಯನ್ನೇ ಹಿಂಡಿ ನೀರನ್ನು ಕೊಟ್ಟನು. ಬಟ್ಟೆಯಿಂದ ಗಾಳಿಯನ್ನು ಬೀಸಿದನು. “ತನ್ನ ಕಷ್ಟಕಾಲದಲ್ಲಿ ಕರುಣೆಯಿಂದ ಉಪಕಾರಮಾಡಿದ ಆ ವಸಂತಸೇನೆಗೆ ಯಾವ ಪ್ರತ್ಯುಪಕಾರವನ್ನು ಮಾಡಲಿ?” ಎಂದು ಯೋಚಿಸುತ್ತಿದ್ದ ಅವನಿಗೆ ಪ್ರತ್ಯುಪಕಾರಕ್ಕೆ ಅವಕಾಶವು ಸಿಕ್ಕಿತು. ಅವನ ಶೈತ್ಯೋಪಚಾರದಿಂದ ಸ್ವಲ್ಪ ಚೇತರಿಸಿಕೊಂಡು ಅವಳು ಅವನನ್ನು, “ನೀನು ಯಾರು?” ಎಂದು ಕೇಳಿದಳು.

ಭಿಕ್ಷು.—ನನ್ನನ್ನು ಮರೆತೆಯಾ? ಹಸ್ತಾಭರಣವನ್ನು ಕೊಟ್ಟು ನೀನು ನನ್ನನ್ನು ಕೊಂಡುಕೊಳ್ಳಲಿಲ್ಲವೆ!

ಆಗ ವಸಂತಸೇನೆಗೆ ಅವನ ಜ್ಞಾಪಕ ಬರುವುದು.

ಭಿಕ್ಷು.—ನಿನ್ನ ಈ ಪಾಡೇನು?

ವಸಂತಸೇನೆಯು.—" ಸೂಳೆಯಾದವಳಿಗೆ ಆಗಬೇಕಾದುದಾವುದೋ ಅದೇ " ಎಂದು ಸಂಕಟಪಡುವಳು. ಬಳಿಕ ಸಮೀಪದ ತನ್ನ ಆಶ್ರಮದಲ್ಲಿದ್ದ ತನ್ನ ತಂಗಿಯ ಬಳಿಗೆ ಮೆಲ್ಲಗೆ ಅವಳನ್ನು ಕರೆದುಕೊಂಡು ಹೋದನು. ಅಲ್ಲಿ ಚೆನ್ನಾಗಿ ಉಪಚರಿಸಿ ಚೇತರಿಸಿಕೊಂಡ ಬಳಿಕ ಅವಳು ಹೇಳಿದಂತೆ ಚಾರುದತ್ತನ ಸಮೀಪಕ್ಕೆ ಕರೆತರುತ್ತಿರುವನು. ದೈವಾನುಕೂಲ! ಅವರು ಬರುವ ದಾರಿಯಲ್ಲೇ ಚಾರುದತ್ತನನ್ನು ಶೂಲಕ್ಕೆ ಹಾಕುವ ಶ್ಮಶಾನ.

ಘಾತುಕರು.—ಚಾರುದತ್ತ, ಹೊತ್ತಾಗುತ್ತಬಂದಿತು. ದೊರೆಯ ಅಪ್ಪಣೆಯನ್ನು ನಾವು ಮೀರಲಾಗುವುದಿಲ್ಲ. ಹೆದರಬೇಡ, ನಿನಗೆ ಹೆಚ್ಚಾಗಿ ಹಿಂಸೆಯಾಗದಂತೆ ಜಾಗ್ರತೆಯಾಗಿ ಕೊಲ್ಲುವೆವು. ತಡಮಾಡದೇ ನಿನಗೆ ಬೇಕಾದವರನ್ನು ಸ್ಮರಿಸಿಕೊ.

ಚಾರುದತ್ತ.—ಹಾ, ಪ್ರಿಯೆ, ವಸಂತಸೇನೆ!

ಇಲ್ಲಿ ಜನರ ಗುಂಪುಸೇರಲು ಕಾರಣವೇನೆಂದು ಆಲೋಚಿಸುತ್ತ ಬರುತ್ತಿದ್ದ ಭಿಕ್ಷು ವಸಂತಸೇನೆಯರಿಗೆ ಇದು ಕೇಳಿಸುವುದು.

ಭಿಕ್ಷು.—ಚಾರುದತ್ತನು ನಿನ್ನನ್ನು ಕೊಂದನೆಂದು ಆತನನ್ನು ವಧಿಸಲು ಯತ್ನಿಸುತ್ತಿರಬಹುದು.

ವಸಂತಸೇನೆ, "ಅಯ್ಯೋ! ಇನ್ನೇನುಗತಿ!" ಎಂದೋಡಿಬಂದು, " ಅಯ್ಯಾ, ಬೇಡ, ಬೇಡ, ಯಾರನ್ನು ಕೊಂದನೆಂದು ಈ ಮಹಾನುಭಾವನನ್ನು ಕೊಲ್ಲುವಿರೋ ಆ ನಿರ್ಭಾಗ್ಯಳೇ ನಾನು." ಎಂದಳುವಳು. ಚಂಡಾಲರು, " ಓಹೋ! ಈಕೆ ಯಾರು! ಬೇಡವೆಂದು ತಡೆಯುವಳು. ಇದೇನಾಶ್ಚರ್ಯ! ಇವಳೇ ಆ ವಸಂತಸೇನೆ. ಅಯ್ಯೋ! ತಪ್ಪಿಲ್ಲದವನನ್ನು ಅನ್ಯಾಯವಾಗಿ ಕೊಲ್ಲುತ್ತಿದ್ದೆವಲ್ಲಾ !" ಎಂದು ವ್ಯಥೆಪಡುವರು. ಈ ವೃತ್ತಾಂತವನ್ನು ರಾಜನಿಗೆ ತಿಳಿಸಲು ಒಬ್ಬನು ಓಡಿಹೋಗುವನು. ದುಃಖದಿಂದ ಪರವಶನಾಗಿದ್ದ ಚಾರುದತ್ತನು ವಸಂತಸೇನೆಯನ್ನು ನೋಡಿ, " ಇದೇನಾಶ್ಚರ್ಯ! ಈಕೆ ಯಾರು? ವಸಂತಸೇನೆಯಂತೆ ಕಾಣುವಳಲ್ಲ! ಅಯ್ಯೋ! ಸ್ವರ್ಗಸ್ಥಳಾದ ವಸಂತಸೇನೆ ತಿರುಗಿ ಬರುವುದೆಂದರೇನು! ನನಗೆ ಭ್ರಾಂತಿಯೋ ? ಕನಸೋ ?" ಎನ್ನುವನು.

ವಸಂತಸೇನೆ.—ಆರ್ಯನೆ! ಸಂದೇಹ ಬೇಡ; ಯಾರಿಗಾಗಿ ನಿನಗೆ ಇಂತಹ ಅವಸ್ಥೆಯೋ ಆ ಪಾಪಿಯೇ ನಾನು!

ಶಕಾರನೇ ಅಪರಾಧಿಯೆಂಬ ನಿಜಾಂಶವು ಎಲ್ಲರಿಗೂ ತಿಳಿಯಿತು. ಹಿಂದೆ ಚಾರುದತ್ತನ ಮನೆಯಲ್ಲಿ ಕನ್ನ ಹಾಕಿ ಒಡವೆಗಳನ್ನು ಕದ್ದಿದ್ದವನೂ ಆರ್ಯಕನ ಮಿತ್ರನೂ ಆದ ಶರ್ವಿಳಕನು ಬಂದು ಚಾರುದತ್ತನಿಗೆ ಶರಣಾಗತನಾದನು. ವಸಂತ ಸೇನೆಯನ್ನು ಉಪಚರಿಸಿ ಕರೆತಂದವನು ಪೂರ್ವದಲ್ಲಿ ತಾನು ಚಾರುದತ್ತನ ಮನೆಯಲ್ಲೇ ಸೇವಕ

ನಾಗಿದ್ದನೆಂದೂ ಅವನಿಗೆ ದಾರಿದ್ರ್ಯ ಬಂದುದರಿಂದ ಬಿಟ್ಟುಹೋಗಿ ತೊಂದರೆಗಳಿಗೆ ಗುರಿಯಾಗಿ ಕಡೆಗೆ ವಿರಕ್ತಿಯಿಂದ ಜೈನ ಸನ್ಯಾಸಿಯಾದನೆಂದೂ ತಿಳಿಯುವುದು.

ಚಾರುದತ್ತನಿಗೂ ಅವನ ಅನ್ಯಾಯದ ಮರಣಕ್ಕಾಗಿ ದುಃಖಿಸುತ್ತಿದ್ದವರಿಗೂ ಪರಮಾನಂದವಾದರೆ ಚಾರುದತ್ತನು ಸತ್ತುದನ್ನು ನೋಡಿಯೇ ಹೋಗಬೇಕೆಂದಿದ್ದ ಶಕಾರನಿಗೆ ಮರಣ ಸಂಕಟ ವೊದಗಿತು. ಅವನು ತನಗೆ ಇನ್ನು ಉಳಿವಿಲ್ಲವೆಂದು ಓಡಿದನು. ಕಟುಕರು ಬಿಡದೆ ಹಿಡಿದುಕೊಂಡು ಬಂದು, ಅಪರಾಧಿಯನ್ನು ಕೊಲ್ಲುವಂತೆ ದೊರೆಯ ಅಪ್ಪಣೆಯೆಂದು ಅವನನ್ನು ಶೂಲಕ್ಕೇರಿಸಲು ಸಿದ್ಧರಾದರು. ಆ ವೇಳೆಗೆ ಹಿಂದೆ ಚಾರುದತ್ತನ ಗಾಡಿಯಲ್ಲಿ ಬಂದು, ಅವನಿಂದ ಉಪಕಾರವನ್ನು ಪಡೆದ ಆರ್ಯಕ ನೆಂಬುವನು ಪಾಲಕ ರಾಜನನ್ನು ಕೊಂದು ದೊರೆಯಾಗಿದ್ದನು. ಇನ್ನು ಶಕಾರನನ್ನು ವಹಿಸಿಕೊಂಡು ರಕ್ಷಿಸುವವರಾರು? ಶಕಾರನು ದಿಕ್ಕುತೋಚದೆ ಸಂಕಟಪಟ್ಟು ಕಡೆಗೆ, "ಇರಲಿ, ಧರ್ಮಾತ್ಮನಾದ ಈ ಚಾರುದತ್ತನನ್ನೇ ಮರೆ ಹೊಗುವೆನು" ಎಂದುಕೊಂಡು, "ಅಯ್ಯಾ, ಚಾರುದತ್ತನೆ ನನ್ನನ್ನು ಬದುಕಿಸು" ಎಂದು ಕಾಲಿಗೆ ಬೀಳುವನು. ಶತ್ರುವಾದ ಶಕಾರನಿಗೂ ಚಾರುದತ್ತನು ಧರ್ಮಾತ್ಮನೆಂದೂ ತನ್ನನ್ನು ರಕ್ಷಿಸುವನೆಂದೂ ನಂಬಿಕೆಯಿರುವಾಗ ಅವನು ರಕ್ಷಿಸದಿರುವನೆ! ಅನೇಕರು ಇಂತಹ ಪಾಪಿಯನ್ನು ಕೊಲ್ಲುವುದೇ ನ್ಯಾಯವೆಂದರೂ ಕೇಳದೆ ಚಾರುದತ್ತನು ಅಂತಹ ಅಪಕಾರಿಯನ್ನೂ ಕಾಪಾಡಿದನು.

ಚಾರುದತ್ತನ ಮರಣದಂಡನೆಯ ವಿಚಾರವನ್ನು ಕೇಳಿ, ಪತಿವ್ರತೆಯಾದ ಧೂತಾ ದೇವಿಯು ಅಗ್ನಿಪ್ರವೇಶಮಾಡಲು ಸಿದ್ಧಳಾಗಿರುವಳೆಂಬುದು ಚಾರುದತ್ತಾದಿಗಳಿಗೆ ತಿಳಿಯುವುದು. ಎಲ್ಲರೂ ತ್ವರೆಯಿಂದ ಅಲ್ಲಿಗೆ ಬಂದು, ಅವಳನ್ನೂ ಅವಳ ಜತೆಯಲ್ಲಿ ಸಾಯಲು ಸಿದ್ಧರಾಗಿದ್ದ ರೋಹಸೇನನನ್ನೂ, ತಾಯನ್ನೂ, ಮೈತ್ರೇಯನನ್ನೂ ಬದುಕಿಸುವರು. ಬೇರೆಯ ಹೆಂಗಸಾಗಿದ್ದರೆ ತನ್ನ ಪತಿಯ ಮರಣಕ್ಕೆ ಕಾರಣಳಾಗಿದ್ದ ವಸಂತಸೇನೆಯನ್ನು ಎಷ್ಟು ದ್ವೇಷಿಸುತ್ತಿದ್ದರೊ! ಶಪಿಸುತ್ತಿದ್ದರೊ! ಧೂತಾ ದೇವಿಯು ವಸಂತಸೇನೆಯನ್ನು ಆಲಿಂಗಿಸಿಕೊಂಡು, "ತಂಗಿ, ನೀನು ಕ್ಷೇಮವಾಗಿರು ವೆಯಾ" ಎಂದು ಮುಂಚೆ ಅವಳ ಕ್ಷೇಮವನ್ನು ಕೇಳುವುದನ್ನು ನೋಡಿ, ಕಣ್ಣೀರು ಸುರಿಸದವರಾರು! ಚಾರುದತ್ತನ ತಾಯೂ ರೋಹಸೇನನೂ ಮೈತ್ರೇಯನೇ ಮೊದಲಾದವರೂ ಆನಂದಬಾಷ್ಪವನ್ನು ಸುರಿಸುವರು. ಆರ್ಯಕಮಹಾರಾಜನು ತನ್ನ ಆಪ್ತನಾದ ಶರ್ವಿಳಕನ ಮೂಲಕ ಚಾರುದತ್ತನಿಗೆ ತನ್ನ ಕೃತಜ್ಞತಾಪೂರ್ವಕವಾದ ಅಭಿನಂದನವನ್ನೂ, ವಸಂತಸೇನೆಗೆ "ವಧೂ" ಎಂಬ ಬಿರುದನ್ನೂ ಕಳುಹಿಸುವನು.

ಎಂ. ಆರ್. ವರದಾಚಾರ್.

---

# ಗೋಟಿನಲ್ಲಿ ಸಿಕ್ಕಿಕೊಂಡ ಕತ್ತರಿ

(ಒಂದು ಪುಟ್ಟ ಕಥೆ)

ಹಿಂದೆ, ನಮ್ಮ ದೇಶದಲ್ಲಿ ಒಬ್ಬ ಅಮಲ್ದಾರರಿದ್ದರಂತೆ. ಅವರ ಹೆಸರೇನೋ ಯಾವ ತಾಲ್ಲೂಕೋ ಜ್ಞಾಪಕವಿಲ್ಲ. ಈ ಕಥೆಯನ್ನು ಹೇಳಿದವರನ್ನು ಕೇಳಿದೆ; ಅವರು ಉದಾಸೀನವಾಗಿ ಯಾರಾದರೇನು, ಎಲ್ಲಿದ್ದರೇನು ಎಂದು ಲೊಚಗುಟ್ಟಿಬಿಟ್ಟರು. ಅಮಲ್ದಾರರೆಂದರೆ ಹಿಂದಿನ ಕಾಲದಲ್ಲಿ ತಾಲ್ಲೂಕಿನ ದೊರೆ. ನಿಜವಾಗಿ ದೊರೆ; ಸರ್ವಾಧಿಕಾರಿ. ಅವರು ಆಡಿದ್ದೇ ಆಟ. ಡೆಪ್ಯುಟಿಕಮಿಷನರೂ ಅವರನ್ನು ಅನುಸರಿಸಿಕೊಂಡು ಹೋದರೆ ಮಾನ. ಇಲ್ಲದಿದ್ದರೆ ಮಾನಕ್ಕೆ ಮಾರಿದ್ದು. ತಾಲ್ಲೂಕಿನ ಜನರಿಗೆ ಸಬ್ ಡಿವಿಜನ್ ಆಫೀಸರು ಯಾರೋ, ಡೆಪ್ಯುಟಿ ಕಮಿಷನರು ಯಾರೋ, ಅವರಿಗೆ ಎಷ್ಟು ಅಧಿಕಾರವೋ ಏನೂ ತಿಳಿಯದು. ಅವರಿಗೆ ತಿಳಿದದ್ದು ಒಂದೇ.—ತಮ್ಮ ಊರಿಗೆ, ತಾಲ್ಲೂಕಿಗೆ, ಅಮಲ್ದಾರರೇ ಅಧಿಕಾರಿಗಳು.

ಆ ಅಮಲ್ದಾರರಿಗೆ ತಕ್ಕ ಡೆಪ್ಯುಟಿ ಕಮಿಷನರು ಒಂದು ಸಲ ಬಂದರಂತೆ. ಅವರ ಹೆಸರೂ ಜ್ಞಾಪಕವಿಲ್ಲ. ಅಂತು ಯಾರೋ ಯೂರೋಪಿಯನರು. ಒಂದು ದಿನ ಅಮಲ್ದಾರರಿಗೂ ಇವರಿಗೂ ಗಂಟುಬಿತ್ತು. ನಿತ್ಯವೂ ಲಕ್ಷ್ಯವಿಲ್ಲದೆ ಅನ್ನ ಅಗಿದಗಿದು ನುಂಗುವಾಗ ಒಂದೊಂದು ಸಲ ಹಲ್ಲಿಗೆ ಕಲ್ಲುಸಿಕ್ಕಿ ಮೈ ಜುಮ್‌ಯೆನ್ನುವಹಾಗೆ, ಒಂದು ಕಡೆ ಕದೀಮ ಶ್ಯಾನುಭೋಗ ಇನ್ನೊಂದು ಕಡೆ ಘಾಟಿ ಅಮಲ್ದಾರ ಇವರ ಮಧ್ಯೆ ಡೆಪ್ಯುಟಿ ಕಮಿಷನರು ಕತ್ತರಿ ಮಧ್ಯೆ ಅಡಕೆ ಸಿಕ್ಕಿ ನರಳುವ ಹಾಗೆ ನರಳುತ್ತಿದ್ದರು: ಮಾನದಿಂದ ತಪ್ಪಿಸಿಕೊಂಡರೆ ಸಾಕೆಂದು ಕಾಲ ತಳ್ಳುತ್ತಿದ್ದರು. ಆದರೆ ಹಲ್ಲಿಗೆ ಕಲ್ಲು ಸಿಕ್ಕಿದ ಹಾಗೆ ಕತ್ತರಿಗೆ ಗೋಟು ಸಿಕ್ಕಿದರೆ, ಗೋಟಿನಲ್ಲಿ ಕತ್ತರಿ ಸಿಕ್ಕಿಕೊಂಡು ಕತ್ತರಿಯ ಬಾಯಿ ಹೋಗುತ್ತದೆ. ಹಾಗಾಯಿತು ಈಗ. ಆ ಪ್ರಾಂತವು ಒಂದು ಪುಂಡು ಕೊಂಪೆಯೆಂದು ಹೆಸರಾಗಿತ್ತು. ಆದ್ದರಿಂದ ಆ ಡಿಸ್ಟ್ರಿಕ್ಟಿಗೆ ಬಂದ ಡೆಪ್ಯುಟಿ ಕಮಿಷನರುಗಳು ಇರುವ ನಾಲ್ಕುದಿನ ಮರ್ಯಾದೆಯಿಂದ ಇದ್ದು ಹೋದರೆ ಸಾಕೆಂದು ಹೇಗೋ ಹಾಗೆ ಇರುತ್ತಿದ್ದರು. ಇದು ಸರ್ಕಾರಕ್ಕೂ ತಿಳಿದು ಈ ಯೂರೋಪಿಯನ್ ಡೆಪ್ಯುಟಿ ಕಮಿಷನರನ್ನು ಆ ಡಿಸ್ಟ್ರಿಕ್ಟಿಗೆ ಹಾಕಿದ್ದರು. ಅವರು ಬಂದ ಸ್ವಲ್ಪದಿನದ ತನಕ ವಿದ್ಯಮಾನಗಳನ್ನು ಪರಿಚಯಮಾಡಿಕೊಂಡು ಈ ತಾಲ್ಲೂಕಿನ ಅಮಲ್‌ದಾರರಿಗೆ ಬುದ್ಧಿ ಕಲಿಸಬೇಕೆಂದು ಯೋಚಿಸಿದರು. ಅವರು ದೊಡ್ಡ ಮನೆತನದವರು,

ದೊಡ್ಡ ಮನಸ್ಸಿನವರು, ವಿನೋದಪರರು; ಯಾರನ್ನೂ ಹಿಂಸಿಸಿ, ಶಿಕ್ಷಿಸಿ, ಕೆಲಸ ಮಾಡಿಸಿಕೊಳ್ಳುವುದು ಅವರ ಸ್ವಭಾವವಲ್ಲ. ಆದ್ದರಿಂದ ಮುಂದೆ ಏನುಮಾಡಬೇಕೆಂಬ ನಿಶ್ಚಯವಿಲ್ಲದೆ, ಇದ್ದಕ್ಕಿದ್ದ ಹಾಗೆಯೇ, ಯಾರಿಗೂ ಹೇಳದೆ, ಒಂದು ದಿನ ಕುದುರೆ ಹಾಕಿಕೊಂಡು ಆ ತಾಲ್ಲೂಕಿನ ಕಸಬಾಕ್ಕೆ ಬಂದು ತಾಲ್ಲೂಕು ಕಛೇರಿಗೆ ಧುಡುಮ್ಮನೆ ನುಗ್ಗಿದರು. ಕಛೇರಿಯ ನೌಕರರು ಯಾರೆಂದರೆ ಅವರು ಅಲ್ಲಲ್ಲಿ ಹರಟೆ ಹೊಡೆಯುತ್ತಿದ್ದರು. ಗುಲ್ಲೋ ಗುಲ್ಲಾಗಿತ್ತು. ಅವರಲ್ಲಿ ಒಬ್ಬನನ್ನು ಹಠಾತ್ತಾಗಿ 'ಅಮಲ್‌ದಾರರೆಲ್ಲಿ' ಎಂದು ಕೇಳಿದರು. 'ಮನೆಯಲ್ಲಿದ್ದಾರೆ' ಎಂದು ಉತ್ತರ ಬಂತು. ಅವರಿಗೆ ಈ ಸಾಹೇಬರು ಯಾರೆಂದು ಗುರುತಿರಲಿಲ್ಲ. ಆದರೂ ಅವರು ಹಿಂತಿರುಗಿದ ಕೂಡಲೆ ಗುಸುಗುಸನೆ ಮಾತಿಗೆ ಆರಂಭವಾಗಿ, ಅವರು ಡೆಪ್ಯುಟಿ ಕಮಿಷನರಿರಬಹುದೆಂದೂ ಅಮಲ್‌ದಾರರ ಮನೆಯ ಕಡೆಗೆ ಹೋದರೆಂದೂ ಅನುಮಾನವಾಗಲು, ಅವರು ಕುದುರೆಯ ಮೇಲೆ ಅಲ್ಲಿಗೆ ಹೋಗುವುದಕ್ಕಿಂತ ಮುಂಚೆಯೇ, ವರ್ತಮಾನವು ಅಮಲ್‌ದಾರರಿಗೆ ಹಿತ್ತಿಲುಬಾಗಿಲಿನಿಂದ ಹೋಗಿಬಿಟ್ಟಿತ್ತು.

ಅಮಲ್‌ದಾರರ ಮನೆ ಯಾವುದು ಎಂದು ಸಾಧಾರಣವಾಗಿ ಯಾರೂ ತೋರಿಸಬೇಕಾಗಿರುವುದಿಲ್ಲ. ಆದರೂ ಸಾಹೇಬರು ಅದನ್ನು ಹುಡುಕಿಕೊಂಡು ಹೋಗುವುದಕ್ಕೆ ಸ್ವಲ್ಪ ಹೊತ್ತೇ ಆಯಿತು. ಕಛೇರಿಯಲ್ಲಿ ಮಾಡಿದಂತೆಯೇ ಇಲ್ಲಿಯೂ ಹೇಳದೆ ಕೇಳದೆ 'ಅಮಲ್‌ದಾರ್' ಎಂದು ಕೂಗಿಕೊಂಡು ಒಳಗೆ ನುಗ್ಗಿದರು. ಅಮಲ್‌ದಾರರು ಒಂದು ಚಾಪೆಯಮೇಲೆ ನರಳುತ್ತಾ ಮಲಗಿದ್ದರು.

'ಏನು, ಅಮಲ್‌ದಾರರೇ, ಮಲಗಿಬಿಟ್ಟಿದ್ದೀರಲ್ಲಾ. ಮೈಯಲ್ಲಿ ಸರಿಯಾಗಿಲ್ಲವೊ?'

'ಇಲ್ಲ, ಮಹಾಸ್ವಾಮಿ'

'ಮತ್ತೆ, ಬರಿಯ ಚಾಪೆಯ ಮೇಲೆ ಮಲಗಿದ್ದೀರಲ್ಲಾ! ಯಾರ್ರೀ ಅಲ್ಲಿ? ಅವರ ಹಾಸಿಗೆಯನ್ನು ಹಾಸಿ ಕೊಡಿರಿ!'

'ಬೇಡ, ಮಹಾಸ್ವಾಮಿ, ಬೇಡ; ಚಿಂತೆ ಇಲ್ಲ.'

'ಅಯ್ಯಯ್ಯೋ ಉಂಟೇನ್ರಿ!' ಎಂದು ಸಾಹೇಬರು ಬಲವಂತವಾಗಿ ಹಾಸಿಗೆಯನ್ನು ಹಾಸಿಸಿ ಮಲಗಿಕೊಳ್ಳುವಂತೆ ಮಾಡಿದರು. ತಾವೂ ಹತ್ತಿರದಲ್ಲೇ ಹಾಕಿದ ಒಂದು ಕುರ್ಚಿಯ ಮೇಲೆ ಕುಳಿತು

'ಏನು ಖಾಯಿಲೆ, ಜ್ವರವೊ?' ಎಂದು ತಲೆಯನ್ನು ಮುಟ್ಟಿನೋಡಿದರು; ಕೈಯನ್ನು ಹಿಡಿದು ನೋಡಿದರು. ಆದ್ದರಿಂದ ಅವರು 'ಇಲ್ಲ' ಎನ್ನಬೇಕಾಯಿತು. ಮುಖ ಗೆಲುವಾಗಿತ್ತು. ಹಣೆಯಲ್ಲಿ ಗಂಧಾಕ್ಷತೆ ಇತ್ತು. ಬಾಯಿ ತುಂಬಾ ರಂಗು ರಂಗಾಗಿ ಎಲೆ ಅಡಕೆ ಹಾಕಿಕೊಂಡಿದ್ದರು. ನಾಡಿನೋಡಿದರೆ ಗಟ್ಟಿ ಮುಟ್ಟಾದವನು

ಪೂರ್ಣ ಆರೋಗ್ಯದಲ್ಲಿ ಇರುವನಂತೆಯೇ ಇತ್ತು. ಇದನ್ನು ಗ್ರಹಿಸಿದ ಆ ತಾಲ್ಲೂಕು ದೊರೆಯು, ಕಾಣುವುದಲ್ಲ ನೋಡುವುದಲ್ಲ ಎಂದು ಯೋಚಿಸಿ 'ವಿಪರೀತ ಹೊಟ್ಟೆಯ ನೋವು, ಸ್ವಾಮಿ' ಎಂದನು. ಸಾಹೇಬರು, 'ಅಯ್ಯೋ ಪಾಪ! ಹೊಸಕ್ಕಿಯ ದೋಷವಿರಬಹುದು. ಈಗ ಇನ್ನೂ ಹೊಸಕ್ಕಿ ಬಂದಿಲ್ಲವಲ್ಲಾ! ಎಲ್ಲಿ, ನಾಲಗೆ ತೋರಿಸಿ.' ಎಂದರು. ನಾಲಗೆ ಸ್ವಚ್ಛವಾಗಿತ್ತು. ಹೊಟ್ಟೆಯನ್ನು ಎಲ್ಲಾ ಕಡೆಯೂ ಅಮುಕಿ ಅಮುಕಿ ನೋಡಿದರು. ಎಲ್ಲೂ ಏನೂ ರೋಗದ ಲಕ್ಷಣಗಳು ಕಾಣಲಿಲ್ಲ.

'ಯಾಕೆ, ಆಸ್ಪತ್ರೆಗೆ ಹೇಳಿ ಕಳುಹಿಸಿ ಔಷಧಿ ತರಿಸಲಿಲ್ಲವೇ?'

'ನಮ್ಮದು ಹಳೆಯ ಕಾಲದ ವೈದಿಕ ಸಂಪ್ರದಾಯ, ಸ್ವಾಮಿ; ನಾನು ಆಸ್ಪತ್ರೆಯ ಔಷಧಿ ಕುಡಿಯುವುದಿಲ್ಲ. ಅನಾವಶ್ಯಕವಾಗಿ ಔಷಧಿಯನ್ನು ಹೊಟ್ಟೆಗೆ ತುಂಬಿಕೊಳ್ಳಬಾರದೆಂದೂ ಡಾಕ್ಟರುಗಳು ಹೇಳುತ್ತಾರೆ. ಒಂದು ದಿವಸ ಉಪವಾಸ ಮಾಡಿಬಿಟ್ಟರೆ ಎಲ್ಲಾ ಸರಿಹೋಗುತ್ತದೆ.'

'ನೀವು ತಿಳಿದುಕೊಂಡಿರುವುದು ತಪ್ಪು. ಆಗಾಗ್ಗೆ ಹೀಗೆ ನಿಮಗೆ ಹೊಟ್ಟೆಯ ನೋವು ಬರುವುದೆಂದು ಕಾಣುತ್ತದೆ. ಅದಕ್ಕೆ ಒಳಗು ಚೊಕ್ಕಟವಾಗಬೇಕು. ಹೊಟ್ಟೆಯ ಒಳಗೆ ಇರತಕ್ಕ ಕಲ್ಮಷ ಹೋದರೆ ಎಲ್ಲಾ ಸರಿಹೋಗುತ್ತದೆ.'

'ಹೌದು, ಹೌದು.'

'ನಿಮ್ಮಲ್ಲಿ ಒಳ್ಳೆಯ ಹರಳೆಣ್ಣೆ ಇದೆಯೇ?'

'ಅದಕ್ಕೇನು ಸ್ವಾಮಿ ದರಿದ್ರ! ಬೇಕಾದಷ್ಟು ಇದೆ. ಮನೆಯಲ್ಲಿಯೇ ಕಣ್ಣೆದುರಿಗೆ ಹುರಿದು ಅಟ್ಟು ಮಾಡಿಸಿದ ಎಣ್ಣೆ.'

'ಹಾಗಾದರೆ ಸ್ವಲ್ಪ ತರಿಸಿ.'

'ಯಾರೋ ಅಲ್ಲಿ! ಸ್ವಲ್ಪ ಹರಳೆಣ್ಣೆ ತಂದು ಕೊಡೋ.'

ಇಷ್ಟು ಹೊತ್ತಿಗಾಗಲೇ ಯಾರೋ ಸಾಹೇಬರು ಬಂದಿದ್ದಾರೆಂದು ಮನೆಯ ಒಳಗೂ ಹೊರಗೂ ಜನಸಂದಣಿ ಸೇರಿಹೋಗಿತ್ತು. ಕೂಡಲೆ ಒಬ್ಬರು ಹೋಗಿ ಎಣ್ಣೆಯ ತಪ್ಪಲೆಯನ್ನೇ ತಂದಿಟ್ಟರು.

'ಒಂದು ಸಣ್ಣ ಲೋಟವನ್ನು ತನ್ನಿ' ಎಂದರು ಸಾಹೇಬರು.

'ಇಷ್ಟು ಗೊತ್ತಾಗಲಿಲ್ಲವೇನ್ರೊ ಕತ್ತೆಗಳ! ಹೊಟ್ಟೆಯ ನೋವಿಗೆ ಹೊಕ್ಕಳಿಗೆ ಹಚ್ಚಿಸಿಕೊಳ್ಳುವುದಕ್ಕೆ ಇಷ್ಟು ಏತಕ್ರೋ?' ಎಂದು ಗದರಿಸಿ ಅಮಲ್ದಾರರು ಒಂದು ಸಲ ನರಳಿದರು.

ಲೋಟ ಬಂತು. ಸಾಹೇಬರು, 'ನಿಮಗೆ ಬೇಗ ಪ್ರವೃತ್ತಿ ಆಗುತ್ತದೆಯೋ?' ಎಂದು ಕೇಳಿದರು.

'ಇಲ್ಲ.'

'ಸರಿ, ಹಾಗಾದರೆ' ಎಂದು ಸಾಹೇಬರು ಅರ್ಧ ಲೋಟ ಎಣ್ಣೆಯನ್ನು ಬಗ್ಗಿಸಿ 'ಎಲ್ಲಿ, ಆ ಎನ್ನಿ! ಎಂದು ಥಟಕ್ಕನೆ ಮೂಗನ್ನು ಹಿಡಿದು ಬಾಯಿಯ ಹತ್ತಿರ ತಂದರು. ಹಿಂದು ಮುಂದು ನೋಡುವುದಕ್ಕೆ ಅವಕಾಶವಿರಲಿಲ್ಲ. ಎಷ್ಟು ಅಸಹ್ಯ ವಾದರೂ ಕುಡಿದೇ ಕುಡಿಯಬೇಕಾಯಿತು.

ಇನ್ನೊಂದು ಸಾರಿ ಬಗ್ಗಿಸಿದರು. ಅದನ್ನೂ ತುಟಿಯ ಹತ್ತಿರಕ್ಕೆ ಹಿಡಿದು 'ಇದನ್ನೂ ಕುಡಿಯಬೇಕು' ಎಂದರು.

'ಇಲ್ಲ. ಸಾಕು, ಸಾಕು.'

'ನೀವು ಆಗಲೇ ಹೇಳಿದಿರಿ, ನಿಮ್ಮ ಹೊಟ್ಟೆ ಗಡುಸೆಂದು! ಇನ್ನಷ್ಟು ಕುಡಿಯ ದಿದ್ದರೆ, ಎಣ್ಣೆ ಹೊಟ್ಟೆಯಲ್ಲಿ ನಿಂತು, ವಿರೋಧವಾದೀತು. ಕುಡಿಯಿರಿ, ಕುಡಿಯಿರಿ' ಎಂದು ಅದನ್ನೂ ಕುಡಿಸಿದರು.

ಇಷ್ಟೆಲ್ಲಾ, ಹೆಚ್ಚೆಂದರೆ ಹತ್ತು ನಿಮಿಷಗಳಲ್ಲಿ ನಡೆದು ಹೋಗಿರಬಹುದು. ಇದಾದಕೂಡಲೆ ಸಾಹೇಬರು 'ಥ್ಯಾಂಕ್ಸ್' ಹೇಳಿ ಸರ್ಕಾರಿ ಬಂಗಲಿಗೆ ಹೊರಟು ಹೋದರು.

ಅವರು ವರ್ತಮಾನ ಕೊಡದೆ ಅಕಸ್ಮಾತ್ತಾಗಿ ಬಂದಿದ್ದರು. ಹಿಂದೆ, ಅದರಲ್ಲಿಯೂ ಗ್ರಾಮಾಂತರಗಳಿಗೆ, ಅಕಸ್ಮಾತ್ ಭೇಟಿಕೊಡುವುದು ಕಷ್ಟವಾಗಿತ್ತು. ಆದ್ದರಿಂದ ಕಛೇರಿಯ ಅಧಿಕಾರಿಗಳು ಮನಸ್ಸಿ ಆಟ ಆಡುವುದಕ್ಕೆ ಅವಕಾಶವಾಗಿತ್ತು. ಈ ತಾಲ್ಲೂಕಿನಿಂದ ಎಷ್ಟೋ ಕಾಗದಪತ್ರಗಳಿಗೆ ಉತ್ತರ ಬರದೆ ನಿಂತಿತ್ತು. ಈ ಡೆಪ್ಯುಟಿ ಕಮಿಷನರು ಬಂದಮೇಲಂತೂ ಒಂದು ಕಾಗದಕ್ಕೂ ಉತ್ತರವಿರಲಿಲ್ಲ. ಇದರ ಗುಟ್ಟನ್ನು ತಿಳಿದುಕೊಳ್ಳೋಣವೆಂದು ಹೀಗೆ ಅವರು ಬಂದಿದ್ದರು. ಸಾಯಂಕಾಲದ ಹೊತ್ತಿಗೆ ಊರಲ್ಲೆಲ್ಲಾ ಅವರು ಡೆಪ್ಯುಟಿ ಕಮಿಷನರು ಎಂದು ತಿಳಿದು, ಬೇಕಾದ ಸರಬರಾಯಿ ಆಯಿತು. ಏನು ತಿಂದರೋ ಬಿಟ್ಟರೋ! ಅದೊಂದನ್ನೂ ಅವರು ಉಪಯೋಗಿಸಿಕೊಳ್ಳಲಿಲ್ಲ. ಯಾರಿಗೋ ಹೇಳಿ ಕುದುರೆಯ ಯೋಗಕ್ಷೇಮವನ್ನು ಮಾತ್ರ ನೋಡಿಕೊಂಡಾಯಿತು. ಬೆಳಗ್ಗೆ ಎದ್ದುನೋಡಲು ಸಾಹೇಬರು ಬಂಗಲಿ ಯಲ್ಲಿರಲಿಲ್ಲ. ಕುದುರೆಯನ್ನು ಹತ್ತಿಕೊಂಡು ಎಲ್ಲಿಗೋ ಹೊರಟುಹೋಗಿದ್ದರು. ಮತ್ತೆ ಬರುವುದಿಲ್ಲವೆಂದು ಎಲ್ಲರೂ ತಿಳಿದುಕೊಂಡು ಊರುತುಂಬ ಒಂದಕ್ಕೆ ಎರಡಾಗಿ ಮಾತನಾಡಿಕೊಳ್ಳುತ್ತಾ ಇದ್ದರು. ಆದರೆ ಮಧ್ಯಾಹ್ನದ ಹೊತ್ತಿಗೆ ಮತ್ತೆ ಸಾಹೇಬರು ಅಮಲ್‌ದಾರರ ಮನೆಯಲ್ಲಿ ಸಿದ್ಧ. ಅಮಲ್‌ದಾರರು ರಾತ್ರಿಯೆಲ್ಲಾ ಎದ್ದು ಎದ್ದು ನಿದ್ದೆ ಇಲ್ಲದೆ ಸುಸ್ತಾಗಿ, ನಿಜವಾಗಿಯೂ ಕೈಲಾಗದೆ, ಮಲಗಿದ್ದರು.

'ಏನು, ಅಮಲ್‌ದಾರರೇ, ಇವೊತ್ತು ಹೇಗಿದೆ?'

'ಇವೊತ್ತು ಬಹಳಮಟ್ಟಿಗೆ ವಾಸಿ, ಸ್ವಾಮಿ.'

'ಹಾಗಾದರೆ ಇವೊತ್ತು ಒಂದು ಗುಟುಕು ನಿನ್ನೆ ಕುಡಿದ ಔಷಧಿಯನ್ನೇ ಕುಡಿದು ಬಿಡಿ' ಎಂದು ಇನ್ನೂ ಅಲ್ಲಿಯೇ ಇದ್ದ ಎಣ್ಣೆಯ ತಪ್ಪಲೆಗೆ ಕೈಹಾಕಿದರು. ಅಮಲ್‌ದಾರರು ಥಟ್ಟನೆ ಎದ್ದು ಕುಳಿತು, 'ತಾವು ಅಷ್ಟು ತೊಂದರೆ ತೆಗೆದುಕೊಳ್ಳಬೇಡಿ, ಸ್ವಾಮಿ. ಅದರ ಗುಣವನ್ನು ನಾನು ಆಗಲೇ ಕಂಡಿದ್ದೇನೆ. ನಾನೇ ತೆಗೆದುಕೊಳ್ಳುತ್ತೇನೆ' ಎಂದು ಅವರ ಕೈಯನ್ನು ಹಿಡಿದುಕೊಂಡರು. 'ಹಾಗಾದರೆ ಸರಿ, ತೆಗೆದುಕೊಳ್ಳಿ! ನೀವು ತೆಗೆದುಕೊಳ್ಳುತ್ತೀರೆಂದು ನನಗೆ ಭರವಸೆ ಇದೆ. ಗುಣ ಕಂಡ ಔಷಧಿಯನ್ನು ಯಾರು ಬಿಡುತ್ತಾರೆ? ಅದಿರಲಿ, ಹೇಗಿದ್ದರೂ ಬಂದಿದ್ದೇನೆ. ನಾಳೆ ತಮಗೆ ಗುಣಮುಖವಾದರೆ ಕಛೇರಿಯ ಕಡೆ ಬನ್ನಿ; ನಾನೂ ಸ್ವಲ್ಪ ನೋಡಿಕೊಂಡು ಹೋಗುತ್ತೇನೆ. ನಾನು ಇಲ್ಲಿಗೆ ಬಂದಿದ್ದಕ್ಕೆ ಏನಾದರೂ ಗುರುತು ಬೇಡವೇ? ನಮಸ್ಕಾರ' ಎಂದು ಹೊರಟು ಹೋದರು.

ಇಷ್ಟು ಹೊತ್ತಿಗೆ ಅಮಲ್‌ದಾರರಿಗೆ ಕಕಮಕ ಹಿಡಿದಿತ್ತು. ಮರುದಿನ ಕಛೇರಿಗೆ ತಪ್ಪಿಸಿಕೊಳ್ಳುವುದಕ್ಕೆ ಏನು ನೆವ ಹೇಳಬೇಕೋ ತೋರದು. ಏಳಲಾರದ ಖಾಯಿಲೆ ಎಂದು ಹೇಳಿ, ಊರು ಬಿಟ್ಟು ಹೋಗುವುದು ಒಪ್ಪುವಂತಿರಲಿಲ್ಲ. ಸಾಹೇಬನು ತನಗಿಂತಲೂ ಕದೀಮನಾಗಿ ಕಂಡನು. ಎಲ್ಲಿ ಯಾರನ್ನು ತನ್ನ ಮೇಲೆ ಕಾವಲು ಹಾಕಿದ್ದಾನೋ ಎಂಬ ಶಂಕೆ ಉಂಟಾಯಿತು. ಹೊಟ್ಟೆಯ ನೋವನ್ನು ಮತ್ತೆ ಹೇಳಿದರೆ ಹರಳೆಣ್ಣೆ ತಪ್ಪುವಹಾಗಿಲ್ಲ. ಅವನು ಎದುರಿಗೇ ನಿಂತು ಒಂದಕ್ಕೆ ಎರಡರಷ್ಟು ಕುಡಿಸಿಬಿಡುತ್ತಾನೆ. ಇನ್ನೇನಾದರೂ ಖಾಯಿಲೆಯನ್ನು ಹೇಳಿದರೆ ಬೇವಿನ ಎಣ್ಣೆ ಕುಡಿಯಬೇಕೋ ಹೊಂಗೆ ಎಣ್ಣೆ ಕುಡಿಯಬೇಕೋ! ಒಳ್ಳೇ ಗ್ರಹಚಾರ ಬಂತು. ಕತ್ತರಿ ಗೋಟನ್ನು ಕತ್ತರಿಸುವುದಕ್ಕೆ ಹೋಗಿ ತಾನೇ ಅದರಲ್ಲಿ ಸಿಕ್ಕಿಕೊಂಡಿತು. ಕಛೇರಿಗೆ ಹೋಗೋಣವೆಂದರೆ ಅಲ್ಲಿ ಯಾವಯಾವ ಕಾಗದದ ಮೇಲೆ, ಎಷ್ಟುಎಷ್ಟು ತಿಂಗಳಿಂದ, ಎಷ್ಟುಎಷ್ಟು ಎತ್ತರ ದೂಳು ಕೂತಿತ್ತೋ ಗೊತ್ತಿಲ್ಲ. ಆದ್ದರಿಂದ ಅರ್ಧರಾತ್ರಿಯ ವರೆಗೂ ಯೋಚನೆ ಮಾಡಿಮಾಡಿ ಕಛೇರಿಯವರಿಗೆಲ್ಲಾ ಹೇಳಿಕಳುಹಿಸಿ, ಮೊದಲು ಸಾಹೇಬನ ಬಂಗಲಿಗೆ ತನಗೆ ಬೇಕಾದ ನಾಲ್ಕೈದು ಜನರನ್ನು ಅವನಿಗೆ ಆಜೂಬುವಾರಿ ಮಾಡುವವರಂತೆ ಇರಲು ಕಟ್ಟುಮಾಡಿ, ಕಛೇರಿಯವರ ಕಡೆ ತಿರುಗಿ 'ಡೆಪ್ಯುಟಿ ಕಮಿಷನ್ ಸಾಹೇಬರು ನಾಳೆ ಕಛೇರಿಯನ್ನು ನೋಡುವುದಕ್ಕೆ ಬರುತ್ತಾರಂತೆ. ಅದನ್ನು ನಾನು ನಾಡಿದ್ದಿಗೆ ಹಾಕಿಸುತ್ತೇನೆ. ಅಷ್ಟರೊಳಗೆ ನೀವು ನಿಮ್ಮ ಕೆಲಸವನ್ನೆಲ್ಲಾ ಬಾಕಿ ಇಲ್ಲದಂತೆ ಮುಗಿಸಿಕೊಳ್ಳಬೇಕು' ಎಂದು ಅಪ್ಪಣೆಮಾಡಿದರು.

ಅವರು, 'ಅದು ಹೇಗೆ ಸಾಧ್ಯ, ಸ್ವಾಮಿ? ಸುಮಾರು ಐನೂರರ ಮೇಲೆ ಹಳೆಯ ಕಾಗದಗಳೇ ಬಿದ್ದಿವೆ. ಮಿಕ್ಕಾದ ಕೆಲಸಗಳು ಎಷ್ಟೊ ಇವೆ!' ಎಂದು ದಿಗ್ಭ್ರಮೆ ಹಿಡಿದಂತೆ ಉತ್ತರ ಕೊಟ್ಟರು.

ಅಮಲ್‌ದಾರರು ಮಾತ್ರ ಸ್ವಲ್ಪವೂ ಕದಲದೆ 'ನೀವು ಇಂಥಿಂಥ ಘಟಾನು ಘಟಿಗಳು, ಇಷ್ಟಕ್ಕೆಲ್ಲ ಹೆದರಿಕೊಳ್ಳುವುದೇ? ಬಂದಿರುವವನು ಡೆಪ್ಯುಟಿ ಕಮಿಷನರು; ಹೊಸಬ; ಒಬ್ಬ; ಇಲ್ಲಿ ಇನ್ನು ಹೆಚ್ಚು ದಿನ ಉಳಿಯುವಹಾಗಿಲ್ಲ. ಏನು ನೋಡಬೇಕೋ ಅವನಿಗೆ ವಿವರವಾಗಿ ತಿಳಿಯದು. ಬಂದವನು—ಬಂದೇ ಬರುತ್ತಾನೆ—ಬಂದು 'ಇಂದಾ'—'ಗೆ' ರಿಜಿಸ್ಟರು ನೋಡಿಯಾನು! ಅದರಲ್ಲಿ ಕಾಗದ ಪತ್ರಗಳು ತಹಲ್ ವರೆಗೆ ಇದ್ದರಾಯಿತು; ಅವುಗಳಲ್ಲಿ ಅಲ್ಲೊಂದು ಇಲ್ಲೊಂದು ದಾಖಲೆಗಳನ್ನು ಸಮೂದು ಮಾಡಿದ್ದರಾಯಿತು. ಹೋಗಿ!' ಎಂದು ಕಳುಹಿಸಿದರು.

ಮರುದಿನ ಹನ್ನೊಂದು ಘಂಟೆಯ ಹೊತ್ತಿಗೆ ಸಾಹೇಬನು ಕಛೇರಿಯಲ್ಲಿ ಹಾಜರು. ಕಛೇರಿಯು ಇರುವೆ ಗೂಡಿನಂತೆ ಕೆಲಸ ಮಾಡುತ್ತ ಇತ್ತು.

ಸಾಹೇಬರು, 'ಎಲ್ಲಿ ಅಮಲ್‌ದಾರರು?' ಎಂದು ಕೇಳಿದರು. ಇದನ್ನೇ ಎದುರು ನೋಡುತ್ತಿದ್ದ ಶಿರಸ್ತೆದಾರರು ಓಡಿಬಂದು, 'ಅಮಲ್‌ದಾರರು ಇನ್ನೂ ಮನೆಯಲ್ಲಿ ಇದ್ದಾರೆ, ಮಹಾಸ್ವಾಮಿ. ನಿನ್ನೆಗೆ ಇವತ್ತಿಗೆ ಬಹಳ ಸುಸ್ತಾಗಿದ್ದಾರೆ' ಎಂದರು.

ಸಾಹೇಬನು ಮರುಮಾತಾಡದೆ, ಮುಖ ಗಂಟುಹಾಕಿಕೊಳ್ಳದೆ, ಕುದುರೆಯನ್ನು ಹತ್ತಿಕೊಂಡು ಅಮಲ್‌ದಾರರ ಮನೆಗೆ ಹೋಗಿ ನುಗ್ಗಿದನು. ಅಮಲ್‌ದಾರರು ಹಿಂದಿನ ದಿಸಕ್ಕಿಂತ ಹೆಚ್ಚು ದುರ್ಬಲವಾಗಿದ್ದದ್ದೇನೋ ನಿಜ. ಅದು, ಅವರು ಎರಡನೆಯ ದಿನವೂ ಎಣ್ಣೆ ಕುಡಿದಿದ್ದದ್ದರಿಂದ ಅಲ್ಲ. ಹೆಚ್ಚು ಆಯಾಸ ಕಾಣಲು, ರಾತ್ರಿ ಬೇಕೆಂದು ಉಪವಾಸ ಮಾಡಿದ್ದದ್ದರಿಂದ.

'ಏನು, ಅಮಲ್‌ದಾರರೇ, ಹೇಗಿದ್ದೀರಿ? ಕಛೇರಿಗೆ ಬರುವುದಿಲ್ಲವೇ?'

ಅವರು ಕುಗ್ಗಿದ ಧ್ವನಿಯಿಂದ, 'ಹೇಗೆ ಬರಲಿ, ಮಹಾಸ್ವಾಮಿ? ಇವೊತ್ತೂ ಎಣ್ಣೆ ಕುಡಿದೆ. ಒಂದು ದಿನ ಅವಕಾಶಕೊಟ್ಟರೆ ನಾಳೆಯ ದಿವಸ ತಮ್ಮ ಸೇವೆಗೆ ಸಿದ್ಧವಾಗಿದ್ದೇನೆ. ತಮಗೆ ಇನ್ನೊಂದು ದಿವಸ ಇರುವುದಕ್ಕೆ ಅನುಕೂಲ ಹೇಗೋ!' ಎಂದರು. ಕಛೇರಿಗೆ ಬರದೆ ಅಂದೇ ತೊಲಗಿಹೋದರೆ ಹೋಗಲಿ ಎಂಬುದು ಅವರ ಆಸೆ.

ಸಾಹೇಬರು ಸ್ವಲ್ಪ ಯೋಚಿಸಿದವರಂತೆ ನಟಿಸಿ, 'ಇವೊತ್ತು ಏನೂ ಹೊಟ್ಟೆ ನೋವು ಇಲ್ಲ ತಾನೇ?'

'ಇಲ್ಲ, ಮಹಾಸ್ವಾಮಿ!'

'ಹಾಗಾದರೆ ಸರಿ! ಮತ್ತೇನೂ ಎಣ್ಣೆ ಕುಡಿಯಬೇಕಾಗಿಲ್ಲ' ಎಂದು ಎಣ್ಣೆಯ ತಪ್ಪಲೆ ಇದ್ದ ಕಡೆ ನೋಡಿ, 'ಅದನ್ನೂ ತೆಗೆಸಿಬಿಟ್ಟೆದ್ದಿರಲ್ಲಾ' ಎಂದರು. 'ಹೇಗಿದ್ದರೂ ಎರಡು ದಿವಸ ಇದ್ದವಸು ಇದ್ದೆ. ಇನ್ನೊಂದು ದಿವಸ ಇದ್ದು ಕೆಲಸ ಮಾಡಿಕೊಂಡು ಹೋಗದಿದ್ದರೆ ಸರ್ಕಾರದವರು ಸುಮ್ಮನಿದ್ದಾರೇ? ಕಾಸು ದಕ್ಕಿಸಿಕೊಳ್ಳುವುದಕ್ಕಾಗುತ್ತದೆಯೇ? ನನ್ನ ಪಾಡು ಏನಾದರೂ ಆಗಲಿ, ಸದ್ಯಕ್ಕೆ ನೀವು ಔಷಧಿ ಪಥ್ಯ ಯಾವುದನ್ನೂ ಮಾಡಿಕೊಳ್ಳದೆ, ಪೂರ್ವಾಚಾರದ ಕಟ್ಟಿಗೆ ಸಿಕ್ಕಿ, ಅನ್ಯಾಯವಾಗಿ ನರಳುತ್ತಿದ್ದಿರಿ. ನಿಮ್ಮ ಮನೆಯ ಔಷಧಿಯನ್ನೇ ಕುಡಿದು ನಿಮಗೆ ಆರೋಗ್ಯವಾಯಿತಲ್ಲಾ, ಅಷ್ಟೇ ಸಂತೋಷ! ದೇವರು ದೊಡ್ಡವ. ಇಂಥ ಸಣ್ಣ ಉಪಶಮನವನ್ನು ನಿಮಗೆ ಯಾರೂ ಹೇಳದೆ ಹೋದರೇ? ಚಿಂತೆಯಿಲ್ಲ; ನಾಳೆ ಸುಮಾರು ಹನ್ನೆರಡು ಘಂಟೆಯ ಹೊತ್ತಿಗೆ ಸ್ವಲ್ಪಹೊತ್ತು ಕಛೇರಿಗೆ ಬಂದಿದ್ದರೆ ಸಾಕು; ನಾನೂ ಸ್ವಲ್ಪ ನೋಡಿದ ಶಾಸ್ತ್ರಮಾಡಿ ಹೊರಟುಹೋಗುತ್ತೇನೆ. ನಾಳೆ ಸಾಯಂಕಾಲದ ಹೊತ್ತಿಗೆ ನಾನು ಖಂಡಿತ ಊರಿನಲ್ಲಿರಬೇಕು. ನಮಸ್ಕಾರ' ಎಂದು ಹೊರಟುಹೋದರು.

ಅಮಲ್‌ದಾರರು ಸಾಹೇಬರ ಮಾತನ್ನು ನಂಬಿದರು. ಅದು ನಿಜವೆಂಬುದು ಅವರಿಗೆ ಗೊತ್ತಿತ್ತು. ಇಷ್ಟುಹೊತ್ತಿಗೆ ಒಬ್ಬರನ್ನೊಬ್ಬರು ಸಂಪೂರ್ಣವಾಗಿ ತಿಳಿದು ಕೊಂಡಿದ್ದರು.

ಮರುದಿನ ಅಮಲ್‌ದಾರರು ಯೋಚಿಸಿದ್ದಂತೆಯೇ ಸಾಹೇಬರು ಬಂದು ಮೊದಲು 'ಇಂದಾ' ರಿಜಿಸ್ಟರನ್ನು ಕೇಳಿದರು. ಅದರಲ್ಲಿ ಕೊನೆಗೆ ಹಾಕಿದ್ದ ತಾರೀಖುಗಳು ಎಷ್ಟೋ ತಿಂಗಳ ಹಿಂದಿನಿಂದ ಬಂದಿದ್ದರೂ, ಅವೆಲ್ಲವೂ ಆತುರದಿಂದ ಹೊಸದಾಗಿ ಬರೆದವು ಎಂದು ತಿಳಿದುಕೊಳ್ಳುವುದಕ್ಕೆ ಕಷ್ಟವಾಗಲಿಲ್ಲ. ಅವರು ತಮ್ಮ ಮೆಚ್ಚಿಗೆಯನ್ನು ತೋರ್ಪಡಿಸುವರಂತೆ ನಗುತ್ತಾ, 'ಪರವಾಯಿಲ್ಲ! ಅಮಲ್‌ದಾರರು ಆಗಾಗ್ಯೆ ಖಾಯಿಲೆ ಬೀಳುವಂತೆ ತೋರಿದರೂ ಕಛೇರಿಯ ನೌಕರರು ಪಾದರಸದಂತೆ ಕೆಲಸ ಮಾಡುವವರ ಹಾಗೆ ಕಾಣುತ್ತಾರೆ. ಆದರೆ, ಕೆಲಸವನ್ನು ಇನ್ನೂ ಸ್ವಲ್ಪ ನಿಧಾನವಾಗಿ ಮಾಡಿದರೆ ಹೆಚ್ಚು ಉತ್ತಮವಾಗುವಂತೆ ತೋರುತ್ತದೆ!' ಎಂದು ಹೇಳಿ ಅಮಲ್‌ದಾರರ ಕೈಯನ್ನು ಸಂತೋಷದಿಂದ ಕುಲುಕಿ, ನಗುನಗುತ್ತಾ ಕುದುರೆಯನ್ನು ಹತ್ತಿದರು. ಅಮಲ್‌ದಾರರ ಮುಖದಲ್ಲಿಯೂ ನಗುವಿದ್ದರೂ, ಅದು ಎಣ್ಣೆಕುಡಿದ ಮುಖದ ನಗುವಾಗಿತ್ತು.

ಅಲ್ಲಿಂದಾಚೆಗೆ, ಒಬ್ಬರನ್ನೊಬ್ಬರು ದ್ವೇಷಿಸುವುದಕ್ಕೆ ಬದಲು, ಮೆಚ್ಚಿಕೊಳ್ಳು ವುದಕ್ಕೆ ಮೊದಲು ಮಾಡಿದರು. ಡೆಪ್ಯುಟಿ ಕಮಿಷನರಿಗೆ ಬೇರೆ ಡಿಸ್ಟ್ರಿಕ್ಟಿಗೆ ವರ್ಗ

ವಾಯಿತು. ರಿಟೈರಾಯಿತು. ಸೀಮೆಗೆ ಹೋದರು. ಆಗಲೂ ಕಾಗದಪತ್ರಗಳ ವ್ಯವಹಾರವು ಇವರಿಬ್ಬರಿಗೆ ನಡೆಯುತ್ತಿದ್ದಿತು. ವಿನೋದ, ಸರಸ, ಹಾಸ್ಯ. ಆದರೆ ಮೇಲಿನ ವೃತ್ತಾಂತವನ್ನು ಮಾತ್ರ ಇವರೂ ಪ್ರಸ್ತಾಪಿಸಲಿಲ್ಲ, ಅವರೂ ಪ್ರಸ್ತಾಪಿಸಲಿಲ್ಲ. ಅವರವರಿಗೆ ಮಾತ್ರ ಗುಟ್ಟು ಗೊತ್ತು. ಈ ದೇಶದಲ್ಲಿದ್ದಾಗ ಅಮಲ್ದಾರರನ್ನು ಕಂಡಾಗ ಡೆಪ್ಯುಟಿ ಕಮಿಷನರು 'ಏನು, ಮತ್ತೆ ಯಾವಾಗಲಾದರೂ ಹೊಟ್ಟೆನೋವು ಬಂದಿತ್ತೇ?' ಎಂದು ನಗುನಗುತ್ತಾ ಕೇಳುವರು. ಅವರೂ ನಗುನಗುತ್ತಲೆ, 'ಇಲ್ಲ, ಮಹಾಸ್ವಾಮಿ' ಎಂದು ಉತ್ತರಕೊಡುವರು. ಪ್ರತಿಯಾಗಿ ಅವರು 'ಹೊಟ್ಟೆಯ ನೋವಿಗೆ ಅದು ಒಳ್ಳೆಯ ಔಷಧಿ, ನೋಡಿ! ಸುಮ್ಮನೆ ಹೊಟ್ಟೆಯ ತುಂಬ ಔಷಧಿ ತುಂಬಿಕೊಂಡು ಮೈ ಕೆಡಿಸಿಕೊಂಡರೆ ಏನು ಪ್ರಯೋಜನ? ಒಳಗಿನ ಕಲ್ಮಷಹೋಗಿ ಚೊಕ್ಕಟವಾಗಬೇಕು' ಎನ್ನುವರು. 'ಹೌದು' ಎಂದು ಉತ್ತರ ಬರುವುದು. ಇವರ ಆಟವನ್ನು ಅವರು ಮರೆಯಲಿಲ್ಲ; ಅವರ ಮಾಟವನ್ನು ಇವರು ಮರೆಯಲಿಲ್ಲ; ಮತ್ತೊಬ್ಬರ ಹತ್ತಿರ ಪ್ರಸ್ತಾಪಿಸಲಿಲ್ಲ—ಇವರಿಗೆ ಸಂಕೋಚ, ಅವರಿಗೆ ಮರ್ಯಾದೆ. ಆದರೂ ಅದು ಹೇಗೋ ಹೊರಗೆ ಜಿನುಗಿ, ಗತ್ತಾ ಗತ್ತಾ ಅವರಿಗೆ "ಹರಳೆಣ್ಣೆ ಅಮಲ್ದಾರ್ರು" ಎಂಬ ಅಡ್ಡ ಹೆಸರು ಬಂದುಬಿಟ್ಟಿತಂತೆ.

ಕಮಲ

---

# “ಕೆನ್ನೆಲಕ್ಕೆ-ಹುಯ್ದ-ನೀರವರು”

(ಒಂದು ಕವಿಕಥೆ)

**ಯಾಯುಂ ಞಾಯುಂ ಯಾರಾಗಿಯರೋ**
**ಎಂದೈಯುಂ ನುಂದೈಯುಂ ಎಮ್ಮುಱೈಕ್ ಕೇಳಿರ್**
**ಯಾನುಂ ನೀಯುಂ ಎವ್ವಟಿ ಅಱಿದುಂ**
**ಶೆಂಬುಲ ಪ್ಪೆಯಲ್‌ನೀರ್ ಪ್ಪೋಲ**
**ಅನ್ಬುಡೈ ನೆಂಜಂ ತಾಂ ಕಲಂದನವೇ**

ಅಮ್ಮನುಂ ಅಮ್ಮನುಂ ಆರಾಗಿಹರೊ
ಎಮ್ಮ ತಂದೆಯರ್ ಎಂತು ಕೆಳೆಯರು
ಆನುಂ ನೀನುಂ ಆವ ಪರಿ ಅರಿವೆವು
ಕೆಂಬೊಲದೊಳ್ ಪುಯ್ದ ನೀರೆನೆ
ಒಲ್ಮೆಯ ಎದೆಗಳು ತಾಂ ಕಲತುವೇ.

ಇದು ಮೂರನೆಯ ತಮಿಳುಸಂಘ ಕಾಲದ **ಕುಱುಂತೊಗೈ** ಎಂಬ ಪ್ರೇಮಗೀತಾ ಸಂಗ್ರಹದ ನಲವತ್ತನೆಯ ಪದ್ಯ.

ಇದು ತಲೈವನ (ನಾಯಕನ) ಮಾತು. ತಲೈವನು ಎಲ್ಲಿ ಅಗಲುವನೋ ಎಂದು ಅಂಜಿ, ತಲೈವಿ (ನಾಯಕಿ) ಮನಸ್ಸಿನಲ್ಲಿ ಕಳವಳಗೊಳ್ಳುವಳು. ಅದನ್ನು ಅರಿತ ತಲೈವನು—ಯಾವ ಸಂಬಂಧವೂ ಇಲ್ಲದಿದ್ದ ನಾವು ವಿಧಿಯ ಬಲದಿಂದ ಒಂದಾದೆವು. ಆದ್ದರಿಂದ ಇನ್ನು ನಾವು ಬೇರೆಯಾಗೆವು ಎಂದು ತಿಳಿಸಿ ಅವಳ ಅಂಜಿಕೆಯನ್ನು ಅಗಲಿಸುವನು.

ನಮ್ಮ ತಾಯಿತಂದೆಯರೆಡೆಯಾದರೂ ನಮ್ಮೆಡೆಯಾದರೂ ಇದಕ್ಕಿಂತ ಹಿಂದೆ ಯಾವ ಸಂಬಂಧವೂ ಇರಲಿಲ್ಲ. ಹಾಗಿದ್ದರೂ ವಿಧಿಯ ಬಲದಿಂದ ನಾವು ಒಂದಾದೆವು. ಆದ್ದರಿಂದ ಇನ್ನು ನಾವು ಅಗಲುವುದಿಲ್ಲ. ಕೆಮ್ಮಣ್ಣಿನ ನೆಲದಲ್ಲಿ ಹುಯ್ದ ನೀರು ಆ ಮಣ್ಣೊಡನೆ ಕಲತು ಅದರ ಬಣ್ಣವನ್ನೂ ರುಚಿಯನ್ನೂ ಹೊಂದಿ ಒಂದಾಗುವಂತೆ ನಮ್ಮ ಎದೆಗಳು ಒಂದರೊಡನೊಂದು ಕಲತು ಗುಣಭಾವಗಳು ಒಂದಾದುವು. ಇನ್ನು ನಾನು ನಿನ್ನನ್ನು ಬಿಟ್ಟು ಅಗಲುವುದಿಲ್ಲ. ನೀನು ಅಂಜಬೇಡ—ಎಂದು ತಿಳಿಸಿ ಅವಳ ಚಿಂತೆಯನ್ನು ಹೋಗಲಾಡಿಸುವನು.

ಯಾಯ್-ನನ್ನ ತಾಯಿ; ಞಾಯ್-ನಿನ್ನ ತಾಯಿ, ತಾಯ್-ಅವರ ತಾಯಿ. ಹೀಗೆಯೇ ಎಂದೈ-ನುಂದೈ-ತಂದೈ (ಅಪ್ಪ); ಎಮ್ಮುನ್, ನುಮ್ಮುನ್, ತಮ್ಮುನ್ (ಅಣ್ಣ); ಎಂಬಿ, ನುಂಬಿ, ತಂಬಿ (ತಮ್ಮ); ನೆಂಜಂ, ನೆಂಜು, ಉಳ್ಳಂ = ಎದೆ.

ನೆಲದಿಂದ ನೀರು ಮಾರ್ಪಡುವ ಉಪಮೆ ತಿರುಕ್ಕುಱಳಿನ

ನಿಲತ್ತಿಯಲ್ಪಾಲ್ ನೀರ್‌ತಿರಿಂದಱ್ಱಾಗುಂ ಮಾಂದರ್‌ಕ್ಕು
ಇನತ್ತಿಯಲ್ಪದಾಗುಂ ಅಱಿವು. (೪೫೨)

(ನೆಲದ ಗುಣದಿಂ ನೀರು ಮಾರಿ ಅಂಥದಾಗುವುದು.
ಮನುಜರ್ಗೆ ಅವರಂಥದಾಗುವುದು ಅರಿವು.)

ಎಂದು ಮುಂತಾದ ಕಡೆಗಳಲ್ಲಿ ಬಂದಿದೆ.

ಎದೆ ಕಲತುದಕ್ಕೆ ಶೆಂಪುಲಪ್ಪೆಯಲ್‌ನೀರನ್ನು ಉಪಮಾನವಾಗಿ ಹೇಳಿದ್ದರಿಂದ ಈ ಪದ್ಯದ ಕರ್ತೃವಿಗೆ ಶೆಂಪುಲಪ್ಪೆಯಲ್‌ನೀರಾರ್ "ಕೆನ್ನೆಲಕ್ಕೆ-ಹುಯ್ದ-ನೀರವರು" ಎಂಬುದೇ ಹೆಸರಾಯಿತು.

—ಪಿ. ಎಂ. ಸೋಮಸುಂದರನ್.

---

### ೧೯೪೦ನೆಯ ಜುಲೈ ತಿಂಗಳಿಂದ ಡಿಸೆಂಬರ್ ಕೊನೆಯ ವರೆಗೆ ಮೈಸೂರು ವಿಶ್ವವಿದ್ಯಾನಿಲಯ ಪುಸ್ತಕ ಭಂಡಾರಕ್ಕೆ ಸೇರಿದ ಪ್ರಾಚ್ಯ ವಿಷಯಕ ಪುಸ್ತಕಗಳು.

*A Trienniel Catalogue of MSS. collected during 1931-32 to 1933-34, for the Govt. MSS. Library, Madras.* Vol. 8. Sanskrit.

*A Descriptive Catalogue of the Kanarese MSS. in the Govt. Oriental MSS. Library, Madras.* Vol. 2. *Puranas*, etc.

*Do.* Vol. 3.

Srinivasachar, L.—*Hindu Darsana Sara.*

Narasimhachar, R.—*History of Kannada Literature.*

Nainar, S. Md. Husyan (ed.)—*Sources of the History of the Nawabs of Carnalic.* II. *Burhan's Tuzad-I-Walajahi.* Part II.

Von Koerber, H. N.—*Morphology of the Tibetan Language: A Contribution to Cmparative Indo-Sinologv.*

Bapat, P. V. (ed.)—*Dhamma Sangani.*

Kundanagar, K. G.—*Inscriptions in Northern Karnataka and Kolhapur State.*

Madho Sarup Vats.—*Excavations at Harappa: Being an Account of Archæological Excavations at Harappa carried out between the years 1920-21 and 1933-34.* Vol. 2.

Raghvan, V. (ed.)—*Bhoja's Sringara Prakasa.* Vol. 1. Part I.

Panchapagesa Sastri, P.—*The Philosophy of Aesthetic Pleasure.*

Nagaraja Sarma, R.—*Reign of Realism in Indian Philosophy.*

Gladwin, F.—*Dictionary of Persian, Hindustani and English.* 2. Vols.

Krishnamacharlu, C. R.—*South Indian Inscriptious.* Vol. 11. Part I. Bombay-Karnatak Inscriptions.

Prawdin, M.—*The Mongol Empire.*

Hodivala, S. H.—*Studies in Parsi History.*

Richet, C.—*The Story of Civilization Through the Ages.*

Kodanda Rao, P.—*East vs. West.*

Krishna Menon, V. K.—*A Theory of Laughter, with Special Reference to Comedy and Tragedy.*

Schwarz, L. W.—*A Golden Treasury of Jewish Literature.*

Harrisson, T.—*Savage Civilization.*

Hirschfeld, M.—*Racism.*

MORRIS, J.—*Living with Lepchas—a book about the Sikkim Himalayas.*
DUTT, TORU.—*Ancient Ballads and Legends of Hindustan.*
HULSTEIJN, W.—*A Glance at the Great Religions of the World*
NAWRATH, E. A.—*The Glories of Hindustan.*
*Sri Bhagavad Ramanuja Granthamala.*
AJAYAPALA.—*Nanartha Sangraha.*
CHINTAMANI, T. R. (ed.)—*Saraswathikanthabharana of Bhojadeva.*
BHAVANATHA MISRA.—*Naya-Viveka (Tarka Pada).*
SREEPADA LAKSHMIPATHI SASTRY.—*A Critique on Nannichodudeva's Kumara Sambhava.* (in Telugu).
GAURANA.—*Navanadha Charitra.* (in Tamil).
KRISHNAN NAIR, P.—*Kavya Jivita Vritti.* Vol. 2. (in Malayalam).
SUBRAHMANYA SASTRI, P. P.—*Descriptive Catalogue of the Islamic MSS. in the Govt. Oriental MSS. Library, Madras.* Vol. 1. Hindustani, Arabic and Persian.
RICHARDS, J. A.—*Practical Criticism: A Study of Literary Judgement.*
PAPIAH CHETTY, B.—*Chhandogyopanishad.* (in Telugu).

---

# ಕಾವ್ಯಾವಲೋಕನ

**ಕುಮಾರವ್ಯಾಸ ಪ್ರಶಸ್ತಿ**—ಮೈಸೂರು ಮಹಾರಾಜರವರ ಕಾಲೇಜಿನ ಕರ್ಣಾಟಕ ಸಂಘದಿಂದ ಪ್ರಕಟವಾದುದು. ಪುಟಗಳು, ಡೆಮಿ ಅಷ್ಟಪತ್ರ ೧೮+೩೪೭; ಬೆಲೆ, ಸಾದಾ, ರೂ. ೨—೦—೦; ಕ್ಯಾಲಿಕೊ, ರೂ. ೨—೮—೦.

ಕನ್ನಡ ಜನಪ್ರಿಯ ಕವಿಯಾದ ಕುಮಾರವ್ಯಾಸನ ಬಗೆಗೆ ಕರ್ನಾಟಕದ ವಿವಿಧ ವಿದ್ವಾಂಸರು ಬರೆದ ಲೇಖನಗಳ ಸಂಗ್ರಹವಿದು. ಕುಮಾರವ್ಯಾಸನು ಹಿರಿಯ ಕವಿ. ಲೇಖನ ಬರೆದವರಲ್ಲಿ ಅನೇಕರು ಹಿರಿಯರು. ಗ್ರಂಥಪ್ರಕಟನೆಯ ದೃಷ್ಟಿಯಿಂದ ನೋಡಿದಾಗ ಬೆಂಗಳೂರು ಮೈಸೂರು ಕಾಲೇಜುಗಳ ಕರ್ನಾಟಕ ಸಂಘಗಳೆರಡೂ ನಮ್ಮ ನಾಡಿನ ಹಿರಿಯ ಸಾಹಿತ್ಯ ಸಂಘಗಳಾಗಿವೆ. 'ಕುಮಾರವ್ಯಾಸ ಪ್ರಶಸ್ತಿ'ಯು ಗಾತ್ರದಿಂದ ('ನಾಡೋಜ ಪಂಪ'ನನ್ನುಳಿದರೆ) ಹಿರಿಯ ವಿಮರ್ಶಗ್ರಂಥವಾಗಿದೆ. ಇಂತಹ ಹಿರಿಯ ಗ್ರಂಥವನ್ನು ಕುರಿತ ಈ ವಿಮರ್ಶೆ ಕೊಂಚ ದೀರ್ಘವಾದರೆ ಅಪ್ರಸ್ತುತವಾಗಲಿಕ್ಕಿಲ್ಲವೆಂದು ನಾನು ನಂಬಿದ್ದೇನೆ.

ಕನ್ನಡ ಸಾಹಿತ್ಯದಲ್ಲಿ ಹೊಸ ಚೇತನದ ಫಲವಾಗಿ ಹೊಸಹೊಸ ಸಾಹಿತ್ಯ ರೂಪಗಳು ಬರಹತ್ತಿದವು. ಪ್ರಾಚೀನ ಕಾವ್ಯಗಳ ವಿಮರ್ಶಾತ್ಮಕ ಅಭ್ಯಾಸದ ಫಲವಾಗಿ ಕವಿಗಳನ್ನು ಕುರಿತ ಅಭ್ಯಾಸಪೂರ್ಣ ಲೇಖನಗಳೂ, ದೀರ್ಘವಾದ ಮುನ್ನುಡಿಗಳನ್ನೊಳಗೊಂಡ ಪ್ರಾಚೀನಕಾವ್ಯಗಳ ನವೀನ ಆವೃತ್ತಿಗಳೂ, ಕವಿಪ್ರಶಸ್ತಿಗಳೂ ಹೊರಡಹತ್ತಿದವು. ಆದರೆ ಇದುವರೆಗೆ ಹೊರಟಿರುವ ಗ್ರಂಥಗಳು ಗುಣದೋಷಗಳನ್ನು ಸ್ಪಷ್ಟವಾಗಿ ನಿರೂಪಿಸುವ ವಿಮರ್ಶೆಗಳಾಗಿರದೆ ಹೆಚ್ಚಾಗಿ ಹಿರಿಯ ಕವಿಗಳಿಗೆ ಸನ್ಮಾನವನ್ನು ಸಲ್ಲಿಸುವ ಪ್ರಶಸ್ತಿಗಳಾಗಿವೆ. ಕನ್ನಡದಲ್ಲಿ ಈಗಾಗಲೆ ಕೆಳಗಣ ಪ್ರಶಸ್ತಿಪರ (ಮತ್ತು ವಿಮರ್ಶಾತ್ಮಕ) ಗ್ರಂಥಗಳು ಪ್ರಕಟವಾಗಿವೆ:—

| | | |
|---|---|---|
| ೧. ಮುದ್ದಣ | .... | ೧೯೨೬ |
| ೨. ರನ್ನಕವಿ ಪ್ರಶಸ್ತಿ | .... | ೧೯೨೮ |
| ೩. ಕವಿ ಲಕ್ಷ್ಮೀಶ | .... | ೧೯೩೩ |
| ೪. ಅಭಿನವಪಂಪ | .... | ೧೯೩೪ |
| ೫. ಹರಿಹರದೇವ | .... | ೧೯೩೭ |
| ೬. ಕವಿ ಕನಕದಾಸರು | .... | ೧೯೩೮ |

೭. ನಾಡೋಜ ಪಂಪ .... ೧೯೩೮

೮. ಕುಮಾರವ್ಯಾಸ ಪ್ರಶಸ್ತಿ .... ೧೯೪೦

ಇವುಗಳಲ್ಲಿ ಕವಿಕನಕದಾಸರು, ನಾಡೋಜಪಂಪ ಎಂಬ ಗ್ರಂಥಗಳು ಲೇಖನ ಸಂಗ್ರಹಗಳಾಗಿರದೆ ಒಬ್ಬೊಬ್ಬ ಲೇಖಕರ ಕೃತಿಗಳಾಗಿವೆ. ಶ್ರೀ. ಮುಳಿಯದ ತಿಮ್ಮಪ್ಪಯ್ಯನವರ 'ನಾಡೋಜಪಂಪ'ವು ೬೦೦ ಪುಟಗಳಿಗೆ ಮೇಲ್ಪಟ್ಟ ಉದ್ಗ್ರಂಥ ವಾಗಿದೆ. ಪಂಪಕವಿಯನ್ನು ಕುರಿತ ವಿವಿಧಬಗೆಯ ಅಭ್ಯಾಸ ಅಲ್ಲಿ ಅಡಕವಾಗಿದೆ. ಮೇಲೆ ಸೂಚಿಸಿದ ಗ್ರಂಥಗಳಲ್ಲದೆ ಈಚೆಗೆ ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರೋಪ ನ್ಯಾಸಮಾಲೆಯಲ್ಲಿ 'ಕುಮಾರವ್ಯಾಸ', 'ಹಂಪೆಯ ಹರಿಹರ', 'ಪಂಪ' ಎಂಬ ಕಿರಿಯ ಹೊತ್ತಿಗೆಗಳು ಹೊರಟಿವೆ. ಒರ್ವ ಲೇಖಕರು 'ಕವಿ ರಾಘವಾಂಕ'ವೆಂಬ ಚಿಕ್ಕ ಪುಸ್ತಕವನ್ನು ಪ್ರಕಟಿಸಿದ್ದಾರೆ. ಕವಿಗಳ ಮೇಲಣ ವಿಮರ್ಶಗ್ರಂಥಗಳು ಕನ್ನಡದಲ್ಲಿ ಹೊರಡಹತ್ತಿ ಈಗ ಹದಿನಾಲ್ಕು ವರುಷಗಳಾಗಿರುವಾಗ ಕವಿಗೆ ಭಕ್ತಿ ಯಿಂದ ಕಾಣಿಕೆಯನ್ನು ಸಲ್ಲಿಸುವ ಪ್ರಶಸ್ತಿಗ್ರಂಥಗಳ ಸ್ಥಳದಲ್ಲಿ ನಿಷ್ಪಕ್ಷಪಾತದ ವಿಮರ್ಶೆಗಳು ಬರಬೇಕಾಗಿತ್ತು, ನಿಜ. ಆದರೆ 'ಕುಮಾರವ್ಯಾಸ ಪ್ರಶಸ್ತಿ'ಯು ೧೯೪೦ರಲ್ಲಿ ಪ್ರಕಟವಾಗಿದ್ದರೂ ಅದರ ರೂಪರೇಷೆ ಹತ್ತು ವರುಷಗಳ ಹಿಂದೆಯೇ ನಿರ್ಣಯಿಸಲ್ಪಟ್ಟಿತೆಂಬ ಮಾತನ್ನು ಮನದಂದಾಗ, ಈ ಗ್ರಂಥವು 'ಪ್ರಶಸ್ತಿ'ಯೇ ಆಗಿರುವ ಮಾತಿಗೆ ಸಮಾಧಾನ ತಾನಾಗಿಯೇ ಹೊಳೆಯುತ್ತದೆ. ಈ ಪ್ರಶಸ್ತಿ ಗ್ರಂಥದ ಬಗೆಗೆ ಹೇಳಬೇಕಾದ ಒಂದು ಪ್ರಶಸ್ತಿಯ ಮಾತೆಂದರೆ ಲೇಖನಗಳು ಬಹು ದಿನಗಳ ಹಿಂದೆಯೇ ಬರೆಯಲ್ಪಟ್ಟಿದ್ದರೂ ಅವು ಎಷ್ಟುಮಾತ್ರಕ್ಕೂ 'ಬಣ್ಣಗುಂದಿಲ್ಲ.' ಹತ್ತು ವರುಷಗಳ ವರೆಗೆ ಲೇಖನಗಳು ಪ್ರಕಟವಾಗದೆ ಇರುವಾಗ ಆಯಾ ಲೇಖಕರು ತೋರಿದ ತಾಳ್ಮೆಯೂ ಶ್ಲಾಘನೀಯವೇ.

ಪ್ರೊಫೆಸರ್ ಶ್ರೀಕಂಠಯ್ಯನವರ ಮುನ್ನುಡಿಯನ್ನು ಕೂಡಿಸಿ ಈ ಗ್ರಂಥದಲ್ಲಿ ಒಟ್ಟು ಹದಿನೈದು ಲೇಖನಗಳಿವೆ. ಇಲ್ಲಿರುವ ಲೇಖನಗಳನ್ನು ಹೀಗೆ ವಿಭಜಿಸಬಹುದು—

೧. ಕವಿ: ಕಾಲ, ಮತ.

೨. ಮಹಾಭಾರತ: ತುಲನಾತ್ಮಕ.

೩. ಕವಿ ಕಾವ್ಯವಿಮರ್ಶೆ: ಪ್ರತಿಭೆ, ರಸನಿರೂಪಣೆ, ಶೃಂಗಾರ ಸನ್ನಿವೇಶಗಳು, ಶೈಲಿ.

೪. ಕವಿಯ ಪಾತ್ರಗಳು: ದ್ರೌಪದಿ, ಕರ್ಣ, ಉತ್ತರಕುಮಾರ, ಶ್ರೀಕೃಷ್ಣ.

೫. ತುಲನಾತ್ಮಕ: ಪಂಪ—ನಾರಣಪ್ಪ.

ಈ ವಿಭಜನೆಯನ್ನು ನೋಡಿದಾಗ ಕವಿಯ, ಕಾವ್ಯದ, ಅಭ್ಯಾಸಕ್ಕೆ ಬೇಕಾಗುವ ವಿವಿಧ ವಿಷಯನಿರೂಪಣೆ ಈ ಗ್ರಂಥದಲ್ಲಿದೆಯೆಂದು ತಿಳಿಯುತ್ತದೆ. ಆದರೆ ಕುಮಾರ ವ್ಯಾಸನ ಕಾವ್ಯಶೈಲಿಯ ಪ್ರತೀಕದಂತಿರುವ ಭೀಮನ ಪಾತ್ರವನ್ನು ಕುರಿತು ಒಂದು ಸಂಪೂರ್ಣ ಲೇಖನ, ಕವಿಯ ವರ್ಣನಾಕೌಶಲ್ಯವನ್ನು ನಿರೂಪಿಸುವ ಒಂದು ಲೇಖನ, ಕನ್ನಡಕ್ಕೆ ಕಳಸವಿಟ್ಟ ಕವಿಯ ಕನ್ನಡವನ್ನು ಕುರಿತು ಒಂದು ಲೇಖನ—ಇವಿಷ್ಟು ಇಲ್ಲಿ ಬಂದಿದ್ದರೆ ಈ ಲೇಖನ ಸಂಗ್ರಹ ಹೆಚ್ಚು ಪರಿಪೂರ್ಣವಾಗುತ್ತಿತ್ತೆಂದು ಅನಿಸುತ್ತದೆ. ಆದರೂ ಈಗ ಬಂದಿರುವ ಲೇಖನಗಳಲ್ಲಿ ಅನೇಕ ವಿಷಯುಗಳು ಅಡಕವಾಗದೆ ಇಲ್ಲ. ಆಯಾ ಲೇಖಕರು ಒಂದೊಂದು ವಿಷಯವನ್ನು ಚರ್ಚಿಸುವಾಗಲೂ ಕವಿಯ ಬಗೆಗೆ ಒಂದು ಸಮಗ್ರ ದೃಷ್ಟಿಯ ವಿಮರ್ಶೆಯನ್ನು ನಡೆಸಿದ್ದಾರೆಂದು ಗ್ರಂಥಾವಲೋಕನ ದಿಂದ ಕಂಡುಬರುತ್ತಿದೆ. ಇಡಿಯ ಗ್ರಂಥದ ಲೇಖನಗಳ ದೃಷ್ಟಿಯನ್ನು, ತಿರುಳನ್ನು, ಸೊಗಸನ್ನು ಗರ್ಭೀಕರಿಸಿಕೊಂಡಿರುವಂತೆ ಮುನ್ನುಡಿಕಾರರು ಹಿತಮಿತ ವಚನಗಳಲ್ಲಿ ನಮ್ಮ ಜನಪ್ರಿಯ ಕವಿಯ ಕಾವ್ಯಕುಶಲತೆಯ ಸುಂದರ ಚಿತ್ರವನ್ನು ತಿಳಿಯೂದ ಸೊಗಸಾದ ಶಬ್ದಗಳಲ್ಲಿ ಎತ್ತಿ ತೋರಿಸಿದ್ದಾರೆ. ಕವಿಯ ವಿಷಯವಾಗಿರುವ ಉತ್ಕಟ ವಾದ ಭಕ್ತಿಯ ಆವೇಶವೇ ಮಾತಾಗಿ ಹೊರಗೆಬಂದು ಪದಪದಕ್ಕೂ ಅರ್ಥ ಮೈಯೆತ್ತಿ ನಿಂತಿದೆ. 'ಪ್ರಶಸ್ತಿ' ಗ್ರಂಥಕ್ಕೆ ಅದು ಉಚಿತವೂ ಆಗಿದೆ. ಮೇಲೆ ಸೂಚಿಸಿದ ವರ್ಗೀ ಕರಣವನ್ನು ಅನುಸರಿಸಿ ಈ ಗ್ರಂಥದ ಬಗೆಗೆ ಕೆಲವು ಮಾತುಗಳನ್ನು ಹೇಳುತ್ತೇನೆ.

ಕವಿಯ ಕಾಲ ಮತಗಳನ್ನು ಕುರಿತ ಎರಡು ಲೇಖನಗಳು ಸಂಶೋಧಕರಿಗೆ ಒಪ್ಪುವಂತಹವಿವೆ. ಇವುಗಳ ಜೊತೆಗೆ ಕವಿಯ ಸ್ಥೂಲವಾದ ಚರಿತ್ರೆಯನ್ನು ಸಂಗ್ರಹಿಸಿದ ಲೇಖವೊಂದು (ಹರಿಹರದೇವನಲ್ಲಿ ಹರಿಹರನ ಬಗೆಗೆ ಬಂದಿರುವಂತೆ) ಇದ್ದಿದ್ದರೆ ಒಳ್ಳೆಯದಾಗುತ್ತಿತ್ತು. ದಂತಕಥೆ, ಕಾವ್ಯ, ಸಂಪ್ರದಾಯಗಳಿಂದ ಇಂತಹದೊಂದು ಚರಿತ್ರೆಯನ್ನು ಬರೆಯಬಹುದು. ಇರಲಿ. ಕವಿಯ ಕಾಲವನ್ನು ಕುರಿತು ಬರೆಯುತ್ತ ಶ್ರೀಮಾನ್ ಗೋವಿಂದಪೈ ಅವರು ಕುಮಾರವ್ಯಾಸನು ಕ್ರಿ. ಶ. ೧೨೩೦–೩೫ರೊಳಗೆ ಇದ್ದಿರಬೇಕೆಂಬ ಸಿದ್ಧಾಂತಕ್ಕೆ ಬಂದಿದ್ದಾರೆ. ಗೋವಿಂದಪೈಗಳ ಲೇಖನವಿರುವಲ್ಲಿ ಸಂಶೋಧಕಗುಣದ ಅಭಾವವೆಂದಿಗೂ ಇರದು. ಕವಿಯ 'ಕಾಲ ವಿಚಾರ'ವನ್ನು ಬರೆಯಲು ಅವರಿಗಿರುವ ಅಧಿಕಾರವನ್ನು ಯಾರೂ ಅಲ್ಲಗಳೆಯಲಾರರು. ಇಲ್ಲಿಯ ಲೇಖನವು ಆ ಮಾತಿಗೆ ನಿದರ್ಶನವಾಗಿದೆ. ಆದರೆ ಇಲ್ಲಿಯ ನಿರ್ಧಾರಕ್ಕೆ ಕನ್ನಡ ಭಾರತದಲ್ಲಿಯ '**ಸಾಹಣ**'ವೆಂಬ ಪದವು 'ಸೇವುಣ' ಅರಸರನ್ನೆ ಸೂಚಿಸು ತ್ತಿರಬಹುದೆಂಬ ತರ್ಕವು ತಳಹದಿಯಾದಂತಿದೆ. ಆದರೆ ಕಾವ್ಯದಲ್ಲಿನ **ಸಾಹಣ** ಪದವು ಕರ್ನಾಟಕವನ್ನು ಆಳಿದ ಸೇವುಣರನ್ನೇ ಕುರಿತು ಇದೆಯೆಂದು ನಿರ್ಧರಿಸಲು ಇನ್ನೂ

ಹೆಚ್ಚಿನ ಆಧಾರಗಳು ಬೇಕೆಂದು ತೋರುತ್ತಿದೆ. ಭಾಷೆಯ ದೃಷ್ಟಿಯಿಂದ ನೋಡಿದಾಗ ಕನ್ನಡ ಭಾರತವು ಇನ್ನೂ ಈಚಿನದಾಗಿರಬೇಕೆಂದು ತೋರುತ್ತದೆ. ಮತವನ್ನು ಕುರಿತು ಶ್ರೀ ದೊರೆಸ್ವಾಮಿ ಅಯ್ಯಂಗಾರರು ೫೫ ಪುಟಗಳ ಸುದೀರ್ಘ ಲೇಖನ ಬರೆದಿದ್ದಾರೆ. ಇಡಿಯ ಸಂಗ್ರಹದಲ್ಲಿ ಇದೇ ದೊಡ್ಡದಾದ ಲೇಖನವೆಂದು ತೋರುತ್ತದೆ. ಪಂಚಮ ವೇದವೆಂದು ಕರೆಯಲ್ಪಟ್ಟಿರುವ ಈ ಮಹಾವಿಶಾಲ ಕಾವ್ಯಪ್ರಪಂಚದಲ್ಲಿ ಅನೇಕ ಭಾವಗಳು, ತತ್ತ್ವಗಳು, ವ್ಯಕ್ತಿಗಳು ಬಂದಿರುವುದರಿಂದ ಕವಿಯ ಮತವನ್ನು ಕುರಿತು ವಿವಿಧರೀತಿಯ ಊಹೆಗಳನ್ನಿಟ್ಟುಕೊಳ್ಳಲು ಅವಕಾಶವಿದೆ. ಪ್ರಸ್ತುತ ಲೇಖಕರು ಶುಕಭಾಷ್ಯವೇ ಪ್ರಮಾಣಗ್ರಂಥವಾಗಿರುವ ವಿಶಿಷ್ಟಾದ್ವೈತ ಪರವಾಗಿ ಹರಿಪಾರಮ್ಯ ವನ್ನು ಅಂಗೀಕರಿಸುವ ಭಾಗವತಪಂಥಕ್ಕೆ ಕವಿಯು ಸೇರಿರಬಹುದೆಂಬ ಸಿದ್ಧಾಂತಕ್ಕೆ ಬಂದಿದ್ದಾರೆ. ಕವಿಯ ಮತವನ್ನು ಕರ್ಮಮತ, ಭಕ್ತಿಮತ, ಜ್ಞಾನಮತ ಎಂಬ ಮೂರು ದೃಷ್ಟಿಗಳಿಂದಲೂ ಅಳೆದು ನೋಡಿದ್ದಾರೆ. ಮತಗಳ ಬಗೆಗೆ ಅನೇಕ ವಿವರಗಳನ್ನೊಳ ಗೊಂಡ ಈ ಲೇಖನವು ಕಾವ್ಯವಿಮರ್ಶೆಯ ಗ್ರಂಥದಲ್ಲಿ ಲಂಬಾಯಮಾನವಾಗಿ ತೋರು ತ್ತದೆ. ಮೇಲಿನ ಎರಡು ಚರ್ಚಾಸ್ಪದ ವಿಷಯಗಳನ್ನು ಕುರಿತುಇರುವ ಆ ಲೇಖನಗಳ ಕೊನೆಗೆ ಸಂಪಾದಕರು ಅನುಬಂಧಗಳನ್ನು ಕೊಟ್ಟಿದ್ದಾರೆ. ಆದರೆ ಕಾಲವನ್ನು ಕುರಿತು ಇರುವ ಅನುಬಂಧದಲ್ಲಿ ಶ್ರೀ ರಾಜಪುರೋಹಿತ ಹಾಗೂ ಶ್ರೀ ದೊರೆಸ್ವಾಮಿ ಅಯ್ಯಂಗಾರರು ಇವರು ಬರೆದ ಲೇಖನಗಳ ಉಲ್ಲೇಖ ಮಾಡಬಹುದಾಗಿತ್ತು.

ಕಾವ್ಯವಿಮರ್ಶೆಯನ್ನು ಕುರಿತು ಇರುವ ಲೇಖನಗಳಲ್ಲಿ ಈ ಗ್ರಂಥದಲ್ಲಿಯ ೫ನೆಯ ಹಾಗೂ ೪ನೆಯ ಲೇಖನಗಳನ್ನು ಮೊದಲು ಅವಲೋಕಿಸಬಹುದು. ಕನ್ನಡ ಭಾರತವು ಸಂಸ್ಕೃತ ಗ್ರಂಥದ 'ಮಕ್ಕಿಕಾಮಕ್ಕಿ' ಅನುವಾದವಲ್ಲವೆಂದೂ ಇದು ಸ್ವಯಂ ಸ್ಫೂರ್ತಿಯಿಂದ ಬರೆಯಲ್ಪಟ್ಟ ಒಂದು ಬಗೆಯ ಸ್ವತಂತ್ರ ಗ್ರಂಥವೆಂದೂ ತೋರಿಸುವ ಪ್ರಯತ್ನ ೫ನೆಯ ಲೇಖನದಲ್ಲಿದೆ. ಅವಶ್ಯವಾಗಿರುವ ಕೆಲವು ಉದಾಹರಣೆಗಳನ್ನು ಇಲ್ಲಿ ಎರಡೂ ಗ್ರಂಥಗಳಿಂದ ಎತ್ತಿ ತೋರಿಸಲಾಗಿದೆ. ಪಂಪಭಾರತ ಮುಂತಾದವುಗಳಲ್ಲಿ ಕಂಡುಬರುವ ಸ್ವತಂತ್ರದೃಷ್ಟಿಯ ಮಾರ್ಪಾಡಿನ ಪರಿಣಾಮ ಕನ್ನಡ ಭಾರತದ ಮೇಲೆ ಆಗದೆ ಇಲ್ಲ. ೪ನೆಯ ಲೇಖನದ ತಿರುಳು "ಕನ್ನಡ ಭಾರತವು ಪುರಾಣವಾಗಿ ಜನರ ಹೃದಯಕ್ಕೆ ತಂಪನ್ನು ಬೀರುವುದಕ್ಕಿಂತಲೂ ಹೆಚ್ಚಾಗಿ ಕಾವ್ಯವಾಗಿ ಮನೋ ರಂಜನೆಯನ್ನು ಮಾಡುವುದೆಂದು ಒಪ್ಪಿಕೊಳ್ಳಬೇಕಾಗುವದು" ಎಂಬ ವಾಕ್ಯದಲ್ಲಿದೆ. ಕನ್ನಡ ಭಾರತವು ಮುಖ್ಯವಾಗಿ ಕಾವ್ಯವೇ, ಪುರಾಣವೇ, ಎಂಬ ಚರ್ಚೆ ಇಲ್ಲಿದೆ.

ಇದು ವಿಚಾರಿಸೆ ಬರಿಯ ತೊಳಸಿಯ<br>
ವುದಕದಂತಿರೆಯಿಲ್ಲಿ ನೋಳ್ಪುದು<br>
ಪದುಮನಾಭನ ಮಹಿಮೆ ಧರ್ಮವಿಚಾರ ಮಂತ್ರವನು ||

ಎಂಬುದು ಕವಿಯ ದೃಷ್ಟಿಯಾಗಿದ್ದರೂ ಭಾರತವು ಒಂದು ಸುಂದರ ಕಾವ್ಯವೂ ಆಗಿರುವುದನ್ನು ಇಲ್ಲಿ ಲೇಖಕರು ತೋರಿಸಿದ್ದಾರೆ. ಕನ್ನಡ ಭಾರತದಲ್ಲಿ ಪುರಾಣ ಹಾಗೂ ಕಾವ್ಯ ಇವೆರಡೂ ಹಾಸು ಹೊಕ್ಕಾಗಿವೆಯೆಂದೂ ಹೇಳಬಹುದು.

ಕವಿಯನ್ನು ಕುರಿತು ಇರುವ ವಿಮರ್ಶಾತ್ಮಕ ಲೇಖನಗಳಲ್ಲಿ ಕುಮಾರವ್ಯಾಸನ ಪ್ರತಿಭೆ, ರಸನಿರೂಪಣೆ, ಶೃಂಗಾರ ಸನ್ನಿವೇಶಗಳು, ಶೈಲಿ ಎಂಬ ವಿಷಯಗಳ ಮೇಲಣ ಐದು ಲೇಖನಗಳನ್ನು ಅವಲೋಕಿಸಬೇಕು. 'ನಾರಣಪ್ಪನ ಪ್ರತಿಭೆ' ಎಂಬ ಲೇಖನದಲ್ಲಿ ಶ್ರೀ ಕಡೆಂಗೋಡ್ಲು ಶಂಕರಭಟ್ಟರು ಕವಿಯ ಪ್ರತಿಭೆಯನ್ನು ತೋರಿಸುವುದರ ಜೊತೆಗೆ ಕಾವ್ಯಗಳ ಸೊಗಸನ್ನು ಹೇಗೆ ಅರಿಯಬೇಕೆಂಬುದನ್ನು ಸೂಚಿಸಿದ್ದಾರೆ. ಇಲ್ಲಿ ಒಂದು ಸಣ್ಣ ಕಾವ್ಯಮೀಮಾಂಸೆಯನ್ನೇ ಕೊಟ್ಟಂತಿದೆ. ಪ್ರತಿಭೆಯ ಲಕ್ಷಣಗಳನ್ನು ಹೇಳಿ ಕುಮಾರವ್ಯಾಸನ ಕಾವ್ಯದಿಂದ ಲಕ್ಷಣಗಳನ್ನು ತೋರಿಸುವ ಪ್ರಯತ್ನ ಇಲ್ಲಿದೆ. ಲೇಖಕರ ಮೊದಲನೆಯ ವಾಕ್ಯ "ಕವಿ ನಾರಣಪ್ಪನು ನನಗೇನೋ 'ವಕಾಲತ್ತ'ನ್ನು ಕೊಡಲಿಲ್ಲ" ಎಂದಿದೆಯಾದರೂ, ಲೇಖನದಲ್ಲಿ "ಈತನನ್ನು ಕಲಾಕೋವಿದನಲ್ಲವೆಂದು ಹೇಳುವ ಎದೆ ಯಾರಿಗಿದೆ?" ಎಂಬ ಮಾತುಗಳು ಅಲ್ಲಲ್ಲಿ ಬರುತ್ತಿವೆ. ಆದರೆ ಕವಿಯು 'ಅಸಹಾಯ ಶೂರ'ನೆಂಬುದನ್ನು ನಾವೂ ಒಪ್ಪುತ್ತೇವೆ. ರಸನಿರೂಪಣೆಯ ವಿಚಾರವನ್ನು ಬರೆಯುತ್ತಾ ಪಂಡಿತ ಪೂಜಾರರು 'ಕನ್ನಡ ಭಾರತವು ಸಂಸ್ಕೃತ ಮಹಾಭಾರತಕ್ಕಿಂತ ರಸವಿಷಯದಲ್ಲಿ ಮುಂದಡಿಯಿಟ್ಟಿದೆ!' ಎಂದು ಅಭಿಪ್ರಾಯಪಡುತ್ತಾರೆ. ಕನ್ನಡ ಭಾರತದಲ್ಲಿ ಭಾಷೆಯ ಸುಲಭತೆಯೊಂದಿಗೆ ರಸಾನುಗುಣವಾದ ಇತರ ಗುಣಗಳಿರುವುದನ್ನು ಇಲ್ಲಿ ತೋರಿಸಲಾಗಿದೆ. ವೀರರಸಾವಿಷ್ಕರಣದಲ್ಲಿ ಕವಿಯ ಕೌಶಲ್ಯವನ್ನು ತೋರಿಸಿ 'ಕುಮಾರವ್ಯಾಸನು ವೀರಭಾಷೆಯ—ಸಂಗ್ರಾಮ ಭಾಷೆಯ—ಉತ್ಪಾದಕನು' ಎಂದು ಹೇಳಿರುವುದು ಉಚಿತವೇ ಆಗಿದೆ. ಭೀಷಣವಾಗಿರುವ ಭಾರತದ ಕಥೆಯಲ್ಲಿ ಪ್ರಣಯಸನ್ನಿವೇಶಗಳಿಗೆ ಹೆಚ್ಚಿನ ಅವಕಾಶವಿಲ್ಲದಿರುವುದರಿಂದ ಕನ್ನಡ ಭಾರತದಲ್ಲಿಯ ವಿಷಮಪ್ರಣಯದ ಮೂರು ಪ್ರಸಂಗಗಳನ್ನು ಶ್ರೀ ತೀ. ನಂ. ಶ್ರೀಕಂಠಯ್ಯನವರು ತಮ್ಮ ಲೇಖನದಲ್ಲಿ ವಿವರಿಸಿದ್ದಾರೆ. ಭಾರತದಲ್ಲಿಯ ಪ್ರಣಯ ಪ್ರಸಂಗಗಳು ನಿಜವಾಗಿಯೂ ಅನಿವಾರ್ಯವಾಗಿ 'ವಿರಹಿಗಳ ಶೃಂಗಾರ'ವೇ ಆಗಿರುವುದನ್ನು ಲೇಖಕರು ತೋರಿಸಿ ಕೊಟ್ಟಿದ್ದಾರೆ. ಕೀಚಕನಿಗುಂಟಾದ ದ್ರೌಪದಿಯ ವ್ಯಾಮೋಹ, ಕರುಳನ್ನು ಹಿಂಡುವ ಪಾಂಡುಮಾದ್ರಿಯರ ಘೋರ ಪರ್ಯವಸಾನದ ಪ್ರಣಯಪ್ರಸಂಗ, ತಾನಾಗಿಯೇ ಬಳಿಸಂದ ಸುರಸುಂದರಿಯನ್ನು ಅರ್ಜುನನು ತಿರಸ್ಕರಿಸಿದ ಪ್ರಸಂಗ—ಇವೇ ಆ ಮೂರು ವಿಷಮ ಸನ್ನಿವೇಶಗಳು. ಕೊನೆಯ ಪ್ರಸಂಗದಲ್ಲಿಯ ಸಂವಾದ ಸ್ವಾರಸ್ಯವು

ಕವಿ ರಾಘವಾಂಕನ ಸುಪ್ರಸಿದ್ಧ ಗಾಣರಾಣಿಯರ ಪ್ರಸಂಗವನ್ನು ನೆನಪಿಗೆ ತರದೆ ಇರಲಾರದು. ಈ ಮೂರು ಹೃದ್ಯ ಸನ್ನಿವೇಶಗಳ ನಿರೂಪಣೆ ಚೆನ್ನಾಗಿದೆ. ಕುಮಾರ ವ್ಯಾಸನ ಕಲೆಯನ್ನು ಲೇಖಕರು ಸರಿಯಾಗಿ ಎತ್ತಿ ತೋರಿದ್ದಾರೆ. ನಾರಣಪ್ಪನ ಶೈಲಿಯನ್ನು ಕುರಿತು ಎರಡು ಲೇಖನಗಳು ಇಲ್ಲಿವೆ. ಮೊದಲನೆಯದರಲ್ಲಿ 'ಶೈಲಿ'ಯ ಬಗೆಗಿರುವ ಪೌರ್ವಾತ್ಯ ಲಕ್ಷಣವನ್ನನುಸರಿಸಿ ಕುಮಾರವ್ಯಾಸನ ಕಾವ್ಯಶೈಲಿಯನ್ನು ವಿವರಿಸಲಾಗಿದೆ. ಎರಡನೆಯದರಲ್ಲಿ ಕವಿಯ ವ್ಯಕ್ತಿತ್ವವು ಶೈಲಿಯಲ್ಲಿ ಹೇಗೆ ಪ್ರತಿ ಬಿಂಬಿತವಾಗಿದೆಯೆಂಬುದನ್ನು ತೋರಿಸಲಾಗಿದೆ. ಅದರಲ್ಲಿ ಕವಿಯ ಸ್ವಾತಂತ್ರ್ಯ ಪ್ರಿಯತೆ, ಮಾತುಗಳ ಗಾರುಡಿ, ಭಾಷೆಯ ಮೇಲಿನ ಅದ್ಭುತ ಅಧಿಕಾರ ಇವುಗಳನ್ನು ಶ್ರೀ ಎಸ್. ವಿ. ರಂಗಣ್ಣನವರು ವಿವರಿಸಿದ್ದಾರೆ. ಅಲ್ಲದೆ ತಮ್ಮ ಲೇಖನವನ್ನು ಕೇವಲ 'ಪ್ರಶಸ್ತಿ'ಯನ್ನಾಗಿ ಮಾತ್ರ ಮಾಡದೆ ಕವಿಯ ಒರಟುನುಡಿ, ಪದಬಾಹುಳ್ಯ ದೋಷ, ಉಪದೇಶಮಾಡುವ ಅತಿಯಾದ ಆಶೆ—ಈ ದೋಷಗಳನ್ನು ಸೂಚಿಸಿದ್ದಾರೆ. ಇಂತಹ ಗ್ರಂಥಗಳು ಕೇವಲ 'ಪ್ರಶಸ್ತಿ'ಗಳಾಗದೆ ಗುಣದೋಷಗಳ ವಿಮರ್ಶೆಯನ್ನೊಳ ಗೊಂಡಿದ್ದರೆ ಲೇಖಕನಿಗೂ, ಕವಿಗೂ, ಅಭ್ಯಾಸಿಗಳಿಗೂ ನ್ಯಾಯಗೆಯ್ದಂತೆ. ಈ ಗ್ರಂಥದಲ್ಲಿಯ ಶ್ರೀ ರಂಗಣ್ಣ, ಕೆ. ವಿ. ಪುಟ್ಟಪ್ಪ, ಎಲ್. ಗುಂಡಪ್ಪ ಇವರ ಲೇಖನ ಗಳು ಕವಿಯ ಗುಣದೋಷಗಳೆರಡನ್ನೂ ತೋರಿಸುತ್ತಿವೆ.

ಭಾರತದ ಕಥೆಯ ಕೀಲಾಗಿರುವ ದ್ರೌಪದಿ, ಸಾಮಾಜಿಕರ ಸಹಾನುಭೂತಿಯನ್ನು ಸೆಳೆಯುವ ದುರಂತವ್ಯಕ್ತಿ ಕರ್ಣ, ಹಾಸ್ಯದ ಬುಗ್ಗೆಯಾಗಿರುವ ಉತ್ತರಕುಮಾರ, ಕನ್ನಡ ಭಾರತದ ಸೂತ್ರಧಾರನಾದ ಕೃಷ್ಣ—ಈ ಪಾತ್ರಗಳನ್ನು ಕುರಿತು ನಾಲ್ಕು ಲೇಖನಗಳು ಇಲ್ಲಿವೆ. ಕುಮಾರವ್ಯಾಸಕವಿಯ ಪಾತ್ರರಚನಾಕೌಶಲ್ಯವನ್ನು, ವಿಪುಲ ಅನುಭವವನ್ನು, ಭಾವತನ್ಮಯತೆಯನ್ನು ಈ ಲೇಖನಗಳಿಂದ ಕಂಡುಕೊಳ್ಳಬಹುದಾಗಿದೆ. ದ್ರೌಪದಿಯು ಅದ್ಭುತವಾದ ವ್ಯಕ್ತಿತ್ವವುಳ್ಳವಳು. ಅವಳು ರಾಜಸಗುಣದ ಥಲಗಾತಿ ಯಾದರೂ ಕವಿಯು ಅವಳಲ್ಲಿ ಹೇಗೆ ಉದಾತ್ತ ಸಂಸ್ಕೃತಿಯನ್ನು ತುಂಬಿದ್ದಾನೆಂಬು ದನ್ನು ಇಲ್ಲಿಯ ಲೇಖನವು ತೋರಿಸುತ್ತಿದೆ. ಮಹಾಭಾರತದ ಮಹಾಘಟನೆಗಳ ಗೊಂಡಾರಣ್ಯದಲ್ಲಿ ಅಲ್ಲಲ್ಲಿ ತಲೆದೋರುವ ಕರ್ಣನ ಜೀವನವಾಹಿನಿಯ ಹೃದಯಂಗಮ ಚಿತ್ರವನ್ನು ಇಲ್ಲಿ ಶ್ರೀ ಕೆ. ವಿ. ಪುಟ್ಟಪ್ಪನವರು ತಮ್ಮ ಕವಿಸಹಜವಾದ ವಾಣಿಯಲ್ಲಿ ಚಿತ್ರಿಸಿದ್ದಾರೆ. ಒಂದು ಸ್ವತಂತ್ರವಾದ ಕಲಾಕೃತಿಯನ್ನು ಓದುವಾಗಿನ ಆನಂದ ಈ ವಿಮರ್ಶಲೇಖನದಿಂದ ದೊರೆಯುತ್ತಿದೆ. ಕುಮಾರವ್ಯಾಸನ ಸುರಮ್ಯ ನಾಟಕೀ ಯತೆಯನ್ನು ಅವನ ಭಾಷೆಯಲ್ಲಿಯೇ ಸೂಚಿಸುತ್ತ ಕುಮಾರವ್ಯಾಸನೊಂದಿಗೆ ಓದುಗರನ್ನು ಕರ್ಣನ ಜೀವನವಾಹಿನಿಯು ಹರಿಯುತ್ತಿರುವ ಕಡೆಯಲ್ಲೆಲ್ಲ ಲೇಖಕರು

ಕರೆದೊಯ್ಯುತ್ತಾರೆ. ಕೃಷ್ಣನು 'ಕೈತವದ ಶಿಕ್ಷಾಗುರು'ವಾಗಿರುವುದನ್ನೂ, ಪಾಂಡವರು ಕೌರವರಿಗಿಂತ ಹೆಚ್ಚು ಧಾರ್ಮಿಕರಾಗಿಲ್ಲವೆಂಬುದನ್ನೂ ಕರ್ಣನ ಪಾತ್ರ ನಿರೂಪಣೆಯ ಮೂಲಕ ತೋರಿಸಿ ಶ್ರೀ ಪುಟ್ಟಪ್ಪನವರು ಕರ್ಣನ ಜೀವನನಾಟಕದ ಹೃದಯದ್ರಾವಕ ಚಿತ್ರವನ್ನು ಬಿತ್ತರಿಸಿದ್ದಾರೆ. ಉತ್ತರಕುಮಾರನನ್ನು ಕುರಿತು ಇರುವ ಶ್ರೀ ಬೇಂದ್ರೆ ಅವರ ಲೇಖನದಲ್ಲಿ ಹೊಸ ದೃಷ್ಟಿಯಿದೆ. ವೀರಸಂಗ್ರಾಮಗಳ ಕಥೆಯಲ್ಲಿ ಹೇಡಿಯೊಬ್ಬನ ಪಾತ್ರಕ್ಕೆ ಯಾವ ರೀತಿಯ ಮಹತ್ವವಿದೆಯೆಂಬುದನ್ನು ಲೇಖಕರು ಇಲ್ಲಿ ಚೆನ್ನಾಗಿ ನಿರೂಪಿಸಿದ್ದಾರೆ. ದಾನವೀರಕರ್ಣ, ದಯಾವೀರ ಯುಧಿಷ್ಠಿರ, ಯುದ್ಧವೀರನಾದ ಅರ್ಜುನ—ಇವರನ್ನು ಚಿತ್ರಿಸಿದ ಭಿತ್ತಿಯಲ್ಲಿಯೇ, ಸಾಲಿನಲ್ಲಿಯೇ, ಮಾತಿನವೀರ ಉತ್ತರನನ್ನು ನಿಲ್ಲಿಸಿದ ಕವಿಯ ಜಾಣ್ಮೆಯನ್ನು ಲೇಖಕರು ತೋರಿಸಿದ್ದಾರೆ. ಕರ್ಣನ ದುರಂತವನ್ನು, ಉತ್ತರನ ಪಾತ್ರದ ಹಾಸ್ಯವನ್ನು ಸೂಚಿಸುವ ಈ ಎರಡು ಲೇಖನಗಳಲ್ಲಿ ಪಾಶ್ಚಿಮಾತ್ಯ ರೀತಿಯ ದುರಂತತೆ, ಹಾಗೂ ಹಾಸ್ಯ ಇವುಗಳ ಲಕ್ಷಣಗಳನ್ನು ಸೂಚಿಸಿದ್ದರೂ ಆ ಲಕ್ಷಣಗಳು ನಮ್ಮ ಕಾವ್ಯದ ವಿಮರ್ಶೆಗೆ ಅನ್ವಯಿಸುವುದಿಲ್ಲವೆಂಬುದು ನಿಜ. ಶ್ರೀ ಕೃಷ್ಣನ ಪಾತ್ರವನ್ನು ನಿರೂಪಿಸುವ ಲೇಖನದಲ್ಲಿ ತುಲನಾತ್ಮಕ ಅಭ್ಯಾಸದೃಷ್ಟಿಯಿದೆ. ವ್ಯಾಸರದು ಧರ್ಮದ ಮಹಾಯುಗ; ಪಂಪನದು ಚರಿತ್ರೆಯ ವೀರಯುಗ; ನಾರಣಪ್ಪನದು ಭಕ್ತಿಯುಗ. ಈ ಯುಗ ಧರ್ಮಕ್ಕನುಸರಿಸಿ ಆಯಾ ಕವಿಗಳ ದೃಷ್ಟಿಯೂ ಬೇರೆಬೇರೆಯಾಗಿ, ಅವರು ಚಿತ್ರಿಸಿರುವ ಕೃಷ್ಣನ ಪಾತ್ರವೂ ಬೇರೆಬೇರೆಯಾಗಿದೆ. ಕೃಷ್ಣನು ವ್ಯಾಸಭಾರತದಲ್ಲಿ ಧರ್ಮಬಂಧು; ಪಂಪಭಾರತದಲ್ಲಿ ವಿಕ್ರಮಾರ್ಜುನನ ದಿವ್ಯಸಖ; ನಾರಣಪ್ಪನ ಭಾರತದಲ್ಲಿ ಭಕ್ತ ಬಂಧು ಮಹಾವಿಷ್ಣು. ಈ ಹೇಳಿಕೆಗಳನ್ನು ಲೇಖಕರು ಉದ್ಯೋಗಪರ್ವದ ಒಂದು ಸನ್ನಿವೇಶದ ಉದಾಹರಣೆಯೊಂದಿಗೆ ಸಮರ್ಥಿಸಿದ್ದಾರೆ.

ಈ ತುಲನಾತ್ಮಕ ಅಭ್ಯಾಸದೃಷ್ಟಿಯು ಇನ್ನೂ ಸ್ಪಷ್ಟವಾಗಿ 'ಪಂಪ-ನಾರಣಪ್ಪ' ಎಂಬ ಲೇಖನದಲ್ಲಿ ಬಂದಿದೆ. ಕನ್ನಡದ ಮೆಚ್ಚಿಗೆಯ ಈ ಇರ್ವರು ಮಹಾಕವಿಗಳ ಯುಗಧರ್ಮ, ವ್ಯಕ್ತಿತ್ವ ವಿಶೇಷ, ದೃಷ್ಟಿ ಇವುಗಳಲ್ಲಿಯ ವ್ಯತ್ಯಾಸಗಳ ಪರಿಣಾಮ ವನ್ನು ನಾವು ಎರಡು ಕಾವ್ಯಗಳಲ್ಲಿ ಕಾಣುತ್ತೇವೆ. ಅದರ ಸ್ವಲ್ಪ ಪರಿಚಯವನ್ನು ಈ ಲೇಖನವು ಮಾಡಿಸುತ್ತದೆ. ಪಂಪನಿಗೆ ಪಂಡಿತವರ್ಗದ ಮೆಚ್ಚಿಗೆ; ನಾರಣಪ್ಪ ನಿಗೆ ಜನಸಾಮಾನ್ಯರ ಮೆಚ್ಚಿಗೆ. ಇಬ್ಬರೂ ವ್ಯಾಸಕಥೆಯನ್ನೇ ಆಧಾರವಾಗಿಟ್ಟು ಕೊಂಡವರು. ಇಬ್ಬರಲ್ಲಿಯೂ ನಿರರ್ಗಳ ಪ್ರವಾಹವಿದೆ. ಆದರೆ ಪಂಪನು 'ಹಿತಮಿತ ಗಂಭೀರ ವಚನ'ನು. ನಾರಣಪ್ಪನಲ್ಲಿ ಓಟದ ಜೊತೆಗೆ ಒರಟೂ ಪದಬಾಹುಳ್ಯವೂ ಇವೆ. ಕತೆಯನ್ನು ಕಿರಿದುಗೊಳಿಸಿದರೂ ಸಮಸ್ತ ಭಾರತವನ್ನು ಅಪೂರ್ವವಾಗಿ ಹೇಳಲು

ಹೊರಟವ ಪಂಪ; ಕಥೆಯನ್ನು ಹಿಗ್ಗಿಸಿ ಆವೇಶದಿಂದ ಉಬ್ಬಿ ಕೃಷ್ಣನ ಘನತೆಯನ್ನು ಲಂಬಿಸಿ ಹಾಡುವವ ನಾರಣಪ್ಪ. ಈ ಇಬ್ಬರು ಕವಿಗಳ ಪ್ರತಿರೋಧ ಚಿತ್ರವು ಸುಂದರವೇ ಆಗಿದೆ.

ಈಗ ಪ್ರಕಟವಾದ ಪ್ರಶಸ್ತಿ ಗ್ರಂಥಗಳಲ್ಲಿ ಈ ಲೇಖನಸಂಗ್ರಹವು ಗಾತ್ರದಲ್ಲಿ ಯಂತೂ ಹಿರಿದಾಗಿದೆ; ಗುಣದಲ್ಲಿಯೂ ಕೂಡ ಹಿರಿದೆಂದೇ ಹೇಳಬೇಕು. ಇದಕ್ಕೆ ವಿಶಾಲಕರ್ನಾಟಕದ ಹಿರಿಯ ವಿದ್ವಾಂಸರ ನೆರವೇ ಕಾರಣ. ಈ ಗ್ರಂಥಕ್ಕಾಗಿ ನಾನು ಮೇಲೊಮ್ಮೆ ಸೂಚಿಸಿದಂತೆ ಇನ್ನು ಕೆಲವು ಲೇಖನಗಳನ್ನು ಕೂಡಿಸಬೇಕಾಗಿತ್ತು. ಲೇಖನಗಳನ್ನು ಮುದ್ರಿಸುವಲ್ಲಿ ಇನ್ನಿಷ್ಟು ವ್ಯವಸ್ಥಿತವಾದ ವರ್ಗೀಕರಣವಿರಬಹು ದಾಗಿತ್ತು. ಲೇಖನಗಳ ಪ್ರಮಾಣದ ಔಚಿತ್ಯ ಇನ್ನೂ ಹೆಚ್ಚಾಗಬಹುದಾಗಿತ್ತು. ಆದರೆ ಈಗ ಮಾಡಿದ ಕಾರ್ಯವೇನೂ ಸಣ್ಣದಲ್ಲ. ಕರ್ನಾಟಕದ ಜನಪ್ರಿಯ ಹಾಗೂ ಹಿರಿಯ ಕವಿಯೊಬ್ಬನನ್ನು ಕುರಿತಾಗಿರುವ ಈ ಹೆಬ್ಹೊತ್ತಿಗೆಯಲ್ಲಿ ಕವಿಪರಿಚಯ, ಕಾವ್ಯವಿಮರ್ಶೆ, ಕವಿಯ ವ್ಯಕ್ತಿತ್ವದ ಸ್ಫುಟವಾದ ಚಿತ್ರ, ತುಲನಾತ್ಮಕ ಅಭ್ಯಾಸ, ನಾರಣಪ್ಪನ ಕಾವ್ಯಾರಾಮದಲ್ಲಿಯ ಸುರಮ್ಯಸ್ಥಾನಗಳ ದಿಕ್ಸೂಚಿ—ಇವೆಲ್ಲ ಇವೆ. ಈ ಗ್ರಂಥವು ರಸಿಕರಿಗೆ, ಅಭ್ಯಾಸಿಗಳಿಗೆ ಸಾಕಷ್ಟು ಅನ್ನವನ್ನು ಒದಗಿಸಿಕೊಡುತ್ತದೆ. ಈ ಗ್ರಂಥವನ್ನು ಒದಗಿಸಲು ಕಾರಣರಾದವರೆಲ್ಲ ಕನ್ನಡಿಗರ ಕೃತಜ್ಞತೆಗೆ ಪಾತ್ರ ರಾಗಿದ್ದಾರೆ.

ಎಸ್. ಎಸ್. ಮಾಳವಾಡ.

---

**ಪ್ರಬಂಧಪ್ರಕಾಶ**—ಲೇಖಕರು: ದೇಶಪಾಂಡೆ ಮನೋಹರರಾಯರು, ಕ್ರೌ ೧೬ ಅ. ೮ + ೨೨೩; ಬೆಲೆ, ೧ ರೂಪಾಯಿ.

ಕನ್ನಡದ ವಿದ್ಯಾರ್ಥಿಗೆ ಪ್ರಬಂಧರಚನೆಯ ವಿಷಯದಲ್ಲಿ ಸಹಾಯಮಾಡುವ ಗ್ರಂಥಗಳು ನಮ್ಮಲ್ಲಿ ವಿರಳ. ಈ ಗ್ರಂಥವು ಆ ಕುಂದನ್ನು ಸ್ವಲ್ಪಮಟ್ಟಿಗೆ ಹೋಗ ಲಾಡಿಸಿದೆ. ಎಲ್ಲ ಕುಶಲಕಲೆಗಳಂತೆ ಪ್ರಬಂಧ ರಚನಾಚಾತುರ್ಯವೂ, ಕೇವಲ ಪ್ರತಿಭಾಜನ್ಯವಲ್ಲ. ಅಭ್ಯಾಸವು ಅದನ್ನು ಹದಗೊಳಿಸಿ ಒಳ್ಳೆಯ ರೂಪಕ್ಕೆ ತರುತ್ತದೆ. ವಿದ್ಯಾರ್ಥಿಯಲ್ಲಿರುವ ಸುಪ್ತಚೈತನ್ಯವನ್ನು ಪ್ರಬುದ್ಧವನ್ನಾಗಿಸುವುದು ಉಪಾಧ್ಯಾ ಯರ ಕರ್ತವ್ಯ. ಇದು ಸಾಧ್ಯವಾಗಬೇಕಾದರೆ ಉಪಾಧ್ಯಾಯರಿಗೆ ಉತ್ತಮವಾದ ಕೆಲವು ಗ್ರಂಥಗಳ ಸಹಾಯವು ಅತ್ಯವಶ್ಯ. ಕನ್ನಡದ ಅಧ್ಯಾಪಕರಿಗೆ ಇದು ಅಂಥ ಗ್ರಂಥ. ಒಂದು ವರ್ಷದೊಳಗಾಗಿ ಎರಡನೆಯ ಮುದ್ರಣವು ಹೊರಬಿದ್ದಿರುವುದು ಇದನ್ನು ಸಾರಿ ಹೇಳುತ್ತಿದೆ.

ಈ ಗ್ರಂಥವು ಐದು ಭಾಗವಾಗಿ ವಿಗಂಡಿಸಲ್ಪಟ್ಟಿದೆ. ಮೊದಲನೆಯದರಲ್ಲಿ ವಾಕ್ಯ, ವಾಕ್ಯಾಂಗ, ವಾಕ್ಯಪಲ್ಲಟ, ವಾಕ್ಯಸಂಯೋಗ ಎಂಬ ಉಪಭಾಗಗಳಿಂದ ಪ್ರಬಂಧರಚನೆಯ ಪ್ರಥಮಪಾಠವು ಬೋಧಿತವಾಗಿದೆ. ಇದಕ್ಕೆ ಹೊಂದಿಕೊಂಡಂತೆ ಇತರ ವ್ಯಾಕರಣಾಂಶಗಳನ್ನೂ ಅಲಂಕಾರಗಳನ್ನೂ ಸುಲಭವಾದ ಭಾಷೆಯಲ್ಲಿ ವ್ಯಕ್ತಪಡಿಸಿದೆ.

ಎರಡನೆಯ ಭಾಗದಲ್ಲಿ 'ಪರಿಚ್ಛೇದ'ಗಳ ವಿಷಯವನ್ನು ಪ್ರತಿಪಾದಿಸಿದ್ದಾರೆ. ಇಂಗ್ಲಿಷ್ ಭಾಷೆಯ 'Paragraph' ಎಂಬ ಪದಕ್ಕೆ ಇದು ಅನುವಾದ. ಇದು ಅಷ್ಟು ಸಮಂಜಸವಾಗಿ ಕಾಣುವುದಿಲ್ಲ. ಸಾಮಾನ್ಯವಾಗಿ ಪರಿಚ್ಛೇದವೆನ್ನುವುದಕ್ಕೆ ನಮ್ಮಲ್ಲಿ ಅಧ್ಯಾಯ ಎಂಬರ್ಥವಿದೆ. ವಾಕ್ಯವೃಂದ, ಮಹಾವಾಕ್ಯ ಎಂಬ ಪದಗಳು ಇದಕ್ಕೆ ಬೇರೆ ಹೆಸರುಗಳು ಎಂದು ಗ್ರಂಥಕಾರರೇ ಹೇಳಿದ್ದಾರೆ. ಇವು ಬೇರೆ ಹೆಸರುಗಳಾದರೂ ಅರ್ಥವನ್ನು ಸ್ಪಷ್ಟಪಡಿಸುವುದರಿಂದ ಹೆಚ್ಚು ಗ್ರಾಹ್ಯವಾಗಿವೆ. ಸಾರವಿಸ್ತಾರ (Expansion), ಸಾರಸಂಗ್ರಹ (Precis) ಗಳು ಕನ್ನಡದ ವಿದ್ಯಾರ್ಥಿಗಳಿಗೆ ಹೊಸವು. ಈ ಪುಸ್ತಕದಲ್ಲಿ ಹೊಸದು ಹಳದಾಗಿ ಮಾಡಲ್ಪಟ್ಟಿದೆ. ವಿರಾಮ ಚಿಹ್ನೆಗಳ ಉಪಯೋಗವನ್ನೂ ಕಥೆ ಬರೆಯುವ ಕ್ರಮವನ್ನೂ ಈ ಭಾಗದಲ್ಲಿಯೇ ವಿವರಿಸಿದ್ದಾರೆ. ಕಥೆಯನ್ನು ಬರೆಯುವ ವಿಧಾನದ ಬೋಧನೆಯು ಮತ್ತಷ್ಟು ವಿಸ್ತೃತವಾಗಿದ್ದರೆ ಇನ್ನೂ ಹೆಚ್ಚು ಪ್ರಯೋಜನವಾಗುತ್ತಿದ್ದಿತು ಎನ್ನಿಸುತ್ತದೆ.

ಮೂರನೆಯ ಭಾಗವೇ ಗ್ರಂಥದಲ್ಲಿ ಪ್ರಧಾನವಾದ ಭಾಗ. ಇದರಲ್ಲಿ ಪ್ರಬಂಧ—ನಿಬಂಧ—ಕ್ರಮವನ್ನು ವಿವರಿಸಿದೆ. ಆಧುನಿಕ ಇಂಗ್ಲಿಷ್ ಸಾಹಿತ್ಯದಲ್ಲಿ ಪ್ರಬಂಧಕ್ಕೆ (Essay) ಒಂದು ವಿಶಿಷ್ಟವಾದ ಸ್ಥಾನವಿದೆ. ಕನ್ನಡದಲ್ಲಿಯೂ ಭಾವಗೀತ ಚಿಕ್ಕ ಕತೆಗಳ ಜತೆಯಲ್ಲಿ ಈ ಕಲಾಕೃತಿಯು ಜನತೆಯಲ್ಲಿ ವಿಚಾರಕ್ರಾಂತಿಯನ್ನುಂಟುಮಾಡುವ ಮಹತ್ವದ ಸಾಧನವಾಗಲಿದೆ. ಅದರ ಪರಿಚಯವನ್ನು ನಮ್ಮ ಕಿರಿಯರು ಹೊಂದಬೇಕಾದುದು ಅತ್ಯಗತ್ಯ. ಪ್ರಬಂಧಗಳನ್ನು ವರ್ಣನಪರ, ಕಥನಪರ, ಚಿಂತನಪರ, ಕಲ್ಪನಪರ, ಎಂದು ವಿಂಗಡಿಸಿ, ಪ್ರಬಂಧಗಳಲ್ಲಿ ನಾಲ್ಕು ಮುಖ್ಯ ಗುಣಗಳಿರಬೇಕೆಂದು ಹೇಳಿದ್ದಾರೆ:—ಕಿರಿಮೆ, ಐಕ್ಯ, ಕ್ರಮ, ಶೈಲಿ. ಇವುಗಳಲ್ಲಿ 'ಐಕ್ಯ' ಮತ್ತು 'ಕ್ರಮ' ಎಂಬುವುಗಳಿಗೆ ಬದಲಾಗಿ 'ಸಮತೆ' ಮತ್ತು 'ವಿಕಸನ' ಎಂಬ ಪದಗಳನ್ನು ಉಪಯೋಗಿಸುವುದು ಹೆಚ್ಚು ಸೂಕ್ತವಾಗಿ ಕಂಡುಬರುತ್ತದೆ. ಉದಾಹರಣೆಗಳಿಗಾಗಿ ಪ್ರಸಿದ್ಧ ಸಾಹಿತಿಗಳ ಕೆಲವು ಪ್ರಬಂಧಭಾಗಗಳನ್ನು ಆಯ್ದುಕೊಟ್ಟಿದ್ದಾರೆ. ಇತಿಹಾಸ, ಜೀವನಚರಿತ್ರೆ, ನಗೆ, ವಿವಾದ, ತತ್ವ, ಮುಂತಾದುವುಗಳಿಗೆ ಸಂಬಂಧಪಟ್ಟಂತೆ ಅನೇಕ ಅಭ್ಯಾಸಗಳು ಇವೆ. ಇವು ಪುಸ್ತಕವನ್ನು ಹೆಚ್ಚು ಉಪಯೋಗಕರವಾಗಿ ಮಾಡಿವೆ.

ನಾಲ್ಕನೆಯ ಭಾಗದಲ್ಲಿ ಪತ್ರ, ಸಂವಾದ, ಗುಣಗ್ರಹಣ, ಇವುಗಳನ್ನು ಬರೆಯುವ ರೀತಿಯನ್ನೂ, ಭಾಷಾಂತರ ಮಾಡುವ ಬಗೆಯನ್ನೂ ವ್ಯಕ್ತಪಡಿಸಿದ್ದಾರೆ. ಐದನೆಯ ಭಾಗದಲ್ಲಿ ಕೆಲವು ಅನುಬಂಧಗಳು ಇವೆ. ಮೇಳನುಡಿ, ಪಡೆನುಡಿ, ದೇಸಿನುಡಿಗಳನ್ನು ವಿವರಿಸಿ ಅವುಗಳ ಉಪಯೋಗವು ಹೆಚ್ಚಿ ಫಲಕಾರಿಯಾಗಲಿ ಎಂದು ಆಸೆಪಟ್ಟಿದ್ದಾರೆ. ಈ ಭಾಗಕ್ಕೆ ಶ್ರೀಮಾನ್ ಶಂ. ಬಾ. ಜೋಶಿಯವರ "ಕನ್ನಡನುಡಿಯ ಹುಟ್ಟು" ಬಹಳ ಸಹಾಯಮಾಡಿದೆ.

ಹೀಗೆ ಈ ಗ್ರಂಥವು ಕನ್ನಡದ ಬೋಧನಕ್ರಮದಲ್ಲಿ ಒಂದು ಹೊಸಮಾರ್ಗವನ್ನು ಪ್ರತಿಪಾದಿಸುತ್ತದೆ. ಎಲ್ಲ ವಿಷಯನಿರೂಪಣೆಗಳಿಗೂ ಪ್ರಸಿದ್ಧ ಸಾಹಿತಿಗಳ ಕೃತಿಗಳಿಂದ ಮಾದರಿಗಳನ್ನಾಯ್ದಿರಿಸಿರುವುದು ಈ ಗ್ರಂಥದ ಮತ್ತೊಂದು ವೈಶಿಷ್ಟ್ಯ. ಹೈ ಸ್ಕೂಲಿನ ತರಗತಿಗಳಿಗೆ ಇದು ಉಪಯುಕ್ತವಾದ ಗ್ರಂಥ. ಪ್ರಥಮ ಮತ್ತು ಮಧ್ಯಮಶಾಲೆಗಳ ಉಪಯೋಗಕ್ಕೆ 'ಕಿರಿಯರ ಆವೃತ್ತಿ'ಯೊಂದನ್ನು ಸಿದ್ಧಮಾಡಿದರೆ ಒಳ್ಳೆಯದು ಎಂದು ಹೇಳಬೇಕೆನ್ನುವಷ್ಟರಲ್ಲಿ 'ಕಿರಿಯರ ಆವೃತ್ತಿ'ಯೊಂದು ಹೊರಬಿದ್ದಿರುವುದು ಸಂತೋಷವನ್ನುಂಟುಮಾಡಿದೆ.

ಜಿ. ವೆಂಕಟಸುಬ್ಬಯ್ಯ.

---

# ಸಾದರ ಸ್ವೀಕಾರ

೧. **ಕನ್ನಡಕ**—ಲೇಖಕರು : 'ಅರುಣ' ಡೆ. ಸೋ. ೭೪.

೨. **ಬಹಿಷ್ಕಾರ**—ಲೇಖಕರು : 'ನೆರಂಗ' ಡೆ. ಸೋ. ೬೪.

೩. **ತಾಪತ್ರಯ**—ಸಂಕಲಕಾರ : 'ಜೋಕೆ' ಡೆ. ಸೋ. ೬೦.

೪. **ಕನ್ನಡಿ**—'ಅನಿರುದ್ಧ' ಡೆ. ಸೋ. ೬೨.

(ಈ ನಾಲ್ಕೂ 'ರಂಗಮುಂಗ ರಂಜನೋದ್ಯಾನ'ದ ೧, ೨, ೩, ೪ನೆಯ ಗೊಂಚಲುಗಳು. ಪ್ರಕಾಶಕರು : ಎಚ್. ಎಸ್. ಪಾಟೀಲ, ಧಾರವಾಡ ; ಬೆಲೆ, ಒಂದಕ್ಕೆ ೪ ಆಣೆ.)

೫. **ನೂರು ಪುಟಾಣಿ**—ಲೇಖಕರು: ಜಿ. ಪಿ. ರಾಜರತ್ನಂ, ಶಾಕ್ಯಮಂಟಪ, ಮಲ್ಲೇಶ್ವರ, ಬೆಂಗಳೂರು ; ಕ್ರೌನ್ ಅ. ೩೨ ; ಬೆಲೆ, ೪ ಆಣೆ.

೬. **ಶ್ರೀ ಪಾರ್ಶ್ವನಾಥ ಚಂಪು**—ಲೇಖಕರು : ಜಿ. ಪಿ. ರಾಜರತ್ನಂ, ಅನಂತಕೀರ್ತಿ ಗ್ರಂಥಮಾಲೆಯ ೧೨ನೆಯ ಪುಷ್ಪ ; ಪ್ರಕಾಶಿಕೆ : ಶ್ರೀಮತಿ ದೇಜಮ್ಮನವರು, ಪಣಪಿಲ ಅರಮನೆ ; ಕ್ರೌನ್ ಅ. ೬೨ ; ಬೆಲೆ ಸದ್ವಿನಿಯೋಗ.

೭. **ಬಾಸಿಗ**—ಲೇಖಕರು : ರಂ. ಶ್ರೀ. ಮುಗಳಿ ; ಪ್ರಕಾಶಕರು : ಜಿ. ಬಿ. ಜೋಶಿ, ಮನೋಹರ ಗ್ರಂಥಮಾಲಾ, ಧಾರವಾಡ; ಕ್ರೌನ್ ಅ. ೮ + ೧೦೬ + ೨೦ ; ಬೆಲೆ, ೧ ರೂಪಾಯಿ.

೮. **ರಾಗಿಣಿ**—ಲೇಖಕರು : ಎಸ್. ವಿ. ಪರಮೇಶ್ವರಭಟ್ಟ; ಮುದ್ರಣಕಾರರು : ಪಾಂಡುರಂಗ ಪ್ರೆಸ್, ತುಮಕೂರು ; ಕ್ರೌನ್ ಅ. ೭೬ ; ಬೆಲೆ, ೮ ಆಣೆ.

೯. **ದೀಪಮಾಲೆ**—(ಮಿಂಚಿನಬಳ್ಳಿ ಗ್ರಂಥಮಾಲೆ, ೩ನೆಯ ವರ್ಷದ ೩ನೆಯ ಕುಡಿ). ಬರೆದವರು : ಸಿದ್ದವ್ವನಹಳ್ಳಿ ಕೃಷ್ಣಶರ್ಮ ; ಸಂಪಾದಕರು, ಬುರ್ಲಿಬಿಂದುಮಾಧವ ; ಕ್ರೌನ್ ಅ. ೧೧ + ೧೪೪ ; ಬೆಲೆ, ಸಾದಾ ರೂ. ೧-೦-೦ ; ವಾಚನಾಲಯದ ಪ್ರತಿ, ರೂ. ೧-೪-೦.

೧೦. **ರಾಜನೀತಿ**—(ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ—೧೩). ಲೇಖಕರು: ಎಚ್. ಕೃಷ್ಣರಾವ್, ಎಂ.ಎ.; ಕ್ರೌನ್ ಅ. ೧೬ + ೨೭೮ ; ಬೆಲೆ, ಸಾದಾ ೧೨ ಆಣೆ.

೧೧. **ಚೆಂಗಲನೆ**—ಲೇಖಕರು : ಪಾಂಡ್ಯೇಶ್ವರ ಗಣಪತಿರಾವ್ ; ಪ್ರಕಾಶಕರು : ಬಾಳಿಗ ಎಂಡ್ ಸನ್ಸ್, ಮಂಗಳೂರು ; ಕ್ರೌನ್ ಅ. xii + ೭೭ ; ಬೆಲೆ, ೧೦ ಆಣೆ.

೧೨. **ಶ್ರೀಮಧ್ವನಾಮ**—(ಶ್ರೀಪಾದರಾಜಯತೀಶ್ವರ ವಿರಚಿತ). ಟೀಕಾತಾತ್ಪರ್ಯ ಸಹಿತ ; ಲೇಖಕರು : ಶ್ರೀ ಬೆಳ್ಳಿ ಕಲಮದಾನಿ ನಾರಾಯಣರಾಯರು, ಧಾರವಾಡ ; ಕ್ರೌನ್ ಅ. ೮೪ ; ಬೆಲೆ, ೮ ಆಣೆ.

**೧೩. ಮಣಿಮಾಲಾ**—(ಹರಿಣಿ, II ಭಾಗ) : ಸತೀಹಿತೈಷಿಣೀ ಗ್ರಂಥಮಾಲಾ; ಕರ್ಣಾಟಕ ಸತೀಹಿತೈಷಿಣೀ ಮಾತೃಮಂದಿರಂ, ನಂಜನಗೂಡು; ಕ್ರೌ ಅ. vi + ೧೯೫; ಬೆಲೆ, ರೂ. ೧-೦-೦.

**೧೪. ರವಿವರ್ಮ**—ಸತೀಹಿತೈಷಿಣೀ ಸನ್ಮಾನ ಗ್ರಂಥಾವಳಿ—೧೨; ಸತೀಹಿತೈಷಿಣೀ ಕಾರ್ಯಾಲಯ, ಕೊಳ್ಳೇಗಾಲ; ಕ್ರೌ ಅ. ೮೬; ಬೆಲೆ, ೭ ಆಣೆ.

**೧೫. ಚಿನ್ನದ ನಾಡಿನ ಭೂಪಾಲ**—ಲೇಖಕರು : ಯು. ಗುರುಸ್ವಾಮಯ್ಯ, ಸ್ಕೂಲು ಮಾಸ್ಟರ್, ಜಗಳೂರು; ಕ್ರೌ ಷೋ ೧೨.

**೧೬. ಶರದಭಿನಂದನಂ**—ಲೇಖಕರು : ಬಿ. ಶ್ರೀಕಂಠಯ್ಯ, ೧೫೬ ಗಾಂಧಿನಗರ, ಬೆಂಗಳೂರು; ಕ್ರೌ ಅ. ೮.

**೧೭. ಪಣ್ಡಿತಮಣ್ಡಲ ಪತ್ರಿಕೆ**—ಸಂಪುಟ ೨, ಸಂಚಿಕೆ ೧.

**೧೮. ಆಂಧ್ರ** (ಮಾಸಪತ್ರಿಕೆ)—ಸಂಪುಟ ೨, ಸಂಖ್ಯೆ ೮.

**೧೯. Mystic Teachings of the Haridasas of Karnatak**—By A. P. Karmarkar, M.A., L.L.B. & N.B. Kalamdani. The Govt. of Bombay Kannada Research Publication. Demy Octavo, 129 + xlviii. Price, exclusive of postage, Library Edition, Rs. 2, Ordinary, 1-8-0.

**೨೦. The Bulletin of Phonetic Studies**—Number 1. The University Phonetics Association, Mysore. Royal 8vo, pp. 32.

**೨೧. The Piece of Wood and Other Poems**—By M. Vasudeva Murthy, Cr. Octavo 5.

**೨೨. ಸ್ವಾಗತಾಧ್ಯಕ್ಷೀಯ ಭಾಷಣಂ** (ಪ್ರಥಮ ಸಂಸ್ಕೃತ ಸಾಹಿತ್ಯ ಸಮ್ಮೇಳನಸ್ಯ)—ಎಂ. ಪಿ. ವಾಲಿ, ಎಂ.ಎ.

**೨೩. ರಾಯಚೂರ ವಿಜಯ**—ಲೇಖಕರು : ನಾರಾಯಣ ವ್ಯಾಸರಾವ ಕುಲಕರ್ಣಿ, ಬಿ.ಎ. ಧಾರವಾಡ; ಎರಡನೆಯ ಆವೃತ್ತಿ, ೧೯೪೦; ಡೆಮಿ ಅಷ್ಟಪತ್ರ ಪುಟ ೧೦; ಬೆಲೆ ೧ ಆಣೆ.

**೨೪. ಸ್ವಾಮಿ ವಿವೇಕಾನಂದರ ಭಕ್ತಿಯೋಗ**—ಕನ್ನಡಿಸಿದವರು : ಗೊರೂರು ರಾಮಸ್ವಾಮಿ ಐಯಂಗಾರ್; ಪ್ರಕಾಶಕರು : ಮನೋಹರ ಗ್ರಂಥಭಂಡಾರ, ಧಾರವಾಡ; ಕ್ರೌ ಅಷ್ಟಪುಟ ೯೮; ಬೆಲೆ, ಹತ್ತಾಣೆ.

---

# ವಸ್ತುಕೋಶ

ಇದೇ ಡಿಸೆಂಬರ್ ತಿಂಗಳು ಇಪ್ಪತ್ತಾರನೆಯ ತಾರೀಖಿನಿಂದ ಮುವ್ವತ್ತರ ವರೆಗೆ ಉತ್ತರಕರ್ಣಾಟಕದ ಉತ್ಸಾಹಕ್ಕೆ ಅನುಗುಣವಾಗಿ ಧಾರವಾಡದಲ್ಲಿ ಇಪ್ಪತ್ತೈದನೆಯ ಕನ್ನಡ ಸಾಹಿತ್ಯ ಸಮ್ಮೇಳನವು ಬಹು ವೈಭವದಿಂದ ನಡೆಯಿತು.

ಇಪ್ಪತ್ತೈದನೆಯ ಕನ್ನಡ ಸಾಹಿತ್ಯ ಸಮ್ಮೇಳನ

ದಿವಾನ್ ಬಹದ್ದೂರ್ ರಾಜಕಾರ್ಯಪ್ರಸಕ್ತ ಕೆ. ರಾಮಸ್ವಾಮಿ, ಜೆ.ಪಿ., ಬಿ.ಎಸ್.ಇ. ಅವರು ಸಮ್ಮೇಳನವನ್ನು ಆರಂಭಿಸಿದರು. ವಿದ್ವಾನ್ ವ್ಯಾಕರಣತೀರ್ಥ ಚಂದ್ರಶೇಖರಶಾಸ್ತ್ರಿಗಳವರು ಸಮ್ಮೇಳನದ ಅಧ್ಯಕ್ಷಪೀಠವನ್ನು ಅಲಂಕರಿಸಿದ್ದರು. ಅದೇ ಸಂದರ್ಭದಲ್ಲಿಯೇ ಅನೇಕ ಗೋಷ್ಠಿಗಳೂ ಕೂಟಗಳೂ ಸೇರಿದ್ದುವು. ಅವುಗಳಲ್ಲಿ ಶ್ರೀಮಾನ್ ಮಾಸ್ತಿ ವೆಂಕಟೇಶ ಐಯಂಗಾರ್, ಎಂ.ಎ. ಅವರು ಸಾಹಿತ್ಯಗೋಷ್ಠಿಗೂ ಶ್ರೀಮತಿ ಡಾ|| ಸಾವಿತ್ರಿ ಬಾಯಿ ನಾಗನಗೌಡ, ಎಂ.ಬಿ., ಬಿ.ಎಸ್. ಅವರು ಮಹಿಳಾಗೋಷ್ಠಿಗೂ ಅಧ್ಯಕ್ಷರಾಗಿದ್ದರು. ಕನ್ನಡನಾಡಿನ ಸಾಹಿತಿಗಳು ಬಹುಮಂದಿ ಬಂದಿದ್ದು ಉತ್ಸವವು ಎಂದಿನಂತೆ ಯಶಸ್ವಿಯಾಗಿ ಜರುಗಿತು.

ಬೊಂಬಾಯಿಯ ರಾಮಸ್ವಾಮಿಯವರು, ಯಾದಗಿರಿಯ ಚಂದ್ರಶೇಖರ ಶಾಸ್ತ್ರಿಗಳು, ಬೆಂಗಳೂರಿನ ವೆಂಕಟೇಶ ಐಯಂಗಾರ್ಯರು, ಹೊಸಪೇಟೆಯ ಸಾವಿತ್ರಿ ಬಾಯಿಯವರು, ಈ ಸಾಹಿತ್ಯಚತುರಂಗವನ್ನು ನಡಸಿದುದನ್ನು ನೋಡಿ, ಕರ್ಣಾಟಕದಲ್ಲಿ ಕಾಣಬರುತ್ತಿರುವ ಸಾಮರಸ್ಯ, ಐಕ್ಯ, ಇವುಗಳಿಗೆ ಇದು ಒಂದು ನಿದರ್ಶನವಾಗಿದೆ ಯೆಂದು ಯಾರಿಗಾದರೂ ಅನ್ನಿಸದಿರಲಾರದು.

ಶ್ರೀಮಾನ್ ರಾಮಸ್ವಾಮಿಯವರು ಕನ್ನಡಕ್ಕೆ ದೊರೆತಿರುವ ರಾಜಪೋಷಣೆಯ ಸೌಭಾಗ್ಯವನ್ನು ಕೊಂಡಾಡಿ, ಸಾಹಿತ್ಯಪರಿಷತ್ತಿನ ಚರಿತ್ರೆಯನ್ನೂ ಕನ್ನಡನಾಡು ನುಡಿಗಳ ಐಕಮತ್ಯವನ್ನೂ ವಿವರಿಸಿ, ಪ್ರಾಚೀನ ಮತ್ತು ಭವಿಷ್ಯಕರ್ಣಾಟಕದ ವಿಸ್ತಾರವನ್ನು ಕುರಿತು ಹೀಗೆಂದು ಹೇಳಿದರು :—

"ದೇಶವಿದೇಶಗಳ ಇತಿಹಾಸಸಂಶೋಧಕರ ಅಮೌಲ್ಯವಾದ ಶೋಧನೆಯ ಫಲವಾಗಿ ಕನ್ನಡಿಗರ ಪ್ರಾಚೀನ ವೈಭವದ ವೃತ್ತವು ಇನ್ನೂ ನೂರ್ಮಡಿ ವಿಸ್ತರಿಸುವ ಸೂಚನೆ ಕಂಡುಬರುತ್ತದೆ. ಕನ್ನಡಿಗರ ಉಗಮವನ್ನೂ, ಅವರ ವ್ಯಾಪ್ತಿಯನ್ನೂ ಕುರಿತು ಅನುಸಂಧಾನಮಾಡುತ್ತ ಹೋದ ಸಂಶೋಧಕರು ಪೂರ್ವ—ಈಶಾನ್ಯಗಳಲ್ಲಿ ಬರ್ಮಾ—ಬಂಗಾಲ ಪ್ರಾಂತಗಳಲ್ಲಿಯೂ ಉತ್ತರದಲ್ಲಿ ವಿಂಧ್ಯದಿಂದಾಚೆಗೂ ಪಶ್ಚಿಮ



**ವಿದ್ವಾನ್ ವ್ಯಾಕರಣತೀರ್ಥ ಚಂದ್ರಶೇಖರಶಾಸ್ತ್ರಿಗಳು**

ಈಸಲ ಧಾರವಾಡದಲ್ಲಿ ನಡೆದ ಇಪ್ಪತ್ತೈದನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರು.

(ಪಡಿಯಚ್ಚು ಕನ್ನಡ ಸಾಹಿತ್ಯ ಪರಿಷತ್ತಿನ ಕೃಪೆಯಿಂದ)

ಸಮುದ್ರತೀರದಲ್ಲಿ ಧನುಷ್ಕೋಟಿಯಿಂದ ಕಾಥೆವಾಡದ ತೀರದ ಪರ್ಯಂತವೂ ಕನ್ನಡಿಗರ ವ್ಯಾಪ್ತಿಯನ್ನು ತೋರಿಸುವುದಲ್ಲದೆ ದ್ವೀಪಾಂತರಗಳಲ್ಲಿಯೂ ಮೂಲತಃ ಕನ್ನಡಿಗರಾದ ಪ್ರವಾಸಿಗಳ ಉಪನಿವೇಶಗಳನ್ನು ಗುರುತು ಹಚ್ಚತೊಡಗಿರುವರು. ಮಹಾಂಜೊದಾರೊ ಹರಪ್ಪಾಗಳ ಭೂಗರ್ಭಶೋಧನೆಯ ಫಲವಾಗಿ ದೊರೆತ ಕೆಲವು ಲಿಪಿಗಳ ತೊಡಕನ್ನು ಬಿಡಿಸಹೋಗಿ ಅವುಗಳಿಂದ ಕನ್ನಡಿಗರ ಮೂಲವನ್ನು ಶೋಧಿಸುವುದಕ್ಕೆ ಬೇಕಾದ ಪ್ರಯತ್ನ ನಡೆಸುತ್ತಿರುವರು. ಈಗ್ಗೆ ಸುಮಾರು ಐದು ಸಾವಿರ ವರ್ಷಗಳಿಗೆ ಹಿಂದೆ ಅತ್ಯಂತ ಉಚ್ಚಾಶ್ರಯಸ್ಥಿತಿಯಿಂದ ಬಾಳಿದ ಆ ಜನಾಂಗವು ಅಥವಾ ಅದರ ನಾಗರಿಕತೆಯ ಅನೇಕ ಅಂಶಗಳು, ಕನ್ನಡಿಗರ ಮೂಲಪುರುಷರಿಗೆ ಸಂಬಂಧವನ್ನು ತೋರಿಸುವಂತೆ ಇವೆ. ಈ ಅನ್ವೇಷಣೆಗಳ ಫಲ ಹೇಗಾದರೂ ಇರಲಿ. ಕನ್ನಡಿಗರ ವೈಭವದ ಪ್ರಾಚೀನತೆಯೂ ವ್ಯಾಪ್ತಿಯೂ ಈಗ ನಾವು ತಿಳಿದಿರುವುದಕ್ಕಿಂತ ಇನ್ನೂ ವಿಸ್ತಾರವಾಗಿರುವುದರಲ್ಲಿ ಸಂಶಯವಿಲ್ಲೆಂದು ತೋರುತ್ತದೆ. ಇಷ್ಟು ವಿಸ್ತಾರವಾಗಿದ್ದ ಕನ್ನಡಿಗರ ಕಾರ್ಯಕ್ಷೇತ್ರವೂ ಅವರ ಮಹಿಮೆಯೂ ತಮ್ಮ ಸ್ಮರಣೆಗೆ ಬಂದರೆ, ನಾನು ಈ ಆರಂಭದಲ್ಲಿ ಹೇಳಿದ 'ಮುಂಬಯಿ ನಗರವು ಅನತಿಕಾಲದ ಹಿಂದೆ ಕನ್ನಡಿಗರದಾಗಿದ್ದಿತು' ಎಂಬ ಮಾತಿನಲ್ಲಿ ಆಶ್ಚರ್ಯ ಉಳಿಯುಲಾರದು. ಹಾಗೂ ಆಧುನಿಕ ಭರತಖಂಡದ ವಾಣಿಜ್ಯ, ಐಶ್ವರ್ಯ, ಕಲಾಸಂಸ್ಕೃತಿಗಳಿಗೆ ಕೇಂದ್ರವೂ, ಬಾಹ್ಯಪ್ರಪಂಚದೊಡನೆ ಸಂಸರ್ಗಕ್ಕೆ ಬೇಕಾದ ಮುಖ್ಯ ಹೆಬ್ಬಾಗಿಲೂ, ಉತ್ತರ ಕರ್ನಾಟಕಕ್ಕೆ ಪ್ರಕೃತ ರಾಜಧಾನಿಯೂ ಆದ ಮುಂಬಯಿ ನಗರದಲ್ಲಿ ಸಮಗ್ರ ಕರ್ನಾಟಕದ ಗತ ಮತ್ತು ಭಾವೀ ಅಭ್ಯುದಯದ ಸ್ಮಾರಕವಾದ ಅಖಿಲ ಕರ್ನಾಟಕ ಭವನವು ಏರ್ಪಟ್ಟು ಭಾವೀ ಕರ್ನಾಟಕದ ಕೇಂದ್ರ ಕಾರ್ಯಸ್ಥಾನವು ಮುಂಬಯಿಯೇ ಆಗತಕ್ಕದ್ದು ಎಂಬ ಆಶೆಗೆ, ತಮ್ಮಿಂದ ಭರವಸೆ ದೊರೆತೀತು ಎಂದು ನಂಬಿದ್ದೇನೆ." (ತಾಯಿನಾಡು.)

ಅಧ್ಯಕ್ಷರು ಕನ್ನಡ ಸಾಹಿತ್ಯದ ಸಂಕ್ಷಿಪ್ತ ಚರಿತ್ರೆಯನ್ನೂ ಕನ್ನಡದ ಇಂದಿನ ಸಮಸ್ಯೆಗಳನ್ನೂ ವಿವರಿಸಿ, "ಕನ್ನಡಿಗರು ಇಂದು ಅನುಸರಿಸಬೇಕಾದ ರೀತಿನೀತಿಗಳನ್ನೂ ಕೈಕೊಳ್ಳಬೇಕಾದ ಕೆಲವು ಅಗತ್ಯ ಕಾರ್ಯಗಳನ್ನೂ" ಸೂಚಿಸಿದರು. "ಕನ್ನಡನುಡಿ"ಯು ಅವುಗಳನ್ನು ಹೀಗೆ ಸಂಗ್ರಹಿಸಿದೆ:—

೧. ಕನ್ನಡಿಗರಲ್ಲಿ ಬಂಧುಪ್ರೇಮ ಬೆಳೆಯಬೇಕು; ಕನ್ನಡಿಗರು ಕನ್ನಡ ಸಂಘ ಸಂಸ್ಥೆಗಳಿಗೆ ಸಹಾಯ ಮಾಡಬೇಕು.

೨. ಕನ್ನಡಿಗರು ತಮ್ಮ ಕನ್ನಡತನವನ್ನು ಉಳಿಸಿಕೊಳ್ಳಲಿಕ್ಕೆ ಯಾವಾಗಲೂ ಪ್ರಯತ್ನಪಡಬೇಕು. ಪರಪ್ರಾಂತದವರ ಸಂಗಡ ಶಾಂತಿಯಿಂದ ನಡೆದುಕೊಳ್ಳಬೇಕು.

ಆದರೆ ಅವರು ನಮ್ಮ ತಲೆಯಮೇಲೆ ಕೂರಬಂದರೆ ಮಾತ್ರ ಅವರನ್ನು 'ಕೆಳಗೆ ಒಗೆಯುವ ದಿಟ್ಟತನವೂ ನಮ್ಮಲ್ಲಿರಬೇಕು.'

೩. ಪಂಪ ಮಹಾಕವಿ ಹುಟ್ಟಿ ಮುಂದಿನ ಕಾರ್ತಿಕ ಮಾಸಕ್ಕೆ ಒಂದು ಸಾವಿರ ವರ್ಷಗಳಾಗುತ್ತವೆ. ಇಂತಹ ಮಹಾಕವಿಯ ಸಾವಿರ ವರ್ಷದ ಜನ್ಮೋತ್ಸವಕ್ಕೆ ಅಖಿಲ ಕನ್ನಡ ನಾಡಿನ ಸ್ವರೂಪವನ್ನು ಕೊಟ್ಟು ಆಚರಿಸಬೇಕು.

೪. ಕನ್ನಡಿಗರು ಹೆಚ್ಚು ಹೆಚ್ಚಾಗಿ ಕನ್ನಡ ಪುಸ್ತಕಗಳನ್ನೂ ವರ್ತಮಾನ ಪತ್ರಿಕೆಗಳನ್ನೂ ಬೆಲೆಗೆ ಕೊಂಡುಕೊಂಡು (ಎರವಲು ಪಡೆದು ಅಲ್ಲ!) ಓದುವುದನ್ನು ರೂಢಿಗೆ ತರಬೇಕು.

೫. ಪ್ರತಿಯೊಂದು ಊರಲ್ಲಿಯೂ ವಾಚನಾಲಯಗಳನ್ನು ಸ್ಥಾಪಿಸಬೇಕು.

೬. ಸ್ಥಳೀಯ ಸಂಸ್ಥೆಗಳು ತಮ್ಮ ಎಲ್ಲ ವ್ಯವಹಾರಗಳನ್ನು ಕನ್ನಡದಲ್ಲೇ ನಡಸಬೇಕು.

೭. ಕನ್ನಡಿಗರು ತಮ್ಮ ಎಲ್ಲ ಪತ್ರವ್ಯವಹಾರಗಳನ್ನು ಕನ್ನಡದಲ್ಲಿಯೇ ಬರೆಯಬೇಕು. ವಿದ್ಯಾವಂತರಾದವರು ಮೊದಲು ಪರಭಾಷೆಗಳ ಮೋಹವನ್ನು ಬಿಟ್ಟು ಕನ್ನಡದಲ್ಲಿಯೇ ಪತ್ರವ್ಯವಹಾರ ಮಾಡುವ ಪ್ರತಿಜ್ಞೆಯನ್ನು ಕೈಕೊಳ್ಳಬೇಕು. ತರುಣರು ಈ ಕಾರ್ಯದಲ್ಲಿ ಮುಂದೆ ಬರಬೇಕು.

೮. ಕರ್ನಾಟಕದಲ್ಲಿರುವ ಸಂಸ್ಕೃತ ಪಾಠಶಾಲೆಗಳು ಕನ್ನಡದಲ್ಲೂ ಶಿಕ್ಷಣ ಕೊಡಬೇಕು.

೯. ಅಚ್ಚಾಗದೆ ಉಳಿದಿರುವ ಪ್ರಾಚೀನ ಗ್ರಂಥಗಳ ಪ್ರಕಟನೆಗೆ ಹೆಚ್ಚಿನ ಗಮನ ಕೊಡಬೇಕು.

೧೦. ಹಳ್ಳಿಯ ಯಕ್ಷಗಾನಗಳಿಗೂ ಬಯಲಾಟಗಳಿಗೂ ಜನಪದ ಸಾಹಿತ್ಯಕ್ಕೂ ಉತ್ತೇಜನ ಕೊಡಬೇಕು.

೧೧. ಮುಂಬಯಿ ಸರಕಾರದವರು ಕನ್ನಡ ವಿದ್ವಾನ್ ಮತ್ತು ಪಂಡಿತ ಪರೀಕ್ಷೆಗಳನ್ನು ಏರ್ಪಡಿಸಬೇಕು.

೧೨. ಆಧುನಿಕ ಸಾಹಿತ್ಯ ರಾಷ್ಟ್ರೀಯಭಾವನೆಯಿಂದ ತುಂಬಿರಬೇಕು; ವಿಶ್ವಜ್ಞಾನಕೋಶವಾಗಬೇಕು.

ಇವುಗಳಿಗೆ ಜನ, ಧನ, ಅಭಿಮಾನ ಇವು ಮುಖ್ಯ ಸಾಧನಗಳೆಂದು ಹೇಳಿದರೆ ತಪ್ಪಾಗಲಾರದು. ಅವುಗಳಲ್ಲಿಯೂ ಧನವೇ ಮುಖ್ಯವೆಂಬುದು ಎಲ್ಲರೂ ಅರಿತುಕೊಂಡ ವಿಷಯವಾಗಿದೆ. ನಮ್ಮಲ್ಲಿ ಈಗ ಅಭಿಮಾನಕ್ಕೆ ಕಡಮೆ ಇಲ್ಲ. ಜನರೂ ತಕ್ಕಮಟ್ಟಿಗೆ

ಇದ್ದಾರೆ—ಯಾವ ಕೆಲಸವನ್ನು ಬೇಕಾದರೂ ಮಾಡಬಲ್ಲ, ಯಾವ ಗ್ರಂಥವನ್ನು ಬೇಕಾದರೂ ಬರೆಯಬಲ್ಲ ಜನಗಳಿದ್ದಾರೆ. ಆದರೆ ಧನವೆಲ್ಲಿದೆ? ಕನ್ನಡಕ್ಕಾಗಿ ಹತ್ತು ಸಾವಿರ ರೂಪಾಯಿಗಿಂತ ಹೆಚ್ಚಾಗಿ ದಾನಮಾಡಿರುವ, ಅದಕ್ಕಿಂತಲೂ ಹೆಚ್ಚು ಬೆಲೆಯುಳ್ಳ ಕಾಲವನ್ನೂ ದೇಹಶಕ್ತಿಯನ್ನೂ ತ್ಯಾಗಮಾಡಿರುವ ಅಭಿಮಾನಿಗಳೆಂದರೆ ರಾಜಸೇವಾಸಕ್ತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು, ದಿವಂಗತರಾದ ದಿವಾನ್ ಬಹದ್ದೂರ್ ಸರ್ ಕೆ. ಪಿ. ಪುಟ್ಟಣ್ಣಶೆಟ್ಟಿಯವರು ಮುಂತಾದ ತೀರ ಕೆಲವರು ಮಾತ್ರ. ಆದರೆ, ಒಂದೆರಡು ಮಳೆಗೇ ಕೆರೆಯೆಲ್ಲಾ ತುಂಬಿ ಕೋಡಿಹರಿಯುವಷ್ಟು ನೀರು ಬರುತ್ತದೆಯೇ? ಕನ್ನಡನಾಡಿನ ಅನೇಕ ದಾನಶೀಲರು ಕನ್ನಡ ಮಕ್ಕಳ ವಿದ್ಯಾ ಸಂಪಾದನೆಗೋಸ್ಕರ, ಅಶನ ವಸನ ವೇತನಗಳಿಗೋಸ್ಕರ, ಲಕ್ಷಾಂತರ ರೂಪಾಯಿ ಗಳನ್ನು ಕೊಟ್ಟಿರುವುದು ನಿಜ. ಆದರೆ ಕನ್ನಡ ಮಾತು, ಕನ್ನಡ ಸಾಹಿತ್ಯ ಇವು ಮುಂದೆ ಬರಲೆಂದೇ ಸಹಾಯವನ್ನು ನೀಡಿರುವವರು ಎಷ್ಟುಮಂದಿ? ಹೇಗೆ ಹೇಗೆ ನೋಡಿದರೂ, ಹೇಗೆ ಸುತ್ತಿ ಬಳಸಿ ದ್ರಾವಿಡಪ್ರಾಣಾಯಾಮಮಾಡಿ ಬಂದರೂ, ಕೊನೆಗೆ ಮುಗಿಯುವ ಪಲ್ಲವಿ—ಧನ! ಏಕೆಂದರೆ ಗ್ರಂಥಗಳನ್ನು ಬರೆಯಲು ಶಕ್ತರಾದ ವಿದ್ವಾಂಸರು ಕಷ್ಟಪಟ್ಟು ವಿಷಯಗಳನ್ನು ಸಂಗ್ರಹಿಸಿ ಉಚಿತವಾಗಿ ಬರೆದರೂ, ಅಚ್ಚು ಹಾಕಿಸುವುದಕ್ಕೆ ಹಣವನ್ನು ಎಲ್ಲಿ ತರಬೇಕು? ಹೇಗೋ ಹಣವನ್ನು ಒದಗಿಸಿದರೆ ಅದು ಸ್ವಲ್ಪಮಟ್ಟಿಗಾದರೂ ಹಿಂದಕ್ಕೆ ಬರುವುದು ಹೇಗೆ? ಎಷ್ಟು ಜನ ಕೊಳ್ಳುತ್ತಾರೆ? ಎಷ್ಟು ಜನ ಓದುತ್ತಾರೆ? ಎಷ್ಟು ಜನ ಕೊಂಡು ಓದುತ್ತಾರೆ? ಯಾವ ಪುಸ್ತಕ ಪ್ರಕಾಶಕರು ತಾನೇ, ಪಠ್ಯ ಪುಸ್ತಕಗಳು ಕೂಡ ಅಲ್ಪಸಂಖ್ಯೆಯಲ್ಲಿ ಮಾರಾಟವಾಗುವುದನ್ನು ಕಂಡೂ ಧೈರ್ಯಮಾಡಿ ಈ ಹಾವಿನ ಬುಟ್ಟಿಗೆ ಕೈಹಾಕುವರು? ನಾವು ಜನಗಣಿತಿಯ ಲೆಕ್ಕಕ್ಕೆ ಸುಮಾರು ಎರಡುಕೋಟಿಯಾದರೂ ಅಕ್ಷರಸ್ಥರ ಲೆಕ್ಕಕ್ಕೆ ಅದರೊಳಗೆ ಹತ್ತರಲ್ಲಿ ಒಂದು ಭಾಗ. ಪುಸ್ತಕಗಳನ್ನು ಓದುವವರ ಲೆಕ್ಕಕ್ಕೆ ಅದರಲ್ಲಿಯೂ ಹತ್ತರಲ್ಲಿ ಒಂದು ಪಾಲು. ಕೊಳ್ಳುವವರು ಅದರಲ್ಲಿ ದಶಮಾಂಶ. ಗ್ರಂಥಕರ್ತರಿಂದಲೂ ಪ್ರಕಾಶಕರಿಂದಲೂ ಉಚಿತವಾಗಿ ಪಡೆಯುವ ಅವರ ಸ್ನೇಹಿತರನ್ನು ಇದರಿಂದ ಕಳೆದರೆ ಉಳಿದವರ ಸಂಖ್ಯೆ ಊಹಿಸಲಾರದಷ್ಟು ಸೂಕ್ಷ್ಮವಾಗುತ್ತದೆ. ಆದ್ದರಿಂದ, ಅಕ್ಷರತೆ ಮೊದಲು ಮಾಡಿ ಕೊಂಡು ಎಲ್ಲಕ್ಕೂ ಮೇಲ್ಪಟ್ಟ ವಿಶ್ವವಿದ್ಯಾನಿಲಯದ ಪರೀಕ್ಷೆಯವರೆಗೂ ವಿದ್ಯಾರ್ಥಿ ಸಂಪತ್ತಿ ಹೆಚ್ಚದೇ ಹೋದರೆ ಈ ಪರಿಸ್ಥಿತಿ ಉತ್ತಮವಾಗುವ ಹಾಗಿಲ್ಲ. ಇದಕ್ಕೆ ಬೇಕಾದದ್ದು ಧನ. ವಿದ್ಯೆ ಹೆಚ್ಚಿದರೆ ಅದರ ಜೊತೆಯಲ್ಲಿಯೇ ನಿರುದ್ಯೋಗವು ಏರುತ್ತಾ ಹೋಗುವುದೆಂಬುದು ಕೆಲವರ ಮತ. ಆದರೆ ಇದನ್ನು ನಾವು ಒಪ್ಪುವುದಿಲ್ಲ. ದೇಶ ಮುಂದಕ್ಕೆ ಬರಬೇಕಾದರೆ "ನಹಿ ಜ್ಞಾನೇನ ಸದೃಶಂ"! "ವಿದ್ಯಯಾ ಅಮೃತ

ಮಿಶ್ನುತೇ !" ಆದರೆ, ದೇಶವು ವಿದ್ಯೆಯೊಂದಕ್ಕೇ, ತನ್ನ ಹಣವೆಲ್ಲವನ್ನೂ ಅಲ್ಲದಿದ್ದರೆ ಬಹುಭಾಗವನ್ನು ಖರ್ಚುಮಾಡುವುದಕ್ಕಾಗುತ್ತದೆಯೇ? ಅದರಲ್ಲಿಯೂ, ಒಂದು ಪ್ರಾಂತವು ಸಣ್ಣದಾಗಿದ್ದು ಅದರ ಹುಟ್ಟುವಳಿಯು ಮಿತವಾಗಿದ್ದರೆ, ಅದು ಅನ್ನ ಬಟ್ಟೆಗೆ ಹೆಚ್ಚು ಗಮನ ಕೊಡಬೇಕೋ ಅಮೃತಪ್ರಾಶನಕ್ಕೆ ಹೆಚ್ಚು ಗಮನ ಕೊಡಬೇಕೋ? ಕೊಡುವುದು ಸಾಧ್ಯವೋ? ಇಂಗ್ಲೀಷಿನಂಥ ಭಾಷೆಯಾಗಿ, ಭೌತಶಾಸ್ತ್ರ ರಸಾಯನಶಾಸ್ತ್ರಗಳಂಥ ವಿಶ್ವವ್ಯಾಪಕವಾದ ವಿಷಯಗಳಾಗಿದ್ದರೆ, ಅವುಗಳನ್ನು ಒಳಗೊಂಡ ಗ್ರಂಥಗಳು ಎಷ್ಟೇ ಸಣ್ಣ ಪ್ರಾಂತದಿಂದ ಹೊರಡಲಿ, ಯೋಗ್ಯತೆ ಒಂದಿದ್ದರೆ, ಪ್ರಪಂಚದಲ್ಲೆಲ್ಲಾ ಹರಡಿ ಲಕ್ಷಾಂತರ ಪ್ರತಿಗಳು ಮಾರಿ, ಬರೆದವನು, ಬೆಳಕಿಗೆ ತಂದವನು, ಇಬ್ಬರೂ ಬದುಕಿ ಹೋಗುವರು. ಆದರೆ, ಒಂದುಗೇಣು ಅಗಲದ ಕರ್ಣಾಟಕದಲ್ಲಿ ಇರುವ ಒಂದು ಹಿಡಿ ಜನರು ಇರುವ ಅಲ್ಪಸ್ವಲ್ಪ ಧನವನ್ನೂ ಅಭಿಮಾನವನ್ನೂ ನಾನಾಕಡೆಗೆ ಹರಿದು ಹಂಚಿದರೆ ಕನ್ನಡ ಸಾಹಿತ್ಯ ಬದುಕುವುದು ಹೇಗೆ? ಇದಕ್ಕೆ ದೇಶದ ಆರ್ಥಿಕಸ್ಥಿತಿ ಉತ್ತಮವಾಗಬೇಕು; ಜನರಲ್ಲಿ ವಿದ್ಯೆ ವಿಸ್ತಾರವಾಗಬೇಕು, ಹೆಚ್ಚಿನ ಮಟ್ಟಕ್ಕೆ ಏರಬೇಕು. ಆಗತಾನೇ ವಿಶ್ವಕೋಶಗಳೂ ಉದ್ಗ್ರಂಥಗಳೂ ರಚಿತವಾಗಿ ಪ್ರಕಾಶಿತವಾಗಿ ಫಲಕಾರಿಯಾಗುವುದು ಸಾಧ್ಯ.

ಇದು ನಿರಾಶಾವಾದವಲ್ಲ; ಕನ್ನಡಿಗರು ತಮ್ಮ ಧನ ಅಭಿಮಾನಗಳನ್ನು ಚದರಗೊಡದೆ ಹೇಗೆ ಒಮ್ಮನಸ್ಸಿನಿಂದ ಒಂದುಗೂಡಿಸಬೇಕೆಂದು ಹೇಳಿರುವ ಮಾತು.

* * * * *

ಪ್ರವೇಶಧನವನ್ನು ಹಾಕಿದ್ದರೂ ಸಮ್ಮೇಳನಕ್ಕೆ ಬಂದಿದ್ದ ಪ್ರೇಕ್ಷಕರ ಸಂದಣಿಯು ಬಹುದೊಡ್ಡದಾಗಿತ್ತು. ಉತ್ಸಾಹ ಆಸಕ್ತಿಗಳಿಗೆ ಇದಕ್ಕಿಂತಲೂ ಹೆಚ್ಚಿನ ನಿದರ್ಶನ ಇನ್ನೇನು ಬೇಕು? ಆದರೆ, ಸಾವಿರಾರು ಜನ, ಬೇರೆ ಬೇರೆ ಪ್ರಾಂತದ, ಬೇರೆ ಬೇರೆ ಜಾತಿಯ, ಬೇರೆ ಬೇರೆ ರುಚಿಯ, ಬೇರೆ ಬೇರೆ ಆಚಾರದ ಜನಗಳು ಹೆಚ್ಚುಕಾಲ ಒಂದೆಡೆಯಲ್ಲಿ ಸೇರಿದಾಗ ಅವರೆಲ್ಲರನ್ನೂ ಸಂತೃಪ್ತಿ ಪಡಿಸುವುದು ಕಷ್ಟ. ಈ ಸಂಬಂಧವಾಗಿ ಇದ್ದಿರಬಹುದಾದ ಲೋಪಗಳನ್ನು ಅಭ್ಯಾಗತರಾಗಲಿ ಆತಿಥೇಯರಾಗಲಿ, ಮನಸ್ಸಿಗೆ ಹಚ್ಚಿಕೊಂಡಿಲ್ಲವೆಂದು ನಾವು ನಂಬುತ್ತೇವೆ.

ಆದರೆ ಇನ್ನೊಂದು ಸಂಗತಿಯನ್ನು ಮಾತ್ರ ಇಲ್ಲಿ ಸಂಕೋಚದಿಂದ ಹೇಳಬೇಕಾಗಿದೆ. ಬೆಂಗಳೂರಿನಲ್ಲಿ ಕಳೆದ ವರ್ಷ ಪರಿಷತ್ತಿನ ಬೆಳ್ಳಿಯ ಹಬ್ಬವನ್ನು ನೋಡಿ, ಅದಕ್ಕಿಂತ ವೃದ್ಧಸಂಸ್ಥೆಯಾದ ವಿದ್ಯಾವರ್ಧಕ ಸಂಘದ ಚಿನ್ನದ ಹಬ್ಬವನ್ನು ನೋಡಿ ತಣಿಯಬೇಕೆಂದು ನಾನಾ ಪ್ರಾಂತಗಳಿಂದ ಹೋಗಿದ್ದ ಕನ್ನಡಿಗರಿಗೆ ಆ ಹಬ್ಬವು ಮುಂದಕ್ಕೆ ಹೋಯಿತೆಂದು ಕೇಳಿ ಉತ್ಸಾಹಭಂಗವಾಯಿತು. ಈಗ ಒಂದೆರಡು

ವರ್ಷಗಳಿಂದ ಈ ಸಂವತ್ಸರದ ಸಾಹಿತ್ಯಸಮ್ಮೇಳನಕ್ಕೆ ಬೇರೆ ಬೇರೆ ಕಡೆಗಳಿಂದ ಆಹ್ವಾನ ಬಂದಿದ್ದರೂ, ಉತ್ಸವಗಳೆರಡನ್ನೂ ಒಟ್ಟಿಗೆ ಸೇರಿಸಬೇಕೆಂಬ ಧಾರವಾಡದ ಮಹಾಜನರ ಆಗ್ರಹಪೂರ್ವಕವಾದ ವಿನಂತಿಯಿಂದಲೇ ಆ ಆಹ್ವಾನಗಳನ್ನೆಲ್ಲಾ ಕಡೆಗಿಟ್ಟು ಧಾರವಾಡವನ್ನು ಆರಿಸಿಕೊಂಡದ್ದಾಗಿತ್ತು. ಆ ಉತ್ಸವಕ್ಕೆ ಸಂಬಂಧಪಟ್ಟ ಅಧಿಕಾರಿಗಳ ಘನೋದ್ದೇಶಗಳು ಬೇಗ ನೆರವೇರಲೆಂದೂ, ಅದು ಈಗ ನಡೆಯುತ್ತಿದ್ದಿರ ಬಹುದಾದದ್ದಕ್ಕಿಂತ ಇನ್ನೂ ಹೆಚ್ಚಿನ ವಿಜೃಂಭಣೆಯಿಂದ ನಡೆಯಲೆಂದೂ ನಾವು ಹಾರೈಸುತ್ತೇವೆ.

***

"ಮದರಾಸು ವಿಶ್ವವಿದ್ಯಾನಿಲಯದ ಗೌರವ ಸಂಗೀತ ವಿದ್ವಾಂಸರಾದ ಶ್ರೀಮಾನ್ ಟಿ. ವಿ. ಸುಬ್ಬರಾಯರು ಕೆಲವು ದಿನಗಳ ಹಿಂದೆ ಮದರಾಸಿನಲ್ಲಿ ಭಾರತೀಯ ಸಂಗೀತ ಪ್ರಗತಿ ಎಂಬ ವಿಷಯವನ್ನು ಕುರಿತು ನಾಲ್ಕು ಭಾಷಣಗಳನ್ನು ಮಾಡಿದರು." ಅವುಗಳೊಂದರಲ್ಲಿ ಪುರಂದರದಾಸರನ್ನು ಕುರಿತು ಹೀಗೆಂದು ಹೇಳಿದರು:—

"ಹರಿದಾಸರಲ್ಲೆಲ್ಲ ಹಿಂದೂ ಸಂಸ್ಕೃತಿಗೂ ಸಂಗೀತದ ಕಲಾವಿಜ್ಞಾನಗಳಿಗೂ ಮಹತ್ತಾದ ಕಾಣಿಕೆಯನ್ನು ಸಲ್ಲಿಸಿದವರಲ್ಲಿ ಹಿರಿಯರಾದ ಪುರಂದರದಾಸರು

ಪುರಂದರದಾಸರು

ಕೋಟ್ಯಧೀಶರಾಗಿ ಹುಟ್ಟಿದವರು. ಆದರೆ ಬಗೆಯಲ್ಲಿ ಪಾರ ಮಾರ್ಥದ 'ಬೆಳ್ವೆಳಗಾಡಲ್' ಐಹಿಕ ಸಂಪತ್ತನ್ನು ಈಡಾಡಿ, ದೈವಿಕವಾದ ಶ್ರೇಯಸ್ಸನ್ನು ಗಳಿಸಲು ಇದ್ದ ಅಡ್ಡಿಯನ್ನು ದಾಟಿ, ಪ್ರೇಮ ತ್ಯಾಗ ಗಳಿಂದ ಭಗವಂತನ ಕೃಪೆಗೆ ಪಾತ್ರರಾದವರು. ಅಂದಿನಿಂದ ನಿರಂತರವಾಗಿ ಭಗವ ನ್ನಾಮವನ್ನು ಹಾಡುತ್ತ, ಲಕ್ಷಾಂತರ ಕೀರ್ತನೆಗಳನ್ನು ರಚಿಸಿದರು. ಈ ಕೀರ್ತನೆಗಳ ಸೌಂದರ್ಯ ಅವಿನಾಶಿಯಾದುದು. ಸಂಗೀತದ ಲಕ್ಷಣದಲ್ಲಿ ಪುರಂದರದಾಸರು ಅತ್ಯಂತ ಪ್ರಾವೀಣ್ಯವನ್ನು ಗಳಿಸಿದ್ದರು. ಇಂದಿಗೂ ಕರ್ನಾಟಕ ಸಂಗೀತಕ್ಕೆ ಅವರೇ ದೊಡ್ಡ ಲಕ್ಷಣಕಾರರಾಗಿ ಅಗ್ರಸ್ಥಾನವನ್ನು ಪಡೆದಿದ್ದಾರೆ. ಕರ್ನಾಟಕ ಸಂಗೀತ ಪದ್ಧತಿ ಅವರ ಕೊಡುಗೆಯೆ. ಅವರೇ ಸಂಗೀತದ ಮೊದಲ ಪಾಠಗಳ ಶಿಕ್ಷಾಗುರು. ಅವರು ರಚಿಸಿರುವ 'ಕೆರೆಯ ನೀರನು ಕೆರೆಗೆ ಚೆಲ್ಲಿ' ಮುಂತಾದ ಸುಂದರವಾದ ಸ್ವರಾವಳಿಗಳನ್ನೂ ಅಲಂಕಾರಗಳನ್ನೂ ಗೀತಗಳನ್ನೂ ಮೊದಲು ಕಲಿಯದ ಸಂಗೀತಾಭ್ಯಾಸಿಗಳಿಲ್ಲ. ಸಂಗೀತದ ಭವ್ಯಪಾಂಡಿತ್ಯಕ್ಕೆ ಗಟ್ಟಿ ತಳಪಾಯ ಹಾಕಲು ಇವು ಅಗತ್ಯವಾದುವು. ಪುರಂದರದಾಸರ ಕೀರ್ತನೆಗಳಲ್ಲಿ ಪದಗಳ ಆಯ್ಕೆಯ ಸರಳ ಸೌಂದರ್ಯ, ನಾದ ಮಾಧುರ್ಯ, ಭಾವ—ಇವು ಇತರ ಕೀರ್ತನಕಾರರಿಗೆ

ಮೇಲ್ಪಂಕ್ತಿಯಾದುವು. ಸಂಗೀತದ ವಿವಿಧ ರೂಪಗಳಲ್ಲಿ ಅವರ ಸುಳಾದಿಗಳು ಅನುಪಮವಾದುವು. ಒಟ್ಟಿನಲ್ಲಿ ಅವರು ಆಧುನಿಕ ಕರ್ಣಾಟಕ ಸಂಗೀತದ ಮೂಲ ಪುರುಷರು, ವಾಗ್ಗೇಯಕಾರರು ಮತ್ತು ಲಕ್ಷಣಕಾರರು.—ಕನ್ನಡನುಡಿ.

***

ವೈ|| ವಾ|| ದೇವಶಿಖಾಮಣಿ ಅಳಸಿಂಗರಾಚಾರ್ಯರು

ಯದುಶೈಲನಿವಾಸರಸಿಕ ದೇವಶಿಖಾಮಣಿ ಅಳಸಿಂಗರಾಚಾರ್ಯರವರು ವೈಕುಂಠವಾಸಿಗಳಾದುದು (೫–೧೨–೧೯೪೦) ಕನ್ನಡ ಸಾಹಿತ್ಯಕ್ಕೆ ಒಂದು ನಿಜವಾದ ನಷ್ಟ. ಚೆಲುವನಾರಾಯಣ ಶತಕ, ಪಂಚಭಾಷಾ ಪ್ರಹಸನ ಮುಂತಾದ ಕೆಲವು ಸಣ್ಣಸಣ್ಣ ಸ್ವತಂತ್ರ ಗ್ರಂಥಗಳನ್ನು ಬರೆದಿದ್ದರೂ ಅವರು ಸಂಸ್ಕೃತದಿಂದ ಮಾಡಿರುವ ಭಾಷಾಂತರಗಳು ಬಹು ಶ್ಲಾಘ್ಯವಾದುವು. ಪದ್ಯಕ್ಕೆ ಪದ್ಯವಾಗಿ ಗದ್ಯಕ್ಕೆ ಗದ್ಯವಾಗಿ, ಸಂಸ್ಕೃತದ ಸಣ್ಣ ದೊಡ್ಡ ವೃತ್ತಗಳಿಗೆ ಕನ್ನಡದಲ್ಲಿ ಬಳಕೆಯಾದ ಕಂದವೃತ್ತಗಳನ್ನು ಹಾಕಿಕೊಂಡು, ಅರ್ಥ ಹೆಚ್ಚುಕಡಮೆಯಾಗದಂತೆ, ಇಲ್ಲದ್ದನ್ನು ಸೇರಿಸದೆ ಇರುವುದನ್ನು ಬಿಡದೆ, ಸರಳವಾದ ಭಾಷಾಂತರವನ್ನು ಆಧುನಿಕ ಕನ್ನಡ ಸಾಹಿತ್ಯದಲ್ಲಿ ಆರಂಭಮಾಡಿದವರು ಕೈ|| ವಾ|| ಬಸವಪ್ಪಶಾಸ್ತ್ರಿಗಳು. ಅವರ ಭಾಷಾಂತವನ್ನು ಮೀರಿಸಿದ ಶಾಕುಂತಲದ ಭಾಷಾಂತರವು ಇದುವರೆಗೆ ಇನ್ನೂ ಹುಟ್ಟಿಲ್ಲ. ಮುಂದೆ ಹುಟ್ಟುವ ಸಂಭವವೂ ಕಾಣುವುದಿಲ್ಲ. ಅವರಿಗೆ ಸರಿಸಮನಾದವರು ಶ್ರೀಮಾನ್ ಆಚಾರ್ಯರೆಂದರೆ ಕನ್ನಡ ಸಾಹಿತಿಗಳೆಲ್ಲರೂ ಒಪ್ಪುತ್ತಾರೆಂದು ನಂಬುತ್ತೇವೆ. ಬಸವಪ್ಪಶಾಸ್ತ್ರಿಗಳು ಅರ್ಧಾಂತಕವಾಗಿ ಮಾಡಿದ್ದ ಚಂಡಕೌಶಿಕವನ್ನು ಶ್ರೀ ಆಚಾರ್ಯರು ಕೊನೆಮುಟ್ಟಿಸಿದ್ದಾರೆ. ಇದು ಹೇಗೆ ಹೊಂದಿಕೊಂಡಿದೆ! ಇತರರು ಯಾರಾದರೂ ಆ ಕೆಲಸ ಮಾಡಿದ್ದರೆ ತೇಪೆ ಹಾಕಿದಂತಾಗುತ್ತಿತ್ತು. ಅದೇ ಶಕ್ತಿಯೆ ಅವರ 'ಸ್ವಪ್ನವಾಸವದತ್ತ' 'ಪಂಚರಾತ್ರ'ಗಳ ಭಾಷಾಂತರಗಳಲ್ಲಿಯೂ ಪಕ್ವವಾಗಿ ಕಂಡುಬರುತ್ತದೆ. ಅಂಥ ಕವಿಗಳಿಗೆ ಅಂಥ ಭಾಷಾಂತರ ಕರ್ತರೇ ಸಿಕ್ಕುತ್ತಾರೆ; ಕಾಳಿದಾಸನು ಒಬ್ಬ ಬಸವಪ್ಪಶಾಸ್ತ್ರಿಗಳನ್ನು ಸಂಪಾದಿಸಿದರೆ, ಭಾಸನು ಒಬ್ಬ ಅಳಸಿಂಗರಾಚಾರ್ಯರನ್ನು ಸಂಪಾದಿಸಿದ! ಇವುಗಳಿಂದ ಕವಿಗಳು ಎಷ್ಟು ಕೃತಾರ್ಥರೋ ಭಾಷಾಂತರಕಾರರೂ ಅಷ್ಟು ಕೃತಾರ್ಥರು! ಈ ಭಾಷಾಂತರಗಳು ಭಾವಪುಷ್ಟಿಯಲ್ಲಿಯೂ, ಸರಳತೆಯಲ್ಲಿಯೂ, ಪದಮೈತ್ರಿಯಲ್ಲಿಯೂ ಕೆಲವುಕಡೆ ಮೂಲವನ್ನು ಕೀಳಾಗಿಸಿವೆ.

ಶ್ರೀವರ್ಗ ಆಚಾರ್ಯರು ಶ್ರೀಮದ್ರಾಮಾಯಣ ಭಾಗವತ ಭಾರತಗಳನ್ನು ಕನ್ನಡಿಸಿರುವುದು ಈಗ ಹೆಂಗಸರು ಮಕ್ಕಳೆಲ್ಲರಿಗೂ ಕೂಡ ವಿದಿತವಾಗಿದೆ. ಅವು ಪಂಡಿತಪಾಮರರಿಗೆಲ್ಲರಿಗೂ ಮೆಚ್ಚುಗೆಯಾಗಿವೆ; ಹಿಡಿತವಾದ ಗಾತ್ರದಲ್ಲಿ, ಚಿಕ್ಕ ಆಕಾರದಲ್ಲಿ, ಸಚಿತ್ರವಾಗಿ, ಒಳ್ಳೆಯ ಅಚ್ಚು ರಟ್ಟುಗಳಿಂದ ಕೂಡಿ, ಶುದ್ಧವಾದ ಭಾಷೆಯಲ್ಲಿ ಬರೆದವುಗಳಾಗಿವೆ. ಇವು ಅವರ ಸೇವಾಸಾಹಸಗಳ ಪ್ರತೀಕವಾದ ತ್ರಿಮೂರ್ತಿಗಳಾಗಿ ಪ್ರತಿ ಕನ್ನಡಿಗರ ಮನೆಯಲ್ಲಿಯೂ ನಿಂತಿವೆ, ನಿಲ್ಲುತ್ತವೆ. ರಾಮ ಕೃಷ್ಣರ ಜೊತೆಗೆ ಅವರ ಹೆಸರೂ ಪೂಜೆಗೊಳ್ಳುತ್ತವೆ.

ಶ್ರೀ ಆಚಾರ್ಯರಲ್ಲಿ ಶಾಸ್ತ್ರ ಸಾಹಿತ್ಯ, ವೈದಿಕ ಲೌಕಿಕ, ಭಕ್ತಿ ಕರ್ಮ, ಇವು ಸಮರಸವಾಗಿ ಸೇರಿದ್ದುವು. ಅವರು ಕನ್ನಡಪ್ರಾಂತದಲ್ಲಿ ಹುಟ್ಟಿ ಬೆಳೆದು ಜ್ಞಾನ ಸಂಪಾದನೆಮಾಡಿ ಉದ್ಯೋಗದಲ್ಲಿದ್ದು, ಪರಪ್ರಾಂತಕ್ಕೆ ಹೋಗಿ ನೆಲಸಿ ಅಲ್ಲಿಯೂ ಸ್ಥಾನಮಾನಗಳನ್ನು ಸಂಪಾದಿಸಿ ಕನ್ನಡವನ್ನು ಬೆಳಸಿದರು. ಪ್ರಾಚೀನ ಪಂಡಿತರು ಆಧುನಿಕ ಸಾಹಿತ್ಯಕ್ಕೆ ರಚನಾತ್ಮಕವಾಗಿ ಹೇಗೆ ಸಹಾಯ ಮಾಡಬಹುದೆಂಬುದಕ್ಕೆ ಅವರು ಒಂದು ಒಳ್ಳೆಯ ದೃಷ್ಟಾಂತವಾಗಿದ್ದಾರೆಂದು ನಾವು ಭಾವಿಸುತ್ತೇವೆ.

---

## ಪ್ರಾಚ್ಯಲೇಖನಾವಳಿ

**Annals of the Sri Venkateswara Oriental Institute, Tirupati.—** September, 1940.

1. The Expression of the Emotions—P. S. Naidu, M.A.
2. Works on Arthasastra in Telugu—M. Ramakrishna Kavi, M.A.

**The Poona Orientalist.—**July–October, 1940.

1. Kumarila's Contributions to Philology and Mythology—H. G. Narahari, M.A.

**I.H.Q.—**September, 1940.

1. Indo-Europeans in the Mediterranean area—Dr. A. B. Keith.
2. The Andhras and their position in Brahminical Society—Dr. Dines Chandra Sarkar.
3. A large hoard of Satavahana Coins—Prof. V. V. Mirashi.
4. Baghaura Narayana image inscription of Mahipala—Dr. H. C. Ray.
5. Proto-Indian Ceramics—S. Srikantha Sastry, M.A.

**Bharatiya Vidya.—**November, 1940.

1. The Position of Linguistic Studies in India—V. S. Sukthankar.
2. Gommata—Dr. A. N. Upadhye.
3. Kuvalaya mala (A Jaina story of the 8th Century A.D.)—Prof. Jinavijiyaji Muni.

**J.A.O.S.—**September, 1940.

1. The Avyakṭa Upanishad—P. E. Dumont.
2. Fifteen Prakrit-Indo-European Etymologies—Louis H. Gray.

**Journal of Oriental Research.—**Jan.–March, 1940.

1. The Virupaksha Vasantotsava Champu of Ahobala (A Vijayanaga Kavya)—Dr. V. Raghavan.
2. Phonetic changes in Tamil words barrowed from Classical Sanskrit—M. R. Rajagopalaiengar, M.A., B.T.

**Indian Culture.—**April, 1940.

1. Alankara Sudhanidhi—M. P. L. Sastry, M.A.

2. Harsa's war with Pulakesin II—NALININATHADAS GUPTA, M.A.
3. Sources of two Krishna Legends—JOGENDRACHADRA GHOSH.

**Bulletin of the Deccan College Research Institute.**—Vol. II, Nos. 1–2.

1. Contributions on the study of Indo-European Accent—C. R. SANKARAN.
2. Some Ethno-psychological features in Dravidian—C. R. SANKARAN.

**The Indian Linguistics.**—Vol. VII, 1939.

The Demonstrative 'U' element in Dravidian—C. R. SANKARAN and G. S. GAI.

**ಭಾರತ ಇತಿಹಾಸ ಸಂಶೋಧಕ ಮಂಡಲದ ಪತ್ರಿಕೆ**—ಜುಲೈ, ೧೯೪೦.

References to Nose-ornament in some works ascribed to Sankaracharya and their effect on the Authorship and chronology of these works—P. K. GODE.

[All these works (ಸೌಂದರ್ಯಲಹರೀ, ತ್ರಿಪುರಸುಂದರೀ ಮಾನಸಪೂಜಾಸ್ತೋತ್ರ. ಮಂತ್ರಮಾತೃಕಾ ಪುಷ್ಪಮಾಲಾಸ್ತವ, ದೇವೀಚತುಃಷಷ್ಟ್ಯುಪಚಾರ, ಯಮುನಾಷ್ಟಕ, ಭ್ರಮರಾಷ್ಟಕ) containing the references to nose-ornament are not the works of Sankara and they were composed after A.D. 1000.]

Vide Annals of the Bhandarkar Institute, Vol. 19, pp. 313-332 "Antiquity of the Hindu nose-ornament called Nath."

**ಶರಣಸಾಹಿತ್ಯ**—ಅಕ್ಟೋಬರ್–ನವೆಂಬರ್, ೧೯೪೦.

ಬಿಳಗಿಯ ಶಿಲಾಶಾಸನಗಳು—ಶ್ರೀಮಾರ್ಗ ಕೀರ್ತನಕೇಸರಿ ಶಿವಮೂರ್ತಿಶಾಸ್ತ್ರಿಗಳು.

(ಇವುಗಳಲ್ಲಿ ಎರಡು, ಶಾಲಿವಾಹನಶಕ ೧೫೧೫ರಲ್ಲಿ 'ಭಟ್ಟಾಕಲಂಕಯತಿ' ಬರೆಸಿದವು.)

**ಶಿವಾನುಭವ**—ಅಕ್ಟೋಬರ್, ೧೯೪೦.

೧. ದೇವರ ದಾಸಿಮಯ್ಯ—ವೇ. ಬುದ್ಧಯ್ಯಾ ಸ್ವಾಮಿ ಪುರಾಣಿಕ.

(ದೇವರ ದಾಸಿಮಯ್ಯನೂ ಜೇಡರ ದಾಸಿಮಯ್ಯನೂ ಒಬ್ಬನೇ. ಜೇಡರ ದಾಸಿಮಯ್ಯ ಮತ್ತು ಶಂಕರ ದಾಸಿಮಯ್ಯ ಇವರು ಸಮಕಾಲೀನರು: ಅವರ ಕಾಲ ಸುಮಾರು ಕ್ರಿ.ಶ. ೧೦೪೦.)

೨. ಮಲತ್ರಯ—ರಾ. ಬಸವಪ್ಪ ಚೆನ್ನಪ್ಪ, ಪಟ್ಟೇದ.

೩. ಶಿವಾನುಭವ ಮಂಟಪದಲ್ಲಿ ಯಾರು ಇದ್ದರು?—ರಾ. ಪಿ. ಜಿ. ಹಳಕಟ್ಟಿ.

(ಈಗ ದೊರೆತಿರುವ ೨೩೭ ವಚನಕಾರರಲ್ಲಿ ಸುಮಾರು ೩೦ ಜನ ಮಾತ್ರ ಶಿವಾನುಭವ ಮಂಟಪದಲ್ಲಿದ್ದಿರಬೇಕು. ಇವರಲ್ಲದೆ ಬಸವೇಶ್ವರನಿಗಿಂತ ಹಿಂದೆ ಕೆಲವರು 'ಆದ್ಯ' ವಚನಕಾರರಿದ್ದರು: ಸಮಕಾಲೀನರು ಕೆಲವರು ಶಿವಾನುಭವ ಮಂಟಪದಲ್ಲಿರಲಿಲ್ಲ.)

೪. ಡಾ|| ಚಿಲಕೂರು ನಾರಾಯಣರಾಯರ ವಿಧಾನಗಳು—ರಾ. ಪಿ. ಜಿ. ಹಳಕಟ್ಟಿ.

(ವಚನಗಳ ಕಾಲ—'ವೀರಶೈವ ವಾಙ್ಮಯವು ಬಸವನ ಕಾಲದಲ್ಲಿರಲಿಲ್ಲ; ಅದು ಪಾಲ್ಕುರಿಕೆ ಸೋಮಾರಾಧ್ಯರ ತರುವಾಯ ಪ್ರಾರಂಭವಾಯಿತು; ವಚನಗ್ರಂಥಗಳನ್ನು ವಚನಕಾರರೇ ರಚಿಸಿರದೆ ಅವುಗಳನ್ನು ಯಾರೋ ಕೆಲವರು ಹಿಂದಿನಿಂದ ಅವರ ಹೆಸರಿನಿಂದ ರಚಿಸಿದ್ದಾರೆ' ಎಂಬ ಅಭಿಪ್ರಾಯದ ಖಂಡನೆ.)

೫. ಸಂಕೀರ್ಣ ವಚನಗಳು ಭಾಗ ೨.

೬. ಮುಕ್ತ್ಯಂಗನಾ ಕಂಠಮಾಲೆ.

**ಶಿವಾನುಭವ**—ನವೆಂಬರ್, ೧೯೪೦.

೧. ಹದಿಮೂರನೇ ಶತಮಾನದಲ್ಲಿ ವೀರಶೈವ ವಾಙ್ಮಯವಿದ್ದಿಲ್ಲವೇ ಹೇಗೆ?—ರಾ. ಪಿ. ಜಿ. ಹಳಕಟ್ಟಿ.

(೧೩ನೆಯ ಶತಮಾನದಲ್ಲಿ ವೀರಶೈವರ ಧರ್ಮದ ತೇಜಸ್ಸು ಎಳ್ಳಷ್ಟೂ ಕಡಿಮೆ ಯಾಗಿದ್ದಿಲ್ಲ: ೧೩೦೩ ರಿಂದ ಮುಂದೆ ಮುಸಲ್ಮಾನರ ದಾಳಿಗಳು ಪ್ರಾರಂಭವಾದ ಮೇಲೆ ಇದು ನಿಂತಿರಬೇಕು—ಅಬ್ಬಲೂರು, ಪುಳಜ, ಸಂಗೂರು, ಅರ್ಜುನವಾಡ ಮುಂತಾದ ಶಾಸನಗಳ ಆಧಾರ.)

೨. ಹರಿಹರನ ರಗಳೆಗಳು, ಭಾಗ ೮—ಬಾಹೂರ ಬೊಮ್ಮಯ್ಯನ ರಗಳೆ.

೩. ಸಂಕೀರ್ಣವಚನಗಳು, ಭಾಗ ೩—ಭಂಡಾರಿ ಶಾಂತಯ್ಯನ ವಚನಗಳು.

೪. ಮುಕ್ತ್ಯಂಗನಾ ಕಂಠಮಾಲೆ.

**ಶಿವಾನುಭವ**—ಡಿಸೆಂಬರ್, ೧೯೪೦.

೧. ಬಸವೇಶ್ವರನಕಿಂತಲೂ ಮೊದಲಿನ ವೀರಶೈವಧರ್ಮ—ರಾ. ಪಿ. ಜಿ. ಹಳಕಟ್ಟಿ.

(ಶಿಲಾಶಾಸನಗಳ ಮತ್ತು ಹಿಂದಿನ ಶಿವಶರಣರ ಚರಿತ್ರೆಯ ಆಧಾರ.)

೨. ಶಿವಾನುಭವ ಶಬ್ದಕೋಶ.

೩. ಸಂಕೀರ್ಣ ವಚನಗಳು, ಭಾಗ ೩.

೪. ಹರಿಹರನ ರಗಳೆಗಳು, ಭಾಗ ೮.

**ಜೀವನ—ಡಿಸೆಂಬರ್, ೧೯೪೦.**

'ಚಿತ್ರಭಾರತ'—ಶ್ರೀ ದ. ರಾ. ಬೇಂದ್ರೆ.

['ಚಿತ್ರಭಾರತ'ವೆಂಬ ಗ್ರಂಥದ ಸಮಗ್ರಪ್ರತಿಯೊಂದು ಹೊಸದಾಗಿ ದೊರೆತಿದೆ. (ಅಭಿಮನ್ಯು ವತ್ಸಲಾವಿವಾಹದ ಕಥೆಯೇ ಇದರ ವಸ್ತು) 'ನಂದೀಮಾಹಾತ್ಮ್ಯ'ವನ್ನು ಬರೆದ ಗೋವಿಂದ ಕವಿಯೇ ಇದನ್ನೂ ಬರೆದವನು. ಈತನ ಕಾಲ ಸು. ೧೬೦೦ ಎಂದೂ, ಇವನ 'ನಂದೀಮಾಹಾತ್ಮ್ಯ'ದಲ್ಲಿ ಲಕ್ಷ್ಮೀಶನ ಪ್ರಭಾವವು ಕಾಣಬರುವುದೆಂದೂ ಸಂಶೋಧಕರು ಈ ಮೊದಲೇ ಗೊತ್ತುಮಾಡಿದ್ದರು. ಈ ಗೋವಿಂದಕವಿಯ ಇನ್ನೊಂದು (ಬಹುಶಃ ಮೊದಲಿನ) ಕೃತಿಯಾದ ಚಿತ್ರಭಾರತವು ಕ್ರಿ.ಶ. ೧೫೮೧ ರಲ್ಲಿ ರಚಿತ ವಾಯಿತೆಂದು ಅದರಲ್ಲಿ ಉಲ್ಲೇಖಿಸಿರುವ ಸಂವತ್ಸರ ತಿಥಿ ನಕ್ಷತ್ರಾದಿಗಳಿಂದ ತಿಳಿಯ ಬರುವುದರಿಂದ, ಲಕ್ಷ್ಮೀಶನ ಕಾಲ ಇದಕ್ಕೂ ಹಿಂದೆ ಎಂಬುದು ನಿಶ್ಚಿತವಾಗಿ, ಅವನ ಕಾಲನಿರ್ಣಯಕ್ಕೆ "ಇನ್ನೊಂದು ಮೆಟ್ಟು" ದೊರೆತಂತಾಯಿತು.

ಇದರಲ್ಲಿ ಕವಿಯು 'ಚೈತ್ರ' 'ಶುಕ' ಎಂಬ ಪದಗಳಿಂದ (ಪೀಠಿಕೆ ಪದ್ಯ ೨೩) ಲಕ್ಷ್ಮೀಶಕುಮಾರವ್ಯಾಸರನ್ನು ಸ್ಮರಿಸುವನೋ ಏನೋ—ಎಂದು ಲೇಖಕರು ಅಭಿಪ್ರಾಯ ಪಡುತ್ತಾರೆ.]

# ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರ ಪುಸ್ತಕಮಾಲೆ

## ೧೯೩೮–೩೯ರಲ್ಲಿ ಅಚ್ಚಾಗಿರುವ ಪುಸ್ತಕಗಳು

ಬೆಲೆ: ಸಾಧಾರಣ ಪ್ರತಿಗೆ ೨ ಆಣೆ; ಉತ್ತಮ ಪ್ರತಿಗೆ ೩ ಆಣೆ

೧. ಖಗೋಳಶಾಸ್ತ್ರಪ್ರವೇಶ—ಸಿ. ಎನ್. ಶ್ರೀನಿವಾಸ ಅಯ್ಯಂಗಾರ್, ಡಿ.ಎಸ್‌ಸಿ.
೨. ಸಮಾಜದ ರೋಗರುಜಿನಗಳು—ಜಿ. ಹನುಮಂತರಾವ್, ಎಂ.ಎ.
೩. ತೆರಿಗೆ—ಬಿ. ಆರ್. ಸುಬ್ಬರಾವ್, ಎಂ.ಎ.
೪. ನವರತ್ನಗಳು—ಎಚ್. ಸುಬ್ಬಾಜೋಯಿಸ್, ಎಂ.ಎಸ್‌ಸಿ.
೫. ನಮ್ಮ ಹಳ್ಳಿಗಳು—ಜಿ. ಎನ್. ಕೃಷ್ಣಮೂರ್ತಿ, ಎಂ.ಎ.

## ೧೯೩೯–೪೦ರಲ್ಲಿ ಅಚ್ಚಾಗಿರುವ ಪುಸ್ತಕಗಳು

೬. ಕುಮಾರವ್ಯಾಸ—ಎಸ್. ವಿ. ರಂಗಣ್ಣ, ಎಂ.ಎ.
೭. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್, ಎಂ.ಎ.
೮. ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ, ಎಂ.ಎ.
೯. ವಿದ್ಯುಚ್ಛಕ್ತಿಯ ವೈಭವ—ಬಿ. ಎ. ಕೃಷ್ಣಸ್ವಾಮಿರಾವ್, ಎಂ.ಎಸ್‌ಸಿ.
೧೦. ಪಂಪ—ಟಿ. ಎನ್. ಶ್ರೀಕಂಠಯ್ಯ, ಎಂ.ಎ.
೧೧. ಪ್ರಾಣಜೀವನ—ಎ. ನಾರಾಯಣರಾವ್, ಎಂ.ಎಸ್‌ಸಿ.
೧೨. ಕನಸುಗಳು—ಎನ್. ಎಸ್. ನಾರಾಯಣಶಾಸ್ತ್ರಿ, ಎಂ.ಎ.
೧೩. ಮದುವೆಯ ಇತಿಹಾಸ—ಎನ್. ಕಸ್ತೂರಿ, ಎಂ.ಎ., ಬಿ.ಎಲ್.
೧೪. ನಮ್ಮ ಆರ್ಥಿಕ ದೃಷ್ಟಿ—ಎಸ್. ಗೋಪಾಲಸ್ವಾಮಿ, ಎಂ.ಎ.
೧೫. ವಾಯುಗುಣ—ಕೆ. ಶೇಷಾದ್ರಿ ಅಯ್ಯಂಗಾರ್, ಎಂ.ಎಸ್‌ಸಿ., ಎಲ್‌ಎಲ್.ಬಿ.
೧೬. ಬೆಳಕು—ಟಿ. ಎಸ್. ಸುಬ್ಬರಾಯ, ಎಂ.ಎಸ್‌ಸಿ.
೧೭. ಕನ್ನಡ ಕಾದಂಬರಿ—ವಿ. ಸೀತಾರಾಮಯ್ಯ, ಎಂ.ಎ.

## ೧೯೪೦–೪೧ ರಲ್ಲಿ ಅಚ್ಚಾಗಿರುವ ಪುಸ್ತಕಗಳು

೧೮. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್, ಎಂ.ಎ.
೧೯. ಇಂಗ್ಲೆಂಡಿನ ರಾಜಕೀಯ ಬೆಳವಣಿಗೆ—ಪಿ. ಜಿ. ಸತ್ಯಗಿರಿನಾಥನ್, ಎಂ.ಎ.
೨೦. ಕಣ್ಣು ಮತ್ತು ಅದರ ರಕ್ಷಣೆ—ಡಾ|| ಡಿ. ಶಾಮಣ್ಣ, ಬಿ.ಎ., ಎಂ.ಬಿ., ಬಿ.ಎಸ್.
೨೧. ಸಾರ್ವಜನಿಕ ವೆಚ್ಚ—ಎಂ. ಎಚ್. ಗೋಪಾಲ್, ಎಂ.ಎ., ಪಿಎಚ್.ಡಿ.
೨೨. ಶಿಶುವಿಹಾರಗಳು—ಸಿ. ರಂಗಾಚಾರ್, ಬಿ.ಎಸ್‌ಸಿ., ಎಂ.ಎಡ್.

ವಾರ್ಷಿಕ ಚಂದಾ—ಸಾಧಾರಣ ಪ್ರತಿ ರೂ. ೧—೪—೦
ಉತ್ತಮ ಪ್ರತಿ ರೂ. ೨—೦—೦

**ಜಿ. ಹನುಮಂತರಾವ್, ಎಂ.ಎ.,**
ಸಂಪಾದಕ, ಪ್ರಚಾರ ಪುಸ್ತಕಮಾಲೆ,
ಮಹಾರಾಜರವರ ಕಾಲೇಜು, ಮೈಸೂರು.

# ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ

ಪ್ರಧಾನಸಂಪಾದಕರು : ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್.

೧. **ಹರಿಶ್ಚಂದ್ರಕಾವ್ಯ ಸಂಗ್ರಹ** (ತೃತೀಯ ಮುದ್ರಣ)—ಸಂಪಾದಕರು : ಟಿ. ಎಸ್. ವೆಂಕಣ್ಣಯ್ಯ, ಎಂ.ಎ. ಮತ್ತು ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ.; ಬೆಲೆ : ೦—೧೨—೦.

೨. **ಕರ್ಣಾಟಕ ಕಾದಂಬರೀ ಸಂಗ್ರಹ**—ಸಂಪಾದಕರು : ಟಿ. ಎಸ್. ವೆಂಕಣ್ಣಯ್ಯ, ಎಂ.ಎ. ; ಬೆಲೆ : ೦—೧೨—೦.

೩. **ಪ್ರಭುಲಿಂಗಲೀಲೆಯ ಸಂಗ್ರಹ** (ಸಚಿತ್ರ)—ಸಂಪಾದಕರು : ಎಂ. ಎಸ್. ಬಸವಲಿಂಗಯ್ಯ, ಎಂ.ಎ., ಬಿ.ಎಲ್. ಮತ್ತು ಎಂ. ಆರ್. ಶ್ರೀನಿವಾಸ ಮೂರ್ತಿ, ಬಿ.ಎ. ; ಬೆಲೆ : ೦—೧೨—೦.

೪. **ಸಾಕ್ರೆಟೀಸನ ಕೊನೆಯ ದಿನಗಳು** (ಸಚಿತ್ರ)—ಅನುವಾದಕರು : ಎ. ಎನ್. ಮೂರ್ತಿರಾವ್, ಎಂ.ಎ.; ಬೆಲೆ : ಕ್ಯಾಲಿಕೊ ರೂ. ೧; ಸಾದಾ ೧೨ ಆಣೆ.

೫. **ಶ್ರೀರಾಮಕೃಷ್ಣ ಪರಮಹಂಸ**—ಲೇಖಕರು : ಕೆ. ವಿ. ಪುಟ್ಟಪ್ಪ, ಎಂ.ಎ. ; ಬೆಲೆ : ಕ್ಯಾಲಿಕೊ ರೂ. ೧—೪—೦, ಸಾದಾ ೧೨ ಆಣೆ.

೬. **ರವೀಂದ್ರನಾಥ ಠಾಕೂರರು** (ಸಚಿತ್ರ)—ಲೇಖಕರು : ಮಾಸ್ತಿ ವೆಂಕಟೇಶ ಐಯಂಗಾರ್, ಎಂ.ಎ. ; ಬೆಲೆ : ಕ್ಯಾಲಿಕೊ ಪ್ರತಿ, ರೂ. ೧—೪—೦ ; ಸಾದಾ ಪ್ರತಿ, ೦—೧೨—೦.

೭. **ಆರೋಗ್ಯ ಅದರ ಜ್ಞಾನ ಮತ್ತು ಸಾಧನ** (ಸಚಿತ್ರ)—ಲೇಖಕರು : ಜೆ. ಎ. ಈಶ್ವರ ಮೂರ್ತಿ, ಬಿ.ಎ., ಎಲ್.ಎಂ.ಎಸ್., ಬಿ.ಎಸ್.ಎಸ್‌ಸಿ. ; ಬೆಲೆ : ಕ್ಯಾಲಿಕೊ ಪ್ರತಿ, ರೂ. ೧—೪—೦ ; ಸಾದಾ ಪ್ರತಿ, ೦—೧೨—೦.

೮. **ಪಂಪರಾಮಾಯಣ ಸಂಗ್ರಹ**—ಸಂಪಾದಕರು: ಆಸ್ಥಾನಮಹಾವಿದ್ವಾನ್ ತಿರುವಳ್ಳೂರ್ ಶ್ರೀನಿವಾಸರಾಘವಾಚಾರ್ ಮತ್ತು ಡಿ. ಎಲ್. ನರಸಿಂಹಾ ಚಾರ್, ಎಂ.ಎ. ; ಬೆಲೆ : ಕ್ಯಾಲಿಕೊ ರೂ. ೧ ; ಸಾದಾ ೧೨ ಆಣೆ.

೯. **ಹಣ ಪ್ರಪಂಚ**—ಲೇಖಕರು : ವಿ. ಸೀತಾರಾಮಯ್ಯ, ಎಂ.ಎ. ; ಬೆಲೆ : ಕ್ಯಾಲಿಕೊ ಪ್ರತಿ, ರೂ. ೧—೪—೦ ; ಸಾದಾ ಪ್ರತಿ, ೦—೧೨—೦.

೧೦. **ಸಂಸ್ಕೃತ ನಾಟಕ**—ಲೇಖಕರು : ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ. ; ಬೆಲೆ : ಕ್ಯಾಲಿಕೊ ಪ್ರತಿ, ರೂ. ೧—೪—೦ ; ಸಾದಾ ಪ್ರತಿ, ೦—೧೨—೦.

೧೧. **ಜೀವವಿಜ್ಞಾನ**—ಲೇಖಕರು : ಬಿ. ವೆಂಕಟನಾರಾಯಣಪ್ಪ, ಎಂ.ಎ. ; ಕ್ಯಾಲಿಕೊ ಪ್ರತಿ ರೂ. ೧—೪—೦ ; ಸಾದಾ ಪ್ರತಿ ೦—೧೨—೦.

೧೨. **ಹಿಂದೂದರ್ಶನಸಾರ**—ಲೇಖಕರು : ಮ|| ಪಂಡಿತರತ್ನಂ ಲಕ್ಷ್ಮೀಪುರಂ ಶ್ರೀನಿವಾಸಾಚಾರ್ಯರು ; ಬೆಲೆ : ಸಾದಾ ಪ್ರತಿ ೧೨ ಆಣೆ ; ಕ್ಯಾಲಿಕೊ ರೂ. ೧—೪—೦.

**ಕ್ಯೂರೇಟರ್, ಓರಿಯೆಂಟಲ್ ಲೈಬ್ರರಿ, ಮೈಸೂರು.**

# ಪ್ರಬುದ್ಧ ಕರ್ಣಾಟಕ

## ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಪತ್ರಿಕೆ

'ಪ್ರಬುದ್ಧ ಕರ್ಣಾಟಕ'ವು ವಿನಾಯಕನ ಹಬ್ಬ, ದೀಪಾವಳಿಯ ಹಬ್ಬ, ಸಂಕ್ರಾಂತಿಯ ಹಬ್ಬ, ಕಾಮನ ಹಬ್ಬ—ಈ ಹಬ್ಬಗಳ ಹೊತ್ತಿಗೆ ವರ್ಷಕ್ಕೆ ನಾಲ್ಕು ಸಲ ಹೊರಡುತ್ತದೆ.

ವಾರ್ಷಿಕ ಚಂದಾ (ಅಂಚೆವೆಚ್ಚ ಸೇರಿ):

| | | | | |
|---|---|---|---|---|
| ಚಂದಾದಾರರಿಗೆ | ರೂ. | ೨ | ೦ | ೦ |
| ವಾಚನಾಲಯ ಮುಂತಾದ ಸಂಸ್ಥೆಗಳಿಗೆ | ರೂ. | ೩ | ೦ | ೦ |
| ವಿದ್ಯಾರ್ಥಿಗಳಿಗೆ ಮಾತ್ರ | ರೂ. | ೧ | ೮ | ೦ |

ಚಂದಾಹಣವನ್ನು ಕಾರ್ಯದರ್ಶಿ, ಪ್ರಚಾರ ಮತ್ತು ಪ್ರಕಾಶನ ಕಾರ್ಯ, ಮಹಾರಾಜರವರ ಕಾಲೇಜು, ಮೈಸೂರು ಎಂಬ ವಿಳಾಸಕ್ಕೆ ಕಳುಹಿಸಬೇಕು. (ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರರವರಿಗೆ ಕಳುಹಿಸಬಾರದು.) ಮೈಸೂರು ವಿಶ್ವ ವಿದ್ಯಾನಿಲಯದ ವಿದ್ಯಾರ್ಥಿಗಳು ಚಂದಾಹಣವನ್ನು ತಮ್ಮ ತಮ್ಮ ಕಾಲೇಜಿನ ಅಧ್ಯಕ್ಷರಿಗೆ ಮುಂಗಡವಾಗಿ ಸಲ್ಲಿಸಿ, ಪಡೆದ ರಸೀತಿಯನ್ನು ತಮ್ಮ ವಿಳಾಸದೊಂದಿಗೆ ಈ ಪತ್ರಿಕೆಯ ಸಂಪಾದಕರಿಗೆ ಕಳುಹಿಸಿಕೊಡಬೇಕು. ಕಾಲೇಜುಗಳ ಅಧ್ಯಾಪಕ ವರ್ಗದವರೂ ಇದೇ ರೀತಿ ಮಾಡಬಹುದು.

'ಪ್ರಬುದ್ಧ ಕರ್ಣಾಟಕ'ದಲ್ಲಿ ಪ್ರಕಟನೆಗಾಗಿ ಲೇಖನಗಳನ್ನೂ ವಿಮರ್ಶೆಗಾಗಿ ಗ್ರಂಥಗಳನ್ನೂ ವಿನಿಮಯಕ್ಕಾಗಿ ಪತ್ರಿಕೆಗಳನ್ನೂ ಈ ಕೆಳಗಿನ ವಿಳಾಸಕ್ಕೆ ಕಳುಹಿಸಬೇಕು.—

**ಸಂಪಾದಕ,**
**'ಪ್ರಬುದ್ಧ ಕರ್ಣಾಟಕ',**
**ಮಹಾರಾಜರವರ ಕಾಲೇಜು, ಮೈಸೂರು.**

# ಪ್ರಕಟನೆ

**"ಪ್ರಬುದ್ಧ ಕರ್ಣಾಟಕ"ದ ೧೭ರಿಂದ ೨೦ರ ವರೆಗಿನ ಸಂಪುಟಗಳು, ಪೂರ್ತಿ ಸಂಪುಟ ಒಂದಕ್ಕೆ (ನಾಲ್ಕು ಸಂಚಿಕೆಗಳು) ಎಂಟಾಣೆಯಂತೆಯೂ, ಬಿಡಿ ಸಂಚಿಕೆ ಒಂದಕ್ಕೆ ಮೂರಾಣೆಯಂತೆಯೂ ದೊರೆಯುತ್ತವೆ.**

**ವಿ.ಪಿ. ಮುಂತಾದ ಅಂಚೆ ವೆಚ್ಚ ಬೇರೆ.**

ಕಾರ್ಯದರ್ಶಿ,
**ಪ್ರಚಾರ ಮತ್ತು ಪ್ರಕಾಶನ ಕಾರ್ಯ,**
ಮಹಾರಾಜರವರ ಕಾಲೇಜು, ಮೈಸೂರು.

14.3.41




# ಪ್ರಬುದ್ಧ ಕರ್ಣಾಟಕ

ವಿಕ್ರಮ ಸಂವತ್ಸರ] — ೮೬ — [ಕಾಮುನ ಸಂಚಿಕೆ






ಮೈಸೂರು :

ಮೈಸೂರು ವಿಶ್ವವಿದ್ಯಾನಿಲಯ

೧೯೪೧

ಸಂಪುಟ ೨೨] [ಸಂಚಿಕೆ ೪

# ವಿಷಯ ಸೂಚಿಕೆ



ಕೊಲ್ಹಾಪುರದ ಶ್ರೀ ಮಹಾಲಕ್ಷ್ಮೀಗುಡಿಯ ದೃಶ್ಯ




ವಿಕ್ರಮ ಸಂವತ್ಸರ — ೮೬ — ಕಾಮನ ಸಂಚಿಕೆ

# ಕೀರ್ತಿಶನಿ

ಪೀಡಿಸುತ್ತಿಹೆ ಏಕೆ? ತೊಲಗಾಚೆ, ಕೀರ್ತಿಶನಿ ;
ಸಾಕೆನಗೆ ನಿನ್ನ ಸಹವಾಸ ವಿಭವಭ್ರಾಂತಿ !
ಬಾ ಬಳಿಗೆ, ಸಾಮಾನ್ಯತಾದೇವಿ, ಓ ಶಾಂತಿ :
ನನ್ನೆದೆಯ ತಂತಿಯಿಂ ಮಿಾಂಟುತಿದೆ ನಿನ್ನ ದನಿ
ಬ್ರಹ್ಮನಾಡಿಯ ಗುಹ್ಯಗಾನಮಂ. ಋಷಿಮಾನ್ಯೆ,
ಗುರುಕೃಪಾ ಮಹಿಮೆಯಿಂ ರಸದರ್ಶಿ ನಾನಾಗಿ,
ಜಸದ ಕಸುಗಾಯಿ ಹೆಸರೆಳಸದಿಹ ಹಣ್ಣಾಗಿ
ನೋಂತಿರುವುದಸ್ತುತಿಗೆ. ತೃಪ್ತಿಯ ಕಮಲಕನ್ಯೆ,
ಕೀರ್ತಿಯ ಮದಿರೆಯಿಲ್ಲದೆಯೆ ಕರ್ಮಗೆಯ್ಯಲ್ಕೆ
ಚೈತನ್ಯವಿರದವರಿಗಿರಲಾ ದರಿದ್ರತಾ
ಸಾನಭೋಗಂ. ಪೊನ್ಗೆ ಮಣ್ಗೆ ಪೆಣ್ಗಿಂ ಮಿಗಿಲ್
ಕೀರ್ತಿ ಸಪ್ತಮವ್ಯೆರಿ; ಏಕೆನೆ ತಿರೆವೊಗಳ್ಕೆ
ಮಾಲೆಯಿಕ್ಕಿದೆ ತನ್ನ ಮೆಚ್ಚನ್ : ಆ ಕ್ಷುದ್ರತಾ
ಭೂತಕ್ಕೆ ನಿತ್ಯಬಲಿ : ಆಳ್, ಬಾಳ್, ನೆಲಂ, ನೀರ್, ಮುಗಿಲ್ !

ಕೆ. ವಿ. ಪುಟ್ಟಪ್ಪ

---

# ಬಳೆಗಾರನ ಹಾಡು

ಬಳೆಗಾರ ಚೆನ್ನಯ್ಯ ಬಾಗಿಲಿಗೆ ಬಂದಿಹೆನು ;
ಒಳಗೆ ಬರಲಪ್ಪಣೆಯೆ, ದೊರೆಯೇ ?
ನವಿಲೂರ ಮನೆಯಿಂದ ಸುಡಿಯೊಂದ ತಂದಿಹೆನು.
ಬಳೆಯ ತೊಡಿಸುವುದಿಲ್ಲ ನಿಮಗೆ.

ಮುಡಿದ ಮಲ್ಲಿಗೆಯರಳು ಬಾಡಿಲ್ಲ, ರಾಯರೇ,
ತೌರಿನಲಿ ತಾಯಿ ನಗುತಿಹರು.
ಕುಡಿದ ನೀರಲುಗಿಲ್ಲ ; ಕೊರಗದಿರಿ, ರಾಯರೇ.—
ಅಮ್ಮನಿಗೆ ಬಳೆಯ ತೊಡಿಸಿದರು.

ಅಂದು ಮಂಗಳವಾರ ನವಿಲೂರ ಕೇರಿಯಲಿ
ಓಲಗದ ಸದ್ದು ತುಂಬಿತ್ತು ;
ಬಳೆಯ ತೊಡಿಸಿದರಂದು ಅಮ್ಮನಿಗೆ ತೌರಿನಲಿ
ಅಂಗಳದ ತುಂಬ ಜನವಿತ್ತು.

ಹಬ್ಬದೂಟವನುಂಡು ಹಸೆಗೆ ಬಂದರು ತಾಯಿ ;
ಹೊಳೆದಿತ್ತು ಕೊರಳಿನಲಿ ಪದಕ.
ಒಬ್ಬರೇ ಹಸೆಗೆ ಬಂದರು ತಾಯಿ ಬಿಂಕದಲಿ
ಕಣ್ತುಂಬ ನೋಡಿದೆನು ಮುದುಕ.

ಸಿರಿಗೌರಿಯಂತೆ ಬಂದರು ತಾಯಿ ಹಸೆಮಣೆಗೆ
ಸೆರಗಿನಲಿ ಕಣ್ಣೀರನೊರಸಿ ;
ಸುಖದೊಳಗೆ ನಿಮ್ಮ ನೆನೆದರು ತಾಯಿ, ಗುಣವಂತೆ,
ದೀಪದಲಿ ಬಿಡುಗಣ್ಣ ನಿಲಿಸಿ.

ಬೇಕಾದ ಹಣ್ಣಿಹುದು, ಹೂವಿಹುದು ತೌರಿನಲಿ
ಹೊಸಸೀರೆ, ರತ್ನದಾಭರಣ.
ತಾಯಿ ಕೊರಗುವರಲ್ಲಿ ನೀವಿಲ್ಲದೂರಿನಲಿ ;
ನಿಮಗಿಲ್ಲ ಒಂದು ಹನಿ ಕರುಣ.

ದಿನವಾದ ಬಸುರಿ ಉಸ್ಸೆಂದು ನಿಟ್ಟುಸಿರೆಳೆದು
ಕುದಿಯಬಾರದು, ನನ್ನ ದೊರೆಯೇ—
ಹಿಂಡಬಾರದು ದುಂಡುಮಲ್ಲಿಗೆಯ ದಂಡೆಯನು ;
ಒಣಗಬಾರದು ಒಡಲ ಚಿಲುಮೆ.

ಮುಳಿಸು ಮಾವನ ಮೇಲೆ ; ಮಗಳೇನ ಮಾಡಿದಳು
ನಿಮಗೇತಕೀ ಕಲ್ಲುಮನಸು ?
ಹೋಗಿ ಬನ್ನಿರಿ ಒಮ್ಮೆ, ಕೈಮುಗಿದು ಬೇಡುವೆನು
ಅಮ್ಮನಿಗೆ ನಿಮ್ಮದೇ ಕನಸು.

ಕೆ. ಎಸ್. ನರಸಿಂಹಸ್ವಾಮಿ.

# ವಿಜಯನಗರ ಕಾಲದ ಕನ್ನಡ ಸಾಹಿತ್ಯ

## (ಕ್ರಿ.ಶ. ೧೩೩೬-೧೫೬೫)

ದಕ್ಷಿಣಾಪಥದಲ್ಲಿ, ಅದರಲ್ಲೂ ಕರ್ಣಾಟಕದ ಚರಿತ್ರೆಯಲ್ಲಿ ಹದಿನಾಲ್ಕನೆಯ ಶತಮಾನದ ಆದಿಭಾಗವು ಬಹಳ ಗಮನಾರ್ಹವಾದದ್ದು. ಉತ್ತರ ಇಂಡಿಯದಲ್ಲಿ ಭದ್ರವಾಗಿ ನೆಲಸಿದ್ದ ಪರಕೀಯ ಸಂಸ್ಕೃತಿ ಕರ್ಣಾಟಕಕ್ಕೆ ನುಗ್ಗಿ ಧಾಳಿ ನಡೆಸಿ ಹಿಂದೂಸಂಸ್ಕೃತಿಯನ್ನು ನಾಶಮಾಡುತ್ತಿದ್ದುದನ್ನು ತಡೆಗಟ್ಟಲು ಎಲ್ಲರೂ ಒಟ್ಟಾಗಿ ಸೇರಿ ಪ್ರಯತ್ನಪಟ್ಟ ಕಾಲ ಅದು. ಆ ಪರಕೀಯ ಸಂಸ್ಕೃತಿಗೆ ಸೇರಿದವರು ಮಹಮ್ಮದನ ಮತದ ಅನುಯಾಯಿಗಳು. ಅವರು ಹೊಸಹೊಸ ದೇಶಗಳನ್ನು ಹುಡುಕಿಕೊಂಡು ಬಂದು ಇಂಡಿಯಾಕ್ಕೆ ನುಗ್ಗಿದ ಸಾಹಸಿಗಳ ಗುಂಪಿಗೆ ಸೇರಿದವರು. ತಮ್ಮನ್ನು ಎದುರಿಸಿದ ಹಿಂದುಗಳಿಗಿಂತ ಧೈರ್ಯಶಾಲಿಗಳೂ ದೃಢಕಾಯರೂ ಶಕ್ತಿಯುತರೂ ಆಗಿದ್ದರು. ತಾವೆಲ್ಲ ಒಂದು ಎಂಬ ಒಗ್ಗಟ್ಟಿನ ಭಾವನೆ ಅವರಲ್ಲಿ ಹೆಚ್ಚಾಗಿತ್ತು. ಆದುದರಿಂದಲೇ ರಾಜ್ಯವನ್ನು ಕಟ್ಟುವ ಪ್ರಯತ್ನದಲ್ಲಿ ಅವರಿಗೆ ಜಯ ದೊರೆತು ಉತ್ತರ ಇಂಡಿಯದ ಬಹುಭಾಗವು ಅವರ ವಶವಾಯಿತು. ಈಗ ಅವರು ವಿಂಧ್ಯಪರ್ವತದ ದಕ್ಷಿಣಕ್ಕಿರುವ ದೇಶದಮೇಲೆ ತಮ್ಮ ದುರಾಶೆಯ ದೃಷ್ಟಿಯನ್ನು ಬೀರಿದರು. ಆಗ ದಕ್ಷಿಣಾಪಥದ ರಾಜಕೀಯ ಪರಿಸ್ಥಿತಿಯು ಅಷ್ಟೇನೂ ತೃಪ್ತಿಕರವಾಗಿರಲಿಲ್ಲ. ಮುಖ್ಯ ರಾಜಮನೆತನದವರಾದ ಯಾದವ ಮತ್ತು ಹೊಯ್ಸಳ ವಂಶಗಳು ಒಂದಕ್ಕೊಂದು ಶತ್ರುಗಳಾಗಿದ್ದುದರಿಂದ ರಾಜ್ಯ ಸುರಕ್ಷಿತವಾಗಿರಲಿಲ್ಲ. ದಕ್ಷಿಣಾಪಥವನ್ನು ವಶಪಡಿಸಿಕೊಳ್ಳುವುದಕ್ಕೆ ಅಲ್ಲಾವುದ್ದೀನನು ಮಲ್ಲಿಕಾಫರನನ್ನು ಕಳುಹಿಸಲು ಈ ಪರಿಸ್ಥಿತಿಯು ಉತ್ತೇಜಕವಾಯಿತು. ಮೊದಲು ದೇವಗಿರಿಯ ಯಾದವರು ಇವನ ವಶರಾದರು; ಸ್ವಲ್ಪಕಾಲದಲ್ಲೇ ಹೊಯ್ಸಳರೂ ಇವನಿಗೆ ಸೋಲಬೇಕಾಯಿತು. ವಿದ್ಯಾರಣ್ಯರೇ ಮೊದಲಾದ ಮುಂದಾಳುಗಳು ಮುಂದೆ ಬರಬಹುದಾದ ತೊಂದರೆಗಳನ್ನು ಕಂಡುಕೊಂಡು ಓರಂಗಲ್ಲಿನಲ್ಲಿ ಹಿಂದೆ ಅಧಿಕಾರಿಗಳಾಗಿದ್ದ ಉತ್ಸಾಹಿಗಳಾದ ಹಕ್ಕ ಬುಕ್ಕ ಎಂಬಿಬ್ಬರ ಸಹಾಯದಿಂದ ತುಂಗಭದ್ರಾನದಿಯ ತೀರದಲ್ಲಿ ಒಂದು ಸಣ್ಣ ರಾಜ್ಯವನ್ನು ಸ್ಥಾಪಿಸಿ ಒಂದೇ ರಾಜಧ್ವಜದ ಕೆಳಗೆ ಜನರು ಒಗ್ಗೂಡುವಂತೆ ಮಾಡಿದರು. ಆಗಿನ ಕಾಲವು ಬಹಳ ಉತ್ಸಾಹದ ಮತ್ತು ಚಟುವಟಿಕೆಯ ಕಾಲವಾಗಿರಬೇಕು. ಈ ಸಣ್ಣರಾಜ್ಯವು ಮೆಲ್ಲಮೆಲ್ಲನೆ ಬೆಳೆಯುತ್ತ ಬಂದು ಕೊನೆಗೆ

ಪ್ರಸಿದ್ಧವಾದ ವಿಜಯನಗರ ಸಾಮ್ರಾಜ್ಯವಾಗಿ ಪರಿಣಮಿಸಿತು. ಪರಕೀಯರ ರಾಜಕೀಯ ಮತ್ತು ಸಾಂಸ್ಕೃತಿಕ ಧಾಳಿಯನ್ನು ತಡೆಗಟ್ಟುವ ಪ್ರಯತ್ನದಲ್ಲಿ ಜಯ ಶಾಲಿಯಾಗಿ ಸುಮಾರು ಎರಡೂವರೆ ಶತಮಾನಗಳ ವರೆಗೆ ಸ್ಥಿರವಾಗಿ ನಿಂತಿತು. ಈ ರಾಜ್ಯವನ್ನು ಸ್ಥಾಪಿಸಲು ಕಾರಣರಾದ ಮತ್ತು ಇದಕ್ಕೆ ಸಂಬಂಧಿಸಿದ ಇತರ ನಾಯಕರ ಅದ್ಭುತ ಸಹಾಯವಿಲ್ಲದೆ ಹೋಗಿದ್ದರೆ ಹಿಂದೂಮತವು ಬಹಳ ಕಷ್ಟಗಳಿಗೆ ಈಡಾಗಬೇಕಾಗಿತ್ತು. ಜನರ ಆವಶ್ಯಕತೆಯ ಸಲುವಾಗಿ, ಅವರ ಇಚ್ಛೆಯ ಪರಿಣಾಮವಾಗಿ ವಿಜಯನಗರ ಸಾಮ್ರಾಜ್ಯಸ್ಥಾಪನೆಯು ಸಮಯೋಚಿತವಾಗಿ ಆಯಿತು. ಕಾಲಧರ್ಮಕ್ಕೆ ಅನುಗುಣವಾಗಿ ಈ ರಾಜ್ಯಸ್ಥಾಪನೆ ನಡೆದದ್ದು ಗಮನಿಸಬೇಕಾದ ಅಂಶ.

ಇದಕ್ಕೂ ಸಾಹಿತ್ಯಕ್ಕೂ ಏನು ಸಂಬಂಧವೆಂದು ಕೇಳಬಹುದು. ಒಂದು ಜನಾಂಗದ, ಒಂದು ಕಾಲದ, ಸಾಹಿತ್ಯ ಆ ಕಾಲವನ್ನೂ ಅವರ ಜೀವನವನ್ನೂ ಆಲೋಚನೆಗಳನ್ನೂ ಪ್ರತಿಬಿಂಬಿಸುವುದೆಂಬುದು ಸಾಹಿತ್ಯವಿಮರ್ಶೆಯಲ್ಲಿ ಅಂಗೀಕೃತ ವಾದ ವಿಷಯ; ಈ ಪ್ರತಿಬಿಂಬ ಕೆಲವು ವೇಳೆ ವಾಸ್ತವಿಕವಾಗಿರಬಹುದು; ಕೆಲವು ವೇಳೆ ಆದರ್ಶೀಕೃತವಾಗಿರಬಹುದು. ಆದ್ದರಿಂದ ವಿಜಯನಗರ ಕಾಲದ ಸಾಹಿತ್ಯದ ಗಾಢವಾದ ಅಭ್ಯಾಸವು ಆಗಿನ ಕಾಲದ ಜೀವನವನ್ನು ಸ್ವಲ್ಪಮಟ್ಟಿಗಾದರೂ ತಿಳಿಯಲು ಸಹಾಯಮಾಡುತ್ತದೆಂದು ಹೇಳಬಹುದು. ಆ ಕಾಲದಲ್ಲಿ ಹುಟ್ಟಿದ ಗ್ರಂಥಗಳು ಸಂಖ್ಯೆಯಲ್ಲಿ ಅಪಾರವಾಗಿ ಗುಣವಿಶೇಷದಲ್ಲಿ ಬೇರೆ ಬೇರೆಯಾಗಿ ಇರುವುದರಿಂದ ಈ ಪ್ರಬಂಧದಲ್ಲಿ ಅವುಗಳ ಸಂಪೂರ್ಣ ಅವಲೋಕನ ಅಸಾಧ್ಯ. ಆ ಸಾಹಿತ್ಯವನ್ನು ಓದಿದಮೇಲೆ ಅದರಿಂದ ತಿಳಿದುಬರುವ ವಿಷಯಗಳನ್ನು ಅದೇ ಕಾಲದಲ್ಲಿ ಹೇರಳವಾಗಿ ಹುಟ್ಟಿದ ತೆಲುಗು ತಮಿಳು ಮತ್ತು ಸಂಸ್ಕೃತ ಭಾಷೆಗಳ ಸಾಹಿತ್ಯಗಳಿಂದ ತಿಳಿದು ಬರುವ ವಿಷಯಗಳೊಂದಿಗೆ ಹೋಲಿಸಿ ಸಂಬಂಧ ಕಲ್ಪಿಸುವ ಕೆಲಸ ಆವಶ್ಯಕ ವಾಗಿದ್ದರೂ ಈಗ ಪ್ರಕೃತಕ್ಕೆ ಬೇಕಾಗಿರುವ ಕಾಲದ ಕನ್ನಡ ಸಾಹಿತ್ಯವನ್ನು ಮಾತ್ರ ಕುರಿತು ಹೇಳಬೇಕಾಗಿದೆ. ಆ ಕಾಲದಲ್ಲಿ ಹೊರಬಿದ್ದ ಎಲ್ಲ ಗ್ರಂಥಗಳ ಪೂರ್ಣಪರಿಚಯ ಮಾಡಿಕೊಂಡಿದ್ದೇನೆಂದು ಹೇಳಿಕೊಳ್ಳದೆ ಈ ಲೇಖನದಲ್ಲಿ ಕರ್ನಾಟಕದ ಸಾಹಿತ್ಯದಲ್ಲಿ ಎಷ್ಟರಮಟ್ಟಿಗೆ ಚಟುವಟಿಕೆ ಇತ್ತು, ಜನಜೀವನಕ್ಕೆ ಎಷ್ಟರಮಟ್ಟಿಗೆ ಸಾಹಿತ್ಯವು ಸಂಬಂಧಿಸಿತ್ತು ಎಂದು ಹೇಳಲು ಪ್ರಯತ್ನಪಡಬಹುದು. ಕನ್ನಡ ಸಾಹಿತ್ಯವನ್ನು ಕುರಿತು ಬರೆಯುವ ಯಾರೇ ಆಗಲಿ "ಕರ್ನಾಟಕ ಕವಿಚರಿತೆ"ಯ ಮೂರು ಭಾಗ ಗಳಿಂದ ಆಗುವ ಸಹಾಯವನ್ನು ಹೇಳದೆ ಇರುವುದು ಅಸಾಧ್ಯ. ಈ ಗ್ರಂಥಕರ್ತರಾದ ಮಹಾಮಹೋಪಾಧ್ಯಾಯ, ರಾವ್‌ಬಹದ್ದೂರ್ ರಾ. ನರಸಿಂಹಾಚಾರ್ಯ, ಎಂ.ಎ.,

ಇತ್ಯಾದಿ ಅವರು ಈ ಮೂರು ಭಾಗಗಳನ್ನು ಬರೆಯಲು ಸುಮಾರು ಮೂವತ್ತು ವರ್ಷಗಳ ಕಾಲ ಶ್ರಮಪಡಬೇಕಾಯಿತು.

## ಹಿನ್ನೆಲೆ

ವಿಜಯನಗರದ ಪ್ರಭಾವಕ್ಕೆ ಕನ್ನಡಸಾಹಿತ್ಯ ಸಿಕ್ಕುವ ಮೊದಲೇ ನಡೆದ ಎರಡು ದೊಡ್ಡ ಸಾಹಿತ್ಯಕ್ರಾಂತಿಗಳಿಂದ ಅದರ ಸ್ವರೂಪವೂ ಗುಣವೂ ಬಹುಮಟ್ಟಿಗೆ ಬದಲಾಯಿಸಿತ್ತು. ನೃಪತುಂಗನ ಕಾಲದಿಂದ ಸ್ವಲ್ಪ ಈಚೆಗೆ ಆರಂಭವಾಗಿ ಹನ್ನೆರಡನೆಯ ಶತಮಾನದ ಹೊತ್ತಿಗೆ ತಣ್ಣಗಾದ ಜೈನ ಚಳುವಳಿ ಮೊದಲನೆಯದು. ಈ ಕಾಲದಲ್ಲಿ ಜೈನಮತವು ಜನಜೀವನದಲ್ಲಿ ಒಂದು ಉತ್ತಮಸ್ಥಾನವನ್ನು ಪಡೆಯಿತು. ಮತಪ್ರಚಾರಕ್ಕೆ ಸಾಹಿತ್ಯವು ಸಾಧನವಾಗಿ ಪರಿಣಮಿಸಿತು. ಸಂಸ್ಕೃತ ಪ್ರಾಕೃತ ಗಳಲ್ಲಿ ವಿಶೇಷ ಪಾಂಡಿತ್ಯವನ್ನು ಪಡೆದ ಜೈನಕವಿಗಳು ಹಿಂದಿನಿಂದ ಬಳಕೆಯಲ್ಲಿದ್ದ "ದೇಶೀ" ಶೈಲಿಯನ್ನು ಬಿಟ್ಟು 'ಮಾರ್ಗೀ' ಶೈಲಿಯನ್ನು ಬಳಕೆಗೆ ತಂದರು. ತಾವು ಕಲಿತ ಸಂಸ್ಕೃತ, ಪ್ರಾಕೃತ ಸಾಹಿತ್ಯವನ್ನೇ ಅನುಕರಣೆ ಮಾಡಿ ಕನ್ನಡ ಗ್ರಂಥಗಳನ್ನು ಬರೆಯಲು ಹೊರಟದ್ದರ ಪರಿಣಾಮವಾಗಿ ಬೇಕಾದಷ್ಟು ಕನ್ನಡ ಪ್ರತ್ಯಯಾಂತವಾದ ಸಂಸ್ಕೃತಪದಗಳು ಉಪಯೋಗಕ್ಕೆ ಬಂದುವು. ನಮ್ಮಲ್ಲಿಯೇ ಹುಟ್ಟಿ ಬಳಕೆಯಲ್ಲಿದ್ದ ಅನೇಕ ದೇಶೀಯ ಛಂದಸ್ಸುಗಳನ್ನು ಮೂಲೆಗೆ ದಬ್ಬಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ಸಂಸ್ಕೃತ ಛಂದಸ್ಸನ್ನು ಅಳವಡಿಸಿಕೊಂಡರು. ಕೃಪೆಯಿಂದಲೋ ಎಂಬಂತೆ ಆಗೊಂದು ಸಲ ಈಗೊಂದು ಸಲ ಅಲ್ಲಲ್ಲಿ ಒಂದು ಅಥವಾ ಎರಡು ಪದ್ಯಗಳನ್ನು ದೇಶೀಯ ಛಂದಸ್ಸಿನಲ್ಲಿ ಬರೆದರು. ಪದಪ್ರಯೋಗಗಳ ತಿಳಿವನ್ನೂ, ಭಾಷೆಯ ಬಿಗುವನ್ನೂ ಅರಿತ ಪಂಪ ಮೊದಲಾದ ಕವಿಗಳು ಎರಡು ಶೈಲಿಗಳನ್ನೂ ಹೊಂದಿಸಲು ಪ್ರಯತ್ನಪಟ್ಟರು. ಹತ್ತನೆಯ ಶತಮಾನವು ಮುಖ್ಯವಾಗಿ ಸ್ವತಂತ್ರ ವಿಚಾರದ ಮತ್ತು ಸಾಹಿತ್ಯ ಸೃಷ್ಟಿಯ ಕಾಲ. ಆಗ ರಚಿತವಾದ ಗ್ರಂಥಗಳು ಈಗಲೂ ಮಹಾಗ್ರಂಥಗಳಾಗಿ ಉಳಿದುಕೊಂಡಿವೆ; ವಿಶೇಷ ಶಕ್ತಿಯನ್ನು ಪಡೆದಿವೆ. ಕನ್ನಡ ಭಾಷೆಯ ಮರ್ಮವನ್ನರಿತ, ಕನ್ನಡಕ್ಕೆ ರತ್ನಪ್ರಾಯರಾದ, ಪಂಪ ರನ್ನರಿಗೆ ಮನಸ್ಸಿನ ಯಾವ ಭಾವವನ್ನಾಗಲಿ ತಮ್ಮ ಭಾಷೆಯಲ್ಲಿ ವ್ಯಕ್ತಪಡಿಸುವುದು ಕಷ್ಟವಾಗಿ ತೋರಲಿಲ್ಲ. ಕಾರಣಾಂತರಗಳಿಂದ ರಚನಾತ್ಮಕ ಕಾರ್ಯವು ಕಡಮೆ ಯಾಗುತ್ತಾ ಬಂದು ಮುಂದೆ ಬಂದ ಬರಹಗಾರರು ಒಂದೇ ಜಾಡಿಗೆ ಬಿದ್ದರು. ಹೊಸ ತನ ಹೋಗಿ ಅನುಚಿತವಾದ ಪಾಂಡಿತ್ಯ ಬಂದು, ಸರಳತೆಯೂ ಸೌಕುಮಾರ್ಯವೂ ಮಾಯವಾದುವು. ನಯಸೇನನೇ ಮೊದಲಾದ ಕೆಲವು ಕವಿಗಳು ಸಂಸ್ಕೃತ ಪದಗಳ

ಅತಿಪ್ರಯೋಗಗಳನ್ನು ಪ್ರತಿಭಟಿಸಿದರಾದರೂ ಅವರನ್ನು ಯಾರೂ ಗಮನಿಸಲಿಲ್ಲ. ಅದೂ ಅಲ್ಲದೆ ಜೈನಮತವೂ ಹೀನಸ್ಥಿತಿಗೆ ಬಂದದ್ದರಿಂದ ಅದರ ಪ್ರಭಾವವನ್ನು ಕಳೆದುಕೊಂಡಿತು. ಈ ಕಾಲದಲ್ಲಿ ಎರಡನೆಯ ಚಳುವಳಿಯೊಂದರ ಆವಶ್ಯಕತೆ ಇತ್ತು. ಅದಕ್ಕೆ ಸರಿಯಾಗಿ ವೀರಶೈವ ಚಳುವಳಿ ಬಸವಣ್ಣ ಮೊದಲಾದ ಸುಧಾರಕರ ನೇತೃತ್ವದಲ್ಲಿ ದೊಡ್ಡ ಬಿರುಗಾಳಿಯಂತೆ ಬೀಸಿತು.

ಪುನಃ 'ದೇಶೀ' ಶೈಲಿ ಪ್ರಾಮುಖ್ಯಪಡೆಯಿತು. ತನ್ನ ಮನಸ್ಸನ್ನು ಹೊರ ಗೆಡಹಲು ಬಸವನು ಒಂದು ಹೊಸ ರೀತಿಯನ್ನೇ ಏಕೆ, ಒಂದು ಹೊಸ ಭಾಷೆಯನ್ನೇ ಬಳಸಿದನು. ಈ ಕಾಲದ ಹೊತ್ತಿಗೆ ಚಂಪೂಕಾವ್ಯಗಳ ಶೈಲಿ ಕೃತಕವಾಗಿಯೂ, ಸತ್ವಹೀನವಾಗಿಯೂ ಇತ್ತು. ಸಾಮಾನ್ಯಜನರು ಆಡುವ ಮಾತು ಬೆಳೆಯುತ್ತ ಹೋಗಿದ್ದರೂ ಗ್ರಂಥಗಳ ಭಾಷೆ ನಿಂತಲ್ಲಿಯೇ ನಿಂತು ಹಳಸಲಾಗಿತ್ತು. ಉಪಯೋಗ ದಲ್ಲಿಲ್ಲದ ಈ ಭಾಷೆಯನ್ನು ಕಿತ್ತುಹಾಕಿ ಬಳಕೆಯಲ್ಲಿದ್ದ ಭಾಷೆಯನ್ನು ಉಪಯೋಗಿಸುವ ಕಾಲ ಈಗ ಬಂತು. ಬಸವನು ಧೈರ್ಯದಿಂದಲೂ, ಸೂಕ್ಷ್ಮದೃಷ್ಟಿಯಿಂದಲೂ ಈ ಕೆಲಸ ಮಾಡಿದನು. ಅವನ ಭಾಷೆಯು ಬಹಳ ಸರಳವಾಗಿಯೂ, ಬಿಗುವಾಗಿಯೂ, ಶಕ್ತಿಯುತವಾಗಿಯೂ ಇರುವುದಲ್ಲದೆ ಅವನ ವ್ಯಕ್ತಿತ್ವದ ಗುಣವಿಶೇಷಗಳಿಂದ ತುಂಬಿದೆ. ಎಲ್ಲ ಮಟ್ಟದ ಎಲ್ಲ ರೀತಿಯ ಜನರೂ ಇವನ ಅನುಯಾಯಿಗಳಾದರು. ಇವರು ಬರವಣಿಗೆಯಲ್ಲಿ ತಮ್ಮ ನಾಯಕನ ರೀತಿಯನ್ನೇ ಅನುಸರಿಸಿ ಮತಕ್ಕೆ ಸಂಬಂಧಿಸಿದಂತಿರುವ ಅಪಾರಸಾಹಿತ್ಯವನ್ನು ಕನ್ನಡಕ್ಕೇ ಒಂದು ವೈಶಿಷ್ಟ್ಯವಾಗಿರುವ ಗದ್ಯಾತ್ಮಕಪದ್ಯರೂಪವಾದ 'ವಚನ'ಗಳಲ್ಲಿ ಬರೆದರು. ತ್ರಿಪದಿ, ಸಾಂಗತ್ಯ, ರಗಳೆ, ಬಳಕೆಯಲ್ಲಿರುವ ಹಾಡುಗಳು ಮೊದಲಾದ ದೇಶೀಯ ಛಂದಸ್ಸುಗಳಿಗೆ ಹೊಸಜೀವ ಕೊಟ್ಟು ತಮ್ಮ ಹೊಸಮತಪ್ರಚಾರಕ್ಕೆ ಸಾಧನವನ್ನಾಗಿ ಉಪಯೋಗಿಸಿಕೊಂಡರು. ಮುಂದೆ ಪ್ರಮುಖಪಾತ್ರವನ್ನು ವಹಿಸಲಿದ್ದ ಷಟ್ಪದಿ ಮೊದಲಾದ ಹೊಸ ಛಂದಸ್ಸು ಗಳನ್ನು ಕಂಡುಹಿಡಿದರು ಅಥವಾ ಹೊಸದಾಗಿ ಸೃಷ್ಟಿಮಾಡಿದರೆಂದೇ ಹೇಳಬಹುದು. ಹರಿಹರನೇ ಮೊದಲಾದ ಪಂಡಿತಕವಿಗಳು ಚಂಪುವಿನಲ್ಲೂ ಗ್ರಂಥ ಬರೆಯಲು ಸಾಮರ್ಥ್ಯವಿದೆ ಎಂಬುದನ್ನು ತೋರಿಸಿಕೊಳ್ಳಲು ಆ ರೀತಿಯಲ್ಲಿ ಒಂದೆರಡು ಗ್ರಂಥ ಗಳನ್ನು ಬರೆದರೂ ಒಟ್ಟಿನಲ್ಲಿ ಚಂಪೂರೀತಿಯ ಬಳಕೆ ತಪ್ಪಿಹೋಯಿತು. ಹಿಂದಿನ ಜೈನಸಾಹಿತ್ಯವು ವೈರಾಗ್ಯ, ಐಹಿಕಪ್ರಪಂಚದ ಅನಿತ್ಯತೆ ಇವುಗಳನ್ನು ಒತ್ತಿಹೇಳಿದರೆ ವೀರಶೈವಸಾಹಿತ್ಯವು ಆರಾಧ್ಯದೇವತೆಯಲ್ಲಿ ಭಕ್ತಿ ತೋರಿಸುವುದು ಮುಖ್ಯವೆಂದು ಭಕ್ತಿಯನ್ನು ಸಾರುತ್ತಾ ಬಂತು. ಸಮಾಜದಲ್ಲಿ ಎಲ್ಲರಿಗೂ ಇರುವ ಸಮತೆ, ಸುಖ ವಾಗಿರುವಿಕೆ, ಒಕ್ಕಟ್ಟು, ಸ್ವಸಂಪೂರ್ಣತೆ ಮತ್ತು ಆತ್ಮತೃಪ್ತಿ ಇವೇ ಮೊದಲಾದ

ಬಸವನ ತತ್ವಗಳು ಎಲ್ಲಜನರ ಮನಸ್ಸನ್ನೂ ಆಕರ್ಷಿಸಿ ನವಚೈತನ್ಯವನ್ನು ತುಂಬಿದುವು. ಈ ಹೊಸಚೈತನ್ಯವನ್ನು ಈ ಕಾಲದ ಸಾಹಿತ್ಯವು ತನ್ನ ಆಕಾರದಲ್ಲಿಯೂ, ವಿಷಯದಲ್ಲಿಯೂ ಪ್ರತಿಬಿಂಬಿಸುತ್ತಿದೆ.

ಹೀಗೆ ಸ್ವಲ್ಪಕಾಲ ನಡೆಯಿತು. ಬಸವೇಶ್ವರನು ಲಿಂಗೈಕ್ಯನಾಗುತ್ತಲೇ ವೀರಶೈವ ಮತಕ್ಕೆ ಬಲವಾದ ಧಕ್ಕೆ ತಗುಲಿದಂತಾಯಿತು. ಎಲ್ಲರನ್ನೂ ಒಟ್ಟುಗೂಡಿಸುವ ಶಕ್ತಿಯಿದ್ದ ನಾಯಕನ ಅಭಾವವು ಅಂತಃಕಲಹಗಳಿಗೆ ಕಾರಣವಾಯಿತು. ಮತದಲ್ಲಿ ಒಡಕುಂಟಾಯಿತು. ಕ್ರಿ.ಶ. ೧೨೦೦ರಲ್ಲಿ ಕಲ್ಯಾಣಪಟ್ಟಣವು ಹಾಳಾಯಿತು. ವೀರಶೈವರು ಹಲವು ದಿಕ್ಕುಗಳಿಗೆ ಚದುರಬೇಕಾಗಿ ಬಂದು ಕರ್ಣಾಟಕದ ಎಲ್ಲ ಭಾಗಗಳಲ್ಲೂ ಹರಡಿಕೊಂಡರು. ಅವರಲ್ಲಿದ್ದ ಉತ್ಸಾಹ ಕುಗ್ಗಿತ್ತು. ಕ್ಷೀಣದೆಸೆ ತಲೆದೋರಿತ್ತು. ಬಸವನ ಆದರ್ಶಗಳು ಕಣ್ಮರೆಯಾಗುತ್ತ ಬಂದು ಅರ್ಥವಿಲ್ಲದ ಕರ್ಮಕ್ಕೆ ಪ್ರಾಧಾನ್ಯ ದೊರೆಯಿತು. ಇಷ್ಟರ ಜೊತೆಗೆ ರಾಜಕೀಯ ಪರಿಸ್ಥಿತಿಯು ದಿನೇದಿನೇ ಕೆಡುತ್ತಾ ಬಂತು. ಪರಕೀಯರ ಧಾಳಿ ಇವರಲ್ಲಿ ಅಲ್ಲೋಲಕಲ್ಲೋಲವನ್ನುಂಟುಮಾಡಿತು. ಈ ಕಾರಣಗಳಿಂದ ಹದಿಮೂರನೆಯ ಶತಮಾನ ಮುಗಿಯುವ ಹೊತ್ತಿಗೆ ವೀರಶೈವಮತವು ಸತ್ವಹೀನವಾಗಿತ್ತು. ವೀರಶೈವರಂತೆ ಭಕ್ತಿಯನ್ನೇ ಪ್ರಧಾನವಾಗಿಟ್ಟುಕೊಂಡ ವೈಷ್ಣವ ಚಳುವಳಿಯು ಇವರ ಮತಕ್ಕೆದುರಾಗಿ ಹುಟ್ಟಿಕೊಂಡು ಪ್ರಬಲವಾಗುತ್ತಾ ಬಂತು.

## ಭಕ್ತಿಪಂಥ

ಧ್ಯಾನಮಾಡುವುದಕ್ಕೂ ಪೂಜಿಸುವುದಕ್ಕೂ ಉಪಾಸ್ಯದೇವತೆಯೊಂದು ಬೇಕೆಂಬ ಭಾವನೆಯು ಜನರಲ್ಲಿ ಬಹಳವಾಗಿ ಬೆಳೆದದ್ದರ ಫಲವಾಗಿ ಎರಡುವಿಧದ ಭಕ್ತಿಪಂಥಗಳು ಮುಂದಕ್ಕೆ ಬಂದುವು. ಒಂದನೆಯದು ತಮಿಳು ಶೈವಮತಕ್ಕೆ ಸಂಬಂಧಿಸಿದ ಶೈವಭಕ್ತಿ; ಎರಡನೆಯದು ಹನ್ನೆರಡನೆಯ ಶತಮಾನದಲ್ಲಿ ರಾಮಾನುಜರೂ ಹದಿಮೂರನೆಯ ಶತಮಾನದಲ್ಲಿ ಮಧ್ವಾಚಾರ್ಯರೂ ಉಪದೇಶಮಾಡಿದ ವೈಷ್ಣವ ಭಕ್ತಿ. ಇದರ ಪ್ರಭಾವದಿಂದ ಪೌರಾಣಿಕ ನಾಯಕರಾದ ರಾಮ ಕೃಷ್ಣ ಮುಂತಾದ ವಿಷ್ಣುವಿನ ಅವತಾರಗಳು ಪರಮದೇವತೆಗಳಾಗಿ ಪರಿಣಮಿಸಿದರು. ಪ್ರಪಂಚದ ಆಗುಹೋಗುಗಳೆಲ್ಲವೂ ಇವರ ಕೈಯಲ್ಲಿವೆ ಎಂಬ ಭಾವನೆ ಜನರಲ್ಲಿ ಮೂಡಿತು. ಧ್ಯಾನ ಉಪವಾಸವೇ ಮೊದಲಾದ ವಿವಿಧ ಪೂಜೆಗಳಿಂದ ಈ ಉಪಾಸ್ಯದೇವತೆಗಳ ಕರುಣೆಯನ್ನೂ, ಪ್ರಸಾದವನ್ನೂ ಪಡೆಯುವುದೇ ಮಾನವನ ಕರ್ತವ್ಯವೆಂದೆಣಿಸಿದರು. ಮತ ಮತ್ತು ಸಾಮಾಜಿಕ ಜೀವನಗಳಿಗೆ ದೇವಾಲಯಗಳು ಕೇಂದ್ರಗಳಾದುವು. ಇಷ್ಟಲಿಂಗವೊಂದನ್ನು ಬಿಟ್ಟು ಬೇರಾವುದನ್ನೂ ಪೂಜಿಸಬಾರದೆಂದು ಹೇಳುತ್ತಿದ್ದ

ವೀರಶೈವರು ಈಗ ಇದನ್ನು ಕಂಡು ಶಿವನಿಗೂ ಶೈವದೇವತೆಗಳಿಗೂ ದೇವಸ್ಥಾನಗಳನ್ನು ಕಟ್ಟಿಸದೆ ಇರಲಿಲ್ಲ. ಈ ಭಕ್ತಿಪಂಥದವರ ಉಪದೇಶ ಪ್ರಚಾರಕಾರ್ಯಗಳು ಎಡೆಬಿಡದೆ ಸಾಗಿದುವು. ವೈಷ್ಣವರ ಹಾಗೆ ವೀರಶೈವರೂ ಜೈನರೂ ಸಂಗೀತ ಸಲಕರಣೆಗಳೊಂದಿಗೆ ಹಾಡಲು ಸಾಧ್ಯವಾಗುವಂತೆ ಜನಸಾಮಾನ್ಯರಲ್ಲಿ ಬಳಕೆಯಲ್ಲಿದ್ದ ಛಂದಸ್ಸಿನಲ್ಲೇ ಹಾಡುಗಳನ್ನು ರಚಿಸಿದರು. ಅನೇಕ ದಾಸರು ಕರ್ಣಾಟಕದ ಮೂಲೆಮೂಲೆಗಳಲ್ಲಿಯೂ ಸಂಚಾರಮಾಡಿ ಭಕ್ತಿಗೀತೆಗಳನ್ನು ಹಾಡಿ ಜನರಲ್ಲಿ ಜಾಗೃತಿಯನ್ನುಂಟುಮಾಡಿದರು. ಇಷ್ಟು ಭರದಿಂದ ಸಾಗುತ್ತಿದ್ದ ಭಕ್ತಿಪಂಥದ ಚಳುವಳಿಯು ದೇಶದ ಎಲ್ಲ ಮೂಲೆಗಳಲ್ಲಿಯೂ ಹರಡುವುದು ಕಷ್ಟವಾಗಿರಲಿಲ್ಲ. ಎಲ್ಲವೂ ದೈವಾಧೀನ; ಮನುಷ್ಯ ಪ್ರಯತ್ನವೇನೂ ಇಲ್ಲ; ದೇವರ ದಯೆಯನ್ನೂ, ಅವನ ಕೃಪಾಪೂರಿತ ದೃಷ್ಟಿಯನ್ನೂ ಪಡೆಯಲು ಮಾನವನು ಕಾದಿರಬೇಕು; ಯಾವ ಕೆಲಸ ಮಾಡುವಾಗಲೂ ಈ ಭಾವನೆಯನ್ನೇ ಮನಸ್ಸಿನಲ್ಲಿಟ್ಟುಕೊಂಡಿರಬೇಕು ಎಂಬಿವೇ ಭಕ್ತಿಪಂಥದ ಉಪದೇಶಗಳು. ಇಲ್ಲಿ ಒಂದು ಬಗೆಯ ದೈವವಾದವಿದ್ದಂತೆ ಕಂಡುಬರುತ್ತದೆ. ಆದರೆ ವಿಜಯನಗರದ ಆರಂಭಕಾಲದಲ್ಲಿ ಈ ಭಾವನೆಯು ಇದ್ದಿರಲಾರದು, ಏಕೆಂದರೆ ಈ ದೈವವಾದದಿಂದ ಯಾವ ಮಹಾಕಾರ್ಯವನ್ನು ಮಾಡುವುದೂ ಅಸಾಧ್ಯ. ವಿಜಯನಗರದಂಥ ದೊಡ್ಡ ಸಾಮ್ರಾಜ್ಯವನ್ನು ಕಟ್ಟಿರುವ ಅಂಶವೇ ಜನರ ಪೌರುಷವನ್ನು ತೋರಿಸಲು ಸಾಕಾಗಿದೆ. ಮುಂದೆ ಬಂದ ದಾಸರ ಅಥವಾ ಭಕ್ತರ ಭಕ್ತಿಗೀತೆಗಳನ್ನು ನೋಡಿದರೆ ಕೆಲವು ಕಾಲದ ಮೇಲೆ ಭಕ್ತಿಪಂಥದ ಚಳುವಳಿಯು ಕುಗ್ಗಿಹೋಗಿ ದೈವವಾದದ ಕಡೆಗೆ ತಿರುಗಿತೆಂಬುದು ಗೊತ್ತಾಗುತ್ತದೆ. ಮೊದಮೊದಲು ಬಂದ ಭಕ್ತಿಪಂಥಕ್ಕೆ ಪೌರುಷದ ಉತ್ಕೃಷ್ಟತೆಯನ್ನು ಸಾರುವುದೇ ಗುಣವಾಗಿತ್ತು. ಆ ಮೇಲೆ ಬಂದ ಭಕ್ತಿಪಂಥವು ಮಾನವನ ನಿಸ್ಸಹಾಯಕತೆ ದೈವವಾದಗಳನ್ನು ಹೇಳತೊಡಗಿತು. ಅಂತೂ ಒಟ್ಟಿನಲ್ಲಿ ಸಾಹಿತ್ಯದ ಎಲ್ಲ ಭಾಗಗಳಲ್ಲೂ ಈ ಚಳುವಳಿಯ ವಜ್ರಮುಷ್ಟಿಯನ್ನು ಕಾಣಬಹುದು.

## ವಿಂಗಡಣೆ

ಜೈನ ವೀರಶೈವ ಮತ್ತು ಬ್ರಾಹ್ಮಣ ಎಂಬ ಮೂರು ಮುಖ್ಯಮತಗಳಿಗನುಸಾರವಾಗಿ ವಿಭಾಗಿಸುವುದು ಕನ್ನಡ ಸಾಹಿತ್ಯದ ಚರಿತ್ರೆಯನ್ನು ಬರೆಯುವವರ ಪದ್ಧತಿಯಾಗಿ ಬಿಟ್ಟಿದೆ. ಒಂದು ದೃಷ್ಟಿಯಿಂದ ಇದರಲ್ಲಿ ಅನುಕೂಲವಿರಬಹುದು. ಆದರೆ ವಿಷಯಗಳಿಗೆ ತಕ್ಕಂತೆ ವಿಭಾಗಮಾಡುವುದು ಈ ಲೇಖನದ ಉದ್ದೇಶಕ್ಕೆ ಸರಿಯಾದ ರೀತಿ. ಮುಖ್ಯವಾಗಿ ಜೈನಪೌರಾಣಿಕ ಗ್ರಂಥಗಳು, ಕಥೆಗಳು; ತಮಿಳು ಶೈವಮತದ ಅರುವತ್ತುಮೂರು ಶಿವಭಕ್ತರ ಜೀವನಗಳು, ಶಿವಪುರಾಣಗಳು; ಬ್ರಾಹ್ಮಣ

ಇತಿಹಾಸಗಳು, ಇತರ ಪುರಾಣ ಕಥೆಗಳು—ಇವುಗಳಿಂದ ವಸ್ತುಗಳನ್ನು ಆರಿಸಿಕೊಂಡು ಕವಿಗಳು ಗ್ರಂಥ ಬರೆಯುತ್ತಿದ್ದರು. ಸಾಧಾರಣವಾಗಿ ಎಲ್ಲ ಸಾಹಿತ್ಯವನ್ನೂ ಹೀಗೆ ಮೂರು ಪಂಗಡಗಳಿಗೆ ಸೇರಿಸಬಹುದು.

ಈ ಮೂರು ಮತಗಳಲ್ಲಿ ಯಾವುದಾದರೂ ಒಂದಕ್ಕೆ ಸೇರಿದ ಕವಿ ತನ್ನ ಮತ ಧರ್ಮಕ್ಕೆ ಸಂಬಂಧಿಸದ ಗ್ರಂಥಗಳನ್ನು ಬರೆಯದಿರುವುದು ಗಮನಾರ್ಹವಾದ ಸಂಗತಿ. ಕೆಲವು ಲೌಕಿಕ ಶಾಸ್ತ್ರಗಳನ್ನು ಮಾತ್ರ ಎಲ್ಲ ಮತದವರೂ ಬರೆಯಲು ಪ್ರಯತ್ನಪಟ್ಟಿದ್ದಾರೆ. ಈಗ ಹೇಳುತ್ತಿರುವ ಕಾಲದಲ್ಲಿ ಪ್ರಸಿದ್ಧರಾದ ವೀರಶೈವಕವಿಗಳಲ್ಲಿ ಚಾಮರಸ ಮತ್ತು ಸುರಂಗ ಎಂಬ ಇಬ್ಬರು ತಮ್ಮ ದೃಷ್ಟಿಯನ್ನು ಮೊನಚಾದ ಮಾತುಗಳಿಂದ ಸ್ಪಷ್ಟಪಡಿಸಿದ್ದಾರೆ. ಸುರಂಗನು ಶಿವನ ಗುಣಗಾನವನ್ನು ಮಾತ್ರ ಮಾಡಲು ತನ್ನ ನಾಲಗೆಯನ್ನು ಗಿರಿಶನಿಗೆ ಮಾರಿದ್ದಾನೆ; ಶಿವಶರಣರ ಕಥೆಗಳನ್ನು ಬಿಟ್ಟು ಇತರ ಕಥೆಗಳೆಲ್ಲವೂ 'ಜನನದ ಕುತ್ತದಲಿ ಕುದಿಕುದಿದು ಸತ್ತವರ' ಕಥೆಗಳೆಂದೂ, ಕರ್ಮದ ಅಂಧಕಾರದಲ್ಲಿ ಸಿಕ್ಕಿ ಒದ್ದಾಡುತ್ತಿರುವವರ ಕಥೆಗಳೆಂದೂ, ಇಂಥವರ ವಿಷಯ ಹೇಳುವುದು ಮಾಡಲು ಮತ್ತೇನೂ ಕೆಲಸವಿಲ್ಲದ ಅವಿವೇಕಿಗಳ ಕಾರ್ಯವೆಂದೂ ಚಾಮರಸನು ಹೀಯಾಳಿಸಿದ್ದಾನೆ. ಇಷ್ಟು ಕಾಲವಾದ ಮೇಲೆ ಈ ಅಭಿಪ್ರಾಯವನ್ನು ಗಮನಿಸಿದಾಗ ಎರಡು ರೀತಿಯ ಪ್ರಯೋಜನವನ್ನು ನಾವು ಕಾಣಬಹುದು—ಬ್ರಾಹ್ಮಣಕವಿಗಳು ಹೇಳಿದ ಅನೇಕ ಪೌರಾಣಿಕ ಕಥೆಗಳನ್ನೋ ಅನೇಕ ಘಟನೆಗಳನ್ನೋ ವೀರಶೈವ ಕವಿಗಳು ಮತ್ತೆಮತ್ತೆ ಹೇಳಿ ನಮಗೆ ಬೇಸರವನ್ನುಂಟುಮಾಡುವುದು ತಪ್ಪಿತು; ವಸ್ತುವಿನಲ್ಲಿ ವೈವಿಧ್ಯವುಂಟಾಯಿತು; ಅವರಲ್ಲಿದ್ದ ಕಥೆಗಳ ಸಂಖ್ಯೆಯು ಕಡಮೆಯಾದ್ದರಿಂದ ಮೊದಲೇ ಇದ್ದ ಪುರಾತನರ ಅಥವಾ ಹಳಬರ ಜೀವನಗಳ ಜೊತೆಗೆ ತಮ್ಮ ಸಮಕಾಲೀನರ ಮತ್ತು ನೂತನರ ಜೀವನಗಳನ್ನೂ ಹೇಳುವಂತೆ ಒತ್ತಾಯಪಡಿಸಿತು; ಹೀಗಾಗಿ ಓದುಗರಿಗೆ ಹೊಸಹೊಸ ವಸ್ತುವನ್ನು ದೊರಕಿಸಿಕೊಟ್ಟಿತು.

ಮೇಲೆ ಹೇಳಿದ ಮೂರು ಗುಂಪುಗಳಿಗೆ ಸಂಬಂಧಪಟ್ಟ ಗ್ರಂಥಗಳೇ ಅಲ್ಲದೆ ಲೌಕಿಕಶಾಸ್ತ್ರ, ವಿಜ್ಞಾನ, ವ್ಯಾಖ್ಯಾನ ಮತ್ತು ಚರಿತ್ರೆ ಇವಕ್ಕೆ ಸಂಬಂಧಿಸಿದ ಸಾಹಿತ್ಯವೂ ದೊರೆಯುತ್ತದೆ.

ಈ ವಿಭಾಗಗಳಿಗನುಸಾರವಾಗಿ ಈಗ ನಾವು ವಿಷಯಗಳನ್ನು ವಿವರಿಸಲು ಮುಂದೆ ಹೊರಡೋಣ.

## ೧. ತೀರ್ಥಂಕರರ ಚರಿತ್ರೆಗಳು

(i) ಹಿಂದಿನ ಜೈನಕವಿಗಳು ತಮ್ಮ ಮನಸ್ಸಿಗೆ ಒಪ್ಪಿದ ಒಬ್ಬ ತೀರ್ಥಂಕರನ ಜೀವನವನ್ನು ಕುರಿತು ಬರೆಯುವುದು ವಾಡಿಕೆಯಾಗಿತ್ತು. ಪಂಪನು 'ಆದಿಪುರಾಣ'

ವನ್ನು ಬರೆದು ಇತರರಿಗೆಲ್ಲ ಒಂದು ಆದರ್ಶಮಾರ್ಗವನ್ನು ತೋರಿಸಿಕೊಟ್ಟನು. ವಿಜಯನಗರವು ಸ್ಥಾಪಿತವಾದ ಸ್ವಲ್ಪಕಾಲದಲ್ಲಿಯೇ ಬಾಹುಬಲಿ (ಕ್ರಿ.ಶ. ೧೩೫೨) ಮತ್ತು ಮಧುರ (ಕ್ರಿ.ಶ. ೧೩೮೫) ಇವರಿಬ್ಬರೂ ಹಳೆಯ ಸಂಪ್ರದಾಯದ ಚಂಪೂ ರೀತಿಯಲ್ಲಿ ಹದಿನೈದನೆಯ ತೀರ್ಥಂಕರನಾದ ಧರ್ಮನಾಥನನ್ನು ಕುರಿತು ಒಂದೊಂದು ಗ್ರಂಥ ಬರೆದರು. ಇಬ್ಬರೂ ದೊಡ್ಡ ಪಂಡಿತರು; ಸಂಸ್ಕೃತ, ಕನ್ನಡ ಎರಡನ್ನೂ ಪ್ರಯೋಗಮಾಡುವುದರಲ್ಲಿ ಚತುರರು; ಜೈನರ 'ಮಾರ್ಗೀ' ಸಂಪ್ರದಾಯದ ಕಟ್ಟಕಡೆಯ ಅನುಯಾಯಿಗಳು. ಪೂರ್ವದ ಕವಿಗಳು ಸಂಸ್ಕೃತ ಮತ್ತು ಅಪಭ್ರಂಶ ಗಳಲ್ಲಿ ಬರೆದ ಆ ತೀರ್ಥಂಕರನ ಚರಿತ್ರೆಯನ್ನೇ ಈ ಇಬ್ಬರು ಕವಿಗಳೂ ತಮಗೆ ಬೇಕಾದ ರೀತಿಯಲ್ಲಿ ಹಿಗ್ಗಲಿಸಿ ಅಳವಡಿಸಿಕೊಂಡು ಮಹಾಕಾವ್ಯಗಳಲ್ಲಿರಬೇಕಾದ ಅಷ್ಟಾದಶ ವರ್ಣನೆಗಳನ್ನು ಸೇರಿಸಿ ಬರೆದರು. ಇತ್ತೀಚಿನವರೆಗೂ ಬಾಹುಬಲಿ ಬರೆದ ಚಂಪೂಗ್ರಂಥದ ಒಂದೇ ಒಂದು ಹಾಳೆ ಸಿಕ್ಕಿತ್ತು; ಈಗ ಪೂರ್ಣಗ್ರಂಥವೇ ದೊರೆತಿದೆ ಎಂದು ತಿಳಿಸುವುದು ಸಂತೋಷದ ವಿಷಯ. ಹರಿಹರರಾಜನ ಮಂತ್ರಿಯೂ, ಬುಕ್ಕರಾಯನ ಮಗನೂ ಆದ ಮುದ್ದಣದಂಡೇಶನ ಪ್ರೋತ್ಸಾಹ ಮಧುರನಿಗೆ ಸಿಕ್ಕಿ ಅವನು ಆಸ್ಥಾನಕವಿಯೂ ಆದನು. ಈಗ ಸಿಕ್ಕಿರುವ ಇವನ ಗ್ರಂಥದ ನಾಲ್ಕು ಅಧ್ಯಾಯಗಳೇ ಇವನ ಯೋಗ್ಯತೆಯನ್ನೂ, ಶಕ್ತಿಯನ್ನೂ ತೋರಿಸಲು ಸಾಕಾಗಿವೆ. ಅನೇಕ ಕನ್ನಡ ಕವಿಗಳಲ್ಲಿ ಸ್ವಾಭಾವಿಕವಾಗಿ ಕಂಡುಬರುವಂತೆ ಮೊದಲು ಪೀಠಿಕಾ ರೂಪಕವಾಗಿ ಹೇಳಿರುವ ಕೆಲವು ಪದ್ಯಗಳೂ, ಸ್ವವಿಷಯವನ್ನು ಹೊಗಳಿಕೊಳ್ಳುವ ಪದ್ಯ ಗಳೂ ಮಾತ್ರ ಈ ಗ್ರಂಥದಲ್ಲೆಲ್ಲಾ ಬಹು ಸೊಗಸಾದ ಪದ್ಯಗಳೆಂದು ಧಾರಾಳವಾಗಿ ಹೇಳಬಹುದು. ಆಗಿನ ಕಾಲದ ಜನಜೀವನ ಚಿತ್ರಗಳೂ ನಡೆನುಡಿಗಳೂ ಮತಗ್ರಂಥಕ್ಕೆ ಸಂಬಂಧಪಡದೆ ಇದ್ದುದರಿಂದ ಆ ವಿಷಯವಾಗಿ ಹೆಚ್ಚು ತಿಳಿದುಬರುವುದಿಲ್ಲ. ಇವನ ಗ್ರಂಥದಲ್ಲಿ ಒಂದೊಂದುಸಾರಿ ಪ್ರಕೃತಿಸೌಂದರ್ಯದ ಚಿತ್ರಗಳನ್ನು ಕಣ್ಣಿಗೆ ಕಟ್ಟುವ ರೀತಿಯಲ್ಲಿ ವರ್ಣಿಸಿರುವ ಕೆಲವು ಪದ್ಯಗಳು ಬೇಸರವನ್ನು ಪರಿಹಾರಮಾಡುತ್ತವೆ. ಈ ಗ್ರಂಥ ಪೂರ್ತಿಯಾಗಿ ಸಿಕ್ಕದಿರುವುದರಿಂದ ಇದರ ಕಥೆ ಏನೆಂದು ಹೇಳಲು ಸಾಧ್ಯವಿಲ್ಲದಿದ್ದರೂ ಇತರ ತೀರ್ಥಂಕರರ ಚರಿತ್ರೆಗಳಿಗಿಂತ ಭಿನ್ನವಾಗಿರಲಾರದೆಂದು ದೃಢವಾಗಿ ನಂಬಬಹುದು. ಈ ಮಧುರನೇ ದೇವರಾಯನ ಮಂತ್ರಿಯಾದ ಲಕ್ಷ್ಮೀ ಧರನು ತನ್ನ ಆಶ್ರಯದಾತನಾಗಿದ್ದಾಗ ಕ್ರಿ.ಶ. ೧೪೧೦ರಲ್ಲಿ ಹಂಪೆಯ ಕೃಷ್ಣದೇವರ ಗುಡಿಯ ಹತ್ತಿರ ಇರುವ ಒಂದು ಶಾಸನವನ್ನು ಬರೆದನು.

ನೇಮಿನಾಥನ ಕಥೆಯು ಅನೇಕ ಕನ್ನಡಕವಿಗಳಿಗೆ ಮೆಚ್ಚಿನ ಕಥೆಯಾಗಿದ್ದರೂ ಕ್ರಿ.ಶ. ೧೫೦೮ರಲ್ಲಿದ್ದ ಮಂಗರಸನ ಕಾಲದವರೆಗೂ ಈ ಕಥೆಯನ್ನು ಜನರಲ್ಲಿ

ಬಳಕೆಯಲ್ಲಿದ್ದ ದೇಶೀಯ ಛಂದಸ್ಸಿನಲ್ಲಿ ಯಾರೂ ಹಾಡಿರಲಿಲ್ಲ. ಅವನು ಬರೆದಿರುವ ಅನೇಕ ಗ್ರಂಥಗಳು ಅವನ ಶಕ್ತಿ ಯೋಗ್ಯತೆಗಳನ್ನು ತೋರಿಸುತ್ತವೆ. ತನ್ನಲ್ಲಿರುವ ಸರಳವಾದ ಶೈಲಿಯನ್ನು ಅವನು ಅನೇಕಕಡೆ ಯೋಗ್ಯರೀತಿಯಲ್ಲಿ ಉಪಯೋಗಿಸಿ ಕೊಳ್ಳುವ ಶಕ್ತಿ ಪಡೆದಿದ್ದನು. ಮೈಸೂರಿನ ಹತ್ತಿರವಿರುವ ಪಿರಿಯಾಪಟ್ಟಣದ ದೊಡ್ಡಯ್ಯನು (೧೫೫೦) ಚಂದ್ರಪ್ರಭಜಿನನ ಮೇಲೂ, ಪದ್ಮಕವಿಯು ವರ್ಧಮಾನ ಜಿನನ ಮೇಲೂ ಒಂದೊಂದು ಗ್ರಂಥವನ್ನು ಬರೆದರು. ಕ್ರಿ.ಶ. ೧೫೧೯ರಲ್ಲಿದ್ದ ಶಾಂತಿಕೀರ್ತಿಯು ಸಾಂಗತ್ಯದಲ್ಲಿ ಬರೆದ 'ಶಾಂತೀಶ್ವರ ಪುರಾಣ'ವನ್ನೂ ಇಲ್ಲಿ ಸೂಚಿಸಬಹುದು.

ವಿಜಯನಗರ ಕಾಲದ ಉತ್ಕೃಷ್ಟ ಜೈನಗ್ರಂಥ ಇನ್ನೂ ಬರುವುದರಲ್ಲಿತ್ತು. ಆ ಉದ್ಗ್ರಂಥವಾದ 'ಭರತೇಶ ವೈಭವ'ವನ್ನು ರತ್ನಾಕರವರ್ಣಿಯು ಸುಮಾರು ಕ್ರಿ.ಶ. ೧೫೫೭ರಲ್ಲಿ ಬರೆದನು. ಸುಮಾರು ಹತ್ತುಸಾವಿರ ಪದ್ಯಗಳುಳ್ಳ ಮಹಾಗ್ರಂಥವನ್ನು ಕೇವಲ ಒಂಬತ್ತೇ ತಿಂಗಳುಗಳಲ್ಲಿ ಬರೆದು ಪೂರೈಸಿದನಂತೆ. ರತ್ನಾಕರನ ಸ್ಫೂರ್ತಿವಿಶೇಷವನ್ನೂ ವಾಗ್ಧಾರೆಯನ್ನೂ ಕಂಡರೆ ಆಶ್ಚರ್ಯವುಂಟಾಗುವುದು. ಆದಿತೀರ್ಥಂಕರನ ಮಗನಾದ ಭರತನ ಕಥೆಯನ್ನು ಹೇಳಿದ್ದಾನೆ. ತನ್ನ ತಂದೆಯು ವೈರಾಗ್ಯಹೊಂದಿದ ಮೇಲೆ ಭರತನು ಏಕಚಕ್ರಾಧಿಪತಿಯಾಗಬೇಕೆಂದು ಇಷ್ಟಪಟ್ಟು ತಮ್ಮನಾದ ಬಾಹುಬಲಿ ಹೊರತಾಗಿ ಇತರ ಎಲ್ಲ ರಾಜರನ್ನೂ ಜಯಿಸಿದನು. ಅಣ್ಣತಮ್ಮಂದಿರಿಗೆ ಯುದ್ಧ ಪ್ರಾರಂಭವಾಯಿತು. ಪ್ರಪಂಚದ ಐಹಿಕ ಸುಖಗಳಲ್ಲೂ ಮಾನವನ ಆಸೆಗಳಲ್ಲೂ ಜುಗುಪ್ಸೆ ಹುಟ್ಟಿ ಬಾಹುಬಲಿಯು ಎಲ್ಲವನ್ನೂ ತ್ಯಜಿಸಿ ಸಂನ್ಯಾಸಿಯಾದನು. ಮನಸ್ಸಿನ ಎಲ್ಲ ಆಸೆಗಳನ್ನೂ ಜಯಿಸಿ ಕೇವಲಿಯ ಪದವಿ ಪಡೆದನು. ಚಾವುಂಡರಾಯನು ಕಲ್ಲಿನಲ್ಲಿ ಗೊಮ್ಮಟನ ಉನ್ನತವಾದ ಅಪ್ರತಿಮ ವಿಗ್ರಹವೊಂದನ್ನು ಕೆತ್ತಿಸಿ ಅವನನ್ನು ಅಮರನನ್ನಾಗಿ ಮಾಡಿದ್ದಾನೆ. ಆ ಶಿಲ್ಪ ಕಗ್ಗಲ್ಲಿನಲ್ಲಿ ಕಡೆದ ಕಾವ್ಯ. ಇದೇ ವಿಗ್ರಹವನ್ನೇ ರತ್ನಾಕರನು ಮಾತುಗಳಲ್ಲಿ ಆಡಿ ತೋರಿಸಿದ್ದಾನೆ. ಆ ವಿಗ್ರಹದಂತೆ ಈ ಕಾವ್ಯವೂ ಅಗಾಧವಾದುದು, ಘನತೆಯುಳ್ಳುದು. ಕವಿಯು ಈ ಗ್ರಂಥದಲ್ಲಿ ಭೋಗಯೋಗ ಸಮನ್ವಯ ಮಾಡಲು ಹೊರಟು ಐಹಿಕಸುಖಗಳನ್ನೆಲ್ಲಾ ಭೋಗಿಸಿದ ಮೇಲೆ ಬರುವ ಯೋಗವೇ ಶಾಶ್ವತವಾದದು, ಗಮನಾರ್ಹವಾದುದು ಎಂಬುದನ್ನು ತೋರಿಸಿ ತನ್ನ ಪ್ರಯತ್ನದಲ್ಲಿ ಜಯಶಾಲಿಯಾಗಿದ್ದಾನೆ. ಸೊಗಸಾದ ನರ್ತನ, ಸಂಗೀತದಲ್ಲಿಯ ಆನಂದ, ಸಂಸಾರದ ಸುಂದರ ಚಿತ್ರಗಳು, ಪ್ರಪಂಚದಲ್ಲಿ ಪಡೆಯಬಹುದಾದ ಐಹಿಕ ಸುಖಗಳು—ಇವುಗಳನ್ನು ವರ್ಣಿಸುವ ಭಾಗಗಳು ಈ ಕಾವ್ಯಶೈಲದ ಉನ್ನತ ಶಿಖರಗಳು. ಇದರ ಶೈಲಿ ಬಹಳ ಸರಳವಾದುದು, ಗಂಭೀರವಾದುದು, ನಯವಾದುದು, ದೂರದಲ್ಲಿ

ಕೇಳಿಬರುವ ಸಂಗೀತದಂತೆ ಆಕರ್ಷಿಸುವ ಶಕ್ತಿಯುಳ್ಳುದು. ಇತ್ತೀಚೆಗೆ ಈ ಗ್ರಂಥ ಮುದ್ರಿತವಾಗಿ ಎಲ್ಲರ ಮೆಚ್ಚಿಕೆಯನ್ನೂ ಪಡೆದಿದೆ. ಅಂಥ ಯೋಗ್ಯತೆ ಇದರಲ್ಲುಂಟು.

ಈ ಸಂದರ್ಭದಲ್ಲಿ ಸಾಳ್ವನ (ಕ್ರಿ.ಶ. ೧೫೫೦) ಭಾರತವನ್ನು ಹೇಳಬಹುದು. ಹಿಂದಿನ ಕಾಲದಿಂದಲೂ ಜೈನಕವಿಗಳು ನೇಮಿಜಿನನ ಕಥೆಯೊಂದಿಗೆ ಹಾಸು ಹೊಕ್ಕು ಗಳಂತೆ ಹೆಣೆದು ಹೇಳಿದ ಜೈನಸಂಪ್ರದಾಯದ ಭಾರತಕಥೆ ಇದರಲ್ಲಿದೆ.

(ii) ಕಥೆಗಳು:—ನಯಸೇನನ ಕಾಲದಿಂದ ಈಚೆಗೆ ಬಂದ ಜೈನಕವಿಗಳು ತಮ್ಮ ಮತದವರ ಜ್ಞಾನವನ್ನು ಹೆಚ್ಚಿಸುವುದಕ್ಕೋಸ್ಕರ ಧರ್ಮಕಥೆ ಹೇಳುವುದರಲ್ಲಿ ಆಸಕ್ತರಾಗಿದ್ದರು. ಈ ಕಥೆಗಳು ಉದಾಹರಣಾರ್ಥವಾಗಿ ನಿರ್ಮಿತವಾದುವುಗಳು. ಯಾವನೇ ಆಗಲಿ ಅಹಿಂಸೆ, ಅಸ್ತೇಯ ಮೊದಲಾದ ಜೈನ ವ್ರತಗಳನ್ನು ಆಚರಿಸಿದರೆ ಅವನಿಗೆ ನಿಜವಾಗಿಯೂ ಪುಣ್ಯ ಲಭಿಸುತ್ತದೆ, ಸ್ವರ್ಗಸುಖ ಪ್ರಾಪ್ತವಾಗುತ್ತದೆ ಎಂದು ಹೇಳುವುದು ಈ ಕಥೆಗಳ ಉದ್ದೇಶ. ಈ ರೀತಿಯ ತತ್ವಪ್ರಚಾರವೇ ಇವುಗಳ ಮುಖ್ಯ ಉದ್ದೇಶವಾಗಿದ್ದರೂ ಕೆಲವು ಕಥೆಗಳು ಕಾವ್ಯದೃಷ್ಟಿಯಿಂದ ಉತ್ಕೃಷ್ಟ ವಾಗಿವೆ. ಇಂಥ ಕಥೆಗಳಲ್ಲಿ 'ಜೀವಂಧರ ಚರಿತೆ'ಯೂ ಒಂದು. ಕ್ರಿ.ಶ. ೧೪೨೪ರಿಂದ ೧೫೦೦ರ ವರೆಗೆ, ಸುಮಾರು ಅರ್ಧ ಶತಮಾನದಲ್ಲಿ, ಮೂವರು ಕವಿಗಳು ಇದೇ ಕಥೆಯನ್ನು ತೆಗೆದುಕೊಂಡು ಬರೆದಿರುವುದು ಕಂಡುಬರುತ್ತದೆ. ತಮಿಳು, ಸಂಸ್ಕೃತ ಕವಿಗಳು ಈ ಕಥೆಯನ್ನು ಹಿಂದೆಯೇ ಹಲವುಸಾರಿ ಹೇಳಿದ್ದರು. ಈ ರೀತಿಯ ಸಾಹಿತ್ಯ ದಲ್ಲಿ ಭಾಸ್ಕರನು ೧೪೨೪ರಲ್ಲಿ ಬರೆದ 'ಜೀವಂಧರ ಚರಿತೆ'ಯು ಮಾದರಿಯ ಗ್ರಂಥ. ಇದು ರಾಜಪುರದ ರಾಜನಾದ ಸತ್ಯಂಧರನಿಗೂ, ರಾಣಿ ವಿಜಯೆಗೂ ಮಗನಾದ ಜೀವಂಧರನ ಸಾಹಸಕಾರ್ಯಗಳನ್ನು ವರ್ಣಿಸುತ್ತದೆ. ಈ ಕಥೆಯಲ್ಲಿ ಬರುವ ಕ್ರೂರ ಕರ್ಮಿ ಕಾಷ್ಠಾಂಗಾರನ ಪಾತ್ರವು ವಿಶದವಾಗಿ ಪ್ರತಿಪಾದಿತವಾಗಿದೆ. ಅನೇಕ ತೊಂದರೆಗಳ ಮಧ್ಯದಲ್ಲಿ ಕಥಾನಾಯಕನ ಜನನ, ಅಡ್ಡಬಂದ ಎಲ್ಲ ತೊಂದರೆಗಳನ್ನೂ ಅವನು ನಿವಾರಿಸಿಕೊಂಡ ರೀತಿ, ಪೂರ್ವಜನ್ಮದಲ್ಲಿ ಅವನು ಮಾಡಿದ ಸುಕೃತಗಳು ಶತ್ರುಗಳ ಒಳಸಂಚಿನಿಂದ ಅವನನ್ನು ಪಾರುಮಾಡಿದ್ದು, ಅವನ ಸಾಹಸಕಾರ್ಯಗಳು, ಅನೇಕ ವಿವಾಹಗಳು, ಕೊನೆಯದಾಗಿ ಕಾಷ್ಠಾಂಗಾರನ ನಿಗ್ರಹ—ಇವುಗಳನ್ನೆಲ್ಲಾ ಇಲ್ಲಿ ವಿಶದವಾಗಿ ವರ್ಣಿಸಿದೆ. ಇದರ ವಸ್ತು ರಚನೆಯಲ್ಲಿ ಸರಿಯಾದ ಕ್ರಮವಿಲ್ಲ. ಎಲ್ಲ ಸಂದರ್ಭಗಳನ್ನೂ ಪೋಣಿಸಿರುವವನು ಕಥಾನಾಯಕ. ಒಟ್ಟಿನಲ್ಲಿ ಅಕ್ರಮವಾದ ಕಥಾನಿರೂಪಣೆ ಇದ್ದರೂ ಈ ಗ್ರಂಥ ಸ್ವಾರಸ್ಯವಾಗಿದೆ. ಇದರಲ್ಲಿ ಅನಾವಶ್ಯಕವಾದ ಪಾಂಡಿತ್ಯ ಪ್ರದರ್ಶನವಿಲ್ಲ. ಶೈಲಿ ಸುಲಭವಾಗಿಯೂ, ಲಲಿತವಾಗಿಯೂ ಇದೆ. ಕುಮಾರವ್ಯಾಸನ ಪ್ರಭಾವ ಇದರ ಶೈಲಿಯಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಕ್ರಿ.ಶ.

೧೪೮೫ರಲ್ಲಿ ಬರೆದಂತೆ ತಿಳಿದುಬರುವ ತೆರಕಣಾಂಬಿ ಬೊಮ್ಮರಸನ 'ಜೀವಂಧರ ಸಾಂಗತ್ಯ'ವೂ, ೧೫೦೦ರಲ್ಲಿದ್ದ ಕೋಟೀಶ್ವರನು ಬರೆದ 'ಜೀವಂಧರ ಷಟ್ಪದಿ'ಯೂ ಇದೇ ಕಥೆಯನ್ನೇ ಕುರಿತು ಬರೆದುವಾಗಿವೆ.

ಉಳಿದ ಕಥೆಗಳಲ್ಲಿ ಕಲ್ಯಾಣಕೀರ್ತಿಯ(೧೪೩೯) 'ಜ್ಞಾನಚಂದ್ರಾಭ್ಯುದಯ'ವೂ 'ಕಾಮನ ಕಥೆ'ಯೂ ಗಮನಾರ್ಹವಾದುವು. ಬೊಮ್ಮರಸನ 'ಸನತ್ಕುಮಾರ ಚರಿತ್ರೆ'ಯೂ, ಬಾಹುಬಲಿಯ 'ನಾಗಕುಮಾರ ಚರಿತ್ರೆ'ಯೂ ಹಳೆಯ ಕಥೆಗಳ ಆಧಾರದ ಮೇಲೆ ಬರೆದುವಾಗಿದ್ದು ಕಥಾದೃಷ್ಟಿಯಿಂದ ನೋಡಿದಾಗ 'ಜೀವಂಧರ ಚರಿತೆ'ಯಷ್ಟು ಸ್ವಾರಸ್ಯವನ್ನು ಉಳ್ಳುವಾಗಿಲ್ಲ. ಹಿಂದೆ ಹೇಳಿದ ಮಂಗರಸನು ನಾಲ್ಕು ಕಥೆಗಳನ್ನು ಹೇಳಿದ್ದಾನೆ. ಷಟ್ಪದಿಯಲ್ಲಿ ಎರಡು, ಸಾಂಗತ್ಯದಲ್ಲಿ ಎರಡು ರಚಿತವಾಗಿವೆ. ಶ್ರುತಕೀರ್ತಿಯ (೧೫೬೭) 'ವಿಜಯಕುಮಾರಿ ಚರಿತ್ರೆ'ಯು ಈ ರೀತಿಯ ಕಥೆಗಳಲ್ಲಿ ಕೊನೆಯದು. ಇವುಗಳಲ್ಲೆಲ್ಲಾ ಕವಿಗಳಿಗೆ ತಮ್ಮ ಇಷ್ಟಕ್ಕನುಸಾರವಾಗಿ ಮಾರ್ಪಡಿಸಿಕೊಳ್ಳುವ ಸ್ವಾತಂತ್ರ್ಯವಿತ್ತು. ಈ ರೀತಿಯ ಸಾಹಿತ್ಯದ ಸೂಕ್ಷ್ಮ ಪರಿಚಯವು ಆಗಿನ ಕಾಲದ ಸಾಮಾಜಿಕ ಧಾರ್ಮಿಕ ಜೀವನಗಳಿಗೆ ಸಂಬಂಧಿಸಿದ ಸಂಗತಿಗಳನ್ನು ತಿಳಿಸಿಕೊಡುತ್ತದೆ.

(iii) ವ್ಯಾಖ್ಯಾನಗಳು:—ಸಂಸ್ಕೃತ, ತಮಿಳುಗಳಲ್ಲಿ ವ್ಯಾಖ್ಯಾನಬರೆದ ಕಾವ್ಯಗಳು ಹೇರಳವಾಗಿರುವಷ್ಟು ಕನ್ನಡದಲ್ಲಿ ಇಲ್ಲ ಎಂದು ಹೇಳಬಹುದು, ಈ ರೀತಿಯ ವ್ಯಾಖ್ಯಾನ, ಟಿಪ್ಪಣಿಗಳು ಕನ್ನಡದ ಪ್ರಾಚೀನಗ್ರಂಥಗಳಿಗೆ ಆವಶ್ಯಕವಾಗಿ ಬೇಕಾಗಿದ್ದರೂ ಈಗ ಸಿಕ್ಕುವ ಈ ರೀತಿಯ ಒಂದೆರಡು ಪುಸ್ತಕಗಳೂ ಸಂಸ್ಕೃತ ಮತ್ತು ಪ್ರಾಕೃತ ಗ್ರಂಥಗಳ ಮೇಲೆ ಬರೆದುವಾಗಿವೆ. ಕನ್ನಡ ಪ್ರಾಚೀನಗ್ರಂಥಗಳನ್ನು ಅಭ್ಯಾಸಮಾಡುವುದಾಗಲಿ, ಜನಸಾಮಾನ್ಯದಲ್ಲಿ ಪ್ರಚಾರಗೊಳಿಸುವುದಾಗಲಿ ನಡೆಯದೆ ಇದ್ದುದು ಬಹುಶಃ ವ್ಯಾಖ್ಯಾನಗ್ರಂಥಗಳು ವಿರಳವಾಗಿರುವುದಕ್ಕೆ ಕಾರಣವಾಗಿರಬಹುದು. ಇದು ಹೇಗೇ ಇರಲಿ, ಕನ್ನಡ ಸಾಹಿತ್ಯದಲ್ಲಿ ಇದೊಂದು ಕೊರತೆಯೆಂಬುದು ಎಲ್ಲರಿಗೂ ತಿಳಿದ ವಿಷಯ. ಅಲ್ಲಲ್ಲಿ ಸಿಕ್ಕುವ ವ್ಯಾಖ್ಯಾನ ಬರೆದ ಈ ರೀತಿಯ ಗ್ರಂಥಗಳೂ ವಿಜಯನಗರದ ಆರಂಭಕಾಲದಲ್ಲಿ ಬರೆದುವುಗಳು. ೧೩೫೯ರಲ್ಲಿದ್ದ ಕೇಶವವರ್ಣಿಯು ನೇಮಿಚಂದ್ರನ ಪ್ರಾಕೃತದ 'ಗೊಮ್ಮಟಸಾರ'ದ ಮೇಲೂ ಅಮಿತಗತಿಯ 'ಶ್ರಾವಕಾಚಾರ'ದ ಮೇಲೂ ದೀರ್ಘವಾದ ವ್ಯಾಖ್ಯಾನಗಳನ್ನು ಬರೆದನು. ಅಭಿನವಶ್ರುತಮುನಿಯು (೧೩೬೫) ಮಲ್ಲಿಷೇಣಕವಿಕೃತವಾದ 'ಸಜ್ಜನಚಿತ್ತವಲ್ಲಭ'ಕ್ಕೆ ಕನ್ನಡದಲ್ಲಿ ವ್ಯಾಖ್ಯಾನ ಬರೆದಂತೆ ತಿಳಿದುಬರುತ್ತದೆ. ೧೪೫೫ರಲ್ಲಿ ವಿದ್ಯಾನಂದನು ತಾನು ಸಂಸ್ಕೃತದಲ್ಲಿ ಬರೆದ 'ಪ್ರಾಯಶ್ಚಿತ್ತ' ಎಂಬ ಗ್ರಂಥಕ್ಕೆ

ತಾನೇ ವ್ಯಾಖ್ಯಾನ ಬರೆದಿದ್ದಾನೆ. ಇದರ ಜೊತೆಗೆ 'ಧರ್ಮಶರ್ಮಾಭ್ಯುದಯ'ಕ್ಕೆ ೧೫೦೦ರಲ್ಲಿ ಟಿಪ್ಪಣಿಯನ್ನು ಬರೆದ ಯಶಃಕೀರ್ತಿಯ ಹೆಸರನ್ನು ಸೇರಿಸಬಹುದು.

(iv) ಇತರ ಗ್ರಂಥಗಳು:—ಯಾವ ಒಂದು ಕಥೆಯನ್ನೇ ಆಗಲಿ ಪಟ್ಟಾಗಿ ಹಿಡಿದು ಹೇಳದೆ ಕೆಲವು ಜೈನ ನೈತಿಕತತ್ವಗಳನ್ನು ಹೇಳುವ ಮತ್ತು ಜೈನಸಂನ್ಯಾಸಿಗಳನ್ನು ಸ್ತುತಿಸುವ ಎಲ್ಲ ಗ್ರಂಥಗಳನ್ನೂ ಈ ಗುಂಪಿನಲ್ಲಿ ಸೇರಿಸಬಹುದು. ಶತಕ ಸಾಹಿತ್ಯವನ್ನು ಕುರಿತು ಬೇರೆ ಕಡೆ ಹೇಳಿದೆ.

೧೪೦೦ರಲ್ಲಿ ಆಯತವರ್ಮನು ಬರೆದ 'ರತ್ನಕರಂಡಕ'ದಲ್ಲಿ ಜೈನತತ್ವದ 'ತ್ರಿರತ್ನ'ಗಳನ್ನು ಚಂಪೂರೀತಿಯಲ್ಲಿ ವಿವರಿಸಿದೆ. ಸಂಸ್ಕೃತದಲ್ಲಿ ಬರೆದಿರುವ ಸಮಂತಭದ್ರನ ಇದೇ ಹೆಸರಿನ ಗ್ರಂಥದ ಆಧಾರದಿಂದ ಆಯತವರ್ಮನು ಬರೆದಂತೆ ಕಂಡುಬರುತ್ತದೆ. ಚಂದ್ರಕೀರ್ತಿಯು (೧೪೦೦) 'ಪರಮಾಗಮಸಾರ'ವನ್ನು ಕೇವಲ ನೂರುಮೂವತ್ತೆರಡು ಪದ್ಯಗಳಲ್ಲೇ ಬರೆದು ಅದರಲ್ಲಿ ಇಹಲೋಕದ ಅನಿತ್ಯತೆಯನ್ನೂ, ಎಲ್ಲ ಮಾನವರೂ ಸಾಧಿಸಬೇಕಾದ ಉತ್ತಮ ಆದರ್ಶವನ್ನೂ ವಿವರಿಸಿದ್ದಾನೆ. ಕಲ್ಯಾಣಕೀರ್ತಿ ಮತ್ತು ವಿಜಯಣ್ಣ ಇವರು ಬರೆದಿರುವ ಎರಡು 'ಅನುಪ್ರೇಕ್ಷೆ'ಗಳೂ ಜೈನ ಧರ್ಮದ 'ದ್ವಾದಶಾನುಪ್ರೇಕ್ಷೆ'ಗಳನ್ನು ಕುರಿತು ಹೇಳುತ್ತವೆ. ನೇಮಣ್ಣನ (೧೫೫೯) 'ಭಾಸ್ಕರಚರಿತೆ'ಯು ಜ್ಞಾನವೆಂದರೆ ಏನೆಂಬುದನ್ನೂ ಶಾಸ್ತ್ರ ಯೋಗಾಭ್ಯಾಸಗಳಿಂದ ಅದನ್ನು ಪಡೆಯುವ ವಿಧಾನವನ್ನೂ ವಿವರಿಸುತ್ತದೆ. ಮಧುರನು ಮಾಡುವ ಗೊಮ್ಮಟಸ್ತುತಿಯು ಎಂಟು ಪದ್ಯಗಳನ್ನೊಳಗೊಂಡು ಭಕ್ತಿಭಾವವನ್ನು ನಿರೂಪಿಸುತ್ತದೆ.

## ೨. ವೀರಶೈವ ಪುರಾಣಗಳು

ಕಲ್ಯಾಣಪಟ್ಟಣವು ಹಾಳಾದಕೂಡಲೆ ಅಲ್ಲಿ ನೆಲಸಿದ ವೀರಶೈವರು ಕರ್ಣಾಟಕದ ಬೇರೆಬೇರೆ ಭಾಗಗಳಿಗೆ ವಲಸೆ ಬಂದ ವಿಷಯವನ್ನು ಹಿಂದೆಯೇ ತಿಳಿಸಿದೆ. ವಿಜಯನಗರವು ಸ್ಥಾಪಿತವಾದ ಮೇಲೆ ವೀರಶೈವರ ಪುನರುಜ್ಜೀವನಕ್ಕೆ ಎರಡು ಕೇಂದ್ರಗಳು ದಕ್ಷಿಣ ಕರ್ಣಾಟಕದಲ್ಲಿ ಸ್ಥಾಪಿತವಾದುವು. ಜಕ್ಕಣಾರ್ಯ, ಲಕ್ಕಣದಂಡೇಶ ಮೊದಲಾದ ನಾಯಕರ ನೇತೃತ್ವದಲ್ಲಿ ಹಂಪೆಯಲ್ಲಿ ಒಂದು ಕೇಂದ್ರವೂ, ತೋಂಟದಸಿದ್ಧಲಿಂಗ ಯತಿಯ ಮುಂದಾಳುತನದಲ್ಲಿ ನಾಗಿಣೀನದಿಯ ತೀರದಲ್ಲಿರುವ ಎಡೆಯೂರಿನಲ್ಲಿ ಇನ್ನೊಂದು ಕೇಂದ್ರವೂ ಸ್ಥಾಪಿತವಾದುವು. ಇವೆರಡೂ ಅಧಿಕಾರಯುತವಾಗಿದ್ದು ತಮ್ಮ ಪ್ರಭಾವವನ್ನು ವೀರಶೈವಮತದ ಮೇಲೆ ಚೆನ್ನಾಗಿ ಬೀರಿದುವು. ಕರ್ಣಾಟಕದ ಎಲ್ಲ ಭಾಗಗಳಲ್ಲಿಯೂ ಸಣ್ಣಸಣ್ಣ ಮಠಗಳನ್ನು ಸ್ಥಾಪಿಸಲು ತಕ್ಕ ಯೋಗ್ಯತೆಯುಳ್ಳ ಗುರುಗಳನ್ನು ತಯಾರುಮಾಡುವುದೇ ಈ ಕೇಂದ್ರಗಳ ಮುಖ್ಯ ಕೆಲಸವಾಗಿತ್ತು.

ಜನಸಾಮಾನ್ಯದ ಕಳೆದುಹೋದ ಬೆಂಬಲವನ್ನು ಪಡೆದು ತಮ್ಮ ಮೊದಲಿನ ಶಕ್ತಿಯನ್ನು ಗಳಿಸಿಕೊಳ್ಳಲು ಈ ಮತವು ಪ್ರಯತ್ನಪಟ್ಟಿತು. ಹೀಗೆ ವೀರಶೈವಮತದ ಪುನರುಜ್ಜೀವನ ನಡೆಯಿತು. ಮೊದಲಿನ ಚಳುವಳಿಯಷ್ಟು ಕ್ರಾಂತಿಕಾರಕವಾಗಿಲ್ಲದಿದ್ದರೂ ಈ ಎರಡನೆಯ ಚಳುವಳಿ ಮತದ ಪುನರುಜ್ಜೀವನಕ್ಕೆ ಪ್ರಯತ್ನಪಟ್ಟಿತೆಂಬ ಅಂಶ ನಿಜ. ಹಿಂದಿನ ವಚನಸಾಹಿತ್ಯವನ್ನು ಒಟ್ಟುಹಾಕುವುದು; ಅದನ್ನು ಪಾಲಿಸಿಕೊಂಡು ಬರುವುದು; ಅವ್ಯವಸ್ಥಿತವಾಗಿದ್ದ ಪುರಾತನ ವಚನಗಳನ್ನು ಷಟ್ಸ್ಥಲಕ್ರಮದಲ್ಲಿ ಜೋಡಿಸುವುದು; ಕಷ್ಟವಾದ ವಚನಗಳಿಗೆ ತಕ್ಕ ವ್ಯಾಖ್ಯಾನ ಟೀಕುಗಳನ್ನು ಬರೆಯುವುದು—ಈ ಕೆಲಸಗಳು ಬಹಳ ರಭಸದಿಂದ ನಡೆದುವು. ವಚನಗಳು ಮತ್ತೆ ಸ್ವಲ್ಪಕಾಲ ಜೀವವನ್ನು ಪಡೆದುವು. ವಚನಗಳ ಸಂಕಲನೆಯ ಕೆಲಸವೂ ಸಾಗಿತು. ಒಟ್ಟಿನಲ್ಲಿ ಬಹುಮುಖವಾದ ಕೆಲಸಗಳನ್ನು ಮಾಡುತ್ತಾ ವೀರಶೈವರು ಬಹಳ ಚಟುವಟಿಕೆಯಿಂದ ಕೂಡಿದ್ದರು. ೧೩೩೬ರಿಂದ ೧೫೭೫ರ ವರೆಗೆ ಹೊರಬಿದ್ದ ಅಪಾರ ಗ್ರಂಥರಾಶಿ ಇವರ ಚಟುವಟಿಕೆಯ ಪ್ರಭಾವವೆಷ್ಟೆಂಬುದನ್ನು ಅಳತೆ ಮಾಡಲು ಸಾಕಾಗಿದೆ.

ಈ ಕಾಲದ ವೀರಶೈವ ಸಾಹಿತ್ಯವನ್ನು (i) ಶೈವಪುರಾಣಗಳಿಂದ ಉದ್ಧೃತವಾದ ಕಥೆಗಳು, (ii) ಅರುವತ್ತುಮೂವರು ಪುರಾತನರು ಮುಕ್ತಿಪಡೆದ ವಿಧಾನವನ್ನು ವಿವರಿಸುವ ಕಥೆಗಳು, (iii) ನೂತನ ಪುರಾತನರೆಂದು ಕರೆಸಿಕೊಂಡ ಬಸವ ಮತ್ತು ಅವನ ಸಮಕಾಲೀನರ ಕಥೆಗಳು, (iv) ನೂತನರ ಕಥೆಗಳು, (v) ವೀರಶೈವರ ಅನೇಕ ಕಥೆಗಳನ್ನು ಒಳಗೊಂಡಿರುವ ಗ್ರಂಥಗಳು ಎಂದು ಐದು ವಿಭಾಗವಾಗಿ ವಿಂಗಡಿಸ ಬಹುದು. ಮೇಲೆ ಹೇಳಿರುವ ಕ್ರಮವನ್ನೇ ಅನುಸರಿಸಿ ಆಯಾ ಭಾಗಗಳ ಮೇಲೆ ಕೆಲವು ವಿಷಯುಗಳನ್ನು ಹೇಳಿದೆ:—

(i) ಶೈವಪುರಾಣದಲ್ಲಿ ಕಂಡುಬಂದ ಕೆಲವು ಘಟನೆಗಳನ್ನೂ ಕಥೆಗಳನ್ನೂ ಬೇರೆ ಬೇರೆಯಾಗಿ ತೆಗೆದುಕೊಂಡು ಸ್ವತಂತ್ರವಾಗಿ ಬರೆದರು; ಮತ್ತು ಎಲ್ಲೆಲ್ಲಿ ಶೈವವಾತಾವರಣವಿದ್ದಿತೋ ಅಲ್ಲೆಲ್ಲಾ ಶೈವೋತ್ಕರ್ಷವನ್ನು ಸಾರಿದರು. ಇಂಥ ಕಥೆಗಳಲ್ಲಿ ಬಹಳ ಜನಾದರಣೀಯವಾದುದು ಹರಿಶ್ಚಂದ್ರನ ಕಥೆ. ಮುಂದೆ ಬರುವ ಕವಿಗಳಿಗೆ ಮಾದರಿಯಾಗುವಂತೆ ರಾಘವಾಂಕನು ತನ್ನ ಶಕ್ತಿಯುತವಾದ ಶೈಲಿಯಲ್ಲಿ ಈ ಕಥೆಯನ್ನು ಆಗಲೇ ಹೇಳಿದ್ದನು. ಜನರಲ್ಲಿ ಬಳಕೆಯಲ್ಲಿರುವ ಸಾಂಗತ್ಯದ ಮಟ್ಟಿನಲ್ಲಿ ಈ ಕಥೆಯನ್ನು ಓದುವಗಿರಿಯ (೧೫೨೫) ಮತ್ತು ಬೊಂಬೆಯಲಕ್ಕ (೧೫೩೮) ಇವರು ಒಂದೊಂದು ಗ್ರಂಥರೂಪವಾಗಿ ಬರೆದರು. ಇಬ್ಬರೂ ರಾಘವಾಂಕನನ್ನೇ ಬಹುವಾಗಿ ಅನುಸರಿಸಿದ್ದಾರೆ. ಇವರಲ್ಲಿ ಬೊಂಬೆಯ ಲಕ್ಕನಂತೂ ಅವನಲ್ಲಿ ಕಂಡು

ಬರುವ ಅನೇಕ ಪದಸಮುದಾಯಗಳನ್ನೇ, ಅದೇ ಭಾವಗಳನ್ನೇ, ಉಪಯೋಗಿಸಿ ಕೊಂಡುಬಿಟ್ಟಿದ್ದಾನೆ. ಕಾಲಕ್ರಮೇಣ ಮೇಲೆ ಹೇಳಿದ ಓದುವಗಿರಿಯನ 'ಸಾನಂದ ಗಣೇಶ'ನ ಕಥೆ ಬರುತ್ತದೆ. ಸ್ಕಾಂದಪುರಾಣದಲ್ಲಿ ಕಂಡುಬರುವ ಈ ಕಥೆಯನ್ನು ೧೧೮೦ರಲ್ಲಿ ಕುಮಾರ ಪದ್ಮರಸನು ಆಗಲೇ ಕನ್ನಡದಲ್ಲಿ ಬರೆದಿಟ್ಟಿದ್ದನು. ಈ ಕಥೆಯು ಪಂಚಾಕ್ಷರೀ ಮಂತ್ರದ ಮಹಿಮೆಯನ್ನು ಸಾರುತ್ತದೆ. ಕಥಾನಾಯಕನಾದ ಸಾನಂದನು ನರಕದಲ್ಲಿ ಸುತ್ತಾಡಿ ಅಲ್ಲಿ ಶಿಕ್ಷೆಗೆ ಒಳಪಟ್ಟು ಒದ್ದಾಡುತ್ತಿದ್ದ ನಾರಕಿಗಳನ್ನು ಪಂಚಾಕ್ಷರೀ ಮಂತ್ರೋಚ್ಚಾರಣೆಯ ಪ್ರಭಾವದಿಂದ ಕಾಪಾಡುವ ರೀತಿಯನ್ನು ಹೇಳುತ್ತದೆ. ನರಕದಲ್ಲಿ ಕೊಡುವ ಹಿಂಸಾಯುತವಾದ ಶಿಕ್ಷೆಗಳ ವರ್ಣನೆಯಲ್ಲಿ ಅತಿಶಯೋಕ್ತಿ ಇದೆ. 'ವೀರಭದ್ರ ವಿಜಯ'ವನ್ನು ಬರೆದ ವೀರಭದ್ರರಾಜನು (೧೫೩೦) ದಕ್ಷನ ಯಜ್ಞದಿಂದುಂಟಾದ ಅನಾಹುತಗಳನ್ನು ಹೇಳುತ್ತಾನೆ. ಅವನ ಕವಿತೆಯ ಆದರ್ಶ ಹಿರಿದಾದರೂ ಬರೆದಿರುವ ರೀತಿ ಸಾಮಾನ್ಯವಾದದ್ದು. ಇದಕ್ಕಿಂತ ಒಳ್ಳೆಯ ಕವಿತೆ ಗುರುಲಿಂಗ ವಿಭುವಿನ (೧೫೫೦) 'ಭಿಕ್ಷಾಟನ ಚರಿತ್ರೆ'ಯಲ್ಲಿ ಕಂಡುಬರುತ್ತದೆ. ಬ್ರಹ್ಮನಿಗೆ ಹೆಚ್ಚಾಗಿದ್ದ ಒಂದು ತಲೆಯನ್ನು ಕಡಿದು ಆ ಪಾಪದ ಫಲವಾಗಿ ಬ್ರಹ್ಮಕಪಾಲವನ್ನು ಕೈಯಲ್ಲಿ ಹಿಡಿದು ಭೂಲೋಕದಲ್ಲಿಯ ದ್ವಾರಕೆಯಲ್ಲಿ ಕೃಷ್ಣನನ್ನು ಕಾಣುವ ವರೆಗೂ ಭಿಕ್ಷಾಟನೆಮಾಡಿದ ಶಿವನ ಲೀಲೆಯನ್ನು ಹೇಳಿದೆ. ಸಣ್ಣಗ್ರಂಥವಾದರೂ ಚಮತ್ಕಾರದಿಂದ ಕೂಡಿದೆ. ಭಕ್ತಿಯ ಪ್ರಭಾವದಿಂದ ಶಿವನ ಕಾರುಣ್ಯವನ್ನು ಪಡೆದ ಒಬ್ಬ ಪುರಾಣವ್ಯಕ್ತಿಯ ಕಥೆಯನ್ನು ಹೇಳುವ ಮಲ್ಲಿಕಾರ್ಜುನನ (೧೪೮೫) 'ಶ್ವೇತನ ಸಾಂಗತ್ಯ'ವನ್ನು ಇವುಗಳ ಜೊತೆಯಲ್ಲಿ ಹೇಳಬಹುದು. ಈ ಕಥೆಯನ್ನಾಗಲೆ 'ಬಸವ ಪುರಾಣ' ದಲ್ಲಿ ಹೇಳಿತ್ತು.

(ii) ಅರುವತ್ತುಮೂರು ಜನ ಪುರಾತನ ಶಿವಶರಣರ ಕಥೆಗಳಲ್ಲಿ ಬಹಳ ಸ್ವಾರಸ್ಯವಾಗಿರುವುದು ಸೌಂದರನಂಬಿಯ ಕಥೆ. ಲಘುಹಾಸ್ಯವನ್ನುಪಯೋಗಿಸಿ ಹರಿಹರನಾಗಲೇ ಈ ಕಥೆಯನ್ನು ಕನ್ನಡದಲ್ಲಿ ಹೇಳಿದ್ದನು. ಬೊಮ್ಮರಸನು ಇದನ್ನೇ ಹೊಸದಾಗಿ ೧೪೩೦ರಲ್ಲಿ ರಚಿಸಿ 'ಸೌಂದರ ಪುರಾಣ'ವೆಂದು ಹೆಸರಿಟ್ಟನು. ಇದರಲ್ಲಿ ಅನೇಕ ಒಳ್ಳೆಯ ಪದ್ಯಗಳಿವೆ. ವರ್ಣನೆಗಳು ಕೆಲವು ವೇಳೆ ರುಚಿರಸಗಳಿಂದ ಕೂಡಿದೆ. ಹಿಂದೆಯೇ ಹೇಳಿರುವ ಸುರಂಗಕವಿಯು (೧೫೦೦) ಹರಿಹರನ ಚಂಪೂ ರೀತಿಯನ್ನೇ ಅನುಕರಣೆಮಾಡಿ ಅರುವತ್ತುಮೂರು ಶಿವಶರಣರ ಕಥೆಗಳನ್ನೂ ಬರೆದಿದ್ದಾನೆ. ಕಾವ್ಯದ ವಸ್ತುವನ್ನು 'ಲೈಂಗ್ಯ ಪುರಾಣ'ದಿಂದ ಆರಿಸಿಕೊಂಡಂತಿದೆ. ಬೇಟೆಯ ವರ್ಣನೆ ಬಂದಾಗ ಅದರ ಮೇಲೆಯೇ ಮನಸಿಟ್ಟು ಇವನು ಚೆನ್ನಾಗಿ ವರ್ಣಿಸಿ ತನ್ನ ಶಕ್ತಿಯನ್ನು ವ್ಯಕ್ತಪಡಿಸಿಕೊಂಡಿದ್ದಾನೆ. ಕೆಲವುಕಾಲದ ಹಿಂದೆ ಇವನ

ಪುಸ್ತಕವನ್ನು ಅಚ್ಚುಹಾಕಿಸಿ ಎಲ್ಲರಿಗೂ ದೊರೆಯುವಂತೆ ಮಾಡಿದರೂ ವಿದ್ಯಾವಂತರ ಸಮುದಾಯದಲ್ಲಿ ಕೂಡ ಈ ಗ್ರಂಥಕ್ಕೆ ಅಷ್ಟು ಆದರಣೆ ಸಿಕ್ಕಿಲ್ಲ. ಮನಸ್ಸಿಟ್ಟು ಓದಬೇಕಾದ ಗ್ರಂಥ ಇದು. ಗುಬ್ಬಿಯ ಮಲ್ಲಣಾರ್ಯನ (೧೫೧೩) 'ಭಾವಚಿಂತಾ ರತ್ನ'ವೂ, ಲಿಂಗನ (೧೫೫೦) 'ಚೋಳರಾಜಸಾಂಗತ್ಯ'ವೂ ಒಂದೇ ವಸ್ತುವನ್ನು ಕುರಿತ ಗ್ರಂಥಗಳು. ಮಲ್ಲಣಾರ್ಯನು ತಮಿಳು ಗ್ರಂಥದಿಂದ ಸ್ಫೂರ್ತಿ ಪಡೆದಿದ್ದಾನೆ. ಪಂಚಾಕ್ಷರಿಯ ಮಹಿಮೆಯನ್ನು ತೋರಿಸುವುದೇ ಈ ಕಥೆಯ ಮುಖ್ಯ ಉದ್ದೇಶ. ಹರಭಕ್ತನಾದ ಹುಡುಗನೊಬ್ಬನು ಅಶ್ವದ ಖುರದ ಹತಿಯಿಂದ ಸಾಯಲು, ಅವನ ಸಾವಿಗೆ ಕಾರಣನಾದ ತನ್ನ ಮಗನನ್ನೇ ಸತ್ಯೇಂದ್ರಚೋಳನು ಕೊಲ್ಲಿಸುವನು. ಈ ಸಂದರ್ಭದಲ್ಲಿ ಮತ್ತೆ ಎಂಟುತಲೆಗಳು ಬೀಳಬೇಕಾಗಿ ಬರುತ್ತದೆ. ಅನಂತರ ಸತ್ಯೇಂದ್ರಚೋಳನೇ ತನ್ನ ತಲೆ ಕತ್ತರಿಸಿಕೊಳ್ಳಲು ಹೋದಾಗ ಶಿವಸಾಕ್ಷಾತ್ಕಾರ ವಾಗುತ್ತದೆ. ಎಲ್ಲರೂ ಜೀವದಾನಪಡೆದು ಕೈಲಾಸಕ್ಕೆ ಹೋಗುತ್ತಾರೆ. ಈ ಕಥೆಯಲ್ಲಿ ನಯವಿಲ್ಲದಿದ್ದರೂ ಒಳ್ಳೆಯ ಕಾವ್ಯವಿಲ್ಲದಿಲ್ಲ. ಮುಂದೆ ಇದು ಷಡಕ್ಷರಿಗೆ 'ರಾಜ ಶೇಖರವಿಳಾಸ'ವನ್ನು ಬರೆಯಲು ಸ್ಫೂರ್ತಿಯನ್ನುಂಟುಮಾಡಿತು. ಅರವತ್ತುಮೂರು ಶಿವಶರಣರಲ್ಲಿ ಒಬ್ಬನಾದ ಚೇರಮನ ಕಥೆಯನ್ನು ವಿರೂಪರಾಜನೂ (೧೫೧೯), ಚೇರಮಾಂಕನೂ (೧೫೨೬) ಹೇಳಿದ್ದಾರೆ.

(iii) ಈ ಗುಂಪಿನಲ್ಲಿ ಬಸವಣ್ಣನ ಜೀವನವನ್ನು ಕುರಿತು ಬರೆದ ಗ್ರಂಥಗಳೇ ಹೆಚ್ಚು ಮುಖ್ಯವಾದುವುಗಳು. ಈ ಕಾಲದಲ್ಲಿ ಬಸವಣ್ಣನ ವಿಷಯವನ್ನು ಕುರಿತು ಬರೆದವರಲ್ಲಿ ಎರಡು ಸಂಪ್ರದಾಯಗಳಿದ್ದಂತೆ ತೋರುತ್ತದೆ. ಎರಡಕ್ಕೂ ಮುಖ್ಯ ವಿಷಯಗಳಲ್ಲಿ ಬಹಳ ವ್ಯತ್ಯಾಸ ಕಂಡುಬರುತ್ತದೆ. 'ಬಸವಪುರಾಣ'ವನ್ನು ಬರೆದ ಭೀಮಕವಿ (೧೩೬೯) ಒಂದು ಸಂಪ್ರದಾಯದ ಮುಖಂಡ. 'ಬಸವಪುರಾಣ'ವು ಪಾಲ್ಕುರಿಕೆ ಸೋಮನಾಥನು ಬರೆದ ತೆಲುಗಿನ 'ಬಸವಪುರಾಣ'ದ ಭಾಷಾಂತರ. ಬಸವಣ್ಣನ ಜೀವನಚರಿತ್ರೆಯನ್ನೇ ಅಲ್ಲದೆ ಅವನಿಗಿಂತ ಹಿಂದಿನ ಮತ್ತು ಅವನ ಸಮಕಾಲೀನರಾದ ಹಲವು ಶಿವಭಕ್ತರ ಕಥೆಗಳನ್ನೂ ಇಲ್ಲಿ ಹೇಳಿದ್ದಾನೆ. ಈ ಗ್ರಂಥದಲ್ಲಿ ಒಳ್ಳೆಯ ಕಾವ್ಯಗುಣವಿಲ್ಲದಿದ್ದರೂ ವೀರಶೈವರಲ್ಲಿ ಅದಕ್ಕೆ ಬಹಳ ಮನ್ನಣೆ ದೊರೆತಿದೆ. ಏಕೆಂದರೆ ಅದು ಅನೇಕ ಶಿವಶರಣರ ಕಥೆಗಳ ಉಗ್ರಾಣ. ಲಕ್ಕಣದಂಡೇಶನ ಗ್ರಂಥದಲ್ಲಿ ಪ್ರಾಸಂಗಿಕವಾಗಿ ಬರುವ ಬಸವಣ್ಣನ ಕಥೆ ಎರಡನೆಯ ಸಂಪ್ರದಾಯಕ್ಕೆ ಸೇರಿದ್ದು. ಇವನ ಅನುಯಾಯಿಯಾದ ಸಿಂಗಿರಾಜನು (೧೫೦೦) ತನ್ನ 'ಮಲಬಸವ ಚಾರಿತ್ರ' ದಲ್ಲಿ ಬಸವಣ್ಣನ ಜೀವನಚರಿತ್ರೆಯನ್ನು ಹೇಳುವುದೇ ಅಲ್ಲದೆ ಅವನ ಎಂಬತ್ತೆಂಟು ಪವಾಡಗಳಲ್ಲಿ ಕೆಲವನ್ನು ವರ್ಣಿಸಿದ್ದಾನೆ. ಈ ಎರಡು ಸಂಪ್ರದಾಯಗಳ ಸಾಂದ್ರ

ವಾದ ಅಭ್ಯಾಸದ ಜೊತೆಗೆ ಬಸವಣ್ಣನ ಜೀವನಚರಿತೆಯನ್ನು ಬರೆದಿರುವ ಇತರ ಗ್ರಂಥಗಳನ್ನೂ ತುಲನಾತ್ಮಕವಾಗಿ ವಿಮರ್ಶೆಮಾಡುವುದರಿಂದ ಬಸವಣ್ಣನವರ ಮತ್ತು ಅವರ ಕಾರ್ಯದ ವಿಷಯವಾಗಿ ಕಂಡುಬರುವ ಅನೇಕ ತಪ್ಪು ಅಭಿಪ್ರಾಯಗಳು ಪರಿಹಾರವಾಗುತ್ತವೆ.

ಪದ್ಮಣಾಂಕ (೧೩೮೫), ಚಾಮರಸ (೧೪೩೦) ಮತ್ತು ವಿರಕ್ತತೋಂಟದಾರ್ಯ (೧೫೬೦) ಇವರು ಮೂವರೂ ಕ್ರಮವಾಗಿ ಕೆರೆಯಪದ್ಮರಸ, ಅಲ್ಲಮಪ್ರಭು ಮತ್ತು ಪಾಲ್ಕುರಿಕೆಸೋಮ, ಇವರ ಜೀವನಚರಿತ್ರೆಗಳನ್ನು ಬರೆದಿದ್ದಾರೆ. ಇವುಗಳಲ್ಲಿ ಮೊದಲನೆಯದಾದ 'ಪದ್ಮರಾಜ ಪುರಾಣ'ವೆಂಬ ಗ್ರಂಥವು ಕಥಾನಾಯಕನ ಜೀವನದಲ್ಲಿ ಆದ ಕೆಲವು ಘಟನೆಗಳನ್ನು ವರ್ಣಿಸುತ್ತದೆ ಮತ್ತು ಕಥೆಯ ನಾಯಕನು ನರಸಿಂಹಬಲ್ಲಾಳನ ಮಂತ್ರಿಯಾಗಿದ್ದನೆಂದು ಹೇಳುತ್ತದೆ. ಅವನು ಪವಾಡವನ್ನು ಮಾಡಿ ಮೊದಲು ಏನೂ ಇರದ ಜಾಗದಲ್ಲಿ ಒಂದು ಕೆರೆಯನ್ನು ನಿರ್ಮಿಸಿದ್ದರಿಂದ ಅವನಿಗೆ 'ಕೆರೆಯ' ಎಂಬ ವಿಶೇಷಣವುಂಟಾಯಿತು. ವಾಗ್ವಾದದಲ್ಲಿ ತ್ರಿಭುವನ ತಾತನೆಂಬ ವೈಷ್ಣವವಾದಿಯನ್ನು ನಿಗ್ರಹಿಸಿ ಅವನನ್ನು ವೀರಶೈವನನ್ನಾಗಿ ಮಾಡಿದನು. ಪದ್ಮಣಾಂಕನು ಗ್ರಂಥವನ್ನು ಷಟ್ಪದಿಯಲ್ಲಿ ಬರೆದಿದ್ದರೂ ಪ್ರೌಢವಾದ ಪಾಂಡಿತ್ಯದ ಶೈಲಿಯನ್ನು ಉಪಯೋಗಿಸಿದ್ದಾನೆ. ವೀರಶೈವಸಾಹಿತ್ಯದಲ್ಲಿ ಚಾಮರಸನ 'ಪ್ರಭುಲಿಂಗಲೀಲೆ'ಯು ಉತ್ಕೃಷ್ಟವಾದ ಗ್ರಂಥ. ಅದರಲ್ಲಿ ಮಹಾ ಮೇಧಾವಿಯಾಗಿಯೂ, ಅನುಭಾವಿಯಾಗಿಯೂ, ವೀರಶೈವಚಳುವಳಿಗೆ ಬುದ್ಧಿಬಲಸ್ವರೂಪವಾಗಿಯೂ ಇದ್ದ ಅಲ್ಲಮ ಅಥವಾ ಪ್ರಭುದೇವರ ಕಥೆಯನ್ನು ಹೇಳಿದೆ. ನಾಯಕನ ಪಾತ್ರರಚನೆಯನ್ನು ಚೆನ್ನಾಗಿ ತಂದು ಅವನ ಆಧ್ಯಾತ್ಮಿಕ ಉನ್ನತಿಯು ನಮ್ಮ ಕಣ್ಣುಮುಂದೆ ಕಟ್ಟುವಂತೆ ಮಾಡಿದ್ದಾನೆ. ಇದರ ಶೈಲಿಯು ಕೂಡ ಕಥಾವಸ್ತುವಿಗೆ ಅನುಸಾರವಾಗಿದೆ. ಇತರ ಮತ್ತು ಈಚಿನ ಯಾವ ವೀರಶೈವಗ್ರಂಥಗಳೂ ಈ ಮಟ್ಟಕ್ಕೆ ಏರಲಾರವು. ಪಾಲ್ಕುರಿಕೆ ಸೋಮನು ಸಂಸ್ಕೃತ, ತೆಲುಗು, ಕನ್ನಡ ಭಾಷೆಗಳಲ್ಲಿ ಉದ್ದಾಮಗ್ರಂಥಕಾರನಾದರೂ ವಿರಕ್ತತೋಂಟದಾರ್ಯನು ತನ್ನ 'ಪಾಲ್ಕುರಿಕೆ ಸೋಮನಾಥ ಪುರಾಣ'ದಲ್ಲಿ ಅವನ ಜೀವನಚರಿತ್ರೆಯನ್ನು ಸರಿಯಾಗಿ ಸ್ವಾರಸ್ಯವಾದ ರೀತಿಯಲ್ಲಿ ತರದೆ ಅವನಿಗೆ ಅನ್ಯಾಯಮಾಡಿದ್ದಾನೆ. ಕಥೆಯ ಮಧ್ಯದಲ್ಲಿ ಇತರ ಅನೇಕ ಕೆಲಸಕ್ಕೆ ಬಾರದ ಘಟನೆಗಳನ್ನೆಲ್ಲಾ ತಂದು ಸೇರಿಸಿ ಮಧ್ಯೆ ಎಲ್ಲೋ ಒಂದೊಂದುಕಡೆ ನಾಯಕನ ಜೀವನದಲ್ಲಿ ನಡೆದ ಒಂದೆರಡು ಘಟನೆಗಳನ್ನು ಮಾತ್ರ ಹೇಳಿದ್ದಾನೆ. ಇದು ಒಂದಕ್ಕೊಂದಕ್ಕೆ ಸಂಬಂಧವಿಲ್ಲದ ನೂರಾರು ಕಥೆಗಳು ಸೇರಿಸಿ ಹೊಲಿದ ಬಂತೆಯಂತಿದೆ; ಬಗೆಬಗೆಯ ಪದಾರ್ಥಗಳನ್ನೊಳಗೊಂ

ರೀತಿರಂಗವಿಲ್ಲದ ರಾಶಿಯಂತಿದೆ. ವೀರಶೈವ ಕಥಾನಕಗಳ ನಿಘಂಟುವಾಗಿರುವುದರಿಂದ ಇದಕ್ಕೆ ಸ್ವಲ್ಪ ಬೆಲೆಯುಂಟು.

ರೇವಣಸಿದ್ಧೇಶ್ವರನು ಪುರಾತನನೋ, ನೂತನಪುರಾತನನೋ ನಿರ್ಣಯಿಸುವುದು ಕಷ್ಟದಕೆಲಸ. ವೀರಶೈವರಲ್ಲಿ ಪ್ರಾಚೀನ ಸಂಪ್ರದಾಯಸ್ಥರಾದ ಆರಾಧ್ಯರು ರೇವಣಸಿದ್ಧನಿಗೆ ಪುರಾತನತ್ವವನ್ನು ಕಲ್ಪಿಸಿದ್ದರೆ ಬಸವನ ಅನುಯಾಯಿಗಳು ಅವನು ಬಸವನ ಸಮಕಾಲೀನನೆಂದು ಅಭಿಪ್ರಾಯಪಡುತ್ತಾರೆ. ರೇವಣಸಿದ್ಧೇಶ್ವರನ ವಿಷಯದಲ್ಲಿ ಸಿಕ್ಕುವ ಬಹಳ ಹಳೆಯ ಕಥೆ ಎಂದರೆ ಹರಿಹರನದು.* ಮಲ್ಲಣನೂ (೧೪೧೩) ಚತುರ್ಮುಖ ಬೊಮ್ಮರಸನೂ (೧೫೦೦) ಕಥೆಯನ್ನು ಹರಿಹರನು ಹೇಳುವ ಹಾಗೆಯೇ ಹೇಳುತ್ತಾರೆ. ವೀರಶೈವ ಪಂಚಾಚಾರ್ಯರಲ್ಲಿ ಒಬ್ಬನಾದ ಪಂಡಿತಾರಾಧ್ಯನು ಮಾಡಿದ ಕೆಲಸಗಳನ್ನು ವರ್ಣಿಸುವ ನೀಲಕಂಠಶಿವಾಚಾರ್ಯನ (೧೪೮೫) 'ಆರಾಧ್ಯ ಚರಿತ್ರೆ'ಯು ಇತರ ಮತಗಳಿಗಿಂತ ವೀರಶೈವವೇ ಉತ್ತಮವಾದದ್ದೆಂದು ಹೇಳುವ ವಾದಗ್ರಂಥವಾಗಿರುವುದರಿಂದ ಅದಕ್ಕೆ ಸ್ವಲ್ಪ ಬೆಲೆ ಕೊಡಬಹುದು.

ವೀರಶೈವ ಸಾಹಿತ್ಯದಲ್ಲಿ ಮಹದೇವಿಯಕ್ಕನ ಹೆಸರು ಬಹಳ ಪ್ರಸಿದ್ಧವಾದದ್ದು. ಹರಿಹರನಿಂದ ಈಚೆಗೆ ಆಕೆಯ ಜೀವನಚರಿತ್ರೆಯನ್ನು ಬರೆದವರು ಅನೇಕರು. ಅವರಲ್ಲಿ ಚೆನ್ನಬಸವಾಂಕನು (೧೫೫೦) ಬರೆದ 'ಮಹದೇವಿಯಕ್ಕನ ಪುರಾಣವು'ವು ಬಹಳ ದೊಡ್ಡ ಗ್ರಂಥವಾದರೂ ಕಾವ್ಯದೃಷ್ಟಿಯಿಂದ ಚೆನ್ನಾಗಿಲ್ಲದಿಲ್ಲ. ಈ ಗ್ರಂಥವನ್ನು ಅನೇಕ ದೇಶೀಯ ಛಂದಸ್ಸುಗಳಲ್ಲಿ ಬರೆದು ಅದರ ನಾಯಕಿಯು ಪಟ್ಟ ಅನೇಕ ತೊಂದರೆಗಳನ್ನು ಚೆನ್ನಾಗಿ ತಂದಿದ್ದಾನೆ. ಬಸವನ ಸಮಕಾಲೀನನೂ, ವಚನಕಾರನೂ ಆದ ಚಿಕ್ಕಯ್ಯನ ಕಥೆಯನ್ನು ಬಸವಕವಿಯು (೧೫೫೦) ಬರೆದಿದ್ದಾನೆ. ಈ ಗ್ರಂಥ ಸಾಂಗತ್ಯದಲ್ಲಿದೆ. ಇದರ ನಾಯಕನು ಕಸುಬಿನಲ್ಲಿ ಕಳ್ಳನಾಗಿದ್ದು ಬಸವಣ್ಣನನ್ನು ಕೊಲ್ಲಲು ಪ್ರಯತ್ನಪಟ್ಟಾಗ ಅವನ ಪ್ರಭಾವದಿಂದ ಶಿವಭಕ್ತನಾಗಿಬಿಡುತ್ತಾನೆ. ಇಷ್ಟರ ಜೊತೆಗೆ ಬಸವಾಂಕನ (೧೫೫೦) 'ಉದ್ಭಟದೇವಚರಿತೆ'ಯನ್ನೂ ಹೇಳಬಹುದು.

(iv) ನೂತನ ಪುರಾತನರಲ್ಲಿ ಕೆಲವರಿಗೆ ಮಾತ್ರ ಜೀವನಚರಿತ್ರೆಯ ಮೂಲಕ ಸ್ಮಾರಕವನ್ನು ಪಡೆಯಲು ಅದೃಷ್ಟ ಉಂಟಾಗಿತ್ತು. ಹಿಂದೆ ಹೇಳಿದ ತೋಂಟದ

---

* ವಿಕ್ರಮಶಕ ೧೦೧೬ ಅಥವಾ ಕ್ರಿ.ಶ. ೯೫೫ರಲ್ಲಿ ಸಿದ್ಧನಾಥ ಶಿವಾಚಾರ್ಯನಿಂದ ಸಂಸ್ಕೃತದಲ್ಲಿ ರಚಿತವಾದ 'ರೇಣುಕವಿಜಯ'ವೆಂಬ ಗ್ರಂಥ ಒಂದಿದೆ. ಆದರೆ ಅದರಲ್ಲಿ ಬಿಜ್ಜಳ ರಾಜನನ್ನು ಕುರಿತ ಉಲ್ಲೇಖ ಕಂಡುಬರುತ್ತದೆ. ಬಿಜ್ಜಳನ ಕಾಲ ೧೧೫೬–೧೧೬೭. ಇದನ್ನು ನೋಡಿದರೆ ಈ ಗ್ರಂಥ ಹುಟ್ಟಿದ ಕಾಲವು ಉದ್ದೇಶಪೂರ್ವಕವಾಗಿಯೇ ಹಿಂದಕ್ಕೆ ಹಾಕಲ್ಪಟ್ಟಿದೆಯೆನ್ನಿಸುತ್ತದೆ.

ಸಿದ್ಧಲಿಂಗಯತಿಯ ಕೆಲಸಗಳ ವಿಷಯವಾಗಿ ಎರಡು ಪುರಾಣಗಳಿವೆ. 'ಸಿದ್ಧೇಶ್ವರ ಪುರಾಣ'ವೆಂಬುದನ್ನು ವಿರಕ್ತ ತೋಂಟದಾರ್ಯನೂ (೧೫೬೦), 'ತೋಂಟ ಸಿದ್ಧೇಶ್ವರ ಪುರಾಣ'ವೆಂಬುದನ್ನು ೧೫೬೧ರಲ್ಲಿ ಶಾಂತೇಶನೂ ಬರೆದರು. ಇವೆರಡು ಗ್ರಂಥಗಳೂ ಕಥಾನಾಯಕನ ವಿಷಯವನ್ನು ಕುರಿತು ಕೆಲವು ಮಾತುಗಳನ್ನು ಮಾತ್ರ ಹೇಳಿ ಅವನ ಪವಾಡಗಳು, ಅವನು ಪ್ರವಾಸಕ್ಕೆ ಹೊರಟಾಗ ಮಧ್ಯೆ ಮಧ್ಯೆ ನಡೆದ ಕೆಲವು ಘಟನೆಗಳು—ಇನನ್ನು ವಿಶದವಾಗಿ, ವಿಸ್ತಾರವಾಗಿ ಹೇಳುತ್ತವೆ. ಕಪಿಲಾ ನದಿಯ ತೀರದಲ್ಲಿರುವ ಹರದನಹಳ್ಳಿಯ ಗೋಸಾಲ ಚನ್ನ ಬಸವಾಂಕನು ಇವನ ಆಧ್ಯಾತ್ಮಿಕಗುರು. ಇತ್ತೀಚೆಗೆ ಹೊಯ್ಸಳ ಬಲ್ಲಾಳರ ಕೊನೆಯ ಕಾಲದ್ದೆಂದು ತಿಳಿದುಬರುವ ಒಂದು ತಾಮ್ರಶಾಸನವು ಸಿಕ್ಕಿದೆ. ಅದರಲ್ಲಿ ಈ ಗುರುವಿಗೆ ಸಂಬಂಧಿಸಿದ ಹಾಗೆ ಕೆಲವು ವಿಷಯಗಳನ್ನು ಹೇಳಿದೆ. ಆದರೆ ಈ ಶಾಸನ ಕೂಟಶಾಸನವೆಂದು ತೋರಿ ಬರುತ್ತದೆ.

(v) ವೀರಶೈವ ಪೌರಾಣಿಕ ಕಥೆಗಳನ್ನೊಳಕೊಂಡಿರುವ ಗ್ರಂಥಗಳು ಎಲ್ಲೋ ಕೆಲವು ಮಾತ್ರ ಇವೆ. ಲಕ್ಕಣದಂಡೇಶನ (೧೪೨೮) 'ಶಿವತತ್ವ ಚಿಂತಾಮಣಿ'ಯಾದ ಮೇಲೆ ಸಿಕ್ಕುವ ಈ ರೀತಿಯ ಮುಖ್ಯಗ್ರಂಥವೆಂದರೆ ಗುಬ್ಬಿ ಮಲ್ಲಣಾರ್ಯನ (೧೫೧೩) 'ವೀರಶೈವಾಮೃತಪುರಾಣ' ಒಂದೇ. ಇದು ಎಲ್ಲಕ್ಕಿಂತಲೂ ದೊಡ್ಡದಾದ ವಾರ್ಧಕಷಟ್ಪದಿಯಲ್ಲಿ ಬರೆದ ಏಳುಸಾವಿರ ಪದ್ಯಗಳುಳ್ಳ ಭಾರಿ ಪುಸ್ತಕ. ಇದಕ್ಕೆ ವಸ್ತುವಾದ ಪುರಾಣಕಥೆಗಳನ್ನು ಅನೇಕ ಕಡೆಗಳಿಂದ ತೆಗೆದುಕೊಂಡದ್ದಾಗಿದೆ. 'ಬಸವ ಪುರಾಣ'ದಲ್ಲಿ ಆಗಲೇ ಕಂಡುಬರುವ ಅನೇಕ ಕಥೆಗಳನ್ನೇ ಕುಮಾರ ಚನ್ನ ಬಸವಾಂಕನು (೧೫೫೦) ತನ್ನ ಗ್ರಂಥದಲ್ಲಿ ಇನ್ನೂ ವಿಸ್ತರಿಸಿ ಹೇಳುತ್ತಾನೆ. ಆದರೆ ಕಿಕ್ಕೇರಿಯ ಆರಾಧ್ಯನಂಜುಂಡನು (೧೫೫೦) ತನ್ನ ಗ್ರಂಥದಲ್ಲಿ ಇತರ ಕೆಲವು ಕಥೆಗಳನ್ನು ಹವಣರಿತು ಎಷ್ಟು ಬೇಕೋ ಅಷ್ಟನ್ನು ಹೇಳಿದ್ದಾನೆ.

ಶಕ್ತಿಯುತನೂ ವಿದ್ಯಾವಂತನೂ ಆದ ಯಾವನೊಬ್ಬನೇ ಆಗಲಿ ಮೇಲೆ ಹೇಳಿದ ಎಲ್ಲ ಗ್ರಂಥಗಳನ್ನು ಮನಸ್ಸಿಟ್ಟು ಓದಿ ವೀರಶೈವ ಪೌರಾಣಿಕ ಕಥೆಗಳ ಅಕಾರಾದಿಯನ್ನು ಮಾಡಿಟ್ಟರೆ ಕನ್ನಡ ಸಾಹಿತ್ಯಾಭ್ಯಾಸಿಗಳಿಗೆ ಅಪಾರವಾದ ಸಹಾಯವನ್ನು ಮಾಡಿದಂತಾಗುತ್ತದೆ.

(ii) ವಚನಗಳು :—ವೀರಶೈವ ಸಾಹಿತ್ಯಕ್ಕೆ ವಿಶಿಷ್ಟವಾದ ವಚನಸಾಹಿತ್ಯವಿಲ್ಲದೆ ಆ ಮತಸುಧಾರಣೆ ನಡೆಯಲಾರದು. ಈ ಕಾಲದ ವಚನಸಾಹಿತ್ಯವು ಎರಡು ಪಂಗಡಗಳಾಗಿದೆ. ಮೊದಲನೆಯದು ಸ್ವತಂತ್ರವಾದ ವಚನ ರಚನೆ; ಎರಡನೆಯದು ಸಂಕಲನ. ಹೊಸದಾಗಿ ಬರೆದವರಲ್ಲಿ ಈ ಚಳುವಳಿಗೆ ಕೇಂದ್ರಸ್ವರೂಪನಾದ ತೋಂಟದ

ಸಿದ್ಧಲಿಂಗನೇ (೧೪೭೦) ಮುಖ್ಯನು. ಆದರೆ ಅವನ ವಚನಗಳು ಕಾವ್ಯದ ಕಾವಿಲ್ಲದೆ ಉಪದೇಶಾತ್ಮಕವಾಗಿ ಸಾಹಿತ್ಯದೃಷ್ಟಿಯಿಂದ ನೀರಸವಾಗಿವೆ. ಬಸವನೂ ಅವನ ಅನುಯಾಯಿಗಳೂ ಬರೆದ ವಚನಗಳೊಡನೆ ಹೋಲಿಸಿ ನೋಡಿದರೆ ಇವನ ವಚನಗಳು ನಿಕೃಷ್ಟವಾದವುಗಳೆಂದು ಹೇಳಬಹುದು. ಇವನ ಜೊತೆಗೆ ಜಕ್ಕಣಾರ್ಯನನ್ನೂ (೧೪೩೦), ಸ್ವತಂತ್ರ ಸಿದ್ಧಲಿಂಗನನ್ನೂ (೧೪೮೦), ಗುಮ್ಮಳಾಪುರದ ಸಿದ್ಧಲಿಂಗನನ್ನೂ (೧೪೮೦) ಹೆಸರಿಸಬಹುದು. ಹಳೆಯ ಗ್ರಂಥಕರ್ತರ ಗ್ರಂಥಗಳಿಂದ ಸಂಕಲನ ಮಾಡುವುದು, ಒಂದು ಉದ್ದೇಶದಿಂದ ಕ್ರಮವರಿತು ಜೋಡಿಸುವುದು, ಎಲ್ಲಿಬೇಕೋ ಅಲ್ಲಿ ತಕ್ಕ ವ್ಯಾಖ್ಯಾನಗಳನ್ನು ಬರೆಯುವುದು ಈ ರೀತಿಯ ಕೆಲಸ ಎರಡನೆಯ ಪಂಗಡದ ವಚನಗಳಿಗೆ ಕಾರಣವಾಯಿತು. ಇವುಗಳಲ್ಲೆಲ್ಲಾ 'ಶೂನ್ಯಸಂಪಾದನೆ'ಯು ಬಹಳ ಮುಖ್ಯವಾಗಿಯೂ ಸ್ವಾರಸ್ಯವಾಗಿಯೂ ಇದೆ. ಉಳಿದುವು ಅಷ್ಟೇನೂ ಗಮನಾರ್ಹವಾದುವುಗಳಲ್ಲ.

(iii) ವ್ಯಾಖ್ಯಾನಗಳು:—ಸಣ್ಣವು ದೊಡ್ಡವು ಎಲ್ಲವನ್ನೂ ಸೇರಿಸಿದರೆ ಒಟ್ಟು ಹತ್ತುಹನ್ನೆರಡು ವ್ಯಾಖ್ಯಾನ ಬರೆದ ಗ್ರಂಥಗಳು ಸಿಕ್ಕುತ್ತವೆ. ಕೆಲವು ಕನ್ನಡ ಗ್ರಂಥಗಳಿಗೂ ವ್ಯಾಖ್ಯಾನ ಬರೆದಿರುವುದು ಗಮನಾರ್ಹವಾದ ವಿಷಯ. ಇವುಗಳಲ್ಲಿ ಸ್ವಲ್ಪ ಬೆಲೆಯುಳ್ಳ ಕೆಲವನ್ನು ಮಾತ್ರ ಇಲ್ಲಿ ನೋಡಬಹುದು. ಇವುಗಳಲ್ಲೆಲ್ಲಾ ಸಂಸ್ಕೃತದ ಆರು ಸ್ತೋತ್ರಗಳ ಮೇಲೆ ವ್ಯಾಖ್ಯಾನ ಬರೆದಿರುವ ಗುರುದೇವನದೇ (೧೩೫೦) ಮೊದಲನೆಯದು. ಭಟ್ಟಭಾಸ್ಕರ 'ಯಜುರ್ವೇದ ಭಾಷ್ಯ'ದ ಮೇಲೆ ಕನ್ನಡದಲ್ಲಿ ಗುರುನಂಜನು (೧೫೦೦) ಬರೆದ ವ್ಯಾಖ್ಯಾನವು ಬಹಳ ಪಾಂಡಿತ್ಯವುಳ್ಳುದೆಂದು ಹೇಳುತ್ತಾರೆ. ಚನ್ನವೀರನು 'ಸಾರಸ್ವತ ವ್ಯಾಕರಣ' ಮತ್ತು ಇತರ ಗ್ರಂಥಗಳ ಮೇಲೆ ಬರೆದ ವ್ಯಾಖ್ಯಾನಗಳು ಪ್ರೌಢವಾದುವು. ಈಗ ಅಚ್ಚಾಗುತ್ತಲಿರುವ ಇವನ 'ಕಾಶಕೃತ್ಸ್ನಧಾತು ವ್ಯಾಖ್ಯಾನ'ವು ಭಾಷಾಶಾಸ್ತ್ರದೃಷ್ಟಿಯಿಂದ ಬಹಳ ಮುಖ್ಯವಾಗಿದೆ. ಬಹಳವಾದ ವ್ಯಾಖ್ಯಾನಗಳನ್ನು ಬರೆದ ಶ್ರೀಧರಾಂಕ (೧೫೫೦) ಮತ್ತು ಸದಾನಂದಯೋಗಿ (೧೪೮೦) ಇವರ ಹೆಸರುಗಳು ಹೇಳಲರ್ಹವಾದುವು. ಮಗ್ಗೆಯ ಮಾಯಿದೇವನ ಮೂರು ಕನ್ನಡ ಶತಕಗಳ ಮೇಲೆ ವಿರಕ್ತ ತೋಂಟದಾರ್ಯನು (೧೫೬೦) ಕನ್ನಡದಲ್ಲಿ ಟಿಪ್ಪಣಿಯನ್ನು ಬರೆದಿದ್ದಾನೆ.

(iv) ಇತರ ಗ್ರಂಥಗಳು:—ಈ ಗುಂಪಿನ ಕೆಳಗೆ ಬರುವ ಕಾವ್ಯಗಳಲ್ಲಿ ಕೆಲವು ಬಹು ಸ್ವಾರಸ್ಯವಾಗಿವೆ. ಸಾಹಿತ್ಯಸೇವೆಯಲ್ಲಿ ರಾಜಮನೆತನಕ್ಕೆ ಸೇರಿದ ಇಬ್ಬರು ಕವಿಗಳು ನಿರತರಾಗಿರುವುದು ಕಂಡುಬರುತ್ತದೆ. ವಿಜಯನಗರದ ಅರಸುಮನೆತನಕ್ಕೆ ಸೇರಿದ ದೇಪರಾಜನು (೧೪೧೦) ಒಬ್ಬನು. ಇವನು 'ಸೊಬಗಿನ ಸೋನೆ',

'ಅಮರುಕ' ಎಂಬ ಎರಡು ಗ್ರಂಥಗಳ ಕರ್ತೃ. ಇದರಲ್ಲಿ ಮೊದಲನೆಯದು ಶೃಂಗಾರಪೂರಿತವಾದ ಕೆಲವು ಕಥೆಗಳ ಗುಚ್ಛ; ಎರಡನೆಯದು ಅಮರು ಎಂಬ ಕವಿಯು ಸಂಸ್ಕೃತದಲ್ಲಿ ಬರೆದ ಪ್ರಖ್ಯಾತಿಹೊಂದಿದ ಶತಕದ ಭಾಷಾಂತರವಾದರೂ ಕನ್ನಡ ಸಾಹಿತ್ಯದಲ್ಲಿ ಈ ರೀತಿಯ ಗ್ರಂಥ ಸಿಕ್ಕುವುದು ಅಪರೂಪ. ಕಾರ್ಕಳದ ಪ್ರಭುವಾದ ರಾಮೇಂದ್ರನು (೧೫೫೦) ಇನ್ನೊಬ್ಬನು. ಇವನು 'ಸೌಂದರ್ಯ ಕಥಾರತ್ನ'ವೆಂಬ ಗ್ರಂಥವನ್ನು ತ್ರಿಪದಿಯಲ್ಲಿ ಬರೆದಿದ್ದಾನೆ. ಕ್ಷೇಮೇಂದ್ರನ ಗ್ರಂಥದ ಆಧಾರದ ಮೇಲೆ, ಇಂಡಿಯಾ ದೇಶದ ಕಥಾಸಾಹಿತ್ಯದಲ್ಲಿ ಪ್ರಸಿದ್ಧಿ ಹೊಂದಿರುವ 'ಬತ್ತೀಸಪುತ್ಥಳಿ' ಕಥೆಗಳನ್ನು ಹೇಳಿದ್ದಾನೆ. ಕಥನಕವನದಲ್ಲಿ ತ್ರಿಪದಿಯನ್ನು ಪಯೋಗಿಸಿಕೊಂಡಿರುವುದೇ ಈ ಕವಿಯ ವೈಶಿಷ್ಟ್ಯ. ಚಂದ್ರಕವಿಯು (೧೪೩೦) ಹಂಪೆಯ ವಿರೂಪಾಕ್ಷ ದೇವಾಲಯದ ಸಭಾಂಗಣವನ್ನು ಉತ್ತಮರೀತಿಯಲ್ಲಿ ವರ್ಣಿಸಿ ಓದುವುದಕ್ಕೆ ಸೊಗಸಾಗಿರುವಂತೆ ಒಂದು ಗ್ರಂಥ ಬರೆದಿದ್ದಾನೆ. ಅಭಿನವವಾದಿ ವಿದ್ಯಾನಂದನು (೧೫೫೩) ತನ್ನ ಹಳಗನ್ನಡ ಪದ್ಯಗಳ ಸಂಕಲನ ಗ್ರಂಥವಾದ 'ಕಾವ್ಯಸಾರ'ದಲ್ಲಿ ಚಂದ್ರಕವಿಯ ಪದ್ಯಗಳನ್ನು ಉದ್ಧರಿಸಿರುವುದೇ ಇವನ ಹಿರಿಮೆಯನ್ನು ಹೇಳಲು ಸಾಕಾಗಿದೆ. ಪ್ರಭುಗನು (೧೫೦೦) ಇದೇ ಉದ್ದೇಶದಿಂದಲೇ 'ಚೂಡನಾಸ್ಥಾನ' ಮತ್ತು 'ವೈಭೋಗ ರಾಜಾಸ್ಥಾನ' ಎಂಬ ಎರಡು ಗ್ರಂಥಗಳನ್ನು ಬರೆದಿದ್ದಾನೆ. ಆದರೆ ಕೈಲಾಸದಲ್ಲಿರುವ ಶಿವನ ಮಹತ್ವವನ್ನು ಹೊಗಳಿ ಪ್ರೌಢವಾದ ಭಾಷೆಯನ್ನು ಉಪಯೋಗಿಸಿದ್ದಾನೆ. ಉಳಿದ ಗ್ರಂಥಗಳಲ್ಲಿ ಸದಾಶಿವನ (೧೫೫೪) 'ರಾಮನಾಥ ವಿಲಾಸ'ವನ್ನೂ, ಮುರಿಗೆದೇಶಿಕೇಂದ್ರನ (೧೫೭೦) 'ರಾಜೇಂದ್ರ ವಿಜಯ'ವನ್ನೂ ಆಗ ಬಳಕೆಯಲ್ಲಿಲ್ಲದ ಚಂಪೂ ಶೈಲಿಯಲ್ಲಿ ರಚಿತವಾಗಿರುವುದರಿಂದ ಇಲ್ಲಿ ಹೆಸರಿಸಬಹುದು.

## ೩. ಬ್ರಾಹ್ಮಣರ ಪುರಾಣಗಳು

ಬಹಳ ಹಿಂದೆಯೇ ಆರಂಭವಾಗಿ ರುದ್ರಭಟ್ಟ (೧೧೮೦), ನರಹರಿತೀರ್ಥ (೧೨೮೧) ಇವರ ಕಾವ್ಯಗಳ ಮೇಲೆ ತನ್ನ ಪ್ರಭಾವವನ್ನು ಬೀರಿರುವ ವೈಷ್ಣವಮತದ ಚಳುವಳಿಯು ವಿಜಯನಗರದ ಪರಿಪೋಷಣೆಯಲ್ಲಿ ಹೆಚ್ಚು ಶಕ್ತಿಯನ್ನು ಪಡೆಯಿತು. ಆಗಿನ ಕಾಲದ ಚಳುವಳಿಗಳಲ್ಲಿ ವೈದಿಕ ಭಕ್ತಿಪಂಥವು ಬಹಳ ಪ್ರಭಾವಶಾಲಿಯಾಗಿತ್ತು. ಇದುವರೆಗೂ ಸಂಸ್ಕೃತಕ್ಕೇ ಹೆಚ್ಚು ಒಲವಿತ್ತ ಬ್ರಾಹ್ಮಣ ಕವಿಗಳು ತಮ್ಮ ಧಾರ್ಮಿಕಗ್ರಂಥಗಳಲ್ಲಿ ಅಡಗಿರುವ ತತ್ವಗಳನ್ನು ಕನ್ನಡಭಾಷೆಯಲ್ಲಿ ಜಾತಿಮತ ಭೇದವನ್ನೆಣಿಸದೆ ಎಲ್ಲರಿಗೂ ತಿಳಿಸಲು ಮುಂದೆ ಬಂದರು. ಅವರಲ್ಲಿ ಕೆಲವರು ವೈದಿಕ ಇತಿಹಾಸ ಕಥೆಗಳನ್ನು ದೇಶಭಾಷೆಯಲ್ಲಿ ಬರೆಯಲು ಪ್ರಾರಂಭಿಸಿದರು. ಇನ್ನು

ಕೆಲವರು ತಮ್ಮ ಸಕಲಸಂಪತ್ತನ್ನೂ ಮನೆಮಠಗಳನ್ನೂ ತ್ಯಜಿಸಿ ದೇಶದಿಂದ ದೇಶಕ್ಕೆ ಸಂಚಾರಮಾಡುತ್ತಾ ಉಪನಿಷತ್ತುಗಳ ತತ್ವಗಳನ್ನು ಜನರ ಭಾಷೆಯಲ್ಲಿ ಹಾಡಿನ ರೂಪದಲ್ಲಿ ಸಾರುತ್ತ ಹೊರಟರು. ಇತಿಹಾಸ ರಚನೆಯ ಮೂಲಕ ಕವಿಗಳು ಮಾಡಿದ ಕೆಲಸವನ್ನೇ ಹರಿದಾಸರು ಹಾಡುಗಳಿಂದ ನೆರವೇರಿಸಿದರು. ಇವರ ಉತ್ಸಾಹಪೂರಿತವಾದ ಶ್ರದ್ಧೆ ಸಾಮಾನ್ಯಜನರನ್ನು ಆಕರ್ಷಿಸಿದ್ದಲ್ಲದೆ ಅವರಲ್ಲಿ ಉತ್ತಮವಾದ ಸಂಸ್ಕೃತಿಯನ್ನೂ ಉದಾತ್ತವಾದ ಜೀವನಾದರ್ಶಗಳನ್ನೂ ಉಂಟುಮಾಡಿದುವು. ಆ ಕಾಲದ ಶಾಸನಗಳಲ್ಲಿ ಉಲ್ಲೇಖಿತವಾಗಿರುವ ಅಸಂಖ್ಯಾತವಾದ ದಾನಧರ್ಮ ಕಾರ್ಯಗಳು ಇದಕ್ಕೆ ಸಾಕ್ಷಿ.

(i) (*a*) ಮಹಾಭಾರತ, ರಾಮಾಯಣ, ಭಾಗವತಗಳ ಕಥೆಗಳನ್ನು ಅಳವಡಿಸಿಕೊಂಡು ಬರೆದ ಇತಿಹಾಸ ಗ್ರಂಥಗಳ ವಿಮರ್ಶೆಗೆ ಹೊರಡೋಣ. ನಮಗೆ ಗೊತ್ತಿರುವ ಮಟ್ಟಿಗೆ ಕನ್ನಡ ಕವಿಗಳ ಹೃದಯವನ್ನು ಮೊದಲು ಸೂರೆಗೊಂಡುದು ಮಹಾಭಾರತ. ಕನ್ನಡಕ್ಕೆ ಆದಿಕವಿಯಾದ ಪಂಪನು ಹತ್ತನೆಯ ಶತಮಾನದಲ್ಲೇ ಉದಾತ್ತವಾದ ಮತ್ತು ಪ್ರಭಾವಯುತವಾದ ಈ ಕಥೆಯನ್ನು ಬರೆದಿಟ್ಟನು. ಆದರೆ ಇವನು ವಿದ್ಯಾವಂತರು ಕೆಲವರಿಗೆ ಮಾತ್ರ ರುಚಿಸುವಂತೆ ಬರೆದನು. ಜನರೆಲ್ಲರಿಗೂ ಸೊಗಸುವಂತೆ, ಎಲ್ಲರಲ್ಲಿ ಆವೇಶಬರುವಂತೆ ಕಥೆಯನ್ನು ಮಾರ್ಪಡಿಸಿ 'ಗದುಗಿನ ಭಾರತ'ವೆಂದು ಪ್ರಸಿದ್ಧವಾಗಿರುವ ಗ್ರಂಥವನ್ನು ಬರೆಯುವ ಅದೃಷ್ಟ ಕುಮಾರವ್ಯಾಸನ ಪಾಲಿಗೆ ಬಂತು. ಇದು ಮೂಲಭಾರತದ ಭಾಷಾಂತರವಾಗಿರದೆ ಸ್ವತಂತ್ರವಾಗಿ ಬರೆದ ಗ್ರಂಥವಾಗಿದೆ. ಮಹಾಭಾರತದ ಅನೇಕ ನಾಯಕರ ಆಗುಹೋಗುಗಳಿಗೆ ಕಾರಣೀಭೂತನಾದ, ಭಾರತದಲ್ಲಿ ಎಲ್ಲೆಲ್ಲಿಯೂ ಅವನ ಕೈವಾಡ ಕಂಡುಬರುವ ಕೃಷ್ಣನನ್ನು ಹೊಗಳುವುದೇ ಕವಿಯ ಉದ್ದೇಶ. ಗದುಗಿನ ವೀರನಾರಾಯಣ ದೇವತೆಯ ಕರುಣೆಯಿಂದ ಕುಮಾರವ್ಯಾಸನ ವಾಣಿ ಪ್ರಾಸಾದಿಕವಾಗಿ ಪರಿಣಮಿಸಿ ಆವೇಶಮಯವಾದ ಚಿಲುಮೆಯಂತೆ ಉಕ್ಕಿ ಸೂಸಿದೆ. ಕರ್ಣಾಟಕ ದೇಶವು ಕಂಡಿರುವ ಪ್ರಖ್ಯಾತ ಕವಿಗಳಲ್ಲಿ ಪಂಪನೊಬ್ಬನನ್ನು ಬಿಟ್ಟರೆ ಎರಡನೆಯವನು ಕುಮಾರವ್ಯಾಸನೊಬ್ಬನೇ ಎಂದು ಹೇಳಿದರೆ ಅದು ಅತಿಶಯೋಕ್ತಿ ಎನಿಸಲಾರದು. ಅವನ ಅದ್ಭುತ ಪ್ರತಿಭೆ, ತುಂಬು ಅನುಭವ, ಸರಳವಾದ, ಸ್ಫೂರ್ತಿಯುತವಾದ, ಸುಂದರವಾದ ಶೈಲಿ, ತಡೆಯಿಲ್ಲದ ಓಟ, ಕುಗ್ಗದ ಉತ್ಸಾಹ, ಶ್ರದ್ಧಾಭಕ್ತಿ, ಪಾತ್ರ, ಸನ್ನಿವೇಶಗಳ ಚಿತ್ರಗಳನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುವ ರೀತಿ, ಹೊಸದಾದ ಮತ್ತು ಅನಿರೀಕ್ಷಿತವಾದ ಉಪಮೆ ರೂಪಕಗಳು—ಇವೆಲ್ಲಾ ಅವನ ಕಾವ್ಯವನ್ನು ಚಿರಸ್ಥಾಯಿಯಾಗಿಯೂ ಅಲೌಕಿಕವಾಗಿಯೂ ಮಾಡಿವೆ. ಎಂದೆಂದಿಗೂ ಮರೆಯದ, ಮಸುಳದ, ಕೀರ್ತಿಕಾಂತಿ ಅವನದು.

(*b*) ಕುಮಾರವ್ಯಾಸನು ಭಾರತದ ಕೊನೆಯ ಎಂಟು ಪರ್ವಗಳನ್ನು ಬರೆಯಲು ಇಚ್ಛಿಸಲಿಲ್ಲ. ಈ ಪರ್ವಗಳನ್ನು ಕೃಷ್ಣದೇವರಾಯನ ಅಪ್ಪಣೆಯಂತೆ ತಿಮ್ಮಣ್ಣ ಕವಿಯು ಬರೆದನು. ಅದು ಅಷ್ಟು ಶಕ್ತಿಯುತವಾಗಿಲ್ಲ. 'ಸುಕುಮಾರ ಭಾರತಿ' ಎಂಬ ಬಿರುದಿದ್ದ ಚಾಯಣಕವಿಯು (೧೫೫೦) ಮಹಾಭಾರತದ ಕಥೆಯನ್ನು ಕಾವ್ಯರೂಪ ವಾಗಿ ಬರೆದಿದ್ದಾನೆ. ಆದರೆ ಕವಿಯ ಅದೃಷ್ಟದಿಂದಲೋ ಎನ್ನುವಂತೆ ಅವನ ಕಾವ್ಯ ಪೂರ್ತಿಯಾಗಿ ದೊರೆತಿಲ್ಲ. ಮದ್ರಾಸಿನ ಪುಸ್ತಕ ಭಂಡಾರದಲ್ಲಿರುವ ಈ ಗ್ರಂಥದ ಶಿಥಿಲವಾದ ಪ್ರತಿಯಲ್ಲಿ ಒಂದೆರಡು ಸಂಧಿಗಳು ಮಾತ್ರ ದೊರೆಯುತ್ತವೆ.

(*c*) ರಾಮಾಯಣದ ಕಥೆಯನ್ನು ಹೇಳುವುದರಲ್ಲಿ ಕುಮಾರವಾಲ್ಮೀಕಿಯ (೧೫೦೦) ರಾಮಾಯಣವು ಅಷ್ಟು ಸಮರ್ಪಕವಾಗಿಲ್ಲದಿದ್ದರೂ ಬಹಳ ಜನಪ್ರಿಯ ವಾದುದು. ಕುಮಾರವ್ಯಾಸನನ್ನೇ ಅನುಸರಿಸಿದ್ದರೂ ಅವನಷ್ಟು ಕವಿತಾಸಿದ್ಧಿ ಇವನಲ್ಲಿಲ್ಲ. ವೀರಶೈವನಾದ ಬತ್ತಲೇಶ್ವರನು ರಾಮಾಯಣ ಕಥೆಯನ್ನು ಕುರಿತು ಬರೆದಿರುವುದು ಆಶ್ಚರ್ಯಕರವಾದ ವಿಷಯ. ಈಚೆಗೆ ಮೈಸೂರು ಓರಿಯಂಟಲ್ ಲೈಬ್ರರಿಯು ಸಂಪಾದಿಸಿರುವ ಈ ಗ್ರಂಥದ ಕೈಬರಹದ ಪ್ರತಿಯೊಂದನ್ನು ಒಂದು ಸಾರಿ ಓದಿದರೆ ಅದರಲ್ಲಿರುವ ಶೈವ ವಾತಾವರಣವನ್ನೂ ವಾಲ್ಮೀಕಿ ರಾಮಾಯಣದಿಂದ ಬೇರೆಯಾದ ಕೆಲವು ಸನ್ನಿವೇಶಗಳನ್ನೂ ನೋಡಬಹುದು.

(*d*) ಭಾಗವತವನ್ನು ಎರಡು ಸಾರಿ ಕನ್ನಡದಲ್ಲಿ ಬರೆದಿದ್ದಾರೆ. ನಾರಾಯಣ ಕವಿಯು (೧೪೫೦) ಗದ್ಯದಲ್ಲಿ ಅದರ ಸಾರಾಂಶವನ್ನು ಬರೆದನೆಂದು ತಿಳಿದುಬಂದಿದೆ. ಆ ಗ್ರಂಥ ಪೂರ್ತಿಯಾಗಿ ಸಿಕ್ಕಿಲ್ಲ. ಇದು ಇನ್ನೊಂದು ಇದೇ ರೀತಿಯ ಗ್ರಂಥ ಹುಟ್ಟಲು ಮಾರ್ಗ ಮಾಡಿಕೊಟ್ಟು ಅದರ ಪ್ರಭಾವದಿಂದ ಕಣ್ಮರೆಯಾಗಿರಬಹುದು. 'ನಿತ್ಯಾತ್ಮ ಶುಕ'ನೆಂಬ ಬಿರುದುಳ್ಳ ಸದಾನಂದಯೋಗಿಯು (೧೫೩೦) ಪದ್ಯದಲ್ಲಿ ಭಾಗವತದ ಒಂದು ಗ್ರಂಥ ಬರೆದು ಪೂರೈಸಿದಂತೆ ತಿಳಿದುಬರುತ್ತದೆ. ಆದರೆ ಈ ಪುಸ್ತಕವನ್ನು ಪೂರೈಸಲು ಐದು ಜನರ ಕೈವಾಡವಿತ್ತೆಂದು ಕೆಲವರು ವಿದ್ವಾಂಸರು ಹೇಳುತ್ತಾರೆ. ಇದು ಹೇಗಾದರೂ ಇರಲಿ. ಕುಚೇಲನೇ ಮೊದಲಾದ ಕೆಲವರ ಕಥೆಗಳು ಜನರ ಮನಸ್ಸನ್ನು ಒಲಿಸಿಕೊಂಡಿರುವ ಅಂಶವು ಇದರಲ್ಲಿ ಒಳ್ಳೆಯ ಕಾವ್ಯವಿದೆ ಎಂಬುದನ್ನು ಸೂಚಿಸುತ್ತದೆ.

(ii) ಕಥೆಗಳು :—ಈ ಕಾಲದ ಬ್ರಾಹ್ಮಣ ಕವಿಗಳು ವಿಜಯನಗರದ ಶಿಲ್ಪಿಗಳಂತೆ ತಮ್ಮ ಕವಿತಾಶಕ್ತಿಯನ್ನು ಪ್ರದರ್ಶಿಸಿಕೊಳ್ಳಲು ಬೃಹದಾಕಾರದ ವಸ್ತುಗಳನ್ನು ಆರಿಸಿಕೊಳ್ಳುತ್ತಿದ್ದರು. ಆದರೆ ಕನ್ನಡಿಗರ ಮನೆಮಾತಾಗಿರುವ ಮತ್ತು ಆಧ್ಯಾತ್ಮಿಕ ದೃಷ್ಟಿಯಿಂದ ಬ್ರಾಹ್ಮಣರಿಗಿಂತ ಶ್ರೇಷ್ಠನಾಗಿರುವ ಕನಕದಾಸನು ಇತಿಹಾಸಗಳಲ್ಲಡ

ಗಿರುವ ಸಣ್ಣ ಕಥೆಗಳನ್ನು ಆರಿಸಿಕೊಂಡು ಸೊಗಸಾದ ಕಾವ್ಯಗಳನ್ನು ರಚಿಸಿದ್ದಾನೆ. ಅವನ 'ನಳಚರಿತ್ರೆ'ಯನ್ನು ಎಲ್ಲ ಹುಡುಗರೂ ಮೆಚ್ಚಿ ಬಾಯಿಪಾಠಮಾಡಿದ್ದಾರೆ. ಸರಳತೆ, ಸೌಕುಮಾರ್ಯ, ಅಲ್ಲಲ್ಲಿ ಬರುವ ನಯವಾದ ಹಾಸ್ಯ, ಕಥೆಯ ಓಟ ಇವೆಲ್ಲಾ ಈ ಕಾವ್ಯವನ್ನು ರಮಣೀಯವಾಗಿ ಮಾಡಿವೆ. ಶ್ರೀ ಕೃಷ್ಣನ ಜೀವನವನ್ನು ಹೇಳಲೋಸುಗ ಇವನೇ ಬರೆದ 'ಮೋಹನ ತರಂಗಿಣಿ'ಯು ಅಷ್ಟು ಜನಪ್ರಿಯ ವಾಗಿಲ್ಲದಿದ್ದರೂ ಅದರಲ್ಲಿ ಕವಿಯ ವ್ಯಕ್ತಿತ್ವ ಎದ್ದು ಕಾಣುತ್ತದೆ. ಇವನ 'ರಾಮಧಾನ್ಯ ಚರಿತೆ'ಯು ಬಹು ಸ್ವಾರಸ್ಯವಾದ ಕಥೆ; ಬಡವರ ಆಹಾರ ಪದಾರ್ಥವಾದ ರಾಗಿಯ ಮಾಹಾತ್ಮೆಯನ್ನು ಹೊಗಳಲು ಬಹುಶಃ ಕವಿಯೇ ಕಟ್ಟಿದ ಕಥೆ ಇರಬಹುದು. ಇದರಲ್ಲಿ ವಿಡಂಬನೆಯೂ ಹಾಸ್ಯವೂ ತುಂಬಿವೆ. ಆದರೆ ಕವಿಚರಿತ್ರೆಕಾರರಿಗೆ ಸಿಕ್ಕಿದ್ದ ಈ ಗ್ರಂಥದ ಒಂದೇ ಒಂದು ಪ್ರತಿಯು ಅದು ಇದ್ದ ಸ್ಥಳದಲ್ಲಿ ಈಗ ಇಲ್ಲದಿರುವುದು ಒಂದು ವಿಷಾದಕರವಾದ ಸಂಗತಿ. 'ಹರಿಶ್ಚಂದ್ರ ಸಾಂಗತ್ಯ'ವನ್ನು ಬರೆದ ರಾಮರಸ ವಿರೂಪಾಕ್ಷನ (೧೫೩೮) ಹೆಸರನ್ನೂ ಇಲ್ಲಿ ಹೇಳಬಹುದು.

## ೪. ಭಕ್ತಿಗೀತೆಗಳು

ದಾಸರಪದಗಳು ಎಂದು ಪ್ರಸಿದ್ಧಿಯಾಗಿರುವ ಭಾವಗೀತೆಗಳ ಸಾಹಿತ್ಯವು ಈ ಕಾಲದಲ್ಲಿ ಹೇರಳವಾಗಿ ಸಿಕ್ಕುತ್ತದೆ. ಅವುಗಳಲ್ಲಿ ಎಷ್ಟೋ ಇನ್ನೂ ಮುದ್ರಿತ ವಾಗಿಲ್ಲ ಮತ್ತು ಎಷ್ಟಿವೆ ಎಂಬುದೂ ಸರಿಯಾಗಿ ಗೊತ್ತಿಲ್ಲದ ವಿಷಯ. ಕೊಳದ ನೀರಿನಲ್ಲಿ ಉದುರಿಬಿದ್ದ ಹೂಗಳು ತೇಲಾಡುತ್ತಿರುವಂತೆ ಒಬ್ಬರ ಬಾಯಿಂದ ಒಬ್ಬರ ಬಾಯಿಗೆ ಈ ಹಾಡುಗಳು ತೇಲಿಹೋಗುತ್ತಿವೆ. ಸಿಕ್ಕಿರುವಷ್ಟು ಹಾಡುಗಳನ್ನು ಮುದ್ರಿಸಲು ಪ್ರಯತ್ನ ನಡೆಯುತ್ತಿದೆ. ಇವುಗಳ ವಿಷಯದಲ್ಲಿ ಹೆಚ್ಚು ತಿಳಿವಳಿಕೆಯುಳ್ಳ, ತಾವೇ ಹರಿದಾಸರಾದ ಒಬ್ಬರು ತಮ್ಮ ಬಳಿ ಇಪ್ಪತ್ತೈದುಸಾವಿರ ದಾಸರ ಪದಗಳು ಇರುವುವೆಂದು ಹೇಳುತ್ತಾರೆ. ಹೀಗಿರುವುದರಿಂದ ಈ ಸಾಹಿತ್ಯದ ಅಭ್ಯಾಸ ಎಷ್ಟು ಮಾಡಿದರೂ ಅಸಮರ್ಪಕವಾಗಿಯೇ ಇರಬೇಕಾಗುತ್ತದೆ. ಆದರೆ ಇದರ ಉದ್ದೇಶ ವೇನು, ಸ್ವಭಾವವೆಂಥದು ಎಂಬುದನ್ನು ತಿಳಿಯುವುದಕ್ಕೆ ಸಾಕಾದಷ್ಟು ಹಾಡುಗಳು ಸಿಕ್ಕಿವೆ. ಇವುಗಳಲ್ಲಿ ಕೆಲವು ತಾಳಬದ್ಧವಾಗಿ ಹಾಡುವ ಧಾಟಿಯಲ್ಲಿರುವ ಹಾಡುಗಳು ಅಥವಾ ಕೀರ್ತನೆಗಳು, ಮತ್ತೆ ಕೆಲವು ಹಾಡಬಹುದಾದ ಲಯಬದ್ಧವಾದ ಗದ್ಯ ರೂಪದಲ್ಲಿರುವ 'ಸುಳಾದಿ'ಗಳು. ಈ ಹಾಡುಗಳು ಯಾವ ಮತಕ್ಕೆ ಸೇರಿದುವು ಗಳಾಗಿದ್ದರೂ ಸರಿಯೆ ಒಟ್ಟಿನಲ್ಲಿ ಭಕ್ತಿ ಮತ್ತು ವೈರಾಗ್ಯವನ್ನು ಹೇಳುತ್ತವೆ. ಅವುಗಳಲ್ಲಿ ಬರುವ ದೇವತೆಗಳ ಹೆಸರು ಬೇರೆಯಾಗಿರಬಹುದು ಅಷ್ಟೆ; ಮಿಕ್ಕ

ವಿಷಯಗಳೆಲ್ಲಾ ಎಲ್ಲಕ್ಕೂ ಒಂದೇ ಆಗಿರುತ್ತವೆ. ಈ ಕಾರಣದಿಂದಲೇ ಜೈನ ಮತ್ತು ವೀರಶೈವರ ಹಾಡುಗಳನ್ನು ಈ ಗುಂಪಿನಲ್ಲಿಯೇ ಸೇರಿಸಿರುವುದು.

ಸಂಗೀತಕಲೆಯಲ್ಲಿ ಪ್ರಸಿದ್ಧರಾದ ವೈಷ್ಣವದಾಸರಲ್ಲಿ ಶ್ರೀಪಾದರಾಯ(೧೫೦೦), ಪುರಂದರದಾಸ (೧೫೪೦) ಮತ್ತು ಕನಕದಾಸ (೧೫೫೦) ಈ ಮೂವರನ್ನೂ ಪ್ರಕೃತ ನೋಡಬಹುದು. ಶ್ರೀಪಾದರಾಯರು ಮುಳುಬಾಗಿಲಿನಲ್ಲಿದ್ದ ಮಠದ ಸ್ವಾಮಿಗಳಾಗಿ ವಿಜಯನಗರದ ರಾಜರ ಭಕ್ತಿಗೌರವಗಳಿಗೆ ಪಾತ್ರರಾಗಿದ್ದರು. ಅವರು ಕಟ್ಟಿರುವ ಹಾಡುಗಳ ಒಟ್ಟು ಸಂಖ್ಯೆ ಎಷ್ಟೆಂಬುದು ಗೊತ್ತಿಲ್ಲದಿದ್ದರೂ ಪ್ರತಿ ಹಾಡಿನ ಕೊನೆಯಲ್ಲೂ ಬರುವ 'ರಂಗವಿಠಲ' ಎಂಬ ಅಂಕಿತದ ಸಹಾಯದಿಂದ ಆ ಹಾಡುಗಳನ್ನು ಗುರುತಿಸಬಹುದು. ಕರ್ಣಾಟಕದಲ್ಲಿ ಪ್ರತಿದಿನವೂ ಹಾಡುವುದೇ ಅಲ್ಲದೆ ರೇಡಿಯೊ ಗ್ರಾಮಾಫೋನುಗಳ ಮೂಲಕವೂ ಪರಿಚಿತರಾದ ಪುರಂದರದಾಸ, ಕನಕದಾಸ ಇವರ ವಿಷಯದಲ್ಲಿ ಹೆಚ್ಚು ಹೇಳುವ ಆವಶ್ಯಕತೆ ಇಲ್ಲ.

ವೀರಶೈವರು ಮತ್ತು ಜೈನರು ಹಾಡಿರುವ ಹಾಡುಗಳ ಸಂಖ್ಯೆಯು ವೈಷ್ಣವ ಮತದವರ ಹಾಡುಗಳೊಂದಿಗೆ ಹೋಲಿಸಿದರೆ ಎಲ್ಲೋ ಸ್ವಲ್ಪವೆಂಬ ಅಂಶವು ತಿಳಿಯುತ್ತದೆ. ವೀರಶೈವರಲ್ಲಿ ಗುರುಬಸವ(೧೪೩೦), ನಿಜಗುಣಶಿವಯೋಗಿ (೧೫೦೦) ಇವರು ಕೆಲವು ಹಾಡುಗಳನ್ನು ಕಟ್ಟಿರುವಹಾಗೆಯೂ, ಜೈನರಲ್ಲಿ ರತ್ನಾಕರನು (೧೫೫೭) ಪದಗಳನ್ನು ಹೇಳಿರುವಂತೆಯೂ ತಿಳಿದುಬರುತ್ತದೆ. ವಿದ್ವತ್ತನ್ನೇ ಕಸುಬಾಗಿ ಉಳ್ಳವರ ದೃಷ್ಟಿಗೆ ಗೋಚರವಾಗದೆ ಸುಣುಚಿಕೊಂಡಿರುವ ಹಾಡುಗಳು ಇನ್ನೂ ಅಸಂಖ್ಯಾತವಾಗಿರಬೇಕೆಂದು ಕಾಣುತ್ತದೆ.

## ೫. ಶತಕಗಳು

ಈ ಕಾಲದಲ್ಲಿ ಶತಕಸಾಹಿತ್ಯದ ಬೆಳೆ ಹುಲುಸಾಗಿದೆ. ಆರೇಳು ಕವಿಗಳು ಬರೆದ ಹದಿನೈದು ಶತಕಗಳು ದೊರೆಯುತ್ತವೆ. ತಮ್ಮ ತಮ್ಮ ಮನಸ್ಸಿಗೆ ತೋರುವ ಕೆಲವು ನೈತಿಕ ತತ್ವಗಳನ್ನು ಉಪದೇಶಮಾಡುವುದೇ ಶತಕಕಾರರ ಉದ್ದೇಶ. ಇವುಗಳಲ್ಲಿ ಪ್ರತಿಯೊಬ್ಬನೂ ಮಾನವನ ಅಸಹಾಯತೆಯನ್ನೂ, ಸರ್ವವ್ಯಾಪಿಯಾದ ಪರಮಾತ್ಮನ ಶಕ್ತಿಯನ್ನೂ ಮನಸ್ಸು ತೃಪ್ತಿಯಾಗುವಂತೆ ಹೇಳಿ, ತನ್ನನ್ನು ಕಾಪಾಡಿ ಕಷ್ಟಗಳನ್ನು ನಿರ್ಮೂಲಮಾಡಲು ದೇವರ ಸಹಾಯವನ್ನು ಬೇಡುವುದು ಕಂಡು ಬರುತ್ತದೆ. ಎಲ್ಲ ಶತಕಗಳಲ್ಲಿಯೂ ಒಂದುಬಗೆಯ ದೈವವಾದವಿದ್ದಂತೆ ತೋರುತ್ತದೆ. ಭಕ್ತಿ, ಜ್ಞಾನ, ವೈರಾಗ್ಯ ಈ ಮೂರು ಮುಖ್ಯವಿಷಯಗಳನ್ನು ಕುರಿತು ಪ್ರತಿಯೊಂದು ಶತಕವೂ ಹೇಳುತ್ತದೆ. ಆದರೆ ರತ್ನಾಕರನ 'ತ್ರಿಲೋಕ ಶತಕ'ವು ಮಾತ್ರ ಜೈನರ

ಲೋಕಾಕಾರ ವರ್ಣನೆಯನ್ನು ಮಾಡುತ್ತದೆ. ಈ ಕಾಲದ ಶತಕಕಾರರಲ್ಲಿ ಮೊದಲನೆಯವನಾದ ಮಗ್ಗೆಯ ಮಾಯಿದೇವನು (೧೪೩೦) ಮೂರು ಶತಕಗಳನ್ನು ಜನರ ಮನಸ್ಸನ್ನು ಮುಟ್ಟುವಂತೆ ಬರೆದಿದ್ದಾನೆ. ಚಂದ್ರ (೧೪೩೦), ಸಿರಿನಾಮಧೇಯ (೧೫೫೦), ಗೊಮ್ಮಟಾರ್ಯ (೧೫೦೦) ಮತ್ತು ಚನ್ನಮಲ್ಲಿಕಾರ್ಜುನ (೧೫೬೦) ಇವರು ಒಬ್ಬೊಬ್ಬರೂ ಒಂದೊಂದು ಶತಕವನ್ನು ಭಾವೋದ್ರೇಕಗೊಳಿಸುವಂತೆ ಬರೆದಿದ್ದಾರೆ. ಈ ವಿಷಯದಲ್ಲಿ ರತ್ನಾಕರನ 'ಅಪರಾಜಿತೇಶ್ವರ ಶತಕ'ವು ಎಲ್ಲಕ್ಕಿಂತಲೂ ಮುಖ್ಯವಾದುದು. ವೀರಭದ್ರರಾಜನು (೧೫೩೦) ಬೇರೆ ಬೇರೆ ಗುಣಗಳುಳ್ಳ ಐದು ಶತಕಗಳನ್ನು ಬರೆದಿದ್ದಾನೆ.

## ೬. ಲೌಕಿಕ ಶಾಸ್ತ್ರಗಳು

ಈಗಿನ ಕಾಲದಲ್ಲಿ ಶಾಸ್ತ್ರಕ್ಕೆ ಸಂಬಂಧಪಟ್ಟಂತೆ ಹುಟ್ಟಿದ ಸಾಹಿತ್ಯದ ವಿಶಾಲವಾದ ಅಭ್ಯಾಸವು ಸ್ವಾರಸ್ಯವಾಗಿಯೂ ಪ್ರಯೋಜಕವಾಗಿಯೂ ಇರುತ್ತದೆ. ವೈದ್ಯ, ಪಶುವೈದ್ಯ, ಕಾವ್ಯಾಲಂಕಾರ, ನಿಘಂಟು, ಜ್ಯೋತಿಷ್ಯ, ಕಾಮಶಾಸ್ತ್ರ, ಪಾಕಶಾಸ್ತ್ರ ಇವುಗಳಿಗೆ ಸಂಬಂಧಪಟ್ಟ ಎಲ್ಲ ಗ್ರಂಥಗಳೂ ಈ ಗುಂಪಿನಲ್ಲೇ ಬರುತ್ತವೆ.

ಇವುಗಳಲ್ಲೆಲ್ಲಾ ಬಹಳವಾಗಿ ಬಳಕೆಯಲ್ಲಿಟ್ಟುಕೊಂಡಿದ್ದ ವೈಜ್ಞಾನಿಕ ವಿದ್ಯೆಯೆಂದರೆ ವೈದ್ಯಕ್ಕೆ ಸಂಬಂಧಿಸಿದ್ದು. ಇದನ್ನು ಕುರಿತು ಆರು ಗ್ರಂಥಗಳಿವೆ. ಶ್ರೀಧರದೇವನು (೧೫೦೦) ಬರೆದ 'ವೈದ್ಯಾಮೃತ'ವೂ ಸಾಳ್ವನು (೧೫೫೦) ಬರೆದ 'ವೈದ್ಯ ಸಾಂಗತ್ಯ'ವೂ ಮನುಷ್ಯರ ಕಾಯಿಲೆಗೆ ಸಂಬಂಧಿಸಿದ ಕೆಲವು ಔಷಧಿಗಳನ್ನು ಹೇಳುತ್ತವೆ. ಹರಿಹರನ ಆಶ್ರಯದಲ್ಲಿ ರಚಿತವಾದ ಮಂಗರಾಜನ (೧೩೬೦) 'ಖಗೇಂದ್ರ ಮಣಿದರ್ಪಣ'ವು ವಿಷವೈದ್ಯವನ್ನು ಹೇಳುತ್ತದೆ. ನಾನಾ ಬಗೆಯ ವಿಷಗಳು, ಅವುಗಳ ಗುಣಗಳು, ಅವುಗಳ ಪ್ರತ್ಯೌಷಧಗಳು ಈ ಗ್ರಂಥದಲ್ಲಿ ಪ್ರಮಾಣಬದ್ಧವಾಗಿ ನಿರೂಪಿತವಾಗಿದೆ. ಅಭಿನವಚಂದ್ರ (೧೪೦೦), ಬಾಚರಸ (೧೫೦೦) ಇವರಿಬ್ಬರೂ ಒಂದೊಂದು ಗ್ರಂಥ ಬರೆದು ಅವುಗಳಲ್ಲಿ ಹಲವು ವಿಧದ ಕುದುರೆಗಳನ್ನೂ, ಅವುಗಳಿಗೆ ಬರುವ ಕಾಯಿಲೆಗಳನ್ನೂ, ಅವಕ್ಕೆ ಚಿಕಿತ್ಸೆಗಳನ್ನೂ ನಿರೂಪಿಸಿದ್ದಾರೆ.

ಅಲಂಕಾರ ಶಾಸ್ತ್ರವನ್ನು ಬರೆದವರು ಮೂರು ಜನರು ಮಾತ್ರ ಸಿಕ್ಕುತ್ತಾರೆ. ಇವರಲ್ಲೆಲ್ಲಾ ಪ್ರಸಿದ್ಧನಾದವನು 'ರಸರತ್ನಾಕರ' ಮತ್ತು 'ಶಾರದಾ ವಿಲಾಸ'ಗಳನ್ನು ಬರೆದ ಸಾಳ್ವ. ಒಂದರಲ್ಲಿ ಸಾಹಿತ್ಯದಲ್ಲಿ 'ರಸ'ವೆಂದರೇನೆಂಬುದನ್ನೂ ಮತ್ತೊಂದರಲ್ಲಿ ಸಾಹಿತ್ಯದಲ್ಲಿ 'ಧ್ವನಿ' ಎಂದರೇನೆಂಬುದನ್ನೂ ವಿವರಿಸಿ ಲಕ್ಷ್ಯವಾಗಿ ಹಳೆಯ ಕಾವ್ಯಗಳಿಂದ ಅನೇಕ ಪದ್ಯಗಳನ್ನು ಉದ್ಧರಿಸಿದ್ದಾನೆ. ಇವುಗಳಲ್ಲಿ ಹಿಂದಿನವರು

ಕಂಡುಹಿಡಿದ ಅಭಿಪ್ರಾಯಗಳ ಜೊತೆಗೆ ಸಾಳ್ವನು ತನ್ನ ಅಭಿಪ್ರಾಯವೇನೆಂಬುದನ್ನು ವಿಶದಪಡಿಸದಿದ್ದರೂ ಒಟ್ಟಿನಲ್ಲಿ ಈ ಗ್ರಂಥಗಳಿಗೆ ತಕ್ಕ ಬೆಲೆ ಇದ್ದೇ ಇದೆ. 'ಕವಿಜಿಹ್ವಾಬಂಧನ'ವನ್ನು ಬರೆದ ಈಶ್ವರಕವಿಯು (೧೫೦೦) ವಿಜಾತೀಯವಾದ ಬರೆಹಗಾರ. ನಾಲ್ಕೇ ಅಧ್ಯಾಯಗಳಿರುವ ಈ ಸಣ್ಣಗ್ರಂಥದಲ್ಲಿ ಛಂದಸ್ಸು, ವ್ಯಾಕರಣ ಮತ್ತು ಕನ್ನಡದ ಪ್ರಾಂತಭಾಷೆಗಳು ಇವನ್ನು ಕುರಿತು ನಾಲ್ಕು ಮಾತುಗಳನ್ನು ಹೇಳಿದ್ದಾನೆ. ಯಾವ ಒಂದು ಉದ್ದೇಶವನ್ನೂ ಇಟ್ಟುಕೊಂಡು ಇದನ್ನು ಬರೆದಹಾಗೆ ತೋರುವುದಿಲ್ಲ. ಕನ್ನಡದಲ್ಲಿ ಸಾವಿರದಿನ್ನೂರು ಉಪಭಾಷೆಗಳಿದ್ದುವು ಎಂಬ ಇವನ ಮಾತು ಆಶ್ಚರ್ಯವನ್ನುಂಟುಮಾಡುತ್ತದೆ. ಮಾಧವನ (೧೫೦೦) 'ಮಾಧವಾಲಂಕಾರ'ವು ದಂಡಿಯ 'ಕಾವ್ಯಾದರ್ಶ'ದ ಭಾಷಾಂತರವಲ್ಲದೆ ಮತ್ತೇನೂ ಅಲ್ಲ.

ನಿಘಂಟುಗಳ ವಿಷಯ ಹೇಳಬೇಕಾದುದು ಕೊಂಚವೇ ಇದೆ. 'ಮಂಗಾಭಿಧಾನ'ವನ್ನು ಬರೆದ ಅಭಿನವ ಮಂಗರಾಜನೇ (೧೩೯೮) ಮೊದಲನೆಯವನು. ಬೊಮ್ಮರಸನ (೧೪೫೦) 'ಚತುರಾಸ್ಯ ನಿಘಂಟು', ಮತ್ತು ಲಿಂಗಮಂತ್ರಿಯ (೧೫೩೦) 'ಕಬ್ಬಿಗರ ಕೈಪಿಡಿ' ಇವು ಸಣ್ಣದಾಗಿ ಎಲ್ಲರಿಗೂ ಬೇಕಾದುವಾಗಿದ್ದರೂ ವಿರಕ್ತ ತೋಂಟದಾರ್ಯನ (೧೫೬೦) 'ಕರ್ಣಾಟಕ ಶಬ್ದಮಂಜರಿ'ಯು ಇವುಗಳನ್ನೆಲ್ಲಾ ಮರೆಮಾಡಿ ಬಿಡುತ್ತದೆ. ತಮಿಳು ಸಾಹಿತ್ಯದಲ್ಲಿ ಕಂಡುಬರುವ ನಿಘಂಟು ಗ್ರಂಥಗಳೊಡನೆ ಇವನ್ನು ಹೋಲಿಸಿ ನೋಡಿದರೆ ಇವು ಎಷ್ಟು ಅಸಮರ್ಪಕವೆಂಬುದು ಗೊತ್ತಾಗುತ್ತದೆ. ಈ ಶತಮಾನದಲ್ಲಿ ಕೇಶಿರಾಜನಂತಹವನ ಪಾಂಡಿತ್ಯವನ್ನು ಹೋಲುವ ಉತ್ಕೃಷ್ಟವಾದ ಕನ್ನಡ ವಿದ್ವತ್ತಿಗೆ ಮರ್ಯಾದೆ ಇರಲಿಲ್ಲವೋ ಏನೊ.

ಜ್ಯೋತಿಷ್ಯ ಮತ್ತು ಭವಿಷ್ಯ ಹೇಳುವುದು—ಇವಕ್ಕೆ ಸಂಬಂಧಿಸಿದಂತೆ ನಾಲ್ಕು ಗ್ರಂಥಗಳಿವೆ. ೧೫೦೦ರಲ್ಲಿ ಬರೆದವೆಂದು ಹೇಳುವ ಶುಭಚಂದ್ರನ 'ನರಪಿಂಗಳಿ'ಯೂ, ಲಕ್ಷ್ಮಣಾಂಕನ 'ಶಕುನಸಾರ'ವೂ ಮತ್ತು ಚಾಕರಾಜನ 'ಶಕುನ ಪ್ರಪಂಚ'ವೂ ಒಳ್ಳೆಯ ಮತ್ತು ಕೆಟ್ಟ ಶಕುನಗಳಿಗೆ ಸಂಬಂಧಿಸಿದ ಹಕ್ಕಿಗಳು, ಪ್ರಾಣಿಗಳು, ಪದಾರ್ಥಗಳು ಈ ವಿಷಯಗಳನ್ನು ಹೇಳುತ್ತವೆ. ಗಂಗಾಧರನ (೧೫೫೦) 'ರಟ್ಟನ ಜಾತಕ'ವೂ ಜ್ಯೋತಿಷ್ಯ ಮತ್ತು ಜಾತಕಗಳನ್ನು ಕುರಿತು ಹೇಳುತ್ತದೆ. ಆ ಕಾಲದಲ್ಲಿ ಪ್ರಚುರವಾಗಿದ್ದ ಕೆಲವು ಮೂಢನಂಬಿಕೆಗಳನ್ನೂ ಈ ಗ್ರಂಥಗಳು ತಿಳಿಸಿಕೊಡುತ್ತವೆ.

ಕಾಮಶಾಸ್ತ್ರ ಮತ್ತು ಪಾಕಶಾಸ್ತ್ರಗಳ ಮೇಲೆ ಒಂದೊಂದು ಗ್ರಂಥವಿದೆ. ಕಲ್ಲರಸನ (೧೪೫೦) 'ಜನವಶ್ಯ'ವು ಮಲ್ಲಿಕಾರ್ಜುನ ರಾಜನ ವಿನೋದಾರ್ಥವಾಗಿ ರಚಿತವಾಯಿತು. ಅದರ ವಿಷಯ ಕಾಮಶಾಸ್ತ್ರ ಮತ್ತು ವಾಜೀಕರಣ ಔಷಧಿಗಳು. ಮಂಗರಾಜನ (೧೫೦೮) 'ಸೂಪಶಾಸ್ತ್ರ'ವು ಒಳ್ಳೆ ಜೀರ್ಣಶಕ್ತಿಯುಳ್ಳವರಿಗೆ ಮೆಚ್ಚಿಕೆ

ಯಾದ ಗ್ರಂಥ. ತಿಂಡಿಗಳ ಚರಿತ್ರೆಯನ್ನು ತಿಳಿದುಕೊಳ್ಳಲು ಈ ಗ್ರಂಥ ಉಪಕಾರಿಯಾಗಿದೆ.

## ಚರಿತ್ರೆ

ಚರಿತ್ರೆಯನ್ನು ಅಭ್ಯಾಸಯೋಗ್ಯವಾದ ವಿಷಯವೆಂದು ಕನ್ನಡಿಗರು ಭಾವಿಸದಿದ್ದರೂ ನೂರಾರು ಬಖೈರುಗಳೂ, ಕೈಫಿಯತ್ತುಗಳೂ, ಸ್ಥಳಪುರಾಣಗಳೂ ರಚಿತವಾಗಿರುವುದು ಕಂಡುಬರುತ್ತದೆ. ಇವುಗಳನ್ನೆಲ್ಲ ಹುಡುಕಿ ಶಾಸ್ತ್ರೀಯದೃಷ್ಟಿಯಿಂದ ಅಭ್ಯಾಸಮಾಡುವ ಕೆಲಸ ಇನ್ನೂ ನಡೆದಿಲ್ಲ. ಇವುಗಳಲ್ಲಿ ಕೆಲವಾದರೂ ವಿಜಯನಗರ ಕಾಲದಲ್ಲಿ ಹುಟ್ಟಿದ್ದರೂ ಇರಬಹುದು. ಸಾಹಿತ್ಯದಲ್ಲಿ ಇಂಥ ಚರಿತ್ರೆಗೆ ಒಂದೇ ಒಂದು ಉದಾಹರಣೆ ಇದೆ. ೧೫೨೫ರಲ್ಲಿ ನಂಜುಂಡಕವಿಯು ಬರೆದ 'ಕುಮಾರ ರಾಮನಕಥೆ' ಯಲ್ಲಿ ನಿಜವಾಗಿ ನಡೆದ ಘಟನೆಯೇ ವಸ್ತುವಾಗಿದೆ. ಚರಿತ್ರೆಯ ಜೊತೆಗೆ ಕಥೆ ಮಿಶ್ರವಾಗಿ ಈ ಕಾವ್ಯ ಹುಟ್ಟಿದೆ. ಒಬ್ಬಿಬ್ಬರು ಸಂಶೋಧಕರು ಈ ಕಾವ್ಯವನ್ನು ಅಭ್ಯಾಸಮಾಡಿ ಅದರಿಂದ ತಿಳಿದುಬರಬಹುದಾದ ಚಾರಿತ್ರಕ ಅಂಶಗಳನ್ನು ನಿರೂಪಿಸಿದ್ದಾರೆ. ಕವಿತಾದೃಷ್ಟಿಯಿಂದ ಇದರಲ್ಲಿ ಸ್ವಲ್ಪ ಯೋಗ್ಯತೆ ಕಂಡುಬರುತ್ತದೆ. ಹದಿನೇಳನೆಯ ಶತಮಾನದಲ್ಲಿ ಬಂದ ಪಾಂಚಾಲಗಂಗನೆಂಬ ಬೇರೊಬ್ಬಕವಿ ತಿರುಗಿ ಹಾಡುವುದಕ್ಕೆ ನಂಜುಂಡನ ಕಾವ್ಯ ಸ್ಫೂರ್ತಿಕೊಟ್ಟಿತು.

## ಫಲಿತಾಂಶ

ಎರಡೂವರೆ ಶತಮಾನದಲ್ಲಿ ಹುಟ್ಟಿರುವ ಸಾಹಿತ್ಯಗ್ರಂಥಗಳಲ್ಲಿ ಕಾವ್ಯದೃಷ್ಟಿಯಿಂದ ಉನ್ನತ ಶಿಖರವನ್ನೇರುವ ಗ್ರಂಥಗಳು ಕಡಮೆ ಎಂಬ ಅಂಶವು ಮೇಲೆ ಹೇಳಿರುವ ವಿಷಯಗಳಿಂದ ವ್ಯಕ್ತವಾಗುತ್ತದೆ. ವಿಜಯನಗರದ ಸಂಸ್ಕೃತಿ ಕಲೆಗಳಿಗೆ ಕನ್ನಡಿಯಾಗಿರುವವನು ಕುಮಾರವ್ಯಾಸ. ಅವನ ಉನ್ನತಿ ಇತರರಿಗೆ ಇಲ್ಲ. ಜೈನರಲ್ಲಿ ರತ್ನಾಕರನ ಹಿರಿಮೆಯನ್ನು ಮೀರಿಸುವವರಾಗಲಿ, ಸರಿದೂಗುವವರಾಗಲಿ ಯಾರೂ ಇಲ್ಲ. ವೀರಶೈವರಲ್ಲಿ ಚಾಮರಸನ ಗ್ರಂಥವು ಸರ್ವಶ್ರೇಷ್ಠವಾದುದು ಎಂಬ ಅಭಿಪ್ರಾಯವಿದ್ದರೂ 'ಸೌಂದರಪುರಾಣ'ವನ್ನು ಬರೆದ ಬೊಮ್ಮರಸನೂ, 'ಭಿಕ್ಷಾಟನ ಚರಿತ್ರೆ'ಯನ್ನು ಬರೆದ ಗುರುಲಿಂಗವಿಭುವೂ ಅವನೊಡನೆ ಅಗ್ಗಳಿಕೆಗಾಗಿ ಸ್ಪರ್ಧಿಸುತ್ತಿರುವುದು ಕಂಡುಬರುತ್ತದೆ. ವೈಷ್ಣವದಾಸರ ವಿಪುಲಕಾರ್ಯವು ಎಲ್ಲರ ಕೃತಜ್ಞತೆಗೂ ಪಾತ್ರವಾಗಿರುವುದಲ್ಲದೆ ಇಂಡಿಯಾ ದೇಶದಲ್ಲಿ ಹೆಸರುಗೊಂಡ ಕರ್ಣಾಟಕ ಸಂಗೀತ ಸಂಪ್ರದಾಯವನ್ನು ಸ್ಥಾಪಿಸಿದ ಕೀರ್ತಿಗೂ ಅದು ಭಾಜನವಾಗಿದೆ.

(ಅನುವಾದಕ—ಕೂಡ್ಲಿ ಸುಬ್ಬರಾವ್.)

---

# ಇದೆ ನೀತಿಯೆ ಸತ್ಯವೆ ಜಗದೆ?

ಬಾನಲಿ ಮೂಡುತೆ ಚಂದ್ರಮನು
ಮಿನುಮಿನು ಮಿನುಗುವ ತಾರೆಗಳೊಡನೆ
ಲೀಲೆಯೊಳೆಸೆಯಲು ಥಳಥಳ ಥಳನೆ,
ಇರುಳಿನ ಹೂವುಗಳೆನಿತೋ ಬಿರಿದು
ಪರಿಮಳವೆರಚುತೆ ನಲಿವುವು ಮೆರೆದು.
ಆದೊಡೆ ಚಂದಿರನಸ್ತಾದ್ರಿಯನು
ಸೇರುತ್ತಿರೆಯಿರೆ ಕಂದಲು ಬಾನು,
ಅರಳವು ಹೂಗಳು ಬೆಳಗದು ತಾರೆ.
ಚಂದಿರನಿದ್ದರೆ ತಾರೆಗಳುಂಟು,
ಚಂದಿರ ಬಂದರೆ ಹೂವುಗಳುಂಟು.
ಅಂತೆಯೆ ಲೋಕದಿ ಜನಗಳು ಕೆಲರು
ಧನವಿದ್ದರೆ ಬಳಿ ಸಾರುತೆ ಬಹರು
ಸ್ನೇಹಿತರಂದದಿ ನಲಿದಾಡುವರು
ಧನವೆಲ್ಲವು ಮುಗಿದಾಗಲೆ ತಾವು
ಬಯಲಾಗೋಡುವರೊಬ್ಬರು ಇರದೆ
ಇದೆ ನೀತಿಯೆ ಸತ್ಯವೆ ಜಗದೆ?

—ಎಚ್. ವಿ. ವೆಂಕಟೇಶರಾವ್
(ಇಂಟರ್‌ಮೀಡಿಯೆಟ್ ಕಾಲೇಜು, ತುಮಕೂರು.)

---

# ಎಲಿಫೆಂಟ ಗುಹಾಂತರ್ದೇವಾಲಯಗಳು

"All Architecture is nothing but the expression of the national life and character"—*Ruskin.*

ಭರತಖಂಡದ ಶಿಲ್ಪಪ್ರಪಂಚದಲ್ಲಿ ಸುಳಿದಾಡಿದ ಕಲಾಪ್ರೇಮಿಗಳಿಗೆ ಎಲಿಫೆಂಟ್[1] ದ್ವೀಪವು ಅಪರಿಚಿತವಲ್ಲ. ಇದು ಬೊಂಬಾಯಿಗೆ ದಕ್ಷಿಣ ಭಾಗದಲ್ಲಿ ಆರು ಮೈಲಿಗಳ ದೂರದಲ್ಲಿದೆ. ಸೌಂದರ್ಯದ ತವರುಮನೆಯಂತಿರುವ ಈ ನಡುಗಡ್ಡೆಯ ಸುತ್ತಳತೆ ನಾಲ್ಕು ಮೈಲಿಗಳಷ್ಟಾಗಬಹುದು. ಈಗ ಅಲ್ಲಿನ ನಿವಾಸಿಗಳು ಮುಖ್ಯವಾಗಿ ಪಶುಪಾಲನೆಯಿಂದ ಜೀವಿಸುತ್ತಾರೆ; ಅಲ್ಪಸ್ವಲ್ಪ ವ್ಯವಸಾಯವೂ ಉಂಟು.

ಈ ದ್ವೀಪದಲ್ಲಿ ನಾಲ್ಕು ಗುಹೆಗಳಿವೆ. ಅವುಗಳಲ್ಲಿ ಎರಡರೊಳಗೆ ಕನ್ನಡ ಶಿಲ್ಪಿಯ ಕೆತ್ತನೆಯ ಕೆಲಸವು ಪೂರ್ಣತೆಯನ್ನು ಪಡೆದಿದೆ. ಉಳಿದವುಗಳಲ್ಲಿ ಕಲಾನಿರ್ಮಾಣ ಕಾರ್ಯವು ಅರ್ಧದಲ್ಲೇ ನಿಂತುಬಿಟ್ಟಿದೆ. ಇವುಗಳಲ್ಲಿ "ಮಹಾಗುಹೆ" ಎಂಬುದು ನೋಟಕನ ಚಿತ್ತವನ್ನು ಮೊದಲು ತನ್ನ ಕಡೆಗೆಳೆಯುತ್ತದೆ. ಅಖಂಡವಾದ ಹೆಬ್ಬಂಡೆಯೊಂದರಿಂದ ರಚಿತವಾದ ಈ ಗುಹೆಯಲ್ಲಿ ಕಲ್ಗಡೆತದ ಅನೇಕ ಕಂಬಗಳೂ, ಕಲಾದೃಷ್ಟಿಯಲ್ಲಿ ಅಗ್ರಸ್ಥಾನವನ್ನು ಪಡೆದಿರುವ ಅಗಣಿತ ವಿಗ್ರಹಗಳೂ ಇವೆ. ಗುಹಾದ್ವಾರದಲ್ಲಿ "ತ್ರಿಮೂರ್ತಿ"ಯ ಊರ್ಧ್ವಕಾಯ ಪ್ರತಿಮೆಯೊಂದು[2] ಮೊತ್ತ ಮೊದಲು ನಮ್ಮ ಕಣ್ಣೆಡೆಯಲ್ಲಿ ಬಿದ್ದು ತನ್ನ ಸುಮಾರು ಹದಿನೆಂಟು ಅಡಿಗಳಷ್ಟು ಎತ್ತರದ ಬೃಹದಾಕಾರದಿಂದಲೂ, ಒಂದೇ ಕಾಯದಿಂದ ಹೊರಟ ಬ್ರಹ್ಮ, ವಿಷ್ಣು, ರುದ್ರ ಈ ಮೂವರ ವಿವಿಧ ಭಂಗಿಯ ಶಿರಸ್ಸುಗಳಿಂದಲೂ ಹೃದಯವನ್ನು ಆನಂದಾಶ್ಚರ್ಯಗಳಲ್ಲಿ ಮುಳುಗಿಸುವುದು. ಮಧ್ಯದಲ್ಲಿ ನಿರ್ಮಿತವಾದ ಬ್ರಹ್ಮನ ವಿಶಾಲವಾದ ವದನದಲ್ಲಿ ಶಾಂತಿ ನೆಲಸಿದೆ.[3] ಕಣ್ನೋಟವು ಮೃದುಗಂಭೀರವಾಗಿದೆ. ತಲೆಯಲ್ಲಿ ಹೊತ್ತ ಜಟಾಮಕುಟವು ಸುಂದರವಾಗಿದೆ. ಕಿವಿಗಳೆರಡರಲ್ಲೂ "ಮಕರ ಕುಂಡಲ"ಗಳು ತೂಗಾಡುತ್ತಿವೆ. ಇದನ್ನು ನೋಡಿದ ಬಳಿಕ ನೋಟಕನ ಲಕ್ಷ್ಯವು ವಿಷ್ಣುವಿನೆಡೆಗೆ ಬೀಳುವುದು.[4] ಕಮಲಾಕ್ಷನಾದ ಆತನು ಪ್ರಸನ್ನನೂ ಧ್ಯಾನಪರನೂ ಆಗಿ ನಮ್ಮ ಹೃದಯದಲ್ಲಿ ಪವಿತ್ರತೆಯನ್ನು ಮೂಡಿಸುವನು. ಅವನ ಕರ್ಣಗಳಲ್ಲಿ "ಶಂಖಪತ್ರ"ಗಳೆರಡು ಓಲಾಡುತ್ತಿವೆ. ಅನಂತರ ರುದ್ರಮುಖವು ಕಣ್ಣಿಗೆ ಬೀಳುವುದು. ಈ ರುದ್ರನ

ಟಿಪ್ಪಣಿಗಳನ್ನು ಈ ಲೇಖನದ ಕೊನೆಗೆ ಕೊಟ್ಟಿದೆ.

ಕತ್ತಿನಲ್ಲಿಯೂ, ಕಿರೀಟದಲ್ಲಿಯೂ ಭಯಂಕರವಾದ ಹಾವುಗಳು ಸುತ್ತಿಕೊಂಡಿರುತ್ತವೆ. ಮುಂದಕ್ಕೆ ಚಾಚಿದ ನಾಲಗೆಯೂ, ಹುರಿಗೊಂಡ ಗಡ್ಡ ಮೀಸೆಗಳೂ, ಜಟಾಮ ಕುಟದಲ್ಲಿ ಶೋಭಿಸುವ ಕಪಾಲವೂ, ನೇತ್ರಗಳಲ್ಲಿ ಎದ್ದು ಕಾಣುವ ಕ್ರೌರ್ಯವೂ ಶಿವನ ಭೀಷಣತೆಯನ್ನು ಹೆಚ್ಚಿಸುವುವು. ರುದ್ರನು "ಸರ್ಪಕುಂಡಲ"ಗಳನ್ನು ಧರಿಸಿದ್ದಾನೆ. ಈ ಮೂರ್ತಿಗೆ ಹೊಂದಿಕೊಂಡಂತೆ ಆರು ತೋಳುಗಳಿವೆ. ಬಲಭಾಗ ದಲ್ಲಿರುವ ಎರಡು ಕೈಗಳಲ್ಲಿ ಒಂದು "ಸರ್ಪಮುದ್ರೆ"ಯನ್ನು ಪ್ರದರ್ಶಿಸುತ್ತಿದೆ; ಅದರ ಅಂಗೈಯಲ್ಲಿರುವ ಸರ್ಪವು ತನ್ನ ಹೆಡೆಗಳನ್ನು ಬಿಚ್ಚಿ ಆಡಿಸುತ್ತಿದೆ. ಇನ್ನೊಂದು "ಅಕ್ಷಮಾಲೆ"ಯನ್ನು ಧರಿಸಿದೆ. ಎಡಭಾಗದಲ್ಲಿರುವ ಕೈಗಳಲ್ಲೊಂದು "ಮಾತು ಲಂಗ"ವನ್ನು ಹಿಡಿದುಕೊಂಡಿದೆ. ಈ ಅದ್ಭುತಮೂರ್ತಿಗಳ ಕಿರೀಟಗಳಲ್ಲಿ ಮಾಡಿರುವ ಕೆತ್ತನೆಯ ಕೆಲಸವನ್ನು ಪರಾಮರ್ಶಿಸಿದರೆ, ಅದರಲ್ಲೂ 'ಕೀರ್ತಿಮುಖ'ದ ಆಕಾರದಲ್ಲಿ ಕೆತ್ತಲ್ಪಟ್ಟಿರುವ ಆಭರಣಗಳ ಸೊಗಸನ್ನು ಮನಗಂಡರೆ, ದಂತದಲ್ಲಿ ಮಾಡಬಹುದಾದ ಕೆಲಸವನ್ನು ಶಿಲ್ಪಿಯು ಕಲ್ಲಿನಲ್ಲಿ ಮಾಡಿರುವನೆಂದು ಧಾರಾಳವಾಗಿ ಹೇಳಬಹುದು.

ಗುಹೆಯ ಮಧ್ಯದಲ್ಲಿ ಮುಖ್ಯದೇವತೆಯಾದ ಬೃಹಲ್ಲಿಂಗವನ್ನೊಳಗೊಂಡ ಗರ್ಭಗುಡಿಯಿದೆ. ಇದು ಪೂರ್ವದಲ್ಲಿ ಸದಾಶಿವನ ಆಲಯವಾಗಿತ್ತೆಂದು ಹೊರಗಡೆ ಅಂಗಳದಲ್ಲಿ ಬಿದ್ದಿರುವ ಬಲು ಸುಂದರವಾದ ಸದಾಶಿವನ ಮೂರ್ತಿಯಿಂದ ಗೊತ್ತಾಗು ತ್ತದೆ. ಈ ವಿಗ್ರಹದಲ್ಲಿ ಭಾರತೀಯ ಶಿಲ್ಪಕಲಾನೈಪುಣ್ಯದ ಪರಾಕಾಷ್ಠತೆಯನ್ನು ಕಾಣಬಹುದೆಂದು ಅನೇಕ ಕಲಾವಿದರು ಹೇಳಿದ್ದಾರೆ. ಇದರ ಪೀಠದಲ್ಲಿ "ಬಳದಾರಿ ಪ್ರತಿಷ್ಠಿತ ಶಿವ" ಎಂದು ಕನ್ನಡದಲ್ಲಿ ಕೆತ್ತಿದೆ. ಲಿಪಿಶಾಸ್ತ್ರದ ಆಧಾರದ ಮೇಲೆ ಈ ಶಾಸನವು ಕ್ರಿ.ಶ. ೯ನೆಯ ಶತಮಾನದ್ದೆಂದು ಹೇಳಬಹುದು. ಅಷ್ಟು ಹಿಂದೆ ಕನ್ನಡವು ಬೊಂಬಾಯಿಯವರೆಗೆ ಹಬ್ಬಿತ್ತೆಂಬುದು ಬಹು ಮುಖ್ಯವಾದ ವಿಷಯ.

ಈ ಗುಡಿಯ ಸುತ್ತಲೂ ನಯವಾಗಿ ಕಡೆದು ಚಿತ್ರಕೆಲಸಮಾಡಿರುವ ಅನೇಕ ಕಂಬಗಳಿವೆ. ಗುಡಿಯ ದ್ವಾರಪಾಲಕ ಪ್ರತಿಮೆಗಳ ಹೃಷ್ಟಪುಷ್ಟವಾದ ಮಾಂಸಖಂಡ ತುಂಬಿ ಬೆಳೆದ ತೋಳುಗಳೂ, ಕಂಬದಂತಹ ತೊಡೆಗಳೂ, ಉತ್ಸಾಹಭರಿತವಾದ ತುಂಬು ಮೊಗವೂ ಇಂದು ನಿಶ್ಶಕ್ತರಾಗಿರುವ ನಮ್ಮನ್ನು ಮೂದಲಿಸುವಂತಿವೆ. ಈ ವಿಗ್ರಹಗಳ ಅಗಾಂಗ ಸಾಮಂಜಸ್ಯ, ಆಕಾರ ಸೌಂದರ್ಯ, ಸ್ಪಷ್ಟವಾದ ರೂಪರೇಖೆಗಳು—ಇವೆ ಲ್ಲವೂ ಅತ್ಯಂತ ನೈಸರ್ಗಿಕವಾಗಿಯೂ, ಬಹು ಕೌಶಲ್ಯವ್ಯಂಜಕವಾಗಿಯೂ ಇವೆ.

ಈ ಗುಹೆಯಲ್ಲಿ ಪ್ರೇಕ್ಷಕನ ಚಿತ್ತವನ್ನಾಕರ್ಷಿಸುವ ಅನೇಕ ಶಿಲಾಫಲಕಗಳಿವೆ. ಇವುಗಳಲ್ಲಿ ನಟರಾಜ, ಗಂಗಾಧರ ಮೂರ್ತಿ, ಅಂಧಕಾಸುರವಧ ಮೂರ್ತಿ, ಕಲ್ಯಾಣ ಸುಂದರ ಮೂರ್ತಿ ಇವುಗಳನ್ನು ಕೆತ್ತಿರುವ ಶಿಲಾಫಲಕಗಳು ಅತಿ ಮುಖ್ಯವಾದುವು.

ಇವು ಒಂದೊಂದೂ ಶಿಲ್ಪಿಗಳ ಪ್ರತಿಭೆಯನ್ನೂ ಕೌಶಲವನ್ನೂ ಉದ್ಘೋಷಿಸುತ್ತಾ ನೋಟಕರನ್ನು ಬೆರಗುಗೊಳಿಸುತ್ತವೆ. ನಟರಾಜನು ಸುಮಾರು ಹನ್ನೆರಡು ಅಡಿ ಎತ್ತರವಾದ ಭೀಮಸದೃಶ ಮೂರ್ತಿ. ಆ ಮೂರ್ತಿಗೆ ಎಂಟು ತೋಳುಗಳಿವೆ. ಬಲ ಭಾಗದ ನಾಲ್ಕು ಕೈಗಳಲ್ಲಿ ಮೂರು ಶೂಲ, ಪಾಶ, ಡಮರು ಇವುಗಳನ್ನು ಹಿಡಿದು ಕೊಂಡಿವೆ. ಮತ್ತೊಂದು ಅಭಯಹಸ್ತ. ಎಡಭಾಗದಲ್ಲಿರುವ ನಾಲ್ಕು ಕೈಗಳಲ್ಲಿ ಒಂದು ಗಜಹಸ್ತ ಅಥವಾ ದಂಡಹಸ್ತ. ಮಿಕ್ಕ ಕರಗಳಲ್ಲಿ ಕಪಾಲ, ಅಗ್ನಿ, ಘಂಟೆ ಇವುಗಳು ಇವೆ. ಜಟಾಮುಕುಟವು ನವಿಲುಗರಿಗಳಿಂದ ಕೂಡಿ, 'ಅರ್ಕಪುಷ್ಪ' ಗಳಿಂದ ಅಲಂಕೃತವಾಗಿದೆ. ಅದರ ಮಧ್ಯೆ ಅಲಂಕಾರಮಣಿಯಂತೆ ಒಪ್ಪುತ್ತಿರುವ ಗಂಗೆಯನ್ನೂ, ಮಕುಟದ ಮೇಲೆ ಅರ್ಧಚಂದ್ರನನ್ನೂ ನೋಡಬಹುದು. ಭುಜ ಪ್ರದೇಶದಲ್ಲಿ "ವ್ಯಾಳಮುದ್ರೆ" ಯೂ ಉರಪ್ರದೇಶದಲ್ಲಿ "ಉರಸೂತ್ರ" ವೂ ಪ್ರಕಾ ಶಿಸುತ್ತಿವೆ. ನಟರಾಜನು ಗಜಚರ್ಮಾಂಬರ ಭೂಷಿತನಾಗಿ, ಭಸ್ಮಲೇಪಿತ ಶರೀರಿ ಯಾಗಿ, ಒಡಲಲ್ಲಿ ಯಜ್ಞೋಪವೀತವು ಶೋಭಿಸುತ್ತಿರಲು, ಮುಖದಲ್ಲಿ ಮಂದ ಹಾಸವನ್ನು ಸೂಸುತ್ತಾ, ತನ್ನ ಕರಾಳನೃತ್ಯದಲ್ಲಿ ತಲ್ಲೀನನಾಗಿದ್ದಾನೆ. ಬಲಗಾಲಿ ನಿಂದ ಅಪಸ್ಮಾರ ಪುರುಷನನ್ನು ಮೆಟ್ಟಿನಿಂತು, ವಾಮಪಾದವನ್ನು ಎತ್ತಿ ಹಿಡಿದಿದ್ದಾನೆ.[6]

ಅಪಸ್ಮಾರ ಪುರುಷನು ಅಜ್ಞಾನದ ಸಂಕೇತ; ಅವನ ಮೇಲೆ ನಿಂತಿರುವ ಶಿವನು ಸತ್ಯಜ್ಞಾನಾನಂದಸ್ವರೂಪಿ. ಅವನ ನಾಟ್ಯವೇ ಸೃಷ್ಟಿ, ಸ್ಥಿತಿ, ಲಯಾದಿಗಳು.

ಶಿವನ ವಾಮಪಾರ್ಶ್ವದಲ್ಲಿ ಪಾರ್ವತಿಯು ನಿಂತಿದ್ದಾಳೆ. ಅವಳ ಮುಖದಲ್ಲಿ ಭಯವಿಸ್ಮಯಗಳು ಮೂಡಿವೆ. ಅವಳು "ಪತ್ರಕುಂಡಲ"ಗಳನ್ನೂ, ಸೊಗಸಾಗಿ ಕೆತ್ತಲ್ಪಟ್ಟಿರುವ ಒಡ್ಯಾಣವನ್ನೂ, ಸುಂದರವಾದ "ಚೆನ್ನವೀರ"[7] ವನ್ನೂ ಧರಿಸಿ ದ್ದಾಳೆ. ಶಿವನ ಬಲಪಾರ್ಶ್ವದಲ್ಲಿ ಗಣೇಶನು ಬಲಗೈಯಲ್ಲಿ "ಪರಶು" ವನ್ನೂ ಎಡಗೈಯಲ್ಲಿ "ಭಗ್ನದಂತ"ವನ್ನೂ ಹಿಡಿದುಕೊಂಡಿದ್ದಾನೆ. ಅವನ ಮೇಲ್ಭಾಗದಲ್ಲಿ ಶಿವನ ಪರಮ ಭಕ್ತನಾದ ಭೃಂಗಿಯು ನರ್ತಿಸುತ್ತಿರುವಂತೆ ಕೆತ್ತಲ್ಪಟ್ಟಿದೆ. ಅವನು ಅಸ್ಥಿಪಂಜರ ಮಾತ್ರವಾಗಿದ್ದಾನೆ. ಅವನ ಕೆಳಗೆ ಕುಮಾರನು ಶಕ್ತ್ಯಾಯುಧವನ್ನು ಹಿಡಿದು ನಿಂತಿದ್ದಾನೆ. ಅವನ ಕಿರೀಟದಲ್ಲಿ ಶಶಿಕಪಾಲಗಳು ಶೋಭಿಸುತ್ತಿವೆ. ಅವನ ಮುಂದೆ ಶಿವನ ಸಾಕ್ಷಾಚ್ಛಿಷ್ಯನೂ, ಭರತನ ನಾಟ್ಯ ವಿದ್ಯಾಗುರುವೂ ತಾಂಡವನೃತ್ಯದ ನಿರ್ಮಾಪಕನೂ ಆದ ತಂಡುವು ಕುಳಿತಿದ್ದಾನೆ. ಕುಮಾರನ ಎಡಪಾರ್ಶ್ವದಲ್ಲಿ ಒಂದು ಭಿನ್ನವಾದ ಸ್ತ್ರೀ ವಿಗ್ರಹವಿದೆ.

ಈ ವಿಗ್ರಹದ ಮೇಲ್ಭಾಗದಲ್ಲಿ ಬ್ರಹ್ಮನು ಹಂಸಾರೂಢನಾಗಿದ್ದಾನೆ. ಹಿಂದಿನ ಎರಡು ಕೈಗಳಲ್ಲಿ 'ಆಜ್ಯಸ್ಥಾಲಿ' ಯನ್ನೂ 'ಸ್ರುಕ್ಕ'[8] ನ್ನೂ ಧರಿಸಿದ್ದಾನೆ. ಮುಂದಿನ

ಎರಡು ಕೈಗಳು ಮುರಿದು ಹೋಗಿವೆ. ಬ್ರಹ್ಮನಿಗೂ ಶಿವನಿಗೂ ಮಧ್ಯೆ ಗಂಧರ್ವರೂ ಕಿನ್ನರರೂ ಗಗನಮಾರ್ಗದಲ್ಲಿ ಸಂಚರಿಸುತ್ತಿರುವಂತೆಯೂ ಉಮಾಮಹೇಶ್ವರನನ್ನು ಸ್ತುತಿಸುತ್ತಿರುವಂತೆಯೂ ಕೆತ್ತಲ್ಪಟ್ಟಿದೆ. ಬ್ರಹ್ಮನ ಹಿಂದೆ 'ಜಟಾಮಂಡಲ'ಧಾರಿಗಳಾದ ಇಬ್ಬರು ಋಷಿಗಳು ನಿಂತಿದ್ದಾರೆ. ಪಾರ್ವತಿಯ ಹೆಗಲ ಬಳಿ ವಿಷ್ಣುವು ಗರುಡನ ಮೇಲೆ ಕುಳಿತಿದ್ದಾನೆ; ಇಂದ್ರನು ತನ್ನ ರಾಣಿಯಾದ ಶಚೀದೇವಿಯೊಡನೆ ಐರಾವತವನ್ನು ಹತ್ತಿಕೊಂಡಿದ್ದಾನೆ. ವಿಷ್ಣುವು ಒಂದು ಕೈಯಲ್ಲಿ ಗದೆಯನ್ನೂ ಮತ್ತೊಂದು ಕೈಯಲ್ಲಿ ಶಂಖವನ್ನೂ ಹಿಡಿದುಕೊಂಡಿದ್ದಾನೆ. ಅವನ ಹಿಂದಿರುವ ವಿಗ್ರಹವು 'ಕಮಂಡಲು' ವನ್ನು ಹಸ್ತದಲ್ಲಿಟ್ಟುಕೊಂಡಿದೆ.

ಗಂಗಾಧರಮೂರ್ತಿಯು ಭವ್ಯವೂ ಮನೋಜ್ಞವೂ ಆಗಿದೆ. ಈ ಶಿಲಾಫಲಕದ ಮಧ್ಯದಲ್ಲಿ ಶಿವ ಉಮೆಯರ ವಿಗ್ರಹಗಳಿವೆ. ಶಿವನು ತನ್ನ ಜಟೆಯನ್ನು ಬಿಚ್ಚಿಬಿಟ್ಟು, ಅದನ್ನು ಎಡಗೈಯಲ್ಲಿ ಹಿಡಿದುಕೊಂಡಿದ್ದಾನೆ. ಆ ಸುನೀಳವಾದ ಕೇಶರಾಶಿಯಿಂದ ಸ್ತ್ರೀಯೊಬ್ಬಳು ಧರೆಗಿಳಿದು ಬರುತ್ತಿದ್ದಾಳೆ. ಶಿವನ ಮುಂದಿನ ಬಲಗೈಯು "ಅಭಯ ಮುದ್ರೆ"ಯನ್ನು ಪ್ರದರ್ಶಿಸುತ್ತಿದೆ. ಹಿಂದಿನ ಎಡಗೈಯಿಂದ ಪಾರ್ವತಿಯ ಗಲ್ಲವನ್ನು ಹಿಡಿದು ಮುದ್ದಿಡುತ್ತಿದ್ದಾನೆ. ಶಿವನ ವಾಮಪಾರ್ಶ್ವದಲ್ಲಿ ಉಮೆಯು ಬಾಗಿನಿಂತು, ತನ್ನ ಎಡಗೈಯನ್ನು ಇಳಿಬಿಟ್ಟು, ಬಲಗೈಯಲ್ಲಿ ಹೂವೊಂದನ್ನು ಎತ್ತಿ ಹಿಡಿದಿದ್ದಾಳೆ. ಆಕೆಯ ಹೆಗಲ ಬಳಿ ವಿಷ್ಣುವು ಗರುಡಾರೂಢನಾಗಿದ್ದಾನೆ. ಬಿಟ್ಟ ಮಂಡೆಯಿಂದೊಡಗೂಡಿದ ಭಗೀರಥನು ಶಿವನ ಪಾದದ ಬಳಿ ಕುಳಿತು ಬದ್ಧಾಂಜಲಿಪುಟನಾಗಿ ಅವನನ್ನೇ ದೃಷ್ಟಿಸಿ ನೋಡುತ್ತಿದ್ದಾನೆ. ಶಿವ ಉಮೆಯರ ಮಧ್ಯೆ "ಗಣ"ವೃಂದಗಳು ಭಯಭಕ್ತಿಯಿಂದ ಕೈಕಟ್ಟಿಕೊಂಡು ನಿಂತಿವೆ. ಶಿವನ ಮಸ್ತಕದಲ್ಲಿ ಮೂರು ಮುಖಗಳುಳ್ಳ ದೇವಿಯೊರ್ವಳು ಪ್ರಕಾಶಿಸುತ್ತಿದ್ದಾಳೆ. ಈಕೆಯು ಯಮುನಾ ಸರಸ್ವತಿಯರಿಂದೊಡಗೂಡಿದ ಜಾಹ್ನವಿಯಾಗಿರಬೇಕು. ಇದು 'ತ್ರಿವೇಣೀ' ಸಂಗಮವನ್ನು ಸೂಚಿಸುತ್ತದೆ. ಶಿವನ ತಲೆಯ ಸುತ್ತಲೂ ಗಂಧರ್ವರೂ ಕಿನ್ನರರೂ ಆಕಾಶದಲ್ಲಿ ಹಾರಾಡುತ್ತಿರುವಂತೆಯೂ, ಶಂಕರನನ್ನೂ ಪಾರ್ವತಿಯನ್ನೂ ಸ್ತುತಿಸುತ್ತಿರುವಂತೆಯೂ ಕೆತ್ತಲ್ಪಟ್ಟಿದೆ.

ಅಂಧಕಾಸುರವಧಮೂರ್ತಿಯು ಎಂಟು ಕೈಗಳಿಂದ ಕೂಡಿ ಭೀಷಣವಾಗಿದೆ; ಅದು ತನ್ನ ಎರಡು ಕೈಗಳಲ್ಲಿ ತ್ರಿಶೂಲದಿಂದ ಅಂಧಕಾಸುರನನ್ನು ಇರಿದು ಮೇಲಕ್ಕೆತ್ತಿ ಹಿಡಿದಿದೆ. ರಾಕ್ಷಸನ ದೇಹದಿಂದ ರಕ್ತವು, ಕೆಳಗಡೆ ತುದಿಗಾಲ ಮೇಲೆ ಕುಳಿತಿರುವ ಯೋಗೇಶ್ವರಿಯ ಬಟ್ಟಲಿಗೆ ಬೊಟ್ಟುಬೊಟ್ಟಾಗಿ ಬೀಳುತ್ತಿದೆ. ಅವನ ಶರೀರದಿಂದ ಚಿಮ್ಮಿ ಹರಿಯುತ್ತಿರುವ ನೆತ್ತರನ್ನು ಶಿವನು ತನ್ನ ಕಪಾಲದಲ್ಲಿ ತುಂಬಿಕೊಳ್ಳುತ್ತಿದ್ದಾನೆ. ಇನ್ನೆರಡು ಕೈಗಳಲ್ಲಿ "ಘಂಟೆ"ಯನ್ನೂ "ಖಡ್ಗ"ವನ್ನೂ ಧರಿಸಿದ್ದಾನೆ. ಮಿಕ್ಕೆರಡು



ಗಂಗಾಧರ ಶಿವ

ಕೈಗಳು ಗಜಚರ್ಮವೊಂದನ್ನು ಬಿಚ್ಚಿ, "ಪ್ರಭಾಮಂಡಲ"ದ ಆಕಾರದಲ್ಲಿ ಹಿಡಿದು ಕೊಂಡಿರುವಂತೆಯೂ, "ತರ್ಜನಿ"ಯನ್ನು ಸೂಚಿಸುವಂತೆಯೂ ಕೆತ್ತಲ್ಪಟ್ಟಿವೆ.

ಯೋಗೇಶ್ವರಿ ಅಥವಾ ಕಾಳಿಯು ಬಾಗಿದ ಮೊನೆಯುಳ್ಳ ಕಿಗ್ಗತ್ತಿಯನ್ನು ಹಿಡಿದು, ನೇತ್ರಗಳಿಂದ ಸಿಡಿಲ ಕಿಡಿಗಳನ್ನು ಕಾರುವಂತಿದೆ. ಆಕೆಯು ಕೃಶಾಂಗಿಯಾಗಿ, ಜಟಾಮಂಡಲಧಾರಿಣಿಯಾಗಿದ್ದಾಳೆ. ಅವಳ ತಲೆಯ ಮೇಲೆ, ಅರ್ಧ ಮನುಷ್ಯ ಅರ್ಧ ಪಕ್ಷಿಯಾಕಾರದ, ನರಮಾಂಸಭಕ್ಷಿಣಿಯಾದ ಡಾಕಿನಿಯ ವಿಗ್ರಹವಿದೆ.

ಕಾಳಿಯ ಬಲಪಾರ್ಶ್ವದಲ್ಲಿ, ಪದ್ಮಾಸನದಲ್ಲಿ ಕುಳಿತಿರುವ ದೇವಿಯು, ಇದನ್ನೆಲ್ಲಾ ಭಯ ವಿಸ್ಮಯಗಳಿಂದ ನೋಡುತ್ತಿದ್ದಾಳೆ.

ಕಲ್ಯಾಣಸುಂದರಮೂರ್ತಿಯನ್ನು ಕೆತ್ತಿರುವ ಶಿಲಾಫಲಕವು ಅತ್ಯಂತ ರಮಣೀಯವಾಗಿದೆ. ಇದರ ವಸ್ತು ಪಾರ್ವತೀಪರಿಣಯ. ಶಿವನ ಸತಿಯಾಗಲೋಸುಗ ಅನೇಕ ವರ್ಷಗಳ ಕಾಲ ತಪಸ್ಸನ್ನಾಚರಿಸಿ, ಪಾರ್ವತಿಯು ತನ್ನ ಮನೋರಥವನ್ನು ಪಡೆದಿದ್ದಾಳೆ. ಅಭೀಷ್ಟಸಿದ್ಧಿಯನ್ನು ಹೊಂದಿದ ಪಾರ್ವತಿಯ ಮುಖದಲ್ಲಿ ವಿನಯ ಮತ್ತು ಸಂತೋಷ ಇವು ಕಾಣುವುವು. ಆಕೆಯ ವಿನಮಿತಶಿರವೂ, ಅಧೋಮುಖವಾದ ದೃಷ್ಟಿಯೂ ಅವಳ ಲಜ್ಜೆಯನ್ನು ತೋರುವುವು. ಸೂಕ್ಷ್ಮವಾದ ನಡುವೂ, ತುಂಬು ಎದೆಯೂ, ದುಂಡು ಕತ್ತೂ, ವಿಶಾಲವಾದ ವಕ್ಷಸ್ಥಳವೂ, ಲತೆಯಂತಿರುವ ಅಂಗಾಂಗಗಳೂ ಅವಳ ಸೌಂದರ್ಯವನ್ನು ಹೆಚ್ಚಿಸಿರುವುವು. ಯುವಕನಾದ ಶಿವನಲ್ಲಿ ಆನಂದದ ಜೊತೆಗೆ ಘನತೆ ಗಾಂಭೀರ್ಯ ಸೌಶೀಲ್ಯಾದಿಗಳು ಕಾಣುವುವು. ಪಾರ್ವತಿಯ ಹಿಂದೆ ನಿಂತಿರುವ ಹಿಮವಂತನಲ್ಲಿ ಪ್ರತಾಪವು ಕಂಡುಬಂದರೂ, ಮಗಳಾದ ಪಾರ್ವತಿಯನ್ನು ಅಗಲಬೇಕೆಂಬ ಚಿಂತೆಯಿಂದ ಅವನ ಮುಖವು ಕಳೆಗುಂದಿದೆ. ಪಾರ್ವತಿಯ ಸಮೀಪದಲ್ಲಿಯೇ ಲಕ್ಷ್ಮೀದೇವಿಯು ಅವಳ ಬೆನ್ನಿನ ಮೇಲೆ ಕೈಯಿಟ್ಟು ನಿಂತಿದ್ದಾಳೆ. ಅವಳ ಹಿಂದೆ ವಿಷ್ಣುವು ಧಾರೆಯನ್ನೆರೆಯಲು ಅಮೃತಪೂರಿತವಾದ ಮಂಗಲ ಕಲಶವನ್ನು ಹಸ್ತದಲ್ಲಿಟ್ಟುಕೊಂಡಿದ್ದಾನೆ. ಶಿವನು ತನ್ನ ಬಲಗೈಯನ್ನು ನೀಡಿ ಪಾರ್ವತಿಯ ಪಾಣಿಗ್ರಹಣವನ್ನು ಮಾಡಲು ಸಿದ್ಧನಾಗಿದ್ದಾನೆ. ಆತನ ಎಡಭಾಗದಲ್ಲಿ ಸಾಕ್ಷಾತ್ ಬ್ರಹ್ಮನೇ ಪುರೋಹಿತನಾಗಿ ಕುಳಿತು ಹೋಮ ವನ್ನು ಮಾಡುತ್ತಿದ್ದಾನೆ. ಅಂತರಿಕ್ಷದಲ್ಲಿ ಸಂಚರಿಸುವ ಅಪ್ಸರರು ಕಿನ್ನರರು ಇವರೆಲ್ಲರೂ ಕುತೂಹಲದಿಂದ ಗುಂಪುಗುಂಪಾಗಿ ಬಂದು ಸೇರಿದ್ದಾರೆ. ಮತ್ತೆ ಕೆಲವರು ಗಗನಮಾರ್ಗದಲ್ಲಿ ಸಂಚರಿಸುತ್ತಾ ಉಮಾಮಹೇಶ್ವರರನ್ನು ಸ್ತೋತ್ರ ಮಾಡುತ್ತಿದ್ದಾರೆ. ಶಿವಪಾರ್ವತಿಯರ ಪ್ರತಿಮೆಗಳು ದೊಡ್ಡವಾಗಿಯೂ, ಉಳಿದ ಪ್ರತಿಮೆಗಳು ಚಿಕ್ಕವಾಗಿಯೂ ಇವೆ.

ಒಟ್ಟಿನಲ್ಲಿ ಹೇಳುವುದಾದರೆ, ಎಲಿಫೆಂಟದ ಕಲ್ಮನೆಗಳಲ್ಲಿ ಆ ಕಾಲದ ಹಿಂದೂ ಶಿಲ್ಪಕಲಾನೈಪುಣ್ಯದ ಅತ್ಯುಚ್ಚ ಶಿಖರವು ಕಂಗೊಳಿಸುವುದು. ಇವು ಕ್ರಿ.ಶ. ಎಂಟನೆಯ ಶತಮಾನದಲ್ಲಿ ರಾಷ್ಟ್ರಕೂಟ ಅರಸರಿಂದ ನಿರ್ಮಿತವಾದವು.[9] ಭಾರತೀಯರ, ಅದರಲ್ಲೂ ಕರ್ಣಾಟಕದ, ಕಲಾಮಹಿಮೆಯನ್ನು ಸ್ಥಾಪಿಸಲು ಇದೊಂದು ನಿದರ್ಶನವೇ ಸಾಕು.[10]

"Good architecture is essentially religious. The production of a faithful and virtuous, not of an infidel and corrupted people. . . . It is the only language of a people inspired by resolute and common purpose and rendering resolute and common fidelity to the legible laws of an undoubted god"—RUSKIN.

ಸಿ. ಬಿ. ಸೀತಾರಾಮು ಮೊದಲಿಯಾರ್.

## ಟಿಪ್ಪಣಿಗಳು

1 "ಎಲಿಫೆಂಟ" ದ್ವೀಪಕ್ಕೆ "ಘಾರಾಪುರಿ" ಎಂದು ಹೆಸರು. "ಘಾರಾಪುರಿ" ಎಂಬುದು ಘಾರೀಗಳ ಅಥವಾ ಗುರುವರ ನಗರ. ಗುರುವರು ಶಿವಾಲಯಗಳಲ್ಲಿ ಪೂಜಾಕಾರ್ಯಗಳನ್ನು ಮಾಡುವ ಶೂದ್ರರು. ಇದು "ಘಾರೀಪುರಿ" ಎಂಬುದರ ಅಪಭ್ರಂಶರೂಪವೆಂದೂ, "ಘಾರೀಪುರಿ" ಎಂದರೆ "ಗುರುವರ ನಗರ"ವೆಂದೂ ಹಲವು ವಿದ್ವಾಂಸರ ಮತ. ಡಾ|| ಹೀರಾನಂದ ಶಾಸ್ತ್ರಿಗಳು "ಘಾರ" ಎಂಬುದು ಪ್ರಾಕೃತ ಪದವೆಂದೂ, "ಪ್ರಾಕಾರ" ಎಂಬ ಸಂಸ್ಕೃತ ಶಬ್ದದ ವಿಕಾರವೆಂದೂ, "ಘಾರೀಪುರಿ" (ಘಾರಾ = ಕೋಟೆ ಅಥವಾ ಕೋಟೆ ಗೋಡೆ) ಎಂಬುದಕ್ಕೆ "ಕೋಟೆಯಿಂದ ಸುತ್ತಲ್ಪಟ್ಟ ನಗರ"ವೆಂದು ಅರ್ಥಮಾಡಬೇಕೆಂದೂ ಹೇಳಿದ್ದಾರೆ. ಈ ದ್ವೀಪದಲ್ಲಿ ದೊರೆತ ತಾಮ್ರಪಾತ್ರೆಯೊಂದರ ಮೇಲೆ ಕೆತ್ತಲ್ಪಟ್ಟಿರುವ ಶಾಸನದಲ್ಲಿ ಇದನ್ನು "ಶ್ರೀಪುರಿ" ಎಂದು ನಿರ್ದೇಶಿಸಿದೆ. ಆದುದರಿಂದ ಸುಮಾರು ಕ್ರಿ.ಶ. ಹನ್ನೊಂದನೆಯ ಶತಮಾನದಲ್ಲಿ ಈ ದ್ವೀಪದ ಹೆಸರು "ಶ್ರೀಪುರಿ"ಯೆಂದಿದ್ದಿರಬಹುದೆಂದು ಅವರ ಅಭಿಪ್ರಾಯ (*A Guide to Elephanta*, p. 4). ಈ ದ್ವೀಪದ ದಕ್ಷಿಣ ತೀರದಲ್ಲಿ ಹಿಂದೆ ಆನೆಯ ದೊಡ್ಡ ಶಿಲಾವಿಗ್ರಹವಿದ್ದಿತಂತೆ. ಅದರಿಂದ ಪೋರ್ಚುಗೀಸರು ಇದನ್ನು "ಎಲಿಫೆಂಟಾ" ಎಂದು ಕರೆದರು. ಈಗ ಅದೇ ಹೆಸರೇ ಬಳಕೆಯಲ್ಲಿದೆ.

2 ಈ ಮೂರ್ತಿಯ ಸ್ವರೂಪನಿರ್ಣಯದಲ್ಲಿ ಭಿನ್ನಾಭಿಪ್ರಾಯಗಳಿವೆ. ವಿನ್ಸೆಂಟ್ ಸ್ಮಿತ್ ಹ್ಯಾವೆಲ್, ಮುಂತಾದ ಕಲಾಭಿಜ್ಞರು ಇದನ್ನು 'ತ್ರಿಮೂರ್ತಿ'ಯೆಂದೇ ಕರೆದಿದ್ದಾರೆ. ಆದರೆ ಮೊಟ್ಟಮೊದಲು ಪ್ರತಿಮಾಶಾಸ್ತ್ರದ ಮೇಲೆ ಉದ್ಗ್ರಂಥಗಳನ್ನು ರಚಿಸಿದ ಶ್ರೀಮಾನ್ ಟಿ. ಎ. ಗೋಪೀನಾಥರಾಯರು, ಇದು 'ತ್ರಿಮೂರ್ತಿ'ಯಲ್ಲವೆಂದೂ, ಹಾಗೆ ಕರೆದಿರುವುದು ತಪ್ಪೆಂದೂ ಇದು 'ಮಹೇಶಮೂರ್ತಿ'ಯೆಂದೂ ಹೇಳಿ, ಅದಕ್ಕೆ ಈ ಕೆಳಗೆ ಕಂಡ ಕಾರಣಗಳನ್ನು ಕೊಡುತ್ತಾರೆ (T.A. Gopinatha Rao: *Elements of Hindu Iconography*, Vol. II, Part II, pp. 382-83):—

(೧) ಆಗಮಗಳಲ್ಲಾಗಲಿ, ಪುರಾಣಗಳಲ್ಲಾಗಲಿ ಈ ಮೂರ್ತಿಯನ್ನು ಹೋಲುವ ಮತ್ತಾವ ವಿಗ್ರಹದ ವರ್ಣನೆಯೂ ಕಂಡುಬರುವುದಿಲ್ಲ.

(೨) ಪಿತಾಮಹನಾದ ಬ್ರಹ್ಮನೂ, ರುದ್ರನೂ ತಮಗೆ ಯೋಗ್ಯವಾದ "ಜಟಾಮುಕುಟ"ವನ್ನು ಧರಿಸುತ್ತಾರೆ. ವಿಷ್ಣುವು ಎಲ್ಲಿಯೂ, ಯಾವ ಸಂದರ್ಭದಲ್ಲಿಯೂ "ಜಟಾಮುಕುಟ"ವನ್ನು ಧರಿಸುವುದಿಲ್ಲ. ಅವನಿಗೆ ಉಚಿತವಾದ ಶಿರೋಭೂಷಣವೆಂದರೆ "ಕಿರೀಟ ಮಕುಟ"ವೇ ಸರಿ. ಈ ಮೂರು ಮುಖಗಳಲ್ಲಿ, ಎರಡು "ಜಟಾಮುಕುಟ"ವನ್ನು ಧರಿಸಿರುವುದರಿಂದ, ಬ್ರಹ್ಮನ ಮತ್ತು ರುದ್ರನ ಶಿರಸ್ಸುಗಳೆಂದು ನಾವು ಒಪ್ಪಿಕೊಂಡರೂ, ಮೂರನೆಯ ಮುಖವೂ ಸಹ "ಜಟಾಮುಕುಟ"ವನ್ನು ಧರಿಸಿರುವುದರಿಂದ, ಅದನ್ನು ವಿಷ್ಣುವಿನ ಶಿರಸ್ಸೆಂದು ನಾವು ಒಪ್ಪಲಾರೆವು.

(೩) ಒಂದೇ ಶಿರಸ್ಸಿನಿಂದ ಕೂಡಿದ ಬ್ರಹ್ಮನ ವಿಗ್ರಹವು ಎಲ್ಲಿಯೂ ಕಂಡುಬಂದಿಲ್ಲ. ಪುರಾಣಗಳಲ್ಲಿಯೂ ಸಹ ಬ್ರಹ್ಮನಿಗೆ ಒಂದೇ ತಲೆಯಿರುವ ಪ್ರಸ್ತಾಪವು ಬರುವುದಿಲ್ಲ. ಬ್ರಹ್ಮನಿಗೆ ನಾಲ್ಕು ಮುಖಗಳು ಇದ್ದೇ ತೀರಬೇಕೆಂದು ಶಿಲ್ಪಶಾಸ್ತ್ರಗಳು ವಿಧಿಸುತ್ತವೆ. ಆದುದರಿಂದ, ಈ ಮೂರು ಮುಖಗಳ ಪೈಕಿ, ಒಂದು ಬ್ರಹ್ಮನದೆಂದು ಹೇಳುವುದು ಸಮಂಜಸವಾಗಲಾರದು.

(೪) ಆಗಮಗಳಲ್ಲಿ ಕೊಟ್ಟಿರುವ "ತ್ರಿಮೂರ್ತಿ" ಲಕ್ಷಣಗಳಾವುವೂ ಈ ವಿಗ್ರಹದಲ್ಲಿ ಕಂಡುಬರುವುದಿಲ್ಲ. ಅವುಗಳನ್ನನುಸರಿಸಿ ನಿರ್ಮಿತವಾದ ಅನೇಕ ವಿಗ್ರಹಗಳು ನಮಗೆ ದೊರೆತಿವೆ.

(೫) ಈ ಗುಹಾಲಯದಲ್ಲಿ ಇದಕ್ಕೆ ದೊರೆತಿರುವ ಅಗ್ರಸ್ಥಾನವೂ, ಇದನ್ನು ಸುತ್ತುಗಟ್ಟಿರುವ ಅರ್ಧನಾರೀಶ್ವರ, ಕಲ್ಯಾಣಸುಂದರ, ರಾವಣಾನುಗ್ರಹ, ಗಂಗಾಧರ ಮುಂತಾದ ಶಿವನ "ಲೀಲಾಮೂರ್ತಿ"ಗಳನ್ನೂ ನಾವು ಮನಗಂಡರೆ, ಇದನ್ನು "ಮಹೇಶ ಮೂರ್ತಿ"ಯೆಂದು ದೃಢಪಡಿಸಲು ಸಾಕಷ್ಟು ಕಾರಣಗಳು ನಮಗೆ ದೊರೆತಂತಾಯಿತು.

(೬) ಈ ಮೂರ್ತಿಯ ಮೂರು ಮುಖಗಳು ಧರಿಸಿರುವ ವಿವಿಧ ಕರ್ಣಾಭರಣಗಳು ಇದನ್ನು "ತ್ರಿಮೂರ್ತಿ"ಯೆಂದು ಕರೆಯಲು ನಮಗೆ ಅವಕಾಶ ಕೊಡುವುದಿಲ್ಲ. ಆದುದರಿಂದ ಈಶ್ವರನ ಈಶಾನಾದಿ ಪಂಚ ಮುಖಗಳಲ್ಲಿ, ಈ ಮೂರ್ತಿಯ ಎಡಭಾಗದಲ್ಲಿರುವ ಮುಖವು "ಅಘೋರ"ವನ್ನೂ, ಮಧ್ಯಭಾಗದಲ್ಲಿರುವ ಮುಖವು "ಸದ್ಯೋಜಾತ"ವನ್ನೂ ಸೂಚಿಸುವುದೆಂದು ನಮ್ಮ ಅಭಿಪ್ರಾಯ.

ಡಾ|| ಆನಂದ ಕುಮಾರಸ್ವಾಮಿಯವರು ತಮ್ಮ ಗ್ರಂಥದಲ್ಲಿ ಇದನ್ನೇ ಸಮರ್ಥಿಸಿದ್ದಾರೆ (Dr. A. K. Coomaraswamy: *History of Indian and Indonesian Art*, p. 100). ಶ್ರೀ ಗಂಗೂಲಿಯವರು ಇದನ್ನೇ ಬಲಪಡಿಸಿದ್ದಾರೆ (O. C. Gangoly, *Indian Sculpture: Cultural Heritage of India*, Vol. III).

[3] ಇದು ಬ್ರಹ್ಮನ ಶಿರಸ್ಸಲ್ಲವೆಂದೂ, ರಜೋಗುಣಪೂರ್ಣನಾದ ವಿಷ್ಣುವಿನ ಶಿರಸ್ಸೆಂದೂ ಹ್ಯಾವೆಲ್ಲರು ಹೇಳುತ್ತಾರೆ (Havell: *A Study of Indo-Aryan Civilisation: Ancient and Medieval Architecture*, p. 163).

[4] ಇದು ವಿಷ್ಣುವಿನ ಶಿರಸ್ಸಲ್ಲವೆಂದೂ, ಪಾರ್ವತಿಯ ಮಸ್ತಕವೆಂದೂ ಹ್ಯಾವೆಲ್ಲರು ಹೇಳುತ್ತಾರೆ (Havell: Ibid, p. 163).

[5] ಇದು ಬ್ರಹ್ಮನ ಮೂರ್ತಿಯೆಂದು ಹ್ಯಾವೆಲ್ಲರು ಹೇಳುತ್ತಾರೆ (Havell: Ibid, p. 160). ಇದು ಮೊದಲು ಬ್ರಹ್ಮನ ದೇವಾಲಯವಾಗಿ ಅದರಲ್ಲಿ ಬ್ರಹ್ಮನ ವಿಗ್ರಹವಿತ್ತೆಂದೂ, ಈಚೆಗೆ ಅದನ್ನು ಕಿತ್ತುಹಾಕಿ ಶಿವಲಿಂಗವನ್ನು ಪ್ರತಿಷ್ಠಿಸಿರಬೇಕೆಂದೂ ಅವರು ಊಹಿಸುತ್ತಾರೆ (Ibid, p. 161). ಶಾಸನದಲ್ಲಿ ಸ್ಪಷ್ಟವಾಗಿ "ಶಿವ"ನೆಂದು ಉಲ್ಲೇಖವಿರುವಾಗ, ಇದನ್ನು "ಶಿವಮೂರ್ತಿ"ಯೆಂದು ವ್ಯವಹರಿಸುವುದು ಸೂಕ್ತವಾಗಿದೆ.

[6] ಡಾ|| ಆನಂದ ಕುಮಾರಸ್ವಾಮಿಯವರ *Dance of Siva* ಎಂಬ ಗ್ರಂಥವನ್ನು ನೋಡಿ.

[7] ಆಭರಣ ವಿಶೇಷ (ಪದಕದಿಂದೊಡಗೂಡಿದ ಸರ). '8' ಆಕಾರದ ಯಜ್ಞೋಪವೀತವೆಂದೂ ಹೇಳುತ್ತಾರೆ (T. A. Gopinatha Rao, Ibid, Vol. I, Appendix).

[8] ಹೋಮಾಗ್ನಿಗೆ ತುಪ್ಪವನ್ನು ಹುಯ್ಯಲು ಉಪಯೋಗಿಸುವ ಸಾಟು.

[9] Dr. A. K. Coomaraswamy, p. 100 (*History*).

[10] Havell, Ibid, pp. 160, 163.

## ಆಧಾರಗ್ರಂಥಗಳು

O. C. GANGOLY—*Indian Sculpture* (*Cultural Heritage of India*, Vol III.)

DR. HIRANANDA SASTRY—*A Guide to Elephanta.*

DR. A. K. COOMARASWAMY—*History of Indian and Indonesian Art.*

DR. A. K. COOMARASWAMY—*Dance of Siva.*

T. A. GOPINATHA RAO—*Elements of Hindu Iconography* (Vol II, Part II).

E. B. HAVELL: *A Study of Indo-Aryan Civilisation: Ancient and Medieval Architecture.*

V. A. SMITH: *History of Fine Arts in India and Ceylon.*

KARL KHANDALAVALA—*Indian Sculpture and Painting.*

# ಸುಬುದ್ಧಿಪ್ರಕಾಶ

ಸಂವತ್ಸರ ೬, ಪತ್ರ ೨೩ ಶಹರ, ಬೆಳಗಾಂವ

ತಾರೀಖು ೨೪ನೆ ಮಾಹೆ ಸೆಪಟಂಬರ ಸಂನ ೧೮೫೫ನೆ ಯಿಸವಿ ಚಂದ್ರವಾರ ಶಕೆ ೧೭೭೭
ರಾಕ್ಷಸನಾಮ ಸಂವತ್ಸರ

## ಪತ್ರದಕ್ರಯಾ

ಪ್ರತಿ ಸಂವತ್ಸರಕ್ಕೆ ೬ ರು . . . . . . ಪ್ರತಿ ತಿಂಗಳಿಗೆ ೦||೦



## ವಸೂಲ ಬಂದ ಹಣಾ

೧೩||೦ ಮೆಹರ್ಬಾನ ಜೊನ್ಸ ಸಾಹೇಬ ಯಿಸ್ಕ್ವೈಯರ ಜಡಜ್ಜ ವ ಶೆಷನ ಜಡಜ್ಜ ಜಿಲ್ಲಾ ಧಾರವಾಡ ಯಿವರ ಕಡಿಯಿಂದ್ದಾ ಯೀ ಪತ್ರದ ಕ್ರಯಾದ ಬಾಬತು ಸಂನ ೧೮೫೩ನೆ ಯಿಸವಿ ಜೂನ ತಿಂಗಳದಿಂದ್ದಾ ಸಂನ ೧೮೫೫ನೆ ಯಿಸವಿ ಮಾಹೆ ಅಗಷ್ಟ ತಿಂಗಳ ಕೊನಿವರಿಗೆ ಅಂದ್ರೆ ಯರಡು ವರ್ಷ ಮೂರು ತಿಂಗಳದ್ದು ಬಂದದ್ದು. . . . ೨ ನಾರಾಯಣ ಭೀಮಾಜಿ ಡಿಪೂಟಿ ನಾಝರ ಧಾರವಾಡ ಅದಾಲತ ಯಿವರ ಕಡಿಂದ್ದಾ ಸಂನ ೧೮೫೩ನೆ ಯಿಸವಿ ಫೆಬ್ರುಅರಿ ತಿಂಗಳದಿಂದ್ದಾ ಸನ್ನ ಮಜಕೂರ ಮೆ ತಿಂಗಳ ಕೊನಿವರಿಗೆ ಬಂದದ್ದು. . . .



## ಜಾಹೀರನಾಮಾ

ಬೆಳಗಾಂವಿ ಸುಬುದ್ಧಿಪ್ರಕಾಶ ವರ್ತಮಾನಪತ್ರ ತೆಗೆದುಕೊಂಬುವಂಥಾ ಸರ್ವಜನ . . . . ಳಸೂಚಿಸುವುದೆನೆಂದರೆ—ಯೀ ಪತ್ರದ ಕಿಂಮತು ಯಿನ್ನೂ ಯಾ . . ದ್ದಾ ಬರತಕ್ಕ ಬಾಕಿ ಯಿದ್ಧೀತು ಅವರು ತೀವ್ರದಿಂದ . . . . ಯೋಚನೆಯನ್ನು ಮಾಡಬೇಕೂ ಮತ್ತು . . . . ತ್ವದಿಂದ್ದಾ . . . . ಡದೊಳು ನಮ್ಮ ಪತ್ರ ತೆಗೆದುಕೊಂಬುವಂಥಾ ಜನರ ಪೈಕಿ ಕೆಲವರಿಂದ ಯಿನ್ನು ಬರತಕ್ಕ ಬಾಕಿ ಯಿರುತ್ತದೆ. ಆ ಪ್ರಯುಕ್ತ ಅವರು ಯೀ ಸೂಚನಾದ ಮ್ಯಾಲಿಂದ ಜ್ಯಾಗ್ರುತರಾಗಿ ಬಹುತೀವ್ರದಿಂದಾ ರುಪಾಯಿಗಳಂನು ನಂಮ ಕಡಿಗೆ ಕೂಡಲೇ

ಕಳಿಸೋ ಯೋಚನೆ ಮಾಡಬೇಕು. ಯಿದರಹೊರ್ತು ಧಾರವಾಡದೊಳು ವಬ್ಬ ಭವ್ಯೆ ಸಂಭಾವೀತಿ ಗ್ರಹಸ್ಥನ ಕಡಿಂದಾ ಯೀಪತ್ರದ ಬಾಬ್ತು ಸುಮಾರು ೨೧||೦ ರುಪಾಯಿಗಳು ಯೀಗ ಮೂರುವರ್ಷದಿಂದ್ದಾ ಬರತಕ್ಕ ಬಾಕಿ ಯಿದ್ದು ಯೀ ವಿಷಯಕ್ಕೆ ಅವನಿಗೆ ಪುಷ್ಕಳಾವರ್ತಿ ಪತ್ರಾಸು ಒರೆದು ಕಳ್ಸಿದ್ದು ಯಿಸ್ನೂವರಿಗು ರುಪಾಯಿ ಕಳಿಸಿಕೊಡದೆ ವಿನಹಾಕಾರಣ ತಕರಾರು ಮಾಡುತ್ತಾನೆಂದ್ದು ಕೇಳತೆವೆ. ಪರಂತು ಸದರೀ ಗ್ರಹಸ್ಥನ ಕುರಿತು ನಮ್ಮ ಸೂಚನಾ ಹಿಂಗದಲ್ಲಾ. ನೀವು ದಯಮಾಡಿ ಸದರೀಪ್ರಕಾರ ತೀವ್ರ ರೂಪಾಯಿ ಕಳ್ಸಿಕೊಟ್ಟಲ್ಲಿ ವುತ್ತಮಾ. ಯಿಲ್ಲವೆ ತಕ್ಕ ಆಲೋಚನಾಮಾಡಿ ನಿಂಮ ಕಡಿಂದಾ ಸದ್ರಿ ಹಣ ತೆಗೆದುಕೊಂಬೂದಕ್ಕೆ ಲೇಶಮಾತ್ರ ಆಯಾಸ ಹತ್ತದು. ಯೀಗಲೇ ನಿಂಮ ಹೆಸರು ಪ್ರಸಿದ್ಧಮಾಡಿಲ್ಲ. ಯಿಷ್ಟರ ಮ್ಯಾಲಿಂದಾನೆ ನೀವು ತಿಳಕೊಂಡು ರುಪಾಯಿಗಳಂನು ಕಳ್ಸಿಕೊಟ್ಟಲ್ಲಿ ಬಹಾಳ ಯೋಗ್ಯೆವದೆ. ಯಿಲ್ಲದಿದ್ದರೆ, ನಿಂಮ ಕೀರ್ತಿಯ ವರ್ಣನವನ್ನು ಹ್ಯಾಂಗೆ ಮಾಡತಕ್ಕದ್ದೋ ಹಾಂಗೆ—ಯಿಾ ಮುಂಬಯಿ ಯಿಲಾಖೆದೊಳಗಿನ ಸರ್ವಕಡಿಗು ಪ್ರಕಟವಾಗೊಹಾಂಗೆ ಛಾಪಿಸೋಣದರಲ್ಲಿ ಬಂದೀತು.

——◈○◈——

## ಸುಬುದ್ಧಿ ಪ್ರಕಾಶ

### ಅಯೊಧ್ಯಾ

ಸೋಮನಾಥದೇವಾಲಯವು ಪೂರ್ವದಲ್ಲಿ ಹಿಂದುಸ್ಥಾನದ ಯಿತಿಹಾಸದೊಳು ಹ್ಯಾಂಗೆ ವರ್ಣನವಾಗಿಧೆಯೊ ಅದರೊಪಾದೀನೆ ಅಯೋಧ್ಯಾದೊಳಗಿನ ಹನುಮಾನ್ ಗಡಿ ಅಂದ್ರೆ ಮಾರುತಿದೇವಾಲಯದ ವಿಷಯಕ್ಕೆ ನೆನಪು ಯಿಡೊಹಾಂಗೆ ಆದೀತು ಹೀಗೆ ತೊರತ . . ಅಲ್ಲಿಯ ಮುಸಲಮಾನ ಜನರ ಮನಶಿನಲ್ಲಿ ವಂಮಿದೊಮೆ . . . ಆವೇಶ ತುಂಬಿಧೆ. ಯೀಮೂರ್ಖಜನರು ಜ್ಯಾತಿದ್ವೆ. . . . ಗೊಗ್ರಾಂದಲ್ಲಿ ಮಹ್ಮದನ ನಿಶಾನಿಬೈಲಿನೊಳಗೆ ಹಬೀ . . . ಯಿದರಂತ್ರೆ ಅಯೊಧ್ಯೆ ಮುಂತಾದ ಕಡಿಯ ಸರ್ವ ಮುಸಲಮಾನ ಜನರು ಜ್ಯಾಗ್ರುತರಾಗಿಧಾರೆ. ಫೈಜಾಬಾದದೊಳಗಿನ ಮ . . ಪೋತ ಹಾಂಗೂ ಭೈರಾಗಿಜನರ ಕೂಡಾ ಯುದ್ಧಮಾ . . ೪ . ಮಹ್ಮದಿಯನ್ನ

ಜನರು ಗುಂಪುಗುಂಪ್ಪಾಗಿ ಜಮಾಯ್ಸಿಧವು . . . ರೊಪಾದೀನೆ ಹಿಂದೂಜನರೂನು ಮಿಳಿತವಾಗತಾ ನಡದಿದ್ಧಾರೆ. ಈ ಯುದ್ಧದ ಶೇವಟವು ಹ್ಯಾಂಗೆ ಆಧೀತೆಂಬೊದ್ದು ತಿಳಿಯೊದಿಲ್ಲಾ. ಪರಂತ್ತು ಕಾನಪೂರದಲ್ಲಿ ಯೀಧಾಂಧಲೇದು ಬಂದೋಬಸ್ತು ಮಾಡೊದರಗೊಸ್ಕರಾ ಯಿಂಗ್ರೇಜಿ ಸೈನ್ಯವನ್ನು ಕಳ್ಸಿಧಾರೆ.

---

ಪಂಜ್ಯಾಬದೊಳು ಸರಕಾರದ ಆನಿಗಳು ಯಿದ್ದವು. ಅವು ಯಾವತ್ತು ಆಲಹಾಬಾದಕ್ಕೆ ತರಸೊದರಗೊಸ್ಕರಾ ಹುಕ್ಕುಂ ಆಗಿಧೆ. ಯಿವು ಗೌರನರ ಜೇರ್ನಲ್ಲರವರ ಸ್ವಂತ ದಶಿಂದೆ ಅಥವಾ ಸಿಂಧು ಜನರ ಯುದುರಾಗಿ ಕಳಸುವದಕ್ಕೊ ಯಿದೆನು ತಿಳಿಯೋದಿಲ್ಲ. ಗೌರನರ ಜರ್ನಲ ಲಾರ್ಡ ಡಾಲಹೌಸಿ ಯಿವರ ವಿಷಯಕ್ಕೆ ಹೀಂಗೆ ಅಂತಾರಲ್ಲಾ. ಅವರು ಪ್ರಥಮ ರಂಗುನಕ್ಕೆ ಹೋದಾರು, ಅಲ್ಲಿಂದಾ ನವಂಬರದ ಮಧ್ಯದೊಳು ಕಲಕತ್ತೆಕ್ಕೆ ಬಂದಾರು, ಅಲ್ಲೆ ಸರ್ವ ಬಂದೊಬಸ್ತು ಮಾಡೊದಕ್ಕೆ ಫೆಬ್ರುಅರಿ ತನಕಾ ಯಿದ್ದು ಆಮೇಲೆ ವಿಲಾಯಿತಿಗೆ ಹೋದಾರು. . . .

೨೪ನೆ ಸಪಟಂಬರ ೧೭೪ ಸಂನ ೧೮೫೩

## ಸುಬುದ್ಧಿಪ್ರಕಾಶ

---

ಬಂಗಾಲದೊಳಗೆ ನಡದ ಸಾಂಥಲ ಜನರ ಬಂಡು ಯಿಂನುಪರಿಯಂತ್ರಕ್ಕೆ ಹಾಂಗೆ ನಡದದೆ. ಮತ್ತು ಯಿಾ ಬಂಡು ವುತ್ಪಂನವಾದ ಯಾವ ಕಾರಣವಂನು ಮೊದಲು ಛಾಪಸೊಣದರಲ್ಲಿ ಬಂದಿತ್ತೊ ಅದು ಮೃಷಾ ಆದೆ ಹಿಂಗೆ ತಿಳಿಬರುತ್ತದೆ. ಕಾರಣವೆನಂದ್ರೆ ಸದರಿ ಬಂಡಿನ ವಿಷಯಕ್ಕೆ ಹಿಂಗೆ ಅಂತಾರಲ್ಲಾ ಸದರಿ ಬಂಡ ಖೋರರ ಮುಖ್ಯ ಸರದಾರ ಸಿದ್ದುಮಾಣಜಿ ಯಿವನಿಗೆ ವಂದು ಸ್ವಪ್ನ ಬಿದ್ದಿತ್ತು. ಅದು ಯೇನಂದ್ರೆ ಕೆಲವು ಮನುಷ್ಯರು ಆಕಾಶದ ಮ್ಯಾಲಿಂದ ಕೆಳಗೆ ಯಿಳಿದು ಬಂದ್ರು ಮತ್ತು ಅವರು ಯಿಾ ಸಿದ್ದುಮಾಣಜಿಗೆ ಹಿಂಗೆ ಹೇಳಿದರಲ್ಲಾ ನೀನು ಹಾಂಗು ನಿಂನ ಮೂರು ಮಂದಿ ತಂಮಂದರು ಶ್ರೇಷ್ಠಪದಕ್ಕೆ ಯೇರತಕ್ಕವರಿದ್ಧೀರಿ ಹಿಂಗೆ ಹೇಳಿ ಗುಪ್ತವಾದರು. ಆಮ್ಯಾಲೆ ಸದರಿ ಸಿದ್ದುಮಾಣಜೀಗೆ ಜಾಗ್ರತವಾದ್ದರಿಂದ ಅವನು ವಳ್ಳೇ ವೀರಾವೇಶದಿಂದಾ ಯುದ್ದ ಈ ಅನರ್ಥಕಾರಕ ಬಂಡು ನಡಶಿದಾ.

---

## ಮನುಷ್ಯರ ದೀರ್ಘಾಯುಷ್ಯವಂನು ಕುರಿತದ್ದು

ಹೊಪಲಂಡ ಯಂಬೊ ವಬ್ಬ ವಿದ್ವಾಂಸಪುರುಷನು ಹಿಂಗೆ ಬರೆದಿದ್ಧಾನಲ್ಲಾ. ಬಾಹಳ ದಿವಸ ಒದಕೊ ಮನುಷ್ಯರು ಬಾಹಳಮಾಡಿ ಹೊಲಾ ಮಾಡುವವರು, ಹಾಂಗು ಶಿಕಾರಿ ತಿರಗುವವರು ಮತ್ತು ಖಲಾಶಿ ಅಂದ್ರೆ ಝೊಜ ನಡಸು ವಂಥವರು . . . . ಜನರುಗಳೆ ಯಿದ್ಧಾರೆ. ಅವರು ಕಷ್ಟಮಾಡಿ ಜೈಲ ಸ್ಥಳದೊಳಗೆ ತಂಮ ಪ್ರಪಂಚ ಮಾಡತಾರೆ. ಆದ್ದರಿಂದಾ ಅವರ ಆಯುಸ್ಯ . . . ಸು. ತದೆ. ಆಜನ ರೊಳಗಿನ ಕೆಲವ್ರ ಮನುಷ್ಯರು ಅದಾ . . . ೪೦ ವರ್ಷದವರು ಜೀವಂತಯಿದ್ಧಾರೆ. ಹೆನರಿ ಜಾನಕಿಂ . . . ಯೆಂಬೊ ಮನುಷ್ಯನು ೧೬೯ ವರ್ಷದ ಪರಿಯಂತ್ರವಾಗಿ ಬದುಕಿದ್ದಾ. ಥಾಮಸಪಾರ.ಯಂಬೊ ಅವನು ೧೫೨ವರ್ಷದ . . . ಬ.ಕಿದ್ದಾ. ಡರೆಕಿಂಸ.ಬರ್ಗ.ಯಂಬೊಅವನು ೧೪೬.ರ್ಷದ ತನಕಾ ಯಿದ್ದಾ. ಯಫಿಗಾವ. ಯಂಬೊ ಅವನು . . . ವರ್ಷದ ಪರಿಯಂತ್ರವಾಗಿ ಯಿದ್ದಾ.ಜ್ಯಾರಟಂನ ಯಂಬೊ ಮನುಷ್ಯನು ೧೮೦ ವರ್ಷದವನಾಗಿ ಮೃತನಾದಾ. ಅವನು ಇಸವಿ ಸಂನ೧೫೪೯ನೆ ವರ್ಷದಲ್ಲಿ ಹುಟ್ಟಿ ಸಂನ೧೭೨೪ನೆ ಯಿಸವಿ ಜನವರಿ ತಿಂಗಳ ೫ನೆ ತಾರೀಖಿಗೆ ಮರಣಹೊಂದಿದಾ. ಅವನು ಸಾಯೊದರ ಪೂರ್ವದಲ್ಲಿ ಸ್ವಲ್ಪ ದಿವಸದ ಕೆಳಗೇನೆ ಕೈವಳಗೆ ಕೊಲ ಹಿಡಕೊಂಡು ತಿರಕೊಂಬೊದಕ್ಕೆಹೋಗಿದ್ದಾ. ಅವನ ಕಂಣು ಬಾತಿದ್ದವ್ರು ಪರಂತು ಸ್ವಲ್ಪಸ್ವಲ್ಪ ಕಾಣಸತಿದ್ದವು. ಅವನ ಪುತ್ರನು ೯೭ ವರ್ಷದ ವಯುಸ್ಸಿನವ ಯಿದ್ದಾ. ಅವನು ಹಿಂಗೆ ಹೇಳತಿದ್ದನಲ್ಲಾ. ನಂಮ ತಂದಿ ಪುಷ್ಕಳ ವಯುಸ್ಸಿನವನಾಗಿ ಮೂರನೆ ಆವರ್ತಿ ಲಗ್ನಮಾಡಿಕೊಂಡಾ. ಆ ಸ್ತ್ರಿಯಳ ಹೊಟ್ಟೆಲಿ ನಾನು ಹುಟ್ಟಿದೆ. ಯೀ ಪ್ರಕಾರಾ ಯಿರೊಪ ಖಂಡದೊಳಗೆ ದೀರ್ಘಾಯುಷ್ಯದ ಮನುಷ್ಯರು ಯಿದ್ಧಾರೆ. ನರಮನುಷ್ಯರಿಗೆ ನೂರ ವರ್ಷ ಆಯುಷ್ಯವುಂಟೆಂದು ಕ್ಲಪ್ತಯಿದ್ದು ಯುರೊಪಖಂಡದೊಳಗೆ ಶತಸಂಖೆಕ ಮಿಾರಿದ ಆಯುಷ್ಯವುಳ್ಳ ಜನರು ಯಿದ್ಧಾರೆ. ಯಿದು ಹಿಂದುಶಾಸ್ತ್ರಕ್ಕೆ ವಿರುದ್ಧತೋರತದೆ.

---

ವಿಲಾಯತಿವಳಗೆ ವಬ್ಬ ಮನುಷ್ಯನು ೮೦ ವರ್ಷದ ಪರಿಯಂತ್ರವಾಗಿ ಬಂದಿಖಾನಿ ಅನಭೋಗಿಶಿ ಯಿಾಗ ಬಂಧನದಿಂದಾ ಮುಕ್ತನಾಗಿದ್ಧಾನೆ. ಮತ್ತು ಅವನ ವಯುಸ್ಸು ಯೀಗ ೧೨೧ ವರ್ಷದ್ದು ಅದೆ. ಆಹಾ ಯಿ ಮನುಷ್ಯನು ತಂನ ಕಾಲ, ಬಂದಿಖಾನಿವಳಗೆ ವಳಥಾಂಗೆನೆ ಕಳದಾ.

---

ಟೆಲಿಗ್ರಾಫವ ಕುರಿಯರ ಪತ್ರದ ವ್ಯಾಲಿಂದ ಹಿಂಗೆ ತಿಳಿಬರುತ್ತದಲ್ಲಾ ಯಿನಾಮಕಮಿಶನರ ಅವರ ಅಶಿಷ್ಟಾಂಟ ಹಾಂಗೂ ಕೈಕೆಳಗಿನ ಕಾಮದಾರ ಮುಂತಾದ ಜನರ ಆಯೊಗ್ಯಕೆಲಸದ ವಿಷಯಕ್ಕೆ ದಕ್ಷಣದೊಳಗಿನ ಯಿನಾಮದಾರ ಹಾಂಗು ಜಾಹಗೀರದಾರ ಮುಂತಾದ ಜನರು ವಂದು ಜಬರದಸ್ತ ಅರ್ಜಿ ಹಿಂಗ ಮಾಡ ತಕ್ಕವರಿದ್ಧಾರಲ್ಲಾ. ಸರಕಾರದ ಯಿಲಾಖೆ ಬೆಳಿಯೊದರ ದಶಿಂದಾ ಯಿನಾಮ ಕ್ಯಾಮಿಟಿ ಅವರು ಜನರ ಯಿನಾಮ ಭೂಮಿಗಳಂನು ಕಸಕೊಂಬೊದರ ಆಲೋಚನೆ ಮಾಡತಾರೆ ಯೆಂದು ಯೀ ವಿಷಯಕ್ಕೆ ಗೊಕಾಕದ ಮಾಜಿ ಮಾಮಲೆದಾರದಿ. ಳಿಲ್ಲ ರಘುನಾ . . . . ಯೋ. ನ ಮ್ಯಾಲೆ ಯಿನಾಮ ಕಮೀಶನರನ ವಬ್ಬ ಸೆಟಿವ . . . . ಪ್ರಾಂಟನು ಹಿಂಗೆ ಆರೊಪ ಯಿಟ್ಟಿದ್ಧಾನಲ್ಲಾ. ಪುಣೆದ . . . . ಬರಿಮಾಡೊದಕ್ಕೆ ಸದರಿ ಗ್ರಹಸ್ಥನು ಮುಂಬ. . . . ರಂತು ಆತನು ಜನರಿಗೆ ಅರ್ಜಿ. . . . ಲಶಿದಂತೆ ತೊರೊದಿಲ್ಲಾ.

---

## ಖಬ್ಬಿಣದ ಮಾರ್ಗದ ವೃತ್ತಾಂತವು

ಯಿ ಮುಂಬಯಿ ಯಿಲಾಖೆದೊಳು ಯಾವ ಖಬ್ಬಿಣಮಾರ್ಗನು ಕಟ್ಟಿಸುತ್ತಾರೊ ಅದು ಯಲ್ಲಿತನಕ ಹೋಧೀತು . . ಯಿದು ಇತ್ತ ಕಡಿಯ ಜನರಿಗೆ ತಾವಿಕಿಯಲ್ಲಿ . . ಆದ ಪ್ರಯುಕ್ತಾ ಸರ್ವಜನರಿಗು ತಿಳಿಯೊದರಗೊಸ್ಕರಾ ವಂದು ಯಿಂಗ್ರೆಜಿ ಪತ್ರದ ಮ್ಯಾಲಿಂದಾ ಭಾಷಾಂತರಮಾಡಿದ್ದರ ವಿವರವು.

ಮುಂಬಯಿಯಿಂದಾ ಖಬ್ಬಿಣದ ಮಾರ್ಗದ ಮುಖ್ಯ ಲೈನು ಕಲ್ಯಾಣ ಪರಿಯಂತ್ರಕ್ಕೆ ಅದೆ. ಮತ್ತು ಕಲ್ಯಾಣಿಯಿಂದಾ ಆ ಲೈನಿಗೆ ಯರಡ ಭಾಗ ಮಾಡಿದ್ದಾರೆ. ಅದರೊಳಗಿನ ವಂದು ಭಾಗವು ಯಿಶಾನ್ಯದಿಕ್ಕಿಗೆ ಹೋಗಿಧೆ ಮತ್ತು ಯರ್ಡನೆ ಭಾಗವು ನೈರುತ್ಯದಿಕ್ಕಿನ ಕಡಿಗೆ ಬಂದದೆ. ಯಿಶಾಂನ್ಯದಿಕ್ಕಿನ ಲೈನು ತಳಘಾಟದ ಮ್ಯಾಲಿಂದ ಹಾಯ್ದು ಮನಹಾರ ವ ಭುಪಾಳ ಯಿವಗಳ ಮಾರ್ಗದಿಂದಾ ಗಂಗಾ ನದಿಯ ಬೈಲಿಸೊಳಗೆ ಮಿರಜಾಪುರದಕಡಿಗೆ ಹೋಗಿ ಅಲ್ಲೆ ಬಂಗಾಲದ ಖಬ್ಬಿಣ





ಮಾರ್ಗಕ್ಕೆ ಕೂಡಿದೆ. ಮತ್ತು ಯರ್ಡನೆ ಕಡಿಂದಾ ನೈರುತ್ಯದಿಕ್ಕಿನ ಲೈನು ಭೊರ ಘಾಟದಿಂದಾ ಹೊರಟು ಪುಣೆ ಸೊಲ್ಲಾಪುರದ ಮ್ಯಾಲಿಂದಾ ಕ್ರಿಷ್ಣಾನದಿಯ

ಧಡಕ್ಕೆ ಬಂದು ಅಲ್ಲೆ ಮದ್ರಾಸದ ಖಬ್ಬಿಣಮಾರ್ಗಕ್ಕೆ ಹೋಗಿ ಮಿಳಿತವಾಗಿಧೆ. ಆದರೆ ಯಿಶಾಂನ್ಯದಿಕ್ಕಿನ ಲೈನು ಅಂದ್ರೆ ಕಲ್ಯಾಣಿಯಿಂದಾ ಬಂಗಾಲಕ್ಕೆ ಹೋಗುವ ಖಬ್ಬಿಣ ಮಾರ್ಗವು ಯಾವ ಯಾವ ಕಡಿಗೆ ಹಾಯ್ದು ಹೋಗಿಧೆ ಅದರ ಸ್ವಲ್ಪ ವರ್ಣಸವಂನು ಬರೆಯುಲ ಪಡುವುದೆಸೆಂದ್ರೆ ಯೀ ಯಿಶಾಂನ್ಯದಿಕ್ಕಿನ ಲೈನು ತಳಘಾಟದ ಮಾರ್ಗದಿಂದಾ ಕಟ್ಟತಕ್ಕವರು ಅದು ಸರ್ವದರಕಿಂನಾ ಬಾಹಳ ವುಪಯೋಗವದೆ. ಅದು ಹ್ಯಾಂಗಂದರೆ, ಯೀ ಮಾರ್ಗವು ಕಲ್ಯಾಣಿಯಿಂದ ಪ್ರಾರಂಭವಾಗಿ ನಾಗಪುರ-ಮಿರಜಾಪುರ-ಹಾಂಗು ಅಲಹಾಬಾದದ ಕಡಿಗೆ ಹೋಧೀತು. ಯಿ ಲೈನು ಕಲ್ಯಾಣಿಯಿಂದ ವಳಘಟ್ಟದ ಕೆಳಗಿಂದಾ ವುತ್ತರದಿಕ್ಕಿಗೆ ಕಸಾರಾ ಯಂಬೊ ಗ್ರಾಮದ ಕಡಿಗೆ ಹೋಗುತ್ತದೆ. ಮತ್ತು ಯಿ ಲೈನು ಘಟ್ಟದ ಮ್ಯಾಲೆ ಯೇರೊದರ ದಶಿಂದಾ ವೃದ್ದ ೬||೦ ಮೈಲ ಮಾರ್ಗವಂನು ಮಾಡತಕ್ಕವರಿದ್ಧಾರೆ ಆದು ಘಟ್ಟದ ತಲಿಮ್ಯಾಲೆ ಬಂದು ಮುಟ್ಟಿದ ಮ್ಯಾಲೆ ಆ ಲೈನು ಯಿಶಾಂನ್ಯ ದಿಕ್ಕಿನ ಕಡಿಗೆ ತಿರಿಗಿಸಿದ್ಧಾರೆ ಹಾಂಗು ನಾಶಿಕದ ಮಾರ್ಗದಿಂದಾ ಮನಹಾರಕ್ಕೆ ಹೋಗಿ ಮುಟ್ಟತಕ್ಕದ್ದದೆ. ಸದರಿ ಮನಹಾರಯೆಂಬೊ ಶಹರವು ಮುಂಬಯಿಯಿಂದಾ ೧೫೯ ಮೈಲಿನ ಮ್ಯಾಲೆ ಇದೆ. ಯಿಶಾಂನ್ಯದಿಕ್ಕಿನ ಲೈನಿಗೆ ಸದರಿ ಸ್ಥಳವು ಬಾಹಳ ವುಪಯೋಗದ್ದದೆ. ಅಲ್ಲಿಂದಾ ಮತ್ತೊಂದು ಲೈನು ಕಟ್ಟಿಸತಕ್ಕವರಿದ್ಧಾರೆ. ಅದು ವುಮರಾವತಿಯಿಂದಾ ನಾಗಪೂರದ ಪರಿಯಂತ್ರಕ್ಕೆ ೨೩೫ ಮೈಲು ಕಟ್ಟಸತಕ್ಕವರಿದ್ಧಾರೆ. ಮತ್ತು ಅದರ ಹೊಟ್ಟಿ ವಳಗಿಂದಾ ಯರ್ಡನೆ ಲೈನು ತಗದು ಬಿರಾಡದೇಶದ ಫಲವಂತ ರಾಜ್ಯಕ್ಕೆ ವೈದು ಆ ಮಾರ್ಗವಂನು ಮುಂಬ ಯಿಗೆ ತಂದು ಜೊಡಸತಕ್ಕವರಿದ್ಧಾರೆ. ಆ ದೇಶದೊಳು ಯಾವ ಹತ್ತಿ ಹೊಲಗಳು ಗೊದಾವರಿತೀರದಿಂದಾ ನರ್ಮದಾನದಿಯ ಪರಿಯಂತ್ರಕ್ಕೆ ಪುಷ್ಕಳ ಯಿದ್ಧಾವೊ ಅವುಗಳಿಂದಾ ಮುಂಬಯಿಗೆ ಬಾಹಳ ವುಪಯೋಗವಾಧೀತು. ಮನಹಾರಕ್ಕೆ ನಾಗಪುರದ ಲೈನು ಮತ್ತು ಮುಂಬಯಿ ಪ ಒಡೋದೇದ ಲೈನು ಸುರತದ ಮ್ಯಾಲಿಂದಾ ಬಂದು ಕೂಡತಕ್ಕದ್ದದೆ. ಅದರಿಂದಾ ಹಿಂದುಸ್ಥಾನದೊಳಗಿನ ಫಲವಂತ ಹಾಂಗು ದೊಡ್ಡ ದೇಶದೊಳಗಿನ ಪದಾರ್ಥಗಳಂನು ಕಳಸೊದಕ್ಕೆ ಯರ್ಡು ಬಂದರಗಳು ಕೈಗೆ ಹತ್ತಿದವು. ಮನಹಾರಕಡಿಂದಾ ಯಿ ಲೈನು ಯಿಶಾಂನ್ಯ ದಿಕ್ಕಿನ ಮಾರ್ಗಕ್ಕೆ ಹೋಗಿ ಶಿಂಧವಾದಿಂದಾ ಭೂಪಾಳದ ಕಡಿಗೆ ಹೋಗತಕ್ಕದ್ದು ಮತ್ತು ಅಲಿಂದಾ ಸ್ವಲ್ಪ ಪೂರ್ವದ ಮಾರ್ಗ ಹಿಡಿದು ಜಬ್ಬಲಪೂರ ಹಾಂಗು ರೆವಾದ ಮ್ಯಾಲಿಂದಾ ಹಾಯಿದು ಮಿರಜಾಪುರಕ್ಕೆ ಹೋಗಿ ಅಲ್ಲೆ ಬಂಗಾಲದ ಖಬ್ಬಿಣಮಾರ್ಗಕ್ಕೆ ಕೂಡ ತಕ್ಕದ್ದದೆ. ಮಿರಜಾಪುರವು ಮುಂಬಯಿಯಿಂದಾ ೭೨೦ ಮೈಲುವುಂಟು. ಯಿಶಾಂನ್ಯ ದಿಕ್ಕಿನೊಳಗಿಂದಾ ಯೀ ಮಾರ್ಗವು ಖಾನದೇಶ ಹಾಂಗು ಬಿರಾಡದ ವುತ್ತು

ಮದೇಶದೊಳಗಿಂದಾ ಪಾರಾಗಿ ಮಾಳವಾ ಹಾಂಗು ಗುಜರಾಥದ ಕೆಲವು ಶಹರಗಳಿಗೆ ದಾಖಲವಾಗಿ ನರ್ಮದಾ ಮತ್ತು ಗಂಗಾನದಿಯ ಮಧ್ಯದೊಳಗಿನ ಫಲವಂತ ಭೂಮಿವಳಗಿಂದಾ ಹೋಗತಕ್ಕದ್ದು ಅದರಿಂದಾ ಬಾಹಳ ವುಪಯೊಗವಾಧೀತು. ಯಿಷ್ಟೆ ಯೆನು ಅಲ್ಲಾ. ಪರಂತು ಹಿಂದುಸ್ಥಾನದ ಯಿರ್ಡು ಮುಖ್ಯವಾದ ಶಹರಗಳಿಗೆ ಯಿ ಲೈನು ಜೊಡಸತಕ್ಕವರಿದ್ಧಾರೆ. ಅದರಿಂದಾ ವಿಲಾಯತಿಯಿಂದ ಕಲಕತ್ತೆಕ್ಕೆ ಹೋಗಿ ಬರುವಂಥಾ ಮಾರ್ಗವು ವಂದು ಸಾವಿರ ಮೈಲು ಕಡಮಿ ಆಧೀತು. ಮತ್ತು ರೊಗಿ ಹಾಂಗು ಅಪ್ಪಣೆತೆಗೆದುಕೊಂಡು ಹೋಗುವಂಥಾ ಮುಂತಾದ ಜನರಿಗೆ ತಂಮ ಸ್ವಸ್ಥಳಕ್ಕೆ ಸೌಖ್ಯದಿಂದಾ ಹೋಗೊದಕ್ಕೆ ಬಾಹಳ ವುಪಯೋಗವಾಧೀತು. ಯೀಗಾ ಯಾವಪ್ರಕಾರದಿಂದಾ ಖಬ್ಬಿಣಮಾರ್ಗ ಕಟ್ಟೋ ಕೆಲಸ ನಡದಿದೆಯೊ ಅದರ ಮ್ಯಾಲಿಂದಾ ನೋಡಿದ್ದುಂಟಾದರೆ ಸದರಿ ಕಾರ್ಯ್ಯವು ಬಾಹಳ ದಿವಸದ್ದು ಯಿದ್ದಂತೆ ತೋರತದೆ. ಪರಂತು ಸಾಂಪ್ರತಕ್ಕೆ ಬಹುಜಾಗ್ರತದಿಂದಾ ಸದರಿ ಕೆಲಸಾ ನಡಸೊದರ ಆಲೋಚನೆಯಂನು ನಡಶಿದ್ಧಾರೆ. ಆದಕಾರಣಾ ಮುಂಬಯಿಯಿಂದಾ ಮದ್ರಾಸ ಹಾಂಗು ಕಲಕತ್ತೆದ ಪರಿಯಂತ್ರಕ್ಕೆ ಯಿ ಕೆಲಸವು ಸಂನ ೧೮೬೫ನೆ ಇಸವಿಗೆ ಪೂರಾ ಆಧೀತು . . . ಗೆ ತೋರತದೆ.

ಯಿಂನು ನೈರುತ್ಯದಿಕ್ಕಿನ ಲೈನು ಅಂದ್ರೆ ಕಲ್ಯಾಣಿಯಿಂದಾ ಮದ್ರಾಸಕ್ಕೆ ಹೋಗುವ ಖಬ್ಬಿಣಮಾರ್ಗದ ಲೈನು ಯಾವ ಯಾವ ಸ್ಥಳದ ಮ್ಯಾಲಿಂದಾ ಹಾಯಿದು ಹೋಗುತದೆ ಅದರ ವಿಸ್ತಾರವು.

ಸದರಿ ಲೈನು ಕಲ್ಯಾಣಿಯಿಂದಾ ಬೊರಘಟ್ಟದ ತನಕಾ ಬಂದ . . ಕಲ್ಯಾಣಿಯಿಂದಾ ಬೊರಘಟ್ಟದ ಬೊಡ್ಡಿ ತನಕಾ ೨೮ ಮೈಲು ವುಂಟು. ಆ ಮಾರ್ಗವು ಯೀಗ ಶಿದ್ಧವಾಗಿಧೆ. ಪರಂತು ಅದರೊಳು ರೆವಲವೆ ಯಿಡೊ ಕೆಲಸ ಮಾತ್ರ ವುಳದದೆ. ಅದು ತೈಯಾರ ಆಗಿ ಬರೊ ಫೆಬರವರಿ ತಿಂಗಳಲ್ಲಿ ಚಾಲು ಆಧೀತು. ಯಿದರಿಂದಾ ಸರ್ವರಿಗೂ ಬಾಹಳ ಲಾಭವಾಧೀತು. ಮೊದಲು ಶ್ರೀಮಂತಜನರಿಗೆಸೆ ಚೆಲೊ ಹವಾದ ಸ್ಥಳದ ಮ್ಯಾಲೆ ಹೋಗೊದರ ಲಾಭ ದೊರತಿತ್ತು. ಯಿಂನ ಮ್ಯಾಲೆ ಖಬ್ಬಿಣದ ಮಾರ್ಗ ಶಿದ್ಧವಾದ ಬಳಿಕಾ ಹವಾ ತೆಗದುಕೊಂಬೊ ಲಾಭವು ಬಡಜನರಿಗೆ ಸಹಿತಾ ದೊರಿಹತ್ತಿತು. ಘಟ್ಟದ ತಲಿಮೆಲೆ ಖಂಡಾಳ ಯಂಬೊ ಗ್ರಾಮವದೆ. ಅಲ್ಲಿಂದ ಯಿಲೈನು ಪುಣೆಕ್ಕೆ ಬಂದೀತು. ಖಂಡಾಳದಿಂದಾ ಪುಣೆ ೪೦ ಮೈಲು ವುಂಟು. ಘಟ್ಟದ

ಮ್ಯಾಲೆ ಯೆರೊದರ ೧೫೫ ಮೈಲಿನ ಹೊರ್ತು ಪುಣೆದ ಲೈನು ಬರೊ ಜನವರಿವರಿಗೆ ತೈಯಾರ ಆಧೀತು. ಮತ್ತು ಪುಣೆದಿಂದಾ ಸೂಪೆ. ವ. ಟೆಂಬೊರಿ ಯಿವುಗಳ ಮ್ಯಾಲಿಂದಾ ಸೊಲ್ಲಾಪುರಕ್ಕೆ ಹೋಧೀತು. ಸೊಲ್ಲಾಪುರದಿಂದ ಪುಣೆ ೧೫೬ ಮೈಲು ಅದೆ. ಸೊಲ್ಲಾಪುರದಿಂದ ಯಿ ಲೈನು ಸುರಕ್ಷಿತದಿಂದ ಕ್ರಿಷ್ಣಾನದಿಗೆ ಹೋಧಿತು. ಅಲ್ಲೆ ಮದ್ರಾಸದಿಂದ ಹೊರಟು ಬಳ್ಳಾರಿ ಮ್ಯಾಲಿಂದ ಬಂದ ಖಬ್ಬಿಣಮಾರ್ಗದ ಲೈನಿಗೆ ಯಿ ಲೈನು ಕೂಡಿಸತಕ್ಕವರಿದ್ಧಾರೆ. ಸೊಲ್ಲಾಪುರದಿಂದ ಬಳ್ಳಾರಿಯು ೪೫೫ ಮೈಲಿನ ಪ್ಯಾಲೆ ಅದೆ. ಮುಂಬಯಿಯಿಂದ ಹೊರಟ ಯೀ ನೈರುತ್ಯದಿಕ್ಕಿನ ಲೈನು ಕ್ರಿಷ್ಣಾನದಿಯು ಪರಿಯಂತ್ರಕ್ಕೆ ೨೧೯ ಮೈಲು ವುಂಟು. ಹೀಂಗೆ ತೋರತದಲ್ಲಾ. ಘಟ್ಟದ ಹೊರ್ತು ಯಿ ಯಾವತ್ತು ಲೈನು ಮುಂದಿನ ಜನವರಿಯಿಂದಾ ೨ ವರ್ಷದವಳಗೆ ಶಿದ್ಧವಾಧೀತು. ಯೀ ಲೈನು ತೈಯಾರ ಆದಮ್ಯಾಲೆ ದಕ್ಷಣಮಾಹರಾಷ್ಟ್ರದೇಶದೊಳಗಿನ ಹತ್ತಿ ವುತ್ಪಂನವಾಗುವಂಥಾ, ಪರಗಣೆಗಳು, ಹಾಂಗು, ನಿಜಾಮನ ರಾಜ್ಯದ ಕೆಲವು ತಾಲೂಕಗಳು, ಮುಂಬಯಿಗೆ ಸಮೀಪ ಆಗಿ ಯಿಲ್ಲೆ ವುತ್ಪಂನವಾಗುವಂಥಾ ಜಿನಸ ಗಳನ್ನು ಕಳಸೊದಕ್ಕೆ ಬಾಹಳ ಚಂನಾಗಿ ಆಧೀತು. ಯಿ ನೈರುತ್ಯಕೊನೆದ ಲೈನು ಮುಂಬಯಿಯಿಂದ ಮದ್ರಾಸದ ಲೈನಿಗೆ ಜೊಡಸೊಣದರಿಂದೇನು ಥೊಡೆ ಲಾಭ ವಾಗಲಿಕ್ಕಿಲ್ಲಾ. ಯಿ ಮಾರ್ಗದಿಂದ ಪುಷ್ಕಳಜನರು ಹೋಗಿ, ಬರೋದು ಮಾಡ್ಯಾರು. ಮತ್ತು ಟಪಾಲ ಮುಂತಾದ ಯಾವತ್ತು ಯಿದೆ ಮಾರ್ಗದಿಂದಾ. . . ಮುಟ್ಯಾವು. ಯೀ ಘನಕಾರ್ಯವು ಯಾವಾಗ್ಗೆ ಯಾವತ್ತು ಸಂಪೂರ್ಣ ಮುಗದೀತೋ ಆಮ್ಯಾಲೆ ಸಂಣಸಂಣ ಅಡ್ಡ ಲೈನುಗಳಂನು ಹೊರಗೆ ಕಟ್ಟಿಸಿ ಜೋಡಿಶ್ಯಾರು. ಆಮ್ಯಾಲೆ ಯಾವತ್ತಿ. . ಹಿಂದುಸ್ಥಾನವು ಖಬ್ಬಿಣಮಾರ್ಗದಿಂದ ಪೂರ್ಣವಾಧೀತು. ಮತ್ತು ಅದರಿಂದ ಹಿಂದುಸ್ಥಾನವು ಯಿಷ್ಟು ಸುಧಾರಣುಕಿ ಆಧೀತಲ್ಲಾ ಅದರ ವರ್ಣನವಂನು ಮಾಡಕೂಡದು. ಮತ್ತು ಹಿಂದುಸ್ಥಾನದ ದಕ್ಷಣಭಾಗದಿಂದಾ ಕಂನ್ಯಾಕುಮಾರಿ ಪರಿಯಂತ್ರಕ್ಕೆ ಮತ್ತು ಅಲ್ಲಿಂದ ಲಾಹೊರದ ಪರಿಯಂತ್ರಕ್ಕೆ ಕಲಕತ್ತೆದಿಂದ ಶಿಂಧು ನದಿಯು ಪರಿಯಂತ್ರಕ್ಕೆ ಯಿಾ ಪ್ರಕಾರಾ ಖಬ್ಬಿಣಮಾರ್ಗಗಳಿಂದ ಹಿಂದುಸ್ಥಾನ ದೇಶವು ಜಾಳಗಿ ಅಂದ್ರೆ ತೊಡಕಿ ಹೋಧೀತು. ಆಗ್ಗೆ ಹಿಂದುಸ್ಥಾನವು ಯಷ್ಟು ದೊಡ್ಡಿಸ್ತನ ಭೋಗಶೀತು. ಮತ್ತು ಯುರೋಪಖಂಡದ ಬರಾಬರಿ ಆಧೀತು. ಯಿಾ ಪ್ರಕಾರ ಆದಮ್ಯಾಲೆ ನಮ್ಮ ವ್ಯವಸ್ಥಾ ವಂದು ತರ್ಹೆನೆ ಆಧೀತು. ಮತ್ತು ವಂದು ತರಹೆದಿಂದಾನೆ ಹೊತ್ತು ಗಳಿಲಿಕ್ಕೆ ಬಂಧೀತು. ಯಿಾ ಯಾವತ್ತು ಹಿಂದು ಸ್ಥಾನದೊಳು ಸದರಿ ಪ್ರಕಾರಾ ಖಬ್ಬಿಣದ ಮಾರ್ಗವು ಶಿದ್ಧವಾಗೊದಕ್ಕೆ ಯಿನ್ನು ೪೦ ವರ್ಷಾ ಹಿಡಿಧೀತು.

---

ಅಹಂಮುದನಗರದ ದಪ್ತರದಾರಿ ಕೆಲಸದ ಮ್ಯಾಲೆ ನಗರದ ಮಾಮಲೇದಾರ ರವರಿಗೆ ಪ್ರಕೃತಕ್ಕೆ ಅಗಟಿಂಗ ನೇಮಶಿದ್ಧಾರೆ. ಯಿದರಮ್ಯಾಲಿಂದಾ ಮುಂದೆ ಕಾಯಂ ನೇಮಣೂಕವು ರಿವಿನಿಯು ಕಮೀಶನರ ಸಾಹೇಬರ ಸಂಮತಿಸ ಪ್ರಕಾರ ಆಧೀತು. ಹಿಂಗೆ ತೋರತದೆ. —ಗ್ನಾನಪ್ರಕಾಶ

---

ಖಾನದೇಶದ ಹೆಡ್ಡ ಕ್ಲಾರ್ಕ ರಾಮಭಾವುದುಗಲ ಯಿವರು ನಗರದ ಹೆಡ್ಡ ಅಕೌಟಂಟ ಕೆಲಸದ ಮ್ಯಾಲೆ ಬರೊದಕ್ಕೆ ಹೊರಟಿದ್ಧಾರೆ. ಗ್ನಾ. ಪ್ರ.

---

ನಂಮ ತಿಳಿಯೊಣದರಲ್ಲಿ ಹಿಂಗೆ ಬಂದದಲ್ಲಾ ಮಿಸ್ತರ ಹೈಟ ಪುಣೆದ ಅಶಿಷ್ಟಾಂಟ ಜಡಜ ಯಿವರು ವಿಲಾಯತಿಗೆ ಅಪ್ಪಣಿ ತೆಗದುಕೊಂಡು ಬರೊ ಅಕಟೊಂಬರ ತಿಂಗಳಲ್ಲಿ ಹೋಗತಕ್ಕವರು ಅವರ ಸ್ಥಳದ ಮ್ಯಾಲೆ ಧಾರವಾಡದ ಅಶಿಷ್ಟಾಂಟ ಜಡಜ ಮಿಸ್ತರ ಪಿನ್ಹಿಸಾಹೇಬ ಯಿವರಿಗೆ ವರ್ಗ ಆಗತಕ್ಕದ್ದದೆ.

ಗ್ನಾ. ಪ್ರ.

---

## ಮುಲಕಿ ಖಾತೆದ ಪ್ರಕರ್ಣವು

ನಂಮ ಪತ್ರವೋದುವವರ ಧ್ಯಾನದಲ್ಲಿ ಯಿದ್ಧೀತೆ ಅಲ್ಲಾ. ನಾವು ಯರಡಾವರ್ತಿ ಕಲೆಕಟರ ಕಚೆರಿ ವಳಗಿನ ಕಾಮುದಾರರ ಸಂಬಳವು ಸರ್ವಕಡಿಗೆ ವಂದೆ ಸಮನಾಗಿ ಯಿರಬೇಕು. ಯಂಬೊ ವಿಷಯಕ್ಕೆ ಬರಿಯಲ್ಪಟ್ಟತ್ತು. ಆ ಪ್ರಕರ್ಣದಲ್ಲಿ ಯೀಗಾ ದಕ್ಷಣಪ್ರಾಂತದ ರಿವಿನಿಯು ಕಮಿಶನರ ಯಿವರ ಕಡಿಗೆ ಸರಕಾರದ ಹುಕುಂ ಬಂದದೆ. ಅದರೊಳು ಪ್ರತ್ಯೇಕ ಚಿಟ್ಣಿಸರಿಗೆ ಸಂಬಳಾ ೬೦ ರೂಪಾಯಿ ಹಾಂಗು ಮಾಹಲಕರೆರಿಗೆ ೪೦| ೫೦| ೬೦ ಹಿಂಗೆ ಮೂರುಪ್ರಕಾರದ ಪ್ರತಿವಸೂಲಿಯ ಆಕಾರದ ಅನ್ವಯಾ. ರಾಯಿಶಿದ್ಧಾರೆ. ಯಿದರಂತೆ ಅಶಿಷ್ಟಾಂಟ ಕಲೆಕಟರ ವ ಡಿಪುಟಿ ಕಲೆಕಟರ ಯಿವರ ಶಿರಸ್ತೆದಾರರ ಸಂಬಳಾ ವಂದೆ ಸವನಾಗಿ ಯಿರೋ ವಿಷಯಕ್ಕೆ ಹುಕುಂ ಬಂದದೆ. ಯಿಂನ ಮ್ಯಾಲೆ ಯಿ ಘಾಲಮೆಲಿಸೊಳು ದಕ್ಷಣಪ್ರಾಂತದ ಕಲೆಕಟರವರ ಆಖ್ತಿಯಾರಿ ವಳಗೆ ಕೆಲಸ ಕೊಡೊದಕ್ಕೆ ಅಧಿಕಾರ ವುಳಿಯೊದಿಲ್ಲಾ. ಕಾರಣವೆನೆಂದ್ರೆ ಸರಕಾರದವರು ಕಳಸಿದ ಠರಾವು ಅಮಲಿನೊಳಗೆ ತರೊದರ ದಶಿಂದಾ ರಿವಿನಿಯು ಕಡೆಗೆ ತಪ್ಪಿಶಿದ್ಧಾರೆ. ಅಂದಮ್ಯಾಲೆ ಸರ್ವ ಯಿಸ್ಕೆಲಗಳ ಭರತಿ ಆಗೊವರಿಗೆ ಅವರ ಕಡಿಂದಾನೆ ನೇಮಣೂಕಗಳು ಆಗುತ್ತಾ ಹೋದಾವು ಹಿಂಗೆ ತೋರತದೆ. ಗ್ನಾ. ಪ್ರ.

---

ಪುಣೆದ ಚಿಟ್ನೀಸನಿಗೆ ಸೊಲ್ಲಾಪೂರ ಜಿಲ್ಲೆದೊಳಗಿನ ಮಾಢೆದ ಮಾಮಲೆ ಕೆಲಸದಮ್ಯಾಲೆ ಹಾಂಗು ಧಾರವಾಡದ ಚಿಟ್ನೀಸನಿಗೆ ಜಾಮಖೆಡದ ಮಾಮಲೆಕ್ಕೆ ನೇಮಸೊದರ ಠರಾವು ಆಗಿದೆ ಯೆಂದು ಕೇಳುತ್ತೈವೆ. ಗ್ನಾ. ಪ್ರ.

---

ಶ್ರೀಮಂತ ರಾಜಶ್ರೀ ದಾಜಿಸಾಹೇಬ ಚಂದ್ರಚೂಡ ಯಿವರು ತಾರೀಖು ೧೪ನೆ ಸಪಟಂಬರ ದಿವಸಾ ಮರಣಹೊಂದಿದರು. ಯಿವರ ಮಾತೂಶ್ರೀಯವರ ಪೆಸರ್ಲಿ ೩೦ ಸಾವಿರ ರುಪಾಯಿದ ಜಾಹಗೀರ ನಡಿತದೆ.



ಶ್ರೀ ಮಹಾಲಕ್ಷ್ಮಿ

# ಕೊಲ್ಹಾಪುರವು ಆಗ ಈಗ

**ಕೊಲ್ಹಾಪುರವು** ಪುರಾತನಕಾಲದಿಂದ ಹಿಂದುಸ್ತಾನದಲ್ಲಿ ಪ್ರಸಿದ್ಧವಾಗಿದೆ. ಅದಕ್ಕೆ ಆಗ **ಕರವೀರ** ಎಂಬ ಹೆಸರಿದ್ದಿತು. ಅದನ್ನು ಕೃಷ್ಣನ ಪೂರ್ವಜರು ಕಟ್ಟಿಸಿದರೆಂದೂ, ಕೃಷ್ಣನ ಕಾಲಕ್ಕೆ ಅಲ್ಲಿ **ಶೃಗಾಲವಾಸುದೇವ**—(ಅರ್ಥಗರ್ಭಿತವಾದ ಹೆಸರು!) ಎಂಬ ಕ್ರೂರನಾದ ಅರಸನು ರಾಜ್ಯವಾಳುತ್ತಿದ್ದನೆಂದೂ, ಕೃಷ್ಣನು ಅವನನ್ನು ಕೊಂದು ಆತನ ಮಗನಿಗೆ ಪಟ್ಟಗಟ್ಟಿದನೆಂದೂ ಮಹಾಭಾರತದೊಳಗಿನ ವಿಷ್ಣುಪರ್ವದ ೩೧ನೆಯ ಸರ್ಗದಲ್ಲಿ ಹೇಳಿದೆ. (ಪುಟ ೨೫೦. ಪುಣೆ—ಚಿತ್ರಶಾಳಾ ಪ್ರೆಸ್ಸಿನ ಪ್ರತಿ ೧೯೩೬.) ಅಲ್ಲಿಂದ ಆತನು ಯಜ್ಞಗಿರಿ, ಕ್ರೌಂಚಪುರ, ವನವಾಸಿ, ಗೋಮಂತದುರ್ಗ ಮುಂತಾದ ಸ್ಥಳಗಳಿಗೆ ಪ್ರಯಾಣಬೆಳಸಿದನು.

ಪೂರ್ವಜೈಸ್ತವ ಗೋವಿಂದ ಪೂರ್ವೈ ಪುರಮಿದಂ ಕೃತಂ |
ಕರವೀರಪುರಂ ನಾಮ ರಾಷ್ಟ್ರಂ ಚೈವ ನಿವೇಶಿತಮ್ || ೫೦ ||
ಪುರೇಽಸ್ಮಿನ್ನೃಪತಿಃ ಕೃಷ್ಣ ವಾಸುದೇವೋ ಮಹಾಯಶಃ |
ಶೃಗಾಲ ಇತಿ ವಿಖ್ಯಾತೋ ನಿತ್ಯಂ ಪರಮಕೋಪನಃ || ೫೧ ||
ನೃಪೇಣ ತೇನ ಗೋವಿಂದ ತವ ವಂಶಭವಾ ನೃಪಾಃ |
ದಾಯಾದಾ ನಿಹತಾಃ ಸರ್ವೇ ವೀರದ್ವೇಷಾನುಶಾಯಿನಾ || ೫೨ ||

ಇತಿಹಾಸಕಾಲದಲ್ಲಿ **ಟಾಲೆಮಿಯು** ತನ್ನ ಭೂಗೋಲದಲ್ಲಿ ಕೊಲ್ಹಾಪುರವನ್ನು **ಹಿಪ್ಪೋಕ್ಯೂರಾಸ** ಎಂದೂ ಅಲ್ಲಿ ಆಳುತ್ತಿರುವ ಅರಸು **ವಿಲಿವಾಯಕುರನನ್ನು ಬಾಲೇಕ್ಯೂರಾಸ** ಎಂದೂ ಉಲ್ಲೇಖಿಸಿದ್ದಾನೆ. ವಿಲಿವಾಯಕುರನು ಆಂಧ್ರ ಮನೆತನಕ್ಕೆ ಸೇರಿದವನು. ಅವನ ಸೀಸದ ನಾಣ್ಯಗಳು ಕೊಲ್ಹಾಪುರದಲ್ಲಿ ಬ್ರಹ್ಮಪುರಿಯ ಹತ್ತಿರ ಪಂಚಗಂಗೆಯ ಮೇಲೆ ಶಿವಾಜೀಸುಂಕವನ್ನು ಕಟ್ಟುವಾಗ (೧೮೭೦) ದೊರೆತುವು. ಅವುಗಳ ಮೇಲೆ ಬ್ರಾಹ್ಮೀಲಿಪಿಯಲ್ಲಿ ಕೆಳಗಿನಂತೆ ಮುದ್ರೆಯಿದೆ:

ಮುಂಭಾಗ:—೧. "ರಾಞಾೋ ಮಾಢರಿಪುತ್ತಸ ಸಿವಲಕುರಸ"
೨. "ಮಹಾರಠಿಸ ವಾಢರಿಪುತ್ತಸ ಸಿವಲಕುರಸ"
೩. "ರಾಞಾೋ ವಾಸಿಠೀಪುತ್ತಸ ವಿಲಿವಾಯಕುರಸ."
೪. "ರಾಞಾೋ ಗೋತಮಿಪುತ್ತಸ ವಿಲಿವಾಯಕುರಸ."

ಹಿಂಭಾಗ:—ಚೈತ್ಯ; ಬೋಧಿವೃಕ್ಷ, ಸ್ವಸ್ತಿಕ, ಬಾಲಚಂದ್ರ.

ಈ ಮೊದಲಿನ **ವಾಸಿಷ್ಠೀಪುತ್ರನ** ತಾಮ್ರದ ನಾಣ್ಯಗಳೂ ಅಲ್ಲಿ ದೊರೆತಿವೆ. ಕೆಲವು ಸೀಸದ ನಾಣ್ಯಗಳು ಒಂದುಸಲ, ಎರಡುಸಲ, ಮೂರುಸಲ ಪುನರ್ಮುದ್ರಿತವಾದುವು ಕಂಡು ಹಿಡಿಯಲಾಗಿದೆ. ಇವುಗಳಲ್ಲದೆ **ಪುಳುಮಾವಿ, ಶತಕರ್ಣಿ, ಸಿರಿಯಜ್ಞ ಶತಕರ್ಣಿ** ಮುಂತಾದ ಆಂಧ್ರರಾಜರ ತಾಮ್ರದ ನಾಣ್ಯಗಳೂ ದೊರೆತಿವೆ. ಈ ನಾಣ್ಯಗಳಿಂದ ಅವರು ಬೌದ್ಧರಾಗಿದ್ದರೆಂದು ಸಿದ್ಧವಾಗುತ್ತದೆ. ಇದನ್ನು ಪುಷ್ಟಿಗೊಳಿಸಲು ಕೊಲ್ಹಾಪುರದ ವಾಯವ್ಯಕ್ಕೆ ಆರು ಮೈಲಿಗಳ ಮೇಲೆ **ಪೋವಳೆಯೆಂಬ** ಊರಹತ್ತಿರ ಗುಡ್ಡದಲ್ಲಿ ಕೊರೆದ ಬೌದ್ಧಗವಿಗಳಿವೆ. ಅವುಗಳಲ್ಲೊಂದು ಚೈತ್ಯಾಲಯವಾಗಿದೆ. ಅದರಲ್ಲಿ ಭವ್ಯವಾದ ಸ್ತೂಪವಿದೆ. ಅದರ ಮೇಲ್ಭಾಗವು ಈಗ ಒಡೆದು ಹೋಗಿದ್ದರೂ ಅದರ ಅಡಿಕಟ್ಟೆಯ ಮೇಲೆ ಬೌದ್ಧಲಾಂಛನಗಳು ನಾನಾ ತರದ ಬಣ್ಣಗಳಿಂದ ಚಿತ್ರಿತವಾದ ಅವಶೇಷಗಳು ಈಗಲೂ ಕಾಣುತ್ತವೆ. ಗವಿಗಳ ಮುಂದಿನ ವಿಸ್ತಾರವಾದ ಅಂಗಣದಲ್ಲಿ ನಿಂತು ನೋಡಿದರೆ ಅವುಗಳ ಸುತ್ತಲೂ ದಟ್ಟಾಗಿ ಬೆಳೆದ ಅರಣ್ಯ, ಅದರಲ್ಲಿ ಮಧುರವಾಗಿ ಹಾಡುವ ಹಕ್ಕಿಗಳು, ಕೆಳಗೆ ಕಲಕಲಧ್ವನಿಗೈಯುತ್ತ ಹರಿಯುವ ನಿರ್ಝರ, ಅದರಾಚೆಯಲ್ಲಿ ಬೈಲುಪ್ರದೇಶದಲ್ಲಿ ಚಿತ್ರವಿಚಿತ್ರವಾಗಿ ಬೆಳೆದ ಪೈರುಗಳು, ಅಲ್ಲಲ್ಲಿ ಕಾಣುವ ಖೇಡಖರ್ವಡಗಳು ಕಣ್ಣುಗಳಿಗೆ ಅಂದವಾದ ನೋಟವನ್ನು ಕೊಡುತ್ತವೆ. ಇದರಿಂದ ಬೌದ್ಧಭಿಕ್ಷುಗಳು ಸೃಷ್ಟಿಸೌಂದರ್ಯಾಕಾಂಕ್ಷಿಗಳಾಗಿದ್ದರೆಂದು ಊಹಿಸಬಹುದು.

ಈ ಗುಡ್ಡವನ್ನು ಜೈನರು **ದ್ರೋಣಾಗಿರಿಯೆಂದು** ಹೇಳುತ್ತಾರೆ. ಅದರೊಳಗಿನ ಒಂದು ಗವಿಯು ಜೈನಯತಿಗಳ ವಾಸಸ್ಥಾನವಾಗಿದ್ದಿತು. ಅದರ ಮುಂದಿನ ಸಣ್ಣ ಕೆರೆಯಲ್ಲಿ ದ್ರೋಣದ ಆಕಾರದ ಎಲೆಗಳುಳ್ಳ ಬಳ್ಳಿಯು ಬೆಳೆದಿರುವುದರಿಂದ ಅದಕ್ಕೆ ಈ ಹೆಸರು ಬಂದಿತಂತೆ. ಈ ಗುಡ್ಡದ ತುದಿಯ ಮೇಲೆ ಈಗ **ಜ್ಯೋತಿರ್ಲಿಂಗನ** ಭವ್ಯವಾದ ಗುಡಿಯಿದೆ. ಅದರ ರಾಜಭಕ್ತರು ಗ್ವಾಲ್ಹೇರದ ಮಹಾರಾಜರು.

ಕೊಲ್ಹಾಪುರದ ಮತ್ತು **ಶಾಹುಪುರಿಯೆಂಬ** ಉಪನಗರದ ನಡುವೆ **ಜೀವಂತೀ** ನದಿಯ ಸಣ್ಣಪ್ರವಾಹವಿದೆ. ಇದರ ಮೇಲಿನ ಲೇಡಿವಿಲ್ಸನ್ ಸುಂಕದ ಹತ್ತಿರ **ಫಲ್ಗುತೀರ್ಥವಿದೆ.** ಈ ತೀರ್ಥದ ಸಮೀಪದಲ್ಲಿ ೧೮೮೦ರಲ್ಲಿ ಭೂಸಂಶೋಧನೆಯ ಕಾಲಕ್ಕೆ ಒಂದು ಸ್ತೂಪವು ದೊರೆಯಿತು. ಅದರ ಗರ್ಭದಲ್ಲಿ ಒಂದು ಕಲ್ಲಿನ ಕರಡಿಗೆಯಿದ್ದಿತು. ಅದರೊಳಗೆ ಸ್ಫಟಿಕದ ಮತ್ತೊಂದು ಕರಡಿಗೆಯಿದ್ದಿತಂತೆ. ಆವೆರಡೂ ಕರಡಿಗೆಗಳು ಈಗ ಮುಂಬಯಿಯಲ್ಲಿರುವ **ಪ್ರಿನ್ಸ ಆಫ್ ವೇಲ್ಸ ಮ್ಯೂಜಿಯಮ್ಮಿ**ನಲ್ಲಿವೆ. ಆ ಕಲ್ಲಿನ ಕರಡಿಗೆಯ ಮುಚ್ಚಳಿಕೆಯ ಒಳಭಾಗದಲ್ಲಿ **ಬಮ್ಮಸ ದಾನಂ ಧಮ್ಮಗುತ್ತೇನ ಕಾರಿತಂ** ಎಂದು ಬ್ರಾಹ್ಮೀಲಿಪಿಯಲ್ಲಿ ಬರೆದಿದೆ. ಅಕ್ಷರಗಳು

ಬಲದಿಂದ ಎಡಕ್ಕೆ ಬರೆಯಲಾಗಿವೆ. ಲಿಪಿಪಂಡಿತರಿಗೆ ಈ ಸಂಗತಿಯು ಗಮನಾರ್ಹವಾಗಿದೆ.

ಆಂಧ್ರರ ತರುವಾಯ ಅಂದರೆ ಕ್ರಿ.ಶ. ೨೨೫ರ ಸುಮಾರಿನಿಂದ **ಬಾದಾಮಿಯ ಚಾಲುಕ್ಯರ** ವರೆಗೆ (ಸು. ೫೫೦) ಕೊಲ್ಹಾಪುರವು **ವಾಕಾಟಕ, ಕದಂಬ, ಸೇಂದ್ರಕ, ಮೌರ್ಯ** ಮುಂತಾದ ವಂಶದ ಅರಸರ ಅಧೀನವಾಗಿದ್ದಿತು. ಬಾದಾಮಿಯ ಚಾಲುಕ್ಯರ ಕಾಲದಲ್ಲಿ ಅದು ರತ್ನಾಗಿರಿ ಜಿಲ್ಲೆಯೊಳಗಿನ **ಸಂಗಮೇಶ್ವರ**ದಲ್ಲಿ ಆಳುತ್ತಿದ್ದ ಚಾಲುಕ್ಯಮನೆತನಕ್ಕೆ ಒಳಪಟ್ಟಿತ್ತು. ಇವರ ಕಾಲದಲ್ಲಿಯೇ ಕೊಲ್ಹಾಪುರದ **ಲಕ್ಷ್ಮೀದೇವಿಯ ಗರ್ಭಗುಡಿಯು** ಕಟ್ಟಲಾದಂತೆ ತೋರುತ್ತದೆ.

ಪುರಾತನಕಾಲದಲ್ಲಿ ಜೈನಸಮಾಜದಲ್ಲಿ ಒಂದು ಕ್ರಾಂತಿಯುಂಟಾಯಿತೆಂದು **ಶ್ರುತಾವತಾರ**ದಿಂದ ತಿಳಿದುಬರುತ್ತದೆ. ಜೈನಸಂಘವೊಂದು **ಕರ್ಹಾಡ**ದಲ್ಲಿ ತಂಗಿದಾಗ ಅದರೊಳಗೆ ತಮ್ಮ ತಮ್ಮ ಗುರುತಿನ ಮತ್ತು ಸಲುಗೆಯ ಜನರು ಬೇರೆ ಬೇರೆ ಗುಂಪುಗಳನ್ನು ಮಾಡಿಕೊಂಡುದು **ಏಲಾಚಾರ್ಯ**ರ ದೃಷ್ಟಿಗೆ ಬಿದ್ದಿತಂತೆ. ಇದೊಂದು ಒಡಕು ಹುಟ್ಟುವ ಲಕ್ಷಣವೆಂದು ಬಗೆದು, ಅದನ್ನು ಅಲ್ಲಿಯೇ ನಿಲ್ಲಿಸಿ ಬಿಡಬೇಕೆಂದು ಅವರು ಬೇರೆ ಬೇರೆ ಗಣಗಳನ್ನು ಮಾಡಿದರಂತೆ. ಅವುಗಳಲ್ಲಿ **ಸೇನಗಣ**ವೊಂದು. ಈ ಗಣಕ್ಕೆ ಸೇರಿದ ಭಟ್ಟಾರಕರ ಪೀಠಗಳು **ಚಿನಕಂಚಿ ಪೆನುಗೊಂಡೆ ದಿಲ್ಲಿ ಕೊಲ್ಹಾಪುರ**ಗಳಲ್ಲಿವೆಯೆಂದು ಕೊಲ್ಹಾಪುರದ **ಶ್ರೀಲಕ್ಷ್ಮೀಸೇನಭಟ್ಟಾರಕರ** ಪಟ್ಟಾವಲಿಯಿಂದ ತಿಳಿದುಬರುತ್ತದೆ. **ಕೊಲ್ಹಾಪುರದ ಲಕ್ಷ್ಮೀಸೇನ** ಭಟ್ಟಾರಕರ ಪೀಠವು ಸ್ಥಾಪಿತವಾದ ಮೇಲೆ ಅಲ್ಲಿ ಅನೇಕ ಭಟ್ಟಾರಕರು ಪ್ರಸಿದ್ಧರಾಗಿ ಹೋದರು. ಅವರಲ್ಲಿ **ಮಾಘಣಂದ್ಯಾಚಾರ್ಯ**ರು **ಶ್ರವಣಬೆಳುಗುಳದ** ಭಟ್ಟಾರಕರ ಪೀಳಿಗೆಗೆ ಸೇರಿದವರೆಂದು ಅಲ್ಲಿಯ ಒಂದು ಶಾಸನದಿಂದ ತಿಳಿದುಬರುತ್ತದೆ. ಸೇನಗಣದ ಪೀಳಿಗೆಗೆ ಸೇರಿದ **ವೀರಸೇನಾಚಾರ್ಯರು ಷಟ್ಖಂಡಾಗಮಕ್ಕೆ** ತಮ್ಮ **ಧವಲಾ** ವ್ಯಾಖ್ಯಾನವನ್ನು ಕರ್ಹಾಡದಲ್ಲಿ ಮುಗಿಸಿದಂತೆಯೂ ಆ ತರುವಾಯ ಆ ಪೂಜ್ಯ ಗ್ರಂಥವನ್ನು **ಶ್ರುತಪಂಚಮಿಯ** ದಿನ ಪೂಜಿಸಿ ಕೊಲ್ಹಾಪುರದಲ್ಲಿ ಒಂದು ಬಸ್ತಿಯನ್ನು ಕಟ್ಟಿಸಿ ಅಲ್ಲಿ ಅದನ್ನು ಇರಿಸಿದಂತೆಯೂ, ಆ ಬಸ್ತಿಗೆ ಸಿದ್ಧಾಂತ **ಬಸ್ತಿ**ಯೆಂದು ಈಗಲೂ ಹೆಸರಿದ್ದಂತೆಯೂ ಪರಂಪರಾಗತವಾದ ದಂತಕಥೆಯೊಂದಿದೆ. ಆ ಬಸ್ತಿಯು ಮಂಗಳವಾರಪೇಟೆಯಲ್ಲಿದೆ. ಅದರ ಮುಖಮಂಟಪದ ಮೇಲ್ಕಟ್ಟಿನಲ್ಲಿ ಬಹು ಅಂದವಾದ ಕೆತ್ತನೆಯ ಕೆಲಸಮಾಡಿದ ಕಮಲವು ಕೆಳಮೋರೆಯಾಗಿ ನಿಂತಿದೆ. ಅದರ ಸುತ್ತಲೂ ಇಪ್ಪತ್ತೆರಡು ತೀರ್ಥಂಕರರ ಬಿಂಬಗಳು ಪ್ರತಿಮಾಯೋಗದಲ್ಲಿವೆ. ಮಂಟಪದ ಮಧ್ಯದಲ್ಲಿ ಬಸವನ ಮೂರ್ತಿಯಿದೆ. ರಂಗಮಂಟಪದ ಚೌಕಟ್ಟಿನ ಮೇಲಿನ

ಕುಸುರಿನ ಕೆಲಸವು ಶಿಲ್ಪಿಯ ಕೌಶಲ್ಯ ಕೈಚಳಕಗಳಿಗೆ ಸಾಕ್ಷಿಯಾಗಿದೆ. ಗರ್ಭಗೃಹದಲ್ಲಿ ಧವಲಗ್ರಂಥಕ್ಕೆ ಪ್ರತಿಯಾಗಿ ಸೋಮೇಶ್ವರ ಲಿಂಗವಿದೆ. ಮುಹಮ್ಮದೀಯರ ದೌಡಿನ ಅಂಜಿಕೆಯಿಂದ ಧವಲಗ್ರಂಥವನ್ನು ಮೂಡಬಿದರಿಗೆ ಸಾಗಿಸಿದಂತೆ ತಿಳಿದುಬಂದಿದೆ.

ರಾಷ್ಟ್ರಕೂಟರ ಇಳಿಗಾಲದಲ್ಲಿ ಕೊಲ್ಹಾಪುರದ ಶಿಲಾಹಾರರು ತಲೆಯೆತ್ತಿದರು. ಇವರಿಗೆ 'ಮಹಾಲಕ್ಷ್ಮೀದೇವೀಲಬ್ಧವರಪ್ರಸಾದ' ಎಂಬ ಬಿರುದಿದೆ. **ಕೊಲ್ಹಾಪುರದ ಮಹಾಲಕ್ಷ್ಮಿಯೇ** ಈ ದೇವಿಯಾಗಿರಬೇಕು. **ಭೃಗುಋಷಿಯು** ತಾನು **ಶ್ರೀಮಹಾವಿಷ್ಣುವಿನ** ಬಾಗಿಲಲ್ಲಿ ಬಹಳ ಹೊತ್ತು ಕಾಯಬೇಕಾದ ಅಪಮಾನದಿಂದ ಸಿಟ್ಟಾಗಿ ದ್ವಾರಪಾಲಕನನ್ನು ಪರಿಗಣಿಸದೆ ಒಳಗೆ ಹೋಗಿ ಆ ಪರಮಾತ್ಮನ ಎದೆಗೊದೆಯಲು ಅಲ್ಲಿ ವಾಸವಾಗಿದ್ದ ಲಕ್ಷ್ಮೀದೇವಿಯು ಅಪಮಾನಗೊಂಡು ಪತಿಯನ್ನು ಅಗಲಿ ಕೊಲ್ಹಾಪುರವಾಸಿಯಾದಂತೆ ಪುರಾಣಾಂತರ ಕಥೆಯುಂಟು. ಅದು ಏನಿದ್ದರೂ **ಮಹಾಲಕ್ಷ್ಮಿಯ** ಗುಡಿಯು ಶಿಲಾಹಾರರ ಕಾಲದಲ್ಲಿ ಬಹಳ ಪ್ರಸಿದ್ಧವಾಯಿತು. **ಶಿಲಾಹಾರ-ಗಂಡರಾದಿತ್ಯನು** ಅನೇಕ ಗುಡಿಗಳನ್ನು ಕಟ್ಟಿಸಿದ್ದಾನೆ. ಅವುಗಳಲ್ಲಿ ಮಹಾಲಕ್ಷ್ಮಿಯ ಗುಡಿಯನ್ನು ಹೊರಭಾಗದಲ್ಲಿ ಕಲ್ಗಂಬ-ಕಲ್ಬೊಂಬೆಗಳಿಂದ ಅಂದಗೊಳಿಸಿರಬಹುದು. ಈಗ ಹೊರಗೆ ಕಾಣುತ್ತಿರುವ ಗುಡಿಯ ಭಾಗವು ಪೂರ್ಣಗುಡಿಯಲ್ಲವೆಂದು ತೋರುತ್ತದೆ. ಇದಕ್ಕಿಂತಲೂ ಕೆಳಗಣ ನೆಲೆಯೊಂದಿರಬೇಕೆಂಬುದಕ್ಕೆ ಸಾಕಷ್ಟು ಆಧಾರಗಳು ಸಿಕ್ಕುತ್ತವೆ. ಮುಖ್ಯವಾದ ಒಂದೆರಡನ್ನು ಇಲ್ಲಿ ಹೇಳಬಹುದು. ಮಹಾಲಕ್ಷ್ಮಿಯ ಗುಡಿಯ ಉತ್ತರಕ್ಕೆ ತುಸು ಅಂತರದ ಮೇಲೆ **ವಿಶ್ವೇಶ್ವರನ** ಗುಡಿಯುಂಟು. ಅದರ ಸುಕನಾಸಿಯಲ್ಲಿರುವ ನಂದೀಶ್ವರನ ಹಿಂದಿರುವ ಕಲ್ಲುಹಾಸಗೆಯೊಳಗೆ ಒಂದು ಕಿರು ಅಗಲವಾದ ಗಂಡಿಯುಂಟು. ಕರ್ಪುರ ಹೊತ್ತಿಸಿ ಅದರೊಳಗಿಂದ ಕೆಳಕ್ಕೆ ಚಲ್ಲಿದರೆ ವಿಸ್ತಾರವಾದ, ಸುಮಾರು ಆರು ಅಡಿ ಆಳವಾದ, ಮಣ್ಣು ತುಂಬಿದ ಒಂದು ಸಭಾಮಂಟಪವು ಕಾಣುತ್ತದೆ. ಮತ್ತೊಂದು ಆಧಾರವೆಂದರೆ—ಮಹಾಲಕ್ಷ್ಮಿಯ ಗುಡಿಯಿಂದ ತುಸು ಅಂತರದ ಮೇಲಿರುವ **ಕರ್ದಮೇಶ್ವರಗುಡಿಯು** ಈಗ ಸಂಪೂರ್ಣವಾಗಿ ಭೂಗತವಾಗಿದೆ. ಅದರೊಳಗೆ ಪ್ರವೇಶಪಡೆಯಬೇಕಾದರೆ ಸುಮಾರು ಆರು ಅಡಿ ಕೆಳಗೆ ಇಳಿದುಹೋಗಬೇಕಾಗುತ್ತದೆ. ಇವೆರಡು ಆಧಾರಗಳು ಮೇಲಿನ ಊಹೆಗೆ ಸಾಕಷ್ಟು ಬಲಕೊಡುತ್ತವೆ.

ಮಹಾಲಕ್ಷ್ಮೀದೇವಿಯ ಗರ್ಭಗುಡಿಯು ಅಷ್ಟಲಿಂಗತೋಭದ್ರಾಕಾರವಾಗಿದೆ. ಅದರ ಸುತ್ತಲೂ ಪ್ರದಕ್ಷಿಣೆಗಾಗಿ ದಾರಿಯಿದೆ. ಮೊದಲು ಅಲ್ಲಿ ತುಂಬಾ ಕತ್ತಲೆಯಿತ್ತು. ಮೂಲೆಮೂಲೆಗಳಲ್ಲಿ ಒರಳೆಣ್ಣೆಯ ದೀಪಗಳನ್ನು ಇಡುತ್ತಿದ್ದರು. ಆದರೂ ಕತ್ತಲೆಯು ತುಂಬಾ ಆಯಾಸವನ್ನುಂಟುಮಾಡಿ ಒಮ್ಮೊಮ್ಮೆ ಜನರು



ಬ್ರಹ್ಮಪುರಿಯ ಬಳಿಯಲ್ಲಿರುವ ಪಂಚಗಂಗಾನದಿಯ ಶಿವಾಜಿಸೇತುವೆ

ಮುಗ್ಗರಿಸುವಂತೆ ಮಾಡುತ್ತಿತ್ತು. ಈಗ ವಿದ್ಯುತ್ಪ್ರಕಾಶದಿಂದ ಸುಲಭವಾಗಿ ಪ್ರದಕ್ಷಿಣೆ ಹಾಕಬಹುದಾಗಿದೆ. ಅದರ ಮುಂದೆ ಸುಕನಾಸಿಯಲ್ಲಿ ಅಂದವಾದ ಕಲ್ಗಂಬಗಳ ಮೇಲೆ ಹಾಸುಗಲ್ಲುಗಳಿಂದ ಮಾಳಿಗೆಯಾಗಿದೆ. ಈ ಮಂಟಪದ ಉತ್ತರ ದಕ್ಷಿಣದಿಕ್ಕುಗಳಲ್ಲಿ ಎರಡು ಕೋಣೆಗಳಿವೆ. ಅವುಗಳಲ್ಲಿ ಒಂದು ದೇವಿಯ ಶಯನಾಗಾರ, ಮತ್ತೊಂದು ಭಂಡಾರ. ಇದರ ಬಾಗಿಲ ಚೌಕಟ್ಟು ಭವ್ಯವೂ ಅಂದವೂ ಆಗಿದೆ. ಅದರ ಎರಡೂ ಬದಿಗಳಲ್ಲಿ ಅಂದವಾದ ಕೆತ್ತನೆಯ ಕೆಲಸಮಾಡಿದ ದ್ವಾರಪಾಲಕರ ಮೂರ್ತಿಗಳು. ಈ ಮಧ್ಯೆ ಕಲ್ಲುಹಲಗೆಗಳಲ್ಲಿ ಕೊರೆದ ಎಂಟು ಮೂಲೆಗಳುಳ್ಳ ರಂಧ್ರಗಳ ಕಿಟಿಕಿಗಳು. ಇದರ ಮುಂಭಾಗದಲ್ಲಿ ರಂಗಮಂಟಪವಿದೆ. ಅಲ್ಲಿ ನಾಲ್ಕೂ ಮೂಲೆಗಳಲ್ಲಿ ಬಹು ಗಡುತರವಾದ ಮತ್ತು ಎತ್ತರವಾದ ನಾಲ್ಕು ಕಲ್ಗಂಬಗಳು. ಅವುಗಳ ಸಮೀಪದಲ್ಲಿ ಹಿಂದೆ ಮತ್ತು ಎಡಬಲಗಳಲ್ಲಿ ಸಹಾಯಕ ಕಲ್ಗಂಬಗಳು. ಇವುಗಳ ಮೇಲೆ ಕಲ್ಲುತೊಲೆಗಳಿಗೆ ಆಶ್ರಯವಾಗಿರುವ ತಲೆಗಲ್ಲುಗಳು. ಆ ತೊಲೆಗಳ ಮೇಲೆ ಕಟ್ಟಿದ ಅರ್ಧವರ್ತುಲಾಕಾರದ ಗೋಮಟ. ಅದರಲ್ಲಿ ಕೆಳಗೆ ನೇತುಬಿದ್ದ ಕಮಲ. ಇವೆಲ್ಲ ಶಿಲ್ಪಕಾರ್ಯಗಳಲ್ಲಿ ನೋಡಲು ಅಂದವಾದ ಯಾವ ಸಂಗತಿಗಳು ಇಲ್ಲದಿದ್ದರೂ ಭೀಮಾಕಾರ-ಭದ್ರಾಕಾರ-ಭವ್ಯಾಕಾರಗಳು ನೋಡುವವರನ್ನು ಚಕಿತಗೊಳಿಸುತ್ತವೆ. ಈ ಮಂಟಪದ ದಕ್ಷಿಣಕ್ಕೆ **ಶ್ರೀಯಂತ್ರ**ವಿದೆ. ಅದರ ಆಚೆ **ಶ್ರೀಮಹಾಕಾಲಿಯ** ಗುಡಿಯಿದೆ. ಇದರ ಸುಕನಾಸಿಯೊಳಗಣ ಕಲ್ಗಂಬಗಳ ಮೇಲೆ ಅಂದವಾದ, ಜಿನುಗಾದ, ನಯನಾಕರ್ಷಣವಾದ, ಚಕಿತಗೊಳಿಸುವ ಕೆತ್ತನೆಯ ಕೆಲಸವಿದೆ. ಇದರೊಳಗಿಂದ ಮೇಲಣ ನೆಲೆಗೆ ಹೋಗಲು ಸೋಪಾನವಿದೆ. ಆ ನೆಲೆಯಲ್ಲಿ ಚೌಕುಕಲ್ಲುಗಳಿಂದ ಕಟ್ಟಿದ ಈಶ್ವರನ ಗುಡಿಯಿದೆ. ಮಹಾಲಕ್ಷ್ಮಿಯ ಗುಡಿಯ ರಂಗಮಂಟಪದ ಎಡಭಾಗದಲ್ಲಿ **ಶ್ರೀಮಹಾಸರಸ್ವತಿಯ** ಗುಡಿಯಿದೆ. ಅಲ್ಲಿ ಹೇಳಿಕೊಳ್ಳುವಂತಹ ಯಾವ ಶಿಲ್ಪಕಾರ್ಯವೂ ಇಲ್ಲ.

ಶ್ರೀಮಹಾಲಕ್ಷ್ಮಿಮಹಾಕಾಲಿಯರ ಗುಡಿಗಳ ಹೊರಭಾಗವು ಅಂದವಾಗಿ ಮತ್ತು ನಯವಾಗಿ ಕೆತ್ತಿದ ಕಲ್ಲುಹಲಗೆಗಳಿಂದಲೂ ಗೋಡೆಗಳಲ್ಲಿ ಕಂಬಗಳ ಮುಂದೆ ಕಂಬಗಳು ಬರುವುದರಿಂದಲೂ ಅವುಗಳೆಲ್ಲ ಒಟ್ಟುಗೂಡಿ ಷೋಡಶಲಿಂಗತೋ ಭದ್ರಾಕಾರವಾಗಿವೆ. ಗೋಡೆಗಳ ಮೇಲೆ ಲೋವೆಗಳಲ್ಲಿ ಅಂದವಾಗಿ ಕೊರೆದ ಕಿರು ಅಗಲಾಗಿ ಒಂದರಮೇಲೊಂದು ಹಾದುಹೋಗುವ ಕಲ್ಲುಪಟ್ಟಿಗಳೂ ಅವುಗಳ ಮೇಲೆ ಸಾಲಾಗಿ ನಿಂತಿರುವ ಕೀಲಿಸಿದಂತಿರುವ ಮೊಳೆಗಳ ಬೊಗರೆದಲೆಗಳೂ ರಮಣೀಯವಾಗಿವೆ.

ಗರ್ಭಗೃಹದಲ್ಲಿ ದೇವಿಯ ಮೂರ್ತಿಯಿದೆ. ದೇವಿಯು ಸಿಂಹವಾಹಿನಿ. ನಿಂತಿರುವ ಮೂರ್ತಿ. ಚತುರ್ಭುಜಗಳು. ಗದೆ ಮಾದಾಳದಹಣ್ಣುಗಳು ಬಲಗೈಗಳಲ್ಲಿ; ಖೇಟಕ

ಪಾನಪಾತ್ರಗಳು ಎಡಗೈಗಳಲ್ಲಿ. ಕಿರೀಟದ ಮೇಲೆ ಲಿಂಗವಿದೆ. ಅದರ ಮೇಲೆ ಹೆಡೆಗೆದೆದ ನಾಗರಹಾವು. ದೇವಿಯು **ತ್ರಿಮೂರ್ತಿಗಳ** ಅವತಾರವೆಂದು ಭಾವಿಸಲಾಗಿದೆ: ದೇವಿಯು ಸ್ವತಃ **ವಿಷ್ಣುಸ್ವರೂಪಿ;** ಕಿರೀಟದ ಮೇಲಿನ ಲಿಂಗವು **ಮಹೇಶ್ವರ;** ಮೇಲಿನ ನಾಗವು **ಬ್ರಹ್ಮಸ್ವರೂಪಿ.**

ಶ್ರೀಮಹಾಕಾಲಿ-ಮಹಾಲಕ್ಷ್ಮಿ-ಮಹಾಸರಸ್ವತಿಯರ ಗುಡಿಗಳನ್ನು ಒಂದೇ ಕಟ್ಟಡದಲ್ಲಿ ಕಟ್ಟಿಸಿರುವುದರಿಂದ ಈ ಭವ್ಯಗುಡಿಯು ಶೈವಮತಕ್ಕೆ ಸೇರಿದುದೆಂದು ಊಹಿಸಬಹುದಾಗಿದೆ.

ಶ್ರೀಮಹಾಲಕ್ಷ್ಮೀದೇವಿಯು **ಪದ್ಮಾವತಿಯ** ಮೂರ್ತಿಯೆಂದು ಜೈನರು ಹೇಳುತ್ತಾರೆ. ಈ ಸಂಗತಿಯನ್ನು ತಿಳಿಸುವ ಶಿಲಾಶಾಸನವೊಂದನ್ನು ಧರ್ಮಮೂಢರು ನಾಶಗೊಳಿಸಿದಂತೆ ಒಂದು ದಂತಕಥೆಯು ಪ್ರಚಲಿತವಾಗಿಯೂ ಇದೆ. ಆದರೆ ಈಗ ಗುಡಿಯೂ ಮೂರ್ತಿಯೂ ಜೈನಮತದವರವೆಂದು ಹೇಳಲು ಯಾವ ಆಧಾರಗಳೂ ಅಲ್ಲಿ ದೊರೆಯುವುದಿಲ್ಲ. ಮಾತ್ರ, ಮಹಾಲಕ್ಷ್ಮಿಯ ಗುಡಿಯ ಹಿಂದೆ ಪೂರ್ವದ್ವಾರದ ಹತ್ತರ ಶೇಷಶಯನನ ಗುಡಿಯಿದೆ. ಅಲ್ಲಿ ಮೇಲೆಹೇಳಿದ ಸಿದ್ಧಾಂತಬಸ್ತಿಯಲ್ಲಿನಂತೆ ಮುಖಮಂಟಪದಲ್ಲಿ ಕಮಲವಿದೆ. ಅದರ ಅಡಿಯಲ್ಲಿ ತೀರ್ಥಂಕರರ ಬಿಂಬಗಳು ಪ್ರತಿಮಾ ಯೋಗದಲ್ಲಿವೆ. ಈ ಗುಡಿಯು **ನೇಮಿನಾಥನ ಬಸ್ತಿಯೆಂದು** ತಿಳಿದುಬಂದಿದೆ. ಅಲ್ಲಿ ಈಗ **ಶೇಷಶಯನನ** ಮೂರ್ತಿಯಿದೆ. ಹಿಂದೂ ದೇವಾಲಯಗಳನ್ನು ಜೈನರು ಮಿಥ್ಯವೆಂದು ಭಾವಿಸುತ್ತಾರೆ. ಅವುಗಳ ಸಮೀಪದಲ್ಲಿ ಅವರು ತಮ್ಮ ಬಸ್ತಿಗಳನ್ನು ಕಟ್ಟಿಸುವುದಿಲ್ಲ. ಇವೆಲ್ಲ ಸಂಗತಿಗಳನ್ನು ಸಾಧಕಬಾಧಕಪ್ರಮಾಣಗಳಿಂದ ವಿಚಾರಿಸುವುದು ವಾದಕ್ಕೆ ವಿಷಯವಾಗುವುದರಿಂದ ಅದನ್ನು ಇಲ್ಲಿ ನಿಲ್ಲಿಸಬೇಕಾಗುತ್ತದೆ.

**ಕಪಿಲತೀರ್ಥ, ಕಾಶಿ, ಮಣಿಕರ್ಣಿಕೆ, ವರುಣತೀರ್ಥ, ಫಲ್ಗುತೀರ್ಥ, ಲಕ್ಷತೀರ್ಥ, ಕೋಟಿತೀರ್ಥ,** ಮುಂತಾದ ತೀರ್ಥಗಳು ಪ್ರಸಿದ್ಧವಾಗಿದ್ದರೂ ಅನಾರೋಗ್ಯಕರವೆಂದು ಅವುಗಳಲ್ಲಿ ಕೆಲವು ಮುಚ್ಚಿಸಲಾಗಿವೆ. ಪಟ್ಟಣದ ತುಂಬೆಲ್ಲ ಕಾಣುವ ಗುಡಿಗಳಿಂದಲೂ ತೀರ್ಥಗಳಿಂದಲೂ ಕೊಲ್ಹಾಪುರವು ಪುರಾತನಕಾಲದಿಂದ **ದಕ್ಷಿಣಕಾಶಿಯೆಂದು** ಪ್ರಸಿದ್ಧವಾಗಿದೆ. ಆಸೇತುಹಿಮಾಚಲ ಯಾತ್ರಿಗರು ಕೊಲ್ಹಾಪುರದ ದರ್ಶನಮಾಡಿಕೊಳ್ಳುತ್ತಾರೆ. ಅದನ್ನು ಬಿಟ್ಟರೆ ಯಾತ್ರೆ ಪೂರ್ಣವಾಗುವುದಿಲ್ಲವಂತೆ. ಇದಕ್ಕೆ ಮಹಾಲಕ್ಷ್ಮಿಯ ಗುಡಿಯ ಪ್ರಸಿದ್ಧಿಯೇ ಕಾರಣವೆಂದು ತೋರುತ್ತದೆ. ಯಾಕೆಂದರೆ ಈ ಗುಡಿಯ ಉತ್ಕೃಷ್ಟತೆಯನ್ನು ಕಂಡು ದೊಡ್ಡಗದ್ದುವಳ್ಳಿಯೊಳಗಿನ ಲಕ್ಷ್ಮೀಗುಡಿಯನ್ನು ಅದಕ್ಕನುಸಾರವಾಗಿ ಕಟ್ಟಿಸಿದಂತೆ ಶಿಲಾಶಾಸನವು ಹೇಳುತ್ತಿದೆ. ಬಾದಾಮಿಯಲ್ಲಿಯೂ ಒಂದು ಲಕ್ಷ್ಮಿಯ ಗುಡಿಯಿದೆ.

ಅದರೊಳಗಿನ ಶಿಲಾಶಾಸನದಲ್ಲಿ ಮಹಾಲಕ್ಷ್ಮಿಯು ಕೊಲ್ಹಾಪುರವನ್ನು ಬಿಟ್ಟು ಬಂದು ಇಲ್ಲಿ ನೆಲಸಿದಳೆಂದು ಹೇಳಿದೆ.

ಮೇಲೆ ಹೇಳಿದ ತೀರ್ಥಗಳಲ್ಲದೆ **ರಂಕಾಳೆ (ರಕ್ತಾಲಯ), ಪದ್ಮಾಳೆ (ಪದ್ಮಾಲಯ)** ಎಂಬ ಎರಡು ದೊಡ್ಡ ಕೆರೆಗಳಿವೆ. ಮಹಾಲಕ್ಷ್ಮಿಯ ಗುಡಿಗೆಂದು ಕಲ್ಲುಗಳನ್ನು ಒಡೆದು ತೆಗೆದ ಗಣಿಯು ರಂಕಾಳೆಯಾಗಿದೆಯೆಂದು ಕೆಲವರು ಊಹಿಸುತ್ತಾರೆ. ಈ ಊಹೆಯು ನಿಜವಾಗಿದ್ದರೆ ಅದು ಈ ಕೆರೆಯ ಪುರಾತನತ್ವವನ್ನು ಸೂಚಿಸುತ್ತದೆ. ಇದರ ದಂಡೆಯ ಮೇಲೆ ಈಗ **ಶಾಲಿನಿ ಅರಮನೆ**ಯು ಕಟ್ಟಲಾಗಿದೆ. ರಾತ್ರಿ ಅದರ ವಿದ್ಯುದ್ದೀಪಗಳು ಕೆರೆಯ ನೀರಿನಲ್ಲಿ ಪ್ರತಿಬಿಂಬಿತವಾಗಿ ಬಹು ರಮಣೀಯ ದೃಶ್ಯವು ನೋಡಲು ದೊರೆಯುತ್ತದೆ. ಪದ್ಮಾಳೆಯ ತುಂಬ ಕಮಲದ ಬಳ್ಳಿಯು ಹಬ್ಬಿಕೊಂಡು ಬಹು ಅಂದವಾಗಿದೆ. ಆ ಬಳ್ಳಿಯಿಂದಲೇ ಅದಕ್ಕೆ ಆ ಹೆಸರು ಬಂದಿದ್ದರೂ ಬಂದಿರಬಹುದು. ಅದರ ಸುತ್ತಲೂ ಈಗ ಕುದುರೆಯ ಪಂದ್ಯಾಟದ ಬೀದಿಯು ರಚಿತವಾಗಿರುವುದು ಶಿಲ್ಪಿಗಳ ರಸಿಕತೆಯನ್ನು ಸೂಚಿಸುತ್ತದೆ. ಇವೆರಡೂ ಕೆರೆಗಳ ಸಮೀಪದಲ್ಲಿ ಒಂದೊಂದು ಚಲಚ್ಚಿತ್ರಪಟನಿರ್ಮಾಪಕಗೃಹಗಳಿವೆ. **ಶಾಲಿನಿ ಸೆನೆಟೋನ** ಮತ್ತು **ಕೊಲ್ಹಾಪುರ ಸೆನೆಟೋನ** ಎಂದು ಅವುಗಳ ಕ್ರಮವಾದ ಹೆಸರುಗಳು. **ಕಳಂಬೆಯ ಕೆರೆಯೆಂಬ** ಮೂರನೆಯ ದೊಡ್ಡ ಕೆರೆಯು ಕೊಲ್ಹಾಪುರದ ಉತ್ತರಕ್ಕೆ ನಾಲ್ಕುಮೈಲಿ ಅಂತರದ ಮೇಲಿದೆ. ಊರಿಗೆ ನೀರಿನ ಪೂರೈಕೆಯು ಈ ಕೆರೆಯಿಂದಲೇ ಆಗುತ್ತದೆ. ಇಲ್ಲಿಂದ ಎರಡು ಮೈಲಿಗಳ ಮೇಲೆ **ಕಾತ್ಯಾಯನಿಯ** ದೇವಸ್ಥಾನವಿದೆ. ಅದು ವನದೊಳಗಿರುವುದರಿಂದ ಬಹು ರಮ್ಯವೂ ಶಾಂತವೂ ಆಗಿದೆ. ಸಮೀಪದಲ್ಲಿಯೇ ಒಂದು ನಿರ್ಝರದ ನೀರು ಜಿಳಿಜಿಳಿ ಹರಿಯುತ್ತದೆ. ರಸಿಕರು ಮೇಲಿಂದ ಮೇಲೆ ಈ ಸ್ಥಳಕ್ಕೆ ವನಭೋಜನಕ್ಕೆಂದು ಹೋಗುತ್ತಾರೆ. ಕಾತ್ಯಾಯನಿಯು ಶಿಲಾಹಾರರ ಒಂದು ಶಾಖೆಯ ಪೂಜ್ಯದೇವತೆಯಾಗಿದ್ದಾಳೆ. ಯಾಕೆಂದರೆ ಕೋಪಣನಗರದ ಶಿಲಾಹಾರರಿಗೆ **ಕಾತ್ಯಾಯನೀಲಬ್ಧ ವರಪ್ರಸಾದ**ರೆಂಬ ಬಿರುದಿದೆ.

ಕೊಲ್ಹಾಪುರದೊಳಗಿನ ಪೂರ್ವದ ಅನಾರೋಗ್ಯಕರವಾದ ಗಾಳಿ-ಬೆಳಕಿಲ್ಲದ ಮನೆಗಳೂ ಇಕ್ಕಟ್ಟಾದ ಬೀದಿಗಳೂ ನವನಾಗರಿಕತೆಯ ಈ ದಿನಗಳಲ್ಲಿ ಇಲ್ಲದಂತಾಗಿ ವಿಸ್ತಾರವಾದ ರಾಜಮಾರ್ಗಗಳೂ ಗಾಳಿಬೆಳಕುಳ್ಳ ದೊಡ್ಡದೊಡ್ಡ ಮನೆಗಳೂ ಆಗಿವೆ. ಜನಸಂಖ್ಯೆಯು ದಿನೇದಿನೇ ಬೆಳೆಯುತ್ತ ಒಂದು ಲಕ್ಷದ ವರೆಗೆ ಹೋಗಿರುವುದರಿಂದ **ಲಕ್ಷ್ಮೀಪುರಿ, ಶಾಹೂಪುರಿ, ರಾಜಾರಾಮಪುರಿ, ಸಾಯಿಕ್ಸ ಅವ್ಹಿನ್ಯೂ** ಎಂಬ ಉಪನಗರಗಳಾಗಿವೆ. ಶಾಹೂಪುರಿಯು ಬೆಲ್ಲ ನೆಲಗಡಲೆಗಳ ವ್ಯಾಪಾರದ ಕೇಂದ್ರ

ವಾಗಿದೆ. ಇವುಗಳ ಹೊರ್ತು ದಂಡು, ಅದರ ಸಮೀಪದಲ್ಲಿಯೇ ಬಾವಡೆಯೆಂಬ ಉಪನಗರವೂ ಹೊಸ ಅರಮನೆಯ ಸಮೀಪದಲ್ಲಿವೆ.

ಹಳೆಯ ಅರಮನೆಯು ಊರ ನಡುವೆ ಇದೆ. ಅದರ ಗೋಡೆಗಳು ಸುಮಾರು ಆರು ಅಡಿ ಅಗಲವಾಗಿವೆ. ರಾಜಮನೆತನದ ಚಿರಂತನ ಲಗ್ನಮಂಟಪವೂ ಭವಾನೀ ಗುಡಿಯೂ ಅರಮನೆಯ ಪೂರ್ವಭಾಗದಲ್ಲಿವೆ. ಉಳಿದ ಭಾಗಗಳಲ್ಲಿ ಈಗ ಬೇರೆಬೇರೆ ಕಛೇರಿಗಳಿವೆ. ಈ ಅರಮನೆಯ ಹೆಬ್ಬಾಗಿಲು ನಾಲ್ಕು ಅಂತಸ್ತಿನದಾಗಿ ಪ್ರೇಕ್ಷಣೀಯ ವಾಗಿದೆ. ಇದಕ್ಕೆ ಹೊಂದಿಕೊಂಡು ರಾಜಾರಾಮ ಕಾಲೇಜ-ಮಹಾರಾಣೀ ಲಕ್ಷ್ಮೀ ಬಾಯಿ ಗರ್ಲ್ಸ ಹೈಸ್ಕೂಲುಗಳಿವೆ. ಕಾಲೇಜದ ಎದುರು ನಗರವಾಚನಾಲಯವಿದೆ. ಆಲ್ಬರ್ಟ ಎಡ್ವರ್ಡ ಹಾಸ್ಪಿಟಲ್ ಮತ್ತು ಟಾವುನ್‌ಹಾಲ್ ಗಾರ್ಡನ್ ಮುಂತಾದ ಸ್ಥಳಗಳು ಪ್ರೇಕ್ಷಣೀಯವಾಗಿವೆ. ಹಾಸ್ಪಿಟಲಿನ ಹತ್ತಿರ ಲಾಯವಿದೆ. ಅಲ್ಲಿ ಕೆಂಪುಡಗಲಿಯ ದಂಡಿಗೆ ಸೇರಿದ ೨೫೦ ಕುದುರೆಗಳಿರುತ್ತವೆ. ಇದರ ಸಮೀಪದಲ್ಲಿಯೇ **ಚಿತ್ರದುರ್ಗದ ಶ್ರೀಮನ್ನಿರಂಜನ ಜಗದ್ಗುರು ಜಯದೇವ ಮುರಘ ರಾಜೇಂದ್ರ** ಸ್ವಾಮಿಗಳವರ ಭವ್ಯ ಮಠವಿದೆ. ಶುಕ್ರವಾರಪೇಟೆಯೊಳಗಿಂದ ನದಿಗೆ ಹೋಗುತ್ತಿರುವ ಮಾರ್ಗದಲ್ಲಿ ಶ್ರೀ **ಲಕ್ಷ್ಮೀಸೇನ ಭಟ್ಟಾರಕಪಟ್ಟಾಚಾರ್ಯರ** ಪುರಾತನದ ಭವ್ಯ ಮಠವಿದೆ. ನದಿಯ ದಂಡೆಯ ಮೇಲೆ **ಶ್ರೀಮಜ್ಜಗದ್ಗುರು ಶ್ರೀ ಶಂಕರಾಚಾರ್ಯರ** ಮಠವಿದೆ. ಚಿತ್ರದುರ್ಗಮಠದಿಂದ ಉತ್ತರಕ್ಕೆ ಸುಮಾರು ಆರು ಫರ್ಲಾಂಗಿನ ಮೇಲೆ ಹೊಸ ಅರಮನೆಯು. ಅದು ೧೮೮೦ರಲ್ಲಿ ಕಟ್ಟಲಾದುದು. ಅದರ ಗಡಿಯಾರದ ಶಿಖರ, ದರ್ಬಾರದ ಮಂಟಪ, ಅಂದವಾಗಿ ಸಿಂಗರಿಸಿದ ಬೇರೆಬೇರೆ ಕೋಣೆಗಳು ನೋಡತಕ್ಕವುಗಳು. ಪ್ರಭುಗಳು ಅಲ್ಲಿಯೇ ವಾಸವಾಗಿರುತ್ತಾರೆ. ರಾಜದರ್ಬಾರಗಳೆಲ್ಲ ಅಲ್ಲಿಯೇ ನಡೆಯುವುವು.

ಔದ್ಯೋಗಿಕ ದೃಷ್ಟಿಯಿಂದಲೂ ಕೊಲ್ಹಾಪುರವು ಮುಂದುವರಿಯುತ್ತಿದೆ. ನೂಲುವ ಮತ್ತು ನೇಯುವ ಕಾರಖಾನೆ, ಸಕ್ಕರೆಯ ಕಾರಖಾನೆ ಈಗಾಗಲೇ ಪ್ರಸಿದ್ಧವಾಗಿವೆ. ಕೊಲ್ಹಾಪುರದಿಂದ ಪಶ್ಚಿಮಕ್ಕೆ ಸುಮಾರು ನಲವತ್ತು ಮೈಲಿಗಳ ಆಚೆ ರಾಧಾನಗರಿಯ ಹತ್ತಿರದ ನದಿಗೆ ಒಂದು ಅಣೆಕಟ್ಟಿದೆ. ಅದನ್ನು ಬೆಳೆಯಿಸಿ ವಿದ್ಯುಜ್ಜನಕ ಕಾರಖಾನೆಯೊಂದನ್ನು ಏರ್ಪಡಿಸಿ ಅದರ ಸಹಾಯದಿಂದ ಸಮೀಪ ದಲ್ಲಿರುವ ಅಲ್ಯುಮಿನಿಯಂ ಗಣಿಯೊಳಗಿಂದ ಶುದ್ಧಧಾತುವನ್ನು ತೆಗೆಯುವ ಕಾರಖಾನೆಯಾಗುವ ಕೆಲಸಕ್ಕೆ ಆರಂಭವಾಗಿದೆ.

ದಕ್ಷಿಣಮಹಾರಾಷ್ಟ್ರದಲ್ಲಿ ಕೊಲ್ಹಾಪುರವು ವಿದ್ಯೆಗಾಗಿ ಖ್ಯಾತಿಗೊಂಡಿದೆ. ಇಲ್ಲಿಯ ರಾಜಾರಾಮ ಕಾಲೇಜ, ಮಹಾರಾಣಿ ತಾರಾಬಾಯಿ ಟೀಚರ್ಸ ಕಾಲೇಜ

ಮತ್ತು ಸಾಯಿಕ್ಸ ಲಾ ಕಾಲೇಜ ಎಂಬುವು ಉಚ್ಚ ಶಿಕ್ಷಣದ ಸಂಸ್ಥೆಗಳು. ಮಾಧ್ಯಮಿಕ ಶಿಕ್ಷಣಕ್ಕೆಂದು ಗಂಡುಮಕ್ಕಳಿಗಾಗಿ ಎಂಟು ಹಾಯಸ್ಕೂಲುಗಳೂ ಹೆಣ್ಣುಮಕ್ಕಳಿಗಾಗಿ ಎರಡು ಹಾಯಸ್ಕೂಲುಗಳೂ ಇವೆ. ವಿದ್ಯಾರ್ಥಿಗಳ ಸೌಕರ್ಯಕ್ಕೆಂದು ಬೇರೆಬೇರೆ ಸಮಾಜಗಳ ವಿದ್ಯಾರ್ಥಿನಿಲಯಗಳಿವೆ. ಈ ಎಲ್ಲ ಹಾಯಸ್ಕೂಲುಗಳ ಪೋಷಣೆಗೂ ಸಾಕ್ಷರತೆಯ ಪ್ರಸಾರಕ್ಕೂ ಸಾಕಷ್ಟು ಮರಾಠೀ ಶಾಲೆಗಳಿವೆ. ಕೊಲ್ಹಾಪುರದೊಳಗೆ ಮೂರರಲ್ಲಿ ಒಂದು ಪಾಲು ಜನರು ಕನ್ನಡ ಮಾತಾಡುವವರಾಗಿದ್ದರೂ ಒಂದು ಸಹ ಕನ್ನಡ ಶಾಲೆಯಿಲ್ಲೆಂಬುದು ವಿಷಾದಜನಕವಾಗಿದೆ. ಈ ಬಗ್ಗೆ ಬೇಡಿಕೆಯೇ ಇಲ್ಲೆಂದು ತಿಳಿದುಬರುತ್ತದೆ. ಕನ್ನಡಿಗರ ಉದಾಸೀನತೆಗೆ ಏನೆನ್ನಬೇಕು ! ಇವುಗಳ ಹೊರ್ತು ಔದ್ಯೋಗಿಕ ಶಿಕ್ಷಣಕ್ಕೆಂದು ಒಂದು ಟೆಕ್ನಿಕಲ್ ಸ್ಕೂಲು ಏರ್ಪಟ್ಟಿದೆ. ಇದರಲ್ಲಿ ಸುಮಾರು ೨೦೦ ವಿದ್ಯಾರ್ಥಿಗಳು ಪ್ರತಿವರುಷ ಶಿಕ್ಷಣ ಪಡೆಯುತ್ತಾರೆ.

ಕೆ. ಜಿ. ಕುಂದಣಗಾರ



# ಕವಿಕಥೆಗಳು

ಒಂದುಸಾರಿ **ರಿಚರ್ಡ್ ಬ್ರಿನ್ಸ್ಲಿ ಷೆರಿಡನ್** (೧೭೫೧–೧೮೧೬) ತನ್ನ ಮನೆಯಲ್ಲಿ ಒಂದು ಗುಡ್ಡೆ ಹಣವನ್ನು ಮುಂದಿಟ್ಟುಕೊಂಡು ಎಣಿಸುತ್ತಿದ್ದಾಗ, ಒಬ್ಬ ದರ್ಜಿ ಬಂದು ತನ್ನ ಬಾಕಿಯನ್ನು ಗುರುತಿಸಿದ್ದ ಲೆಕ್ಕದ ಪಟ್ಟಿಯನ್ನು ಮುಂದಿಟ್ಟು ದ್ರವ್ಯವನ್ನು ಅಪೇಕ್ಷಿಸಿದ. ಷೆರಿಡನ್ "ಅಯ್ಯ, ಆಗುವುದಿಲ್ಲ. ಈ ದ್ರವ್ಯ ಪತ್ರಗಿತ್ರ ಯಾವುದೂ ಇಲ್ಲದ ಒಂದು ನಂಬಿಕೆಯ ಸಾಲವನ್ನು ತೀರಿಸಲು ಮುಡಿಪಾಗಿದೆ!" ಎಂದು ಹೇಳಿದ. ತಕ್ಷಣ ಆ ದರ್ಜಿ ತನ್ನ ಪಟ್ಟಿಯನ್ನು ಹರಿದು ಚೂರುಚೂರುಮಾಡಿ, "ನನಗೆ ಬರಬೇಕಾದದ್ದೂ ಈಗ ನಂಬಿಕೆಯ ಸಾಲವೇ ಆಯ್ತು!" ಎಂದು ನುಡಿದ. ಷೆರಿಡನ್ ಮೆಚ್ಚಿ ಅವನಿಗೆ ಕೊಡಬೇಕಾದ್ದನ್ನು ಪೂರ್ತಿ ಕೊಟ್ಟು ಕಳುಹಿಸಿದ.

ಪ್ರಾಣಿಗಳನ್ನು ಕಂಡರೆ **ರಾಬರ್ಟ್ ಬ್ರೌನಿಂಗ್** (೧೮೧೨–೧೮೮೯)ನಿಗೆ ತುಂಬ ಇಷ್ಟ. ಬಾಲಕನಾಗಿದ್ದಾಗ ಯಾವ ಬಹುಮಾನ ಬೇಕು ಎಂದರೆ ಒಂದು ಪ್ರಾಣಿ ಬೇಕು ಎನ್ನುತ್ತಿದ್ದನಂತೆ. ಕಾಹಿಲೆ ಬಿದ್ದಾಗ ಒಂದು ಮಚ್ಚೆಯ ಕಪ್ಪೆಯನ್ನು ತಂದುಕೊಟ್ಟರೆ ಸಮಾಧಾನದಿಂದ ಔಷಧಿಯನ್ನು ಕುಡಿಯುತ್ತಿದ್ದ. ಕ್ರಮೇಣ ಅವನ ಹತ್ತಿರ ಒಂದು ಚಿಕ್ಕ ಪ್ರಾಣಿಶಾಲೆಯೇ ಕೂಡಿಕೊಂಡಿತು. ಗೂಬೆ, ಕೋತಿ, ಮಡಿವಾಳನಹಕ್ಕಿ, ಮುಳ್ಳುಹಂದಿ, ರಣಹದ್ದು, ಹಾವು ಮುಂತಾದುವು ಅಲ್ಲಿ ಸೇರಿದ್ದುವು. ಬ್ರೌನಿಂಗ್ ಅವನ್ನು ಪ್ರೀತಿಸುತ್ತ ಅವುಗಳೊಡನೆ ಅತಿ ಉಲ್ಲಾಸದಿಂದ ಆಟವಾಡುತ್ತಿದ್ದ. ಸಾಯುವವರೆಗೂ ಬ್ರೌನಿಂಗನಿಗೆ ಪ್ರಾಣಿಹಿಂಸೆಯ ವಿಚಾರವನ್ನು ಕಂಡರೆ, ಕೇಳಿದರೆ, ಕಣ್ಣಿನಿಂದ ನೀರು ಸುರಿಯುತ್ತಿತ್ತು!

ಒಬ್ಬ ವಿದ್ಯಾರ್ಥಿ **ಜಾರ್ಜ್ ಬರ್ನಾರ್ಡ್ ಷಾ** (ಹುಟ್ಟಿದ್ದು: ೧೮೫೬)ವಿನ ಕೈಬರೆಹದ ರುಜುವನ್ನು ಸಂಪಾದಿಸುತ್ತೇನೆಂದು ಸಹಾಧ್ಯಾಯಿಗಳೊಡನೆ ಪಂದ್ಯ ಕಟ್ಟಿದನಂತೆ. ಏಳೆಂಟುಬಗೆಯ ಗಂಭೀರ ಪ್ರಯತ್ನಗಳನ್ನು ಹೂಡಿನೋಡಿದ. ಏನೂ ಪ್ರಯೋಜನವಾಗಲಿಲ್ಲ. ಕಡೆಗೆ ಷಾಗೆ ಒಂದು ಕಾಗದ ಬರೆದ: "ನಮ್ಮ ವಿದ್ಯಾರ್ಥಿನಿಲಯದಲ್ಲಿ ಒಂದು ಮುದ್ದುಹಂದಿಯಿದೆ. ಅದಕ್ಕೆ ಬರ್ನಾರ್ಡ್ ಷಾ ಎಂಬ ಹೆಸರನ್ನಿಡಬೇಕೆಂದು ನಿಶ್ಚಯಿಸಿದ್ದೇವೆ. ದಯವಿಟ್ಟು ನಮಗೆ ಅನುಮತಿಕೊಡಬೇಕೆಂದು ಪ್ರಾರ್ಥನೆ." ಹಾಗೆ ಮಾಡಕೂಡದೆಂದು ಷಾನಿಂದ ಆಗ್ರಹದ ಜವಾಬು ಮರುಟಪ್ಪಾಲಿನಲ್ಲಿ ಬಂತು. ಹುಡುಗ ಬಯಸುತ್ತಿದ್ದ ರುಜು ಅವನಿಗೆ ಲಭಿಸಿತು. ಪಂಥದಲ್ಲಿ ಗೆದ್ದ!

ಎಸ್. ವಿ. ರಂಗಣ್ಣ.

# ಆಶ್ಚರ್ಯಚೂಡಾಮಣಿ

(ನಾಟಕ ಕಥೆ)

ಮರಗಿಡಬಳ್ಳಿಗಳಿಂದ ನಿಬಿಡವಾದ ಒಂದು ದೊಡ್ಡ ಅಡವಿ. ಅಲ್ಲಿ ತರತರವಾದ ಕ್ರೂರಮೃಗಗಳ ಗರ್ಜನೆ ಕೇಳಿಬರುತ್ತಿತ್ತು. ತಂದೆಯ ಸತ್ಯವನ್ನು ಉಳಿಸುವುದರ ಸಲುವಾಗಿ ರಾಮಚಂದ್ರನು ಸೀತಾಲಕ್ಷ್ಮಣರೊಡನೆ ಆ ಕಾಡಿನಲ್ಲಿ ಇರಲು ಬಂದಿದ್ದನು. ಅಣ್ಣಅತ್ತಿಗೆಯರಂತೆ ಆರಣ್ಯಕವೇಷವನ್ನು ಧರಿಸಿದ್ದ ಲಕ್ಷ್ಮಣನು ವಾಸಕ್ಕೆ ಯೋಗ್ಯವಾದ ಒಂದು ಆಶ್ರಮವನ್ನು ರಚಿಸುವುದಕ್ಕಾಗಿ ಅಲ್ಲಿ ಸಂಚರಿಸುತ್ತಿದ್ದ ಮೃಗಗಳನ್ನು ತನ್ನ ಧನುಷ್ಟಂಕಾರಮಾತ್ರದಿಂದಲೇ ಚದರಿಸುತ್ತಿದ್ದನು. ಬಳಿಕ ಆ ಸ್ಥಳದಲ್ಲಿ ಹತ್ತಿರದ ಮರಗಳಿಂದ ತಳಿರುತೊಂಗಲುಗಳನ್ನಾಯ್ದು ತಂದು ಎಲೆವನೆಯೊಂದನ್ನು ನಿರ್ಮಿಸಿ, ಗೋದಾವರೀ ತೀರದಲ್ಲಿ ಸುಳಿವ ತಂಗಾಳಿಯಿಂದ ಮಾರ್ಗಾಯಾಸವನ್ನು ಕಳೆಯಲೆಂದು ಹೋಗಿದ್ದ ರಾಮ ಸೀತೆಯರಿಗೆ ತಾನು ಅಣಿಮಾಡಿದುದನ್ನು ತಿಳಿಸಲು ಹೋದನು.

ಲಕ್ಷ್ಮಣನು ಹಾಗೆ ಅಣ್ಣನಬಳಿಗೆ ಹೋಗುತ್ತಿರುವಾಗ ಹಠಾತ್ತಾಗಿ ಒಂದು ದೃಶ್ಯವನ್ನು ಕಂಡನು. ಅಗಲವಾದ ಕಣ್ಣು, ಬಾಗಿದ ಹುಬ್ಬು, ತುಂಬಿದ ಎದೆ ಇವುಗಳಿಂದ ಶೋಭಿಸುವ ಒಂದು ಸ್ತ್ರೀಮೂರ್ತಿಯು ಇದಿರಿಗೆ ನಿಂತಿದ್ದಿತು. ಆಗತಾನೆ ಹೀಗೆ ಲಲಿತಸುಕುಮಾರ ವೇಷವನ್ನು ಧರಿಸಿ ಬಂದ ಶೂರ್ಪಣಖೆ ಲಕ್ಷ್ಮಣನ ತಿರಸ್ಕಾರದೃಷ್ಟಿಯನ್ನು ಲೆಕ್ಕಿಸದೆ ನಸುನಾಚಿಕೆಯನ್ನು ತೋರಿ, ಮುಗ್ಧೆಯಂತೆ ನಟಿಸಿ, ದುಂಬಿಗಳಿಂದಾವೃತವಾದ ಹೂಮುಡಿಯನ್ನು ಬಾಗಿಸಿ—'ನಾನು ಶರಣಾಗತಳಾಗಿ ಬಂದಿರುವೆ, ನನ್ನನ್ನು ಉಪೇಕ್ಷಿಸಬೇಡಿ; ಶ್ರೀರಾಮರು ನನ್ನನ್ನು ನಿಮ್ಮ ಸಹಚರಿಯಾಗಿಟ್ಟುಕೊಳ್ಳಬೇಕೆಂದು ಅಪ್ಪಣೆ ಕೊಟ್ಟಿರುವರು' ಎಂದು ಬಿನ್ನವಿಸಿದಳು. ಅದನ್ನು ಕೇಳಿದ ಲಕ್ಷ್ಮಣನು 'ನಾರುಡೆಯುಟ್ಟ ನಮಗೂ ಸಿರಿಯುಡುಗೆಯ ಮನ್ಮಥನಿಗೂ ಏನು ಸಂಬಂಧ?' ಎಂದು ಕೇಳಿದನು. 'ರಾಮನೊಡನೆ ಸೀತೆಯಿಲ್ಲವೆ? ಹಾಗೆಯೇ ನಿಮ್ಮೊಡನೆ ನಾನೇಕಿರಬಾರದು?' ಎಂದು ಶೂರ್ಪಣಖೆ ಮರುನುಡಿದಳು. ಇದರಿಂದ ಏನುಮಾಡಲೂ ತೋರದೆ ಲಕ್ಷ್ಮಣನು ಅವಳಿಂದ ತಪ್ಪಿಸಿಕೊಳ್ಳುವ ಹಂಚಿಕೆಯಿಂದ ಅವಳನ್ನು ಅಲ್ಲೇ ಕಾದಿರಹೇಳಿ ರಾಮನ ಸಮೀಪಕ್ಕೆ ಹೋದನು.

ದಾರಿಯಲ್ಲಿ ಹೋಗುವಾಗ, ಇಂತಹ ರತಿದೇವಿಯಂತಹ ಹೆಣ್ಣು ಈ ಗೊಂಡಾರಣ್ಯದಲ್ಲಿ ಹೇಗೆ ಬಂದಳು? ಎಂದು ಲೆಕ್ಕ ಹಾಕುತ್ತಾ ಲಕ್ಷ್ಮಣನು ಸಾಗಿದ್ದನು. ಅತ್ತ

ರಾಮಸೀತೆಯರು ನದಿಯ ತೀರದಲ್ಲಿ ಎಡಬಲದ ಬೆಟ್ಟಗುಡ್ಡ ತರುಲತೆ ನೀರುನೆಳಲುಗಳ ಸೊಬಗುಬೆಡಗುಗಳನ್ನು ಕೊಂಡಾಡುತ್ತಾ ತಿರುಗುತ್ತಿದ್ದರು. ಲಕ್ಷ್ಮಣನು ಅಲ್ಲಿಗೆ ಬಂದು ಅಣ್ಣನನ್ನು ಕಂಡು ಅಂತಹ ದುರ್ಗಮವಾದ ಕಾಡಿನಲ್ಲಿ ಸಂಚರಿಸಿ ಬಳಲು ವಂತಾದುದು ಆ ಕೈಕೆಯ ದುರ್ನಯದಿಂದಲೇ ಎಂದು ಪರಿತಪಿಸಿ ನುಡಿದನು. ಅದಕ್ಕೆ ಪ್ರಶಾಂತಮನಸ್ಕನಾದ ರಾಮಭದ್ರನು ಮುಗುಳುನಗೆ ನಕ್ಕು ಮುನಿಸೇವೆ, ಕ್ಷೇತ್ರ ವಾಸ, ತೀರ್ಥಸ್ನಾನ ಮೊದಲಾದ ದುರ್ಲಭಪುಣ್ಯಕರ್ಮಗಳನ್ನು ತಾವು ಮಾಡು ವಂತಾದುದು ಆ ಮಹಾಭಾಗೆಯಾದ ಕೈಕೆಯ ದಯದಿಂದ ಎಂದೂ ಮಾತೃದೂಷಣ ಬೇಡವೆಂದೂ ಹೇಳಿ ತಮ್ಮನನ್ನು ಸಮಾಧಾನಪಡಿಸಿದನು. ಅನಂತರ ಪರ್ಣಕುಟಿ ಯನ್ನು ಹೊಕ್ಕು ಸೀತೆಯೊಡನೆ ವಿಶ್ರಮಿಸಿದನು.

ಇತ್ತ ಕಪಟವೇಷಧಾರಿಣಿಯಾದ ಶೂರ್ಪಣಖೆಯು ಕಾದು ಕಾದು ಬೇಸತ್ತು ರಾಮವಚನದಂತೆ ತಾನು ಲಕ್ಷ್ಮಣನೆಡೆಗೆ ಬಂದುದು ತಪ್ಪಾಯ್ತೆಂದು ತನ್ನೊಳಗೆ ತಾನೇ ಕುದಿಯುತ್ತಾ ಆದದ್ದಾಗಲೆಂದು ನೇರವಾಗಿ ರಾಮನ ಬಳಿಗೇ ನಡೆದಳು. ಅವಳು ಅಲ್ಲಿಗೆ ಹೋದಾಗ ರಾಮನು ತನ್ನ ಸಖಿಗೆ—'ನರಭಕ್ಷಕರಾದ ರಕ್ಕಸರಿಂದ ಈ ಪಂಚವಟಿಯು ತುಂಬಿರುವುದೆಂದು ಕೇಳಿದ್ದೆ. ಆದರೆ ಈಗ ನೋಡಿದರೆ ಇಲ್ಲಿ ಅಂತಹ ಭಯಂಕರವಾದುದು ಯಾವುದೂ ಇಲ್ಲ, ಎಲ್ಲೆಲ್ಲೂ ಈ ಕಾಡು ಸುಂದರ ಉದ್ಯಾನದಂತೆ ಕಂಗೊಳಿಸುವುದು' ಎಂದು ಹರುಷದಿಂದ ಹೇಳುತ್ತಿದ್ದನು. ಶೂರ್ಪ ಣಖೆಯು ರಾಮನಬಳಿ ಲಕ್ಷ್ಮಣನ ತಿರಸ್ಕಾರವನ್ನು ಒಂದಕ್ಕೆ ನೂರು ಮಾಡಿ ಬಣ್ಣಿಸಿ, 'ನೀನೇ ನನ್ನನ್ನು ಸ್ವೀಕರಿಸು' ಎಂದು ಹಟಹಿಡಿದು ಅಳುಮೋರೆ ಮಾಡಿ ನಿಂತಳು; ಸ್ವೀಕರಿಸದಿದ್ದರೆ ಆತ್ಮಹತ್ಯೆಮಾಡಿಕೊಳ್ಳುವುದಾಗಿಯೂ ಬೆದರಿಸಿದಳು. ಸೀತೆಗೆ ಅವಳನ್ನು ನೋಡಿ ಕನಿಕರಹುಟ್ಟಿ ಸ್ವೀಕರಿಸೆಂದು ಪತಿಯನ್ನು ಪ್ರಾರ್ಥಿಸಿದಳು. ರಾಮನು ಉಪಾಯವಾಗಿ ಮಾತನ್ನು ಬದಲಾಯಿಸಿ 'ನಿರಾಭರಣಳಾದರೂ ನೀನು ಹೇಗೆ ಸುಂದರಿಯಾಗಿಯೇ ತೋರುವೆ!' ಎಂದು ಸೀತೆಯನ್ನು ನೋಡಿ ಸಂತೋಷ ಸೂಚಿಸಿದನು. ಸೀತೆಯು 'ಪತಿದರ್ಶನದಿಂದ ನಿನಗೆ ಎಲ್ಲ ಅಲಂಕಾರವೂ ಒದಗಲಿ, ಎಂದು ಅನಸೂಯೆಯಿತ್ತ ವರವನ್ನು ಆರ್ಯಪುತ್ರನು ಬಹುಶಃ ಮರೆತಿರಬಹುದು' ಎಂದು ಮನಸ್ಸಿನಲ್ಲೇ ಎಂದುಕೊಂಡಳು.

ಆ ಸಮಯದಲ್ಲಿ, 'ಎಲಾ ಪಿಶಿತಾಶನೇ ನಿಲ್ಲು!' ಎಂಬ ಲಕ್ಷ್ಮಣನ ಗುಡುಗು ರಾಮಸೀತೆಯರಿಗೆ ಕೇಳಿಸಿತು. ಎಲ್ಲಿಂದು ಚಕಿತರಾಗಿ ಅವರು ನೋಡುವಲ್ಲಿ ಎದುರಿಗೇ ಕೆಂಗೂದಲಿನ ಕರಿಯ ಮೈಯ ಭಯಂಕರವಾದ ಒಂದು ಬೃಹದ್ರೂಪವು ನಿಂತಿದ್ದಿತು. ಸೀತೆ ಬೆದರಿ ಕೂಗಿಕೊಂಡಳು. ಥಟ್ಟನೆ ರಕ್ಕಸಿಯಾದ ಶೂರ್ಪಣಖೆ ಲಕ್ಷ್ಮಣನನ್ನು

ಎತ್ತಿಕೊಂಡು ಆಗಸಕ್ಕೆ ಹಾರಿದಳು. ಆದರೆ, ತಮ್ಮನ ಗತಿಯೇನಾಗುವುದೋ ಎಂದು ಹೆದರುತ್ತಿದ್ದ ರಾಮನೆದುರು ರಕ್ಕಸಿಯು ಕೆನ್ನೆತ್ತರು ಧಾರೆಧಾರೆಯಾಗಿ ಬೀಳತೊಡಗಿತು. ಕೆಲಹೊತ್ತಿನಲ್ಲಿ ಕರಿಮೈಯ ದುರುದುಂಬಿಯ ಕಿವಿ ಮೂಗುಗಳನ್ನು ಕತ್ತರಿಸಿ ಅವಮಾನಗೊಳಿಸಿ ಲಕ್ಷ್ಮಣನು ಕೆಳಗೆ ಬಂದು ಅಣ್ಣನ ಸಂತಸಕ್ಕೀಡಾದನು. ರಕ್ಕಸಿಯಾದರೋ 'ಅಯ್ಯೋ ಅಣ್ಣಾ, ರಾವಣಾ, ಕುಂಭಕರ್ಣಾ, ವಿಭೀಷಣಾ! ಈ ತಪಸ್ವಿಗಳ ಅವಿನಯದಿಂದ ನನ್ನನ್ನು ಕಾಪಾಡಿರಿ' ಎಂದು ಅರಚುತ್ತಾ ರಾಮ ಲಕ್ಷ್ಮಣರಿದ್ದೆಡೆ ಬಂದು 'ಎಲಾ ಮನುಷ್ಯಜಂತುಗಳೇ, ನಿಮ್ಮ ಅವಿನಯವನ್ನು ನೆನಪಿನಲ್ಲಿಡಿ; ಇದಕ್ಕೆ ತಕ್ಕ ಬಹುಮಾನವನ್ನು ನನ್ನ ಅಣ್ಣಂದಿರಿಂದ ಕೊಡಿಸುವೆನು' ಎಂದು ಮಾಯವಾದಳು. ಆ ಬಳಿಕ ರಾಮನು—'ಇರಲಿ, ಇದೇ ಮೊದಲಾಗಿ ಇವಳ ದೆಸೆಯಿಂದ ಇಡೀ ರಾಕ್ಷಸಕುಲವೇ ನಾಶವಾದೀತು! ನಡೆ, ಲಕ್ಷ್ಮಣ, ಸಂಜೆಯ ವಿಧಿಯನ್ನು ಮುಗಿಸೋಣ' ಎಂದು ಹೇಳಿ ಹಾಗೆಮಾಡಲು ಹೊರಟು ಹೋದನು.

ಹೀಗಿರಲು ಕೆಲದಿನಗಳ ಬಳಿಕ ರಾಮಚಂದ್ರನು ಜನಸ್ಥಾನವಾಸಿಗಳಾದ ಋಷಿಗಳನ್ನು ಖರದೂಷಣಾದಿಗಳ ಸಂಹಾರದಿಂದ ಸಂತೋಷಗೊಳಿಸಿದನು. ಅವರು ಅತ್ಯಧಿಕ ಪ್ರೀತಿಯಿಂದ ರಾಕ್ಷಸಮಾಯಾಭೇದಕಗಳಾದ ಒಂದು ಉಂಗುರ, ಕವಚ ಮತ್ತು ಚೂಡಾಮಣಿ ಇವುಗಳನ್ನು ರಾಮ ಲಕ್ಷ್ಮಣ ಸೀತೆಯರಿಗೆ ಬಹುಮಾನವಾಗಿ ಕೊಟ್ಟರು. ಒಂದುದಿನ ಅಕಸ್ಮಾತ್ತಾಗಿ ಆಶ್ರಮದೆದುರು ಝಗ್ಗನೆ ಮಿಂಚಿದಂತಾಗಿ ಮುಗಿಲಿನಂತೆ ಓಡುವ ಒಂದು ಸುವರ್ಣಮೃಗವು ಅವರ ಕಣ್ಣೆದುರಿನಲ್ಲಿ ಬಿದ್ದಿತು! ಸೀತೆಯ ಬಯಕೆಯ ಮೇರೆಗೆ ರಾಮನು ಅದನ್ನು ಹಿಡಿತರಲು ಧನುರ್ಧಾರಿಯಾಗಿ ನಡೆದನು.

ಆ ರೀತಿಯಲ್ಲಿ ಸ್ವರ್ಣಮೃಗವಾಗಿ ರಾಮನನ್ನು ಮೋಸಗೊಳಿಸಲು ಮಾರೀಚನನ್ನು ಗೊತ್ತುಮಾಡಿ ಲಂಕೇಶ್ವರನು ತಂಗಿಯೊಡನೆ ವಿಮಾನಾರೂಢನಾಗಿ ರಾಮ ಕುಟೀರದ ಸನಿಹದ ಅಂತರಾಳದಲ್ಲಿ ನಿಂತನು. ಕುಟಿಲೆಯಾದ ಶೂರ್ಪಣಖೆಯು ಸೀತಾ ಲಕ್ಷ್ಮಣರನ್ನು ಅಣ್ಣನಿಗೆ ತೋರಿಸಿದಳು. ಸೀತೆಯ ಸೌಂದರ್ಯಕ್ಕೆ ಮನಸೋತು ಎಚ್ಚರಗೊಂಡ ಬಳಿಕ ಲಕ್ಷ್ಮಣನನ್ನು ನೋಡಿ 'ಇವನೇ, ಆ ಮುದುಕಿಯಾದ ತಾಟಕೆಯನ್ನು ಕೊಂದ ರಾಮನ ತಮ್ಮನೇ?' ಎಂದು ಹಾಸ್ಯಮಾಡಿದನು.

ಅತ್ತ ರಾಮನ ತೀಕ್ಷ್ಣವಾದ ಶರಪಾತಕ್ಕೊಳಗಾದ ಮಾರೀಚನು ರಾಮನ ದನಿಯಿಂದ 'ಹಾ ಲಕ್ಷ್ಮಣ' ಎಂದು ಕೂಗಿ ಸತ್ತನು. ಚಂಚಲೆಯಾದ ಸೀತೆಯು ಲಕ್ಷ್ಮಣನನ್ನು ಬೈದು ರಾಮನ ಸಹಾಯಕ್ಕೆಂದು ಅಟ್ಟಿದಳು. ಅವನಾದರೋ

ರಾಮನಿಗೆ ಸಹಾಯದ ಆವಶ್ಯಕತೆಯಿಲ್ಲವೆಂದರಿತಿದ್ದರೂ ಅತ್ತಿಗೆಯ ಬೈಗುಳವನ್ನು ಸಹಿಸಲಾರದೇ ಆಶ್ರಮವನ್ನು ಬಿಟ್ಟು ಹೊರಟನು.

ಸಮಯವನ್ನು ಕಾಯುತ್ತಿದ್ದ ರಾಮರೂಪಧರನಾದ ರಾವಣನು ಬರಲು ಸೀತೆಯು ಅವನನ್ನು ಸತ್ಕರಿಸಿದಳು. ತಂತ್ರಗಾರನಾದ ರಕ್ಕಸರೊಡೆಯನು, ಶತ್ರುಗಳು ಭರತನಾಳುತ್ತಿರುವ ಕೋಸಲವನ್ನು ಮುತ್ತಿರುವರೆಂದು ತಮ್ಮ ದಿವ್ಯದೃಷ್ಟಿಯಿಂದ ತಿಳಿದು ನಮ್ಮನ್ನಲ್ಲಿಗೆ ಬೇಗ ಕಳುಹಲು ಋಷಿಗಳು ಒಂದು ದಿವ್ಯರಥವನ್ನು ಕೊಟ್ಟಿರುವರೆಂದು ಸೀತೆಗೆ ಹೇಳಿ ಲಕ್ಷ್ಮಣರೂಪಿಯಾದ ಸೂತನೊಡನೆ ಸೀತೆಯನ್ನು ರಥದ ಮೇಲೆ ಕುಳ್ಳಿರಿಸಿ ಆಕಾಶಕ್ಕೆ ಹಾರಿದನು!

ಆಕಡೆ ರಾಮನ ಬರವನ್ನು ನಿರೀಕ್ಷಿಸಲು ಶೂರ್ಪಣಖಿಯು ಸೀತೆಯ ಅವತಾರ ತಾಳಿ ನಡೆದಿದ್ದಳು. ಅವಳು ರಾಮನನ್ನು ಸಂಧಿಸಿದ ಕೆಲವು ನಿಮಿಷಗಳಲ್ಲಿ ಆಕಾಶದಿಂದ ಸೀತೆಯ ಸ್ವರವು ಕೇಳಬಂದಿತು! ಅದರಿಂದ ಚಮಕಿತನಾದ ರಾಮನನ್ನು ಮಾಯಾಸೀತೆಯು—'ಆರ್ಯಪುತ್ರ, ಅಲ್ಲಿ ನೋಡು, ನಿನ್ನಂತೆ ತೋರುವ ಗಂಡನೊಬ್ಬನೂ ನನ್ನನ್ನು ಹೋಲುವ ಹೆಂಗಸೊಬ್ಬಳೂ ಆಗಸದಲ್ಲಿ ಹೋಗುತ್ತಿರುವರು!' ಎಂದನು.

ರಾಮ—'ನಿಜವಾಗಿಯೂ ಸೀತೆಯು ಪರಪುರುಷನ ದೃಷ್ಟಿಗೆ ಬೀಳುವವಳಲ್ಲ, ನಿಶ್ಚಯವಾಗಿಯೂ ವಂಚನಾಸೀತೆಯು ಅಲ್ಲ ಮಾಯಾರಾಮನೊಂದಿಗಿರುವಳು; ಹೇಗೆ ನಾನು ಅವನಲ್ಲವೋ ಹಾಗೆ ಅವಳು ನೀನಲ್ಲ' ಎಂದನು.

ಅತ್ತ ಆಕಾಶದಲ್ಲಿ ಸೀತೆ ಬಗ್ಗಿ ನೋಡಿ—'ಆಹಾ, ಇದೇನು? ಕೆಳಗೆ ಒಬ್ಬನು ಆರ್ಯಪುತ್ರನಂತಹ ಮನುಷ್ಯನು ಕಾಣುವನಲ್ಲಾ!' ಎಂದಳು.

ರಾವಣ—'ಮುಗ್ಧೇ, ಋಷಿಗಳನ್ನು ಮೋಸಗೊಳಿಸಲು ದಾನವರು ನನ್ನ ರೂಪದಿಂದ ತಿರುಗುತ್ತಾರೆ; ಅದೂ ಅಲ್ಲದೆ ಅಲ್ಲಿ ನೋಡು, ನಿನ್ನಂತೆಯೇ ತೋರುವ ರಮಣಿಯೊಬ್ಬಳು ನನ್ನಂತಹವನೊಡನೆ ಹೋಗುತ್ತಿದ್ದಾಳೆ! ಎಲ್ಲಾ ರಾಕ್ಷಸ ಮಾಯೆ!' ಎಂದು ಸಂತೈಸಿದನು.

ಸೀತೆಯು 'ನಿಜ, ನಿಜ, ಆರ್ಯಪುತ್ರನಿಗೆ ಬೇರೆಯ ಹೆಣ್ಣಿನ ನಂಟು ಹೇಗಾದೀತು? ಹೇಗೆ ನಾನು ಅವಳಲ್ಲವೋ ಹಾಗೇ ಅವನೂ ಆರ್ಯಪುತ್ರನಲ್ಲ' ಎಂದು ಸಮಾಧಾನ ಮಾಡಿಕೊಂಡಳು. ಅನಂತರ ಪುಷ್ಪಕವು ವಾಯುವೇಗದಿಂದ ಲಂಕೆಗೆ ಹಾರಿತು.

ಕೆಳಗೆ ರಾಮನ ಜೊತೆಯಲ್ಲಿದ್ದ ಶೂರ್ಪಣಖೆಗೆ ಅವನಿಂದ ತಪ್ಪಿಸಿಕೊಂಡು ಹೋಗಲು ಸಂಚುತಿಳಿಯದೆ ಪೇಚಾಡತೊಡಗಿದಳು. ಅಷ್ಟರಲ್ಲಿ ಅಣ್ಣನನ್ನೆದುರಾದ ಲಕ್ಷ್ಮಣನು ಅವನು ಮಾಯಾರಾಮನೆಂದು ಶಂಕಿಸಿ ಅವನನ್ನು ಹೊಡೆಯಲಿಕ್ಕೆ ಬಂದನು. ಆಗ ರಾಮನು ತನ್ನ ಉಂಗುರವನ್ನು ತೋರಿಸಿ ತಮ್ಮನನ್ನು ವಿಶ್ವಸ್ತನನ್ನಾಗಿ

ಮಾಡಿ ತನ್ನ ರೂಪವನ್ನು ತಾಳಿ ಸತ್ತಿದ್ದ ಮಾರೀಚನನ್ನು ತುಳಿದು ಮೊದಲಿನ ರೂಪ ಬರುವಂತೆ ಮಾಡಿದನು. ಅದಾದ ಕೂಡಲೇ ತನ್ನ ಮಾವನಾದ ಮಾರೀಚನ ಮರಣದಿಂದ ಕಣ್ಣೀರಿಡುತ್ತಿದ್ದ ಶೂರ್ಪಣಖೆಯ ಕಣ್ಣುಗಳನ್ನು ರಾಮನು ಮುಟ್ಟಿದೊಡನೆಯೇ ಅವಳಿಗೂ ನಿಜರೂಪ ಬಂದುಬಿಟ್ಟಿತು! ಕೂಡಲೇ ಲಕ್ಷ್ಮಣನು ಕೆರಳಿ ಕತ್ತಿಯನ್ನೆತ್ತಿದನು; ರಕ್ಕಸಿಯು ರಾಮನಿಗೆ ಮರೆಹೊಕ್ಕಳು. ಆಗ ರಾಮನು ತಮ್ಮನನ್ನು ತಡೆದು ಅವಳನ್ನು ಕುರಿತು—'ಶೂರ್ಪಣಖೇ, ಸತ್ಯವನ್ನು ಹೇಳು, ನಿನಗೆ ಅಭಯ ಕೊಟ್ಟಿದ್ದೇನೆ' ಎನ್ನಲು, ಅವಳು ತಾವು ಮಾಡಿದ ಮಾಯಾಜಾಲವನ್ನು ವಿವರಿಸಿದಳು. ಅವಳ ಮುಖಾಂತರ ರಾವಣನಿಗೆ ಯುದ್ಧಸಂದೇಶವನ್ನು ಕಳುಹಿ ರಾಮಲಕ್ಷ್ಮಣರು ಮುಂದಣ ಕಾರ್ಯವನ್ನು ಕುರಿತು ಆಲೋಚಿಸತೊಡಗಿದರು.

ಅತ್ತ ಆಕಾಶಮಾರ್ಗದಲ್ಲಿ ದಶಗ್ರೀವನು ಕಾಮಪರವಶನಾಗಿ ಸೀತೆಯನ್ನು ಮುಟ್ಟಿದ ಕೂಡಲೇ ಸ್ವಸ್ವರೂಪವು ಬಂದೇಬಿಟ್ಟಿತು; ಸೂತನೂ ತನ್ನ ಪೂರ್ವದ ವಿಕಟಾಕಾರವನ್ನು ವ್ಯಕ್ತಪಡಿಸಿದನು! ಅದರಿಂದ ಭೀತಳಾದ ಸೀತೆಯು ಗಟ್ಟಿಯಾಗಿ ಕೂಗಿಕೊಳ್ಳಲು ಅವಳ ರಕ್ಷಣೆಗಾಗಿ ಯುದ್ಧಕ್ಕೆ ಜಟಾಯುವು ಬಂದನು.

ಆ ಗೃಧ್ರನನ್ನು ತ್ರೈಲೋಕ್ಯವಿದ್ರಾವಣನಾದ ರಾವಣನು ನಿಮಿಷಾರ್ಧದಲ್ಲಿ ಸಂಹರಿಸಿ ಲಂಕಾಭಿಮುಖನಾದನು.

ಬಳಿಕ ಲಂಕೆಯಲ್ಲಿ ಅಶೋಕವನದ ಶಿಂಶುಪಾವೃಕ್ಷದಡಿಯಲ್ಲಿ ಬಂದಿಯಾಗಿರಿಸಿದ ಸೀತೆಯನ್ನು ಪ್ರಲೋಭಗೊಳಿಸಲು ಲಂಕೇಶ್ವರನು ವಿವಿಧ ವಸ್ತ್ರಾಭರಣಭೂಷಿತನಾಗಿ ಹೊರಟಾಗ ಅವನ ಮಂತ್ರಿಯಾದ ಚಿತ್ರಯೋಧಿಯು ಅವನು ಮಾಡುತ್ತಿರುವುದು ಅಕಾರ್ಯವೆಂದು ಎಷ್ಟು ಬೇಡಿಕೊಂಡರೂ ಕೇಳದೆ ತನ್ನ ಹಟವನ್ನೇ ಸಾಧಿಸ ಹೋದನು. ಅಲ್ಲಿ ಸೀತೆಯನ್ನು ಕುರಿತು ತನ್ನ ವಶಳಾಗೆಂದು ಪರಿಪರಿಯಾಗಿ ಬೇಡಿಕೊಂಡು ತನ್ನಲ್ಲಿರುವ ಐಶ್ವರ್ಯವನ್ನು ಅನೇಕ ವಿಧವಾಗಿ ಬಣ್ಣಿಸಿ ನೋಡಿದನು. ಪತಿಪರಾಯಣೆಯಾದ ಸೀತಾದೇವಿಯು ಯಾವುದಕ್ಕೂ ಜಗ್ಗಲಿಲ್ಲ. ಕೂಡಲೆ ರಾವಣನು ಕೋಪಪರವಶನಾಗಿ ಚಂದ್ರಹಾಸವನ್ನೆತ್ತಿ ಸೀತೆಯನ್ನು ಕಡಿಯಹೋದನು. ಇದಕ್ಕೆ ಮುಂಚಿತವಾಗಿಯೇ ಪತಿವ್ರತೆಯಾದ ಸೀತೆಯೊಡನೆ ಕಾಮುಕನಾದ ತನ್ನ ಪತಿಯ ಜಲ್ಪವನ್ನು ಕೇಳಿ, ಬಳಿಕ ಪರಿಹಾಸಮಾಡಬೇಕೆಂದು ಬಳ್ಳಿಮಾಡವೊಂದರಲ್ಲಡಗಿದ್ದ ಮಂಡೋದರಿಯು ಥಟ್ಟನೆ ಹೊರಬಂದು ರಾವಣನನ್ನು ತಡೆದಳು. ಅದನ್ನು ಕಂಡು ರಾವಣನು ತನ್ನ ಉದ್ಯಮವನ್ನು ಬಿಟ್ಟು—'ಈಗ ನೀವು ಅಡ್ಡಿಮಾಡಿದಿರೋ, ಆಗಲಿ, ಬೆಳಗ್ಗೆ ನೋಡುತ್ತೇನೆ' ಎಂದು ಪರಿವಾರದೊಡನೆ ಶಯ್ಯಾಗಾರಕ್ಕೆ ಮರಳಿದನು.

ಆಗ ಸೀತೆಯು ಆರ್ಯಪುತ್ರನ ಬರವು ಇನ್ನು ನಿರೀಕ್ಷಿಸತಕ್ಕದ್ದಲ್ಲವೆಂದೂ ರಾಕ್ಷಸರಿಂದ ಸಾಯುವುದಕ್ಕಿಂತ ಆತ್ಮಹತ್ಯೆಯೇ ಲೇಸೆಂದೂ ಹಾಗೆ ಮಾಡುವುದಕ್ಕೆ ಮುಂಚೆ ದೈತ್ಯನ ತಲೆಗೆ ತಾಗಿದ ತನ್ನ ಕಾಲನ್ನು ಹತ್ತಿರದ ಪುಷ್ಕರಿಣಿಯಲ್ಲಿ ತೊಳೆದು ಕೊಂಡು ಬರುವೆನೆಂದೂ ಎಂದುಕೊಂಡು ಪುಷ್ಕರಿಣಿಯತ್ತ ಸಾಗಿದಳು.

ಈ ಸಮಯದಲ್ಲಿ ಸುಗ್ರೀವಾಜ್ಞೆಯಂತೆ ಸೀತೆಯನ್ನು ಅರಸುತ್ತಾ ಹೊರಟ ಆಂಜನೇಯನು ತೆಂಕಣ ಕಡಲನ್ನು ಧೀಂಕಿಟ್ಟು ದಾಟಿ ಲಂಕೆಯನ್ನು ಸೇರಿ ಅಲ್ಲಿ ಇಲ್ಲಿ ಸುತ್ತಿ ಸೀತೆಯನ್ನು ಕಾಣದೆ ಅಶೋಕವನದತ್ತ ಬಂದನು; ಹೆಂಗಸಿನ ದನಿಯನ್ನು ಕೇಳಿ ಬೆರಗಾಗಿ ಮರದ ಪೊಟ್ಟರೆಯೊಳಗವಿತು, ಸೀತೆಯು ಅರುಂಧತಿಯನ್ನು ಕುರಿತು, 'ಭಗವತಿ, ನೀನು ಇದೇನು ಮಾಡುತ್ತಿರುವೆ? ಈ ರಕ್ಕಸರ ನಡುವಿಂದ ಪಾರಾಗುವ ಉಪಾಯವನ್ನು ಹೇಳಲೊಲ್ಲೆಯಾ? ನಿನ್ನನ್ನು ನೋಡಿದರೆ ಬರುವ ಫಲವನ್ನು ಈಗ ನಾನು ಸುಳ್ಳುಮಾಡುತ್ತೇನೆ' ಎಂದು ಆತ್ಮತ್ಯಾಗಕ್ಕೆ ಸಿದ್ಧಳಾದುದನ್ನು ಕಂಡನು. ಒಡನೆ ಪೊಟ್ಟರೆಯಿಂದ ಹೊರಬಿದ್ದು 'ಸ್ವಾಮಿನಿ, ನಾನು ನಿನ್ನನ್ನು ತಡೆಯುತ್ತೇನೆ' ಎಂದು ಮುಂದಕ್ಕಡಿಯಿಟ್ಟನು; ಇದಾದಮೇಲೆ ಮೊದಮೊದಲು ನಂಬದಿದ್ದರೂ ಬಳಿಕ ತನ್ನ ಪೂರ್ವವೃತ್ತಾಂತವೆಲ್ಲವನ್ನೂ ಹೇಳಿ ರಾಮಚಂದ್ರನನ್ನು ಬಣ್ಣಿಸಿ ತಾನು ಅವನ ಸೇವಕನೆಂದು ಸೀತೆಯನ್ನು ನಂಬಿಸಿದನು. ಅನಂತರ ರಾಮನ ವಿರಹಾವಸ್ಥೆ ಯನ್ನೂ ತಾನು ಅವನಿಗೆ ಸುಗ್ರೀವನ ಸ್ನೇಹಮಾಡಿಸಿದ ಬಗೆಯನ್ನೂ, ಸುಗ್ರೀವನ ರಾಜ್ಯಲಾಭ ಮತ್ತು ಪ್ರತ್ಯುಪಕಾರ ಪ್ರಯತ್ನವನ್ನೂ ವಿವರಿಸಿದನು. ಸೀತೆಯು ಅದರಿಂದ ಸಂತುಷ್ಟಳಾಗಿ ರಾಮದೇವನು ಕಳುಹಿಸಿದ ಅಂಗುಲೀಯಕವನ್ನು ಹನುಮ ನಿಂದ ಪರಿಗ್ರಹಿಸಿ ಪ್ರತಿಯಾಗಿ ತನ್ನ ಚೂಡಾಮಣಿಯನ್ನು ಅವನ ಕೈಗಿತ್ತಳು. ಸೀತಾಸಂದೇಶವನ್ನು ಒಡೆಯನಿಗೆ ತಲಪಿಸಲು ದೇವಿಯಿಂದ ಅಪ್ಪಣೆಪಡೆದು ಹನು ಮಂತನು ಮರಳಿದನು.

ಇದಾದಮೇಲೆ ರಾಮಚಂದ್ರನು ಸೇತುವೆ ರಚಿಸಿ ರಾವಣಾದಿಗಳನ್ನು ಸಂಹರಿಸಿ ವಿಭೀಷಣನಿಗೆ ಪಟ್ಟಕಟ್ಟಲು ಕೆಲಕಾಲ ಹಿಡಿಯಿತು. ಅನಂತರ ಒಂದುದಿನ ಅವನು ಗೆಳೆಯನಾದ ಸುಗ್ರೀವನನ್ನು ಕುರಿತು ಅಶೋಕವನಕ್ಕೆ ಹೋಗಿ ಹೆಂಡತಿಯನ್ನು ಕರೆತರಹೇಳಿದನು. ಅವನು ಹಾಗೆಯೇ ಮಾಡಿದನು. ಸೀತೆಯು ಬಂದು ಗಂಡನನ್ನು ಕಂಡು 'ಆರ್ಯಪುತ್ರನಿಗೆ ಜಯವಾಗಲಿ!' ಎನ್ನುವಷ್ಟರಲ್ಲಿ ಅವಳ ವಿರಹಸೂಚಕವಲ್ಲದ ಉಡುಪನ್ನು ಕಂಡು ಶಂಕಿತನಾದ ರಾಮನು ಅವಳನ್ನು ಆದರಿಸುವುದನ್ನು ಬಿಟ್ಟು ಲಕ್ಷ್ಮಣ ಹನುಮರನ್ನು ಕೂಡಲೇ ಕರೆಕಳುಹಿದನು. ಅವರೂ ಬಂದರು; ಆದರೆ ಎಲ್ಲರೂ ಸೀತೆಯನ್ನು ನೋಡಿ ಮೊಗದಿರುಹಿದರು! ಸೀತೆಯು ತನ್ನೊಳಗೇ 'ಅಯ್ಯೋ,

ದೇವರೆ, ಪತಿದರ್ಶನದಿಂದ ನಿನಗೆ ಸರ್ವ ಅಲಂಕಾರವೂ ಒದಗಲಿ ಎಂಬ ಅನಸೂಯೆಯ ಅನುಗ್ರಹವೇ ಈಗ ಶಾಪವಾಯ್ತಲ್ಲಾ' ಎಂದು ಹಲುಬಿದಳು; ಅನಂತರ ಪತಿಯ ಪರುಷವಾಕ್ಯಗಳನ್ನು ಕೇಳಿ ಸಂತಪ್ತಳಾಗಿ 'ಆರ್ಯಪುತ್ರನೊಪ್ಪಿದರೆ ಅಗ್ನಿಪ್ರವೇಶ ಮಾಡುತ್ತೇನೆ' ಎಂದಳು. ರಾಮನನ್ನುಳಿದು ಮಿಕ್ಕವರು ಅಗ್ನಿಪ್ರವೇಶವನ್ನು ನೋಡ ಹೋದರು. ಅಲ್ಲಿ ಸೀತಾದೇವಿ ಗುರುಹಿರಿಯರನ್ನೂ ಪತಿಯನ್ನೂ ನೆನೆದು ಅಗ್ನಿಯನ್ನು ಪ್ರಾರ್ಥಿಸಿ ನೀರಿಗಿಳಿವಂತೆ ಅಗ್ನಿಕುಂಡದಲ್ಲಿಳಿದಳು. ಒಡನೆಯೇ ಅಗ್ನಿಯು ಮಿಂಚಿನವೈಯಿಂದ ಸೀತೆಯನ್ನು ಎತ್ತಿಹಿಡಿದು ದೇವಲೋಕದ ಹೂಮಳೆ ಬಿದ್ದೊಡನೆ ಅವಳನ್ನು ಕೆಳಗಿರಿಸಿ ಅದೃಶ್ಯವಾದನು! ಈ ಸಮಾಚಾರವನ್ನು ಕೇಳಿ ರಾಮದೇವನು ಆನಂದ ಆಶ್ಚರ್ಯಗಳಿಂದ ತುಂಬಿದನು.

ಆಕ್ಷಣದಲ್ಲಿ ಅವರೆಲ್ಲರಿಗೂ "ಸೀತೆಯು ಸಾಕ್ಷಾಲ್ಲಕ್ಷ್ಮಿ, ರಾಮನು ಶ್ರೀಮನ್ನಾರಾಯಣ!" ಎಂದು ಗಂಧರ್ವರು ಘೋಷಿಸುತ್ತಿರುವುದು ಕೇಳಿಸಿತು. ಅಷ್ಟರಲ್ಲಿ ನಾರದರು ಧರೆಗಿಳಿದು ಬಂದು ಶ್ರೀರಾಮನಿಗೆ ಗಗನಮಾರ್ಗದಲ್ಲಿ ಹೋಗುತ್ತಿದ್ದ ಇಂದ್ರ, ಏಕಾದಶರುದ್ರರು, ಮತ್ತು ಪಿತೃಗಳನ್ನು ತೋರಿಸಿ ಪತಿವ್ರತೆಯಾದ ಸೀತೆಯನ್ನು ಸ್ವೀಕರಿಸೆಂದು ಹೇಳಿದರು. ಆಗ ರಾಮಚಂದ್ರನು 'ದಂಡಕದಲ್ಲೇ ಒಂದುಸಲ ಸೀತೆಯು ಇದೇ ರೀತಿಯಲ್ಲಿ ಅಲಂಕೃತಳಾಗಿದ್ದುದನ್ನು ಕಂಡಿದ್ದೆ; ಆದರೆ ಅದೇಕಾಯ್ತೆಂದು ಗೊತ್ತಾಗಲಿಲ್ಲ; ಈಗ ತಿಳಿದೆ; ಮತ್ತು ಸೀತೆಯ ಅಗ್ನಿಪ್ರವೇಶದಿಂದ ಲೋಕಾಪವಾದ ತಪ್ಪಿದಂತಾಯ್ತು' ಎಂದು ಲಕ್ಷ್ಮಣನನ್ನು ಕರೆದು ಸೀತೆಯನ್ನು ಬರಮಾಡಿಕೊಂಡನು; ಸೀತೆಯನ್ನು ಕುರಿತು—'ಧರ್ಮಶೀಲೆಯಾದರೂ ನಿನ್ನಲ್ಲಿ ನಾನು ಸಂದೇಹಪಟ್ಟೆನು; ಅದು ಬೇರೆ ಯಾವ ಕಾರಣದಿಂದಲೂ ಅಲ್ಲ; ನಿನ್ನಂತೆಯೇ ಪತಿವಿರಹಿತರಾದ ಇತರ ಯುವತಿಯರೂ ಸಹ ಪತಿಗಳಿಗೆ ವಿಶ್ವಾಸಾರ್ಹರಾಗಲಿ ಎಂಬ ಉದ್ದೇಶದಿಂದ ಮಾಡಿದುದು' ಎಂದು ಸಂತೈಸಿದನು. ಆ ಬಳಿಕ ವಿಭೀಷಣನಿತ್ತ ಪುಷ್ಪಕವನ್ನೇರಿ ಸೀತೆಯನ್ನು ಕುರಿತು—'ನಾನು ನಿಜವಾದ ರಾಮನು, ಸೋತನು ಸತ್ಯವಾಗಿಯೂ ಲಕ್ಷ್ಮಣನೇ; ಬೇಕಾದರೆ ಆಶ್ಚರ್ಯಚೂಡಾಮಣಿಯಿಂದ ಪರೀಕ್ಷಿಸಿ ನೋಡು' ಎಂದು ಉಪಹಾಸಮಾಡಿದನು. ಆಗ ಸೀತಾದೇವಿ 'ಆಶ್ಚರ್ಯರತ್ನಗಳಿಗೆ ನಮಸ್ಕಾರ!' ಎಂದಳು. ಅನಂತರ ಅವಳು ಲಕ್ಷ್ಮಣನನ್ನು ಸಂಭಾವಿಸುತ್ತಿರುವಲ್ಲಿ ಪುಷ್ಪಕವು ಅಯೋಧ್ಯೆಗೆ ಹಾರಿತು!

ಬಿ. ಎಚ್. ಶ್ರೀಧರ.

---

**ಆಶ್ಚರ್ಯಚೂಡಾಮಣಿ** ನಾಟಕವನ್ನು ಬರೆದವನು **ಶಕ್ತಿಭದ್ರ**ನೆಂಬ ಕವಿ. ಇವನ ಕಾಲ ಸುಮಾರು ಹತ್ತನೆಯ ಶತಮಾನ. ಇವನು ಮಲಬಾರ್ ಪ್ರಾಂತ ದವನು.

ಈ ನಾಟಕದಲ್ಲಿ ಏಳು ಅಂಕಗಳಿವೆ. ಆದರೂ ಇದು ರಾಮಾಯಣ ನಾಟಕ ಗಳಲ್ಲೆಲ್ಲಾ ಸಣ್ಣದು. ಇದನ್ನು ಕವಿ ರಂಗದೃಷ್ಟಿಯಿಂದ ಬರೆದಂತಿದೆ. ವರ್ಣನೆ ಅತಿ ಯಾಗಿಲ್ಲ. ಪದ್ಯಗಳು ೧೪೯ ಮಾತ್ರ. ಶೈಲಿ ಸುಲಭವಾಗಿದೆ. ಕಥಾಸಂಗ್ರಹದಲ್ಲಿ ಕೌಶಲವೂ ಪಾತ್ರಗಳಲ್ಲಿ ಜೀವಕಳೆಯೂ ಅವರ ಮಾತಿನಲ್ಲಿ ಸರಳತೆಯೂ ಇದೆ. ಕೃತಕ ಚಮತ್ಕಾರ ಪ್ರಯತ್ನವಿದ್ದರೂ, ಒಟ್ಟಿನಲ್ಲಿ ಭಾಸನ ನಾಟಕಗಳ ಛಾಯೆ ಇದೆ. ಇದರಲ್ಲಿ ವೀರಕ್ಕಿಂತ ಅದ್ಭುತವೇ ಹೆಚ್ಚಾಗಿದೆ.

---

# ಉದಯನ ಚರಿತ್ರ ಸಂಗ್ರಹ

## ಮೂರನೆಯ ಮಗಧ ಕಾಂಡ

ಹೇಹಯ ಕುಲಕ್ಕೆ ಹಳೆಯ ಹಗೆಯೂ ಅದರಿಂದಲೆ ಕೌಶಾಂಬಿ ನಗರವನ್ನು ಕೈವಶಪಡಿಸಿಕೊಂಡವನೂ ಆದ ಪಾಂಚಾಲ ಅರಸನು ಯೂಗಿ ಸತ್ತ ಸುದ್ದಿಯನ್ನೂ ವಾಸವದತ್ತೆಯನ್ನು ಕಳೆದುಕೊಂಡದ್ದರಿಂದ ಉದಯನನು ಸೋತು ಮೆತ್ತಗಾಗಿರುವುದನ್ನೂ ಅರಿತು ಆಮೇಲೆ ತನಗೆ ಯಾವುದೊಂದು ಕೇಡೂ ಉಂಟಾಗುವುದಿಲ್ಲವೆಂದೆಣಿಸಿ ಕೌಶಾಂಬಿ ನಗರವನ್ನು ಕಾಪುಕಾಯದೆ ಸಿರಿಯ ಸೊಕ್ಕಿನಿಂದ ಬಹಳ ಆನಂದಗೊಂಡಿದ್ದನು. ಅದನ್ನರಿತ ರುಮಣ್ವಂತ ಮೊದಲಾದವರು, "ಇನ್ನು ಮಗಧ ರಾಜನೊಡನೆ ಸ್ನೇಹಮಾಡಿಕೊಂಡು ಅವನ ಪಡೆಗಳನ್ನೂ ಸೇರಿಸಿಕೊಂಡು ಹಗೆಯನ್ನು ಗೆಲ್ಲಬೇಕು" ಎಂದು ಉದಯನನಿಗೆ ಹೇಳಿದರು. ಅವನು, "ಯೂಗಿ ಮೊದಲಾದವರನ್ನು ಕಳೆದುಕೊಂಡ ಮೇಲೆ ನನಗೆ ಬೇಕಾದದ್ದು ಯಾವುದು?" ಎಂದು ನಿರಾಕರಿಸಿದನು. ದಿನದಿನಕ್ಕೆ ಅವನ ಮೈ ಸೊರಗುತ್ತ ಬಂತು. ಆಗ ಗೆಳೆಯರು, "ಶ್ರೇಷ್ಠವಾದ ವಿದ್ಯೆಯಲ್ಲಿ ಬಲ್ಲಿದನಾದ ಇಲಾಮಯನೆಂಬ ಒಬ್ಬ ಮುನಿಯಿದ್ದ ವನ ಕೂಡ ಬೆಂಕಿಯಿಂದ ಬೆಂದುಬಿಟ್ಟಿತು" ಎಂದು ಎತ್ತಿ ಹೇಳಿ, "ಬೆಂಕಿಯಿಂದ ತೊಂದರೆ ಪಡುವುದು ಯಾರಿಂದಲೂ ತಪ್ಪಿಸಿಕೊಳ್ಳಲಾಗುವಂಥದಲ್ಲ" ಎಂದೂ, ಬೇರೆ ಸುದ್ದಿಗಳು ಕೆಲವನ್ನು ಹೇಳಿಯೂ ಅವನನ್ನು ಸಮಾಧಾನಪಡಿಸಿಕೊಂಡಿದ್ದರು.

ಹಾಗಿರುವಲ್ಲಿ ಹಾರುವ ಗೆಳೆಯನಾದ ಇಶ್ಯೈಜ್ಞನೆಂಬವನು, "ನಾನು ಹೇಳುವುದನ್ನು ಕೇಳಿ. ಮಂತ್ರದಿಂದ ನೆರವೇರದ ಕಾರ್ಯ ಯಾವುದೂ ಇಲ್ಲ. ವಾಸವದತ್ತೆ ಸತ್ತು ಬೇರೆ ಜನ್ಮ ಪಡೆದಿದ್ದರೂ ಹಳೆಯ ರೂಪದೊಡನೆ ಅವಳನ್ನು ತರತಕ್ಕ ಮಂತ್ರವೊಂದಿದೆ. ಅದನ್ನು ಕಲ್ತು ಬಲ್ಲವನಾಗಿರುವ ಬ್ರಾಹ್ಮಣನೊಬ್ಬನು ರಾಜಗೃಹವೆಂಬ ನಗರದಲ್ಲಿ ಇದ್ದಾನೆ. ಅವನ ಬಳಿ ಹೋಗಿ ಸೇವೆಮಾಡಿ ಬೇಡಿದರೆ ವಾಸವದತ್ತೆಯನ್ನು ನಾವು ಪಡೆಯುವುದು ಸುಲಭವಾಗುವುದು." ಎಂದು ಹೇಳಿದನು. ಇದನ್ನು ಕೇಳಿದ ಉದಯನನು, "ಹೀಗೆ ಮಾಡುವ ಮಂತ್ರವೂ ಉಂಟೋ?" ಎಂದು ಆಶ್ಚರ್ಯಪಟ್ಟು ತಲೆ ಎತ್ತಲು ಇಶ್ಯೈಜ್ಞನು, ಆ ಮಾರ್ಗದಲ್ಲಿಯೇ ಮುಂದೆ ಪ್ರಯತ್ನಮಾಡಬೇಕೆಂದು ನಿಶ್ಚಯಿಸಿ, "ಹೀಗೆ ಹಿರಿಯರು ಹೇಳುವುದನ್ನು ಕೇಳಿದ್ದೇನೆ" ಎಂದು ಮತ್ತೂ ಹೇಳಿದನು. ಆಗ ಉದಯನನು, "ಇವೊತ್ತೇ ಆ ಎಡೆಗೆ ನಾವು ಬೇಗನೆ ಹೋಗ

ಬೇಕು" ಎಂದು ಹೇಳಲು, ಗೆಳೆಯರುಗಳು ಅವನನ್ನು ಗುಂಪಿನಿಂದ ತನಿಯಾಗಿ ಅಗಲಿಸಿ ಕರೆದುಕೊಂಡು ಬಂದು ಮಿಗಿಲಾರ್ಪೂ ಕಲ್ಪಿಯೂ ಉಳ್ಳವರಾದ ಸೂರು ವೀರರನ್ನು ಬರಿಸಿ ಬೇರೆ ರೂಪವನ್ನು ತಾಳುವಂತೆ ಹೇಳಲು, ಅವರುಗಳು ಹಾಗೆಯೇ ಬೇರೆ ರೂಪುಗೊಂಡರು. ಅರಸನೂ ತಾವೂ ಯಾತ್ರೆಗೆ ತಕ್ಕ ಹಾರುವರ ವೇಷವನ್ನು ತಾಳಿದವರಾಗಿ ಹೊರಟು ಪುಸ್ಥಾಳಕವೆಂಬ ನಾಡನ್ನೂ ಕಾಳವನವನ್ನೂ ದಾಟಿ ಕರುಪ್ಪಾಶವೆಂಬ ಕಾಡೊಂದನ್ನು ದಾಟಿ ಅಲ್ಲಿಂದ ಮುಂದಿರುವ ಕಾಡಿನ ಮಾರ್ಗವಾಗಿ ಹೋದರು.

ಆಗ ಉದಯನನು ಅಲ್ಲಿ ಸುಳಿದಾಡುವ ಗಂಡು ಜಿಂಕೆ ಕಾವು ಕಾಯಲು ಹೆಣ್ಣು ಜಿಂಕೆ ಬೆರಗಾಗಿ ನೋಡಿ ನಿಲ್ಲುವುದನ್ನು ಕಂಡು, ವಾಸವದತ್ತೆಯ ನೋಟವನ್ನು ನೆನೆದು ಮನಬೆಂದು, "ಜಿಂಕೆಯೇ, ನನ್ನ ಜೊತೆಗಾತಿ ಹೋದ ಎಡೆಯನ್ನು ನೀನು ಹೇಳುವೆಯಾದರೆ ನಾನು ಆ ಯೆಡೆಗೆ ಹೋಗಿ ಬದುಕಿಕೊಳ್ಳುವೆನು. ನೀನು ಹೇಳು" ಎಂದು ಹಲುಬಿಯೂ, ಹಾಗೆಯೇ ನವಿಲು, ಪಾರಿವಾಳ, ದುಂಬಿ, ತೆಂಗಾಳಿ, ಮೊದಲಾದುವನ್ನು ತನಿತನಿಯಾಗಿ ಕರೆದು ಕೂಗಿಕೊಂಡೂ ಹೋಗುವುದನ್ನು ಅರಿತ ಗೆಳೆಯರು ಮನಕರಗಿ ಅವನೊಡನೆ,

"ಸ್ವರ್ಗಕಣಿ; ಹಳಮೆ ಹುಟ್ಟಿಸದು; ಹುಟ್ಟಸು ಹರಿಯೆ
ಯತ್ತಿಸುವ ಹಿರಿಯವರು ಹುಟ್ಟಿದುದು; ಮೇಲ್ಮೆಯೆಡೆ
ವರಿಯದೆಯೆ ಬೆಳಗುವುದು; ಕ್ಷಾತ್ರಕೊಪ್ಪುವುದು; ಹಗೆ
ಯಿಲ್ಲದುದು; ಗೆಲ್ವೊಗಳ ತಳೆದಿಹುದು; ವೀರ್ಯವನು
ಪಡೆದಿಹುದು; ಲೋಕಕ್ಕೆ ತಿಲಕವೆನೆ ಮೆರೆಯುವುದು:
ಹಿರಿಯ ದೊರೆಯಾಣತಿಯ ಕೇಳುವುದು; ಹಾಳುನೆಲ,
ಕಾಟ, ಕೋಟಲೆಯಿಲ್ಲದಿಹುದು; ಸಿರಿ ಮೆರೆವ ಪೆ
ರ್ಕಲದೊಡವ ತಳೆದಿಹುದು; ಹುಡುಕಿದೊಡಮೆಲ್ಲಿಯುಂ
ಕಡು ಬಡವರಿಲ್ಲದುದು: ವರಕವಿಗಳಾರ್ಕೈದು
ಹಾಡಿರುವ ಹೊಗಳುಕ್ಕಿ ಹಿಗ್ಗು ಮಿಗೆ ತುಂಬಿಹುದು;
ಎಣಿಕೆಯೆಲ್ಲೆಯ ಮೀರಿದೀಪರಿಯ ಪೆರಪೆರವು
ಮೇಲ್ಮೆ ನೆಲೆಗೊಂಡೆಸೆವ ಮಗಧ ನಲ್‌ನಾಡ"

(೩, ೨ : ೪೧–೫೪)

ಹೋಗಿ ಸೇರಿದರು.

ಅವರುಗಳು ಅವನಿಗೆ ಬಹಳ ಸಮಾಧಾನ ಹೇಳುವವರಾಗಿ ಆ ನಾಡಿನ ಐದು ತಿಣೆಗಳ ಸಮೃದ್ಧಿಯನ್ನೂ ನೋಡುತ್ತ ಅದರ ತಲೆನಗರವಾದ ರಾಜಗೃಹವನ್ನು ಸೇರಿ, ಅದರ ಅಗಳು, ಕೋಟೆ, ಹಲವು ಬಗೆಯ ಜಾತಿಯವರ ಕೇರಿಗಳು, ನಾಲ್ಕು ಬಗೆಯ ವರ್ಣದವರ ಬೀದಿಗಳು, ಮೊದಲಾದುವನ್ನೆಲ್ಲ ಕಂಡು ಮಿಗಿಲು ಸಂತೋಷಪಟ್ಟು ಒಳನಗರಕ್ಕೆ ಹೋದರು. ಉದಯನನು ಅದರ ಸಮೃದ್ಧಿಗಳನ್ನೆಲ್ಲ ಕಂಡು ವಾಸವದತ್ತೆಯ ಬಿರಿವು ಮನಸ್ಸನ್ನು ಪೀಡಿಸಲು ಬಹಳವಾಗಿ ಬಾಡಿ ಅವರುಗಳೊಡನೆ ತಂಗಿದನು. ಅಲ್ಲಿ ಅವನು,

"ಮಿಗಿಲು ಸಿರಿಗೂಡಿ ಜಯವೆರಸಿದೀರ್ಛೈವತ್ತು
ಯವನ ಕೇರಿಗಳುಮಿರೆಂಬತ್ತು ಎಸೆಕೈದು
ಬೀಡುಗಳುಮಳವರಿದ ಮಹಿಮೆಯಿಂ ಸಾವಿರದ
ಸಂಖ್ಯೆಯಿಂದೆಸೆವ ಪೆರ್ವಡೆ ತಮಿಳ ಕೇರಿಗಳುಂ;
ಕೊಲೆಯಲ್ಲಿ ಕಡುಬಲ್ಮೆಯಾಂತ ಕಾವಲುಗಾರ
ಕೇರಿಗಳುಮಾಮ್ಲೇಚ್ಛ ಕೇರಿಗಳುಮೆಡೆಯೆಡೆಯೆ
ಚಿತ್ರಶಿಲ್ಪಿಗಳು ಮಿಗೆ ಭಕ್ತಿಯಿಂ ಸಮೆದಿರುವ
ಚಿತ್ರಶಾಲೆಗಳುಮೊತ್ತೊತ್ತಿ ಹೊಂದಿಕೆಗೊಂಡು
ಮೇಲೆದ್ದು ಮೆರೆವೊಟ್ಟ ಮಾಡಗಳುಮಲ್ಲಲ್ಲೆ
ಕುಟ್ಟುಗೆಲಸದ ಕರ್ಮಶಾಲೆಗಳುಂ; ನೀರೆರೆಯು
ವರವಟಿಗೆ ಹಂದರುಂ; ಧರ್ಮೋಪದೇಶ ಗೈ
ವೆಡೆಗಳುಂ; ಸಭೆಯ ಮಂದಿರಗಳುಂ; ಕೆಚ್ಚೆಸೆವ
ಕಾಳಗದ ಕೋಳಿಗಳ ಕ್ರಮವರಿತು ಹೋರಿಸುವ
ಗೆಲುಹೋರ ಗಂಡುಗಳು ಮೆಚ್ಚಿ ನೆರೆವೆಡೆಗಳುಂ;
ಮದಿಸಿದಾನೆಗಳ ಪಳಗಿಸುವ ಗುಂಡೆಡೆಗಳುಂ;
ಜವನಡೆಯ ಕುದುರೆಯೋಡುವ ಓಡುಬೀದಿಗಳುಂ;
ಸೇರಿದುಲಿ ನಿಲ್ಲದಿಹ ರಂಗಗಳುಂ; ಉಲಿಮಿಕ್ಕ
ಜೂಜಾಟದೆಡೆಗಳುಂ; ಧರ್ಮಾನ್ನವಿಕ್ಕುವಡು
ಮನೆಗಳುಂ; ಸಭೆಯ ಚಾವಡಿಗಳುಂ; ದಟ್ಟೈಸಿ"

(೩, ೪ : ೭–೨೯)

ಬೆಳಗುವುದೂ ಅದರ ಪಕ್ಕದಲ್ಲಿ ಉಳ್ಳದ್ದೂ ಆದ ಹೊರನಗರದಲ್ಲಿ ಕಾಮನ ಗುಡಿಯ ಪಕ್ಕದಲ್ಲುಳ್ಳ ಕೊಳದ ಕರೆಯಲ್ಲಿ ಬೆಳಗುವ ಎಳೆಯ ಮರದ ತೋಪಿನಲ್ಲಿ ಇರುವ

ತಾಪಸಾಶ್ರಮವೊಂದರಲ್ಲಿ ಅವರುಗಳೊಡನೆ ತಂಗಿ ವಾಸವದತ್ತೆಯ ಬಿರಿವನ್ನು ತಾಳಲಾರದೆ ಬಹಳವಾಗಿ ವ್ಯಥೆಪಡುವವನಾದನು.

ಅವನ ಪ್ರಾಣವನ್ನು ಕಾಪಾಡಬಯಸಿದ ಗೆಳೆಯರು ಅಲ್ಲಿರುವ ಕಣ್ಣುವರುವ ಪರ್ಣಶಾಲೆಯುಳ್ಳ ಕಾಕತುಂಡಕರೆಂಬ ಒಬ್ಬ ದೊಡ್ಡವರನ್ನು ಹೋಗಿ ಕಂಡು ತಮ್ಮ ಕೊರತೆಗಳನ್ನೆಲ್ಲ ಅವರ ಬಳಿ ಬೆಳಗುವಂತೆ ಹೇಳಿ, ಉದಯನನಿಗೆ ಧೈರ್ಯವುಂಟಾಗ ಬೇಕಾದ ದಾರಿಗಳನ್ನು ಇಂಥಿಂಥ ಬಗೆಯಾಗಿ ಹೇಳಬೇಕೆಂದು ಹೇಳಿ ಒಡಂಬಡಿಸಿ ಅವರನ್ನು ಕರೆದುಕೊಂಡು ಬಂದು ಅವನಿಗೆ ತೋರಿಸಿ, "ಮೊದಲು ನಾವು ಹೇಳಿದ ಹಿರಿಯರು ಇವರೇ" ಎಂದರು. ಉದಯನನು ಬಹಳ ಆಸೆಯಿಂದ ಅವರು ಹೇಳು ವುದನ್ನು ಕೇಳಬಯಸಿ ಅವರಿಗೆ ನಮಸ್ಕಾರ ಮಾಡಿದನು. ಅವರು ಅವನನ್ನು ಕುರಿತು, "ಎರಡು ತಿಂಗಳು ವ್ರತಮಾಡಿಕೊಂಡು ನೀವು ಇಲ್ಲೆ ಇರಬೇಕು. ಆಮೇಲೆ ಸುಡುಗಾಡಿನಲ್ಲಿ ನಾವು ಮಾಡಬೇಕಾದ ಸಾಧನೆ ಒಂದುಂಟು. ಅದು ಮುಗಿದ ಬಳಿಕ ವಾಸವದತ್ತೆ ಹಳೆಯ ರೂಪದೊಡನೆ ಬರುವುದು ನಿಶ್ಚಯ. ನಿಮ್ಮ ರಾಜ್ಯವೂ ನಿಮಗೆ ಸಿಕ್ಕುತ್ತದೆ. ಇದನ್ನು ನೀವು ನಂಬಿ" ಎಂದು ಹೇಳಿ ಕೈಕೊಳ್ಳಬೇಕಾದ ವ್ರತವನ್ನೂ ಅದರ ವಿಧಿಯನ್ನೂ ತಿಳಿಸಿ ತಮ್ಮೆಡೆಗೆ ಹೋದರು.

ಕೇಳಿದ ರುಮಣ್ವಂತ ಮೊದಲಾದವರು, "ನೆಲದಲ್ಲಿ ಹೊಗುವುದೂ ಆಕಾಶದಲ್ಲಿ ಹೋಗುವುದೂ ಕಡಲನೀರನ್ನು ಬಾಯ್ಗೊಂಡು ಉಗುಳುವುದೂ ಬೆಟ್ಟವನ್ನು ಎತ್ತು ವುದೂ ಮೊದಲಾದ ಇವನ್ನು ಹೋಲುವ ವಿದ್ಯೆಯಲ್ಲಿ ಪಳಗಿದವರನ್ನು ಪ್ರತ್ಯಕ್ಷವಾಗಿ ಕಂಡಿರುವೆವು. ಸತ್ತವರನ್ನು ಮರಳಿ ಬರಿಸುವ ವಿದ್ಯೆ ಬಲ್ಲವರನ್ನು ಇದುವರೆಗೂ ನಾವು ಕೇಳಿಯೂ ಅರಿತಿಲ್ಲ. ಬಹಳ ಪುಣ್ಯವುಳ್ಳವರಾದ್ದರಿಂದ ಇವರನ್ನು ಕಂಡೆವು. ಇವರು ವಾಸವದತ್ತೆಯನ್ನು ಬರಿಸಿಕೊಡುವುದು ನಿಶ್ಚಯ" ಎಂದು ವಿಸ್ಮಯಪಟ್ಟು ಹೇಳು ವವರಾಗಿ ಅರಸನನ್ನು ಸಮಾಧಾನಗೊಳಿಸಿ ಹೊರನಗರದಲ್ಲಿ ಹಿಂದೆ ಹೇಳಿದ ಎಡೆಯಲ್ಲಿ ಅವನೊಡನೆ ತಂಗಿದರು. "ನಮ್ಮರಸನನ್ನು ಮಗಧರಾಜನಿಗೆ ಸ್ನೇಹಿತನಾಗುವಂತೆ ಹೇಗಾದರೂ ಮಾಡಿಬಿಡಬೇಕು" ಎಂಬ ಆಲೋಚನೆ ಅವರುಗಳಿಗೆ ಬಹಳವಾಗಿತ್ತು.

ಆಗ ಆ ನಗರದಲ್ಲಿ ಕಾಮದೇವನಿಗೆ ಉತ್ಸವ ನಡೆಯಿತು. ನಡೆಯುವಾಗ ಅರಸನ ಕಟ್ಟಳೆಯಂತೆ, "ಪದ್ಮಾವತಿ ಕಾಮನನ್ನು ಸೇವಿಸುವುದಕ್ಕೆ ಇಂದು ಹೋಗುವಳು. ನಗರವನ್ನು ಅಲಂಕರಿಸಿ" ಎಂದು ಪಳ್ಳುವ ಮುದುಕನು ಮುರಜುಬಾರಿಸಿ ತಿಳಿಸಿದನು. ಕೇಳಿದವರುಗಳು ಅಲ್ಲಲ್ಲೆ ಅಲಂಕಾರ ಮಾಡಿಸಿದರು. ಸಿರಿದೇವಿಯಾದರೂ ರೂಪದಲ್ಲೂ ತಿಳಿವಿನಲ್ಲೂ ಹೋಲಿಕೆಗೆ ಸಮರ್ಥಳಾಗದ ಪದ್ಮಾವತಿ ಮಿಂದು ಅಲಂಕಾರ ಮಾಡಿ ಕೊಂಡು ಯಾಪ್ಯಾಯಿನಿ ಮೊದಲಾದ ಗೆಳತಿಯರೂ ಕಾಂಚುಕೀಯರು ನೊದ

ಲಾದವರೂ ಸುತ್ತಿಬರಲು ಒಂದು ವಾಹನವನ್ನೇರಿ ಹೋಗುತ್ತಿರುವಲ್ಲಿ, ಅದು ಹೊರ ನಗರದಲ್ಲುಳ್ಳ ಕಾಮನ ಗುಡಿಯು ಬಾಗಿಲಲ್ಲಿ ಬಂದು ನಿಂತಿತು.

ವಾಹನ ನಿಂತಾಗ ಅದನ್ನು ಮುಚ್ಚಿದ್ದ ತೆರೆ ಗಾಳಿಯಿಂದ ತೆರೆದುಹೋಯಿತು. ಆಗ ಅದರೊಳಗಿದ್ದ ಪದ್ಮಾವತಿಯನ್ನು ಎದುರಿನಲ್ಲಿ ಹೊನ್ನೆಮರದ ಕೆಳಗೆ ವಾಸವದತ್ತೆಯ ನೆನವಿನಿಂದಿದ್ದ ಉದಯನ ಕಂಡನು. ಪದ್ಮಾವತಿಯೂ ಅವನನ್ನು ಕಂಡಳು. ಒಬ್ಬರನ್ನೊಬ್ಬರು ಬಯಸಿ ಮನಸ್ಸು ಕರಗಿಹೋದರು. ವಾಸವದತ್ತೆಗೂ ಅವಳಿಗೂ ಬೇರ್ಪಟು ತೋರದ್ದರಿಂದ, "ನಾವು ನೆನೆದುಬಂದ ಹಿರಿಯರು ವಾಸವದತ್ತೆಯನ್ನು ಮರಳಿಸಿ ಕೊಟ್ಟರೋ ?" ಎಂದು ಉದಯನನು ಎಣಿಸಿದನು. "ಇವನು, ತನ್ನನ್ನು ಸೇವಿಸ ಬಂದ ನನ್ನ ಸ್ಥೈರ್ಯವನ್ನು ಅಳೆಯುವುದಕ್ಕಾಗಿ ನನ್ನ ಮುಂದೆ ಕಾಣಿಸಿ ಕೊಂಡಿರುವ ಕಾಮದೇವನೋ ? ಅಲ್ಲವೆ ಬ್ರಾಹ್ಮಣರೂಪದಿಂದ ತೋರಿರುವ ಬೇರೆ ದೇವಕುಮಾರನೋ ?" ಎಂದು ಪದ್ಮೆ ಎಣಿಸಿದಳು. ಆಗ ಗೆಳತಿ ಬಂದು ನಮಸ್ಕರಿಸಿದಳು. ಅವಳ ತೋಳನ್ನು ಹಿಡಿದುಕೊಂಡು ಬಂಡಿಯಿಂದ ಇಳಿದ ಪದ್ಮಾವತಿ, ಕೋಯಿಲೊಳಕ್ಕೆ ಹೋಗಿ ಕಾಮದೇವನ ಮಾಡವನ್ನು ಬಲಗೊಂಡು ವಿಧಿಪ್ರಕಾರವಾಗಿ ದಾನಗಳನ್ನು ಮಾಡಿ ನೋಂಪಿಯನ್ನು ಮಾಡತೊಡಗಿದಳು. ತೊಡಗಿದವಳು, ತನ್ನ ಮುಂದೆ ನಿಂತ ಮುದುಕ ಕಾವಲಾಳುಗಳನ್ನು ಕುರಿತು, "ಇಲ್ಲಿ ದಾನಪಡೆಯಲು ಬರುವ ಬ್ರಾಹ್ಮಣರನ್ನು ತಡೆಮಾಡದೆ ಒಳಗೆ ಬರಮಾಡಿ" ಎಂದು ಕಟ್ಟಳೆಯಿಟ್ಟಳು.

"ಎಲ್ಲಾ ಗುಣವೂ ಉಳ್ಳ ಉದಯನನನ್ನು ಹೋಲುವ ನಾಯಕನನ್ನು ಇವಳು ಪಡೆಯತಕ್ಕವಳು" ಎಂದು ಅಲ್ಲಿ ನಿಂತ ಮುದುಕಿಯೊಬ್ಬಳು ಒಂದು ಹಾಡನ್ನು ಹಾಡಿದಳು. ಅದನ್ನು ಕೇಳಿದ ಪದ್ಮೆ, "ಇವೊತ್ತು ಹೊನ್ನೆಯ ಕೆಳಗೆ ನಿಂತವನು ಅವನನ್ನು ಹೋಲುವವನೇ" ಎಂದು ನೆನೆದಳು. ಉತ್ಸವದ ಮೊದಲನೆಯ ದಿನ ಮಾಡಬೇಕಾದ ದಾನಗಳು ವಿಧಿಪ್ರಕಾರವಾಗಿ ಮಾಡಲ್ಪಟ್ಟವು. ಆಗ ಮುದುಕಿಯರು, "ಸೂರ್ಯನು ಅಸ್ತಮಿಸುವುದಕ್ಕೆ ಮೊದಲೇ ನಾವು ಕನ್ನೆವಾಡಕ್ಕೆ ಹೋಗುವುದು ಒಳ್ಳೆಯದು" ಎಂದು ಹೇಳಿದರು. ಹೇಳಲು ಹೋಗುವುದಕ್ಕೆ ಅವಳ ಮನಸ್ಸು ಕಲಕಗೊಂಡಿತು. ಗೆಳತಿಯರು ಬಂದು ಹತ್ತಿಸಲು ವಾಹನದಲ್ಲಿ ಹತ್ತಿ ಪದ್ಮಾವತಿ ಕನ್ನೆವಾಡಕ್ಕೆ ಹೋದಳು. ಹೋದಮೇಲೆ, "ಇವಳ ನೋಂಪಿ ಈ ಹಬ್ಬದಲ್ಲಿ ಮುಡಿವು ಪಡೆಯುತ್ತದೆ. ಆ ಕಾಲದಲ್ಲಿ ಇವಳು ದಾನಮಾಡುವಳು. ತೆಗೆದುಕೊಳ್ಳಲು ಬರುವವರನ್ನು ನೀವು ತಡೆಯಬೇಡಿ" ಎಂದು ಕೆಲಸಗಾತಿಯರು ಹೇಳಿದರು. ಅದನ್ನು ಕೇಳಿದ ಉದಯನನು, "ಮತ್ತೆ ಅವಳನ್ನು ನಾವು ನೋಡಬಹುದು" ಎಂದು ತನ್ನ ಮನಸ್ಸಿಗೆ ಸಮಾಧಾನಮಾಡಿಕೊಂಡಿದ್ದನು.

ಆಗ ಹಿಂದೆ ಮೆಲ್ಲನೆ ಹೋಗುವ ಐರಾವತಿಯೆಂಬ ಅವಳ ಗೆಳತಿಯನ್ನು ಕಂಡು, "ಇವಳು ಯಾರು? ಇವಳ ಹೆಸರೇನು? ಈ ತೋಪಿಗೆ ಇವಳು ಬಂದ ಕಾರ್ಯವೇನು?" ಎಂದು ಉದಯನನು ಕೇಳಿದನು. "ಈ ಬ್ರಾಹ್ಮಣನು ಹಣದಾಸೆಯಿಂದ ಬಂದವನು" ಎಂದು ನೆನೆದು ಐರಾವತಿ, "ಇವಳು ಈ ನಗರದರಸನ ಪಟ್ಟದ ದೇವಿಯಾಗಿರುವ ಶಿವಮತಿಯೆಂಬವಳ ಸಹೋದರಿಯೂ ಕಾಶಿರಾಜನ ಹೆಂಡತಿಯೂ ಆದ 'ಉದಯಘೋಷೆ' (ಉದಯ್ಯೆಯೋಷ್ಯೆ) ಎಂಬವಳ ಮಗಳು. ಪದ್ಮಾವತಿಯೆಂಬ ಹೆಸರುಳ್ಳವಳು; ಮದುವೆಯಾಗದವಳು. ಮನ್ಮಥನಿಗೆ ನಗರ ಮಾಡುವ ಹಬ್ಬದ ಮುಡಿವಿನಲ್ಲಿ ವೈದಿಕರಿಗೆ ಬೇಕಾದುವನ್ನು ಕೊಡಲು ಎಣಿಸಿ ಇದ್ದಾಳೆ. ಪೊರುಳಿನಲ್ಲಿ ಬಯಕೆಯಿದ್ದರೆ ನೀವು ಇಲ್ಲೆ ಇರಿ" ಎಂದು ಹೇಳಿದ್ದಲ್ಲದೆ; "ನಿಮ್ಮ ನಾಡು ಯಾವುದು? ಊರು ಯಾವುದು? ಗೋತ್ರ ಯಾವುದು?" ಎಂದೂ ಕೇಳಿದಳು. ಉದಯನನು ಕೇಳಿದ್ದಕ್ಕಾಗಿ ಒಳಗೇ ಸಂತೋಷಿಸಿ, "ನನ್ನ ನಾಡು ಗಾಂಧಾರ. ಊರು ರತ್ನಪುರ. ನಮ್ಮ ತಂದೆ ಶಾಂಡಿಯನೆಂಬ ಬ್ರಾಹ್ಮಣ. ನನ್ನ ಹೆಸರನ್ನು ಮಾಣಕನೆಂದು ಹೇಳುತ್ತಾರೆ" ಎಂದು ಹೇಳಿದನು. ಕೇಳಿದ ಐರಾವತಿ ಸಂತೋಷಗೊಂಡು ಬೇಗನೆ ಕನ್ನೆವಾಡವನ್ನು ಸೇರಿದಳು.

ಆ ಮೇಲೆ ಉದಯನನು ಗೆಳೆಯರನ್ನು ಹೋಗಿ ಸೇರಿದನು. ಹೊತ್ತು ಮುಳುಗಿತು. ಮೊಲ್ಲೆ ಅರಳಿತು. ತಾವರೆಗಳು ಮುದುರಿಕೊಂಡವು. ಇನ್ನೂ ಇರುವ ಸಂಜೆಗಾಲದ ಸಂಗತಿಗಳನ್ನು ಕಂಡು ಕಾಮವೇಗ ಹೆಚ್ಚಿದ ಉದಯನನು ವಾಸವದತ್ತೆಯನ್ನು ಮರೆತು ಪದ್ಮಾವತಿಯ ಚೆಲುವನ್ನೇ ನೆನೆದು,

"ಒನಪುಳ್ಳ ವಾಹನಕೆ ಮರೆಯಾದ ತೆರೆಯನಾ
ಬಿರುಗಾಳಿಯೋಸರಿಸೆ ಮೋಡದೆಡೆ ಬಾಂದಳದ
ದೇವಕನ್ನೆಯ ಹಾಗೆ ಹೊಳೆದು, ಕಾಂದಳ ಮೊಗ್ಗಿ
ನಂತೆಸೆವ ಮುಚ್ಚುವೆರಳ್ ನೋಯೆ ಚೆಲುವುಲಗೊಳದ
ತಣ್ಣನೆಯ ಕೆನ್ನೈದಿಲೆಯನು ಚಿಲ್ಲೆನುವಂತೆ
ಹಿಡಿದು ಮೆಲ್ಲನೆ ಇಳಿದು ಹತ್ತಿರಕೆ ನನ್ನಬಳಿ
ಬರುವಳೋ ಎನಿಸುವುದು. ತಾಳಲಾರೆನು.

(೩, ೬: ೪೭–೫೪)

ತಪಸ್ಸು ಮಾಡಿಯಾದರೂ ನಾನು ಅವಳನ್ನು ಪಡೆಯುವೆನು" ಎಂದು ನಿಶ್ಚಯಿಸಿ ತನ್ನ ಅಭಿಪ್ರಾಯವನ್ನು ಗೆಳೆಯರಿಗೆ ತಿಳಿಸಿ ವ್ಯಥೆಪಟ್ಟನು.

ಹೋದ ಪದ್ಮಾವತಿಯೂ ಅವನನ್ನೇ ನೆನೆದು ವ್ಯಥೆಪಟ್ಟು ಆಮೇಲೆ ಹಾಸಿಗೆಯನ್ನೇರಿ,

"ನರುಮಲರ ತೋಪಿನಲಿ ತುರುಗು ಹೂ ಗೊಂಚಲಿನ
ಮಾಧವೀಲತೆಯೆಸೆವ ಹೊರವು ತಳಿರನು ಹಿಡಿದು
ಹೊಸಮಲರ ಹೊನ್ನೆಯಾ ತಾಳ ಮೊದಲನು ಸೇರಿ
ಕುಡಿದುಬಿಡುವಂತೆನ್ನ ನೋಡುತುಂ, ದುಗುಡದಲಿ
ನೊಂದು ಮಸಗರಗುತುಂ, ಉಡುಗಿ ನಿಂದಂತಿಹುದು;
ಮೆಲ್ದೋಳ ಹಿಡಿದು ತನ್ನೆದೆಗೊತ್ತಿ ಅನುಭವಿಪ
ಸಂತಿಹುದು; ಗೆರೆಮಲರ ನಿಡುಗಣ್ಣಿನೊಳಹೊಗದ
ಹುರಿನೂಲಿನೆದೆಯವನ ಪುಣ್ಯಾವಹ ನಲ್ದೋಳ
ಸೋಂಕುವಾ ಭಾಗ್ಯಕಾಲವದೆಂದು ಬರುವುದೋ!"
ಎಂಬ ಘನಯೋಚನೆಯಿನೊಳಗೊಳಗೆ ಮಿಗೆ ಮರುಗಿ,
ಮಾಸಿಲ್ಲದೊಡವೆಗಳ ಬೆಂಕಿಯೆಡೆ ತಂದಿಟ್ಟ
ಮೇಣಬೊಂಬೆಯು ಹಾಗೆ ಕರಗುತಿಹ ಮನದವಳು
ನಿದ್ದೆಗೊಳ್ಳದೆ ಮಿಗಿಲು ಯೋಚಿಸುತ ತಂಗಿರಲು. . .

(೩, ೭ : ೭೭–೯೦)

ಈ ರೀತಿ ಇಬ್ಬರೂ ಇಬ್ಬರ ಮನಸ್ಸಿನಲ್ಲಿಯೂ ಒಂದೇ ಆದ ಸಹಜ ನೋಟದಿಂದ ಒಂದೇ ರೀತಿಯಾದ ಮನನೋವುಳ್ಳವರಾಗಿ ಕಷ್ಟಪಟ್ಟರು. ಆ ರಾತ್ರಿ ಕೊಲ್ಲ ಬಂದದ್ದರ ಹಾಗೆಯೇ ಅವರುಗಳಿಗೆ ತೋರಿ ಏಳಿರುಳಿನಂತೆ ಕಳೆಯಿತು.

ಮರುದಿನ ಬೆಳಗ್ಗೆ ಮತ್ತೆ ಅವನನ್ನು ಕಾಣಬೇಕೆಂಬ ಆಸೆಯನ್ನು ಮನಸ್ಸಿನಲ್ಲೇ ಅಡಗಿಸಿಕೊಂಡು ಪದ್ಮಾವತಿ ಕಣ್ಣುಗಳನ್ನು ತೊಳೆದು ದೇವರಿಗೆ ನಮಸ್ಕರಿಸಿ ಚಿಂತೆಯಿಂದಿರಲು ಅವಳ ಬೇರ್ಪಾಟನ್ನು ಕಂಡ ಸಾಕುತಾಯಿ ಮೊದಲಾದವರು ಹಲವು ರೀತಿಯಲ್ಲಿ ಚಿಂತೆಗೊಂಡು ಸಮಯ ನೋಡಿ, "ವಾಹನವನ್ನೇರಿ ತೋಪಿಗೆ ಹೋಗೋಣವೇ?" ಎಂದು ಅವಳನ್ನು ಕೇಳಿದರು. ಅವಳು "ನೋಂಪಿ ಮುಗಿಯುವವರೆಗೂ ನನ್ನನ್ನು ಕೇಳಬೇಕಾದ್ದಿಲ್ಲ. ಅರಸನ ಕಟ್ಟಳೆ ಇಲ್ಲವಾದರೂ ಹೋಗಬೇಕಾದ್ದೇ ಸಂಪ್ರದಾಯ" ಎಂದಳು. ಒಡನೆ ಅವರುಗಳು ಅವಳನ್ನು ವಾಹನವೇರಿಸಿ ತೋಪಿಗೆ ಕಳಿಸಿದರು. ಕಳಿಸಿದಾಗ ಮೊದಲ ದಿನದಂತೆಯೇ ಹೊನ್ನೆಮರದ ಕೆಳಗೆ ನಿಂತ ಉದಯನನೂ ಅವಳೂ ಒಬ್ಬರನ್ನೊಬ್ಬರು ನೋಡಿ ತಮ್ಮ ಬಯಕೆಯನ್ನು ತೋರಿಸಿಕೊಂಡು ಮೈಮರೆತರು. ಹೀಗೆಯೇ ಕೆಲವು ದಿನಗಳು ಕಳೆದವು.

ಒಂದು ದಿನ ಅಲ್ಲಿ ಬಂದ ಪದ್ಮಾವತಿ ತನ್ನ ಕಾಮನೋವನ್ನು ಹೊರಪಡಿಸುವ ಉತ್ಸಾಹವುಳ್ಳವಳಾಗಿ ಐರಾವತಿಯ ಕತ್ತಿನಲ್ಲಿ ತನ್ನ ಕೈಯನ್ನು ಸೇರಿಸಿ ತಬ್ಬಿಕೊಂಡು ಒಂದು ಮಂಟಪದ ಮೇಲೇರಿ ನಿಂತಳು. ಹಾಗೆಯೇ ಉದಯನನು ತನ್ನ ಬಯಕೆಯನ್ನು ಹೊರಪಡಿಸುವ ಗುರಿಯಿಂದ ವಸಂತಕನ ತೋಳನ್ನು ಒಂದು ಕೈಯಿಂದ ತಬ್ಬಿ ಮತ್ತೊಂದು ಕೈಯಿಂದ ಬಹು ಅಂದವಾದ ಹೂ ಚೆಂಡೊಂದನ್ನು ಉರುಳಿಸುತ್ತ ಹೊನ್ನೆಯ (ಪುರದ) ಕೆಳಗೆ ನಿಂತನು. ಹಾಗೆ ನಿಂತವನನ್ನು ಕಂಡ ಪದ್ಮಾವತಿ ಐರಾವತಿಯನ್ನು ಕುರಿತು, "ಬ್ರಾಹ್ಮಣರೂಪದಿಂದ ಅಲ್ಲಿ ನಿಂತಿರುವವನು ಯಾರು? ನೀನು ಅವನನ್ನು ಬಲ್ಲೆಯೋ?" ಎಂದು ಕೇಳಿದಳು. ಐರಾವತಿ, "ಹಿಂದೊಂದು ದಿನ ನೀನು ಕನ್ನೆವಾಡಕ್ಕೆ ಹೋದ ಮೇಲೆ ಪ್ರೀತಿಯ ಹೆಚ್ಚಿಗೆಯಿಂದ ಅವನ ಚರಿತ್ರೆಯನ್ನು ಕೇಳಿ ಅರಿತುಕೊಂಡೆ. ಮಾಣಕನೆಂಬುದು ಅವನ ಹೆಸರು. ಅವನು ಬ್ರಾಹ್ಮಣ. ಈ ನಾಡನ್ನು ನೋಡುವುದಕ್ಕೆ ಬಂದ. ಅವನೂ ಅವನ ಗೆಳೆಯರೂ ನಿನ್ನ ದಾನವನ್ನು ಬಯಸಿಯೇ ಇಲ್ಲಿ ನಿಂತರೆಂದು ಕಾಣುತ್ತದೆ. ಬೇಗ ಹಿಂದುರುಗಿ ಹೋಗುವವರಲ್ಲ" ಎಂದಳು.

ಕೇಳಿದ ಪದ್ಮೆ, "ಹೆರರರಿಯದಂತೆ ಸನ್ನೆ ಮಾಡಿ ಅವನ ಕೈಯಲ್ಲಿರುವ ಚೆಂಡನ್ನು ತೆಗೆದುಕೊಂಡು ಬರುವುದಕ್ಕಾಗುವುದೋ?" ಎನ್ನಲು, ಐರಾವತಿ ಕೈತಟ್ಟಿ ಅವನನ್ನು ಕುರಿತು, "ನಿನ್ನ ಕೈಚೆಂಡನ್ನು ಇವಳಿಗೆ ಕೊಡಬೇಕು" ಎಂದು ಕಣ್ಣಿಂದಲೂ ಕೈಯಿಂದಲೂ ಅವನಿಗೆ ತಿಳಿಸಿದಳು. ಅದನ್ನರಿತು ಮನಸ್ಸಿನಲ್ಲಿ ಅಡಗಿಸಿಕೊಂಡ ಅವನು, "ದತ್ತೆಯನ್ನು ನೆನೆದು ತೊಳಲಿ ಬಳಲುವ ನನ್ನ ಮನಸ್ಸನ್ನು ತನ್ನ ಕಡೆಗೆ ಇವಳು ಎಳೆದುಕೊಂಡು, ತನ್ನ ಮನಸ್ಸನ್ನು ನನ್ನೆಡೆ ನಿಲ್ಲಿಸಿ, ಕಲೆತ ಕೆಳೆಯುಳ್ಳವಳಾಗಿದ್ದಾಳೆ" ಎಂದು ಗೆಳೆಯರಿಗೆ ತಿಳಿಸಿದನು. ಕೇಳಿದ ಗೆಳೆಯರಲ್ಲಿ ಇಶ್ವೈಚ್ಚನೆಂಬವನು, "ಈ ನಾಡ ಹೆಂಗಸರು ಚಿತ್ತಸ್ಥೈರ್ಯವುಳ್ಳವರು; ಮನಸ್ಸನ್ನು ಹೆರರೆಡೆ ಕಳಿಸರು. ಅರಸನ ಕಟ್ಟಳೆಯೂ ಅದೇ. ಪದ್ಮಾವತಿಯೂ ಆ ಸ್ವಭಾವದವಳೇ. ಅಲ್ಲವಾದರೆ ತನ್ನ ಹೆಂಡತಿ ಬೆಂಕಿಗೆ ಬಿದ್ದಳೆಂಬುದು ತಿಳಿದು ಸೊರಗಿ ಉದಯನನು ಬ್ರಾಹ್ಮಣವೇಷತಾಳಿ ಬಂದನೆಂಬುದನ್ನು ಅರಿತವರು ಹೇಳಲು ಕೇಳಿ ಅವನೆಡೆ ನಮ್ಮ ಅಭಿಪ್ರಾಯವನ್ನು ತಿಳಿಸುವುದು ಗುಣವೆಂದು ತನ್ನ ಅಭಿಪ್ರಾಯವನ್ನು ಹೊರಪಡಿಸಿರಬಹುದು. ಅಲ್ಲವಾದರೆ, ಮಿಗಿಲಾದ ಗಾಂಭೀರ್ಯವುಳ್ಳ ಇವರುಗಳು ಬಂದು ದಾನ ಕೇಳುವುದು ತಕ್ಕದ್ದಲ್ಲವೆಂದು ಒಳ್ಳೆಯ ಅಭಿಪ್ರಾಯದಿಂದಲೇ ನಮ್ಮನ್ನು ನೋಡಿ ಇರಬಹುದು. ಆದ್ದರಿಂದ, ಅವಳೆಡೆ ಬಯಕೆಯನ್ನು ಹೋಗಬಿಡುವುದು ಸರಿಯಲ್ಲ" ಎಂದು ತಡೆದನು. ಉಳಿದ ಗೆಳೆಯರೂ ಆ ಅಭಿಪ್ರಾಯವನ್ನೇ ಎತ್ತಿಹಿಡಿದು ಹೇಳಿದರು.

ಅವಳಿಗೂ ತನಗೂ ಇರುವ ಪ್ರೀತಿಯನ್ನು ಅರಿಯದ ಉಳಿದ ಗೆಳೆಯರನ್ನು ಸಮಾಧಾನಪಡಿಸಲೆಳಸಿ ಉದಯನನು, "ಮಲರು ಮೊದಲಾದುವುಗಳಿಂದ ಮಾಡಿದ ಮಾಲೆಯನ್ನು ಈ ಕೊಳದ ಪಕ್ಕದಲ್ಲಿರುವ ಮರಗೊಂಬೆಯೊಂದರಲ್ಲಿ ಅವಳು ಕಾಣು ವಂತೆ ಕಟ್ಟಿಬಿಟ್ಟು ನಾನು ಮರಸಿಕೊಂಡಿರುತ್ತೇನೆ. ಅವಳು ಆ ಮಾಲೆಯನ್ನು ಕೈಕೊಳ್ಳುವವಳಾದರೆ ನಾನು ಹೇಳಿದ್ದನ್ನು ಸತ್ಯವೆಂದು ತಿಳಿಯಿರಿ" ಎಂದು ಅವರು ಗಳಿಗೆ ಹೇಳಿದನು. ಬಳಿಕ ಅವನು ಹಾಗೆಯೇ ಮಾಲೆಯೊಂದನ್ನು ಕಟ್ಟಿ ತಾನೆಣಿಸಿದ ತೋಪಿನಲ್ಲಿ ಹೊನ್ನೆ, ನಾಳಲು, ವಕುಳ ಮೊದಲಾದ ಮರಗಳ ನೆರವಿಯಲ್ಲಿ ಕೊಂಬೆ ಯೊಂದರಲ್ಲಿ ಅವಳು ಕಾಣುವಂತೆ ಅದನ್ನು ಕಟ್ಟಿಬಿಟ್ಟು, ತಾನು ಅವಳನ್ನು ಮೊದಲು ಕಂಡ ಕಾಮನ ಗುಡಿ ಮೊದಲಾದುವನ್ನೂ ತಮ್ಮಲ್ಲಿ ನಡೆದ ಸಂಗತಿಗಳನ್ನೂ ಹೊರಪಡಿಸುವ ಚಿತ್ರಗಳನ್ನು ಬಾಳೆಸುಳಿಯಲ್ಲಿ ಉಗುರಿನಿಂದ ಗೀರಿ ಬರೆದು ಅವನ್ನು ಅಲ್ಲಿದ್ದ ನಾಳಲು ಮರದ ಕೊಂಬೆಯಲ್ಲಿ ತೊಂಗಿಸಿಬಿಟ್ಟು ತಾನು ಪಕ್ಕದೆಡೆಗೆ ಹೋದನು.

ಪದ್ಮಾವತಿ, ಯಾಪ್ಯಾಯಿನಿಯೊಡನೆ ಹೋಗಿ ಆ ಕೊಳದಲ್ಲಿ ನೀರಾಡಿ ಅಲಂಕರಿಸಿ ಕೊಂಡು ಕರೆಯಲ್ಲಿ ಒಬ್ಬಳೇ ಹೋಗಿ ತೋಪನ್ನು ನೋಡಿದಾಗ ಅಲ್ಲಿ ಉದಯನನು ಕಟ್ಟಿ ನೇಲಿಸಿದ್ದ ಮಾಲೆ ಮೊದಲಾದುವನ್ನು ಕಂಡಳು. ಕಂಡು ಎಳೆನಗು ನಕ್ಕು ಬಂದು ಕೆನ್ನೈದಿಲೆ ಹೂವನ್ನು ಕೈಯಲ್ಲಿ ಹಿಡಿದುಕೊಂಡು ಅದರ ದಂಟಿನಲ್ಲಿ ತನ್ನ ಹೆಸರು ಕೆತ್ತಲ್ಪಟ್ಟ ಉಂಗುರವನ್ನು ಅಡಗಿಸಿಟ್ಟು ಅದನ್ನೂ ಮಾಲೆಯನ್ನೂ ಗಂಧ ವನ್ನೂ ಅವನು ಇಟ್ಟ ಮಾಲೆಯ ಪಕ್ಕದಲ್ಲಿ ಒಂದು ಕಡೆ ಇಟ್ಟಳು. ಬಳಿಕ ಅವನು ಇಟ್ಟ ಮಾಲೆ ಮೊದಲಾದುವನ್ನು ತೆಗೆದುಕೊಂಡು ಬಂದು ಆ ಮಾಲೆಯನ್ನು ತನ್ನ ತಲೆಯಲ್ಲಿ ಮುಡಿದು ಉಳಿದುವನ್ನು ಎದೆಯಲ್ಲಿ ಅಪ್ಪಿಕೊಂಡು ಮಿಗಿಲು ಚೆಲುವು ಪಡೆದು ಬೆಳಗಿ ನಿಂತಳು. ನಿಂತವಳನ್ನು ಅಲ್ಲಿ ಬಂದ ಯಾಪ್ಯಾಯಿನಿ ಕಂಡು, "ನೀನು ಯಾರು? ನಿನ್ನನ್ನು ಹೋಲುವವಳೂ ನನ್ನನಿರ ಗೆಳತಿಯೂ ದರ್ಶಕನ ತಂಗಿಯೂ ಆದ ಪದ್ಮಾವತಿಯನ್ನು ನಾನು ಅಗಲಿದೆನು" ಎಂದಳು. ತನ್ನ ಬೇರ್ಪಾ ಟನ್ನರಿತು ಅವಳು ಕೇಳಿದ್ದಾಗಿ ಪದ್ಮಾವತಿ ನಾಚಿ ಮುಖ ತಗ್ಗಿಸಿಕೊಂಡಳು. ಆ ಮೇಲೆ ಅವರಿಬ್ಬರೂ ತಮ್ಮೆಡೆಗೆ ಹೋದರು.

ಅಲ್ಲಿ ನಡೆದುವನ್ನು, ಮರಸಿಕೊಂಡಿದ್ದ ರುಮಣ್ವಂತನು ಕಂಡು ಉಳಿದ ಗೆಳೆಯರಿಗೆ ಹೇಳಿದನು. ಎಲ್ಲರೂ ಒಂದು ಮನಸ್ಸುಳ್ಳವರಾದರು. ವಸಂತಕ ಹೋಗಿ ಆರೈದು ಪದ್ಮೆ ಉದಯನನಿಗಾಗಿ ಅಲ್ಲಿ ಇಟ್ಟಿದ್ದ ಮಾಲೆ, ಗಂಧ, ನೈದಿಲೆಹೂ, ಮಣಿಯುಂಗುರ— ಇವನ್ನು ಕಂಡು ತೆಗೆದುಕೊಂಡು ಬಂದು ಉದಯನನಿಗೆ ಕೊಟ್ಟನು. ಅವನು ಯೂಗಿ

ಮೊದಲಾದವರನ್ನು ಪಡೆದವನಂತೆ ಸಂತೋಷಪಟ್ಟು ಪದ್ಮಾವತಿ ಬಂದ ಕೋಣದಲ್ಲಿ ಬಂದು ಅವಳಿಟ್ಟ ಗಂಧವನ್ನು ಎದೆಯಲ್ಲೂ ತೋಳಲ್ಲೂ ಪೂಸಿಕೊಂಡು, ಆ ಮಾಲೆಯನ್ನು ಮುಡಿದು, ಉಂಗುರವನ್ನು ಹೆರರರಿತುಕೊಳ್ಳದಂತೆ ತನ್ನ ಬೆರಳಲ್ಲಿ ಸೇರಿಸಿ ನೈದಿಲೆ ಮಲರನ್ನು ಕೈಯಲ್ಲಿ ಹಿಡಿದುಕೊಂಡು ಸ್ವಲ್ಪವೂ ಚಿಂತೆಯೇ ಇಲ್ಲದೆ ಮೊಗ ಪರಳಿ ಹೋಗುವಾಗ, ಮಾಡದ ಮೇಲೆ ನಿಂತ ಪದ್ಮಾವತಿ ಕಂಡು, "ನಾವು ಕಣ್ಣಿನಿಂದ ಕೂಡಿದ ಕೂಟವಲ್ಲದೆ ಮಾಲೆ ಮೊದಲಾದುವುಗಳಿಂದಲೂ ಮೇಳಗೊಂಡವರಾದೆವು. ಮನಸ್ಸೇ, ಕಳವಳಪಡದೆ ಇರು" ಎಂದು ತನ್ನಲ್ಲೆ ಕೆಲವು ಮಾತುಗಳನ್ನು ಆಡಿಕೊಂಡು ತನ್ನೆಡೆಗೆ ಹೋದಳು. ತನ್ನಲ್ಲಿ ಅವಳು ಪ್ರೇಮ ತಳೆದಿರುವಳೆಂದು ಗೆಳೆಯರಿಗೆ ಉದಯನನು ತಿಳಿಸಿಬಿಟ್ಟು ಹೋಗಿ ಚಿಂತೆಯಿಲ್ಲದೆ ಮಲಗಿ ನಿದ್ದೆ ಮಾಡಿದನು.

ಆಗ ಅವನ ಕನಸಿನಲ್ಲಿ ವಾಸವದತ್ತೆ ದೂಳಿಡಿದು ನವೆದು ಬಾಡಿದ ಒಡಲೊಡನೆ ತೋರಿದಳು. ಒಡನೆ ಉದಯನನು,

"ಮಾಸಿರದ ಪತಿವ್ರತದ ವಾಸವದತ್ತೇ!
ಕ್ರೂರಿ ನಾನ್. ನೋವೆಲ್ಲ ತೀರುವೊಲು ಬಂದೆಯಾ!"
(೩, ೧ : ೧೫೮–೬೦)

ಎಂದು ಬಾಯ್‌ತೆರೆದು ಹಲುಬಲು, ವಾಸವದತ್ತೆ "ನೆರೆನಾಡಿಗೆ ನನ್ನನ್ನು ತೊರೆದು ಹೋದೆ. ಪ್ರೀತಿಯುಳ್ಳವರಂತೆ ನುಡಿಯುವ ನುಡಿಗಳನ್ನು ಬಿಟ್ಟುಬಿಡು" ಎಂದು ಹೇಳಿ ಅಗಲಿದಳು. ಅವನು ಹತ್ತಿರ ಹೋಗಿ ನಿನ್ನನ್ನು ಬದುಕಿಸಿ ಕರೆತರುವವನು ಈ ಊರಲ್ಲಿರುವನೆಂಬುದನ್ನು ಕೇಳಿಯೇ ಹಲವು ಮಲೆಗಳನ್ನೂ ಕಾಡುಗಳನ್ನೂ ದಾಟಿ ಇಲ್ಲಿಗೆ ಬಂದೆ. ನೀನು ಕೋಪಿಸಬೇಡ" ಎಂದು ಕೇಳಿಕೊಂಡನು. ಅವಳು "ನೀನು ಪದ್ಮಾವತಿಯೆಡೆಯಲ್ಲಿ ಪ್ರೇಮಗೊಂಡು ಅವಳು ಇಟ್ಟ ಮಾಲೆಯನ್ನೂ ಗಂಧವನ್ನೂ ಇವೊತ್ತು ಅಲಂಕರಿಸಿಕೊಂಡೆಯಲ್ಲವೊ?" ಎಂದು ಹೇಳಿಬಿಟ್ಟು ಮತ್ತೆಯೂ ಹೊರಟುಹೋಗಲು ಅವನು, "ಪದ್ಮಾವತಿಯೆಂಬ ಹೆಸರನ್ನು ಇವತ್ತು ತಾನೆ ನಿನ್ನ ಬಾಯಲ್ಲಿ ಕೇಳಿದೆನು. ಬೇರೆ ಅರಿಯೆನು" ಎಂದು ಮತ್ತೂ ಕೇಳಿಕೊಳ್ಳುವ ಹೊತ್ತಿಗೆ ಅವಳು ಮರೆಯಾದಳು. ಸೂರ್ಯ ಉದಿಸಿದನು.

ಕಣ್‌ತೆರೆದೆದ್ದ ಉದಯನನು ತಾನು ಕಂಡ ಕನಸನ್ನು ಗೆಳೆಯರಿಗೆ ಹೇಳಿದನು. ಅವರುಗಳು, "ವಾಸವದತ್ತೆ ಸಿಟ್ಟುಗೊಂಡಳಾದ್ದರಿಂದ, ಪದ್ಮೆಯ ಮಾಲೆ ಮೊದಲಾದುವನ್ನು ನೀನು ಅಲಂಕರಿಸಿಕೊಂಡದ್ದು ತಪ್ಪಾಗುವುದು. ಇವಳಲ್ಲಿ ಇಟ್ಟ ಕಾಮವನ್ನು ಬಿಟ್ಟು ಕಳೆಯುವವನಾಗು" ಎಂದು ಬಹಳ ತಿಳಿಯ ಹೇಳಿದರೂ

ಅವನು ತನ್ನ ಅಭಿಪ್ರಾಯವನ್ನು ಬಿಡದವನಾಗಿ ಪದ್ಮೆಯನ್ನು ಪಡೆಯುವುದಕ್ಕೆ ಪ್ರಯತ್ನಮಾಡುವವನಾದನು. ಅದನ್ನು ಕಂಡ ಗೆಳೆಯರು, "ಇವನನ್ನು ದರ್ಶಕನಿಗೆ ಸ್ನೇಹಿತನಾಗಿ ಮಾಡುವುದಕ್ಕೆ ಬಂದ ನಮಗೆ ಹೀಗೆ ನಡೆದದ್ದಕ್ಕೆ ಕಾರಣ ಅದೃಷ್ಟ ಕರ್ಮದ ಬಲ" ಎಂದು ಮನಸಲಿದು ಆಲೋಚಿಸುವವರಾದರು. ಆಗ ಉದಯನನು, "ಪದ್ಮೆಯೊಡನೆ ಮಾಡದಲ್ಲಿ ಹೊಕ್ಕು ಅವಳೊಡನೆ ಇರೆನಾದರೆ ನನ್ನ ಮನಸ್ಸು ಕಲಕಿಯೇ ಇರುವುದು" ಎಂದು ತನ್ನ ಕೊರತೆಯನ್ನು ತಿಳಿಸಿದನು. ಗೆಳೆಯರು "ಅವಳ ಮಾಡದಲ್ಲಿ ನೀನು ಹೊಗುವೆಯಾದರೆ ಉಂಟಾಗುವ ಕೇಡುಗಳು ಇಂಥವು" ಎಂಬುದನ್ನು ಹೇಳಿ ತಡೆಯಲು, ಉದಯನನು ಒಡಂಬಡದವನಾಗಿ ಒಂದು ದಿನ ಗೆಳೆಯರನ್ನಗಲಿ ಮುದುಕನ ವೇಷ ತಾಳಿ ದಾನ ತೆಗೆದುಕೊಳ್ಳಲು ಹೋಗುವವರೊಡನೆ ಹೋಗಿ ಕಾಮನ ದೇವಸ್ಥಾನದೊಳಗಿರುವ ಕಲ್ಯಾಣಮಂಟಪದಲ್ಲಿ ಒಬ್ಬರೂ ಅರಿಯದಂತೆ ಅಡಗಿಕೊಂಡಿದ್ದನು.

ಇರುವಲ್ಲಿ ಪದ್ಮಾವತಿ ಒಂಟಿಯಾಗಿ ಆ ಮಂಟಪದ ಒಳ ಎಡೆಯನ್ನು ಸೇರಿದಳು. ಸೇರಿದಾಗ ಉದಯನನು ತನ್ನ ಎಳವೆ ವೇಷದೊಡನೆ ಎದುರಿಗೆ ನಿಂತನು. ನಿಂತವನನ್ನು ಅವಳು ಮನಬೆಚ್ಚಿ ಕಂಡು ನಾಚಿ ಬಳ್ಳಿಯಂತೆ ಹೊಯ್ದಾಡಿ ಹದುಗಿ ಒಂದು ಪಕ್ಕದಲ್ಲಿ ನಿಂತಳು. ಅವನು ಕೊಂಡಾಡಿ, ". . ಮುಟ್ಟದಿದ್ದರೆ ನಾನು ಬದಕಲಾರೆ; ಕೃಪೆಮಾಡು" ಎಂದು ಬೇಡಿದನು, ಆಗ ಆ ಇಬ್ಬರಿಗೂ ಗಾಂಧರ್ವವಿವಾಹ ನಡೆಯಿತು. ಆ ಮೇಲೆ ಅವಳು ಹೊರಗೆ ಹೋಗಿ ಗೆಳತಿಯರೊಡನೆ ವಾಹನವನ್ನೇರಿ ತನ್ನ ಮಾಡಕ್ಕೆ ಹೋದಳು. ಅವಳು ಹೋದ ಬಳಿಕ ಹೆರರರಿಯದಂತೆ ಹೊರಹೋದ ಉದಯನನು ಒಂದು ದಿನ ಬೇರೆ ವೇಷದಿಂದ ದರ್ಶಕನ ಅರಮನೆಯ ಬಾಗಿಲಿಗೆ ಹೋಗಿ ಅಲ್ಲಿದ್ದ ಪೇರರಿವಿನವನೊಬ್ಬನನ್ನು ಕಂಡು, "ದರ್ಶಕರಾಜನಿಗೆ ಯಾವ ವಿದ್ಯೆಯಲ್ಲಿ ಪ್ರೀತಿಯುಂಟು?" ಎಂದು ಕೇಳಲು ಅವನು, "ತನ್ನ ತಂದೆ ಸಂಪಾದಿಸಿದ ದೊಡ್ಡ ಸಂಪತ್ತು ಇಡಲ್ಪಟ್ಟಿರುವ ಎಡೆ ತಿಳಿಯದಿರುವುದರಿಂದ ದರ್ಶಕನು ಚಿಂತೆಗೊಂಡು ಸಂಕಟಪಡುತ್ತಿರುವನು. ಅದನ್ನರಿತು ಹೇಳುವವರಿಗೆ ಅವನು ತನ್ನ ಪ್ರಾಣವನ್ನೂ ಕೊಡುತ್ತಾನೆ" ಎಂದು ಹೇಳಿದನು. ಹೇಳಲು, "ಹೂಳು ನಿಧಿಗಳನ್ನು ಕೀಳುವ ವಿದ್ಯೆಯಲ್ಲೂ ಕೆಳನೀರುಗಳನ್ನರಿಯುವ ಶಾಸ್ತ್ರಗಳಲ್ಲಿಯೂ ಉಳಿದ ಶಾಸ್ತ್ರಗಳಲ್ಲಿಯೂ ನಾನು ಒಳ್ಳೆಯ ಪರಿಶ್ರಮವುಳ್ಳವನು. ಅರಸನನ್ನು ನೋಡುವುದರಲ್ಲಿ ನನಗೆ ಅಪೇಕ್ಷೆ ಬಹಳವಾಗಿದೆ" ಎಂದು ಉದಯನನು ಹೇಳಲು, ಆ ಮುದುಕನು ಹೋಗಿ, "ಹೂಳು ನಿಧಿ ತೆಗೆಯುವುದು, ಮೊದಲಾದ ವಿದ್ಯೆಗಳಲ್ಲಿ ಶ್ರೇಷ್ಠವಾದ ಪರಿಶ್ರಮವುಳ್ಳ ಒಬ್ಬರು ನಿಮ್ಮನ್ನು ಕಾಣುವುದಕ್ಕೆ ಅಪೇಕ್ಷೆಪಟ್ಟು ಬಾಗಿಲಲ್ಲಿ ಬಂದು ಕಾದುಕೊಂಡಿದ್ದಾರೆ"

ಎಂದು ದರ್ಶಕನ ಬಳಿ ತಿಳಿಸಿದನು. ಒಡನೆ ದರ್ಶಕನು, "ಕಲ್ತವರನ್ನು ಕಾಣುವುದು ಅರಸಾಳ್ಕೆಯಿಂದಾಗುವ ಫಲ" ಎಂದು ಹೇಳಿ, ಅವನನ್ನು ಕರೆದು ಬರುವಂತೆ ಮಾಡಿ ತನಿಯಾಗಿ ಹೋಗಿ ಒಂದು ಪೀಠದಲ್ಲಿ ಕೂರಿಸಿ ಕಲ್ತ ವಿದ್ಯೆಗಳನ್ನೆಲ್ಲ ಕೇಳಿ ತಿಳಿದು, "ನನ್ನ ತಂದೆ ಹೂಳಿಟ್ಟ ಪುರುಳುಗಳನ್ನು ನಾನರಿಯುವಂತೆ ಮಾಡಬೇಕು" ಎಂದು ತಿಳಿಸಲು ಉದಯನನು ತಾನು ಹುದಿದಿಟ್ಟ ಪುರುಳುಗಳುಳ್ಳ ಎಡೆಯನ್ನು ತೋರಿಸುವವನ ಹಾಗೆಯೇ ಅವನಿಗೆ ಆ ಎಡೆಯನ್ನು ತೋರಿಸಿದನು.

ಅವನ್ನು ಕಂಡು ಅರಸನು ಬಹಳ ಆಶ್ಚರ್ಯಪಟ್ಟು, "ಇವನು ಪಡೆಯಲರಿದಾದವನು. ಯಾವುದನ್ನು ಬಯಸಿದರೂ ಅದನ್ನು ಇವನಿಗೆ ಕೊಡುವುದಕ್ಕೆ ನಾನು ಕರ್ತವ್ಯವುಳ್ಳವನಾಗಿದ್ದೇನೆ" ಎಂದು ಹೇಳಿ ಬಳಿಕ, "ಈ ಅರಣ್ಮನೆಯಲ್ಲಿಯೂ ಇದರ ಪಕ್ಕದಲ್ಲಿರುವ ಎಡೆಗಳಲ್ಲಿಯೂ ಒಳ್ಳೆಯ ನೀರು ಇರುವುದಾದರೆ ಅದನ್ನೂ ತೋರಿಸಬೇಕು" ಎಂದು ಕೇಳಲು ಉದಯನನು ಹಾಗೆಯೇ ನೀರ್-ನೆಲೆಗಳನ್ನು ಅರಿಯುವುದಕ್ಕೆ ತಕ್ಕ ಲಕ್ಷಣಗಳನ್ನು ಕ್ರಮವಾಗಿ ತಿಳಿಸಿದ್ದಲ್ಲದೆ ಒಳ್ಳೆಯ ನೀರುಳ್ಳ ಎಡೆಯನ್ನು ಅಗೆಯಿಸಿ ತೋರಿಸಿ ಸಂತೋಷಪಡಿಸಲು, ದರ್ಶಕನು ಸಂತೋಷಿಸಿ ಅವನನ್ನು ಅರಣ್ಮನೆಯ ಒಳಗೇ ಇರುವಂತೆ ಹೇಳಿ ಹೊನ್ನರೆಯ (ಭಂಡಾರದ) ಕಾವಲುಗಾರರಾಗಿರುವ ಲೆಕ್ಕ ಕೆಲಸಗಾರರನ್ನು ಅವನೊಡನಿದ್ದು ಕಾವುಕಾಯುವಂತೆ ಕಟ್ಟಳೆ ಮಾಡಿದನು.

ಉದಯನನು ಅಲ್ಲಿರುವವನ ಹಾಗೆಯೇ ತನ್ನನ್ನು ತೋರಿಸಿಕೊಂಡು ಹೇರರರಿಯದಂತೆ ತಕ್ಕ ಕಾಲದಲ್ಲಿ ಹೋಗಿ ಕಾಮನ ಗುಡಿಯಲ್ಲಿರುವ ಕಲ್ಯಾಣಮಂಟಪದಲ್ಲಿ ಇದ್ದು ಬರುವವನಾದನು. ಅದನ್ನರಿತ ರುಮಣ್ವಂತ ಬೇರೆ ರೂಪುಗೊಂಡು ಹೋಗಿ ಅರಸನ ಬಳಿ ಒಂದು ಕೆಲಸವನ್ನು ಪಡೆದುಕೊಂಡು ಅದನ್ನು ಚೆನ್ನಾಗಿ ಮಾಡುವವನಾಗಿ ಅರಣ್ಮನೆಯಲ್ಲಿಯೆ ಇದ್ದು ಅವನನ್ನು ಕಾವು ಕಾದುಕೊಂಡು ಬರುವವನಾದನು. ಅದೇ ರೀತಿ ಇಶ್ಯೆಚ್ಚನೂ ವಸಂತಕನೂ ಅವನನ್ನು ಕಾವುಕಾಯುವುದಕ್ಕಾಗಿ ಬೇರೆ ರೂಪುಗೊಂಡು ಧರ್ಮಗ್ರಂಥ ಮೊದಲಾದುವನ್ನು ಪದ್ಮೆಯ ತಾಯಿಗೆ ಹೇಳುವವರಾಗಿಯೂ ಕಂಡವರು ವಿಸ್ಮಯಪಡುವಂತೆ ಮಲರುಗಳನ್ನು ಹಲವುಬಗೆಯ ಮಾಲೆಗಳಾಗಿ ಕಟ್ಟಿಯೂ ಕಟ್ಟಿಸಿಯೂ ಪದ್ಮೆಗೆ ಕಳಿಸುವವರಾಗಿಯೂ ಅಲ್ಲಿ ಇದ್ದರು. ಒಡನೆ ಬಂದ ಮಿಕ್ಕ ವೀರರುಗಳೂ ಬೇರೆ ರೂಪುಗೊಂಡು ತಂತಮಗೆ ತಕ್ಕ ಕೆಲಸಗಳನ್ನು ಮಾಡುವವರಾಗಿ ಸಮೀಪವಾದ ಬೇರೆಬೇರೆ ಎಡೆಗಳಲ್ಲಿ ತಂಗಿದರು.

ಹೀಗಿರುವಲ್ಲಿ, ಪದ್ಮೆ ಉದಯನನನ್ನು ತನ್ನೊಡನೆ ಕನ್ನೆಮಾಡಕ್ಕೆ ಹೇರರರಿಯದಂತೆ ಕರೆದುಕೊಂಡು ಹೋಗಬೇಕೆಂದು ನೆನೆದು ಅದಕ್ಕೆ ತಕ್ಕ ಉಪಾಯವೊಂದನ್ನು

ಆರೈದು "ಹಲವು ಬಗೆಯ ದಾನಗಳನ್ನು ಮಾಡುವುದಕ್ಕೆ ನಿಶ್ಚಯಿಸಿರುವೆನು" ಎಂದು ಹೇಳಿ ಅದನ್ನು ಹಲವರು ಅರಿಯುವಂತೆ ಮಾಡಿದಳು. ಮಾಡಿದ ಬಳಿಕ ಶಿಬಿಕೆಯನ್ನು ಬರಿಸಿ ಅದರಲ್ಲೇರಿ ಹೋಗಿ ಕಾಮನ ಗುಡಿಯ ಬಾಗಿಲಲ್ಲಿ ಇಳಿದು ತಾನಿರುವ ಕೋಣೆಯ ಬಾಗಿಲಲ್ಲಿ ಶಿಬಿಕೆಯನ್ನು ಇಡುವಂತೆ ಕಟ್ಟಳೆ ಮಾಡಿಬಿಟ್ಟು ಒಂಟಿಯಾಗಿ ಕೋಣೆಯಲ್ಲಿ ಹೋಗಿ ಅಲ್ಲಿ ಒಂದುಕಡೆ ಹದುಗಿದ್ದ ಉದಯನನನ್ನು ಕಂಡು ಸಂತೋಷಿಸಿ ಅವನೊಡನೆ ಅಲ್ಲಿ ಕಾಲಕಳೆದಳು. ಬಳಿಕ ತನ್ನ ನೋಂಪಿಯ ದಿನಗಳ ಕೊನೆಯ ದಿನ ಅಂದಾದ್ದರಿಂದ ಬಂದ ಎಲ್ಲರಿಗೂ ಮಣಿ, ಮುತ್ತು, ಹವಳ, ಹೊನ್ನು, ಒಡವೆ, ಉಡುಗೆ, ಒಳ್ಳೆಯ ಉಣವು, ಹೂವು, ಕಸ್ತೂರಿ, ಪೂಸುವ ಗಂಧ, ಯಾವಯಾವನ್ನು (ಯಾರುಯಾರು ಬಯಸುವರೊ) ಅವವನ್ನು ಅವರವರು ಕೇಳದೆ ಇದ್ದರೂ ಕೊಡಿಸಿ ಅವರುಗಳ ಆಶೀರ್ವಾದಗಳನ್ನು ಪಡೆದು ಅವರನ್ನು ಅವಳು ಕಳಿಸಿದಳು. ಆಮೇಲೆ ಕಾಮನ ಕೋಯಿಲಿನಲ್ಲಿ ಮಣಿಬೆಳಕು ಎತ್ತಿ ಹೆಂಗಸರು ಹಾಡಿದರು. ಆಗ ಉಸಿರ ಗೆಳತಿಯಾದ ಯಾಪ್ಯಾಯಿನಿ ಅವಳ ಕುರುಹರಿತು ಬಂದು ಅಲ್ಲಿ ನಿಂತವರನ್ನು ನೋಡಿ, "ಎಮ್ಮೊಡತಿ ಇಂದು ಉಪವಾಸವಿದ್ದಾಳೆ. ಜನರ ಗುಂಪಿನಿಂದ ಸೆಕೆಯಾಗಿ ನೋಯುತ್ತಿರುವಳು. ನೀವೆಲ್ಲರೂ ಹೊರಕ್ಕೆ ಹೋಗಿ" ಎಂದು ಹೇಳಲು ಎಲ್ಲರೂ ಒಡನೆಯೆ ಹೊರಕ್ಕೆ ಹೋದರು.

ಉದಯನನು ಮರಸಿಕೊಂಡು ಬಂದು ತೆರೆಮುಚ್ಚಿದ ಸಿವಿಗೆಯಲ್ಲಿ ತಂಗಿದನು. ಪದ್ಮೆಯೂ ಹೋಗಿ ಅದರಲ್ಲಿ ತಂಗಿದಳು. ಆಗ ಸೆಳೆದೆರೆಯನ್ನು ಹರಡಿ ಆ ಸಿವಿಗೆಯನ್ನು ಮರೆಮಾಡಿದರು. ಕಾವಲಾಳುಗಳು "ಈ ಸಿವಿಗೆಯನ್ನು ಕನ್ನೆವಾಡದಲ್ಲಿರುವ ಸೆಜ್ಜೆ ಮನೆಯೊಳಗೆ ತೆಗೆದುಕೊಂಡು ಹೋಗಿ ಇಡಿ" ಎಂದು ಹೇಳುತ್ತಾ ಹಿಂದೆ ಹೋದರು. ಯಾರೂ ಹತ್ತಿರ ಸುಳಿಯದಂತೆ ಕಡುಕಾವಲಿನವರಾದ ಕೆಲಸದಾಳುಗಳು ಅಟ್ಟುತ್ತಾ ಪಕ್ಕದಲ್ಲಿ ಹೋದರು. ಹೊರನಗರದಲ್ಲಿರುವ ತೋಪೂ ಬಾವಿಯೂ ಕಾಮನಗುಡಿಯೂ ಹೂಬಿದ್ದ ಬಳ್ಳಿಯಂತೆ ಅಂದಗೆಡುವ ಹಾಗೆ ಒಳನಗರಕ್ಕೆ ಹೋಗಿ ಹಲವು ಬೀದಿಗಳನ್ನು ದಾಟಿ ಅರಮನೆಯೊಳಗೆ ಹೋಗಿ ಕನ್ನೆವಾಡವನ್ನು ಹೊಕ್ಕು ಮಲ್ಲರು ಒಳಗೆ ಹೋಗಿ ಶಿಬಿಕೆಯನ್ನು ಇಟ್ಟರು.

ಆಗ ಪದ್ಮೆ, "ನನಗೆ ಬಹಳ ಸೆಕೆಯಾಗಿದೆ. ಎಲ್ಲರೂ ಹೋಗಿ" ಎಂದು ಕಟ್ಟಳೆಮಾಡಲು, ಅಲ್ಲಿ ದಟ್ಟಯಿಸಿ ನಿಂತ ಎಲ್ಲರೂ ಹೊರಕ್ಕೆ ಹೋದರು. ಒಡನೆ ತೆರೆಯನ್ನು ಓಸರಿಸಿ ಪದ್ಮೆ ತನ್ನ ಮಲಗುವ ಕೋಣೆಯಲ್ಲಿ ಹೋಗಿ ಅಲ್ಲಿದ್ದಳು. ಯಾಪ್ಯಾಯಿನಿ ಸೆಜ್ಜೆವನೆಯ ನಾಲ್ಕು ಕಡೆಯೂ ಹೋಗಿ ಪರೀಕ್ಷಿಸಿ ಯಾರೂ ಇಲ್ಲವೆಂಬುದನ್ನು ಹೇಳಿದ ಬಳಿಕ, ಉದಯನನು ಹೆರರರಿಯದಂತೆ ಹೋಗಿ ಅಲ್ಲಿ

ತಂಗಿ ಬಹಳ ಸಂತೋಷವುಳ್ಳವನಾದನು. "ಯಾರೇ ಆದರೂ ಸಮಯ ಅರಿಯದೆ ಇಲ್ಲಿ ಬರಲಾಗದು" ಎಂಬುದನ್ನು ಪದ್ಮೆ ಗೆಳತಿಯರಿಗೆ ತಿಳಿಸಿದ್ದಲ್ಲದೆ, "ವೀಣೆಯನ್ನೂ ಹಾಡನ್ನೂ ಇನ್ನು ಚೆನ್ನಾಗಿ ಅಭ್ಯಾಸಮಾಡುವ ಮನಸ್ಸುಳ್ಳವಳಾಗಿರುವುದರಿಂದ ನನಗೆ ಬೇಕಾದ ಉಣವು ಮೊದಲಾದವು ಇಲ್ಲಿಗೇ ಬರುವುವಾಗಲಿ" ಎಂದೂ ಕಟ್ಟಳೆಮಾಡಿದಳು. ಅದೇ ರೀತಿಯಲ್ಲೆ ಅವು ಬರುವುವಾದವು. ಆ ಮೇಲೆ ಅವಳು ಏಳ್ನೆಲೆಯ ಮಾಡದಲ್ಲಿ ಎತ್ತರದಲ್ಲಿರುವ ಕೋಣೆಯಲ್ಲಿ ಹೋಗಿ ಅಲ್ಲಿದ್ದ ಪೀಠದ ಮೇಲೆ ಉದಯನನೊಡನೆ ಕುಳಿತು ಸಲ್ಲಾಪಮಾಡಿ ಸಂತೋಷ ಹೊಂದಿದ್ದಳು.

ಇರುವ ಕಾಲದಲ್ಲಿ ಉದಯನನು ಒಂದು ದಿನ ನಾಲ್ಕು ಕಡೆಗಳಲ್ಲೂ ಇದ್ದ ಸೂಕ್ಷ್ಮವಾದ ಶಿಲ್ಪ ಕೆಲಸಗಳನ್ನು ನೋಡಿ ನೋಡಿ ವಿಸ್ಮಯಪಟ್ಟನು. ಪದ್ಮಾವತಿ ಅವನು ತನ್ನನ್ನು ನೋಡದಂತೆ ಬೇರೆಡೆಯಲ್ಲಿ ಮನಸ್ಸನ್ನು ಬಿಡುತ್ತಲೇ ಇರುವುದನ್ನು ಅರಿತು ಮುನಿದು ಕಡುನುಡಿಗಳನ್ನು ನುಡಿದು ಮೈಬೆವರಿ ಕಣ್ಣೀರುಕ್ಕಲು ತನ್ನ ಒಡವೆಗಳನ್ನೂ ಮಾಲೆಗಳನ್ನೂ ತೆಗೆದೆಸೆದುಬಿಟ್ಟು ಮನಕಲಕಿದವಳಾದಳು. ಅದನ್ನರಿತ ಉದಯನನು, "ಹೆಣ್ಣೇ, ನಾನು ಯಾವುದೊಂದು ತಪ್ಪನ್ನೂ ಮಾಡಿಲ್ಲ. ನೆನೆದೂ ಇಲ್ಲ. ಸಂಕಟಪಡಬೇಡ. ತಾಳಿಕೋ" ಎಂದು ಹಲವು ಬಗೆಯಲ್ಲಿ ಬೇಡಿ ಅವಳ ಬೆನ್ನು ಸವರಿ, ಓಲೆಯನ್ನು ಕಿವಿಯಲ್ಲಿ ಅಲಂಕರಿಸಿ, ಉಳಿದ ಆಭರಣಗಳನ್ನೂ ತಿದ್ದಿ, ಒಳ್ಮೆಯನ್ನು ಕೊಂಡಾಡಿ, ಚಂದನವನ್ನು ಪೂಸಿ, ತಬ್ಬುವುದಕ್ಕೆ ಸಮೀಪಿಸಿದಾಗ ಅವಳು, "ನನ್ನನ್ನು ಮುಟ್ಟಬೇಡ" ಎಂದು ಸಿಟ್ಟುಗೊಂಡು ನುಡಿದು ಬೇರೆಡೆಗೆ ಹೋಗಲು ಹೊರಟಳು. ಆಗ ಪಕ್ಕದಲ್ಲಿದ್ದ ಹೂವಿನ ತೋಪಿನ ಕೊಂಬೆಯಲ್ಲಿದ್ದ ಗೂಬೆಯೊಂದು ಬಂದು ಆ ಮಾಡದ ಮೇಲುಳ್ಳ ಶೂಲದ ಮೇಲೇರಿ ಕೂತು ಕೇಳುವವರು ಅಂಜುವಂತೆ ಕೂಗಿತು. ಒಡನೆ ಪದ್ಮೆ ನಡುಕ ಉಂಟಾಗಿ ಓಡಿಬಂದು ಉದಯನನನ್ನು ತಬ್ಬಿಕೊಂಡಳು. ಉದಯನನು ಅವಳ ಭಯದವ್ಪುಗೆಯನ್ನು ಬಹುಮೆಚ್ಚಿ, "ಅಂಜಬೇಡ" ಎಂದು ಹೇಳಿ ಗೂಗೆಯ ಸಹಾಯವನ್ನು ಮನಸ್ಸಿನಲ್ಲೆ ಕೊಂಡಾಡಿ ಅವಳನ್ನು ತಬ್ಬಿ ರಮಿಸಿಯೂ "ಅಮರರಾಗಿಸಿದ ಅಮೃತವೇ!" ಎಂದು ಹೊಗಳಿಯೂ ನಡೆಯುವವನಾದನು.

ಹೀಗೆ ನಡೆಯುವ ಕಾಲದಲ್ಲಿ ಒಂದು ದಿನ ಪದ್ಮೆ ಗೆಳತಿಯನ್ನು ಕರೆದು, "ಇವನು ಕಲಿತ ವಿದ್ಯೆಗಳನ್ನು ನಾವು ಆರೈದು ಅರಿಯಬೇಕು" ಎಂದು ಹೇಳಲು, ಗೆಳತಿ ಅವನನ್ನು ಕೇಳಿದಳು. ಕೇಳಲು ಅವನು "ಬೇಳ್ವೆಗೆ ಬೇಕಾದ ವಿದ್ಯೆಗಳೆಲ್ಲವುಗಳಲ್ಲಿಯೂ ಬಲ್ಲವನಾಗಿದ್ದೇನೆ. ನನ್ನ ಹೆಂಡತಿ ಅಪೇಕ್ಷಿಸಿದಾಗ 'ಕೊಡಮೃದಂಗ' ಎಂಬ ವಾದ್ಯ

ವನ್ನು ಅಭ್ಯಾಸಮಾಡಿಸಿದೆನು" ಎಂದನು. "ಅದರಲ್ಲಿ ಬಲ್ಲಿದನಾದ ಈ ಬ್ರಾಹ್ಮಣನು ರಾಗದಲ್ಲಿಯೂ ಬಲ್ಲಿದನಾಗಿ ಇರಬಹುದು. ಇವನು ರಸಜ್ಞ" ಎಂದು ಹೇಳಿ ಪದ್ಮೆ ನಕ್ಕು ತನ್ನ ವೀಣೆಯನ್ನು ತರಿಸಿ ತಾನು ಬಾಜಿಸಲಾರದವಳಾಗಿ "ಇದನ್ನು ಇವನಿಗೆ ಕೊಡು" ಎಂದು ಗೆಳತಿಗೆ ಸನ್ನೆಯಿಂದ ತಿಳಿಸಿದಳು. ಅವಳು ಅದೇ ರೀತಿ ಹೋಗಿ ಅದನ್ನು ಅವನಿಗೆ ಕೊಟ್ಟು "ಇದನ್ನು ಸರಿಮಾಡಿ ಕೊಡಿ" ಎಂದಳು. ಅವನು, "ನಮ್ಮ ಕುಲಕ್ಕೆ ಹೊಂದದ ಇದನ್ನು ಬಾಜಿಸುವಂತೆ ನನ್ನನ್ನು ಪೀಡಿಸದೆ ಬಿಟ್ಟು ಬಿಡಿ. ವೀಣೆವಿದ್ಯೆಯನ್ನು ಇನ್ನು ಕಲಿಯುವುದಕ್ಕೆ ಅಪೇಕ್ಷಿಸಿದ್ದೇನೆ" ಎಂದನು. ಅವಳು "ನರಗಳನ್ನು ಬಿಗಿದು ಕಟ್ಟಿ ಸ್ಥಾನದಲ್ಲಿ ಇರಿಸುವುದನ್ನೇ ಬಯಸಿದೆವು" ಎಂದಳು. ಅವನು, "ಹಾಗಾದರೆ ಒಂದು ರೀತಿಯಲ್ಲಿ ನೋಡುತ್ತೇನೆ; ಅದನ್ನು ಕೊಡು" ಎಂದು ಹೇಳಿ ತೆಗೆದುಕೊಂಡು ನರಗಳನ್ನು ಕಟ್ಟಿರುವ ಕಿವಿಗಳನ್ನು ಬಿಗಿಮಾಡಿ ನೋಡಿ, ಅದು ಸತ್ತ ಮರದಿಂದ ಮಾಡಿದ್ದೆಂಬುದನ್ನೂ ಬೇರೆ ಲಕ್ಷಣ ಗಳನ್ನೂ ಹೇಳಿದನು. ಕೇಳಿದ ಪದ್ಮೆ, "ಇವನು ವೀಣೆವಿದ್ಯೆಯನ್ನು ಬಲ್ಲವನಂತೆ ಕಾಣು ತ್ತಾನೆ. ಅದನ್ನು ಚೆನ್ನಾಗಿ ತಿಳಿದುಕೊಂಡು ಬಾಜಿಸುವಂತೆ ಮಾಡುವವಳಾಗು" ಎಂದು ಗೆಳತಿಗೆ ಹೇಳಿದಳು. ಅವಳು ಬಂದು ಬೇಡುವುದನ್ನು ಅರಿತ ಉದಯನನು "ಇವಳಿಗೆ ಅರಿವು ಹಿರಿದು" ಎಂದು ಎಣಿಸಿ, "ನಾನು ಇದರಲ್ಲಿ ಬಲ್ಲವನಲ್ಲ" ಎಂದನು. ಪದ್ಮೆ, "ಒಂದು ಮನವುಳ್ಳವರಿಗೆ ತಿಳಿಸಬಾರದ ಕಾರ್ಯ ಒಂದೂ ಇಲ್ಲ. ಕಾಮಮೋಹ ಗೊಂಡಿರುವ ನಮ್ಮನ್ನು ವಂಚಿಸುವುದು ಧರ್ಮವಲ್ಲ. ನಿರಾಕರಿಸದೆ ಕರುಣಿಸಬೇಕು" ಎಂದಳು. ಆಗ ಸೂರ್ಯ ಅಸ್ತಮಿಸಿದನು. ಅರಳಿದ ಮೊಲ್ಲೆಹೂವಿನ ಕಂಪಿನೊಡನೆ ತೆಂಗಾಳಿ ಕಿಟಕಿಯೊಳಕ್ಕೆ ಬಂದು ಸುಳಿಯಿತು.

ಉದಯನನು ತನ್ನ ವೀಣೆಯಾದ ಘೋಷವತಿಯನ್ನು ನೆನೆದು ಸಂಕಟಪಟ್ಟು ಬಳಿಕ ಆ ವೀಣೆಯನ್ನು ಮುಟ್ಟಿ ಬಾಜಿಸಿದನು. ಅವನ ಕೊರಳಿಂಪಿಗೂ ವೀಣೆ ಯುಲಿಗೂ ಬೇರ್ಪಾಡು ತೋರಲಿಲ್ಲ.

ಕಿವಿಸವಿಯ ಅಮೃತ ಬಾಜಿಸಲು ಮರುಳಾಗಿ ಮೇ-
ಲುಪ್ಪರಿಗೆಯಲಿ ತೊದಲುನುಡಿಯ ಚೆಲುಪಾರಿವಂ,
ಆಟವಾಡುವ ಪಯಿರು, ಅಂಚೆ, ಗಿಳಿ, ಮೊದಲಾದ
ಬಗೆಬಗೆಯ ಹಲವು ಹಕ್ಕಿಗಳೆಲ್ಲ ಹಾರದೆಯೆ
ಆಡುರೆಕ್ಕೆಯ ಮೆಲ್ಲನುಡುಗಿಸುತ ಮೈಮರೆಯೆ;
ಕೊಯ್‌ಮಲರ ತೋಟದಲಿ ಕುರಿಂಜಿ ಮೊದಲಾದ
ಹಲಬಗೆಯ ಮರವೆಲ್ಲ ಮಣಿಮಣಿದು ಬಾಗುತಿರೆ;

ಕಾಡಿಗೆ ಮಲರ್ಗಣ್ಣಿ ನಲವೇರಿ ಮೈಮರೆಯೆ;
ಹೆರರಿಗದು ಕೇಳಿಸಲು ತೊಂದರೆಯ ತಹುದು. . . .

(೩, ೪ : ೨೭೭–೬೫)

ಎಂದು ಎಣಿಸಿ ಪದ್ಮೆ, "ವೀಣೆವಿದ್ಯೆಯಲ್ಲಿ ಶ್ರೇಷ್ಠನಾದವನು ಕಾಮ; ಅವನಾದ ಮೇಲೆ ತುಂಬುರು; ಅವನಾದ ಮೇಲೆ ಉದಯನ ಶ್ರೇಷ್ಠನಾದವನೆಂದು ಹೇಳುತ್ತಾರೆ. ಅವನಿಗಿಂತ ಈ ಬ್ರಾಹ್ಮಣ ಶ್ರೇಷ್ಠನಾಗಿರುವನು" ಎಂದು ನೆನೆದು ಮನ ಹಿಡಿಸಲಾರದಷ್ಟು ಸಂತೋಷವುಳ್ಳವಳಾಗಿ ಅವನನ್ನು ಹಿರಿದಾಗಿ ಶುಶ್ರೂಷೆ ಮಾಡುವಳಾಗಿ ಪಕ್ವವಾದ ಹಿರಿಯ ಕಾಮವನ್ನು ಕಳವಿನಿಂದ ಅನುಭವಿಸಿಕೊಂಡು ಬರುವವಳಾದಳು.

ಆ ದಿನಗಳಲ್ಲಿ ಒಂದು ದಿನ ಪದ್ಮೆಯ ಗೆಳತಿ ಉದಯನನನ್ನು ಕುರಿತು, "ವೇದ ಕಾಪಾಡುವವನೇ, ಕೇಳುವವನಾಗು. ಬ್ರಹ್ಮದೇವನು ಕಕ್ಕೆಕಾಯನ್ನು ದೊಡ್ಡದು ಮಾಡಿಯೂ ಹೆಸರಿನ ಕಾಯನ್ನು ಚಿಕ್ಕದುಮಾಡಿಯೂ, ಕಬ್ಬನ್ನು ಗಿಡ್ಡಮಾಡಿಯೂ ಬಿದಿರನ್ನು ಬಹಳ ನಿಡಿದುಮಾಡಿಯೂ ಹೊಂದಿಕೆಯಿಲ್ಲದವಾಗಿ ಮಾಡಿದನು. ಅದರ ಹಾಗೆ ಆನೆಯನ್ನು ಬಗ್ಗಿಸುವ ವೀಣೆಯಲ್ಲಿ ಬಲ್ಲಿದನಾದ ಉದಯನನಿಗಿಂತಲೂ ಮಿಗಿಲಾದ ನಿನ್ನ ರೀತಿಯನ್ನು ಮೊದಲು ಅರಿಯದವರಾದೆವು. ಇನ್ನು ನಿನ್ನ ಶಿಷ್ಯೆಯರಾಗುವೆವು" ಎಂದು ಹೇಳಿ, "ಇದನ್ನು ಸರಿಮಾಡಿಕೊಡಬೇಕು" ಎಂದು ವೀಣೆಯೊಂದನ್ನು ಅವನ ಕೈಯಲ್ಲಿ ಕೊಟ್ಟಳು. ಅವನು, "ಇದು ಕೆಟ್ಟುಹೋದ ಮರದಿಂದ ಮಾಡಿದ್ದು; ಬಾಜಿಸುವುದಕ್ಕೆ ಒದಗದ್ದು" ಎಂದು ಅದನ್ನು ಕೆಳಗೆ ಇಟ್ಟುಬಿಟ್ಟನು. ಬಳಿಕ ದರ್ಶಕನು ಪದ್ಮೆಗೆ ಪ್ರೀತಿಯಿಂದ ಕೊಟ್ಟ ವೀಣೆಯನ್ನು ಅವಳು ಕೊಡಲು, ಅವನು, "ಈ ವೀಣೆ ಸ್ವಲ್ಪವೂ ದೋಷವಿಲ್ಲದ್ದೇ. ಆದರೂ ಇದರಲ್ಲುಳ್ಳ ನರಗಳು ಮಾತ್ರ ಬಹಳ ದೋಷವುಳ್ಳವು. ಬೇರೆ ನರಗಳಿದ್ದರೆ ಅವನ್ನು ತನ್ನಿ" ಎಂದನು. ಅವಳು ಅದೇ ರೀತಿ ಬೇರೆ ನರಗಳನ್ನು ತರಿಸಿ ಕೊಡಲು, ಅವನು, "ಇಂಥ ಇಂಥ ಕಾರಣದಿಂದ ಇವುಗಳೂ ದೋಷವುಳ್ಳವು" ಎಂದು ನಿರಾಕರಿಸಿದನು. ಮತ್ತೂ ಅವಳು ಬೇರೆ ಹೊಸ ನರಗಳನ್ನು ತರಿಸಿಕೊಡಲು ಅವನು, "ಇವುಗಳೂ ದೋಷವುಳ್ಳವೇ" ಎಂದನು. ಅವಳು, "ದೋಷಗಳನ್ನು ಚೆನ್ನಾಗಿ ತಿಳಿಯುವಂತೆ ಹೇಳಬೇಕು" ಎಂದು ಬೇಡಲು, ಅವನು ಅವನ್ನು ಆಧಾರದೊಡನೆ ಬೆಳಗುವಂತೆ ತೋರಿಸಿದನು. ಅವಳು, "ವೀಣೆಯನ್ನೂ ಹಾಡನ್ನೂ ಎಲ್ಲರೂ ಅರಿಯುವರು. ಇವನಂತೆ ಅವುಗಳ ಗುಣದೋಷಗಳನ್ನು ಅರಿತು ವಿವರಿಸಿ ಹೇಳುವವರನ್ನು ಕಂಡದ್ದಿಲ್ಲ" ಎಂದು ಹೇಳಿಬಿಟ್ಟು ಒಳಗೆ ಹೋಗಿ ಹೊನ್ನನ್ನು ಹುರಿಮಾಡಿದಂತೆ ತೋರುವ ನರಗಳನ್ನು ತಂದುಕೊಡಲು, ಅವನು ಅವನ್ನು

ತೆಗೆದುಕೊಂಡು ವೀಣೆಯಲ್ಲಿ ಸೇರಿಸಿ ಶ್ರುತಿಮಾಡಿ ಕೊಟ್ಟನು. ಅದನ್ನು ಪದ್ಮೆ ತೆಗೆದುಕೊಂಡು ಸಂತೋಷಿಸಿದಳು. ಬಳಿಕ,

ಸಂಕೇತದಲಿ ಸೇರಿ ನಿರಿದಪ್ಪಿ ನಡೆಯದವರ್
ಬಾಯಿಂದ ಕಿವಿಯಿಂದ ಕಣ್ಣಿಂದ ಮೂಗಿಂದ
ಮೇಲಾದ ಮೈಯಿಂದ ಬಿಡುವೆ ಇಲ್ಲದ ಹಾಗೆ
ಉಂಡೂ ಕೇಳಿಯೂ ಕಂಡೂ ಮೂಸಿಯೂ
ಮುಟ್ಟಿಯೂ ಮತ್ತೆಮತ್ತಿಂದ್ರಿಯಗಳೈದರಿಂ
ದೆಡೆಬಿಡದೆ ಸುಖವ ಸವಿಸವಿದು ಕಳೆಯೇರುತಿರೆ,
ದಿನದಿನವು ಮೈಬಗೆಯನರಿವವರು ಮಾಡು ಬಳಿ-
ದೋಳಿಯನು ಸೇರಿ ಸೊಗಸವಿಯುವುದದಾವುದೋ
ದೇವತೆಯೊ ಏನೆಂದು ತಿಳಿಯಲಾರದರಾದರ್ ;
ರೂಪಿನಲು ಅರಿವಿನಲು ಸರಿದೊರೆಯೆ ಇಲ್ಲೆಂಬ
ಗೆರೆಬಳೆಯ ತೋಳವಳ ಕೂಡೆ ವತ್ಸರ ಪೆರ್ಮ
ಬಾಳಿದನು.

(೩, ೧೫ : ೬೩–೭೪)

ಈ ರೀತಿ ಒಂದು ತಿಂಗಳು ಕಳೆಯಿತು.

ಹೀಗಿರುವಲ್ಲಿ, ಪದ್ಮಾವತಿಯನ್ನು ಮದುವೆಯಾಗಬಯುಸಿ ಅದಕ್ಕೆ ತಕ್ಕ ಹೆಣ್ಣಿಗೆ ಕೊಡುವ ಒಡವೆ ವಸ್ತುಗಳನ್ನು ಮುಂದೆಯೆ ಕಳಿಸಿ ಕೇಕಯದೇಶದ ಅರಸನಾದ ಅಚ್ಚುವಪ್ಪೆರು ಮಗನೆಂಬವನು ಒಂದು ದಿನ ಬಂದು ದರ್ಶಕನಿಗೆ ತನ್ನ ಬರವನ್ನು ತಿಳಿಸಿದನು. ದರ್ಶಕನು ನಗರವನ್ನು ಅಲಂಕಾರ ಮಾಡಿಸಿ ತನ್ನ ಪರಿವಾರಗಳೊಡನೆ ಎದುರುಗೊಂಡು ಹೋಗಿ ಸಲ್ಲಾಪಮಾಡಿ ಅವನನ್ನು ಕರೆದುಕೊಂಡು ಬಂದು ತನ್ನ ಅರಣ್ಮನೆಗೆ ಹೋಗಿ ಆತಿಥ್ಯಮಾಡಿ ಸಂತೋಷಗೊಂಡಿದ್ದನು.

ಆಗ ದರ್ಶಕನ ಮೇಲ್ಮೆಯನ್ನು ಸಹಿಸದವರಾಗಿ* ಮಿಗಿಲು ಹಗೆಗೊಂಡು ನಡೆಯುವವರಾದ ವಿರಿಚಿಕ, ಅರಿಮಾನ್, ಎಲಿಚ್ಚೆವಿ, ಅಡವಿ, ಅಯೋಧ್ಯೆಯರಸ, ಮ್ಲೇಚ್ಛ, ಶಂಕರ, ಮಲ್ಲ, ವೇಶಾಲಿ, ಎಂಬ ಅರಸರುಗಳು ಒಟ್ಟುಗೂಡಿ ಚತುರಂಗ ಸೇನೆಗಳೊಡನೆ ಹೊರಟು, ಹಲವು ಹುರಿಗಳಿಂದಾದ ಒಂದು ದೊಡ್ಡ ಹೊರಜಿಯಿಂದ

---

* ಪದ್ಮೆಯನ್ನು ಕೇಕಯದರಸನಿಗೆ ಕೊಡಬೇಕೆಂದಿರುವುದನ್ನು ತಿಳಿದು ದರ್ಶಕನ ಮೇಲೆ ಬೇರೆ ಅರಸರು ಹಗೆಗೊಂಡರೆಂದು ಇತರ ಗ್ರಂಥಗಳಲ್ಲಿ ಹೇಳಿದೆ.

ಆಸೆಯನ್ನು ಕಟ್ಟುವ ಹಾಗೆ ರಾಜಗೃಹ ನಗರವನ್ನು ಸುತ್ತಿಕೊಂಡು ದೊಡ್ಡ ಮೋಳಗನ್ನು ಉಂಟುಮಾಡಿದರು. ಅದನ್ನರಿತ ದರ್ಶಕನು ಮಿಗಿಲು ಕಳವಳಗೊಂಡು ವ್ಯಥೆಪಟ್ಟನು. ಅದನ್ನು ಕೇಳಿದ ಪದ್ಮೆ, "ಈ ಸುದ್ದಿಯನ್ನು ಮಾಣಕನಿಗೆ ಹೇಳು" ಎಂದು ಐರಾವತಿಯನ್ನು ಬಿಟ್ಟಳು. ಅವಳು ಕಾಮನ ದೇವಸ್ಥಾನಕ್ಕೆ ಬಂದು ನಡೆದ ಸಂಗತಿಗಳನ್ನೂ ಪದ್ಮೆಯ ಅಭಿಪ್ರಾಯವನ್ನೂ ಉದಯನನಿಗೆ ಹೇಳಲು, ಅವನು, "ಹೀಗೆ ಹಗೆಗಳು ಬಂದು ಯುದ್ಧಮಾಡುವುದಕ್ಕೆ ಮುತ್ತಿಗೆ ಹಾಕಿದ್ದು ನಮಗೆ ಅನುಕೂಲವಾದ ಕಾರ್ಯ" ಎಂದು ಎಣಿಸಿ ಐರಾವತಿಯನ್ನು ಕುರಿತು, "ಎರಡು ತಿಂಗಳಲ್ಲಿ ಪದ್ಮೆಯನ್ನು ಬಂದು ಕಾಣುವೆನು. ಇದನ್ನು ಅವಳಿಗೆ ನೀನು ಹೋಗಿ ಹೇಳಿ ಅವಳನ್ನು ಕಾಪುಕಾದುಕೊಂಡಿರು" ಎಂದು ಕಳಿಸಿಬಿಟ್ಟು ಬಳಿಕ, "ವರ್ತಕರೂಪದಿಂದ ಹಗೆಗಳ ಪಡೆಯೊಳಗೆ ಹೋಗಿ ಅವರನ್ನು ನಾಶಮಾಡು ವೆನು" ಎಂದು ನಿಶ್ಚಯಿಸಿಕೊಂಡು 'ಸಣ್ಣತೋಟ' (ಶಿನ್ನಚ್ಚೋಲೈ=ಲಘೂ ದ್ಯಾನ) ಎಂಬ ಮಲೆಯ ಮೇಲೇರಿ ಸಂಕೇತವಾಗಿರುವ ಒಂದು ರಾಗವನ್ನು ಹಾಡಿದನು.

ಕೇಳಿದ ಅವನ ವೀರರೆಲ್ಲರೂ ಅಲ್ಲಿ ಬಂದು ಕೂಡಿದರು. ಅವರುಗಳನ್ನು ನೋಡಿ ಉದಯನನು, "ಇನ್ನು ನಮಗೆ ಯಾವುದೊಂದು ಕೇಡೂ ಇಲ್ಲ." ಎಂದೆಣಿಸಿ ಮುಂದೆ ಮಾಡಬೇಕಾದುವನ್ನು ಅವರುಗಳಿಗೆ ಹೇಳಿಬಿಟ್ಟು, ತಾನೂ ಗೆಳೆಯರೂ ವರ್ತಕವೇಷ ತಾಳಿ ವ್ಯಾಪಾರಕ್ಕೆ ಬೇಕಾದ ಹಲವು ಸಾಮಗ್ರಿಗಳನ್ನೂ ಶೇಖರಿಸಿ ಕೊಂಡು ಹಗೆಗಳ ಬೀಡುಗಳನ್ನು ಸೇರಿದಾಗ, ಮೊದಲೆ ವೃಷಭಕನಿಂದ ಕಳಿಸಲ್ಪಟ್ಟ ಇಶ್ವೈಚ್ಚನು ಹಲವು ಕುದುರೆಗಳೊಡನೆ ಅಲ್ಲಿ ಕಾಣಿಸಿಕೊಂಡನು. ಕಾಣಿಸಿಕೊಂಡಾಗ, ವಸಂತಕನನ್ನು ಕುದುರೆ ವ್ಯಾಪಾರಿಗಳಿಗೆ ತಲೆಯಾಳಾಗಿ ನೇಮಿಸಿ, ಅವನೊಡನೆ ಹಗೆಗಳ ಬೀಡುಗಳಲ್ಲಿ ಹೊಕ್ಕು ಅವರುಗಳನ್ನು ಕುರಿತು ಉದಯನನು, "ನಾವು ಕುದುರೆ ವ್ಯಾಪಾರಿಗಳು; ಹಲವು ವರುಷಗಳಿಂದಲೂ ಮಗಧರಾಜನೊಡನೆ ಬಳಕೆ ಯುಳ್ಳವರಾಗಿದ್ದೇವೆ. ಈಗ ಅವನು ನಮ್ಮೊಡನೆ ಮನಬೇರ್ಪಾಟುಳ್ಳವನಾದ್ದರಿಂದ, ಗೆದ್ದು ಅವನ ನಗರವನ್ನು ನಮ್ಮ ನಗರವಾಗಿ ಮಾಡಿಕೊಳ್ಳಲೆಣಿಸಿದ್ದೇವೆ. ನೀವೂ ನಮಗೆ ಸ್ನೇಹವುಳ್ಳವರಾಗಿ ಇರಬೇಕು" ಎಂದು ಹೇಳಲು ಅವರುಗಳು ಅಂಗೀಕರಿಸಿ ಅವನನ್ನು ಒಡನೆ ಇರಗೊಡಿಸಿದರು. ಆ ಮೇಲೆ ಗೆಳೆಯರು ತಮಗೆ ತಕ್ಕ ಎಡೆಗಳನ್ನು ಮಾಡಿ ಅವುಗಳಲ್ಲಿ ಇರುವವರಾಗಿ ಹಗೆಗಳ ಕಡೆ ಉಳ್ಳ ಎಲ್ಲ ರಹಸ್ಯಸುದ್ದಿಗಳನ್ನೂ ಕಾಲಕ್ರಮದಲ್ಲಿ ಅರಿತು ಆ ಹಗೆಗಳನ್ನು ಈ ಬಗೆಯಾಗಿ ಗೆಲ್ಲಬೇಕು ಎಂಬುದನ್ನು ತಮ್ಮಲ್ಲಿ ನಿಶ್ಚಯಿಸಿಕೊಂಡು ತಾವು ಯುದ್ಧಸನ್ನದ್ಧರುಗಳಾಗಿ ಬೇರೆಬೇರೆಯಾಗಿ ಬೇಗನೆ

ಹೋಗಿ, "ವಿರಿಚಿಕನ್ ಬಾಳ್ಗೆ" ಎಂದು ಹೇಳಿ ಮಲ್ಲನ ಬೀಡನ್ನು ಕಾಯುತ್ತಿದ್ದ ವೀರರುಗಳನ್ನು ಕೊಂದು, ಹಗೆಗಳು ತಮ್ಮಲ್ಲಿ ವಿರೋಧಗೊಂಡು ಒಬ್ಬರೊಡನೊಬ್ಬರು ಯುದ್ಧಮಾಡುವ ಹಾಗೆಯೇ ತೋರುವಂತೆ ಹಾಗೆಯೇ ಯುದ್ಧಮಾಡಿ ಕಡೆಯಲ್ಲಿ "ವತ್ಸವನ್ ಬಾಳ್ಗೆ" ಎಂದು ಹೇಳಿ ಯುದ್ಧಮಾಡಿದರು. ಅದನ್ನು ಕಂಡ ಹಗೆಗಳು, "ನಮ್ಮಲ್ಲಿ ಯಾರೊ ವಿರೋಧವನ್ನುಂಟುಮಾಡುವುದಕ್ಕೆ ಹೀಗೆ ಯುದ್ಧಮಾಡು ತ್ತಿದ್ದಾರೆ; ಇನ್ನು ಇಲ್ಲಿರಲಾಗದು. ಹೊತ್ತು ಹುಟ್ಟುವುದರೊಳಗೆ ಹೇಗಾದರೂ ನಾವು ಹೊರಕ್ಕೆ ಹೋಗಿಬಿಡಬೇಕು" ಎಂದು ನಿಶ್ಚಯಿಸಿ ತಮ್ಮ ತಮ್ಮ ವಸ್ತುಗಳು ಪಾಳೆಯಗಳಲ್ಲಿ ಅಲ್ಲಲ್ಲೆ ಬಿದ್ದಿರಲು, ಓಡಿಹೋಗಿ ತಮಗೆ ರಕ್ಷಣೆಯಾಗಿದ್ದ ಒಂದು ಮಲೆಯನ್ನು ಸಾರಿ ಅಲ್ಲಿ ತಂಗಿದರು.

ರುಮಣ್ವಂತ ಮೊದಲಾದವರು ತಮ್ಮಲ್ಲಿ ಕೂಡಿ ಸಂತೋಷಪಟ್ಟು, "ಹಗೆಗಳನ್ನು ಗೆದ್ದೆವಾದ್ದರಿಂದ ಪದ್ಮೆಯನ್ನು ಪ್ರೀತಿಸಿ ಬಯಸಿರುವ ಉದಯನನಿಗೆ ಇನ್ನು ಮೇಲ್ಮೆಯುಂಟು" ಎಂದು ಎಣಿಸಿಕೊಂಡು, "ತನ್ನ ದೇವಿ ವಾಸವದತ್ತೆಯನ್ನು ಕಳೆದುಕೊಂಡು ತನ್ನ ವ್ಯಥೆಯನ್ನು ಪರಿಹರಿಸಿಕೊಳ್ಳುವುದಕ್ಕಾಗಿ ಈ ನಾಡಿಗೆ ಬಂದ ಉದಯನನು ದರ್ಶಕನ ಹಗೆಗಳು ಯುದ್ಧಮಾಡುವುದಕ್ಕೆ ನಗರವನ್ನು ಮುತ್ತಿದ್ದನ್ನು ತಿಳಿದು ತನ್ನ ತಂದೆಗೂ ಮಗಧರಾಜನಿಗೂ ಬಹಳ ಸ್ನೇಹವುಂಟೆಂಬುದನ್ನು ಅರಿತವ ನಾದ್ದರಿಂದ ಅವನಿಗೆ ಬಂದ ದುಃಖವನ್ನು ಹೋಗಿಸಬೇಕಾದ್ದು ತನ್ನ ಕರ್ತವ್ಯವೆಂದು ನೆನೆದು ಬಲ್ಮೆಯಿಂದ ಹೋಗಿ ಯುದ್ಧಮಾಡಿ ಹಗೆಗಳನ್ನು ಗೆದ್ದು ಓಡುವಂತೆ ಮಾಡಿ ಅದನ್ನೇ ಕೈಗಾಣಿಕೆಯಾಗಿ ತೆಗೆದುಕೊಂಡು ಕಾಣಬಂದನೆಂಬುದನ್ನು ನೀನು ಹೋಗಿ ಹೇಳು" ಎಂದು ವಸಂತಕನನ್ನು ಕಳಿಸಿದರು. ಅವನು ಆ ಸುದ್ದಿಯನ್ನು ಬೀದಿಬೀದಿಯಲ್ಲಿಯೂ ಹೇಳುತ್ತಲೇ ಅರಸನ ಮಾಳಿಗೆಗೆ ಹೋಗುವವನಾದನು. ಇದು ಹೀಗಿರುವಲ್ಲಿ, "ಈ ನಗರವನ್ನು ಮುತ್ತಿದ ಹಗೆಗಳನ್ನು ಗೆಲ್ಲುವುದಕ್ಕೆ ದಾರಿ ಯಾವುದು?" ಎಂದು ಚಿಂತೆಗೊಂಡು ಆಸ್ಥಾನದಲ್ಲಿದ್ದ ದರ್ಶಕನಿಗೆ ಉದಯ ನನು ಹಳಮೆಯನ್ನು ಕೊಂಡಾಡಿ ಬಂದು ಗೆಳೆಯರೊಡನೆ ಹೋಗಿ ಯುದ್ಧ ಮಾಡಿ ಗೆದ್ದು ಹಗೆಗಳನ್ನು ಓಡಿಸಿಬಿಟ್ಟನೆಂಬ ಸುದ್ದಿ ತಲಪಿತು. ಒಡನೆ ಅವನು ಎದ್ದು ಹೊರಕ್ಕೆ ಬಂದು, "ಈ ಸುದ್ದಿಯನ್ನು ಅರಿತುಬಂದವರನ್ನು ನನಗೆ ನೇರ ವಾಗಿ ಕಾಣಿಸಬೇಕು" ಎಂದನು. ಎನ್ನಲು ಸೇವಕರು ಹೋಗಿ ವಸಂತಕನನ್ನು ಕರೆದುಕೊಂಡು ಬಂದು ಕಾಣಿಸಿದರು. ನಡೆದುದನ್ನು ಅವನು ಹೇಳಲು ಕೇಳಿದ ದರ್ಶಕನು "ಗೆಲ್ಲೀಟಿಯುದಯನನು ಇಲ್ಲಿ ಬರುವ ಭಾಗ್ಯವನ್ನು ಪಡೆದೆನು; ಬಹು ತಪಸ್ಸುಳ್ಳವನು ನಾನು" ಎಂದೂ,

"ಕೆಟ್ಟಕಾಲದೊಳಂ ಕೇಳ್ದವರು ನಲಿವಂತೆ
ಗೆಳೆಯರಿಗೆ ಕಷ್ಟಕಾಗುವ ನಲ್ಮೆಯುಳ್ಳವನ
ಬರವನೆದುರ್ಗೊಳಪೇಳ್ವುದೆನ್ನ ಕರ್ತವ್ಯ . . . ."

ಎಂದೂ ಹೇಳಿ ನಗರವನ್ನು ಅಲಂಕರಿಸಿ ಎದುರುಗೊಂಡು ಹೋಗುವಾಗ, "ಉದಯನನನ್ನು ತಿಳಿದು ಕರೆದು ಕರೆತರುವುದು ಕೆಟ್ಟದು" ಎಂದು ಕೆಲವರು ತಡೆದರು. ತಡೆಯಲು ಅದನ್ನು ಗಣಿಸದೆ ದರ್ಶಕನು ಅವನನ್ನು ತಬ್ಬಿ ಕರೆದುಕೊಂಡು ಬಂದು ಬಹಳವಾಗಿ ಕೊಂಡಾಗಿ ತನಿಯಾಗಿ ವಸತಿಮಾಡಿ ಅದರಲ್ಲಿರುವಂತೆ ಏರ್ಪಡಿಸಿ ಅವನಿಗೆ ಯುದ್ಧಮಾಡಿದ್ದರಿಂದುಂಟಾದ ಸಂಕಟವನ್ನು ಹೋಗಲಾಡಿಸುವವನಾದನು.

ಇವರುಗಳು ಇಲ್ಲಿ ಹೀಗೆ ಇರುತ್ತಿರಲಾಗಿ, ಸೋತು ಓಡಿದ ಆ ಹಗೆಯರಸರು ತಮ್ಮಲ್ಲೇ ಸೇರಿ ಆಲೋಚಿಸಿ ತಮ್ಮಲ್ಲಿ ಯಾರಲ್ಲಿಯೂ ತಪ್ಪಿಲ್ಲವೆಂದು ತಿಳಿದು "ಇನ್ನು ಯಾರನ್ನೂ ನಂಬಬಾರದು" ಎಂದು ನಿಶ್ಚಯಿಸಿಕೊಂಡು ಪ್ರತಿಜ್ಞೆಮಾಡಿ ಎಲ್ಲರೂ ಒಂದುಗೂಡಿ ದೊಡ್ಡ ಪಡೆಗಳೊಡನೆ ಬಂದು ಮರಗಳನ್ನು ಕತ್ತರಿಸಿ ಕೆಡವಿಯೂ, ಬೆಳೆದ ನೆಲ್‌ತೆನೆಗಳನ್ನು ಸುಟ್ಟುಹಾಕಿಯೂ, ಬೇರೆ ಕೆಟ್ಟಕೆಲಸಗಳನ್ನು ಮಾಡಿಯೂ ನಾಡಿಗೆ ದೊಡ್ಡ ದುಃಖವನ್ನುಂಟುಮಾಡಿದರು. ಅದನ್ನರಿತ ಪಡೆಯ ಬೇಹುಕಾರರು ಬೇಗನೆ ಬಂದು ದರ್ಶಕನಿಗೆ ತಿಳಿಸಿದರು. ಅವನು ಬಹಳ ಕೋಪಗೊಂಡು ಯುದ್ಧ ಮಾಡುವುದಕ್ಕೆ ತಾನೇ ಹೊರಡಲು ನಿಶ್ಚಯಿಸಿದನು. ಅದು ತಿಳಿದ ಉದಯನನು "ನಾನೇ ಹೋಗಿ ಯುದ್ಧಮಾಡಿ ಗೆದ್ದು ಬರುವೆನು. ತನ್ನ ನಾಲ್ವಗೆಯ ಪಡೆಗಳನ್ನೂ ಅವಕ್ಕೆ ತಲೆಯಾಳಾಗಿ ಒಬ್ಬ ವೀರನನ್ನೂ ನನಗೆ ಸಹಾಯವಾಗಿ ಕಳಿಸುವಂತೆ ದರ್ಶಕನ ಬಳಿ ಹೇಳಿ ಬಾ" ಎಂದು ವಸಂತಕನನ್ನು ಕಳಿಸಿದನು. ಅವನು ಬಂದು ಹೇಳಲು ಕೇಳಿದ ದರ್ಶಕನು, ಮಂತ್ರಿಗಳೊಡನೆ ಯೋಚಿಸಿ ತನ್ನ ಪಡೆಗಳನ್ನೂ ವೀರರುಗಳನ್ನೂ ಅವನ ಬಳಿ ಕಳಿಸಿದನು. ಅದನ್ನರಿತ ಕೇಕಯದರಸನು, "ನನ್ನನ್ನು ಕಳಿಸಿದರೆ ನಾನು ಬೇಗನೆ ಹಗೆಗಳನ್ನು ಗೆದ್ದು ಬರುವೆನು" ಎಂದು ತಿಳಿಸಲು ಅವನು, "ನನ್ನ ಪಡೆಗಳಿಗೆ ತಲೆಯಾಳಾಗಿ ಹೋಗಿ ಉದಯನನೊಡನೆ ಕೂಡಿ ಹಗೆವರೊಡನೆ ಯುದ್ಧ ಮಾಡಿ ಬನ್ನಿ" ಎಂದು ಕೇಕಯದರಸನನ್ನು ಕಳಿಸಿಬಿಟ್ಟು, "ನನ್ನ ತಂಗಿಯನ್ನು ಬಯಸಿಬಂದ ಕೇಕಯದರಸನೂ ಬರುತ್ತಾನೆ. ಅವನಿಗೆ ಯಾವುದೊಂದು ಕೇಡೂ ಆಗದಂತೆ ಕಾಪಾಡಿಕೊಳ್ಳಬೇಕೆಂದು ಉದಯನನಿಗೆ ಹೇಳು" ಎಂದು ವಸಂತಕನನ್ನು ಕಳಿಸಿದನು. ಅವನೂ ಅದೇರೀತಿ ಬಂದು ಅದನ್ನು ಉದಯನನಿಗೆ ಹೇಳಿದನು. ಉದಯನನು ಆನೆಯ ಮೇಲೇರಿ ಯುದ್ಧಕ್ಕೆ ಹೊರಟನು. ರುಮಣ್ವಂತ ಮೊದಲಾದ ಮುನ್ನೂರಾರು ವೀರರುಗಳು ತಮಗೆ ತಕ್ಕ ವಾಹನಗಳಲ್ಲಿ ಏರಿ ಉದಯನನ ಬೆನ್ನು

ಕಾಯುತ್ತ ನಡೆದರು. ಆ ಕಾಲದಲ್ಲಿ ದರ್ಶಕನು ಬಂದು "ಕೇಕಯದರಸನನ್ನು ಕಾಪಾಡಿಕೊಳ್ಳಬೇಕು" ಎಂದು ಮತ್ತೂ ಉದಯನನಿಗೆ ನೇರವಾಗಿ ಹೇಳಿ ಬಿಟ್ಟು ಹಿಂದಿರುಗಿ ತನ್ನೆಡೆಗೆ ಹೋದನು. ಉದಯನನು, "ಸೇನೆಯ ನಡುವೆ ಕೇಕಯದರಸನೂ ರುಮಣ್ವಂತನೂ ನನ್ನ ಮುಂದೆ ಹೋಗಲಿ, ಇಂಥವರು ಇಂಥವರು ನನ್ನ ಹಿಂದೆ ಬರಲಿ" ಎಂದು ವಿಂಗಡಿಸಿ ಅಣಿ ಮಾಡಿಕೊಂಡು ಹಗೆಗಳ ಪಾಳೆಯ ವನ್ನು ಬಳಿಸಾರಿದನು. ಒಡನೆ ಹಗೆಗಳೆಲ್ಲರೂ ತಮಗಿದ್ದ ದೊಡ್ಡ ಪಡೆಯೊಡನೆ ಬಂದು ಎದುರಿಸಿದರು.

ಆಗ ಎರಡು ಪಡೆಗಳಿಗೂ ದೊಡ್ಡ ಯುದ್ಧ ನಡೆಯಿತು. ಉದಯನನು ಲಿಚ್ಛವಿ ಅರಸನ ತಮ್ಮನು ಏರಿದ ಆನೆಯ ಮೇಲೆ ಹಾಯ್ದು ಅವನನ್ನು ಹಿಡಿದು ಪಟ್ಟಿಯಿಂದ ಅವನ ತೇರಿನಲ್ಲಿ ಕಟ್ಟಿದನು. ಅದನ್ನು ಕಂಡ ರುಮಣ್ವಂತನು, "ನಮ್ಮ ಅಭಿಪ್ರಾಯವನ್ನು ನೆರವೇರಿಸುವುದಕ್ಕೆ ತಕ್ಕ ಕಾಲ ಇದುವೆ" ಎಂದು ಎಣಿಸಿ ಕೇಕಯದರಸನೊಡನೆ ಸೇರಿ ಲಿಚ್ಛವಿ ಅರಸನ ಪಡೆಯೊಡನೆ ಯುದ್ಧ ಮಾಡುವುದಕ್ಕೆ ಎದ್ದನು. ಒಡನೆ ಲಿಚ್ಛವಿಯರಸನು ವೇಗದಿಂದ ಬಂದು ಕೇಕಯದರಸನ ತಲೆಯನ್ನು ಕತ್ತರಿಸಿ ಬೀಳಿಸಿಬಿಟ್ಟು ತನ್ನ ತಮ್ಮ ಉದಯನನಿಂದ ಸೆರೆಪಟ್ಟಿರುವುದನ್ನರಿತು ರುಮಣ್ವಂತನ ಆನೆಯ ಮೇಲೆ ನೆಗೆದು, "ನನ್ನ ತಮ್ಮನನ್ನು ಬಿಟ್ಟುಬಿಡುವಂತೆ ಮಾಡುವೆಯಾದರೆ ನೀನು ಬದುಕುವೆ" ಎಂದು ಹೇಳಲು, ಅದನ್ನು ಕಂಡ ಉದಯನನು, "ದರ್ಶಕನಿಗೂ ಇವನಿಗೂ ಬೇರ್ಪಾಡಿಲ್ಲ. ಇವನನ್ನು ನಮಸ್ಕರಿಸುವೆಯಾದರೆ ನಿನ್ನ ತಮ್ಮನನ್ನು ನೀನು ಪಡೆಯುವೆ" ಎಂದು ಹೇಳಿ ಯುದ್ಧ ಮಾಡಿದನು. ಆಗ ಹೊನಲಿನಿಂದ ಉಪ್ಪಿನ ಅಣೆ ಕರಗಿ ಹೋಗುವ ಹಾಗೆ ಹಗೆಗಳ ಪಡೆ ಒಡೆದುಹೋಯಿತು. ಹೋಗಿಯೂ ಹಗೆಗಳು ರುಮಣ್ವಂತನನ್ನು ಹಿಡಿದುಕೊಂಡು ತಮ್ಮೆಡೆಗೆ ಹೋಗಿ ಅವನನ್ನು ಸೆರೆ ಹಾಕಿಬಿಟ್ಟರು.

ಉದಯನನು ವಿಜಯ ಮುರಜದೊಡನೆ ಗೆಳೆಯರು ಬಳಸಲು ನಡೆದು ಗೆಲವು ಸುದ್ದಿಯನ್ನು ದರ್ಶಕನಿಗೆ ದೂತರ ಮೂಲಕ ತಿಳಿಸಿದನು. ದರ್ಶಕನು ಹೊರಗೆ ಬಂದು ಉದಯನನನ್ನು ಹಲವುಸಲ ತಬ್ಬಿ, "ನಡೆದದ್ದನ್ನು ಹೇಳಬೇಕು" ಎಂದು ಕೇಳಲು, "ಕೇಕಯದರಸನು ಹಗೆಪಡೆ ಎದ್ದು ಬರುವುದನ್ನೂ ಅದರಿಂದ ಉಂಟಾಗುವ ಕೇಡನ್ನೂ ನೆನೆಯದವನಾಗಿ ನಾವು ತಡೆದರೂ ಅಡಗಿ ನಿಲ್ಲದೆ ಬೇಗನೆ ಓಡಿ ತಮ್ಮವರನ್ನೂ ನಮ್ಮವರನ್ನೂ ಬಿಟ್ಟುಹೋಗಿ ಯುದ್ಧಮಾಡಿ ಲಿಚ್ಛವಿಯರಸನ ಕತ್ತಿಯಿಂದ ಕಡಿಯಲ್ಪಟ್ಟು ವೀರಸ್ವರ್ಗವನ್ನು ಪಡೆದನು" ಎಂದು ಹೇಳಿದನು. ಅದನ್ನು ಕೇಳಿದ ದರ್ಶಕನು,

"ನಾನೆನ್ನ ಕಡವ ತೀರಿಸದನಾದೆನು. ಅವನು
ತನ್ನ ಕಡವ ತೀರಿಸುತ ತಕ್ಕುದೆಸಗಿದನು."
(೩-೨೦ : ೧೪೧-೨)

ಎಂಬುದನ್ನು ಹೇಳಿ ಮನಸ್ಸು ಕರಗಿ, ಹೋರುಕಳದಲ್ಲಿ ಹುಡುಕಿ ತೆಗೆದು ಅವನೊಡ ಲನ್ನು ದಹನಮಾಡಿಸಿ ಉಳಿದ ಕಾರ್ಯಗಳನ್ನೂ ಮುಗಿಸಿಬಿಟ್ಟು ಉದಯನನೊಡನೆ ಒಳನಗರವನ್ನು ಹೊಕ್ಕನು. ಹೊಕ್ಕಾಗ ಕಂಡವರು ಸಂತೋಷಿಸಿ ಉದಯನನನ್ನು ಹಲವು ಬಗೆಯಲ್ಲಿ ಹರಸಿದರು. ಹಾಗೆ ಹರಸುತ್ತಿರಲು ದರ್ಶಕನೊಡನೆ ಸೇರಿ ಉದ ಯನನು ಅರಣ್ಮನೆಯೊಳಗೆ ಹೊಕ್ಕನು.

ಆಗ ದರ್ಶಕನು, "ದುರ್ಯೋಧನಾದಿಗಳು ನೂರ್ವರನ್ನು ಒಂಟಿಯಾಗಿ ಗೆದ್ದ ಬಹು ಪರಾಕ್ರಮವುಳ್ಳ ಭೀಮನನ್ನು ಹೋಲಿ ಒಂಟಿಯಾಗಿ ಹೋಗಿ ಹಗೆಗಳನ್ನು ಗೆದ್ದ ಉದಯನನ ಬಂಧುಗಳೆಂದು ಹೇಳಿಸಿಕೊಳ್ಳುವ ಅರಸರು ಹಿಂದಿನ ಹುಟ್ಟಿನಲ್ಲಿ ತಪಸ್ಸು ಮಾಡಿದವರು" ಎಂದೆಣಿಸಿ ತನ್ನ ತಂಗಿಯಾದ ಪದ್ಮಾವತಿಯನ್ನು ಅವನಿಗೆ ಮದುವೆಮಾಡಲು ನೆನೆದು ಆ ಸುದ್ದಿಯನ್ನು ಅವಳಿಗೂ ಉದಯನನಿಗೂ ಹೇಳಿ ಬರುವಂತೆ ಮುದುಕನಾದ ಅಮಾತ್ಯನೊಬ್ಬನನ್ನು ಕಳಿಸಲು, ಅವನು ಹೋಗಿ ತನಿಯಾಗಿ ಇರುವ ಪದ್ಮೆಯನ್ನು ಕಂಡು, "ನಮ್ಮ ಹಗೆಗಳನ್ನು ಗೆದ್ದವನೂ ಆನೆ ಯನ್ನು ಬಗ್ಗಿಸುವ ವೀಣೆವಿದ್ಯೆಯರಿತವನೂ ಆಗಿರುವ ಉದಯನನಿಗೆ ನಿನ್ನನ್ನು ಮದುವೆಮಾಡಲು ತಾನು ಎಣಿಸಿರುವುದಾಗಿ ಅರಸನು ನಿನಗೆ ತಿಳಿಸ ಹೇಳಿದನು" ಎಂದು ಹೇಳಲು, ಅವಳು ಮುಗುಳುನಗೆಯುಳ್ಳವಳಾಗಿ

"ಮಂತ್ರನಾಲಿಗೆಯ ಪಾರ್ವನ ಪ್ರೇಮವೀ ದೊಡ್ಡ
ಲೋಕ ನೆಲೆ ಮಾರಿದೊಡಮದು ತೀರದದರಿಂದ

ಹೀಗೆ ನಡೆಯುವುದಾದರೆ ನಾನು ಜೀವದೊಡನೆ ಬಾಳೆನು" ಎಂಬ ನಿಶ್ಚಯದಿಂದ ಮಾತಾಡದೆ ಇದ್ದಳು.

ಆಮೇಲೆ ಆ ಅಮಾತ್ಯನು ಉದಯನನ ಬಳಿ ಹೋಗಿ ಅರಸನು ಅಭಿಪ್ರಾಯ ಪಟ್ಟಿರುವುದನ್ನು ಹೇಳಲು ಉದಯನನು ನಿಡುಹೊತ್ತು ಯೋಚಿಸುತ್ತಿದ್ದು ಬಳಿಕ, "ನಾನು ಕೋರಿಕೊಳ್ಳುವ ಕಾರ್ಯವನ್ನು ತಾನೇ ಕೋರಿಕೊಳ್ಳುವುದು ನನ್ನ ತಪ ಸ್ಸಿನ ಬೆಳೆ" ಎಂದು ಹಿಗ್ಗಿನ ಮನಸ್ಸಿನಿಂದ, ತನ್ನ ಸಂತೋಷವನ್ನು ಹೊರಪಡಿಸದವ ನಾಗಿ, "ವಾಸವದತ್ತೆ ಬೆಂಕಿಗೆ ಬಿದ್ದದ್ದರಿಂದ ಎಗಿಲಾದ ಚಿಂತೆಯಿಂದ ನನ್ನ ಅರ ಸಾಳ್ಕೆಯನ್ನು ತೊರೆದುಬಿಟ್ಟು ಅವಳನ್ನೂ ಯೂಗಿಯನ್ನೂ ಕಳೆದುಕೊಂಡ ಬಳಿಕ

ಬಾಳುವುದರಲ್ಲಿ ಇರುವ ಫಲ ಯಾವುದೆಂದು ಎಣಿಸಿದೆನು. ನನಗೆ ನೀನು ಹೇಳಿದ ಕಾರ್ಯವನ್ನು ಮಾಡುವುದಕ್ಕೆ ಅಪೇಕ್ಷೆಯಿಲ್ಲ" ಎಂದು ನಿರಾಕರಿಸಿದನು. ಕೇಳಿದ ಅವನು, "ನೀವು ಹೇಳುವ ಮಾತು ಮೇಲ್‌ಕುಲದಲ್ಲಿ ಹುಟ್ಟಿದವರಿಗೆ ತಕ್ಕದ್ದಲ್ಲ" ಎಂದು ನಮಸ್ಕರಿಸಿ ನಿಂತು, "ಮದ್ದಾನೆಯನ್ನು ಮಣಿಸುವ ವೀಣೆವಿದ್ಯೆಯ ವೀರ! ಈ ಪ್ರಾರ್ಥನೆಯನ್ನು ನೆರವೇರಿಸಬೇಕು" ಎಂದು ಮತ್ತೂ ಬೇಡಿಕೊಳ್ಳಲು, ಉದಯನನು, "ದರ್ಶಕನೂ ನೀವೂ ಬಹಳ ಒತ್ತಾಯಪಡಿಸುವುದರಿಂದ ನಾನು ಮಾಡುವುದಕ್ಕೆ ಯಾವ ತಡೆಯಿದೆ?" ಎಂದು ಹೇಳಿದನು. ಆ ಅಮಾತ್ಯನು ಸಂತೋಷಿಸಿ ತಿರುಗಿ ಹೋದನು.

ಹೋದ ಅಮಾತ್ಯನು ನಡೆದುವನ್ನು ದರ್ಶಕನಿಗೆ ಹೇಳಲು ಅವನು ಕೇಳಿ ಸಂತೋಷಿಸಿದನು. ಇದು ಹೀಗಿರಲು,

"ಮಾಡದಲ್ಲಿ ಹದುಗಿಕೊಂಡಿರುವ ಮಾಣಕನೇ ನಾವೆಂಬುದನ್ನು ಪದ್ಮಾವತಿ ಅರಿಯದವಳಾದ್ದರಿಂದ ನಮ್ಮನ್ನು ಮದುವೆಯಾಗುವುದಕ್ಕೆ ಒಡಂಬಡಳು. ಆದ್ದರಿಂದ ಅವನೇ ನಾವೆಂಬುದನ್ನು ಮೊದಲು ಅವಳಿಗೆ ಯಾವುದಾದರೂ ಒಂದು ಬಗೆಯಿಂದ ತಿಳಿಸಬೇಕು. ಅದಕ್ಕೆ ಉಪಾಯ ಯಾವುದು?" ಎಂಬುದನ್ನು ನೆನೆದ ಉದಯನನು ವಸಂತಕನನ್ನು ಕರೆದು, "ನನ್ನ ಜೀವದ ಗೆಳೆಯನಾದ ಇಶ್ಯೈಚ್ಚನೆಂಬವನು ತಂದೆ ತಾಯಿಗಳಿಬ್ಬರನ್ನೂ ಕಳೆದುಕೊಂಡವನು. ಅವನಿಗೆ ಒಬ್ಬ ಬ್ರಾಹ್ಮಣ ಕನ್ಯೆಯನ್ನು ಮದುವೆಮಾಡಿಸಿದ ಮೇಲೆಯೇ ನನ್ನ ಮದುವೆಯನ್ನು ಕುರಿತು ನೆನೆಯಬೇಕು ಎಂಬುದನ್ನು ನನ್ನ ಮಾತಾಗಿ ದರ್ಶಕನಿಗೆ ಹೇಳಿ ಅದನ್ನು ಪೂರ್ತಿಮಾಡಿಕೊಂಡು ಬರುವುದು ನಿನ್ನ ಕರ್ತವ್ಯ" ಎಂದು ಹೇಳಿ ಕಳಿಸಲು, ವಸಂತಕನು ಹೋಗಿ ದರ್ಶಕನಿಗೆ ಉದಯನನ ಅಭಿಪ್ರಾಯವನ್ನು ಕ್ರಮವಾಗಿ ತಿಳಿಸಿದನು.

ದರ್ಶಕನು, "ಪದ್ಮೆಯ ಹಾರುವ ಗೆಳತಿಯಾಗಿರುವ ಯಾಪ್ಯಾಯಿನಿಯೆಂಬ ಕನ್ನೆ, ನಡತೆಯಲ್ಲಿಯೂ ಕುಲದಲ್ಲಿಯೂ ಬಹಳ ಶ್ರೇಷ್ಠಳಾದ್ದರಿಂದ ಅವಳನ್ನು ಇಶ್ಯೈಚ್ಚನಿಗೆ ಮದುವೆಮಾಡಿಸುವುದು ಒಳ್ಳೆಯದೆಂಬುದನ್ನು ಉದಯನನಿಗೆ ತಿಳಿಸಿ" ಎಂದು ಹೇಳಿ ಕಳಿಸಿದನು. ಅದನ್ನು ವಸಂತಕನು ಬಂದು ಉದಯನನಿಗೆ ತಿಳಿಸಿದನು. ಗೆಳೆಯರು ಕೇಳಿ ಸಂತೋಷಿಸಿದರು. ಆ ಮೇಲೆ ಆ ಮದುವೆಗೆ ತಕ್ಕ ದಿನ ನಿಶ್ಚಯಿಸಲಾಯಿತು. ಅದನ್ನರಿತ ದರ್ಶಕನು, "ಪದ್ಮೆಯನ್ನು ಉದಯನನಿಗೂ ಯಾಪ್ಯಾಯಿನಿಯನ್ನು ಅವನ ಗೆಳೆಯ ಇಶ್ಯೈಚ್ಚನಿಗೂ ಮದುವೆ ಮಾಡಿಸಲು ನಿಶ್ಚಯಿಸಿರುವುದನ್ನೂ ಯಾಪ್ಯಾಯಿನಿಯ ಮದುವೆಯನ್ನು ಮೊದಲೆ ನೆರವೇರಿಸಬೇಕೆಂಬುದನ್ನೂ ತನ್ನ ತಾಯಿಗೆ ತಿಳಿಸಿ ತಾಯಿಯ ಅನುಗ್ರಹವನ್ನು ಅರಿತು ಬನ್ನಿ" ಎಂದು ತಮ್ಮ ಸ್ವಭಾವ

ತಪ್ಪದ ಹಿರಿಯ ಮುದುಕರನ್ನು ಬಿಟ್ಟನು. ಅವರುಗಳು ಹೋಗಿ ಹೇಳಲು ಕೇಳಿದ ತಾಯಿ ಮನಸ್ಸಿನಲ್ಲಿ ಬಹಳ ಸಂತೋಷವುಳ್ಳವಳಾಗಿ ಯಾಪ್ಯಾಯಿನಿ ಅಲಂಕರಿಸಿ ಕೊಳ್ಳುವುದಕ್ಕೆ ತಕ್ಕ ಆಭರಣಗಳನ್ನು ಕೊಟ್ಟು ಕಳಿಸಿದಳು.

ಆ ಸುದ್ದಿಯನ್ನು ಕೇಳಿದ ಪದ್ಮೆ, "ಮಾಣಕನನ್ನು ಅಗಲಿದ ನನ್ನ ದೊಡ್ಡ ದುಃಖವನ್ನು ನೀಗಿಕೊಳ್ಳುವುದಕ್ಕೆ ದೊಡ್ಡ ಸಹಾಯವಾಗಿದ್ದ ಯಾಪ್ಯಾಯಿನಿಯನ್ನು ಅಗಲುವುದಾದರೆ ನನ್ನ ಪ್ರಾಣವನ್ನು ತಾಳುವ ದಾರಿಯನ್ನರಿಯೆನು. ತಪ್ಪಿಸುವುದೂ ನ್ಯಾಯವಲ್ಲ. ಏನು ಮಾಡಲಿ?" ಎಂದು ನೆನೆದು ಉಡಿಗೆ ತೊಡಿಗೆ ಮಾಲೆ ಮೊದಲಾದುವನ್ನು ಯಾಪ್ಯಾಯಿನಿಗೆ ಪ್ರೀತಿಯಿಂದ ಕೊಟ್ಟು, "ಮದುವೆ ಮಂಗಳ ದಲ್ಲಿ ನನ್ನನ್ನು ಮರೆತು ಬಿಟ್ಟುಬಿಡದೆ ಬೇಗಬಾ" ಎಂದು ಹೇಳಿ ಅವಳನ್ನು ತಬ್ಬಿ ತನ್ನ ಚಿಂತೆಯನ್ನು ಹೊರಪಡಿಸದೆ ಹಡೆದ ತಾಯಿ ಮಾಡತಕ್ಕ ಉಪಚಾರಗಳನ್ನೆಲ್ಲ ಅವಳಿಗೆ ಮಾಡಿ ತಾನು ಬಳಸುವ ಪಾತ್ರೆಗಳನ್ನೂ ಶ್ರೇಷ್ಠವಾದ ಸಿವಿಗೆಯೊಂದನ್ನೂ ಕೊಟ್ಟಳು.

ದರ್ಶಕನು ಪದ್ಮೆಯ ದೊಡ್ಡ ತಗುಮೆಯನ್ನು ನೆನೆದು ಸಂತೋಷಿಸಿದ್ದಲ್ಲದೆ, ಯಾಪ್ಯಾಯಿನಿಯ ಮದುವೆ ಸುದ್ದಿಯನ್ನು ನಗರದವರೆಲ್ಲರೂ ಅರಿಯುವಂತೆ ಮಾಡಿಸಿ ಮದುವೆಗೆ ಬೇಕಾದುವನ್ನು ಬಹಳ ವೈಭವವಾಗಿ ಮಾಡಿಸಿದನು. ತಕ್ಕ ದಿನದಲ್ಲಿ ಮದುವೆ ಮಂಟಪದಲ್ಲಿ ಇಶ್ವೈಚ್ಛನೂ ಯಾಪ್ಯಾಯಿನಿಯೂ ಪೀಠದಲ್ಲಿ ಕುಳಿತರು. ಮದುವೆಯ ಸಂಸ್ಕಾರ ನಡೆಯಿತು. ಆ ಸಮಯದಲ್ಲಿ ಉದಯನನು ಪಕ್ಕದಲ್ಲೇ ಇದ್ದು ಇಶೈಚ್ಛನನ್ನು ನೋಡಿ, "ನಾವು ಮಗಧಕ್ಕೆ ಬಂದದ್ದು ಮೊದಲ್ಮೆ ಪಡೆದ ಕೌಶಾಂಬಿ ನಗರವನ್ನೂ ಯಮುನೆ ಹೊಳೆಯನ್ನೂ ಬೇರೆ ಸಮೃದ್ಧಿಗಳನ್ನೂ ಯಾಪ್ಯಾಯಿನಿ ಕಂಡು ಸಂತೋಷಿಸಿ ಇರುವುದಕ್ಕೆ ಕಾರಣವಾಯಿತು" ಎಂದು ಅವಳ ಕಿವಿಯಲ್ಲಿ ಬೀಳುವಂತೆ ನುಡಿದನು. ಕೇಳಿದ ಅವಳು, "ಈ ದನಿ ಮಾಣಕನ ದನಿಯಾಗಿ ಇರುವುದಲ್ಲಾ" ಎಂದು ಕಡೆಗಣ್ಣಲ್ಲಿ ಅವನನ್ನು ನೋಡಿ ಸಂದೇಹ ಹೋಗಿಯೂ, "ಉದಯನನೇ ಬ್ರಾಹ್ಮಣರೂಪದಿಂದ ಪದ್ಮಾವತಿಯ ದೃಢವಾದ ಮನಸ್ಸನ್ನು ನಾಶಮಾಡಿದನು. ತಕ್ಕ ಎಡೆಯಲ್ಲಲ್ಲದೆ ತಗದ ಎಡೆಯಲ್ಲಿ ಮನಸ್ಸು ಹೋಗದೆಂಬುದು ನಿಜವೇ" ಎಂದು ನೆನೆದು, "ಈ ಸುದ್ದಿಯನ್ನು ಬೇಗ ಅವಳಿಗೆ ತಿಳಿಸಬೇಕು" ಎಂಬ ಎಣಿಕೆಯಿಂದ ಸಮಯ ನೋಡಿಕೊಂಡೇ ಇದ್ದಳು. ಮದು ವೆಯ ಏಳು ದಿನಗಳೂ ಕಳೆದವು. ಕಳೆಯಲು ಮದುವೆವೇಷದೊಡನೆ ತನ್ನನ್ನು ಕಾಣಲು ಬರುವಂತೆ ಪದ್ಮೆ ಹೇಳಿ ಕಳಿಸಿದಂತೆಯೆ ಸಿವಿಗೆಯಲ್ಲಿ ಯಾಪ್ಯಾಯಿನಿ ಹೋಗಿ ಅವಳನ್ನು ಕಂಡು ಸಲ್ಲಾಪಮಾಡಿದ ಮೇಲೆ, "ಮಾಣಕನಾಗಿ ಬಂದು

ನಿನ್ನ ಅಂತರಂಗವನ್ನು ಕವರ್ದವನು ಉದಯನನೇ. ಇನ್ನು ವ್ಯಥೆಪಡುವುದನ್ನು ನಿಲ್ಲಿಸು" ಎಂದು ನಿಶ್ಚಯವಾಗಿ ಹೇಳಿದಳು.

ಪದ್ಮೆ, "ನಿನ್ನನ್ನು ಮದುವೆಮಾಡಿಕೊಂಡ ಬ್ರಾಹ್ಮಣನು ಉದಯನನ ಗೆಳೆಯ ನೆಂಬುದನ್ನು ಮೊದಲೆ ನಾನು ಕೇಳಿ ಅರಿತಿರುವುದುಂಟು. ಮಾಣಕನಿಗೆ ಬಾಧ್ಯತೆ ಪೂಣ್ದ ನನ್ನ ಮನದಂಕೆ ಕರೆಪಡದೆ ಇರಬೇಕಲ್ಲವೋ? ಆರೈದು ನೋಡು" ಎಂದು ಹೇಳಿದಳು. ಯಾಪ್ಯಾಯಿನಿ ಪದ್ಮೆಯ ಅಭಿಪ್ರಾಯವನ್ನು ಉದಯನನಿಗೆ ತಿಳಿಸಲು, ಅವನು ತನ್ನ ರೂಪವನ್ನು ಒಂದು ಪಟದಲ್ಲಿ ಬರೆದು, "ಒಂದು ರಾತ್ರಿ ಕನ್ನೆವಾಡದಲ್ಲಿ ನನ್ನೊಡನೆ ಇರುವ ಕಾಲದಲ್ಲಿ ಗೂಬೆಯ ಕೂಗನ್ನು ಕೇಳಿ ಬಹಳ ಅಂಜಿದಳು; ಆ ಕುರುಹನ್ನೂ ಹೇಳು" ಎಂದು ಹೇಳಿ ತನ್ನ ಪಟವನ್ನು ಕೊಟ್ಟು ಕಳಿಸಿದನು. ಪಟದಲ್ಲಿ ಉದಯನನ ಆಕಾರವನ್ನು ಕಂಡ ಪದ್ಮೆ, "ಮಾಣಕನ ರೂಪಕ್ಕೂ ಇದಕ್ಕೂ ಸ್ವಲ್ಪವೂ ವ್ಯತ್ಯಾಸ ಇಲ್ಲವಾದರೂ ಇದನ್ನು ಚೆನ್ನಾಗಿ ಪರೀಕ್ಷಿಸಿಯೇ ತಿಳಿಯಬೇಕು. ಇದನ್ನು ಮುಟ್ಟುವುದೂ ತಪ್ಪು" ಎಂದು ಹೇಳಿ ಅದನ್ನು ಕೈಯಲ್ಲಿ ತೆಗೆದುಕೊಳ್ಳದವಳಾದಳು. ಒಡನೆ ನಟ್ಟಿರುಳಿನಲ್ಲಿ ಗೂಗೆಯ ಉಲಿಗೆ ಅಂಜಿದ ಕುರಿಪನ್ನು ಅವಳು ಹೇಳಿದಳು. ಹೇಳಲು ಪದ್ಮೆ, ತನ್ನ ಗಂಡನೆ ಪ್ರಾಣವನ್ನು ಯಮನ ಕೈಯಿಂದ ಹಿಮ್ಮರಳಿಸಿದ ಸಾವಿತ್ರಿಯಂತೆ ಬಹಳ ಆನಂದಹೊಂದಿ ಗೆಳತಿಯನ್ನು ಕೈಯಿಂದ ತಟ್ಟಿ ಆ ಪಟವನ್ನು ತಾಳಲಸಾಧ್ಯವಾದ ಆಸೆಯಿಂದ ಎದೆಯಲ್ಲಿ ಹದುಗಿಸಿ ಅದರ ತೋಳನ್ನು ತೀಡಿ ಮುಗುಳುನಗು ನುಗುತ್ತ,

"ನನ್ನ ಮನವನು ಸೆಳೆದ ನಿಡುನುಡಿಯ ನಿಪುಣ!
ವಂಚನೆಯ ರೂಪದಿಂ ಬಲೆಯ ಬೀಸಿದೆಯೊ"

ಎಂದು ಕೊಂಡಾಡುವವಳಾಗಿ ಚಿಂತೆ ತೊರೆದಿದ್ದಳು.

ಕೆಲವು ದಿನಗಳು ಕಳೆದ ಬಳಿಕ ಅರಸನ ಕಟ್ಟಳೆಯ ಪ್ರಕಾರ ಸೇನೆಯ ಗಣಕನಿಂದ ಮದುವೆಗೆ ತಕ್ಕ ಒಳ್ಳೆಯ ಮುಹೂರ್ತ ಇಡಲ್ಪಟ್ಟಿತು. ನಗರ ಅಲಂಕರಿಸಲ್ಪಟ್ಟಿತು. ಪದ್ಮೆಗೂ ಉದಯನನಿಗೂ ವಿಧಿಪ್ರಕಾರವಾಗಿ ಮದುವೆ ನಡೆಯಿತು. ಉದಯನನು, "ಬಹಳ ಬೇಗನೆ ರುಮಣ್ವಂತನನ್ನು ಸೆರೆಯಿಂದ ಬಿಡಿಸಿಕೊಂಡು ಬರುವಂತೆ ಮಾಡ ಬೇಕು" ಎಂದು ದರ್ಶಕನಿಗೆ ತಿಳಿಸಿದನು. ಅವನು ಅದನ್ನು ಅಂಗೀಕರಿಸಿದ್ದಲ್ಲದೆ, "ಉದಯನನು ತಾನಾಗಿ ಬಂದು ನಮ್ಮ ಹಗೆಗಳನ್ನು ಗೆದ್ದು ಗೆಳೆಯನಾಗಿರುವುದಲ್ಲದೆ ನಂಟನಾಗಿಯೂ ಇರುವುದರಿಂದ ಅವನ ಹಗೆಯಾದ ಆರುಣಿಯನ್ನು ಗೆದ್ದು ವತ್ಸನಾಡನ್ನೂ ಕೌಶಾಂಬೀ ನಗರವನ್ನೂ ಅವನಿಗೆ ಸೇರಿದವಾಗಿ ಮಾಡಬೇಕಾದದ್ದು ನಮ್ಮ ಕರ್ತವ್ಯ" ಎಂದು ಎಣಿಸಿದನು. ಎಣಿಸಿ, ತಾವೇ ಹೋಗಿ ತಮ್ಮ ಕೆಲಸ

ಮುಗಿಸುವ ಮಂತ್ರಿಗಳಲ್ಲಿ ಶ್ರೇಷ್ಠನಾದ ವರ್ಷಕಾರ, ತಾರಕಾರಿ, ಧರ್ಮದತ್ತ, ಸತ್ಯಕಾಯ, ಮೊದಲಾದ ಮಂತ್ರಿಗಳನ್ನೂ,

ಎರಡುಸೂರಾನೆ, ಮೇಣೆರಡು ಸಾವಿರ ಕುದುರೆ,
ಎರಡಾರುನೂರು ಜಯಮಣಿತೇರು, ಅರುವತ್ತು
ಸಾವಿರೆಸೆವಾಯುಧದ ವೀರಪಡೆ, ಸಿರಿಮಣಿಯ
ಸಿವಿಗೆ, ಕಾಳಗದ ಬಾವುಟ, ಸೊಗಸುಗಾಲ್ ಪಾಂಡ್ಯ
ದೆತ್ತುಗಳ ಹೂಡಿರುವ ಪಸುಮೆಹೊನ್ನಿನ ಹಲವು
ಬಗೆಯ ವಾಹನ, ಹವಳ ಮಂಚ, ಸಿರಿಪಟಮಾಡ,
ಬಂಡಿಭಂಡಾರ, ಮದದಾನೆ—ಇವ ಕಾವನಿಗೆ;
ಕೆಲನುಡಿಯ ಬಿದಿರುದೋಳಿನ ಪದ್ಮೆಗಣಿಗೈದ
ಮಿಗಿಲು ಪರಿವಾರ ಮೇಣಾಪರಿಯವೆಲ್ಲವನು
ನಲಿದಿತ್ತು

(೩, ೨೩: ३೦—೪೦)

"ಮತ್ತೂ ಬೇಕಾಗುವವನ್ನು ಆಗಾಗ ಕಳಿಸುವೆನು" ಎಂದು ಮಂತ್ರಿಗಳಿಗೆ ಹೇಳಿದ್ದಲ್ಲದೆ, "ಉದಯನನಿಗೆ ಆಗಬೇಕಾದುವನ್ನು ಅರಿತು ಆಗಾಗಲೆ ಮಾಡುತ್ತ ಬರಬೇಕಾದದ್ದು ನಿಮ್ಮ ಕರ್ತವ್ಯ" ಎಂದು ಒಬ್ಬೊಬ್ಬ ಮಂತ್ರಿಗೂ ತನಿತನಿಯಾಗಿ ಹೇಳಿದನು.

"ಕರೆಗೆಲಸವಗಲಿರುವ ಎಲೆ ವರುಷಕಾರಾ!
ಹಗೆಗಳನು ಜಯಿಸಿದೀ. ಉದಯನ ಕುಮಾರನ್
ನಿನಗೆ ಕೈಯೆಡೆ"

(೩, ೨೩: ೪೭—೯)

ಎಂದು ಕಾಪೊಪ್ಪಿಸಿಬಿಟ್ಟು ಮಂತ್ರಿಗಳನ್ನು ನೋಡಿ, "ಬೇಹಿನವರಿಂದಲೂ ಉಪಾಯದಿಂದಲೂ ಆರುಣಿಯನ್ನು ತೊಲಗಿಸಿಬಿಟ್ಟೇ ನೀವು ಹಿಂದಿರುಗಿ ಬರಬೇಕು" ಎಂದು ಹೇಳಲು, ಎಲ್ಲರೂ ಕೌಶಾಂಬೀನಗರವನ್ನು ಕುರಿತು ಪಡೆಯೊಡನೆ ಹೊರಟರು.

ಹೊರಡಲು ದರ್ಶಕನು ಮತ್ತೂ ಜೊತೆಯಲ್ಲಿ ಬಂದು ಉದಯನನನ್ನು ಕಂಡು ಪ್ರೀತಿ ಮಿಗುವ ಮಾತುಗಳು ಹಲವನ್ನು ಹೇಳಿದ್ದಲ್ಲದೆ, "ಬಂದು ಸಹಾಯ

ಮಾಡಬೇಕೆಂಬುದನ್ನು ಪ್ರದ್ಯೋತನನಿಗೆ ತಿಳಿಸಿದರೆ ಅವನೂ ನಮಗೆ ಅನುಕೂಲ ಮಾಡುವನಾಗುವನು. ಬೇಕಾದರೆ ನಾನೂ ಬರುವೆನು. ತಿಳಿಸಿದರೆ ಪ್ರೀತಿಯುಳ್ಳ ಬೇರೆ ಅರಸರೂ ಬರುವರು. ಎಲ್ಲವನ್ನೂ ಆಲೈದು ಮಾಡಿ. ನಿಮಗೆ ಗೆಲವು ಉಂಟಾಗಲಿ" ಎಂದು ಹೇಳಿದನು. ಉದಯನನು ದರ್ಶಕನನ್ನು ಕುರಿತು, "ಪಡೆಯಲು ಸಾಧ್ಯವಾದ ಸುಖಗಳನ್ನು ಸುಖಗಳನ್ನಾಗಿ ನಾನು ಎಣಿಸುವುದು ರುಮಣ್ವಂತನನ್ನು ಪಡೆದ ಮೇಲೆಯೇ. ಆದ್ದರಿಂದ ಅವನನ್ನು ಹದಿನೈದು ದಿನಗಳಲ್ಲಿ ಸೆರೆಯಿಂದ ಬಿಡಿಸಿ ಕಳಿಸುವುದು ನಿಮಗೆ ಕರ್ತವ್ಯವಾಗುವುದು" ಎಂಬುದನ್ನು ತಿಳಿಸಿದನು. ದರ್ಶಕನು ರುಮಣ್ವಂತನ ಪೆರ್ಮೆಯನ್ನೂ ಅವನಲ್ಲಿ ಉದಯನನಿಗೆ ಇರುವ ಪೇರೊಲವನ್ನೂ ಅರಿತು ಮನ ಹಿಗ್ಗಿ, "ಹಾಗೆಯೇ ಮಾಡುವೆನು" ಎಂದು ಹೇಳಿ ಅನುಮತಿ ಪಡೆದು ತನ್ನ ನಗರಕ್ಕೆ ಹೋದನು. ಹೋದ ಮೇಲೆ,

ಜಯಭೇರಿಯಾಸೆಯನು, ಅಲುಗುನವಿರ್ಗುಡುರೆಯನು,
ಪಡೆಗೂಳ ಬಂಡಿಯನು, ಮಲಗಲಿಹ ಬಂಡಿಯನು,
ನಡೆದೇರ ಸಾಲುಗಳನಾನೆದಂತದಿ ಸಮೆದ
ವಾಹನವನುಳಿದುವನು ನಡುನಡುವೆ ಹೊಂದಿಸುತ
ಒಳಗಿಟ್ಟು, ಕುಡಿಪಡೆಯ ಮುನ್ನಡಸಿ, ಕೂಲಿಪಡೆ
ಯನು ನಿಲಿಸಿ, ಪಕ್ಕಪಡೆಯೊಟ್ಟುಗೂಡಿಸಿ . . .

(೩, ೨೪ : ೩೫–೪೦)

ಉದಯನನು ಹೋಗುವುದನ್ನರಿತ ದೊರೆಗಳು "ಉದಯನನು ಯುದ್ಧವನ್ನು ಕೈಕೊಂಡು ಹೋಗುತ್ತಾನೆ. ಈ ನಡೆ ಯಾರ ಮೇಲಿನದೋ? ಅಂಜತಕ್ಕದ್ದು ಇದು" ಎಂದು ತಮ್ಮಲ್ಲಿ ಚಿಂತೆಗೊಂಡರು.

ಅವನು ಹಾಗೆ ಹೋಗಿ ಒಂದೆಡೆಯಲ್ಲಿ ತಂಗಿದ್ದಾಗ, "ಪಾಂಚಾಲನೊಡನೆ ಯುದ್ಧಮಾಡುವುದಕ್ಕೆ ಬೇಗನೆ ಏಳಬೇಕು" ಎಂದು ಯೂಗಿ ತನಗೆ ರಹಸ್ಯವಾಗಿ ಬರೆದ ಓಲೆಯನ್ನು ಬಿಚ್ಚಿ ಓದಿ ನೋಡಿ ಆ ಸುದ್ದಿಯನ್ನು ಮನಗೊಂಡು ಅದನ್ನು ಮರಸಿಟ್ಟು ಬಿಟ್ಟು ವಸಂತಕನು ಅಲ್ಲಿ ಬಂದ ಪಿಂಗಲ ಕಟಗರನ್ನು ಕಂಡು ಅವರು ಹೇಳಿದುದನ್ನು ಅರಿತು ಉದಯನನ ಬಳಿ ಹೋಗಿ, "ನಿನ್ನ ತಮ್ಮಂದಿರಾದ ಪಿಂಗಳ ಕಟಕರು ಮೊದಲು ಕೌಶಾಂಬಿ ನಗರವನ್ನು ಕಾಪುಕಾದುಕೊಂಡಿದ್ದರು. ಬಳಿಕ ಆ ನಗರವನ್ನು ಸುತ್ತಿಬಂದು ಮುತ್ತಿದ ಪಾಂಚಾಲರಾಜನ ಯುದ್ಧಕ್ಕೆ ಎದುರು ನಿಲ್ಲದವರಾಗಿ ಸೋಲುಗೊಂಡು ಯಮುನೆ ಹೊಳೆಯಲ್ಲಿ ಬೀಳುವುದಕ್ಕೆ ಕುದುರೆಯೇರಿ ಬೇಗದಿಂದ ಹೋಗುತ್ತಿರುವಲ್ಲಿ ನಡುವೆ ಕೋಟೆಯುಳ್ಳದ್ದೂ ಹೆಂಗಸರು ಮಾತ್ರ

ವಾಸವಮಾಡುವುದೂ ಆದ ನಗರವೊಂದನ್ನು ಕಂಡು ಅದರಲ್ಲಿ ಹನ್ನೆರಡು ತಿಂಗಳು ತಂಗಿದ್ದು ಪಾಂಚಾಲರಾಜನ ಆಳ್ಕೆಯನ್ನು ತಾಳದವರಾಗಿ ತಮ್ಮ ಕೊರತೆಯನ್ನು ನಿನಗೆ ತಿಳಿಸುವುದಕ್ಕೆ ಇಲ್ಲಿ ಬಂದಿದ್ದಾರೆ'' ಎಂದು ಹೇಳಲು, ಅವನು ಬಹಳ ಪ್ರೀತಿಗೊಂಡು ಅವರುಗಳನ್ನು ನೋಡಲಪೇಕ್ಷಿಸಿದಾಗ ಪಿಂಗಲಕಟಕರು ಹನ್ನೆರಡು ಸಾವಿರ ವೀರರುಗಳೊಡನೆ ಕಷ್ಟಕಾಲಕ್ಕೆ ಸಿದ್ಧಮಾಡಲ್ಪಟ್ಟ ಬೇರೆ ವೀರಪಡೆಯೊಡನೆ ಬಂದು ಸೇವಿಸಿದರು. ಸೇವಿಸಲು, ಉದಯನನು ಅವರುಗಳನ್ನು ತಬ್ಬಿ ಕೊಂಡಾಡಿದನು. ಅವರುಗಳು, ''ನಿನಗೆ ಸೇವೆಮಾಡುವುದನ್ನು ತಪ್ಪಿದ್ದಲ್ಲದೆ ಹೆತ್ತತಾಯಿಗೆ ಸೇವೆ ಮಾಡಿಕೊಂಡಿರುವುದನ್ನೂ ಉಳಿದೆವು; ಸತ್ಕರ್ಮವಿಲ್ಲದವರು ನಾವು'' ಎಂದು ಮನಕಲಕಿ, ಕಣ್ಣೀರು ಹೊಳೆಯಾಗಿ ಉಕ್ಕಲು, ಭೂಮಿಯಲ್ಲಿ ತಲೆಸೋಕುವಂತೆ ನಮಸ್ಕಾರಮಾಡಿದರು.

ಉದಯನನು ಅವರುಗಳನ್ನು ಎತ್ತಿ ತಬ್ಬಿ, ''ಮಂತ್ರಿಗಳ ಅಭಿಪ್ರಾಯದ ಪ್ರಕಾರವಾಗಿ ನಡೆಯದ ಹುಲ್ಲರಿವುಳ್ಳವನಾದ ನಾನು ಮಾಡಿದ ತಪ್ಪಿನ ಫಲ ಇದು. ನೀವುಗಳು ಇನ್ನು ವ್ಯಥೆಪಡಬೇಡಿ'' ಎಂದು ಇನಿನುಡಿಗಳನ್ನು ನುಡಿದು, ''ನಿಮ್ಮನ್ನು ಪಡೆದದ್ದರಿಂದ ಇನ್ನು ಹಗೆಗಳು ಬೆಂಕಿಯಲ್ಲಿ ಬಿದ್ದ ಹತ್ತಿಯಂತಾದರು. ನಾನು ಯಾವುದೊಂದು ಕೊರತೆಯೂ ಇಲ್ಲದವನಾದೆನು'' ಎಂದೂ, ''ಇನ್ನು ಯೂಗಿಯನ್ನೂ ವಾಸವದತ್ತೆಯನ್ನೂ ನಾನು ಸುಲಭವಾಗಿ ಪಡೆಯುವೆನು. ನನ್ನ ತಪಸ್ಸು ನಿಮ್ಮನ್ನು ಕರೆತಂದು ಎಲ್ಲ ತೊಂದರೆಯನ್ನೂ ಹೋಗಲಾಡಿಸಿತು'' ಎಂದೂ ಹೇಳಿ ಸುಖಹೊಂದಿ ಅವರುಗಳ ಕಣ್ಣೀರನ್ನು ತೊಡೆದುಬಿಟ್ಟು ಮಂತ್ರಿಗಳನ್ನು ಕುರಿತು, ''ಪಾಂಚಾಲರಾಜನನ್ನು ಗೆಲ್ಲುವುದಕ್ಕೆ ತಕ್ಕ ಆಲೋಚನೆಯನ್ನು ಮಾಡಬೇಕು'' ಎಂದನು. ಒಡನೆ ವರ್ಷಕಾರನು, ''ನಾವು ಇನ್ನು ಮೇಲೆ ನಡೆಸಬೇಕಾದ್ದು ಇಂಥದು'' ಎಂಬುದನ್ನು ಬೆಳಗುವಂತೆ ತಿಳಿಯ ಹೇಳಿ ಪಾಂಚಾಲ ರಾಜನ ಬಳಿಯ ಸುದ್ದಿಗಳನ್ನು ಅರಿತು ಬರುವಂತೆ ಬೇಹಿನವರನ್ನು ಕೌಶಾಂಬೀ ನಗರಕ್ಕೆ ಕಳಿಸಿದನು. ಹೋದ ಬೇಹುಗಾರರು ಅಲ್ಲಿ ನಡೆದುವನ್ನು ಅರಿತುಬಂದು ಬೆಳಗುವಂತೆ ಹೇಳಿದರು.

ಆ ಮೇಲೆ, ವರ್ಷಕಾರನೂ ಉಳಿದವರೂ ನಡುನಡುವೆ ಮಾಡಿದ ಪ್ರಯತ್ನಗಳು ಹಲವು. ಎರಡು ಕಡೆಯವರೂ ಯುದ್ಧಮಾಡತೊಡಗಿದರು; ದೊಡ್ಡ ಯುದ್ಧ ನಡೆಯಿತು; ಹಲವರು ಸತ್ತರು. ಬಳಿಕ ಪಾಂಚಾಲರಾಜನು ಸೇನೆಗಳೊಡನೆ ಯುದ್ಧ ಮಾಡಲು ಹೊರಟನು. ಕೆಟ್ಟ ಶಕುನಗಳು ಹಲವು ತೋರಿದವು. ಪೂರ್ಣಕುಂಡಲನೆಂಬ ಮಂತ್ರಿ, ''ಈಗ ನಾವು ಯುದ್ಧಕ್ಕೆ ಹೋಗುವುದು ಕ್ರಮವಲ್ಲ. ಹಿಂದಿರುಗಿ

ಬಿಡುವುದೇ ಒಳ್ಳೆಯದು" ಎಂದು ತಡೆಯಲು ಆರುಣಿ ಕೇಳದವನಾಗಿ ಹೋಗಿ ಯುದ್ಧಮಾಡತೊಡಗಿದನು. ಆಗ,

"ಕೆಲೆದುವು ಮುನ್‌ಪಡೆ; ಮಲೆದುವು ಆನೆ;
ಅಬ್ಬರಿಸಿದರು ವೀರರ್; ತೂರಿದುವು ಹಲವು ಕಣೆ;
ಬಾಳ್ಗಳಿಡೆ ತಾಕಿದುವು; ಬೆಳಗಿದುವು ಕುಂತಗಳು;
ಬಿಟ್ಟುವು ತೋಮರಂ; ಬಿದ್ದುವಾ ಹಾಯ್ಗುದುರೆ;
ಕತ್ತರಿಸಿದುವು ದೊಡ್ಡ ಬಾಗುಕೈ; ಬಗ್ಗಿದುವು
ಕುಂಜರಗಳ್; ಕತ್ತರಿಸಿ ಬಿದ್ದುವಾ ಪಂದಲೆಗಳ್;
ಮುರಿದು ಬಿದ್ದುವು ಹಲವು ಗುಡಿ; ಹೊರಗೆ ಚೆಲ್ಲಿದುವು
ಹಲವು ಕರುಳ್; ಸೂಸಿ ಹರಿದುವು ನೆತ್ತರ್; ಕುಳಿಬಿತ್ತು
ಹೋರುಕಳ; ಎದ್ದುದುರೆ ಕೆಂದೂಳು; ಕುಸಿಯಿತಡಿ
ನೆಲ; ಬಿದ್ದರ್ ಮೇಲವರು; ಇಂತು ನಡೆದಿರಲಾಗ

(೩, ೨೭ : ೧೦೭–೧೬)

ಆರುಣಿಯ ಕಡೆಯ ವೀರರುಗಳು ಹಲವರು ಉದಯನನ ವೀರರುಗಳಿಂದ ಕೊಲ್ಲಲ್ಪಟ್ಟರು. ಕಾರ್ತವೀರ್ಯಾರ್ಜುನನನ್ನು ಕೊಂದ ಪರಶುರಾಮನಂತೆ ಪಾಂಚಾಲರಾಜನನ್ನು ಉದಯನನು ಕಡಿದು ಕೆಡವಿದನು. ಆ ಮೇಲೆ, "ಅರಸುಬಾಧ್ಯತೆಯನ್ನು ಉದಯನನು ಪಡೆದನು" ಎಂದು ನಾಡಿನವರೂ ನಗರದವರೂ ಅರಿತುಕೊಳ್ಳುವಂತೆ ಆನೆಯ ಮೇಲೆ ಗೆಲ್‌ಮುರಜವನ್ನೇರಿಸಿ ಡಂಗುರ ಹೊಡಸಿದರು. ಉದಯನನು ಬಳಿಕ ಬಾಧ್ಯರ ಮೂಲಕ ಪಾಂಚಾಲರಾಜನಿಗೆ ಉತ್ತರಕ್ರಿಯೆಗಳನ್ನು ಮಾಡಿಸಿದನು. ಕೋಟೆ ಬಾಗಿಲನ್ನು ಹೋಗಿ ಸೇರಿ, ಕದವನ್ನು ಹಾಕಿಕೊಂಡು ಒಳಗೆ ಇರುವ ನಗರದವರನ್ನು ವರ್ಷಕಾರನು ಕುರಿತು "ನೀವುಗಳು ಇನ್ನು ಸ್ವಲ್ಪವೂ ಅಂಜಬೇಡಿ. ನಿಮ್ಮ ನಾಯಕನಾದ ಉದಯನನು ಪಾಂಚಾಲರಾಜನನ್ನು ಕೊಂದುಬಿಟ್ಟನು. ಆದ್ದರಿಂದ ಕದವನ್ನು ತೆರೆದುಬಿಡಿ" ಎಂದು ಹೇಳಿದನು. ಕೇಳಿದ ನಗರದವರು, "ನಮ್ಮ ಹಳೆಯ ಅರಸನಾಗಿರುವ ಉದಯನನ ಮುದ್ರೆಹಾಕಿದ ಓಲೆಯನ್ನು ಕಂಡಲ್ಲದೆ ನಾವು ಕದವನ್ನು ತೆರೆಯೆವು" ಎಂದು ನಿರಾಕರಿಸಿದರು. ಒಡನೆ ಅವರುಗಳ ಸಂದೇಹ ಹೋಗುವಂತೆ "ಉದಯನನ ಮಂತ್ರಿಯಾದ ವೃಷಭಕನು ಬಂದಿದ್ದಾನೆ" ಎಂಬುದನ್ನು ಹೇಳಿದನು. ಹೇಳಲು, ಅವರುಗಳು ಬಹಳ ಆನಂದಗೊಂಡು ಕದವನ್ನು ತೆರೆದು ಬಾವುಟವೊದಲಾದುವನ್ನು ಎತ್ತಿ ಹಿಡಿದುಕೊಂಡು ಎದುರುಗೊಂಡರು. ಅಲ್ಲಿ ನಿಂತ ಪಾಂಚಾಲ

ರಾಜನ ಸ್ನೇಹಿತನಾದ ಕುಂಭಸೆಂಬವನನ್ನು ಕಂಡು ಅವನನ್ನು ಕೊಂದು ಮತ್ತೂ "ಹಗೆಯ ನಂಟರು ಇಲ್ಲಿ ಇರುವರಾದರೆ, ಅವರುಗಳನ್ನೂ ಕೊಲ್ಲುವೆವು" ಎಂದು ಹೇಳುತ್ತ ಆಯುಧಪಾಣಿಗಳಾದ ಹಲವರು ವೀರರುಗಳು ಕಾಪುಕಾಯಲು ನಡೆದು ಬೀದಿಬೀದಿಯಲ್ಲೂ "ಉದಯನನ್ ಬಾಳ್ಗೆ!" ಎಂದು ನುಡಿಯುವವರಾಗಿ ಎಲ್ಲರೂ ಅರಿಯುವಂತೆ ಆನೆಯ ಮೇಲೆ ಹರೆಯನ್ನು ಏರಿಸಿಬಿಟ್ಟರು.

---

# ಮಾಂಸಾಹಾರಿ ಸಸ್ಯಗಳು

ಸಾಧಾರಣವಾಗಿ ಸಸ್ಯಗಳು ಸ್ವಯಂಪಾಕ ಆಹಾರಿಗಳು. ಅವು ಗಾಳಿಯಿಂದ ಇಂಗಾಲಾಮ್ಲವನ್ನೂ ಭೂಮಿಯಿಂದ ನೀರು ಮತ್ತು ಲೋಹ ಪದಾರ್ಥಗಳನ್ನೂ ತೆಗೆದುಕೊಂಡು, ತಮ್ಮ ಬೆಳೆವಳಿಗೆಗೆ ಆವಶ್ಯಕವಾದ ಸಾಮಾನುಗಳೆಲ್ಲವನ್ನೂ ತಯಾರುಮಾಡಿಕೊಳ್ಳುತ್ತವೆ. ಈ ರೀತಿಯ ಗಿಡಗಳನ್ನು ಮನುಷ್ಯರಲ್ಲಿಯ ಸಸ್ಯಾಹಾರಿಗಳಿಗೆ ಹೋಲಿಸಬಹುದು. ಎಲೆಯೇ ಅವುಗಳ ಅಡಿಗೆಮನೆ. ಅದರಲ್ಲಿರುವ ಹಸಿರುಬಣ್ಣದ ಕ್ಲೋರೊಫಿಲ್ ಎಂಬ ವಸ್ತುವೇ ಒಲೆ; ಸೂರ್ಯಕಿರಣಗಳೇ ಬೆಂಕಿ.

ಆದರೆ, ಮನುಷ್ಯರಲ್ಲಿರುವಂತೆ ಗಿಡಗಳಲ್ಲಿಯೂ ಸಸ್ಯಾಹಾರಿಗಳು ಮಾಂಸಾಹಾರಿಗಳು ಎಂದು ಎರಡು ಬಗೆಗಳಿವೆ. ಗಿಡಗಳು ಮಾಂಸವನ್ನು ತಿನ್ನುತ್ತವೆ ಎಂದು ಹೇಳಿದರೆ ಇದನ್ನು ನೋಡದೆ ಇರುವ ಜನಗಳಿಗೆ ಆಶ್ಚರ್ಯವಾಗಬಹುದು. ಆದರೆ, ಈ ಗಿಡಗಳಿರುವ ಸ್ಥಳಗಳಿಗೆ ಹೋಗಿ, ಇವುಗಳ ಕಾರ್ಯಕಲಾಪಗಳನ್ನು ನೋಡಿ ಬಂದರೆ ಆಗ ಈ ಅಂಶವು ಚೆನ್ನಾಗಿ ಗೊತ್ತಾಗುತ್ತದೆ.

ಹಿಂದೆ, ಪಶುಪಕ್ಷಿಗಳನ್ನೂ ಮನುಷ್ಯರನ್ನೂ ಹಿಂಸಿಸಿ ತಿನ್ನುತ್ತಿದ್ದ ದೊಡ್ಡ ಮರಗಳಿದ್ದುವು ಎಂದು ಕಥೆಗಳಲ್ಲಿ ಓದಿದ್ದೇವೆ. ಆದರೆ ನಾವು ಅವಕ್ಕೆ ಅಷ್ಟು ಬೆಲೆ ಕೊಡುತ್ತಿಲ್ಲ. ಈಗ ಇಂಥ ಅದ್ಭುತಕಾರ್ಯ ಮಾಡಬಲ್ಲ ಮಹಾ ವೃಕ್ಷಗಳಿಲ್ಲದಿದ್ದರೂ ಸಣ್ಣ ಸಣ್ಣ ಹುಳುಹುಪಟೆಗಳನ್ನು ಬಲೆಬೀಸಿ ಹಿಡಿದು, ಅವುಗಳನ್ನು ಜೀರ್ಣಿಸಿ ಆಹಾರವಾಗಿ ತೆಗೆದುಕೊಳ್ಳುವ ಅದ್ಭುತಶಕ್ತಿಯುಳ್ಳ ಕೆಲವು ಸಣ್ಣ ಗಿಡಗಳಿವೆ. ಈ ಹುಳುಹಿಡಿಯುವ ಕೆಲಸವು ಅಂಟುಸ್ವಭಾವದ ಮುಳ್ಳುಗಳನ್ನು ಪಡೆದಿರುವುದರ ಫಲವಾಗಿ ಮೊದಲಾಯ್ತೆಂದು ಹೇಳಬಹುದು. ಬೇಡದ ಹುಳುಗಳು ಓಡಾಡುತ್ತಿರುವಾಗ ಪರಾಗದ ಜೊತೆಯಲ್ಲಿ ಅವು ಬೆರೆಯದಂತೆ ತಡೆಯುವುದಕ್ಕಾಗಿ ಗಿಡಗಳು ಅವುಗಳನ್ನು ಈ ಅಂಟು ಮುಳ್ಳುಗಳ ಸಹಾಯದಿಂದ ಹಿಡಿದು ಒಂದುಕಡೆ ಕೂಡಿಹಾಕುವ ಅಭ್ಯಾಸವು ಬಂತು; ಆಮೇಲೆ ಹೀಗೆ ಹಿಡಿದ ಹುಳುಗಳು ಕೊಳೆಯುವಿಕೆಯಿಂದ ಉತ್ಪತ್ತಿಯಾಗುವ ಸಸಾರಜನಕ ಪದಾರ್ಥದಿಂದ ಉಪಯೋಗ ಹೊಂದಿ, ಅದೇ ಅಭ್ಯಾಸವಾಗಲು, ಹುಳುಗಳನ್ನು ಹಿಡಿಯುವುದಕ್ಕೆ ಬೇರೆ ಬೇರೆ ವಿಧಾನಗಳನ್ನು ಕಲ್ಪಿಸಿಕೊಂಡು ಈ ಸಸ್ಯಗಳು ಮಾಂಸಾಹಾರಿಗಳಾಗಿ ಪರಿಣಮಿಸಿದುವು.—ಎಂದು ಹೇಳಬಹುದು. ಇವುಗಳಲ್ಲಿ ಕೆಲವು ನಮ್ಮ ದೇಶದಲ್ಲೇ ಬೆಳೆಯುತ್ತವೆ. ಮತ್ತೆ ಕೆಲವು

ಪರದೇಶಗಳಲ್ಲಿ ಬೆಳೆಯುತ್ತವೆ. ಇವುಗಳಲ್ಲಿ ಕೆಲವು ಗಿಡಗಳ ವಿಚಿತ್ರ ವರ್ತನೆಯನ್ನೂ ಜೀವನಕ್ರಮವನ್ನೂ ವಿವರಿಸುವುದೇ ಈ ಲೇಖನದ ಉದ್ದೇಶ.

ಈ ಜಾತಿಯ ಗಿಡಗಳು ಸುಮಾರು ನಾನೂರು ಇವೆ. ಇವು ಅಷ್ಟೇನು ಹೆಚ್ಚಿಲ್ಲದಿದ್ದರೂ ಇವುಗಳಲ್ಲಿ ಪ್ರಾಣಿಗಳನ್ನು ಹಿಡಿಯಲು ಮಾಡಿಕೊಂಡಿರುವ ಸಾಧನ ಸಾಮಗ್ರಿಗಳು, ವಿಚಿತ್ರವಾಗಿ, ವಿವಿಧವಾಗಿ, ವಿಪುಲವಾಗಿವೆ. ಇವುಗಳನ್ನು ಮೂರು ಬಗೆಗಳಾಗಿ ವಿಂಗಡಿಸಬಹುದು.

ಮೊದಲನೆಯ ಜಾತಿಯ ಗಿಡಗಳಲ್ಲಿ ಸಣ್ಣ ಪ್ರಾಣಿಗಳು ಮತ್ತು ಚಿಟ್ಟೆಗಳನ್ನು ಹಿಡಿಯಲು, ಜಾರುಹಳ್ಳಗಳಾಗಲಿ ಬಲೆಗಳ ರೂಪದಲ್ಲಿರುವ ಗಿಂಡಿಗಳಾಗಲಿ ಅಥವಾ ಬೇರೆ ಸಾಧನಗಳಾಗಲಿ ಇರುತ್ತವೆ. ಆದರೆ ಇವು ಯಾವ ರೀತಿಯ ಬಾಹ್ಯ ಚಲನೆಯನ್ನೂ ತೋರ್ಪಡಿಸುವುದಿಲ್ಲ. ಎರಡನೆಯ ಜಾತಿಯ ಮಾಂಸಾಹಾರಿ ಸಸ್ಯಗಳಲ್ಲಿ ಆಹಾರಕ್ಕಾಗಿ ಸಿಕ್ಕಿದ ಪ್ರಾಣಿಗಳನ್ನು ಹಿಡಿಯಲು ಕೆಲವು ಬಾಹ್ಯ ಚಲನೆಗಳು ಕಾಣುತ್ತವೆ. ಇವು ಪ್ರಾಣಿಗಳ ಸಂಪರ್ಕದ ಪರಿಣಾಮವಾಗಿ ಗ್ರಂಥಿಗಳ ರಸೋತ್ಪಾದನೆಯ ಮೂಲಕವೂ ಚಲನೆಯನ್ನು ವ್ಯಕ್ತಪಡಿಸುತ್ತವೆ. ಮೂರನೆಯ ಜಾತಿಯ ಗಿಡಗಳು ಇವೆರಡಕ್ಕಿಂತಲೂ ಬೇರೆಯಾದ ರೀತಿಯನ್ನು ಅನುಸರಿಸುತ್ತವೆ. ಇವುಗಳಲ್ಲಿ ಬಲೆಗಳಾಗಲಿ ಚಲನೆಯಾಗಲಿ ಇಲ್ಲ. ಆದರೆ ಗಿಡಗಳಲ್ಲೆ ಕೆಲವು ಅಂಟು ಸ್ವಭಾವದ ಗ್ರಂಥಿಗಳಿರುವುದರಿಂದ ಅವು ಮೇಲೆ ಹರದಾಡುವ ಹುಳುಗಳನ್ನು ಹೊರಗೆ ಹೋಗದಂತೆ ತಡೆದು ಅವುಗಳನ್ನು ಆಹಾರವಾಗಿ ಉಪಯೋಗಿಸಿಕೊಳ್ಳುತ್ತವೆ.

ಮೊದಲನೆಯ ಜಾತಿಗೆ ಸೇರಿದ ಗಿಡಗಳಲ್ಲಿ ಮುಖ್ಯವಾದುದು "ಬುಡ್ಡೀಕಾಯಿ ಗಿಡ" ಅಥವಾ ಯುಟ್ರಿಕ್ಯುಲೇರಿಯಾ. ಬೇರುಗಳಿಲ್ಲದೆ, ತೇಲುತ್ತಲೋ ಮುಳುಗಿಯೋ, ನೀರಿನಲ್ಲಿ ಬೆಳೆಯುವ ಗಿಡ ಇದು. ಆಹಾರಕ್ಕಾಗಿ ಪ್ರಾಣಿಗಳನ್ನೂ ನೀರಿನಲ್ಲಿರುವ ಚಿಕ್ಕ ಪುಟ್ಟ ಹುಳುಹುಪಟೆಗಳನ್ನೂ ಹಿಡಿಯಲು ಈ ಗಿಡದ ಭಾಗಗಳಲ್ಲೆಲ್ಲಾ ಸಣ್ಣ ಸಣ್ಣ ಬುಟ್ಟಿ ಅಥವಾ ಬುಡ್ಡಿಗಳಿವೆ.—(ಚಿತ್ರ ೧) ಇದರಿಂದಲೇ ಈ ಗಿಡಕ್ಕೆ ಬುಡ್ಡಿಕಾಯಿಗಿಡವೆಂದು ಹೆಸರು ಬಂದಿರುವುದು. ಈ ಬುಡ್ಡಿಗಳ ರಂಧ್ರಕ್ಕೆ ಒಂದು ಕದವಿದೆ. ಹೃದಯದ ಹೃತ್ಕರ್ಣ ಹೃತ್ಕುಕ್ಷಿಗಳಿಗೆ ನಡುವೆ ಇರುವ ಬಾಗಿಲಿನಂತೆ, ಇದು ಒಂದೇಕಡೆಗೆ ತೆರೆದುಕೊಳ್ಳುತ್ತದೆ. ಆದ್ದರಿಂದ ಈ ಬಾಗಿಲುಗಳು ಹೊರಗಿನಿಂದ ಒಳಕ್ಕೆ ಬರುವ ಹುಳುಗಳಿಗೆ ಸುಖಾಗಮನವನ್ನು ಕೊಡುತ್ತವೆಯೇ ಹೊರತು, ಹುಳುಗಳು ಒಳಕ್ಕೆ ಹೋದಮೇಲೆ ಹೊರಗೆ ಬರಲು ಬಿಡುವುದಿಲ್ಲ. ಹುಳುಗಳು ಮತ್ತು ಇತರ ಪ್ರಾಣಿಗಳು ಆ ರಂಧ್ರದ ಹತ್ತಿರ ಬಂದೊಡನೆಯೇ ಅದು ಕೆಳಕ್ಕೆ ಬಾಗುತ್ತದೆ.

(ಚಿತ್ರ ೨*a*.) ಇದರಿಂದ ಹುಳುವು ಒಳಕ್ಕೆ ಹೋಗುತ್ತದೆ. ಆಮೇಲೆ ಹೊರಕ್ಕೆ ಬರಲು ಒದ್ದಾಡುತ್ತದೆ. ಆದರೆ ಹೊರಕ್ಕೆ ಬರಲು ಸಾವೊಂದೇ ದಾರಿ. ಈ ವಿಚಿತ್ರ ಬಾಗಿಲಿನ ಜೊತೆಗೆ ರಂಧ್ರದ ಒಳಗೆ ಇಕ್ಕಡೆಗಳಲ್ಲಿಯೂ ದೃಢವಾದ ಮುಳ್ಳುಗಳಿವೆ. (ಚಿತ್ರ ೨*b*.). ಒಳಗಡೆ ರಸವತ್ತಾದ ನೀರು ತುಂಬಿರುತ್ತದೆ. ಒಳಕ್ಕೆ ಹೋದ ಪ್ರಾಣಿಯು ಈ




**ಚಿತ್ರ ೧. ಬುಡ್ಡಿಕಾಯಿ ಗಿಡ**

*a*. ಬುಡ್ಡಿಗಳು

ಕೂಪವನ್ನು ಕಂಡು ಹೆದರಿ ಹೊರಕ್ಕೆ ಬರಲು ಪ್ರಯತ್ನಪಟ್ಟರೂ ಸಾಧ್ಯವಾಗುವುದಿಲ್ಲ. ಅಲ್ಲಿಯೇ ಅದರ ಸಮಾಧಿಯಾಗುತ್ತದೆ. ಕೆಲವು ಪ್ರಾಣಿಗಳು ಬೇಗ ಸಾಯಬಹುದು. ಮತ್ತೆ ಕೆಲವು ಒಂದು ದಿನ ಅಥವಾ ಎರಡು ದಿನಗಳು ಬದುಕಿದ್ದು, ಆಮೇಲೆ ಜೀವ ಬಿಡಬಹುದು. ಅಂತೂ ಅವುಗಳ ಸಾವು ಅಲ್ಲಿಯೆ. ಇವು ಸತ್ತು ಕೊಳೆಯುವಿಕೆಯಿಂದ ಉತ್ಪತ್ತಿಯಾದ ಆಹಾರವನ್ನು ಹೀರಿಕೊಳ್ಳಲು ಬೇರೆಯ ಜೀವಕಣಗಳಿವೆ. (ಚಿತ್ರ ೨*c*.) ಇವುಗಳು ನಾಲ್ಕು ನಾಲ್ಕು ಒಟ್ಟಿಗೆ ಸೇರಿ ಸಿಲುಬೆಯ

ಆಕಾರದಲ್ಲಿರುತ್ತವೆ. (ಚಿತ್ರ ೩) ಇವು ಹೀರಿದ ಆಹಾರವು ಈ ಕಣಗಳ ಕೆಳಗಡೆ ಇರುವ ಸಾಧಾರಣ ಕಣಗಳಿಗೆ ಸಾಗಿಸಲ್ಪಡುತ್ತದೆ.

ಈ ಹುಳುಗಳು ಏಕೆ ಜಿಲದ ಬಾಗಿಲಿಗೆ ಬಂದು, ಅದಕ್ಕೆ ತಗುಲಿ, ಒಳಕ್ಕೆ ನುಗ್ಗಿ ನಾಶವಾಗುತ್ತವೆಯೆಂಬುದು ಇನ್ನೂ ಸರಿಯಾಗಿ ಗೊತ್ತಿಲ್ಲ. ಅವುಗಳಿಗೆ ಕಿಂದರಿಜೋಗಿಯ ಗಾನವನ್ನು ಆಲಿಸಿದ ಇಲಿಗಳಿಗಾದಂತೆ ಅಲ್ಲಿ ರುಚಿಯಾದ ಆಹಾರವಿದೆಯೆಂಬ ಆಸೆಯುಂಟಾಗಬಹುದು; ಅಥವಾ ಪ್ರಾಣಿಗಳು ಈ ಬುಡ್ಡಿಗಳನ್ನು ತಾವು ತಂಗಲು ಏರ್ಪಟ್ಟಿರುವ ವಿಶ್ರಾಂತಿಗೃಹವೆಂದು ಭಾವಿಸಬಹುದು. ಏಡಿಗಳು ಆ ರೀತಿ ಭಾವಿಸುವುದು ತಪ್ಪಲ್ಲ. ಏಕೆಂದರೆ ಬಾಗಿಲಲ್ಲಿರುವ ದಪ್ಪ ಮುಳ್ಳುಗಳ ರಚನೆಯಲ್ಲಿ ಈ ಬುಡ್ಡಿಗಳು ಏಡಿಗಳಂತೆಯೇ ಕಾಣುತ್ತವೆ.

ಪ್ರಾಣಿಗಳನ್ನು ಹಿಡಿಯಲು, ಒಂದುಕಡೆ ಮಾತ್ರ ತೆರೆಯುವ ಬುಡ್ಡಿಕಾಯಿ ಗಿಡವಲ್ಲದೆ ಈ ಜಾತಿಯ ಬೇರೆ ಗಿಡಗಳಿವೆ. ಅವುಗಳಲ್ಲಿ ಮುಖ್ಯವಾದುವು ನೆಪೆಂಥಿಸ್ ಅಥವಾ ಗಿಂಡಿಯಗಿಡ, ಸಾರಸೀನಿಯ ಮತ್ತು ಡಾರ್ಲಿಂಗ್‌ಟೋನಿಯ ಈ ಮೂರು. ಗಿಂಡಿಯಗಿಡಗಳಲ್ಲಿ ಗಿಂಡಿಯ ಆಕಾರದ ಕಾಯಿಗಳಂತಿರುವ ಎಲೆಗಳಿರುತ್ತವೆ. ಈ ಗಿಂಡಿಯ ಆಕಾರ ಮತ್ತು ರೂಪದಲ್ಲಿ ಬಹಳ ವಿಧಗಳಿವೆ. ಕೆಲವು ಉದ್ದವಾದ ಕೊಳವೆಗಳಂತಿರುತ್ತವೆ. ಮತ್ತೆ ಕೆಲವು ಹೂವಿನ ಬುಟ್ಟಿಗಳಂತಿರುತ್ತವೆ. ಅವುಗಳನ್ನು ಮಾಡಿರುವ ಮಾಟ, ರೀತಿ, ಅವುಗಳಿಗೆ ಕೊಟ್ಟಿರುವ ಬಣ್ಣ ಎಲ್ಲಾ ಪ್ರಕೃತಿಯ ಕಲಾಚಾತುರ್ಯಕ್ಕೆ ನಿದರ್ಶನ. ಇಷ್ಟೆಲ್ಲಾ ಭೇದವಿದ್ದರೂ ಬೀಸುವ ಬಲೆಯಲ್ಲೇನೂ ವ್ಯತ್ಯಾಸವಿಲ್ಲ.

ಇವು ಹುಳುಗಳನ್ನು ಹಿಡಿಯುವ ವಿಧಾನದಲ್ಲಿ ಮೂರು ಭಾಗಗಳಿವೆ: ಮೊದಲನೆಯದು, ಹುಳುಗಳನ್ನು ಆಕರ್ಷಿಸಲು ಉಪಾಯ. ಎರಡನೆಯದು, ಹುಳುಗಳನ್ನು ಹಿಡಿಯಲು ಮತ್ತು ಅವು ತಪ್ಪಿಸಿಕೊಂಡು ಹೋಗದಂತೆ ಬೇಡಿಹಾಕಿ ಕೂಡಲು ಸಾಧನ. ಮೂರನೆಯದು, ಹಿಡಿದ ಪ್ರಾಣಿಗಳನ್ನು ಸಾಯಿಸಿ, ಕರಗಿಸಿ, ಅರಗಿಸಿ ಕೊಳ್ಳುವ ಕ್ರಮ—ಆಕರ್ಷಣೆ, ಬೇಟೆ, ಊಟ. ಹೀಗೆ ಹುಳುಗಳು ಬಣ್ಣಕ್ಕೆ ಬೆರಗಾಗಿ, ಜೇನಿಗೆ ಆಸೆಪಟ್ಟು, ಒಳಗೆ ನುಗ್ಗಿಬರುತ್ತವೆ. ಒಳಗೆ ಬಂದರೆ, ಹೊರಗೆ ಹೋಗಲು ಅಪ್ಪಣೆಯಿಲ್ಲ. ಬಾಗಿಲಲ್ಲಿ ಗರಗಸದ ಹಲ್ಲಿನಂತೆ ಮೊನಚಾಗಿರುವ ಮುಳ್ಳುಗಳು ತಡೆಯುವುವು. (ಇವು ಒಳಮುಖನಾಗಿ ಬಾಗುವುದರಿಂದ ಹುಳು ಪ್ರವೇಶಿಸುವುದಕ್ಕೆ ಅಡ್ಡಿಯಾಗುವುದಿಲ್ಲ.) ಒಳಗೆ ನಿಂತರೆ, ಅಲ್ಲಿಯ ಜೀವಕಣಗಳು ಉತ್ಪತ್ತಿಮಾಡುವ ರಸಗಳಿಂದ ಅವು ಕೊಳೆಯುತ್ತವೆ. ಹೀಗೆ ಕೊಳೆತು ಸಿದ್ಧವಾದ ಆಹಾರವನ್ನು ಗ್ರಂಥಿಗಳು ಹೀರಿಕೊಂಡುಬಿಡುತ್ತವೆ.










**ಚಿತ್ರ ೨. ಬುಡ್ಡಿಕಾಯಿಗಿಡದ ಒಂದು ಬುಡ್ಡಿಯನ್ನು ದೊಡ್ಡದಾಗಿ ಮಾಡಿ ತೋರಿಸಿರುವುದು**

*a*, ಬಾಗಿಲು ; *b*, ಬಾಗಿಲಲ್ಲಿರುವ ಮುಳ್ಳುಗಳು ; *c*, ರಸವನ್ನು ಹೀರಿಕೊಳ್ಳುವ ಕಣಗಳು

**ಚಿತ್ರ ೩. ರಸವನ್ನು ಹೀರಿಕೊಳ್ಳುವ ಒಂದು ಕಣವನ್ನು ದೊಡ್ಡದಾಗಿ ಮಾಡಿ ತೋರಿಸಿರುವುದು**

**ಚಿತ್ರ ೩a. ಸಾರಸೀನಿಯದ ಒಂದು ಗ್ರಂಥಿ**

ಡಾರ್ಲಿಂಗ್‌ಟೋನಿಯಾ, ಸಾರಸೇನಿಯ ಮತ್ತು ನೆಪೆಂಥಿಸ್ (ಚಿತ್ರ ೪.) ಈ ಮೂರು ಗಿಡಗಳೂ ಬ್ರೆಸಿಲ್, ಆಸ್ಟ್ರೇಲಿಯಾ, ಉತ್ತರ ಅಮೆರಿಕ ಮತ್ತು ಪಶ್ಚಿಮ ಇಂಡೀಸ್ ದೇಶಗಳಲ್ಲಿ ಬೆಳೆಯುತ್ತವೆ.



**ಚಿತ್ರ ೪. ಗಿಂಡಿಯಗಿಡ**

ನೆಪೆಂಥಿಸ್ ಅಥವಾ ಗಿಂಡಿಯಗಿಡದಲ್ಲಿ ಹುಳುಗಳನ್ನು ಹಿಡಿಯುವ ರೀತಿಯು ಆಶ್ಚರ್ಯಕರವಾದುದು. ಇದರ ಎಲೆಯ ತುದಿ ಉದ್ದವಾಗಿ ಗಿಂಡಿಗಳ ರೂಪದಲ್ಲಿ ಮಾರ್ಪಟ್ಟು ಅದರ ಮೇಲ್ಗಡೆ ಕಾಫಿಯ ಪಾತ್ರೆಗೆ ಇರುವ ಮುಚ್ಚಳದಂತೆ ಒಂದು ಮುಚ್ಚಳವಿರುತ್ತದೆ. ಗಿಂಡಿಯ ಮುಖವು ಬಣ್ಣಬಣ್ಣಗಳಿಂದ ಕೂಡಿ ಸುಂದರವಾಗಿರುತ್ತದೆ. ಆದರೆ ಒಳಗೆ ಕೋರೆದಾಡೆಗಳಂತಿರುವ ಮುಳ್ಳುಗಳಿರುತ್ತವೆ. (ಚಿತ್ರ ೪ *a* ii.) ಚಿಟ್ಟೆಗಳು ಇದರ ಮೋಹಿನೀ ಬಣ್ಣದಿಂದಲೂ, ಮಧುರವಾದ ಜೇನಿನ ಆಸೆಯಿಂದಲೂ, ಆಕರ್ಷಿಸಲ್ಪಟ್ಟು ಗಿಂಡಿಗಳ ಮೇಲಿರುವ ಹೊದಿಕೆಯ ಮೇಲೆ ಕುಳಿತುಕೊಳ್ಳುತ್ತವೆ. "ತಿನ್ನಬಾರದ ಹಣ್ಣು ಬಲು ರುಚಿ" ಎನ್ನುವಂತೆ ಈ ಕುಡಿಯಬಾರದ ಜೇನಿನ ರುಚಿನೋಡಿ, ಇನ್ನಷ್ಟು ಕುಡಿಯಬೇಕೆಂಬ ಆಸೆಯಿಂದ ಅವು ಒಳಗಿನ ತನಕ

ಹರಿದುಕೊಂಡು ಹೋಗುತ್ತವೆ. ಆದರೆ ಈ ಗಿಂಡಿಯ ಇಕ್ಕೆಲಗಳೂ ಜಾರಿಕೆಯಾದ್ದರಿಂದ ಅವು ಜಾರಿ ಪಾತಾಳಕ್ಕೆ ಬೀಳುತ್ತವೆ. ಬಿದ್ದ ಕೂಡಲೆ ಬುದ್ಧಿ ಬಂದು, ಹೊರಗೆ ಹೋಗಲು ಒದ್ದಾಡುತ್ತವೆ. ಆದರೆ ಎಷ್ಟೇ ಪ್ರಯತ್ನಪಟ್ಟಾಗ್ಯೂ ಒಳಗಡೆಯ




**ಚಿತ್ರ ೪ a. ಗಿಂಡಿಯ ಮಾಟ**

(i) ರಸದ ಕೊಳ (ii) ಬಾಗಿಲಲ್ಲಿರುವ ಮೊನಚಾದ ಮುಳ್ಳುಗಳು

ಗೋಡೆಗಳ ಮೇಲೂ ಬಾಗಿಲಲ್ಲೂ ಇರುವ ಮುಳ್ಳುಗಳಿಂದ ಇರಿಯಲ್ಪಟ್ಟು, ಹೊರಗೆ ಹೋಗುವುದು ಸಾಧ್ಯವಾಗುವುದಿಲ್ಲ. ಹೀಗೆ ಈ ಪ್ರಾಣಿಗಳು ಅವುಗಳಿಗಾಗಿಯೇ ಸಿದ್ಧಮಾಡಿಟ್ಟಿದ್ದ ರಸದ ಕೊಳದಲ್ಲಿ ಮಿಂದು (ಚಿತ್ರ ೪ *a* i.) ಕರಗಿ ಹೀರಲ್ಪಡುತ್ತವೆ. ಒಂದು ಸಾರಿ, ಒಂದು ಲಕ್ಷ್ಮೀಚೇಳು ಅರ್ಧ ಒಳಗೆ ಹೋಗಿತ್ತಂತೆ; ಇನ್ನರ್ಧ ಹೊರಗಡೆ ಇದ್ದು ತಪ್ಪಿಸಿಕೊಳ್ಳಲು ಯತ್ನಿಸಿದಾಗ್ಯೂ ಸಾಧ್ಯವಾಗದೆ, ಒಳಗಡೆ




ಚಿತ್ರ ೫. ಬೆಣ್ಣೆಗಿಡದ ಎಲೆಯು ತುದಿ ಬಗ್ಗಿರುವುದು

*a*, ರಸೋತ್ಪತ್ತಿ ಮಾಡುವ ಗ್ರಂಥಿಗಳು

ಚಿತ್ರ ೭a. ಹನಿತಾಗು ಗಿಡದ ಒಂದು ಎಲೆ

*a*, ರಸದ ಮುಳ್ಳುಗಳು

ಚಿತ್ರ ೭b. ರಸದ ಮುಳ್ಳಿನ ಸ್ವರೂಪ: ಒಳಗಡೆ ರಸೋತ್ಪತ್ತಿ ಮಾಡುವ ಗ್ರಂಥಿಯನ್ನು ಕಾಣಬಹುದು

ಇದ್ದ ಅರ್ಥ ಕೊಳೆತು, ತಾನು ಸಾಯಬೇಕಾಗಿ ಬಂದಿತಂತೆ. ಹೀಗೆಂದ ಮೇಲೆ, ಈ ರಾಕ್ಷಸೀಗಿಡದ ಸಾಮರ್ಥ್ಯವೆಷ್ಟೆಂದು ಊಹಿಸಿಕೊಳ್ಳಬಹುದು!

ರೆಕ್ಕೆಯ ಹುಳುಗಳನ್ನು ಬಹುವಾಗಿ ಹಿಡಿಯುವ ಗಿಡವೆಂದರೆ ಡಾರ್ಲಿಂಗ್ ಟೋನಿಯಾ. ಇದರ ಗಿಂಡಿಯ ತುದಿಯಲ್ಲಿ ಜೇನು ಇರುತ್ತದೆ. ಮೀನಿನ ಬಾಲದಂತೆ ಇರುವ ನಸುಗೆಂಪಿನ ಸಣ್ಣ ಎಲೆಯು, ಗಿಂಡಿಯ ಬಾಗಿಲಿಗೆ ಬೋರ್ಡ್ ಹಾಕಿದಂತೆ ಇದ್ದು ಹುಳುಗಳಿಗೆ ಸುಖಾಗಮನವನ್ನು ಬಯಸುತ್ತದೆ. ಕೊಳವೆಯು ಹಾವಿನಂತೆ ಸುತ್ತಿಕೊಂಡಿರುತ್ತದೆ.—ಕಾರಣ, ಹುಳುಗಳು ಹೊರಗೆ ಹೋಗದಂತೆ ತಡೆಯಲಿರ ಬಹುದು. ಒಂದು ಜಾತಿಯ ನೊಣ ಮಾತ್ರ (Sarcophaga Sarraceniae) ಸರಾಗವಾಗಿ ಇದರ ಒಳಕ್ಕೆ ಹೋಗಿ, ಅಲ್ಲಿರುವ ಸತ್ತ ಪ್ರಾಣಿಗಳನ್ನು ತಿಂದು, ಜೇನುಕುಡಿದು, ಸುಲಭವಾಗಿ ಈಚೆಗೆ ಬಂದುಬಿಡುತ್ತದೆ. ಮಿಕ್ಕ ಹುಳುಗಳಿಗೆ ಶೂಲ ಪ್ರಾಯವಾಗಿರುವ ಮುಳ್ಳುಗಳಿಂದ ಇದಕ್ಕೇನೂ ಅಪಾಯವಾಗುವುದಿಲ್ಲ. ಏಕೆಂದರೆ ಇದರ ಕಾಲಿನ ಮಾಟವು ಅಲ್ಲಿನ ಮುಳ್ಳುಗಳಿಗನುಸಾರವಾಗಿ ಇರುವುದರಿಂದ, ಇದು ಸುಖವಾಗಿ ಹತ್ತಿ ಹೊರಕ್ಕೆ ಬರುತ್ತದೆ. ಇದೇ ರೀತಿ, ರೆಕ್ಕೆಗಳಿಲ್ಲದ ಹುಳುಗಳನ್ನು ಹಿಡಿಯಲು ಆಸ್ಟ್ರೇಲಿಯಾದ ಸಿಫೆಲೋಟಸ್ ಎಂಬ ಗಿಡವು ಅನುಕೂಲವಾಗಿ ಮಾರ್ಪಟ್ಟಿದೆ.

ಈ ಮೇಲೆ ಹೇಳಿದ ಗಿಡವಾವುದೂ ಪ್ರಾಣಿಗಳನ್ನು ಹಿಡಿಯುವುದರಲ್ಲಿ ಯಾವ ರೀತಿಯ ಬಾಹ್ಯ ಚಲನೆಯನ್ನೂ ತೋರ್ಪಡಿಸುವುದಿಲ್ಲ. ಮುಂದೆ ಹೇಳುವ, ಎರಡ ನೆಯ ಗುಂಪಿಗೆ ಸೇರಿದ, ಮಾಂಸಾಹಾರಿ ಸಸ್ಯಗಳಲ್ಲಿ ಮಾಂಸದ ಅಥವಾ ಪ್ರಾಣಿ ಗಳ ಸಂಪರ್ಕದಿಂದ ಒಂದು ರೀತಿಯ ಚಲನೆಯನ್ನು ನಾವು ನೋಡಬಹುದು.

ಈ ಜಾತಿಗೆ ಉದಾಹರಣೆಯಾಗಿ ಮೊದಲು ಪಿಂಗಿಕ್ಯೂಲ ಎಂಬ ಗಿಡವನ್ನು ತೆಗೆದುಕೊಳ್ಳೋಣ. ಇದಕ್ಕೆ "ಬೆಣ್ಣೆಗಿಡ" ವೆಂದು ಹೆಸರು. ಇದು ಕೆನಡಾ, ಉತ್ತರ ಅಮೆರಿಕ ಮತ್ತು ಹಿಮಾಲಯದ ತಪ್ಪಲುಗಳಲ್ಲಿ ಬೆಳೆಯುವ ಗಿಡ. ಇದು ಕೊಚ್ಚೆ ಅಥವಾ ಜೌಗು ಪ್ರದೇಶದಲ್ಲಿ ಬೆಳೆಯುತ್ತದೆ. ಎಲೆಗಳ ಮೇಲೆ ತಿಳಿ ಹಳದಿ ಬಣ್ಣದ ಅಂಟುಪದಾರ್ಥವು ಇರುವುದರಿಂದ ಇದನ್ನು ಬೆಣ್ಣೆಗಿಡವೆಂದು ಕರೆಯು ತ್ತಾರೆ. ಮಂಕು ಹುಳುಗಳು ವಿಹಾರಾರ್ಥವಾಗಿ ಬಂದು, ಎಲೆಗಳ ಮೇಲೆ ಕುಳಿತು ಕೊಂಡರೆ, ಎಲೆಗಳಲ್ಲಿ ಜಿನುಗಿರುವ ಅಂಟಿನಿಂದ ಅಲ್ಲೇ ಸಿಕ್ಕಿಕೊಳ್ಳುತ್ತವೆ. ಇದರ ಜೊತೆಗೆ ಎಲೆಗಳ ಅಂಚು ಸ್ವಲ್ಪ ಸುತ್ತಿಕೊಂಡಿರುತ್ತದೆ. ಹುಳುಗಳು ಎಲೆಗಳ ಮೇಲೆ ಕೂತುಕೊಂಡ ಮೇಲೆ ಈ ಅಂಚು ಮತ್ತಷ್ಟು ಸುತ್ತಿ, ಹುಳುವನ್ನು ತಪ್ಪಿಸಿ ಕೊಂಡು ಹೋಗದ ಹಾಗೆ ಹಿಡಿದುಕೊಳ್ಳುತ್ತದೆ.—(ಚಿತ್ರ ೫.) ಅನಂತರ, ಎಲೆಗಳ

ಮೇಲಿರುವ ಸಣ್ಣ ಗ್ರಂಥಿಗಳು (ಚಿತ್ರ ೫ *a*) ಸಸಾರಜನಕ ಪದಾರ್ಥಗಳನ್ನು ಜೀರ್ಣಿಸುವಂಥ ರಸಗಳನ್ನು ಸುರಿಸುತ್ತವೆ. ಇವು ಚಿಟ್ಟೆಯ ರೆಕ್ಕೆ, ಕಾಲು, ಇವೆರಡನ್ನು ಬಿಟ್ಟು, ದೇಹದ ಮಿಕ್ಕ ಎಲ್ಲಾ ಭಾಗಗಳನ್ನೂ ಜೀರ್ಣಿಸುತ್ತವೆ. ಆಮೇಲೆ, ಸುತ್ತಿದ್ದ ಎಲೆಯು ಬಿಚ್ಚಿಕೊಂಡು ಮುಂದಿನ ಪ್ರಾಣಿಯ ಬೇಟೆಗಾಗಿ ಕಾದು ಕೂರುತ್ತದೆ. ಪ್ರಾಣಿಗಳಲ್ಲದೆ ಎಲೆಗಳ ಚೂರು ಅಥವಾ ಗಿಡಗಳ ಭಾಗಗಳು ಬಿದ್ದರೂ, ಅವು ಕೂಡ ಮೇಲೆ ಹೇಳಿದ ರೀತಿಯಲ್ಲಿ ಜೀರ್ಣವಾಗುತ್ತವೆ. ಈ ಗ್ರಂಥಿಗಳು ಪ್ರಾಣಿಗಳ ಜಠರರಸಕ್ಕೆ ಸಮನಾದ ರಸವನ್ನು ಸುರಿಸುತ್ತವೆ. ಈ ಎಲೆಗಳಿಗೆ ಕ್ರಿಮಿನಾಶಕ ಶಕ್ತಿ ಕೂಡ ಇದೆ.

ಈ ಜಾತಿಗೆ ಸೇರಿದ ಎರಡನೆಯ ಗಿಡವೆಂದರೆ, 'ಡ್ರಾಸಿರಾ' ಅಥವಾ 'ಸನ್‌ಡ್ಯೂ'. ಇದನ್ನು ಹಳ್ಳಿಯ ಕಡೆಗಳಲ್ಲಿ "ಹಸಿತಾಗು" ಎಂದು ಕರೆಯುತ್ತಾರೆ. ಮೇಲೆ ಹೇಳಿದ "ಬೆಣ್ಣೆಗಿಡ"ದಂತೆ ಇದೂ ಕೊಚ್ಚೆ ಮತ್ತು ಜೌಗು ಪ್ರದೇಶದಲ್ಲಿ ಬೆಳೆಯುತ್ತದೆ. ಸಾಧಾರಣವಾಗಿ ಒತ್ತದ ಕೆಸರುಗದ್ದೆಗಳಲ್ಲಿ ಈ ಗಿಡವನ್ನೂ ಇದರ ಜೊತೆಗೆ ಬೆಳೆದಿರುವ 'ಬುಡ್ಡಿಗಿಡ'ವನ್ನೂ ನೋಡಬಹುದು. ಬೆಂಗಳೂರಿನಲ್ಲಿ ಮಲ್ಲೇಶ್ವರದ ಕೆರೆಯ ಕಡೆ ಹೋದರೆ, ನೀರುನಿಂತು ಕೊಚ್ಚೆಯಾಗಿರುವ ಸ್ಥಳಗಳಲ್ಲೆಲ್ಲಾ ಕೆಂಪಗೆ ಜಿಡ್ಡುಜಿಡ್ಡಾಗಿರುವ ಪ್ರದೇಶವು ಕಣ್ಣಿಗೆ ಬೀಳುತ್ತದೆ. ಕೆಂಪು ಬಣ್ಣವು ಈ ಗಿಡಗಳ ಕೆಂಪುಎಲೆಯಿಂದ ಉಂಟಾದದ್ದು. ಈ ಹಸಿತಾಗು ಸಸ್ಯವು, ಹಸಿರು ಮತ್ತು ಕೆಂಪು ಬಣ್ಣದ ಎಲೆಗಳನ್ನುಳ್ಳ ಸಣ್ಣ ಸಸ್ಯ. ಇದರ ರಕ್ತವರ್ಣವು ರಾಕ್ಷಸೀ ಜೀವನವನ್ನು ತೋರಿಸುತ್ತದೆ. ಈ ಗಿಡದಲ್ಲಿ ಗುಂಡಗೆ ಚಕ್ರಾಕಾರದಲ್ಲಿ ನಾಲ್ಕು ಐದು ಎಲೆಗಳು ಇರುತ್ತದೆ. ಅವುಗಳ ಮಧ್ಯದಿಂದ ಹೊರಟ ಸಣ್ಣ ಕಡ್ಡಿಯಮೇಲೆ ಕೆಂಪು ಹೂವುಗಳು ಬಿಡುತ್ತವೆ. (ಚಿತ್ರ ೬. ೬*a*.) ಎಲೆಗಳ ಮೆಲ್ಗಡೆಯಲ್ಲಿ ಮತ್ತು ಅಂಚಿನಲ್ಲೆಲ್ಲಾ ಮುತ್ತುಪೋಣಿಸಿದಂತೆ ಸಣ್ಣ ಗದೆಯ ಆಕಾರದ ರಸದ ಮುಳ್ಳುಗಳು ಮೆತ್ತೆಯ ಮೇಲೆ ಚುಚ್ಚಿದ ಗುಂಡುಸೂಜಿಗಳಂತೆ ಕಾಣುತ್ತವೆ. ಮಧ್ಯದಲ್ಲಿರುವವು ಕೊನೆಯವುಗಳಿಗಿಂತ ಸಣ್ಣವಾಗಿರುತ್ತವೆ. ಒಂದು ಎಲೆಯಲ್ಲಿ ಈ ರಸದ ಮುಳ್ಳುಗಳು ಸುಮಾರು ೨೦೦ರಷ್ಟು ಇರುತ್ತವೆ. ಗದೆಯ ತಲೆಯಂತೆ ತುದಿಯಲ್ಲಿ ದಪ್ಪಗಿರುವ ಭಾಗವು ರಸಗಳನ್ನು ಉತ್ಪತ್ತಿಮಾಡುವ ಒಂದು ಗ್ರಂಥಿ. ಅದು ಉತ್ಪತ್ತಿಮಾಡುವ ಅಂಟುರಸವು ಬಿಸಿಲಿನಲ್ಲಿ ಮಂಜುಹನಿಗಳಂತೆ ಮಿನುಗುವುದರಿಂದ, ಈ ಗಿಡಕ್ಕೆ "ಹನಿತಾಗು" ಎಂದು ಹೆಸರು ಬಂದಿದೆ.

ಗಾಳಿಯು ಬೀಸಿದರೇ ಆಗಲಿ, ಮಳೆಯು ಬಿದ್ದರೇ ಆಗಲಿ, ಕಲ್ಲು ಅಥವಾ ಇನ್ನಿತರ ನಿರ್ಜೀವ ನಿಸ್ಸಾರ ಪದಾರ್ಥಗಳನ್ನು ಎಲೆಗಳ ಮೇಲೆ ಇಟ್ಟರೇ ಆಗಲಿ




ಚಿತ್ರ ೭. ಹನಿತಾಗು ಅಥವಾ ಸೂರ್ಯನ ಮಂಜುಗಿಡ

*a*. ಹೂವುಬಿಡುವ ತಾಳು

ರಸದ ಮುಳ್ಳುಗಳು ಕೆಲಸಮಾಡುವುದಿಲ್ಲ. ಆದರೆ ಹುಳುವಾಗಲಿ ಸಸಾರಜನಕ ಪದಾರ್ಥವಾಗಲಿ ಈ ಎಲೆಗಳ ಮೇಲೆ ಕೂತರೆ, ಆಗ ಈ ಮುಳ್ಳುಗಳಲ್ಲಿ ಬದಲಾವಣೆಯಾಗುತ್ತದೆ. ಪ್ರತಿಯೊಂದು ರಸದ ಮುಳ್ಳಿನ ಮುಂದಿನ ತುದಿಯಲ್ಲಿ ರಸಗಳನ್ನು ಉತ್ಪತ್ತಿಮಾಡುವ ಜೀವಕಣಗಳನ್ನುಳ್ಳ ಒಂದು ಗ್ರಂಥಿ ಇದೆ. (ಚಿತ್ರ. ೭*a*, *b*. ಪುಟ ೧೦೪) ಇದು ಹೊಳೆಯುತ್ತಿರುತ್ತದೆ. ಚಿಟ್ಟೆ ಮತ್ತು ಇತರ ಹುಳುಗಳು ಮುತ್ತುಗಳಂತೆ ಹೊಳೆಯುತ್ತಿರುವ ಈ ರಸದ ಮುಳ್ಳುಗಳನ್ನು ನೋಡಿ, ಮೋಹಗೊಂಡು, ಮತ್ತು ಅದು ಜೇನು ಎಂದು ಭಾವಿಸಿ, ಎಲೆಗಳ ಮೇಲೆ ಒಂದು ಕುಳಿತುಕೊಳ್ಳುತ್ತವೆ; ತಕ್ಷಣವೆ ತಮ್ಮ ಕೆಲಸಕ್ಕಾಗಿ ಪಶ್ಚಾತ್ತಾಪಪಟ್ಟು ಬಿಡಿಸಿಕೊಳ್ಳಲೂ ಪ್ರಯತ್ನಪಡುತ್ತವೆ. ಆದರೆ ಈ ಮುಳ್ಳಿನ ಅಂಟಿನಿಂದ ತಪ್ಪಿಸಿಕೊಳ್ಳಲು ಆಗುವುದಿಲ್ಲ. ಮತ್ತು ಈ ಮುಳ್ಳುಗಳು ಬಾಗಿ, ಸಿಕ್ಕಿದ ಪ್ರಾಣಿಯು ಓಡಿಹೋಗದಂತೆ ಅದುಮಿಕೊಂಡು ರಸಗಳನ್ನು ಯಥೇಷ್ಟವಾಗಿ ಸುರಿಸುತ್ತವೆ. ಆಮೇಲೆ ಜಠರರಸಕ್ಕೆ ಸಮಾನವಾದ ಜೀರಕರಸವನ್ನು ಸುರಿಸಿ ಆಹಾರವನ್ನು ಅರಗಿಸಿಕೊಳ್ಳುತ್ತವೆ. ಹುಳುಗಳು ಈ ರಸಪ್ರವಾಹದಲ್ಲಿ ಮುಳುಗಿ, ಆತ್ಮಹತ್ಯಮಾಡಿಕೊಂಡು ಪ್ರಾಣಬಿಡುತ್ತವೆ.

ಈ ಗಿಡದಲ್ಲಿ ನಾವು ವಿಚಿತ್ರವಾದ ಇನ್ನೊಂದು ಅಂಶವನ್ನು ನೋಡಬಹುದು. ಒಂದು ಮುಳ್ಳು ಹುಳುವಿನ ಸಂಪರ್ಕದಿಂದ ಬಗ್ಗಿ ರಸವನ್ನು ಸುರಿಸುತ್ತಲೇ (ಕೀಲನ್ನು ಅದುಮಿದರೆ ಯಂತ್ರದ ನಾನಾ ಭಾಗಗಳು ತಿರುಗಲು ಮೊದಲುಮಾಡುವಂತೆ) ಒಂದರ ಮೇಲೆ ಒಂದರಂತೆ ಎಲ್ಲಾ ಮುಳ್ಳುಗಳೂ ಚಲಿಸಿ ರಸೋತ್ಪತ್ತಿ ಮಾಡುತ್ತವೆ; ಮತ್ತು ಎರಡು ಮಾಂಸದ ತುಂಡುಗಳನ್ನು ಒಂದೇ ಎಲೆಯ ಎರಡು ಭಾಗಗಳಲ್ಲಿ ಇಟ್ಟರೆ, ಆ ಎಲೆಯ ಮೇಲಿನ ಮುಳ್ಳುಗಳೆಲ್ಲಾ ಕವಾತಿನಲ್ಲಿ ವಿಂಗಡಮಾಡಿದ ಸೈನಿಕರಂತೆ, ಎರಡು ಭಾಗವಾಗಿ ವಿಂಗಡಿಸಿಕೊಂಡು, ಒಂದೊಂದು ಭಾಗ ಒಂದೊಂದು ಚೂರನ್ನು ಮುತ್ತುತ್ತದೆ. ಎರಡು ಸಣ್ಣಪ್ರಾಣಿಗಳು ಕೂತಾಗಲೂ ಇದೇ ರೀತಿ ನಡೆಯುತ್ತದೆ. ಜೀರ್ಣಿಸುವ ಕಾರ್ಯವು ಪೂರ್ತಿಯಾದ ಮೇಲೆ ಮುಳ್ಳುಗಳು ಎದ್ದು ಪುನಃ ಬೇಟೆಗೆ ಕಾದು ಕೂರುತ್ತವೆ. ನೊಣ, ಇರುವೆ, ಗೊದ್ದ, ಸಣ್ಣ ಚಿಟ್ಟೆಗಳು, ಗುಂಗಿಹುಳುಗಳು ಇವೇ ಮೊದಲಾದ ಪ್ರಾಣಿಗಳಿಗೆ ಈ ಗಿಡವು ಸಮಾಧಿಸ್ಥಾನವಾಗಿದೆ.

ಪ್ರಾಣಿಗಳ ಸಂಪರ್ಕದಿಂದ ಒಂದು ಕಡೆಯಲ್ಲುಂಟಾದ ಚಲನವು ಮಗ್ಗುಲು ಕಣಗಳ ಜೀವರಸವಾಹಿನಿಯ ಮೂಲಕ ಎಲೆಯ ಮಿಕ್ಕ ಭಾಗಗಳಿಗೂ ಸಂಚರಿಸಿ ಆಹಾರ ಸಿಕ್ಕಿರುವ ವಿಷಯವನ್ನು ಎಲ್ಲಾ ಮುಳ್ಳುಗಳಿಗೂ ತಿಳಿಸುತ್ತದೆ. ಈ ಎಲೆಗಳ ಮುಳ್ಳುಗಳು ಎಷ್ಟು ಸೂಕ್ಷ್ಮಗ್ರಾಹಿಯಾಗಿವೆ ಎಂಬುದಕ್ಕೆ ಒಂದು ನಿದರ್ಶನವನ್ನು

ಕೊಡಬಹುದು. ಒಂದು ಕೂದಲಿನ ತುಂಡನ್ನು (೦.೨ m.m. ಉದ್ದ ಮತ್ತು ೦.೦೦೦೦೮೨೨ mg. ಭಾರದ ತುಂಡನ್ನು) ಈ ಡ್ರಾಸಿರಾ ರೊಟಂಡಿಫೊಲಿಯಾ ಎಲೆಯ ಮೇಲೆ ಇಟ್ಟಾಗ, ಅದು ಎಲ್ಲಾ ಮುಳ್ಳುಗಳ ಚಲನೆಯನ್ನೂ ಉಂಟುಮಾಡಿತು! ಇಷ್ಟು ಸೂಕ್ಷ್ಮ ಪದಾರ್ಥವೇ ಚಲನೆಯನ್ನುಂಟುಮಾಡಿದರೆ, ಈ ರಾಕ್ಷಸೀ ಗಿಡದ ಚುರುಕು ಎಷ್ಟರ ಮಟ್ಟಿನದೆಂದು ಊಹಿಸಬಹುದು.

ಈ ಜಾತಿಗೆ ಸೇರಿದ ಇನ್ನೆರಡು ಗಿಡಗಳಾವುವೆಂದರೆ ಡೈಯೋನಿಯಾ ಮತ್ತು ಆಲ್ಡ್ರೋವಾಂಡಿಯ. ಇವುಗಳೂ 'ಹನಿತಾಗು' ಗಿಡದಂತೆ ಚಲನೆಯನ್ನು ತೋರ್ಪಡಿಸುತ್ತವೆ. ಇವುಗಳ ವಿಧಾನವು ಸಸ್ಯಗಳಲ್ಲೆಲ್ಲಾ ಅದ್ಭುತವಾದದ್ದು. ಉತ್ತರ ಅಮೆರಿಕದ ಜೌಗುಪ್ರದೇಶದಲ್ಲೆಲ್ಲಾ ಈ ಡೈಯೋನಿಯಾ ಗಿಡವು ಬೆಳೆಯುತ್ತದೆ. ಇದಕ್ಕೆ ವೀನಸ್ ಫ್ಲೈಟ್ರ್ಯಾಪ್ (ನೊಣಗಳ ಬಲೆ)ಯೆಂದು ಹೆಸರು. (ಚಿತ್ರ. ೮.) ಇನ್ನಿತರ ಮಾಂಸಾಹಾರಿ ಸಸ್ಯಗಳಂತೆ, ಇಲ್ಲಿಯೂ ಎಲೆಗಳು ಸುತ್ತ ಹರಡಿರುತ್ತವೆ. ಇವುಗಳ ಮಧ್ಯದಿಂದ ಒಂದು ತಾಳು ಹೊರಟು, ಅದರ ಮೇಲೆ ಹೂವುಗಳು ಬಿಡುತ್ತವೆ. ಪ್ರತಿಯೊಂದು ಎಲೆಯೂ, ಅರ್ಧ ತೆಗೆದ ಪುಸ್ತಕದಂತೆ ಎರಡು ಭಾಗವಾಗಿರುತ್ತದೆ. ಮಧ್ಯದ ನಾಳವು ಕೀಲಿನಂತೆ ಕೆಲಸಮಾಡುತ್ತದೆ. (ಚಿತ್ರ. ೯.) ಎಲೆಗಳ ತುದಿಯಲ್ಲೆಲ್ಲಾ ಮೊನಚಾದ ದೊಡ್ಡ ದೊಡ್ಡ ಮುಳ್ಳುಗಳು ಇವೆ. (೯ *a.*) (ಇವುಗಳಲ್ಲಿ ಡ್ರಾಸಿರಾದಂತೆ ರಸೋತ್ಪತ್ತಿಯ ಗಂಥಿಗಳಿಲ್ಲ.) ಪ್ರತಿಯೊಂದು ಅರ್ಧ ಎಲೆಯ ಮಧ್ಯಭಾಗದಲ್ಲಿ ಮೂರು ಇದೇ ರೀತಿಯ ಮುಳ್ಳುಗಳಿರುತ್ತವೆ. ಇವು ತುದಿಯಲ್ಲಿನವುಗಳಿಗಿಂತ ಮೊನಚಾಗಿರುತ್ತವೆ. (ಚಿತ್ರ. ೯. *b*, *c.*) ಮತ್ತು ಬಗ್ಗಿರುತ್ತವೆ. ಅವುಗಳ ಕಣಗಳ ಜೀವವಾಹಿನಿಯು ಯಾವಾಗಲೂ ಚಲಿಸುತ್ತಿರುತ್ತದೆ. ಇದರ ಜೊತೆಗೆ ಎಲೆಯ ತುಂಬ ರಸೋತ್ಪತ್ತಿಮಾಡುವ ಗ್ರಂಥಿಗಳು ಮೇಲ್ಭಾಗದಲ್ಲೆಲ್ಲಾ ಹರಡಿರುತ್ತವೆ. ಗಾಳಿ ಅಥವಾ ಮಳೆಯಿಂದ ಈ ಎಲೆಯಲ್ಲಿ ಯಾವ ರೀತಿಯ ಬದಲಾವಣೆಯೂ ಆಗುವುದಿಲ್ಲ. ಆದರೆ ಎಲೆಗಳನ್ನು ಮುಟ್ಟುತ್ತಲೂ ಅವು ಮುಚ್ಚಿಕೊಳ್ಳುತ್ತವೆ. ಹೀಗೆ ಆಯುಸ್ಸು ತೀರಿದ ಚಿಟ್ಟೆಯೋ ಹುಳುವೋ ಈ ಎಲೆಗಳ ಮೇಲೆ ಕುಳಿತ ಒಡನೆಯೇ ಎಲೆಯ ಎರಡು ರೆಕ್ಕೆಗಳೂ, ತೆರೆದಿಟ್ಟಿದ್ದ ಪುಸ್ತಕವನ್ನು ಪಟಕ್ಕನೆ ಮುಚ್ಚಿದಂತೆ, ಮುಚ್ಚಿಕೊಳ್ಳುತ್ತವೆ. ಮತ್ತು ತುದಿಯಲ್ಲಿ ಮುಳ್ಳುಗಳು ಸೆರೆಮನೆಯ ಬಾಗಿಲಿಗೆ ಹಾಕಿರುವ ಕಂಬಿಯ ಬಾಗಿಲುಗಳಂತೆ ಒಂದಕ್ಕೊಂದು ಸೇರಿಕೊಂಡು, ಕುಳಿತ ಪ್ರಾಣಿಯನ್ನು ಕೂಡಿಹಾಕಿಕೊಳ್ಳುತ್ತವೆ. ಮೇಲೆಬಿದ್ದ ಪದಾರ್ಥವು ಸಸಾರಜನಕ ಪದಾರ್ಥವಲ್ಲದಿದ್ದರೆ ಪುನಃ ಎಲೆಗಳು ತೆರೆದುಕೊಳ್ಳುತ್ತವೆ; ಸಸಾರಜನಕ ಪದಾರ್ಥವಾಗಿದ್ದರೆ ಅವುಗಳನ್ನು ಜೀರ್ಣಿಸಲು ಗ್ರಂಥಿಗಳು ರಸೋತ್ಪತ್ತಿಮಾಡುತ್ತವೆ.



ಚಿತ್ರ ೮. ನೊಣಗಳಬಲೆಯ ಸಸ್ಯ ಅಥವಾ ಡೈಯೋನಿಯಾ ಗಿಡ




a
b
c

**ಚಿತ್ರ ೯. ಡೈಯೋನಿಯಾ ಗಿಡದ ಒಂದು ಎಲೆ**

*a*, ತುದಿಯಲ್ಲಿರುವ ಮುಳ್ಳುಗಳು ; *b*, ಎಲೆಯ ಮಧ್ಯದಲ್ಲಿರುವ ಅಡ್ಡ ಮುಳ್ಳುಗಳು ;
*c*, ಈ ಅಡ್ಡಮುಳ್ಳುಗಳ ಸ್ವರೂಪ

**ಚಿತ್ರ ೧೦. ಆಲ್ಡ್ರೋವಾಂಡಿಯಾ ಗಿಡದ ಒಂದು ಎಲೆ**

*b*, ಎಲೆಯ ಮಧ್ಯದಲ್ಲಿರುವ ಅಡ್ಡ ಮುಳ್ಳುಗಳು *c*, ಮುಳ್ಳಿನ ಸ್ವರೂಪ

ರಸೋತ್ಪತ್ತಿಮಾಡಿದ ಗ್ರಂಥಿಗಳೇ ಆ ಮೇಲೆ ರಸವನ್ನು ಹೀರಿಕೊಳ್ಳುವುದಕ್ಕೂ ಸಹಾಯವಾಗುತ್ತವೆ. ಪೂರ್ತಿಯಾಗಿ ಬಲಿಯು ಜೀರ್ಣವಾದ ಮೇಲೆ, ಎಲೆಗಳು ತೆರೆದುಕೊಂಡು, ತನ್ನ ಬಲೆಯನ್ನು ಬೀಸಿ ಮೀನಿಗಾಗಿ ಕಾದು ಕೂರುವ ಬೆಸ್ತರವ ನಂತೆ, ಕಾದು ಕೂರುತ್ತವೆ.

ಈ ಗಿಡದ ವಿಧಾನವು 'ಹಸಿತಾಗು' ಗಿಡದಂತೆಯೇ ಇದ್ದರೂ ಕೆಲಸಗಳ ಹಂಚಿಕೆ ಅದಕ್ಕಿಂತ ಇಲ್ಲಿ ಮುಂದುವರಿದಿದೆ. ಎಲೆಗಳ ಮೇಲೆ ಇರುವ ಆರು ಅಡ್ಡ ಮುಳ್ಳುಗಳು ಬರೀ ಹಿಡಿಯುವ ಕೆಲಸಕ್ಕಾಗಿ ಇವೆಯೇ ಹೊರತು ಅಲ್ಲಿನಂತೆ ರಸೋತ್ಪಾದನೆ ಮತ್ತು ಹಿಡಿಯುವ ಕೆಲಸ ಎರಡಕ್ಕೂ ಅಲ್ಲ.

ಇದರಂತೆಯೇ ಆಲ್ಡ್ರೋವಾಂಡಿಯಾ ಕೂಡ. (ಚಿತ್ರ ೧೧.) ಇದು ನೀರಿನಲ್ಲಿ ಬೆಳೆಯುವ ಗಿಡ. ಎಲೆ ಮತ್ತು ಹಿಡಿಯುವ ವಿಧಾನವೆಲ್ಲಾ ಡೈಯೋನಿಯಾದಂತೆ.



**ಚಿತ್ರ ೧೧. ಆಲ್ಡ್ರೋವಾಂಡಿಯಾ ಗಿಡ**

ಇದು ಯೂರೋಪಿನಲ್ಲಿ ಬೆಳೆಯುತ್ತದೆ. ಬುಡ್ಡೀಕಾಯಿಗಿಡದಂತೆ ನೀರಿನಲ್ಲಿ ತೇಲು ತ್ತಿರುತ್ತದೆ. ನೀರಿನ ಜಂತುಗಳು ಎಲೆಯನ್ನು ತಗಲುವುದೇ ತಡ, ಎಲೆಗಳು ಮುಚ್ಚಿ ಕೊಂಡು ಮೇಲೆ ಹೇಳಿದ ರೀತಿಯಲ್ಲಿ ಜೀರ್ಣಿಸುತ್ತವೆ. ಇಲ್ಲಿ ೬ಕ್ಕಿಂತ ಹೆಚ್ಚಾಗಿ ಎಲೆಗಳ ಮೇಲೆ ಅಡ್ಡ ಮುಳ್ಳುಗಳಿರುತ್ತವೆ. (ಚಿತ್ರ ೧೦ *b*, *c*.)

ಇನ್ನುಳಿದವು ಮೂರನೆಯ ಗುಂಪಿನ ಗಿಡಗಳು. ಈ ಗುಂಪಿಗೆ ಸೇರಿದ ಗಿಡಗಳಲ್ಲಿ ಮೊದಲಿನ ಎರಡರವುಗಳಂತೆ ಪ್ರಾಣಿಗಳನ್ನು ಹಿಡಿಯಲು ಗಿಂಡಿಗಳಾಗಲಿ



**ಚಿತ್ರ ೧೨. ಡ್ರಾಸೋಫಿಲಂ ಅಥವಾ ಹಿಮದ ಎಲೆಯ ಗಿಡ**

ಇದರಲ್ಲಿ ಎಲೆಗಳ ಮೇಲೆ ಇರುವ ಸಣ್ಣ ಗ್ರಂಥಿಗಳನ್ನೂ ಹರಿದಾಡುತ್ತಿರುವ
ಹುಳುಗಳನ್ನೂ ಕಾಣಬಹುದು

ಮುಳ್ಳುಗಳಾಗಲಿ ಇನ್ನಿತರ ಚಲಿಸುವ ಸಾಧನೆಗಳಾಗಲಿ ಇಲ್ಲ. ಆದರೆ ಗಿಡಗಳ ಮೇಲೆಯೇ ಇರುವ ಅಂಟುಸ್ವಭಾವದ ಗ್ರಂಥಿಗಳಿಂದ, ಮೇಲೆ ಕುಳಿತ ಹುಳುಗಳು ಸೂಜಿಗಲ್ಲಿಗೆ ಸಿಕ್ಕಿದ ಕಬ್ಬಿಣದ ತುಂಡಿನಂತೆ ಅಲ್ಲೇ ಸಿಕ್ಕಿಕೊಳ್ಳುತ್ತವೆ. ಈ ಅಂಟು ರಸವೇ ಜೀರ್ಣಿಸುವುದಕ್ಕೂ ಸಹಾಯಮಾಡುತ್ತದೆ. ಇವುಗಳಲ್ಲೆಲ್ಲಾ ಬಹಳ ವಿಚಿತ್ರವಾದುದೆಂದರೆ ಪೋರ್ಚುಗಲ್ ದೇಶದಲ್ಲಿ ಬೆಳೆಯುವ ಡ್ರಾಸೋಫಿಲಂ ಎಂಬ ಗಿಡ. ಇದು ಮೊದಲೆರಡು ಗುಂಪಿನ ಗಿಡಗಳಂತೆ ಜೌಗು ಪ್ರದೇಶದಲ್ಲಾಗಲಿ ನೀರಿನ ಲ್ಲಾಗಲಿ ಬೆಳೆಯುವುದಿಲ್ಲ. ಮರಳು ಮತ್ತು ಕಲ್ಲುಗುಡ್ಡಗಳ ಬಳಿ ಬೆಳೆಯುತ್ತದೆ. ಹುಲ್ಲಿನ ಗಿಡದಂತೆ ಇದರ ರೂಪ. ಅದರ ಮೇಲೆ ಅಲ್ಲಲ್ಲಿ ಚಿಕ್ಕ ತೊಟ್ಟಿನ ಮೇಲೆ ಹೂವುಗಳು ಬಿಟ್ಟಿರುತ್ತವೆ (ಚಿತ್ರ ೧೨.) ಎಲೆಗಳ ಮೇಲೆಲ್ಲಾ ಲೆಕ್ಕವಿಲ್ಲದಷ್ಟು ಸಣ್ಣಸಣ್ಣ ಗ್ರಂಥಿ ಗಳಿರುತ್ತವೆ. ಈ ಗ್ರಂಥಿಗಳು ಜಿನುಗಿಸುವ ರಸದಿಂದ ಅವುಗಳು ಮಂಜು ಹನಿಗಳಂತೆ ಹೊಳೆಯುತ್ತಿರುತ್ತವೆ. ಆದರಿಂದಲೇ ಇದಕ್ಕೆ "ಹಿಮದ ಎಲೆಯ ಗಿಡ"ವೆಂದು ಹೆಸರು ಬಂದಿರುವುದು. ಹುಳುಗಳು ಬಂದು ಕುಳಿತು ಮೇಲೆ ಹರಿದಾಡುವಾಗ ಈ ರಸವು ಅವುಗಳ ಮೈಗೆಲ್ಲಾ ಬಳಿದುಕೊಂಡುಬಿಡುತ್ತದೆ. ಆಮೇಲೆ ಅವುಗಳಿಗೆ ಹರಿದಾಡಲು ಆಗುವುದಿಲ್ಲ. ಅನಂತರ, ಕರಗಲು ಸಾಧ್ಯವಾದ ಭಾಗಗಳನ್ನೆಲ್ಲಾ ಗಿಡವು ಕರಗಿಸಿ ಅರಗಿಸಿಕೊಳ್ಳುತ್ತದೆ.

ಈ ರೀತಿಯ ವಿಚಿತ್ರಜೀವನ ಈ ರಾಕ್ಷಸೀ ಗಿಡಗಳದ್ದು. ಇವುಗಳಲ್ಲಿ ಮಿಕ್ಕ ಎಲ್ಲಾ ಗಿಡಗಳಲ್ಲಿರುವಂತೆ ಹಸಿರು ಬಣ್ಣವಿದೆ; ಅದರ ಸಹಾಯದಿಂದ ಮತ್ತು ಸೂರ್ಯನ ಬೆಳಕಿನ ಶಕ್ತಿಯಿಂದ ತಮ್ಮ ಆಹಾರವನ್ನು ತಾವೇ ತಯಾರುಮಾಡಿ ಕೊಳ್ಳಲು ಶಕ್ತಿಯಿದೆ. ಹಾಗೆಯೇ, ಪ್ರಾಣಿಗಳು ಸಿಕ್ಕದೆ ಇದ್ದಾಗ ತಮ್ಮ ಆಹಾರವನ್ನು ತಾವೇ ತಯಾರುಮಾಡಿಕೊಂಡು ಸಾತ್ವಿಕ ಜೀವನವನ್ನೇ ನಡೆಸುತ್ತವೆ. ಹೀಗೆ ಸಾತ್ವಿಕ ಜೀವನವನ್ನು ನಡೆಸುವುದು ಸಾಧ್ಯವಾಗಿದ್ದರೂ ಈ ಸುಂದರ ರೂಪಿನ ಸಸ್ಯ ಗಳು ರಾಕ್ಷಸೀಕೃತ್ಯದಲ್ಲಿ ತೊಡಗಿ ಪ್ರಾಣಿಗಳನ್ನು ಬಲಿ ತೆಗೆದುಕೊಳ್ಳುವುದು ಏಕೆ?

ಈ ಸಮಸ್ಯೆಯ ಜೀವಾಳವು ಅವುಗಳ ಜೀವನದ ಸಂದರ್ಭಗಳನ್ನು ನೋಡಿದರೆ ತಿಳಿಯುತ್ತದೆ. ಉದಾಹರಣೆಗಾಗಿ, ಒಂದು ಡೈಯೋನಿಯಾ ಗಿಡವನ್ನು ತೋಟದಲ್ಲಿ ಬರಿಯ ಮಾಂಸಾಹಾರಗಳಿಂದಲೇ ಬೆಳೆಸಿದರೆ ಅದು ಸ್ವಲ್ಪ ಕಾಲದಲ್ಲಿ ಸತ್ತು ಹೋಗುತ್ತದೆ. ಆದ್ದರಿಂದ ಇವು ಬರಿಯ ಮಾಂಸದಿಂದಲೇ ಜೀವನ ನಡೆಸುವುದಿಲ್ಲ ವೆಂಬುದು ತಿಳಿಯುತ್ತದೆ. ಇವು ಬೆಳೆಯುವ ಜಾಗವು ಜೌಗುಭೂಮಿ. ಅಲ್ಲಿ ಸಸಾರಜನಕ ಪದಾರ್ಥಗಳು ಸಿಕ್ಕುವುದಿಲ್ಲ. ಆದ್ದರಿಂದ ಪ್ರಾಣಿಗಳ ಸಸಾರಜನಕ ಪದಾರ್ಥವನ್ನು ತೆಗೆದುಕೊಂಡೇ ಇವು ತಮ್ಮ ಜೀವನವನ್ನು ನಡೆಸಬೇಕಾಗುತ್ತದೆ.

ಛಾರ್ಲೆಸ್ ಡಾರ್ವಿನನ ತತ್ವದಂತೆ ಪ್ರತಿಯೊಂದು ಜೀವಿಯೂ ಈ ಪ್ರಪಂಚದಲ್ಲಿ ಜೀವಿಸಿ, ಬೆಳೆದು, ಸಂತಾನಾಭಿವೃದ್ಧಿ ಮಾಡಲು ಬೇಕಾದ ಸಲಕರಣೆಗಳನ್ನು ಪಡೆದಿರುತ್ತದೆ. ಭಗವಂತನು ಪ್ರತಿಯೊಂದು ಜೀವಿಯೂ ತನ್ನ ಜೀವನವನ್ನು ಸರಿಯಾಗಿ ನಡೆಸುವುದಕ್ಕಾಗಿ ಬೇರೆಬೇರೆ ಸಾಧನಗಳನ್ನು ಕಲ್ಪಿಸಿರುತ್ತಾನೆ. ಅದರಂತೆಯೇ ಈ ಗಿಡಗಳಲ್ಲೂ ಕೂಡ.

ಆದರೆ ಇವುಗಳ ಜೊತೆಯಲ್ಲೇ ಜೌಗುಪ್ರದೇಶದಲ್ಲಿ ಬೆಳೆಯುವ ಇನ್ನಿತರ ಸಸ್ಯಗಳೇಕೆ ಮಾಂಸಾಹಾರಿಗಳಾಗಿಲ್ಲವೆಂದು ಕೇಳಬಹುದು; ಅಥವಾ ಮಾಂಸಾಹಾರಿ ಜೀವನವನ್ನು ನಡೆಸಲು ಅವಕ್ಕೆ ಸಾಧ್ಯವೇ ಎಂದು ಕೇಳಬಹುದು. ಆದರೆ ಅದು ಸಾಧ್ಯವಲ್ಲ. ಈ ಮಾಂಸಾಹಾರಿ ಸಸ್ಯಗಳ ಗುಂಪು ಒಂದು ಸಣ್ಣ ಜನಾಂಗದಂತೆ. ಅದರಲ್ಲಿ ಬೇರೆಯವರಿಗೆ ಸ್ಥಾನವಿಲ್ಲ ಮತ್ತು ಆ ಜನಾಂಗದ ವ್ಯಕ್ತಿಗಳಾಗಲು ಬೇರೆಯವರಿಗೆ ಅವಕಾಶವೂ ಇಲ್ಲ.*

ಹೆಚ್. ಎನ್. ಸತ್ಯನಾರಾಯಣ.

## ಆಧಾರ ಗ್ರಂಥಗಳು

1. Sir J. A. Thomson—*Biology for Everyman Part II.*
2. Kerner and Oliver—*Natural History of Plants.*
3. Legoc—*Introduction to tropical Botany.*
4. A. R. Gopala Iyengar—*An aberrant mode of nutrition among Plants and its significance.* (*In Bangalore Intermediate College Magazine.* Nov. 1937.)

---

* ಈ ಲೇಖನಕ್ಕೆ ಬೇಕಾದ ಚಿತ್ರಗಳನ್ನು ಅಂದವಾಗಿ ಬರೆದುಕೊಟ್ಟ ನನ್ನ ಸ್ನೇಹಿತ ಶ್ರೀಮಾನ್ ಮಣಿಗೆ ನನ್ನ ವಂದನೆಗಳು—ಹೆಚ್.ಎನ್.ಸ.

# ಮರ್ಹಾಟಿಯಲ್ಲಿ ಹುದುಗಿರುವ ಕನ್ನಡದ ಹಲವು ಅವಶೇಷಗಳು

ಮರ್ಹಾಟಿ ಭಾಷೆ ಮತ್ತು ಸಂಸ್ಕೃತಿಗಳಲ್ಲಿ ಹುದುಗಿಕೊಂಡಿರುವ ಕನ್ನಡದ ಹಲವು ಅವಶೇಷಗಳು, ಕನ್ನಡ ಭಾಷೆ ಮತ್ತು ಸಂಸ್ಕೃತಿಗಳ ಪೂರ್ವಪರಂಪರೆಯ ವಿಚಾರದಲ್ಲಿ ತುಂಬ ಹೊಸ ಬೆಳಕನ್ನು ಕೊಡುವಂತಿವೆ. ಆದುದರಿಂದ ಕನ್ನಡದ ನೆಲೆಯನ್ನು ಕಂಡು ಹಿಡಿವ ಹಂಬಲವುಳ್ಳವರಿಗೆ ಅವನ್ನು ಕಡೆಗಣಿಸಿ ನಡೆಯಲಾಗದು. ಈ ಅವಶೇಷಗಳು ಬೆಳಕಿಗೆ ಬಂದಷ್ಟೂ ಕನ್ನಡ-ಮರ್ಹಾಟಿಗಳ ಪರಸ್ಪರ ಸಂಬಂಧದ ತೊಡಕು ಕೂಡ ತಾನಾಗಿಯೆ ಬಿಡತಕ್ಕುದಿದೆ. ಕನ್ನಡ ಮತ್ತು ಮರ್ಹಾಟಿಯ ಮೊದಲಿಗರ ಇರವು ಹಾಗೂ ಹರಹುಗಳ ಬಗೆಯೂ ಗೊತ್ತಾಗುವಂತಿದೆ. ಈ ತೆರನಾಗಿ ನಡಸಿದ ಚರ್ಚೆಯು ಒಂದು ನಿಷ್ಕರ್ಷಕ್ಕೆ ಬಂದುದಾದರೆ ಭಾರತದ ಇತಿಹಾಸದೊಳಗಿನ ಒಂದು ಸಂದಿಗ್ಧ ಸಮಸ್ಯೆಗೆ ಎಷ್ಟೋಮಟ್ಟಿನ ಸಮಾಧಾನಕರವಾದ ಉತ್ತರವು ದೊರೆಯುಬಹುದೆಂದು ನಂಬಲು ಯಾವ ಅಡ್ಡಿಯೂ ತೋರುವುದಿಲ್ಲ.

## ೧ ಮುದಲ್—ಮೊದಲು

ಈಗ ಸರಳಬಡ್ಡಿ ಮತ್ತು ಚಕ್ರಬಡ್ಡಿಯ ಲೆಕ್ಕಗಳಲ್ಲಿ 'ಮೂಲಧನ' ಎಂಬರ್ಥದಲ್ಲಿ 'ಮೊಬಲಗು' ಇಲ್ಲವೆ 'ಅಸಲು' ಎಂಬ ಮಾತುಗಳನ್ನು ಬಳಸುವ ವಾಡಿಕೆಯಿದೆ. ಆದರೆ ಇವಾವುವೂ ಅಚ್ಚಕನ್ನಡದ ಮಾತುಗಳಲ್ಲ. ಪರಭಾಷೆಯಿಂದ ಎತ್ತಿಕೊಂಡುವು.

ಆದರೆ ಮರ್ಹಾಟಿಯಲ್ಲಿ 'ಮುದಲ' ಎಂಬ ಪದವನ್ನು ಇದೇ ಅರ್ಥದಲ್ಲಿ ಉಪಯೋಗಿಸುವರು. ಇದರ ಉಚ್ಚಾರದ ರೀತಿಯು ಮಾತ್ರ ಸ್ವಲ್ಪ ಬೇರೆ. 'ಬೇರೆ' ಎಂದರೆ, ಅದು ಮರ್ಹಾಟಿ ಮಾತಿನ ರೀತಿಗೆ ಸರಿಹೋಗುವಂತೆ ಮಾರ್ಪಡಿಸಿಕೊಂಡುದು; 'ಮುದऽಲ' ಎಂಬಲ್ಲಿ ದಕಾರದ ಮುಂದೆ ಸ್ವಲ್ಪ ಎಳದು ಉಚ್ಚರಿಸುವರು. ಇಲ್ಲವೆ 'ಮುದ್ದತು ಎಂಬ ಪದದೊಂದಿಗೆ ಇದನ್ನು ಹೇಳಬೇಕಾಗುವುದರಿಂದ 'ಮುದ್ದಲ'ಎಂಬುದಾಗಿ ನೊಲ್ಲಿಸುವರು. ಇಲ್ಲಿಯೂ 'ಮುದ್ದऽಲ' 'ಮುದ್ದऽತ' ಎಂಬೀ ಬಗೆಯಾಗಿಯೆ ಮರ್ಹಾಟಿಯ ಸೊಲ್ಲಿನ ರೀತಿಯುಂಟು.

ಮರ್ಹಾಟಿಯಲ್ಲಿ ಬಳಕೆಯಲ್ಲಿರುವ ಈ 'ಮುದಲ' ಎಂಬುದು ಕನ್ನಡದ ಮಾತಾಗಿರಬೇಕೆಂದು ನನಗೆ ಆಗಾಗ ಸಂದೇಹವುಂಟಾಗುತ್ತಿದ್ದಿತು. ಆದರೆ ಬೇರೆ ಸಾಕಷ್ಟು

ಪೋಷಕ ಪ್ರಮಾಣಗಳು ದೊರೆಯದ್ದರಿಂದ ಅದನ್ನು ಸಂದೇಹ ರಾಜ್ಯದಲ್ಲಿಯೆ ಇರಿಸಬೇಕಾಗಿದ್ದಿತು. ತಮ್ಮಲ್ಲಿ ಬಳಕೆಯಲ್ಲಿರುವ 'ಮುದಲ' ಶಬ್ದದ ವ್ಯುತ್ಪತ್ತಿಯನ್ನು ಮರ್ಹಾಟಿಯವರು ಹೇಗೆ ಹೇಳುವರೆಂದು ಅರಿತುಕೊಳ್ಳುವ ಕುತೂಹಲವುಂಟಾಯ್ತು. 'ಮಹಾರಾಷ್ಟ್ರ ಶಬ್ದಕೋಶ'ವೆಂಬುದು ಇದೀಗ ಪ್ರಕಟವಾಗಿರುವ ಮಹಾಗ್ರಂಥ. ಅದರಲ್ಲಿ ಕೊಟ್ಟ ವ್ಯುತ್ಪತ್ತಿಯನ್ನು ನೋಡಿದರೆ, ಅದರ ಸಂಪಾದಕರಿಗೂ ಇದು ಮರ್ಹಾಟಿಗೆ ಸಂಬಂಧಪಟ್ಟ ಶಬ್ದವೆಂಬ ನಂಬುಗೆಯಿದ್ದಂತೆ ತೋರುವುದಿಲ್ಲ. 'ಮುದಲ' ಶಬ್ದವು ಸಂಸ್ಕೃತ 'ಮೂಲದ' ಎಂಬ ಪದದಿಂದ ಬಂದಿರಬಹುದೆಂಬ ಒಂದು ಊಹೆಯನ್ನು ವ್ಯಕ್ತಪಡಿಸಿ, ಬಳಿಕ ಕನ್ನಡ ತೆಲುಗು ಪದಗಳೊಡನೆಯೂ ಅದರ ಸಂಬಂಧವನ್ನು ಸೂಚಿಸಿರುವರು.

ಸಂಸ್ಕೃತದಲ್ಲಿ 'ಮೂಲದ' ಎಂಬ ಮಾತು ಈ ಅರ್ಥದಲ್ಲಿ ಬಳಕೆಯಲ್ಲಿ ಎಂದಾದರೂ ಇದ್ದುದು ನಿಜವಿದ್ದರೆ, 'ಮಹಾರಾಷ್ಟ್ರಕೋಶ' ಕಾರರ ಮೇಲಣ ಊಹೆಗೆ ಅಲ್ಪಾಂಶದಿಂದಲಾದರೂ ಆಧಾರವುಂಟೆಂದು ಹೇಳಬಹುದಾಗಿದೆ. 'ಮೂಲದ್ರವ್ಯ' ಅಥವಾ 'ಮೂಲಧನ' ಎಂಬೀ ಬಗೆಯ ಪ್ರಯೋಗಗಳು ದೊರೆಯುವುದುಂಟು. 'ಮೂಲದ' ಎಂಬ ಪದದ ಪ್ರಯೋಗಗಳು ಸಂಸ್ಕೃತದಲ್ಲಿ ಇದ್ದುದಕ್ಕೆ ಉದಾಹರಣಗಳು ಇನ್ನೂ ಬೆಳಕಿಗೆ ಬರಬೇಕಾಗಿದೆ. ಈ ಉದಾಹರಣಗಳು ದೊರೆತಬಳಿಕ 'ಮೂಲದ'ವು 'ಮುದಲ' ಎಂಬುದಾಗಿ ಎಂತು ಮತ್ತು ಎಂದು ಮಾರ್ಪಾಟವನ್ನು ಹೊಂದಿತೆಂಬುದು ಇನ್ನೂ ಒಂದು ವಿಚಾರ.

ಅದಕ್ಕೂ ಮೊದಲು ದ್ರಾವಿಡ ವರ್ಗದ ಭಾಷೆಗಳನ್ನು ಸ್ವಲ್ಪ ಪರಿಕಿಸಿದರೆ 'ಮುದಲ್'—'ಮೊದಲು' ಎಂಬ ಪದವು ಮೂಲಧನ ಎಂಬ ಅರ್ಥದಲ್ಲಿ ಹೇಗೆ ಸ್ವಾಭಾವಿಕವಾಗಿ ಬೆಳೆದುಕೊಂಡು ಬಂದಿದೆ ಎಂಬುದರ ಮನವರಿಕೆಯಾಗದೆ ಇರದು. ತಮಿಳಿನಲ್ಲಿ 'ಮುದಲ್' ಎಂಬುದಕ್ಕೆ Principal, Capital, Money yielding interest ಎಂಬುದಾಗಿ ಅರ್ಥವುಂಟು. ತೆಲುಗಿನಲ್ಲಿ ಮೊದಲು ಶಬ್ದಕ್ಕೆ ಇದೇ ಅರ್ಥವುಂಟು. ಕನ್ನಡದಲ್ಲಿಯೂ ಈ ಅರ್ಥವುಂಟೆಂದು ಕಿಟ್ಟೆಲ್ಲರ ಕೋಶದಿಂದ ಕಂಡು ಬರುತ್ತದೆ.

ಮುದಲ್—ಮೊದಲು, ಈ ಪದವು ದ್ರಾವಿಡ ಭಾಷಾವರ್ಗದ ಮಾತೆಂಬುದು ನಿಶ್ಚಿತವಿದ್ದರೂ ಕನ್ನಡ ಸಾಹಿತ್ಯದಲ್ಲಿ 'ಮೂಲಧನ' ಎಂಬರ್ಥದಲ್ಲಿ ಮುದಲ್—ಮೊದಲು ಎಂಬುದನ್ನು ಬಳಸಿದ ಪ್ರಯೋಗಗಳು ದೊರೆಯುವ ವರೆಗೂ ಮನಸ್ಸಿಗೆ ಸಮಾಧಾನವಾಗುವಂತಿರಲಿಲ್ಲ. ನಯಸೇನನ (೧೨ನೆಯ ಶತಮಾನ) ಧರ್ಮಾಮೃತವನ್ನು ಓದುವಾಗ ಈ ಬಗೆಯ ಎರಡು ಪ್ರಯೋಗಗಳು ದೊರೆತುವು:

'ಮೊದಲ್ಗೆಟ್ಟ ಪರದನಂತೆ' (II. ೧೪,೮೪) ; 'ಬಡ್ಡಿಯಿಕ್ಕುವಂ ಮೊದಲಂಕೊಟ್ಟು, ಪತ್ರಮಂ ಸೀಳಿಸುವಂತೆ' (II. ೧೪,೧೦೪). ಇಲ್ಲಿ 'ಮೊದಲು' ಎಂಬುದಕ್ಕೆ ಮೂಲಧನವೆಂಬ ಅರ್ಥವು ನಿಸ್ಸಂದಿಗ್ಧವಾಗಿದೆ. ಅಲ್ಲದೆ, ಹಣಕೊಟ್ಟು ಬರಕೊಟ್ಟ ಕಾಗದದ ತಲೆ ಹರಿವ ಈಗಿನ ಪದ್ಧತಿಯು ೮೦೦ ವರುಷಗಳ ಹಿಂದೆಯೂ ಇದ್ದುದರ ಸ್ಪಷ್ಟವಾದ ಉಲ್ಲೇಖನವನ್ನು ಇಲ್ಲಿ ಕಾಣಬಹುದಾಗಿದೆ.

'ಮೂಲಧನ' ಎಂಬರ್ಥದ 'ಮುದಲು' ಅಥವಾ 'ಮೊದಲು' ಎಂಬ ಮಾತಿಗೆ ಕನ್ನಡಿಗರು ಇಂದು ಎರವಾಗಿದ್ದರೂ ಮರ್ಹಾಟಿಗರು ಅದನ್ನು ಕಾಯ್ದಿಟ್ಟುಕೊಂಡು ಬಂದಿರುವರು !

ಶಂ. ಬಾ. ಜೋಶಿ.

# ಅಸಡ್ಡೆಯೋ ಅಕ್ಕರೆಯೋ?

(ಸಣ್ಣ ಕಥೆ)

೧

"ಇಂದೂ, ಬಾ ಇಲ್ಲಿ!"

ಮನೆಯ ಮುಂದೆ ಜಾಜಿಯ ಬಳ್ಳಿಯ ಹಿಂದೆ ರಾಮು ಕೂತಿದ್ದ. ಅಲ್ಲಿಂದ ಹೆಂಡತಿಯನ್ನು ಕರೆದ.

"ಬಂದೆ!" ಒಳಗಿನಿಂದ ಉತ್ತರ ಬಂತು.

ರಾಮು ಬಾಗಿಲಿನ ಕಡೆ ಎದುರುನೋಡುತ್ತಾ ಕುಳಿತ. ಎಷ್ಟು ಹೊತ್ತಾದರೂ ಇಂದು ಬರಲಿಲ್ಲ.

ಪುನಃ ಕೂಗಿದ.

"ಇಂದೂ!"

"ಸ್ವಲ್ಪ ತಾಳೀಂದ್ರೆ, ಬಂದೆ!"

ಉತ್ತರವು ಸ್ವಲ್ಪ ಬಿರುಸಾಗಿದ್ದಿತು. ರಾಮು ಸುಮ್ಮನೆ ಕುಳಿತ. ಸ್ವಲ್ಪ ಕೋಪ.—ತಾನು ಕೂಗಿದ ಕೂಡಲೆ ಬರಲಿಲ್ಲವಲ್ಲಾ ಎಂದು. ಸ್ವಲ್ಪ ಹೊತ್ತಿನ ಮೇಲೆ, ಏನುಮಾಡುತ್ತಿರುವಳೋ ಎಂದು ಕುತೂಹಲದಿಂದ ಎದ್ದು ಮೆಲ್ಲಗೆ ಕಿಟಕಿಯಲ್ಲಿ ನೋಡಿದ. ಇಂದಿರಾ ಕರಿಮಣಿಗಳನ್ನು ಪೋಣಿಸುತ್ತ ಕುಳಿತಿದ್ದಳು. ರಾಮೂಗೆ ಪೂರ ಕೋಪ ಬಂತು. "ಮಹಾ ಈ ಕೆಲಸ ಸ್ವಲ್ಪ ಸಿಧಾನವಾದರೆ ಆಗುವುದಿಲ್ಲ ವೇನೋ!" ಎಂದುಕೊಂಡು ಸದ್ದುಮಾಡದೆ ಹೊರಕ್ಕೆ ಹೊರಟ.

ಸ್ವಲ್ಪ ಹೊತ್ತಾದ ಮೇಲೆ ಇಂದು ಎದ್ದು ಬಂದು ನೋಡಿದಳು. ರಾಮು ಇರಲಿಲ್ಲ. ತಿರುಗಿ ಹೋಗಿ, ತನ್ನ ಕೆಲಸಕ್ಕೆ ಕುಳಿತುಕೊಂಡಳು.

ಕತ್ತಲಾದ ಮೇಲೆ ರಾಮು ಬಂದ. ಬಂದವನಿಗೆ ಇನ್ನೂ ಕೋಪವಿಳಿದಿರಲಿಲ್ಲ. ಮಾತನ್ನೇ ಆಡದೆ ಊಟ ಮಾಡಿದ. ಅವನಿಗೆ ಕೋಪ ಬಂದಿರುವುದು ಇಂದಿರೆಗೆ ತಿಳಿದರೂ ಅದರ ಕಾರಣವನ್ನು ಕಂಡುಹಿಡಿಯಲಾರದವಳಾದಳು. ಅವಳಿಗೆ ದುಃಖ. ಊಟಮಾಡಿ ಮಲಗಿದಳು. ಕಣ್ಣಿನಲ್ಲಿ ನೀರು ಹರಿಯುತ್ತಿದೆ. ಆದರೂ ಶಬ್ದಮಾಡಲಿಲ್ಲ.

ಸ್ವಲ್ಪಹೊತ್ತು ಸುಮ್ಮನಿದ್ದು ರಾಮುವು "ಇಂದೂ!" ಎಂದ. ಇಂದು ಮಾತನಾಡಲಿಲ್ಲ. ನಿದ್ರೆಯೇನೋ ಎಂದು ರಾಮು ಬಗ್ಗಿ ನೋಡಿದ. ಅಳುತ್ತಿದ್ದಳು. "ಅಯ್ಯೋ, ಹುಚ್ಚೀ! ಅಳೋದು ಯಾಕೇ?" ಎಂದ.

ಇಂದಿರಾ ನಕ್ಕಳು.

೨

ರಾಮು ಆಫೀಸಿನಿಂದ ಆಯಾಸಪಟ್ಟು ಬಂದಿದ್ದಾನೆ; ಬಹಳ ಹಸಿವು. ಮನೆಗೆ ಬಂದು ನೋಡಿದರೆ ಎಲ್ಲೂ ಇಂದಿರಾ ಇಲ್ಲ. ಅಡಿಗೆಯ ಮನೆಯಲ್ಲೂ ಇಲ್ಲ, ಮಲಗುವ ಮನೆಯಲ್ಲೂ ಇಲ್ಲ. ನಿಟ್ಟುಸಿರುಬಿಡುತ್ತಾ ಕುರ್ಚಿಯ ಮೇಲೆ ಕೂತನು. "ಇವಳಿಗೆ ನಾಜೋಕು, ನಯ, ಬರುವುದೆಂದಿಗೆ? ಇಷ್ಟುಹೊತ್ತಿನಲ್ಲಿ ಎಲ್ಲೋ ಹೊರಟಿದ್ದಾಳೆ. ನಾನು ಮನೆಗೆ ಬರುವ ವೇಳೆಗೇ ಎಲ್ಲಿಯೂ ಇಲ್ಲದ ರಾಜಕಾರ್ಯ, ಇವಳಿಗೆ. . . ."

ಯೋಚನೆ ಮಾಡುಮಾಡುತ್ತಾ ಅವನ ಕೋಪವು ಮಿತಿಮೀರಿತು. ಅಷ್ಟು ಹೊತ್ತಿಗೆ ಇಂದಿರೆಯ ಧ್ವನಿ ಕೇಳಿಸಿತು—"ಬರ್‍ತೇನ್ರಿ, ಸುಂದರಮ್ಮನವರೇ, ಮನೆಗೆ ಬರುವ ಹೊತ್ತಾಯಿತು."

"ಊ, ಹೊತ್ತಾಗುತ್ತೆ ಹೊತ್ತು!" ಎಂದುಕೊಂಡ ರಾಮು.

ಇಂದಿರಾ ಮನೆಗೆ ಬಂದಳು. ರಾಮುವನ್ನು ನೋಡಿ ಗಾಬರಿಯಾಗಿ ಕಾಫಿ ಮಾಡಿಕೊಂಡು ಬಂದಳು.

"ತಿಂಡಿ ಏನೂ ಇಲ್ವೆ?"—ಹುಬ್ಬು ಗಂಟುಹಾಕಿಕೊಂಡು ರಾಮು ಕೇಳಿದ.

ಮೊದಲು ಇಂದಿರಾ ಅವನ ಹುಬ್ಬುಗಂಟನ್ನು ನೋಡಲಿಲ್ಲ. "ಅಯ್ಯೋ, ಇಲ್ಲ. ಊಟವಾಗುತ್ತಲೇ ಸುಂದರಮ್ಮನವರು ಕರೆದರು. ಅಲ್ಲಿ ಹೋದೆ."

ಮಾತು ನಿಂತಿತು. ಮೈ ಬೆವರಿತು. ರಾಮು ಮಾತನಾಡದೆ ದೃಷ್ಟಿಸಿ ನೋಡುತ್ತಿದ್ದನು. ಇಂದಿರೆಯು ಒಳಕ್ಕೆ ಹೊರಟುಹೋದಳು. ರಾಮುವು ಕಾಫಿ ಮುಗಿಸಿ ಹೊರಕ್ಕೆ ಹೋದನು.

೩

ಇಂದಿರಾಗೆ ಈವೊತ್ತು ಎಲ್ಲೂ ಇಲ್ಲದ ಬೇಸರಿಕೆ. ಎಲ್ಲಿ ಕೂತರೂ, ಏನು ಮಾಡಿದರೂ ಹೊತ್ತು ಹೋಗದು. ಯಾರೊಡನೆ ಮಾತನಾಡುವುದಕ್ಕೂ ಬೇಸರಿಕೆ. ಮನೆಗೆಲಸಗಳನ್ನೆಲ್ಲಾ ಮುಗಿಸಿಕೊಂಡು ಮೆಟ್ಟಲಿನ ಮೇಲೆ ಕುಳಿತಳು. ಏನೋ ದುಃಖ, ಬೇಸರಿಕೆ. ಕಾರಣವು ಅವಳಿಗೇ ಗೊತ್ತಿಲ್ಲ. ರಾಮು ಬರುವ ಹೊತ್ತಾಯಿತೆಂದು ಎದ್ದು ಕಾಫಿ ಮಾಡಿದಳು. ಎದುರುನೋಡುತ್ತಾ ಕುಳಿತಳು. ಘಂಟೆ ಆರಾಯ್ತು, ಏಳಾಯ್ತು, ರಾಮುವಿನ ಸುಳಿವಿಲ್ಲ. ಇಂದಿರೆಗೆ ಅಳು ಬರುವ ಹಾಗಾಯಿತು. ಜತೆಗೆ ದಿಗಿಲು ಬೇರೆ; ಕಳ್ಳರ ಭಯ, ದೆವ್ವಗಳ ಭಯ; ಕಿಟಕಿಯಲ್ಲಿ ನೋಡುವುದಕ್ಕೆ ಭಯ; ನೆರೆಹೊರೆಯೂ ಸ್ವಲ್ಪ ದೂರ. ಕೆಲಸದವಳೂ ಹೊರಟುಹೋಗಿದ್ದಾಳೆ. ಗಡಿಯಾರವು ಒಂಬತ್ತು ಘಂಟೆಯನ್ನು ತೋರಿಸಿತು. ರಾಮುವಿನ ಸುದ್ದಿಯೇ ಇಲ್ಲ. ಇಂದಿರೆಗೆ ದಿಕ್ಕೇ ತೋರದು. 'ಏನಾಯಿತೋ ಏನೋ' ಎಂಬ ಯೋಚನೆ ಬೇರೆ ಹತ್ತಿ

ಕೊಂಡಿತು. ಹಾಸುಗೆಗಳನ್ನು ಹಾಸಿದಳು. ಪುಸ್ತಕವನ್ನು ಕೈಯಲ್ಲಿ ಹಿಡಿದು ಕೊಂಡರೆ, ತಲೆಗೇ ಹತ್ತಲೊಲ್ಲದು; ಅದನ್ನೂ ಕೆಳಗಿಟ್ಟಳು. ಕಣ್ಣಿನಲ್ಲಿ ನೀರು ಸುರಿಯಲಾರಂಭಿಸಿತು. ಕಡೆಗೆ ೯-೩೦ ಘಂಟೆಯ ವೇಳೆಗೆ ರಾಮು ಬಾಗಿಲು ತಟ್ಟಿದನು. "ಸದ್ಯ!" ಎಂದು ಒಂದು ನಿಟ್ಟುಸಿರನ್ನು ಬಿಟ್ಟು ಇಂದಿರೆ ಎದ್ದು ಬಾಗಿಲು ತೆರೆದಳು. "ಯಾಕಿಷ್ಟು ಹೊತ್ತಾಯಿತು?" ಎಂದಳು. ರಾಮು ಶಾಂತನಾಗಿ, "ಏನೋ ಇಸ್ಪೀಟು ಆಡುತ್ತಾ ಕೂತುಬಿಟ್ಟೆ, ಶ್ರೀಕಂಠಯ್ಯನ ಮನೇಲಿ" ಎಂದ. ತಾನು ಇಲ್ಲಿ ಇಷ್ಟು ಯೋಚಿಸುತ್ತಿದ್ದರೆ ಪಕ್ಕದ ಮನೇಲೇ ಇದ್ದ ರಾಮು! ಇಂದಿರೆಗೆ ಸ್ವಲ್ಪ ಕೋಪಬಂತು. "ತಾನು ಒಂದುಗಳಿಗೆ ಸುಂದರಮ್ಮನವರ ಮನೆಗೆ ಹೋದರೆ ಎಷ್ಟು ಹಾರಾಟ! ಇವರು ಮಾತ್ರ ರಾತ್ರಿ ಹತ್ತು ಘಂಟೆಗೆ ಬಂದರೂ ಅದು ತಪ್ಪಿಲ್ಲ" ಎಂದುಕೊಂಡಳು.

೪

ರಾಮು ಉಲ್ಲಾಸದಿಂದ ಹಾಡಿಕೊಳ್ಳುತ್ತಾ ಮನೆಗೆ ಹೊರಟ. ದಾರಿಯಲ್ಲಿ ದುಂಡುಮಾದಿಯು ಹೂವಿನ ಕುಚ್ಚುಗಳನ್ನು ಹಿಡಿದುಕೊಂಡು ಬರುತ್ತಿದ್ದಳು. ಒಂದು ಕುಚ್ಚನ್ನೂ ಸ್ವಲ್ಪ ವೀಳ್ಯದೆಲೆಯನ್ನೂ ಕೊಂಡುಕೊಂಡು ಹೊರಟ. ಮನೆಗೆ ಹೋಗಿ ಬಾಗಿಲು ತಟ್ಟಿದರೆ, ಮಲಗಿದ್ದ ಇಂದಿರೆ ಎದ್ದುಬಂದು ಬಾಗಿಲು ತೆರೆದಳು. ಇನ್ನೂ ತಲೆ ಬಾಚಿರಲಿಲ್ಲ. ಮುಖ ಜೋಲುಬಿದ್ದಿದ್ದಿತು,

"ಯಾಕೆ? ಮೈಯಲ್ಲಿ ಚನ್ನಾಗಿಲ್ಲವೆ?" ಎಂದ.

"ಏನೂ ಇಲ್ಲ, ಮೈ ಕೈ ಸ್ವಲ್ಪ ನೋವು."

"ಈವೊತ್ತು ಫಾಲ್ಸ್‌ಗೆ ವಾಕಿಂಗ್ ಹೋಗೋಣ ಅಂತ ಬಂದೆ. ಹೋಗಲಿ ಬಿಡು, ಮಲಗಿಕೋ, ನಾನೂ ಶ್ರೀಕಂಠಯ್ಯನ ಮನೆಗೆ ಹೋಗುತ್ತೇನೆ."

ಇಂದಿರೆಗೆ ಅಸಮಾಧಾನ.—ಎಂದೂ ಇಲ್ಲದೆ, ಹೊರಗೆ ಹೋಗೋಣವೆಂದು ರಾಮು ಕರೆದ ದಿನವೇ ತಾನು ಮಲಗಿದೆನೆಂದು ಅಸಮಾಧಾನ. ಅವಳಿಗೆ ಸ್ವಸ್ಥವಿಲ್ಲ ವೆಂದು ತಿಳಿದೂ ತನ್ನಷ್ಟಕ್ಕೆ ತಾನು ಹೊರಟುಹೋಗುವನಲ್ಲಾ ಎಂದು ಕೋಪ. ಅವನಿಗೆ ಖಾಯಿಲೆಯಾಗಿದ್ದರೆ, ತಾನು ಹೊರಗೆ ಹೋಗುತ್ತಿದ್ದೆನೇ ಎಂದುಕೊಂಡಳು. ಕಾಫಿಮಾಡಿಕೊಟ್ಟಳು. ರಾಮು ಹೊರಟುಹೋದ.

ರಾಮು ಹೊರಟುಹೋಗುತ್ತಲೇ ಇಂದಿರೆಗೆ ಬೇಜಾರಾಯಿತು. "ಏನೂ ಇಲ್ಲ, ಸ್ವಸ್ಥವಾಗಿದ್ದೇನೆ" ಎಂದು ಹೇಳಿ ಹೊರಗೆ ಹೋಗದೆ, ಕೋಪದಿಂದ ಸುಮ್ಮನಿದ್ದುದ ಕ್ಕಾಗಿ ತನ್ನನ್ನೇ ಬೈದುಕೊಂಡಳು; ಎದ್ದು ಜಡೆ ಹಾಕಿಕೊಂಡಳು; ಹಾಗೇ ಹೊರಗೆ ಹೋಗಿ ಕುಳಿತುಕೊಂಡಳು. ಸ್ವಲ್ಪ ಹೊತ್ತಿಗೆ ಸುಂದರಮ್ಮನವರು ಬೀದಿಯಲ್ಲಿ

ಹೋಗುತ್ತಾ "ದೇವಸ್ಥಾನಕ್ಕೆ ಬರುತೀರೇನ್ರಿ?" ಎಂದು ಕರೆದರು. ಇಂದಿರೆಗೂ ಒಬ್ಬಳೇ ಇದ್ದು ಬೇಜಾರಾಗಿತ್ತು. ಎದ್ದು ಹಣ್ಣುಕಾಯಿಗಳನ್ನು ತೆಗೆದುಕೊಂಡು ಹೊರಟಳು.

ರಾಮು, ಇಸ್ಪೀಟು ಆಡುತ್ತ "ಪಾಪ, ಮೈ ಕೈ ನೋವು ಅಂದಳು. ಜ್ವರ ಬಂದಿದೆ ಯೇನೊ! ಒಬ್ಬಳೇ ಇದ್ದಾಳೆ" ಎಂದುಕೊಂಡು ಸ್ವಲ್ಪಹೊತ್ತಿಗೆ ಎದ್ದು ಮನೆಗೆ ಹೊರಟ. ಹೋಗಿ ನೋಡಿದರೆ, ಮನೆಗೆ ಬೀಗ! ದೂರದಲ್ಲಿ ಇಂದಿರೆಯು ನಗುತ್ತಾ ಸುಂದರಮ್ಮನವರೊಡನೆ ಮಾತನಾಡುತ್ತಾ ಬರುತ್ತಿರುವುದು ಕಾಣಿಸಿತು. ರಾಮುವು ಅವಳನ್ನು ನೋಡಿಯೂ ನೋಡದಂತೆ ಹೊರಟುಹೋದನು. ಇಂದಿರೆಯೂ, ರಾಮು ಮನೆಯಿಂದ ಬರುವುದನ್ನು ನೋಡಿ ಗಾಬರಿಯಾದಳು. ಮಾತು, ನಗು, ಎಲ್ಲಾ ನಿಂತಿತು. ಮನೆಗೆ ಬಂದಳು. ಯಥಾಪ್ರಕಾರ ಆಹೊತ್ತೂ ರಾಮು ಹತ್ತು ಘಂಟೆಗೆ ಮನೆಗೆ ಬಂದ. ಬಂದವನು ಮಾತನಾಡದೆ ಊಟಮಾಡಿ, ಮಲಗಿದ. ಪಕ್ಕದಲ್ಲಿ ಇಂದಿರೆಯು ಅಳುತ್ತಾ ಬುಸುಗುಟ್ಟುವುದು ಕೇಳಿಸದಂತೆ ಮುಸುಕನ್ನು ಮೇಲಕ್ಕೆಳೆದು ಕೊಂಡ.

೫

ಇಂದಿರೆ ಹಬ್ಬದಡುಗೆ ಮಾಡಿದಳು. ಉತ್ಸಾಹದಿಂದ ರುಚಿರುಚಿಯಾಗಿ ಮಾಡಿ ದಳು. ಆ ದಿನ ರಾಮುವೂ ಮನೆಗೆ ಬೇಗ ಬಂದ. ಸ್ನಾನಮಾಡಿ ಅಡುಗೆ ಮನೆಯಲ್ಲಿ ಹೋಗಿ ಕುಳಿತುಕೊಂಡ. ಮಾಡಿದ್ದ ಇಡ್ಲಿಯಲ್ಲಿ ಒಂದನ್ನು ತಟ್ಟೆಯಲ್ಲಿ ಹಾಕಿ ಚಟ್ನಿಹಾಕಿ ಕೈಗೆ ಕೊಟ್ಟಳು. ರಾಮು ಕಚ್ಚಿ ಕಚ್ಚಿ ತಿನ್ನುತ್ತಾ, "ಈವೊತ್ತೇನೋ ಹಸಿವೇ ಇಲ್ಲ. ಶ್ರೀಕಂಠಯ್ಯನ ಮನೇಲಿ, ನಿಮ್ಮ ಸುಂದರಮ್ಮಾನೂ ಒಂದಿಡ್ಲಿ ಕೊಟ್ಟರು. ಬಹಳ ಚೆನ್ನಾಗಿತ್ತು. ಇಷ್ಟು ಸ್ನೇಹ, ಸ್ವಲ್ಪ ಅಡುಗೆ ಕಲಿತುಕೊಳ್ಳ ಬಾರದೆ ನೀನು ಅವರ ಹತ್ತಿರ?" ಎಂದ. ಇಂದಿರೆಗೆ ತಟಕ್ಕನೆ ಕೋಪಬಂತು: ತಾನಿಷ್ಟು ಆದರದಿಂದ, ಉತ್ಸಾಹದಿಂದ ಅಡುಗೆ ಮಾಡಿಟ್ಟರೆ, ಇವನಿಗೆ ಅದು ರುಚಿಸಲಿಲ್ಲವಲ್ಲಾ ಎಂದು. "ಎಷ್ಟು ಮಾಡಿದರೂ ಇಷ್ಟೆ!" ಎಂದುಕೊಂಡಳು. ಊಟಮಾಡುವಾಗ ಮಾತನ್ನೇ ಆಡಲಿಲ್ಲ. ಊಟವಾಗುತ್ತಲೆ ಎಲೆ ಅಡಕೆಯನ್ನು ಕೊಟ್ಟು, ಅಡುಗೆಮನೆಯಲ್ಲಿ ಕೆಲಸಕ್ಕೆ ಹೊರಟುಹೋದಳು. ರಾಮು ಮೂರು ನಾಲ್ಕು ಸಲ ಇಂದೂ ಇಂದೂ ಎಂದು ಕರೆದರೂ ಕೇಳಿಸದಂತಿದ್ದಳು.

ಮೂರು ಘಂಟೆಯ ಸಮಯ. ಅಂಚೆಯವನು ಬಾಗಿಲು ತಟ್ಟಿದನು. ರಾಮು ಬಾಗಿಲು ತೆಗೆದು ಮಾವನವರ ಕಾಗದವನ್ನು ತೆಗೆದುಕೊಂಡನು. ತಾವು ಬುಧವಾರ ಬರುವುದಾಗಿಯೂ, ಮಗಳನ್ನು ಸ್ವಲ್ಪ ದಿವಸದ ಮಟ್ಟಿಗೆ ಕಳುಹಿಸಬೇಕಾಗಿಯೂ

ಬರೆದಿದ್ದರು. ಒಳಗೆ ಬಂದು ಇಂದಿರೆಗೆ ತೋರಿಸಿದ. ಇಂದಿರೆಯ ಮುಖವರಳಿತು. ತವರುಮನೆಯಿಂದ ಬಂದು ಆರು ತಿಂಗಳಾಗಿತ್ತು. ತಂದೆಯು ಬರುವರೆಂದು ತಿಳಿದು ಅವಳ ಕೋಪವೆಲ್ಲಾ ಮಾಯವಾಯಿತು. "ನಾಳೆಯೇ ಬುಧವಾರ" ಎಂದಳು. ರಾಮು ಬೇಸರದಿಂದ "ಹುಂ" ಎಂದು, ಹೊರಕ್ಕೆ ಹೊರಟುಹೋದನು.

ಮರುದಿನ ಇಂದಿರೆಗೆ ಬಹಳ ಉತ್ಸಾಹ. ತಂದೆ ಬರುವರೆಂದು ಹಬ್ಬದಡುಗೆ ಮಾಡಿದಳು: ಕೀರು, ಚಿತ್ರಾನ್ನ. ರಾಮು ಬೆಳಗ್ಗೆ ಕೆಲಸಕ್ಕೆ ಹೋದವನು ಬಂದಿರಲಿಲ್ಲ.

ಹನ್ನೊಂದು ಘಂಟೆಯ ಹೊತ್ತಿಗೆ ಇಂದಿರೆಯ ತಂದೆಯು ಮನೆಯ ಮುಂದೆ ಬಸ್ಸಿನಿಂದ ಇಳಿದರು. ಬಾಗಿಲಲ್ಲೇ ಇಂದಿರೆ ಕಾದಿದ್ದಳು. ಮುಖವರಳಿತು. ಆಳನ್ನು ಕರೆದು ಬೇಗ ಬೇಗ ಸಾಮಾನನ್ನೊಳಗಿಡಿಸಿದಳು. "ಅಮ್ಮ ಚನ್ನಾಗಿದ್ದಾಳೇನಪ್ಪ ?" ಎಂದು ಕೇಳಿದಳು.

"ಇದ್ದಾಳಮ್ಮ. ನೀನು ? ಈಗ ಬರುತ್ತೀಯ ಊರಿಗೆ ?

"ಕೇಳಬೇಕಪ್ಪ !"

ಕೃಷ್ಣರಾಯರು ಸುಮ್ಮನಾದರು.

ಘಂಟೆ ಹನ್ನೆರಡಾಯಿತು, ಒಂದಾಯಿತು; ರಾಮುವಿನ ಸುದ್ದಿಯೇ ಇಲ್ಲ. ಇಂದಿರೆಗೆ ಬೇಸರವಾಯಿತು—ಅಪರೂಪಕ್ಕೆ ತನ್ನ ತಂದೆ ಬಂದಿದ್ದರೆ ಹೀಗೆ ಅಸಡ್ಡೆ ಮಾಡುವನಲ್ಲಾ ಎಂದು. "ಹೋಗಲಿ, ಅಪ್ಪ; ನೀನೇಕೆ ಕಾದಿರುವುದು ? ಊಟ ಮಾಡಿಬಿಡು !" ಎಂದಳು.

"ಬರಲೀಮ್ಮಾ ನಿನ್ನ ಗಂಡಾನೂ !" ಎಂದು ಸುಮ್ಮನೆ ಕಾದು ಕುಳಿತಿದ್ದರು.

ಮೂರು ಘಂಟೆಗೆ ರಾಮು ಬಂದು ಬೈಸ್ಕಲ್ಲಿನಿಂದ ಇಳಿದ. "ಯಾಕಪ್ಪಾ, ಹೊತ್ತಾಯಿತು ?" ಎಂದರು ಕೃಷ್ಣರಾಯರು. "ಏನೋ ಕೆಲಸವಿತ್ತು" ಎಂದು ಉತ್ತರಕೊಟ್ಟ ರಾಮು.

ಇಂದಿರೆ ಬಡಿಸಿದಳು. ಎಷ್ಟು ಕೋಪವಿದ್ದರೂ ತಂದೆಯ ಬರುವಿಕೆಯಿಂದಾದ ಉತ್ಸಾಹವು ಮರೆಯಾಗಲಿಲ್ಲ. ಮಾತನಾಡುತ್ತಾ ಬಡಿಸಿದಳು.

"ಚಿತ್ರಾನ್ನ ಚನ್ನಾಗಿದೆಯಮ್ಮಾ" ಎಂದರು ಕೃಷ್ಣರಾಯರು. ಇಂದಿರೆ ಇನ್ನಷ್ಟು ಬಡಿಸಿದಳು. ರಾಮು ಮೌನವ್ರತ.

"ಇಂದಿರಾನ ಕೆಲವು ದಿವಸ ಕಳುಹಿಸುತ್ತೀಯೇನಪ್ಪಾ ?"

"ಬೇಕಾದರೆ ಕರೆದುಕೊಂಡು ಹೋಗಿ."

ಮಾತು ಒಳ್ಳೆಯದಾದರೂ ಧ್ವನಿಯು ಕಠಿಣ. "ಹೋಗಲಿ ! ಅವಳಿಗಾಗುವುದು ಶಾಸ್ತಿ !" ಎಂದ ಹಾಗಿತ್ತು.

ಊಟವಾದ ಮೇಲೆ ಕೃಷ್ಣರಾಯರು ತಮಗೆ ಕೆಲಸವಿದೆಯೆಂದೂ ಸಾಯಂಕಾಲವೇ ಹೊರಡಬೇಕೆಂದೂ ಹೇಳಿದರು.

ಇಂದಿರೆಯು ಗಂಡನಿಗೆ ತಾಂಬೂಲವನ್ನು ಕೊಡುತ್ತಾ "ಹೋಗಿಬರಲೇ ?" ಎಂದಳು.

"ನಿನ್ನಿಷ್ಟ!"

"ಹಾಗೆಂದರೆ ಹೇಗೆ ? ಸಮಾಧಾನವಾಗಿ ಕಳುಹಿಸಕೂಡದೆ ?"

"ಶಾನೆ! ನಿನಗೆ ಬೇಕಾಗಿರುವುದು ನನ್ನ ಸಮಾಧಾನ!"

ಬೇಗಬೇಗ ಕೋಟನ್ನು ತಗುಲಿಸಿಕೊಂಡು ರಾಮು ಹೊರಕ್ಕೆ ಹೊರಟೇಬಿಟ್ಟ.

ಇಂದಿರೆಗೆ ಏನೂ ತೋರಲಿಲ್ಲ. ಒಂದುಕಡೆ ಹೊರಡಬೇಕೆಂಬ ಆಸೆ. ಇನ್ನೊಂದು ಕಡೆ ರಾಮುವಿಗೆ ಅಸಮಾಧಾನವೆಂಬ ಚಿಂತೆ. ತನ್ನ ಆಸೆಯನ್ನು ತೀರಿಸುವ ಯೋಚನೆಯೇ ರಾಮೂಗೆ ಇಲ್ಲವೆಂಬ ಕೋಪ. ಕೊನೆಗೆ ಮನಸ್ಸನ್ನು ಗಟ್ಟಿಮಾಡಿಕೊಂಡು, "ಹೋಗೇಬಿಡೋಣ. ಆದುದಾಗಲಿ" ಎಂದು ಎದ್ದು ಹಾಸುಗೆಯನ್ನು ಕಟ್ಟಿದಳು. ಬಸ್ಸು ಬರುವುದು ನಾಲ್ಕೂವರೆ ಘಂಟೆಗೆ. ರಾಮು ಮೂರುವರೆ ಆದರೂ ಮನೆಗೆ ಬರಲಿಲ್ಲ. ಹೇಳದೆ ಹೇಗೆ ಹೋಗುವುದೆಂಬ ಚಿಂತೆ. ನಾಲ್ಕು ಘಂಟೆಗೆ ರಾಮು ಬಂದ. ಹೆಂಡತಿ ಹಾಸಿಗೆ ಕಟ್ಟಿದ್ದನ್ನು ನೋಡಿ ಏನೂ ಮಾತನಾಡದೆ ಮಾವನವರ ಹತ್ತಿರ ಮಾತನಾಡುತ್ತಿದ್ದ. ನಾಲ್ಕುವರೆ ಘಂಟೆಗೆ ಬಸ್ಸು ಬಂತು. ಇಂದಿರೆಯು "ಬರುತ್ತೇನೆ" ಎಂದಳು. ರಾಮು ಆಕಡೆ ನೋಡಲೇ ಇಲ್ಲ. ಇಂದಿರೆಗೆ ಬಸ್ಸು ಹೊರಡುವವರೆಗೂ ರಾಮು ತನ್ನನ್ನು ಮಾತನಾಡಿಸುತ್ತಾನೆಂದು ಚಪಲ. ನಿರಾಶಳಾಗಿ ಹೊರಟುಹೋದಳು.

೫

ಇಂದಿರೆಯು ಹೊರಟುಹೋಗಿ ನಾಲ್ಕೈದು ದಿನಗಳಾದುವು. ರಾಮೂಗೆ ಬೇಸರ. ಮನೆಯೊಳಗೆ ಬೇಸರ. ಹೊರಗೆ ಬೇಸರ. ಇಂದಿರೆ ಹೋದವಳು ಕಾಗದವನ್ನೇ ಬರೆದಿರಲಿಲ್ಲ. ಮೊದಮೊದಲು ಇವನಿಗೂ ಕೋಪ. ಬರೆಯಬಾರದೆಂದು ನಿರ್ಧರಿಸಿದನು. ದಿನದಿನಕ್ಕೂ ಬೇಸರವು ಹೆಚ್ಚಾಯಿತು. ಎಷ್ಟು ದಿನಕ್ಕೆ ಹಿಂದಿರುಗಿ ಬರುವಳೆಂದೂ ಗೊತ್ತಿಲ್ಲ. ಕಡೆಗೆ ಒಂದು ಕಾಗದವನ್ನು ಬರೆದನು. ಉತ್ತರವಾಗಿ ಅವನ ಮಾವನವರಿಂದ ಕಾಗದ ಬಂತು. "ಅಲ್ಲಿಂದ ಬಂದ ದಿನದಿಂದ ಇಂದಿರಾಗೆ ಜ್ವರ. ಮಲೇರಿಯಾ ಎಂದು ಕಾಣುತ್ತದೆ. ಗಾಬರಿಯೇನೂ ಇಲ್ಲ. ಸ್ವಲ್ಪ ಸೆಟ್ಟಗಾಗುತ್ತಲೇ ಕಳುಹಿಸಿಕೊಡುತ್ತೇನೆ" ಎಂದು ಬರೆದಿದ್ದರು. ರಾಮುವಿಗೆ ಮನಸ್ಸು ಇನ್ನೂ ಅಸ್ವಸ್ಥವಾಯಿತು. "ಪಾಪ! ಜ್ವರದಲ್ಲಿ ಎಷ್ಟು ನೊಂದುಕೊಂಡಳೋ! ಅವರ ಅಪ್ಪನ

ಮನೆಗೆ ಅವಳು ಹೋಗಬೇಕೆನ್ನುವುದು ಸಹಜವಲ್ಲವೆ? ನಾನೇಕೆ ಅಷ್ಟು ರೇಗಾಡಿದುದು? ಇಲ್ಲಿ, ಪಾಪ! ಅವಳಿಗೆ ಎಷ್ಟು ಬೇಜಾರೋ! ನಾನೆಲ್ಲೂ ಅವಳನ್ನು ಕರೆದುಕೊಂಡು ಹೋಗುವುದಿಲ್ಲ. ಮನೆಯಲ್ಲಿ ಒಬ್ಬಳೇ ಇರುತ್ತಾಳೆ. ಈಸಲ ಬಂದರೆ ಇನ್ನೂ ಸುಖವಾಗಿ ನೋಡಿಕೊಳ್ಳಬೇಕು" ಎಂದುಕೊಂಡನು. ಮನಸ್ಸು ನಿಲ್ಲದೆ ನಾಲ್ಕು ದಿನ ರಜಾ ತೆಗೆದುಕೊಂಡು ಮಾವನ ಊರಿಗೆ ಹೋದನು. ಅಪರೂಪಕ್ಕೆ ಅಳಿಯನು ಬಂದನೆಂದು ಎಲ್ಲರಿಗೂ ಸಂಭ್ರಮ. ಇಂದಿರೆಗೂ ಹೊಸದಾಗಿ ಗಂಡನನ್ನು ಕಂಡಂತೆ ಹಿಗ್ಗು. ಜ್ವರ ಬಿಟ್ಟಿತ್ತು. ರಜಾ ತೀರುತ್ತಲೆ ಇಬ್ಬರೂ ಹೊರಡುವುದೆಂದು ಗೊತ್ತಾಯಿತು. ಇಂದಿರೆಗೆ ಎಷ್ಟು ಉಪಚಾರಮಾಡಿದರೂ ರಾಮೂಗೆ ತೃಪ್ತಿಯಿಲ್ಲ!

ಬಸ್ಸಿನಲ್ಲಿ ಹೊರಟು ಊರಿಗೆ ಬಂದು ಇಳಿದರು. ರಾಮು ಸಾಮಾನನ್ನೆಲ್ಲಾ ಒಳಗಿಡಿಸಿ, ಸ್ವಲ್ಪ ಹಾಗೆ ಹೀಗೆ ಓಡಾಡಿ, "ನಾನು ಸ್ವಲ್ಪ ಶ್ರೀಕಂಠಯ್ಯನ ಮನೆಗೆ ಹೋಗಿ ಬರುತ್ತೇನೆ" ಎಂದು ಹೊರಟ! ಇಂದಿರೆಯು ಬೇಸರದಿಂದ "ಉ!" ಎಂದು ಅಡುಗೆ ಮನೆಯೊಳಕ್ಕೆ ಹೋದಳು.

ಸಾವಿತ್ರಮ್ಮ.

# ರಾವಣನ ಗೊಜ್ಜು

(ಪುಟ್ಟ ಕಥೆ)

ಅತ್ತೆಯವರೇ ಕಾಲು ತೊಳೆಯಲು ನೀರು ತಂದಿರಿಸಿದರು. ಅವರೇ ಕಾಫಿ ತಿಂಡಿಯನ್ನೂ ತಂದುಕೊಟ್ಟರು. ಆದ್ದರಿಂದ ಅದು ನನಗೆ ರುಚಿಸಲಿಲ್ಲ. ಪತ್ರಿಕೆ ಓದಲು ಮನಸ್ಸು ಬಾರದು. ಕಥೆಯ ಪುಸ್ತಕವನ್ನು ತೆರೆದರೆ ಅಕ್ಷರವೇ ಕಾಣಿಸದು. ಈ ಗೋಳಾಟದಲ್ಲಿ ನಾಲ್ಕು ಘಂಟೆ ಕಳೆದನಂತರ, ಆ ಸೂರ್ಯದೇವನು ನಡುನೆತ್ತಿಗೇರಿದ ಮೇಲೆ ಊಟದ ಸಂಭ್ರಮಕ್ಕೆ ಮೊದಲಾಯಿತು.

ಅತ್ತೆಯ ಮನೆ; ಊಟದ ಮನೆ. ಹಸರು ಎಲೆ; ಎಲೆಯನ್ನು ಬಿಗಿದ ರಂಗವಲ್ಲಿಯ ಹಳದಿ ಬಳ್ಳಿ; ಪಕ್ಕದಲ್ಲಿ ಬೆಳ್ಳಿಯಲೋಟ; ಮಣೆ; ಬಲಕ್ಕೆ ಮಾವನವರು, ಎಡಕ್ಕೆ ಹುಡುಗರ ಹಿಂಡು. ಬಡಿಸುವ ಕೆಲಸ ಅತ್ತೆಯವರದೇ. ಅಳಿಯನನ್ನು ಕಂಡರೆ ಅತ್ತೆಗೆ ಅಷ್ಟು ಅಕ್ಕರೆ, ವಿಶ್ವಾಸ! ಮುದುಕರಾದರೂ, ತೋರಣ ಕಟ್ಟುವ ಕೆಲಸದಿಂದ ಹಿಡಿದು ನೀರು ಮುಸರೆ ಕಸ ಎಲ್ಲವೂ ಅವರದೇ ! "ಮಕ್ಕಳಿರುವುದು ಆಡಿ ಉಂಡು ನಲಿಯುವುದಕ್ಕೆ ; ಕೆಲಸಕ್ಕಲ್ಲ. ಅವರು ದೇವರ ಸಮಾನ" ಎನ್ನುತ್ತಾ ಮೂಗಿಗೆ ಕವಡೆಕಟ್ಟಿಕೊಂಡು ಅವರೇ ಎಲ್ಲಾ ಕೆಲಸವನ್ನೂ ದುಡಿಯುತ್ತಿದ್ದರು.

ಹೊಟ್ಟೆಗೆ ಹೆಚ್ಚು ಹಸಿವಾಗಿದ್ದರೂ ಕೂಡ ಮನಸ್ಸಿಗೆ ಮಾತ್ರ ಊಟ ಬೇಡವಾಗಿತ್ತು. ಭಕ್ಷ್ಯ ಕೋಸುಂಬರಿ ಪಲ್ಯಗಳಿಂದ ಎಲೆಗಳು ತುಂಬಿದ ಮೇಲೆ, ಮಾವನವರು ಅಂಗಾರವನ್ನು ಅಕ್ಷತೆಯ ತಟ್ಟೆಯ ಅಂಚಿಗೆ ಹೆರೆಯುತ್ತಾ "ಲೇ, ಮಗು, ಅಭಿಗಾರಮಾಡು" ಎಂದರು. ಸ್ವಾಮಿ, ಈ ಮಗು ಯಾರಪ್ಪಾ ಎಂದು ನೀವು ಆಶ್ಚರ್ಯಪಡಬಹುದು. ಆದರೆ ಮಗು ಎಂದರೆ ಮತ್ತೆ ಯಾರೂ ಅಲ್ಲ, ನಮ್ಮ ಅತ್ತೆಯವರೇ! ವರುಷ ಅರವತ್ತಕ್ಕೆ ಮೀರಿ ಬಾಯಿ ಬರಿದಾಗಿದ್ದರೂ, ಮಾವನವರ ಕಣ್ಣಿನಲ್ಲಿ ಅವರಿನ್ನೂ "ಮಗು."

ಗಡಿಯಾರ ಒಂದು ಘಂಟೆಯನ್ನು ತೋರಿಸಿತು. ಹಸಿವು ನೆತ್ತಿಗೇರಿತು. ತುಪ್ಪ ಬರುವುದೇ ತಡ, ಊಟಕ್ಕೆ ಕೈ ಹಚ್ಚುವುದು ಎಂದುಕೊಂಡು ಅಡುಗೆ ಮನೆಯ ಬಾಗಿಲನ್ನೇ ನೋಡುತ್ತ ಕುಳಿತೆ. ಏನಿದು? ಏನು ವಿಚಿತ್ರ! ಅತ್ತೆಯವರ ಮಡಿ ಸೀರೆ ಎಲ್ಲಿ? ಬಗ್ಗಿದ ಅವರ ಸೊಂಟವಾದರೂ ಎಲ್ಲಿ? ಹಲ್ಲಿಲ್ಲದ ಅವರ ಬಾಯಿ ಮಾಯವಾಯಿತೇ! ತುಪ್ಪದ ಬಟ್ಟಲನ್ನು ಹಿಡಿದು ಬರುತ್ತಿರುವ ಈ ವ್ಯಕ್ತಿಯಾದರೂ

ಯಾರು? ಓ—ಹೋ—ರೂಪಾ! ನನ್ನ ರೂಪಾ! ರೂಪಾನ್ನ ನೋಡಿ ಒಂದು ವರ್ಷ ನಾಲ್ಕು ಘಂಟೆಗಳಾಗಿದ್ದವು. ಮೊಗ್ಗು ಅರಳಿತ್ತು. ಅರಳಿದ ಹೂವು ಗಂಧವನ್ನು ಬೀರುತ್ತ ದಳಗಳಿಗೆ ರಂಗುಗಟ್ಟಿತ್ತು. ರೂಪಾನ್ನ ಕದ್ದು ನೋಡಿದೆ. ಉತ್ತರವೂ ಕೂಡ ಕಳ್ಳನೋಟದಿಂದಲೇ ಬಂದಿತು. ಇಬ್ಬರ ತಲೆಗಳೂ ತಿರುಗಿದವು. ರೂಪಾ ನಡುಗುತ್ತ ಹಾಕಿದ ತುಪ್ಪ ಒಬ್ಬರ ಮೈಮೇಲೂ ಮತ್ತೊಬ್ಬರ ಎಲೆಯಹೊರಗೂ ಬಿದ್ದಿತು. ಘೊಳ್ ಎಂದು ಎಲ್ಲರೂ ನಗಲು ಪ್ರಾರಂಭಿಸಿದರು. ರೂಪಾ ನನ್ನ ಎಲೆಯ ಮುಂದೆ ಬಂದಾಗ ನನ್ನ ಕಣ್ಣುನೋಟ ಅವಳ ಕಾಲುಂಗುರವನ್ನು ತೊಳೆಯುತ್ತಿತ್ತು. ತುಪ್ಪ ಬಿತ್ತು. ಧಾರಾಕಾರವಾಗಿ ಬಿತ್ತು—ಗೊಜ್ಜಿನ ಮೇಲೆ ಬಿತ್ತು! ಹುಡುಗರ ನಗು ಅಲೆಅಲೆಯಾಗಿ ಎದ್ದು ಶಬ್ದಮಾಡಿತು. ರೂಪಾ ನಾಚಿಕೆಯಿಂದ ಓಡಿಹೋಗಿ ಅಡುಗೆಮನೆ ಸೇರಿದಳು. ಇಷ್ಟಾದರೂ ನಗು, ಕೂಗು, ಅಡಗಲಿಲ್ಲ. "ಅಕ್ಕನ್ನ ಕಂಡು ಭಾವ ಬೆದರಿದ" ಎಂದೂ "ಭಾವನ್ನ ಕಂಡು ಅಕ್ಕ ಬೆದರಿದಳು" ಎಂದೂ ಕೂಗುಗಳೆದ್ದವು.

ಊಟಕ್ಕೆ ಕುಳಿತುದಾಯಿತು. ಮೊದಲು ಏನನ್ನು ತಿನ್ನಬೇಕು, ಎಂಬ ಪ್ರಶ್ನೆ ಮನಸ್ಸಿಗೆ ಬಂದಿತು. ಪಾಯಸ ಹಪ್ಪಳ ಯಾವುದೂ ಸರಿಗಾಣಲಿಲ್ಲ. ರೂಪಾನ ನೆನಪಾಯಿತು, ತುಪ್ಪದ ನೆನಪಾಯಿತು; ತುಪ್ಪ ಗೊಜ್ಜನ್ನು ಸಜ್ಜುಗೊಳಿಸಿತ್ತು. ಪಾಯಸದ ಬದಲು ಗೊಜ್ಜಿಗೇ ಕೈ ಹಾಕಿದೆ. ಎದೆಯುಬ್ಬಿತು. ಕಣ್ಣೆರಡನ್ನೂ ಮುಚ್ಚಿಕೊಂಡು ಕೈತುಂಬ ಗೊಜ್ಜು ತೆಗೆದುಕೊಂಡು ಬಾಯಿಗೆ ಸೇರಿಸಿಬಿಟ್ಟೆ. ಆಹಾ! ವಿನಾಶವಾಯಿತು. ಚಿಟ್ಟೆಂದು ಚೀರಿಬಿಟ್ಟೆ; ಬಾಯಿ ಸೊರೆಗರೆಯಿತು, ತಲೆ ಸುತ್ತಿಬಂತು. ನೆತ್ತಿಯ ಕೂದಲೆರಡು ಹಾರಿ ಗಗನಾಂತರದಲ್ಲಿ ಮಾಯವಾದವು. ಹಲ್ಲೆರಡು ಪಳಪಳನೆ ಉದುರಿದವು. ನಾ ತಿಂದುದೇನನ್ನು? ಗೊ-ಜ್ಜ-ನ್ನು! ಮಾ-ವಿ-ನ-ಕಾಯಿ—ಗೊ-ಜ್ಜ-ನ್ನು.

* * * * *

ಆ ದಿನವೆಲ್ಲ ಜ್ವರ, ತಲೆನೋವು, ಸಂಕಟ. ಈ ಸ್ಥಿತಿಯಲ್ಲಿ ಅನೇಕ ಸ್ವಪ್ನಗಳನ್ನು ಕಂಡೆ. ಸ್ವಪ್ನ ಮಾಲೆಗಳು. . . ಕಾಲಚಕ್ರವು ಹಿಂದುಹಿಂದಾಗಿ ಉರುಳಿತು. ತ್ರೇತಾಯುಗ. ಹಾರುತ್ತ ಹನುಮಂತನಂತೆ ನಾನು ಲಂಕೆಗೆ ಹೋದೆ. ಲಂಕಾಪುರಿ. ಅದ್ಭುತನಗರ. ಸುತ್ತಲಿರುವ ಎತ್ತರವಾದ ಕೋಟೆಯನ್ನು ದಾಟಿ, ಕಾವಲಿದ್ದ ರಾಕ್ಷಸರ ಕಣ್ಣಿಗೆ ಬೀಳದೆ, ಸೊಣವಾಗಿ ನಗರವನ್ನು ಪ್ರವೇಶಿಸಿದೆ. ಲಂಕೆಯ ವೈಭವವೇನು! ಅದರ ಸಿರಿಯೇನು! ವಿಶಾಲವಾದ ಕಪ್ಪು ರಸ್ತೆಗಳು; ಅಲ್ಲಲ್ಲಿ ಬಣ್ಣ ಬಣ್ಣದ ಹೂತೋಟಗಳು; ರಸ್ತೆಯ ಎರಡು ಪಕ್ಕಗಳಲ್ಲೂ ಮುಗಿಲುಮುಟ್ಟುವ

ಸೌಧಗಳು; ಉದ್ಯಾನಗಳಲ್ಲಿ ವಿಹರಿಸುತ್ತಿರುವ ರಾಕ್ಷಸ ದಂಪತಿಗಳ ಹಿಂಡುಗಳು. ಕಾವಲಿರುವ ರಾಕ್ಷಸ ಪೋಲಿಸಿನವರು.

ಇವೆಲ್ಲವನ್ನೂ ದಾಟಿ ರಾವಣೇಶ್ವರನ ಅರಮನೆಗೆ ನಡೆದೆ. ಚಿನ್ನದ ಆ ಅರಮನೆಯು ಚಿತ್ರಗಳಿಂದ ಶೋಭಿಸುತ್ತಿತ್ತು. ಅದು ರಾಕ್ಷಸೇಶ್ವರನ ಊಟದ ಸಮಯ. ವಜ್ರದ ಮಣೆಯ ಮೇಲೆ ಲಂಕಾಧಿಪನು ಕುಳಿತು ಊಟಮಾಡುತ್ತಿದ್ದಾನೆ. ದಶಶಿರನ ಪ್ರೀತಿಯ ಅಡಿಗೆ ಎಂದರೆ ಗೊಜ್ಜು. ಗೊಜ್ಜು ಮೊದಲು ಜನಿಸಿದುದು ಈ ಮಹೀಪತಿಯ ಅರಮನೆಯಲ್ಲಿಯೆ !! . . . . ಕಪಿ ಕಡಲನ್ನು ಹಾರಿಬಂದಿತು. ನಾನಿನ್ನೂ ನೊಣವಾಗಿಯೇ ಲಂಕೆಯಲ್ಲಿ ಅಲೆದಾಡುತ್ತಿದ್ದೆ. ಸೇತುಬಂಧನವಾಯಿತು. ರಾಮರಾವಣರ ಯುದ್ಧವಾಗಿ ರಾಕ್ಷಸಕುಲವೇ ಅಳಿದುಹೋಯಿತು. ಲಂಕಾಪುರಿಯೊಂದಿಗೆ ರಾವಣೇಶ್ವರನೂ ಭಸ್ಮವಾದನು. ಆದರೆ—ಆದರೆ, ಆ ಗೊಜ್ಜು ಮಾತ್ರ ಸಾಯಲಿಲ್ಲ; ಬದುಕಿ ತಲೆ ತಪ್ಪಿಸಿಕೊಂಡು ಓಡಿತು. ಓಡಿ ಓಡಿ ಶ್ರೀರಾಮಚಂದ್ರನು ಕಟ್ಟಿದ ಸೇತುವೆಯನ್ನು ಹತ್ತಿ ಓಡಿತು. ಬಳಲಿ ಬೆಂಡಾದರೂ ತನ್ನ ಓಟವನ್ನು ಬಿಡದೆ ನೈಮರೆಸಿಕೊಂಡು ಓಡಿ ಕೊನೆಗೆ ಆಂಧ್ರರ ಮನೆಯಲ್ಲಿ ಬೇರೂರಿತು. ಅನಂತರ ದಂಡಯಾತ್ರೆ ಹೊರಟು ಮದರಾಸು ಪ್ರಾಂತವನ್ನೆಲ್ಲಾ ಗೆದ್ದು ಮನೆಮನೆಯ ರಾಜನಾಗಿ ಮೆರೆಯಿತು. ಈಗೀಗ ಇದು ಮೈಸೂರಿಗೂ ಬಂದುಬಿಟ್ಟಿದೆ! . . . .

ಸಂಪೂರ್ಣವಾಗಿ ಎಚ್ಚರವಾದಾಗ ನಾನು ಕೈಜೋಡಿಸಿ ದೇವರನ್ನು ಹೀಗೆ ಪ್ರಾರ್ಥಿಸಿದೆ: "ಹೇ ದೇವ, ಜಗನ್ನಿಯಾಮಕ, ಜಗದ್ರಕ್ಷಕ, ಈ ರಾವಣ ಗೊಜ್ಜನ್ನು ನಾಶಮಾಡು! ಇದನ್ನು ಏತಕ್ಕಾಗಿ ಸೃಷ್ಟಿಸಿದೆ? ಮಾವನ್ನೇಕೆ ಹುಳಿ ಮಾಡಿದೆ? ಮಾನವನ ಮರಣವೇದನೆಯನ್ನು ಕಂಡರೆ ನಿನಗೆ ಆನಂದವೇ ?"

ಆದರೆ, ತಿಳಿದು ನೋಡಿದರೆ ಈ ತಪ್ಪು ಈಶ್ವರನದಲ್ಲ. "ಮಾನವನು ಸಿಹಿ ಹಣ್ಣನ್ನು ಮಾತ್ರ ತಿನ್ನಲಿ, ಕಾಯಿಯನ್ನು ತಿನ್ನುವುದು ಬೇಡ" ಎಂದು ಭಗವಂತನು ಕಾಯನ್ನು ಹುಳಿ ಮಾಡಿದ, ಹಣ್ಣನ್ನು ಸಿಹಿ ಮಾಡಿದ. ಆದರೆ ಈ ಪಾಪಿ ಮಾನವನು ಎಲ್ಲವನ್ನೂ ತಿನ್ನುವನು! ಅವನಿಗೆ ಎಲ್ಲವೂ ಬೇಕು. ಭೂಮಿ ಆಕಾಶ ನೀರುಗಳಲ್ಲಿ ತಿರುಗುವ ಪ್ರಾಣಿಗಳು, ಹಾರುವ ಹಕ್ಕಿಗಳು, ಗಿಡ ಮರ, ಬೇರು ಬಳ್ಳಿ, ಮೀನು ಮೊಸಳೆ ಎಲ್ಲವನ್ನೂ ತಿನ್ನುವನು! ತಿಂದು ತನ್ನ ಕಷ್ಟವನ್ನು ತಾನೇ ಕರೆಯುವನು. ಇದು ಗೊಜ್ಜಿನ ತಪ್ಪಲ್ಲ. ಈಶ್ವರನ ತಪ್ಪಲ್ಲ. ತಪ್ಪು ಮಾನವನದು !!

ಎಲ್. ಪ್ರಹ್ಲಾದರಾವ್.

---

# ಕಾವ್ಯಾವಲೋಕನ

**ಸಖೀಗೀತ**—ಕವಿಗಳು: ಶ್ರೀಮಾನ್ 'ಅಂಬಿಕಾತನಯದತ್ತ'ರು; ಪ್ರಕಾಶಕರು: ಮನೋಹರ ಗ್ರಂಥಪ್ರಕಾಶನ ಸಮಿತಿ, ಧಾರವಾಡ; ಕ್ರೌನ್ ಅ. ೬+೧೦೪; ಬೆಲೆ, ೧ ರೂಪಾಯಿ.

ಹೊಸಗನ್ನಡದ ಪ್ರಮುಖಕವಿಗಳಲ್ಲಿ ಒಬ್ಬರಾದ ಶ್ರೀಮಾನ್ ಬೇಂದ್ರೆಯವರ ಕವನಸಂಗ್ರಹಗಳು ಒಂದಾದ ಮೇಲೊಂದು ಹೊರಬೀಳುತ್ತಿರುವುದು ಆಹ್ಲಾದದ ಸಂಗತಿ. ಅವರ ಹಾಡುಗಳು ಕನ್ನಡನಾಡಿನ ಒಂದು ಮೂಲೆಯಿಂದ ಹಿಡಿದು ಇನ್ನೊಂದು ಮೂಲೆಯ ತನಕ ಎಲ್ಲ ರಸಿಕರ ಕಿವಿಗೂ ಬಿದ್ದಿವೆ. ಅವರ ಕವಿತೆಯ ವಿಸ್ತಾರವಾದ ವಿಮರ್ಶೆ ಕನ್ನಡದಲ್ಲಿ ಮಾತ್ರವಲ್ಲದೆ ಇಂಗ್ಲಿಷಿನಲ್ಲಿಯೂ ಬಂದಿದೆ. ಆದಕಾರಣ ಈಚೆಗೆ ಪ್ರಕಟವಾಗಿರುವ ಅವರ 'ಸಖೀಗೀತ'ದ ವಿಮರ್ಶೆಯನ್ನು ಇಲ್ಲಿ ದೀರ್ಘವಾಗಿ ಮಾಡುವ ಗೋಜಿಗೆ ಹೋಗದೆ, ಅದರಲ್ಲಿ ಮೆಚ್ಚಿಕೆಯಾದ ಕವನಗಳಲ್ಲಿ ಮೂರುನಾಲ್ಕನ್ನು ಮಾತ್ರ ಕುರಿತು ಕೆಲವು ಮಾತನ್ನು ಹೇಳಲು ಇಲ್ಲಿ ಉದ್ದೇಶಿಸಿದೆ.

ಶ್ರೀಮಾನ್ ಬೇಂದ್ರೆಯವರ ಪದ್ಯಗಳು ಬೇಗ ಅರ್ಥವಾಗುವುದಿಲ್ಲ; ಒಂದೊಂದು ಸಲ, ಅವರು ಏನನ್ನು ಹೇಳಲು ಹೊರಟಿದ್ದಾರೆ ಎಂಬುದೇ ತಿಳಿಯುವುದಿಲ್ಲ—ಎಂಬ ಪ್ರತೀತಿ ಉಂಟು. ಇದರಲ್ಲಿ ಸತ್ಯಾಂಶ ಸ್ವಲ್ಪಮಟ್ಟಿಗಾದರೂ ಇದೆಯೆಂಬುದನ್ನು ಕವಿಗಳೂ ಬಲ್ಲರು. ಆದಕಾರಣ, ಈ ಗ್ರಂಥಕ್ಕೆ ಪ್ರಸ್ತಾವನೆಯಾಗಿ ಅವರು ಪ್ರತಿಯೊಂದು ಕವನದ 'ಸಂದರ್ಭ ಸೂಚನೆ'ಯನ್ನು ಕೊಟ್ಟಿದ್ದಾರೆ. ಇದರಿಂದ ವಾಚಕರಿಗೆ ಕವನಗಳ ಸ್ವಾರಸ್ಯವನ್ನು ಗ್ರಹಿಸಲು ಎಷ್ಟೋ ಸಹಾಯವಾಗಿದೆ; ವಿಮರ್ಶಕನ ಕಾರ್ಯ ಎಷ್ಟೋ ಹಗುರವಾಗಿದೆ.

ಈ ಸಂಕಲನಕ್ಕೆ ಹೆಸರು ಕೊಟ್ಟಿರುವ 'ಸಖೀಗೀತ'ವೆಂಬ ಸೀಳ್ಗವನವನ್ನು ಬಿಟ್ಟರೆ ಇದರಲ್ಲಿ ೨೯ ಚಿಕ್ಕ ಚಿಕ್ಕ ಬಿಡಿ ಕವನಗಳಿವೆ. ಬೇಂದ್ರೆಯವರ ಮಿಕ್ಕ ಕಾವ್ಯ ಸಂಗ್ರಹಗಳಲ್ಲಿರುವಂತೆಯೇ ಇಲ್ಲಿ ಕೂಡ ಬೇರೆ ಕಾಲಗಳಲ್ಲಿ ಅವರು ಬರೆದ ಕವನಗಳು ಒಟ್ಟುಗೂಡಿರುವಂತೆ ತೋರುತ್ತದೆ. ಅವರಿಗೆ ವಾರ್ಧಕಷಟ್ಪದಿಯ ಮೋಹ ಹಿಡಿದಿದ್ದಾಗ ಬರೆದ ಪದ್ಯಗಳು—ಬಹುಶಃ ಹಿಂದಿನ ಸಂಕಲನಗಳಲ್ಲಿ ಸೇರಿಸದೆ ಬಿಟ್ಟಿದ್ದವು—ಇಲ್ಲಿವೆ; ಇತ್ತೀಚೆಗೆ ಬರೆದ ಕುಣಿತದ ಹಾಡುಗಳೂ ಇಲ್ಲಿವೆ. ಬೇಂದ್ರೆಯವರ ಕವನಗಳನ್ನೆಲ್ಲಾ ಓದಿದರೆ, ಒಂದೇ ಹೆಸರಿನಲ್ಲಿ ಇಬ್ಬರು ಕವಿಗಳು ಬರೆಯುತ್ತಿರುವಂತೆ ಒಮ್ಮೊಮ್ಮೆ ಅನ್ನಿಸುತ್ತದೆ. ನಿಬದ್ಧವಾದ ಛಂದಸ್ಸಿನಲ್ಲಿ ಗ್ರಾಂಥಿಕ ಭಾಷೆಯಲ್ಲಿ

ಅವರು ಬರೆದ ಕವನಗಳಿಗೂ, ಹಳ್ಳಿಯ ಸಾಂಗತ್ಯಗಳ ಧಾಟಿಯಲ್ಲಿ ಹಳ್ಳಿಗರ ಮಾತಿನಲ್ಲಿ ಅವರು ಕಟ್ಟಿದ ಹಾಡುಗಳಿಗೂ ತುಂಬ ಭೇದ ಕಾಣಿಸುತ್ತದೆ. ಎರಡರಲ್ಲೂ ಆಳವಾದ ವಿಚಾರವಿದೆ, ಸೂಕ್ಷ್ಮವಾದ ಅನುಭವವಿದೆ. ಆದರೆ ಇದರ ಅಭಿವ್ಯಕ್ತಿ ಮಾತ್ರ ಎರಡರಲ್ಲೂ ಬೇರೆಬೇರೆಯಾಗುತ್ತದೆ. ಎಷ್ಟೋ ಬಾರಿ ಒಂದು ಕಬ್ಬಿಣದ ಕಡಲೆಯಾದರೆ ಇನ್ನೊಂದು 'ನಾದದ ನವನೀತ'ವಾಗುತ್ತದೆ. ಈ ಎರಡನೆಯ ಗುಂಪಿಗೆ ಸೇರಿದ ಗೀತದಲ್ಲಿ ಎಲ್ಲ ಭಾವವೂ ಒಮ್ಮೆಗೇ ಹೊಳೆಯದಿದ್ದರೂ ಅದರ ದನಿಯ ಇಂಪಿನಲ್ಲೇ ರಸಿಕನು ತಲ್ಲೀನನಾಗಿಬಿಡುತ್ತಾನೆ. ಮಾತಿನ ಶಕ್ತಿಗೆ ಸಾಮಾನ್ಯವಾಗಿ ಮೀರಿ ಗಾಯನದಲ್ಲಿ ಮಾತ್ರ ಛಾಯೆದೋರುವ ಅಪೂರ್ವ ಭಾವಗಳನ್ನು ತಮ್ಮ ಹಾಡುಗಳಲ್ಲಿ ಹಿಡಿದಿಡುವ ಶಕ್ತಿ ಬೇಂದ್ರೆಯವರಿಗೆ ವಿಶೇಷವಾಗಿ ಇದೆ. ಅವರ 'ನಾದಲೀಲೆ'ಯಲ್ಲಿ ಪ್ರಕಟವಾಗಿರುವ 'ಭೃಂಗದ ಬೆನ್ನೇರಿ ಬಂತು ಕಲ್ಪನಾವಿಲಾಸಾ' ಎಂಬ ಭಾವಗೀತವು ಈ ರಸಸಿದ್ಧಿಯ ಪರಾಕಾಷ್ಠೆ. ಇದರ ಮಟ್ಟಕ್ಕೆ ಏರದಿದ್ದರೂ ಈ ಜಾಡಿನಲ್ಲೇ ಸಾಗುವ ಕವನಗಳು 'ಸಖೀಗೀತ'ದಲ್ಲಿ ಕೆಲವು ಉಂಟು. 'ತುಂಬಿ ಬಂದಿತ್ತು' ಎನ್ನುವುದು "ಬಸವಣ್ಣನವರ ಜೀವನದ ಕೊನೆಯ ದಿನಗಳಿಗೆ ಸಂಬಂಧಿಸಿದ 'ತಲೆದಂಡ' ಎಂಬ [ಇನ್ನೂ ಬೆಳಕಿಗೆ ಬಂದಿಲ್ಲದ] ನಾಟಕದೊಳಗಿನದು." ಇದರಲ್ಲಿ ಮುದುಕಜಂಗಮನೊಬ್ಬನು ಹೇಳುವ ಸ್ವಾನುಭವದ ಮಾತುಗಳು ಬಿಜ್ಜಳ-ಬಸವಣ್ಣನವರ ಚರಿತೆಗೂ ಕಾಲಕ್ಕೂ ಅನ್ವಯಿಸುವಂತೆ ಅವರು ಹಾಡನ್ನು ಕಟ್ಟಿದ್ದಾರೆ.।

ತುಮ್ ತುಮ್ ತುಮ್ ತುಮ್ ತುಮ್ ತುಮ್ ತುಮ್ ತುಮ್
ತುಂಬಿ ಬಂದಿತ್ತS ತಂಗೀ
ತುಂಬಿ ಬಂದಿತ್ತು ||

ಎಂಬ ಪಲ್ಲವಿಯ ಝೇಂಕಾರವೇ ಸಾಕು; ಕೇಳುವವನ ಮನಸ್ಸನ್ನು ಎಲ್ಲಿಗೋ ಒಯ್ಯುತ್ತದೆ. ಒಟ್ಟು ಪದ್ಯವನ್ನೇ ಉಪಮೆಗಳ ಮೂಲಕ ನಿರ್ವಾಹಮಾಡಿದ್ದಾರೆ:

ಬೆಳಕಿಗಿಂತ ಬೆಳ್ಳಗೆ ಇತ್ತ
ಗಾಳಿಗಿಂತ ತೆಳ್ಳಗೆ ಇತ್ತ
ಜಡಿಯಿಂದಿಳಿದ ಗಂಗಿ ಹಾಂಗ
ಚಂಗನೆ ನೆಗೆದಿತ್ತ ....

ಬೇಂದ್ರೆಯವರ ಹೋಲಿಕೆಗಳು ಎಷ್ಟು ಅಪ್ರಯಾಸವಾಗಿ, ಆದರೂ ಸುಘಟಿತವಾಗಿ ಪ್ರಾಸಾನುಪ್ರಾಸದ ಗರಿಗಳ ಮೇಲೆ ಹಾದುಬರುತ್ತವೆ! ಇದು ಇವರ ಕವಿತೆಯ ಅಸಾಧಾರಣ ಲಕ್ಷಣ. ಉಪಮೆಗಳ ಸುರಿಮಳೆಯನ್ನು 'ಮಾಯಾಕಿನ್ನರಿ' ಎಂಬ ಇನ್ನೊಂದು ರಮ್ಯವಾದ ಕವನದಲ್ಲಿಯೂ ನೋಡಬಹುದು.

ಈ ಸಂಗ್ರಹದಲ್ಲಿ ಬಂದಿರುವ ಚಿಕ್ಕ ಕವನಗಳಲ್ಲೆಲ್ಲಾ ಪರಮ ಸುಂದರವಾದ ದ್ದೆಂದರೆ ಬಹುಶಃ 'ಹುಬ್ಬಳ್ಳಿಯಾಂವಾ' ಎಂಬ ಹಾಡು. ಇದು ಬೇಂದ್ರೆಯವರು "ಬರೆಯಬಹುದೆಂದು ಆಶಿಸಿರುವ ಇನ್ನೊಂದು ನಾಟಕದ ಭಾಗ. [—ಈ ನಾಟಕಗಳೆಲ್ಲ ಯಾವಾಗ ರೂಪುಗೊಂಡು ರಂಗದ ಮೇಲೆ ಬರುವುವೊ!] ಪ್ರಣಯಭಂಗದಿಂದ ಹುಚ್ಚು ಹಿಡಿದ ಸೂಳೆಯೊಬ್ಬಳು ಈ ಹಾಡನ್ನು ಹೇಳುತ್ತಾಳೆ." ಹುಬ್ಬಳ್ಳಿಯ ಸೆಟ್ಟರ ಹುಡುಗನೊಬ್ಬನು ಒಬ್ಬ ಜೋಗಿತಿಯೊಂದಿಗೆ ಕೆಲವುಕಾಲ ಸಲಿಗೆಯನ್ನು ಬೆಳಸಿ ಆಮೇಲೆ ಅವಳನ್ನು ತೊರೆದು ಎಲ್ಲಿಗೋ ಹೋಗಿಬಿಡುತ್ತಾನೆ. ಇವಳು ಆ ವಿಯೋಗವ್ಯಥೆಯನ್ನು ತಾಳಲಾರದೆ, ಅವನ ರೂಪಗುಣಗಳನ್ನೂ ಸರಸಸಲ್ಲಾಪಗಳನ್ನೂ ನೆನೆಯುತ್ತಾ ಹಂಬಲಿಸುತ್ತಾ ಅವನನ್ನು ಹುಡುಕಿಕೊಂಡು ಅಲೆದಾಡುತ್ತಾಳೆ.

ಇನ್ನೂ ಯಾಕ ಬರಲಿಲ್ಲವ್ವಾ ಹುಬ್ಬಳ್ಳಿಯಾಂವಾ
ವಾರದಾಗ ಮೂರ ಸರತಿ ಬಂದು ಹೋದಾಂವಾ ||

ಎಂಬುದೇ ಅವಳ ಹಂಬಲಿನ ಪಲ್ಲವಿ. ಆ 'ಹುಬ್ಬಳ್ಳಿಯಾಂವಾ' ಎಂಥವನು ?—

ಭಾರಿ ಜರದ ವಾರಿ ರುಮ್ಮಾಲಾ ಸುತ್ತಿಕೊಂಡಾಂವಾ
ತುಂಬ-ಮಿಾಸಿ ತೀಡಿಕೋತ ಹುಬ್ಬ ಹಾರಸಾಂವಾ
ಮಾತುಮಾತಿಗೆ ನಕ್ಕನಗಿಸಿ ಆಡಿಸ್ಯಾಡಾಂವಾ
ಏನೊ ಅಂದರ ಏನೋ ಕಟ್ಟಿ ಹಾಽಡ ಹಾಡಾಂವಾ . . . .

ಇರು ಅಂದರ ಬರತೇನಂತ ಎದ್ದು ಹೊರಡಾಂವಾ
ಮಾರೀ ತೆಳಗ ಹಾಕಿತೆಂದರೆ ಇದ್ದು ಬಿಡಾಂವಾ
ಹಿಡಿಹಿಡೀಲೆ ರೊಕ್ಕಾ ತೆಗದು ಹಿಡಿಹಿಡಿ ಅನ್ನಾಂವಾ
ಖರೇ ಅಂತ ಕೈಮಾಡಿದರ ಹಿಡಽದ ಬಿಡಾಂವಾ . . . .

ಈ ಸೆಟ್ಟರ ಹುಡುಗ ಎಷ್ಟು ಸೊಗಸುಗಾರ ಎಂದರೆ—"ಕಂಡ ಹೆಣ್ಣಿಲೆ ಪ್ರೀತೀ ವೀಳ್ಯ ಮಡಚಿಕೊಂಡಾಂವಾ." ಇಂಥವನು "ಕಸಬೇರ ಕಳೆದು ಬಸವೇರ ಬಿಟ್ಟು" ಈ ಜೋಗಿತಿಯನ್ನು ಮೆಚ್ಚಿ ಬಂದು ಅವಳನ್ನು ತನ್ನ ಗೆಣತಿಯಾಗಿ ಮಾಡಿಕೊಂಡಿ ದ್ದಾನೆ. ನೀನು "ಚೌಡಿಯಲ್ಲ, ಚೂಡಾಮಣಿ" ಎಂದು ಅವಳನ್ನು ಹೊಗಳಿದ್ದಾನೆ. ಒಲಿಸಿ ಮರುಳುಗೊಳಿಸಿ ಈಗ ಬಿಟ್ಟುಹೋಗಿದ್ದಾನೆ.—ಅವನನ್ನು ಕುರಿತು ಹಲುಬುವ ಈ ವಿರಹಿಣಿಯ ಮಾತಿನಲ್ಲಿ ಅವನ ಸಿಸ್ತುಗಾರಿಕೆಯೂ ಇವಳ ಪ್ರೇಮವೂ ಒಟ್ಟೊಟ್ಟಿಗೆ ಹೊಮ್ಮುತ್ತವೆ. ಆಡುವ ಮಾತಿನ ನಡೆಯನ್ನು ಬಿಡದೆ, "ಚಹಾದ ಜೋಡಿಯ ಚೂಡಾ"ದಂಥ ಕೇವಲ ಲೋಕರೂಢಿಯ ಹೋಲಿಕೆಗಳನ್ನು ಕೊಡುವುದಕ್ಕೂ ಹಿಂಜರಿಯದೆ, ಈ ಸಾಮಾನ್ಯವಸ್ತುವಿನ ನಿರೂಪಣೆಯಲ್ಲಿ ಅತಿ ಮಧುರವಾದ ಕಾವ್ಯ ವನ್ನು ಕವಿಗಳು ನಮಗೆ ಒದಗಿಸಿಕೊಟ್ಟಿದ್ದಾರೆ.

'ಪುಟ್ಟ ವಿಧವೆ' ಎನ್ನುವುದು ಬೇಂದ್ರೆಯವರ ಕವನಗಳ ರಾಶಿಯಲ್ಲಿ ನಿಗಿನಿಗಿ ಉರಿಯುವ ಕೆಂಡ. ಇನ್ನೂ ಕಣ್ಣುಬಿಡದ ಹೆಣ್ಣುಕೂಸಿಗೆ ಧರ್ಮದ ಹೆಸರಿನಲ್ಲಿ ಮದುವೆಯಾಗಿ, ನಾಲ್ಕು ದಿನದಲ್ಲೇ ಆ ಪುಟ್ಟ ಮುತ್ತೈದೆಯ ಸಂಸಾರದ ಆಟವೆಲ್ಲ ಮುಗಿದು, ವೈಧವ್ಯಸಂಸ್ಕಾರಗಳೆಲ್ಲ ನಡೆದು, ಕಡೆಗೆ ಅವಳು ಗುಡಿಯ ಕಟ್ಟೆಯಲ್ಲಿ ಪುರಾಣ ಹೇಳುವ ಆಚಾರ್ಯರ ಮುಂದೆ ನಿಂತು, "ಜಾರಕೃಷ್ಣನ ಕಥೆಗೆ ಕೋಡು ಮೂಡಿ"ದ ವರೆಗಿನ ನಿರೂಪಣೆ ಇಲ್ಲಿ ಬಂದಿದೆ. ಹಳ್ಳಿಗಳಲ್ಲಿ ಇಂದಿಗೂ ನಡೆಯುವ ಬಳಕೆಯ ಸಂಗತಿ; ಅಲಂಕಾರ ಚಮತ್ಕಾರಗಳನ್ನರಿಯದ ಬಳಕೆಯ ಮಾತು.—ಆದರೆ ಈ ಮಾತಿನ ಮೊನೆ ಮೊನೆಯಲ್ಲೂ ಇರಿಯುವ ತೀಕ್ಷ್ಣ ವಿಡಂಬನದ ರೀತಿಯನ್ನು ಇಡಿಯ ಕವನವನ್ನೇ ಓದಿ ಅರಿಯಬೇಕು. "ಕುರುಡುಧರ್ಮಕ್ಕೆ ಸ್ಮಾರಕವು ನಿಂತಂತೆ" ಈ ಪುಟ್ಟ ವಿಧವೆ ನಿಂತ ಬಗೆಯನ್ನು ಅನ್ಯಾದೃಶವಾದ ರೀತಿಯಲ್ಲಿ ಕವಿಗಳು ಇಲ್ಲಿ ಪ್ರತಿಪಾದಿಸಿದ್ದಾರೆ.

ಈ ಸಂಗ್ರಹದಲ್ಲಿ ರಸಿಕರು ಮೆಚ್ಚುವ ಇನ್ನೂ ಎಷ್ಟೋ ಕವನಗಳಿವೆ. ಆದರೆ ಅವುಗಳ ವಿಚಾರವನ್ನು ಬೆಳಸಲು ಇಲ್ಲಿ ಅವಕಾಶವಿಲ್ಲ. 'ಪರಾಗ'ವೆಂಬ ಆಧುನಿಕ ಕವನಗಳ ಸಂಕಲನಕ್ಕೆ ಬೇಂದ್ರೆಯವರು ಬರೆದುಕೊಟ್ಟ ಪ್ರವೇಶ ಕವನ ಇಲ್ಲಿ ಪುನರ್ಮುದ್ರಿತವಾಗಿದೆ; ಇದನ್ನು ಮಾತ್ರ ಕುರಿತು ಒಂದು ಮಾತನ್ನು ಹೇಳ ಬೇಕೆನ್ನಿಸುತ್ತದೆ. ಇಂಥ ಪ್ರಾಸಂಗಿಕಪದ್ಯಗಳನ್ನು ಕಾವ್ಯವಾಗುವಂತೆ ಬರೆಯುವುದು ಕಷ್ಟ. ಆದರೆ ಬೇಂದ್ರೆಯವರು ಈ ಕಾರ್ಯವನ್ನು ತುಂಬ ಜಾಣ್ಮೆಯಿಂದ ಸಾಧಿಸಿದ್ದಾರೆ. 'ಪರಾಗ' ಎಂಬ ಹೆಸರಿನ ಉಪಯೋಗವನ್ನು ಚೆನ್ನಾಗಿ ಮಾಡಿ ಕೊಂಡು, ರಸಿಕಭೃಂಗವನ್ನು ಕವನಕೋಶದ ಬಳಿಗೆ ಕರೆದು,

"ನಿನ್ನ ಮುಖಸ್ಪರ್ಶವೂ ಸಾಕು; ಹೊಸ
ಸೃಷ್ಟಿಯೆ ಬರಬಹುದು ||
ಬಾ ಭೃಂಗವೆ ಬಾ—"

ಎಂದು ಮುಕ್ತಾಯಮಾಡಿದ್ದಾರೆ. ಈ ಮಾತಿನಲ್ಲಿ, ಜೀವವಿಜ್ಞಾನದ ತತ್ವವೂ ಕಾವ್ಯ ಸೃಷ್ಟಿಯ ರಹಸ್ಯವೂ ಚೆನ್ನಾಗಿ ಹೊಂದಿ ಬಂದಿವೆ.

ಇನ್ನು ಕೊನೆಯದಾಗಿ 'ಸಖೀಗೀತ'ವೆಂಬ ನೀಳ್ಗವನವನ್ನು ಕುರಿತು ಎರಡು ಮಾತುಗಳು. ಬೇಂದ್ರೆಯವರ ಕವಿತೆಗೆಲ್ಲ ಒಂದಲ್ಲ ಒಂದು ಬಗೆಯಲ್ಲಿ ಸ್ವಾನುಭವವೇ ಆಧಾರ. 'ಸಖೀಗೀತ'ದಲ್ಲಂತೂ ಅವರ ಜೀವನವೃತ್ತಾಂತ ಪ್ರತ್ಯಕ್ಷವಾಗಿ ಬಂದಿದೆ. ನಮ್ಮ ದೇಶದಲ್ಲಿ ಸತಿಪತಿಗಳ ಪ್ರಣಯವು ಮದುವೆಯಲ್ಲಿ ಮೊದಲಾಗಿ ಸಂಸಾರದಲ್ಲಿ ಹೇಗೆ ಪರಿಪಾಕಗೊಳ್ಳುವುದೆಂಬುದಕ್ಕೆ ತಮ್ಮ ದಾಂಪತ್ಯ ಜೀವನವನ್ನೇ ನಿದರ್ಶನವಾಗಿ

ತೆಗೆದುಕೊಂಡು ಅವರು ಇಲ್ಲಿ ನಿರೂಪಿಸಿದ್ದಾರೆ. "ಸಂಸ್ಕಾರವಂತರ ಮನೆಗಳಲ್ಲಿ . . . ಅಗ್ನಿ ಸಾಕ್ಷಿಯಾಗಿ, ದಾನವಾಗಿ ಬಂದ ಕನ್ನೆಯನ್ನು ಸ್ನೇಹದ ಅಭ್ಯಾಸದಿಂದ, ಸುಖ ದುಃಖಗಳಲ್ಲಿ ಸಮಭಾಗಿಯಾಗುವ ಸಹಾನುಭೂತಿಯ ಅಂತಃಕರಣದಿಂದ ಸಖಿಯ ನ್ನಾಗಿ ಮಾಡುವ ಕ್ರಮವೊಂದು ಎಡೆಬಿಡದೆ ಸಾಗಿರುವದು. ಆ ಕ್ರಮದಲ್ಲಿ ಸ್ನೇಹದ ವಿವಿಧ ರೂಪಗಳೂ ತಮ್ಮ ತಮ್ಮ ಪಾತ್ರವನ್ನಾಡಿ ನಾಯಕಪಾತ್ರಕ್ಕೆ ರಸಭಾವಗಳ ಪ್ರಭಾವಲಯವನ್ನು ಕಟ್ಟುವವು. ಅಂತಹ ಚಿತ್ರವೊಂದು ಸಖೀಗೀತದಲ್ಲಿದೆ. ಕಾವ್ಯನಾಯಕನು ತನ್ನ ಸಖಿಗಾಗಿ ತಮ್ಮ ಜೀವನ-ಪೂರ್ವಭಾಗದ ಸ್ಮೃತಿಗಳನ್ನು ಹಾಡಲುದ್ಯುಕ್ತನಾಗಿದ್ದಾನೆ. ಮದುವೆಯ ದಿನದ ಸಂಜೆಯ ಸ್ಮೃತಿಯಿಂದ ಗೀತವು ಪ್ರಾರಂಭವಾಗುವದು. . . ." ನಾಯಕನೂ ಅವನಿಗೆ 'ವಿಧಿ ತಂದ ವಧು'ವೂ ಮೈಸಲಿಗೆ ಮನಸಲಿಗೆಗಳನ್ನು ಬೆಳಸಿ, ಸಾವು ನೋವುಗಳನ್ನು ಜೊತೆಯಾಗಿ ಕಂಡು ಕಷ್ಟಸುಖಗಳನ್ನು ಒಟ್ಟಿಗೆ ಉಂಡು ಬಾಳುತ್ತಾರೆ; ಇಷ್ಟಾದರೂ ಒಬ್ಬೊಬ್ಬರ ಬಾಲ್ಯಸಂಸ್ಕಾರಗಳೂ ಮನಸ್ಸಿನ ಪರಿಪಾಕಗಳೂ ಬೇರೆ ಬೇರೆಯಾದದ್ದರಿಂದ ಗಂಡಿನ ಉತ್ಸಾಹ ಉದ್ಯಮಗಳು ಹೆಣ್ಣಿಗೆ ಅರ್ಥವಾಗದೆ, ಹೆಣ್ಣಿನ ಮೌನಮುದ್ರೆಯನ್ನೊಡೆದು ಸಂತೈಸಲು ಗಂಡಿಗೆ ಸಾಧ್ಯವಾಗದೆ, ಒಟ್ಟಿಗೆ ಬಾಳುತ್ತಿದ್ದರೂ ಮನಸ್ಸುಗಳು ಕೆಲವು ಕಾಲ ಅಗಲುತ್ತವೆ; ಈ ನಡುವೆ ಸತ್ಯಾಗ್ರಹದ ಚಳವಳಿಯ ಕಾವು ನಾಯಕನಿಗೆ ತಟ್ಟಿ ("ಹೆಳವನಿದ್ದಲ್ಲಿಗೆ ಹೊಳೆ ಬಂದಿತು"!) ಈತನು ಸೆರೆಮನೆ ವಿಪ್ರವಾಸಗಳೆಲ್ಲದರ ಬವಣೆಯನ್ನು ಪಡಬೇಕಾಗುತ್ತದೆ; ಇನ್ನೊಂದು ಕಡೆ, ಈತನ ಕಾವ್ಯವು ಕಲ್ಪನೆಯ ತುದಿಗೇರಿ "ಕೊಟ್ಟದ್ದೆ ರೂಪವು ಇಟ್ಟದ್ದೆ ಹುರುಳೆಂಬ" ರೀತಿಯಲ್ಲಿ ಮುಂದುವರಿ ಯುತ್ತದೆ. ಹೀಗೆ ಪ್ರಣಯದ ಎಲ್ಲ ಮುಖಗಳನ್ನೂ ಕಂಡು ಪರಿಪಾಕಹೊಂದುತ್ತಿ ರುವ ಜೀವಗಳ ಸತ್ವಪರೀಕ್ಷೆಯ ಕಥೆ ಇಲ್ಲಿ ಉದ್ದಕ್ಕೂ ಬಂದಿದೆ. ಇದು ಮುಗಿಯದ ಕಥೆ. ಈಗ ಅಚ್ಚುಮಾಡಿರುವ, ಸುಮಾರು ಸಾವಿರ ಚರಣಗಳನ್ನುಳ್ಳ ಕಾವ್ಯವನ್ನು ಕವಿಗಳು 'ಪೂರ್ವಾನುರಾಗ'ವೆಂದು ಕರೆದಿದ್ದಾರೆ. ಇನ್ನು ಮುಂದಕ್ಕೆ ಇದು ಹೇಗೆ ತಿರುಗುವುದೋ, ಯಾವ ನೆಲೆಗೆ ಮುಟ್ಟುವುದೋ : ತನ್ನ ಕಾವ್ಯಕ್ಕೆ ತಾನೇ ನಾಯಕ ನಾದ ಕವಿಗೆ ತಾನೆ ಹೇಗೆ ತಿಳಿಯಬೇಕು! ಮೂರು ನೂರು ನುಡಿಗಳಿಗೊಮ್ಮೆ ನಿನದಿಸುವ—

ನಿನಗೂ ನನಗೂ ಅಂಟಿದ ನಂಟಿನ
 ಕೊನೆಬಲ್ಲವರಾರು ಕಾಮಾಕ್ಷಿಯೇ।

ಎಂಬ ಪಲ್ಲವಿ ಈ ಭಾವವನ್ನೇ ಪ್ರಬಲಪಡಿಸುತ್ತದೆ.

ವಾಚಕರ ಮನಸ್ಸನ್ನು ಒಲಿಸಿಕೊಳ್ಳಲು ಕಥೆಯ ಪ್ರವೇಶವೇ ಸಾಕು. ಮದುವೆಯ ಕಾಲದಲ್ಲಿ ಪ್ರಕೃತಿ ಹೀಗಿತ್ತಂತೆ:

ಮಾಂದಳಿರ ತೋರಣ ಹೂವಿಡಿ ಗುಡಿಗಟ್ಟಿ
ಮಧುಮಾಸ ಹೊರಟಿತ್ತು ನಿಬ್ಬಣಕೆ
ಚಂದಿರದೇವನ ಮುಗಿಲ ಮಂದಿರದಲ್ಲಿ
ಕಣ್ಣಿದಿರು ಕೌಮುದಿ ಕುಣಿಯುತಿರೆ . . .

ಹೀಗೆಯೇ, ಕಥೆಯ ಉದ್ದಕ್ಕೂ ದಂಪತಿಗಳ ಜೀವನದ ಕಷ್ಟಸುಖಗಳ ಚಿತ್ರದೊಡನೆ ಪ್ರಕೃತಿಯ ಬೇರೆ ಬೇರೆ ಮುಖಗಳ ಚಿತ್ರವೂ ರಮ್ಯವಾಗಿ ಬೆರೆದು ಬರುತ್ತದೆ. 'ಸಖೀಗೀತ'ದೊಳಗೆ ಒಂದು ಚಿಕ್ಕ ಋತುಸಂಹಾರವೇ ಅಡಕವಾಗಿದೆಯೆನ್ನಬಹುದು.

ಆತ್ಮಕಥೆಯನ್ನು ಹದಗೆಡಿಸದೆ ಬರೆಯುವುದು ಕಠಿನ. ಅದನ್ನು ಗೀತವಾಗಿ ಹಾಡಿ ರಸವುಕ್ಕಿಸುವುದಂತೂ ಅತಿ ಕಠಿನ. ಇಂಥ ಕಾರ್ಯವನ್ನು 'ಸಖೀಗೀತ' ದಲ್ಲಿ ಬೇಂದ್ರೆಯವರು ಮನೋಹರವಾಗಿ ಸಾಧಿಸಿದ್ದಾರೆ. ತನ್ನ ಕೃತಿ ರಮ್ಯವಾಯಿತೆಂಬುದರ ಅರಿವು ಕವಿಗೂ ಉಂಟು.

"ಪಟ್ಟ ಪಾಡೆಲ್ಲವು ಹುಟ್ಟು-ಹಾಡಾಗುತ
ಹೊಸವಾಗಿ ರಸವಾಗಿ ಹರಿಯುತಿವೆ"

ಎಂದು ಗೀತದ ಮೊದಲಲ್ಲೂ,

"ಕುಣಿತದ ಹಾಡಿದು ಕುಣಿಯಹಚ್ಚಿತು ಜಗಕೆ
ಕಲ್ಲಾದ ಮನಗಳ ಕರಗಿಸಿತು"

ಎಂದು ಅದರ ಕೊನೆಯಲ್ಲೂ ಅವರು ಹೇಳಿದ್ದಾರೆ. ಕವಿಯ ಮಾತೇ ಆದರೂ ಇದೆಲ್ಲ ದಿಟ.

ತೀ. ನಂ. ಶ್ರೀ.

---

**ಕಂಸವಹೊ**—ರಾಮಪಾಣಿವಾದಕವಿ ರಚಿಸಿದ್ದು. ಕೊಲ್ಹಾಪುರದ ರಾಜಾರಾಮ್ ಕಾಲೇಜಿನಲ್ಲಿ ಅರ್ಧಮಾಗಧಿ ಪ್ರೊಫೆಸರಾದ ಡಾಕ್ಟರ್ ಎ. ಎನ್. ಉಪಾಧ್ಯೆ, ಎಂ.ಎ., ಡಿ.ಲಿಟ್., ಅವರು ಪರಿಶೋಧಿಸಿ ಪ್ರಕಟಿಸಿದ್ದು. ನಾಲ್ಕು ಸರ್ಗಗಳ ಪ್ರಾಕೃತಕಾವ್ಯ. ಒಟ್ಟು ಪದ್ಯಸಂಖ್ಯೆ ೨೩೨. ಕ್ರೌನ್ ಅ. ೧+೨೧೩. ಬೆಲೆ?

ಸಂಪಾದಕರು ಇದಕ್ಕೆ ಮೊದಲೇ ಪ್ರಾಕೃತ ಭಾಷೆಯ ನಾಲ್ಕು ಗ್ರಂಥಗಳನ್ನು ಸಂಗ್ರಹಿಸಿ ಶೋಧಿಸಿ ಪ್ರಕಟಿಸಿದ್ದಾರೆ. ಅವುಗಳ ವಿವರವನ್ನು ಈ ಸಂಪುಟದಲ್ಲಿಯೇ ನೋಡಬಹುದು. ಇದು ಅವರು ಪ್ರಕಟಿಸಿದ ಐದನೆಯ ಪ್ರಾಕೃತ ಗ್ರಂಥ.

ಇಂಗ್ಲೀಷಿನಲ್ಲಿ ವಿಪುಲವಾದ ಮುನ್ನುಡಿ, ರಾಮಪಾಣಿವಾದನ ಮೂಲಕಾವ್ಯ, ಆತನೇ ಬರೆದಿರಬಹುದಾದ ಸಂಸ್ಕೃತಚ್ಛಾಯೆ, ಪ್ರಾಕೃತ ಶ್ಲೋಕಗಳ ಅಕಾರಾದಿ ಸೂಚಿ, ಗ್ರಂಥಗತ ಮುಖ್ಯ ಪ್ರಾಕೃತ ಶಬ್ದಗಳಿಗೆ ಇಂಗ್ಲೀಷಿನಲ್ಲಿ ಅರ್ಥವನ್ನು ಕೊಡುವ ಕೋಶ, ಸಂಪಾದಕರ ಇಂಗ್ಲೀಷಿನ ಭಾಷಾಂತರ, ಇಂಗ್ಲೀಷಿನಲ್ಲಿ ವಿಪುಲವಾದ ಟೀಕೆ, ಗ್ರಂಥಗತವಾದ ವ್ಯಕ್ತಿನಾಮಗಳ ಅಕಾರಾದಿಸೂಚಿ—ಹೀಗೆ ಸರ್ವಾಂಗ ಸುಂದರ ವಾಗಿದೆ ಈ ಮುದ್ರಣ; ಸಂಪಾದಕರ ವಿಪುಲ ಪರಿಶ್ರಮವನ್ನೂ ಪಾಂಡಿತ್ಯವನ್ನೂ ಸ್ಪಷ್ಟವಾಗಿ ಘೋಷಿಸುತ್ತಿದೆ. ಅಚ್ಚು, ಅಕ್ಷರ, ಕಾಗದ ಎಲ್ಲಾ ಅಂದವಾಗಿವೆ. ಶುದ್ಧಾಶುದ್ಧ ಪತ್ರಿಕೆಯಿಲ್ಲ— ಬೇಕಿಲ್ಲ.

ಈಚಿಗೆ ಭರತಖಂಡದಲ್ಲಿ ದೇಶಭಾಷೆಗಳ ವ್ಯಾಸಂಗವು ಬಹುಮುಖವಾಗಿ ಬೆಳೆಯುತ್ತಿದೆ. ಅದರೊಡನೆ ಅವುಗಳ ಪರಸ್ಪರ ಸಂಬಂಧ, ಮೂಲ, ಶಬ್ದಗಳ ವ್ಯುತ್ಪತ್ತಿ, ಅರ್ಥ ಮೊದಲಾದ ವಿಷಯಗಳಲ್ಲಿ ಹಲವು ಸಮಸ್ಯೆಗಳು ತಲೆದೋರುತ್ತಿವೆ. ಆ ತೊಡಕುಗಳನ್ನು ಬಿಡಿಸುವ ಕೆಲವು ಸಾಧನಗಳಲ್ಲಿ ಬಹಳ ಮುಖ್ಯವಾದವು ಪ್ರಾಕೃತ ಭಾಷೆಗಳು. ಆದರೆ, ಅನೇಕ ಕಾರಣಗಳಿಂದ ನಮ್ಮ ದೇಶದಲ್ಲಿ ವಿದ್ವಾಂಸರಿಗೆ ಪ್ರಾಕೃತಭಾಷಾ ವ್ಯಾಸಂಗವು ನಿಂತುಹೋಗಿ ನೂರಾರು ವರ್ಷಗಳಾದವು. ಇದರ ಪರಿಣಾಮವಾಗಿ, ಸುಮಾರು ಕ್ರಿಸ್ತಪೂರ್ವ ನಾಲ್ಕೈದು ಶತಮಾನಗಳಿಂದ ಕ್ರಿಸ್ತಪರ ಏಳೆಂಟು ಶತಮಾನಗಳವರೆಗೂ ಅಪಾರವಾಗಿ ಬೆಳೆದುಬಂದ ಪ್ರಾಕೃತ ಸಾಹಿತ್ಯದಲ್ಲಿ ಬಹಳಭಾಗ ನಿರ್ನಾಮವಾಗಿ ಹೋಯಿತು. ಒಂದು ಕಡೆ ಸಂಸ್ಕೃತ ಭಾಷೆಯ ಸರ್ವವ್ಯಾಪಕವಾದ ಅಧಿಕಾರ, ಮತ್ತೊಂದು ಕಡೆ ದೇಶಭಾಷೆಗಳ ಕೌಮಾರ ಯೌವನಗಳ ದಾಂಧಲೆ—ಈ ಎರಡರ ನಡುವೆ ಸಿಕ್ಕಿ ಪ್ರಾಕೃತ ಭಾಷೆಗಳು ಬಡವಾಗಿ ಒಣಗಿ ಬಿದ್ದುವು. ಜೈನಬೌದ್ಧರ ಪವಿತ್ರದರ್ಶನ ಗ್ರಂಥಗಳು ಕೆಲವು ಹೊರತು, ಜನಸಾಮಾನ್ಯ ಜೀವನವು ಪ್ರತಿಫಲಿಸುವ, ಪ್ರತಿಭಾಶಾಲಿಗಳ ಭಾವನಾ ಶಕ್ತಿಯನ್ನು ಹೊರಗೆಡಹುವ, ಸಾಹಿತ್ಯವು ಮುಕ್ಕಾಲುಮೂರುವೀಸದಷ್ಟೆಲ್ಲಾ, ಪುಣ್ಣು ಹಿಡಿದು, ಕೊಡವಿ ಒರಸುವವರಿಲ್ಲದೆ ಉದುರಿಹೋಯಿತು. ಗಾಥಾಸಪ್ತಶತಿ, ಸೇತುಬಂಧ, ಗೋಡವಹೊ, ಮೊದಲಾದವು ನಾಲ್ಕಾರು ಮಾತ್ರ ಹೇಗೊ ಚಿರಾಯು ವಾಗಿ ಉಳಿದಿವೆ. ಆದರೆ ಇತ್ತೀಚೆಗೆ ಹಲಮಂದಿ ವಿದ್ವಾಂಸರು ಪ್ರಾಕೃತಭಾಷಾ ಸಾಹಿತ್ಯದ ಬೆಲೆಯನ್ನರಿತು, ಬೆಳಕನ್ನು ನೋಡದೆ ಇದ್ದರೂ ಇನ್ನೂ ಅಲ್ಲಲ್ಲಿ ಉಳಿದಿರುವ ಕಾವ್ಯಗಳನ್ನು ಬಹು ಪ್ರಯಾಸದಿಂದ ಸಂಪಾದಿಸಿ ಪ್ರಕಟಿಸುತ್ತಿರುವುದು ಬಹಳ ಶ್ಲಾಘ್ಯವಾದ ವಿಷಯ. ಪ್ರಕೃತಗ್ರಂಥ ಸಂಪಾದಕರು ಅಂಥವರಲ್ಲೊಬ್ಬರಾಗಿ ಎಲ್ಲರ ಅಭಿನಂದನೆಗೆ ಪಾತ್ರರಾಗಿದ್ದಾರೆ.

ಇಂಗ್ಲೀಷಿನ ಪೀಠಿಕೆಯಲ್ಲಿ ತಮಗೆ ದೊರೆತ ಎರಡು ಕೈಬರಹದ ಮೂಲ ಪ್ರತಿಗಳ ಸಂಪೂರ್ಣ ವಿವರಣೆಯನ್ನು ಕೊಟ್ಟು ಸಂಪಾದಕರು ತಮ್ಮ ಸಂಪಾದನ ಕಾರ್ಯದಕ್ಷತೆಯನ್ನು ತೋರಿಸಿದ್ದಾರೆ. ತರುವಾಯ ಪ್ರಾಕೃತ ಮೂಲ, ಸಂಸ್ಕೃತಚ್ಛಾಯೆ ಇವುಗಳ ಪರಸ್ಪರ ಸಂಬಂಧವನ್ನು ಚರ್ಚಿಸಿದ್ದಾರೆ. ಆ ಮೇಲೆ ರಾಮಪಾಣಿವಾದನ ದೇಶ, ಕಾಲ, ಆತನು ಸಂಸ್ಕೃತ ಪ್ರಾಕೃತ ಮಲಯಾಳ ಭಾಷೆಗಳಲ್ಲಿ ಬರೆದ ಹಲವು ಗ್ರಂಥಗಳ ವಿವರಣೆ, ಪ್ರಕೃತ ಕಾವ್ಯದ ಸವಿಮರ್ಶಾವ ಲೋಕನ, ಅದರಲ್ಲಿ ಬಳಸಿದ ಪ್ರಾಕೃತಭಾಷೆಯ ವಿಭೇದದ ಸ್ವರೂಪ, ಗ್ರಂಥಕರ್ತನ ಶೈಲಿ—ಇತ್ಯಾದಿ ವಿಷಯಗಳನ್ನು ವಿಸ್ತರವಾಗಿ ದಕ್ಷತೆಯಿಂದ ವಿವರಿಸಿದ್ದಾರೆ. ರಾಮಪಾಣಿವಾದನ ಈ ಕಾವ್ಯದ ಬೆಲೆಯನ್ನು ಕಟ್ಟುವಾಗ ಮಾತ್ರ, ಹೊಸದಾಗಿ ಗ್ರಂಥವನ್ನು ಹೊರಪಡಿಸುವವರಿಗೆ ಸಹಜವಾಗಿ ಉಂಟಾಗುವ ಅಭಿಮಾನದ ಅತಿಶಯೋಕ್ತಿಗೆ ಸಂಪಾದಕರೂ ಒಳಗಾಗಿದ್ದಾರೆ. ಅವರು ಹೇಳುವಂತೆ (Intro. xlix) ಈ ಕವಿಯನ್ನು ಪ್ರವರಸೇನ, ವಾಕ್ಪತಿರಾಜ ಮುಂತಾದವರ ಪಂಕ್ತಿಯಲ್ಲಿ ಕುಳ್ಳಿರಿಸಲು ಸಾಧ್ಯವಲ್ಲ. ಈತನಿದ್ದುದು ಕ್ರಿಸ್ತಶಕದ ೧೮ನೇ ಶತಕದಲ್ಲಿ. ಅದು ಭರತಖಂಡದ ಕವಿತಾಪ್ರತಿಭೆ ತಳಹದಿಗೆ ಇಳಿದ ಕಾಲ; ಕೆಲವು ನಿಯಮಗಳನ್ನು ಅಕ್ಷರಶಃ ಪಾಲಿಸಿದರೆ, ಅದರ ಮೇಲೆ ಸಾಧ್ಯವಾದಷ್ಟು ಅರ್ಥ ಶಬ್ದಚಿತ್ರಗಳನ್ನು ಹೊಸೆದರೆ, ಕವಿತೆಯಾಯಿತೆಂದು 'ಮಹಾಕವಿ'ಗಳೂ ತಿಳಿದಿದ್ದ ಕಾಲ; ಸಂಸ್ಕೃತ ಭಾಷೆಯಲ್ಲೇ ಕವಿತಾಪ್ರಪಂಚವೆಲ್ಲಾ ಸಂಕುಚಿತವಾಗಿ, ಕೃತ್ರಿಮವಾಗಿ, ಸಿದ್ಧವಾಗಿ ಇದ್ದು, ಆ ಕನ್ನಡಿಯಲ್ಲಿಯೇ ಪ್ರಾಕೃತದ ನೆರಳನ್ನು ನೋಡಿಕೊಂಡು ಹಿಡಿಯಲು ಪ್ರಯತ್ನ ಮಾಡಬೇಕಾಗಿದ್ದ ಕಾಲ; ಅವರು ನಿಜವಾಗಿ ಬರೆಯುತ್ತಿದ್ದದ್ದು ಸಂಸ್ಕೃತಕ್ಕೆ ಪ್ರಾಕೃತಚ್ಛಾಯೆ. ಅದೂ ಅರ್ಥವಾಗುವುದು ಕಷ್ಟವಾಗಿ ಗ್ರಂಥಕರ್ತರೇ ಆ ಪ್ರಾಕೃತಚ್ಛಾಯೆಗೆ ಮತ್ತೆ ಸಂಸ್ಕೃತಚ್ಛಾಯೆ ಬರೆದುಕೊಂಡು ಕೃತಾರ್ಥರಾಗು ತ್ತಿದ್ದರು. ರಾಮಪಾಣಿವಾದನ ಪ್ರಾಕೃತರಚನೆಯೂ ಈ ಹದ್ದನ್ನು ಮೀರಿದ್ದಲ್ಲ. ಉದಾಹರಣೆಗೆ, ಪದದ ಮೊದಲನೇ ಅಕ್ಷರ ಸಂಯುಕ್ತವ್ಯಂಜನವಾಗಿದ್ದರೆ ಅದರ ಲ್ಲೊಂದು ಲೋಪಿಸಬೇಕಾದದ್ದು, ಪ್ರಾಕೃತಭಾಷೆಗಳಲ್ಲೇ ಅಪವಾದವಿಲ್ಲವೆಂದು ಹೇಳಬಹುದಾದ ಶಾಸ್ತ್ರ. ಉದಾ: ಪ್ರದೀಪ—ಪಈವ. ಇಂಥಾ ಶಬ್ದ ಸಮಾಸ ಮಧ್ಯದಲ್ಲಿ ಸೇರಿದರೂ ಪ್ರಾಯಶಃ ಇದೇ ರೀತಿಯಾಗುವುದು. ಪದದ ನಡುವೆ ಸಂಯುಕ್ತವ್ಯಂಜನವು ವಿಜಾತೀಯವಾಗಿದ್ದರೆ ಪ್ರಾಕೃತದಲ್ಲಿ ಅದು ಸಜಾತೀಯ ವಾಗುತ್ತದೆ. ಉದಾ: ರಾಕ್ಷಸ-ರಕ್ಕಸ. ಪ್ರಕೃತ ಕಾವ್ಯಕವಿ ವ್ಯಸ್ತವಾಗಿರುವಾಗಲೂ ಪದಾದಿಸಂಯೋಗವನ್ನು ಹಾಗೆಯೇ ನಿಲ್ಲಿಸುತ್ತಾನೆ. 'ಬಜ್ಝಂತು ಪ್ಪ ಇದಿಕಡೂ'

ಇತ್ಯಾದಿ (ಸ ೩. ಪ ೫೨). ಸಮಾಸದಲ್ಲಂತೂ ಪದಾದಿ ಸಂಯೋಗವನ್ನು ಈತನು ಬಿಡುವುದೇ ಅಪರೂಪ. "ಫುಲ ಆಲಿ ಪಮ್ಹಲ ಪ್ಪವೋಅ" (೧-೪) ಇಂಥಾ ಪ್ರಯೋಗಗಳಿಗೆ ಮಿತಿಯಿಲ್ಲ. ಇಷ್ಟೇಕೆ? 'ದಿಕ್ಷು' ಎಂಬ ಸಂಸ್ಕೃತ ವಿಭಕ್ತ್ಯಂತ ರೂಪವನ್ನು 'ದಿಕ್ಖು' ಎಂದು ಪ್ರಾಕೃತೀಕರಣವನ್ನು ಮಾಡಿದ ಕವಿಗೆ (೪-೪೧) 'ಪ್ರಾಕೃತವೆಂದರೆ ಸಂಸ್ಕೃತಭಾಷೆಯ ಅಕ್ಷರಗಳನ್ನು ಬದಲಾಯಿಸುವುದೇ ಹೊರತು ಬೇರೆ ಅಲ್ಲ' ಎಂದೇ ಭಾವನೆಯಿರುವುದೆಂದು ನಾವು ಊಹಿಸುವುದು ತಪ್ಪಾಗಲಾರದು. 'ಬಹುಳಮ್' ಎಂಬ ಸೂತ್ರವು 'ಪ್ರಾಕೃತ ಶಾಸ್ತ್ರರಹಸ್ಯ'ವೆಂದು ಲಕ್ಷ್ಮೀಧರ ಭಟ್ಟಾಚಾರ್ಯನು 'ಷಡ್ಭಾಷಾಚಂದ್ರಿಕೆ'ಯಲ್ಲಿ ಹೇಳಿದ್ದಾನೆ. ಈ ಕವಿ ಅದನ್ನೂ ಪೂರ್ತಿಯಾಗಿ ಉಪಯೋಗಿಸಿಕೊಂಡಿದ್ದಾನೆ! ಸಂಪಾದಕರೂ ಕೂಡ ಈ ವಿಷಯವನ್ನು ಚೆನ್ನಾಗಿ ಅರಿತಿದ್ದು ಅಲ್ಲಲ್ಲಿ ತೋರಿಸಿದ್ದಾರೆ. ಇನ್ನು ಅರ್ಥ ಭಾವಗಳು ಆ ಕಾಲದ ಸಂಸ್ಕೃತ ಕಾವ್ಯಗಳಲ್ಲಿ ಸಾಮಾನ್ಯವಾಗಿ ಸಿಗುವಂಥವೇ ಹೊರತು ವಿಶೇಷವೇನೂ ಕಾಣುವದಿಲ್ಲ. ಈ ಕವಿಯ ಸಂಸ್ಕೃತಕವಿತೆ ಹೇಗಿರುವುದೊ ನಮಗೆ ತಿಳಿಯುವ ಅವಕಾಶವೊದಗಿಲ್ಲ. ಈ ಗ್ರಂಥವನ್ನು ಮಾತ್ರ ನೋಡಿ ಹೇಳುವುದಾದರೆ, ತೊಡಕಿಲ್ಲದ ಧಾರಾಳವಾದ ಶಯ್ಯೆ, ಶಬ್ದಮಾಧುರ್ಯ, ಕ್ಲೇಶವಿಲ್ಲದ ಸಾಧಾರಣ ಕಲ್ಪನೆಗಳು—ಇವು ಈತನ ಕಾವ್ಯದ ಸುಗುಣಗಳೆಂದು ಹೇಳಬಹುದು.

ಕಾವ್ಯವಸ್ತುವು ಭಾಗವತ ದಶಮಸ್ಕಂಧದಲ್ಲಿರುವ ಕೃಷ್ಣಚರಿತೆ. ಅದರಲ್ಲಿಯೂ ಅಕ್ರೂರನು ರಾಮಕೃಷ್ಣರನ್ನು ಕಂಸನ ಆಜ್ಞೆಯಿಂದ ಕರೆದುಕೊಂಡು ಹೋಗಲು ಬರುವ ಸನ್ನಿವೇಶದಿಂದ ಮೊದಲಾಗಿ ಕಂಸವಧದೊಡನೆ ಮುಗಿಯುವುದು. ಶೈಲಿಯ ಮಾದರಿಗಾಗಿ ಎರಡು ಪದ್ಯಗಳನ್ನು ಇಲ್ಲಿ ಕೊಡುತ್ತೇವೆ:—

(ಪ್ರಾ) ಫಲಿಹೋವಲ ಕುಟ್ಟಿಮಪ್ಪಪಸೊ ಹರಿಣೀಲಾಲಅ ರಸ್ಸಿಮಿಸ್ಸಿದೋ ಅಮ್
ಇಹಸಂಪಇ ಸಂಭರಾವಯೇ ಣೊ ಜಉಣುಗ್ಗಣ್ಹಿಅ ಜಣ್ಹವೀಪವಾಹಮ್,

(ಭಾ) ಸ್ಫಟಿಕೋಪಲ ಕುಟ್ಟಿಮಪ್ರದೇಶೋ ಹರಿನೀಲಾಲಯರಶ್ಮಿ ಮಿಶ್ರಿತೋಽಯಮ್
ಇಹ ಸಂಪ್ರತಿ ಸಂಸ್ಮಾರಯತಿ ನಃ ಯಮುನೋದ್ಗೃಹೀತ ಜಾಹ್ನವೀ ಪ್ರವಾಹಮ್. (೨. ೪೩)

(ಪ್ರಾ) ಗಲುಲಾಹಿ ಸೇ ಗಲಿಅಗವ್ವಸಾಲಿಣೋ ಅಭಅಂ ಪುಣೋ ದಿಸಇ ಏಸ ಭೋಇಣೋ
ರುಸಿಅ ವಿಸಂ ಜಇವಿ ಸಾಹುಣೋ ಜಣಾ ಅಮಅಂ ಖು ದೇ ತಹವಿ ಣಾಮ ತೋಸಿಅ.

(ಛಾ) ಗರುಡಾದಸ್ಮೈ ಗಳಿತಗರ್ವಶಾಲಿನೇ ಅಭಯಂ ಪುನರದಿಶದೇಷ ಭೋಗಿನೇ
ರುಷ್ಟ್ವಾ ವಿಷಂ ಯದ್ಯಪಿ ಸಾಧವೋ ಜನಾ ಅಮೃತಂ ಖಲು ತೇ ತಥಾಪಿ
ನಾಮ ತುಷ್ಟಾಃ (೪- ೨೮)

ಸಂಪಾದಕರು ಈ ಗ್ರಂಥವನ್ನು ಬಹಳ ಶ್ರದ್ಧೆಯಿಂದ, ಪ್ರಾಮಾಣಿಕತೆಯಿಂದ, ಓದುವವರಿಗೆ ಬೇಕಾಗುವ ಎಲ್ಲಾ ಅನುಕೂಲಗಳನ್ನೂ ಕಲ್ಪಿಸಿಕೊಡಬೇಕೆಂಬ ಶ್ಲಾಘ್ಯವಾದ ಉತ್ಸಾಹದಿಂದ, ಪ್ರಯಾಸವನ್ನು ಗಣಿಸದೆ, ಪರಿಶೋಧಿಸಿ ಪ್ರಕಟಿಸಿದ್ದಾರೆಂದು ಮತ್ತೊಮ್ಮೆ ಸಂತೋಷದಿಂದ ಕೃತಜ್ಞರಾಗಿ ತಿಳಿಸುತ್ತೇವೆ. ಆದರೆ ಮೂಲವನ್ನು ಅರ್ಥಮಾಡಿಕೊಳ್ಳುವದರಲ್ಲಿ ಕೆಲವೆಡೆ ದಾರಿತಪ್ಪಿದ್ದಾರೆಂದು ಇಲ್ಲಿ ಸೂಚಿಸಬೇಕಾಗಿದೆ.—

(೧) (೧-೧೧) ಈ ಪದ್ಯವನ್ನು ಅಕ್ರೂರನ ವಾಕ್ಯವಾಗಿ ಇಂಗ್ಲೀಷು ಭಾಷಾಂತರದಲ್ಲಿ ಸೂಚಿಸಿದ್ದಾರೆ. ಅದಕ್ಕೆ ಸರಿಯಾಗುವಂತೆ ೧೨ನೇ ಪದ್ಯವೂ ಅಕ್ರೂರನ ವಾಕ್ಯವೇ ಆಗಬಹುದೆಂದು ಭಾವಿಸಿದ್ದಾರೆ. (ಪು. ೧೩೪) ಅದು ಸರಿಯಾಗಿ ಕಾಣುವುದಿಲ್ಲ. ೧೦, ೧೧, ೧೨, ೧೩ ಪದ್ಯಗಳೂ, ೧೪ ರಲ್ಲಿ ಪೂರ್ವಾರ್ಧವೂ ಕೃಷ್ಣನ ವಾಕ್ಯವೇ.

(೨) (೧-೩೩) 'ಪಟ್ಠಿಮ್ಮಿ' 'ಪೃಷ್ಠೇ' ಎಂದರೆ 'Side' ಎಂದು ಭಾಷಾಂತರ. (ಪು. ೧೩೭) ಪೃಷ್ಠಶಬ್ದಕ್ಕೆ ಸಂಸ್ಕೃತದಲ್ಲಿ ಹಿಂದೆ ಎಂದರ್ಥ. ಪ್ರಾಕೃತದಲ್ಲಿ 'ಮುಂದೆ' ಎಂಬರ್ಥವೂ ಉಂಟೆಂಬುದಕ್ಕೆ ಕನ್ನಡದ ಹೊಟ್ಟೆ, ತೆಲುಗಿನ 'ಪೊಟ್ಟ' ಶಬ್ದಗಳು ಸಾಕ್ಷಿಯಾಗಿವೆ. 'ಮಗ್ಗಲು' ಎಂಬರ್ಥ ಕಾಣಿಸಲಿಲ್ಲ. ಸಾರಥಿಯು ಕೂತುಕೊಳ್ಳುವ 'ಪೃಷ್ಠ' ರಥಿಕನ ಹಿಂದಾಗಬಹುದು, ಮುಂದಾದರೂ ಆಗಬಹುದು. ಮಗ್ಗಲು ಆಗುವುದಿಲ್ಲ.

(೩) (೧-೪೬) 'ಸುಆಣುವಜ್ಜಂತ ಸುಊಢಜಂಪಿಅ ತಡಂತವಾಣೀರಲದಾ' 'ಶುಕಾನೂದ್ಯಮಾನ ಸುಗೂಢಜಲ್ಪಿತಾ ತಟಾನ್ತವಾನೀರಲತಾ' ಎನ್ನುವುದಕ್ಕೆ 'Cane-creeper . . . in which are concealed the echoed notes of parrots' (ಪು. ೧೩೮) ಎಂದು ಭಾಷಾಂತರಮಾಡುವುದು ಅಸಾಂಪ್ರದಾಯಕ. ದಂಪತಿಗಳ ರಹಸ್ಯಾಲಾಪಗಳನ್ನು ಕೇಳಿದ ಗಿಣಿಗಳು ಆ ಮಾತುಗಳನ್ನೇ ಅನುವಾದ ಮಾಡುತ್ತಿವೆ ಯೆಂದರ್ಥವೇ ಹೊರತು, ಅವುಗಳ ಮಾತುಗಳು ಆ ಲತಾಮಂಟಪದಲ್ಲಿ ಅಡಗಿಕೊಂಡಿವೆಯೆಂದಲ್ಲ.

(೪) (೧-೫೭) 'ಕಹಂ ಖು ಸೊ ಕಂಪಇ' 'ಕಥಂ ಖಲು ಸ ಕಮ್ಪತೇ.' ಇದಕ್ಕೆ 'How can he waver [in his votion]?' ಎಂದು ತರ್ಜುಮೆ ಮಾಡು

ವುದಕ್ಕಿಂತ 'How he is trembling!' ಎಂದು ಮಾಡಿದ್ದರೆ ಪೂರ್ವೋತ್ತರ ಸಂದರ್ಭಗಳಿಗೆ ಸರಿಯಾಗಿರುತ್ತಿತ್ತು.

(೫) (೨-೨೪) ಕುಬ್ಜೆ ಕೃಷ್ಣನಿಗೆ ಹೇಳಿದ ಮಾತು (ಛಾಯೆಯನ್ನು ಮಾತ್ರ ಉದಾಹರಿಸುತ್ತೇವೆ).

'ಹರಿನೀಲಸ್ನಿಗ್ಧಮುಗ್ಧಶೋಭೇ ತವ ಸಂಕ್ರಾನ್ತಮುರಸಿ ರಮ್ಯರೂಪಮ್
ಕೃಷ್ಣಾಚಲಧಾತುರಾಗಕಲ್ಪಂ ಸ್ತನಕುಮ್ಭಾಭ್ಯಾಂ ಮಾರ್ಜ್ಮಿ ಕುಙ್ಕುಮಮೇನತ್'

(Tran.)

"*Your* delightful *image* is *reflected* in *my* heart which (consequently) possesses a glossy and lovely grace of *yellowish blue*; with my jarlike breasts (would fain) wipe off the saffron that resembles the glow of minerals on the *Krishna* mountain" (ಪು. ೧೪೩).

ಇದು ಸರಿಯಲ್ಲ. "ಇಂದ್ರನೀಲಮಣಿಯ ಹಾಗೆ ನುಣ್ಪಾದ ಮನೋಹರ ಕಾಂತಿಯುಳ್ಳ ನಿನ್ನ ಎದೆಯಲ್ಲಿ, ಕಪ್ಪಾದ ಬೆಟ್ಟದ ಮೇಲಿರುವ ಗೈರಿಕ ಧಾತುವಿನ ಕೆಂಬಣ್ಣದಂತೆ, ರಮ್ಯವಾಗಿರುವ ಕುಂಕುಮವನ್ನು ನನ್ನ ಸ್ತನಗಳಿಂದ ನಾನು ತೊಡೆದುಹಾಕುತ್ತೇನೆ" ಎಂಬುದೀ ಪದ್ಯದ ನಿಜವಾದ ಭಾವ.

(೬) (೨-೩೯) 'ಸಮುವಟ್ಠಿಅ ಭೋಅರಾಅಹಾಣಿಂ ಸರಸಂ ತಂ ಪುಲಿ ಊಣ ರಾಅಹಾಣಿಂ!' ಇದರ ಸಂಸ್ಕೃತಚ್ಛಾಯೆ ಸಂಪಾದಕರಿಗೆ ಹೀಗೆ ಲಭಿಸಿದೆ.—

'ಸಮುಪಸ್ಥಿತ ಭೋಜರಾಜಧಾನೀಂ ಸರಸಂ ತಾಂ ಪ್ರಲೋಕ್ಯ ರಾಜಧಾನೀಮ್' ಸಂಪಾದಕರಿಗೆ ಇದು ಅರ್ಥವಾಗದೆ—ಯಾರಿಗೂ ಆಗುವುದಿಲ್ಲ—'ಸಮುವಟ್ಠಿಅ' ಎನ್ನುವುದು 'ಸಮುಪಸ್ಥಾಯ' ಎಂಬ ಸಂಸ್ಕೃತಕ್ಕೆ ಪ್ರಾಕೃತ ರೂಪವಿರಬಹುದೆಂದೂಹಿಸಿ (Notes, ೧೮೫ನೇ ಪು.) ಮೊದಲನೆಯ 'ರಾಜಧಾನಿ'ಗೆ ನಗರವೆಂತಲೂ ಎರಡನೆಯದಕ್ಕೆ ಅರಮನೆಯೆಂತಲೂ ಅರ್ಥಕಲ್ಪನೆಮಾಡಿ "*Coming* to the Capital of the Bhoja King and looking with gratification at the *royal residence*. . . ." ಎಂದು ಪರಿವರ್ತನೆಮಾಡಿದರು! (ಪು. ೧೪೫). ಛಾಯೆ ಬರೆದವರು ತಪ್ಪುಮಾಡಿರಬಹುದೆಂಬ ಸಂದೇಹ ಅವರಿಗೆ ತೋರಿದ್ದರೆ 'ಸಮುಪಸ್ಥಿತ ಭೋಜರಾಜಹಾಸಿಂ ಸರಸಂ ತಾಂ ಪ್ರವಿಲೋಕ್ಯ ರಾಜಧಾನೀಂ' ಎಂಬುದು ಕವಿಯ ಭಾವವಿರಬಹುದೆಂದು ಹೊಳೆಯುತ್ತಿತ್ತು. ಇಷ್ಟು ತೊಂದರೆಪಡಬೇಕಾಗಿರಲಿಲ್ಲ.

ಹೀಗೆಯೇ ೪-೧೪, ೨-೫೫, ೩-೩, ೪-೩೦, ೪-೪೦, ೪-೪೭ ಪದ್ಯಗಳಲ್ಲಿ ಸಂಪಾದಕರ ಭಾಷಾಂತರವು ಅತೃಪ್ತಿಕರವಾಗಿದೆ.

(೭) ಕೆಲವು ಪ್ರಸಿದ್ಧ ಪದಗಳಿಗೆ ಇಂಗ್ಲೀಷು ಪ್ರತಿಪದಗಳನ್ನು ಕೊಡುವಾಗಲೂ ಸಂಪಾದಕರು ದಾರಿ ತಪ್ಪಿದ್ದಾರೆ. 'ಕದಾಪಿ' (೪-೩೨) ಎನ್ನುವುದಕ್ಕೆ 'Once upon a time' ಎಂದಲ್ಲದೆ 'Whenever' ಎಂದಿದ್ದಾರೆ. 'ಸ್ಫುಟಂ' ಎನ್ನುವುದಕ್ಕೆ 'Clearly' ಎಂದಲ್ಲದೆ 'Apparently' ಎಂದು ಬರೆದಿದ್ದಾರೆ. 'ಮಸಾರ' (೩-೨೬) ಎನ್ನುವುದಕ್ಕೆ 'Emerald' ಎಂದು ತರ್ಜುಮೆ. ಎಮರಲ್ಡ್ ಎಂದರೆ ಪಚ್ಚೆ. 'ಮಸಾರ'ವೆಂದರೆ ನೀಲಮಣಿ. 'ನೀಲೋಮಣಿರ್ಮಸಾರಃ ಸ್ಯಾತ್' ಎಂದು ಹಾರಾವಳಿ. 'Sapphire' ಎನ್ನುವುದು ಸರಿಯಾದ ಪದ.

(೮) ಮೂಲದ ಪ್ರತಿಪದಾರ್ಥವನ್ನೂ ಭಾಷಾಂತರದಲ್ಲಿ ತರಬೇಕೆಂಬ ಪ್ರಯತ್ನದಿಂದ ಸಂಪಾದಕರ ಇಂಗ್ಲೀಷುಭಾಷಾಸರಣಿ ಕೆಲವು ಕಡೆ ವಿಚಿತ್ರವಾಗಿದೆ. ಒಂದೆರಡು ಪದಗಳನ್ನು ಮಾತ್ರ ಉದಾಹರಿಸುತ್ತೇವೆ.—'ಭಿನ್ನಾಂಜನ'—'Powdered Collyrium' (೪-೯೨); 'ಅಟ್ಟಹಸಿತ'—'Horselaugh' (೩-೫೯); 'ದಿಗ್ಗಜಗಳು'—'Quarter Elephants' (೩-೫೮) ಇತ್ಯಾದಿ.

ಅ. ಕೃ. ಶ.

---

**"Mystic Teachings of the Haridasas of Karnataka"** (Govt. of Bombay Kannada Research Grant Publication) by A. P. KARAMARKAR, M.A., LL.B., and N. B. Kalamadani; Publishers—Karnataka Vidyavardhaka Sangha, Dharwar; Demi Octavo, xlvii+129; Price, Ordinary Edition, Re. 1-8-0 and Library Edition, Rs. 2.

ಮ|| ರಾ|| ಕರಮರಕರ್ ಮತ್ತು ಮ|| ರಾ|| ಕಲಮದಾನಿಯವರು ಕರ್ಣಾಟಕ ಹರಿದಾಸರ ಆಧ್ಯಾತ್ಮಿಕ ತತ್ವಗಳನ್ನು ಇಂಗ್ಲೀಷು ಭಾಷೆಯಲ್ಲಿ ಪ್ರತಿಪಾದಿಸಲು ಪ್ರಯತ್ನಪಟ್ಟಿದ್ದಾರೆ. ಪುಸ್ತಕದಲ್ಲಿ ಬರುವ ವಿಷಯಗಳನ್ನು ಆರು ಭಾಗಗಳಾಗಿ ವಿಂಗಡಿಸಿಕೊಂಡು ಮೊದಲ ಭಾಗದಲ್ಲಿ ಭಕ್ತಿಮಾರ್ಗದ ಹುಟ್ಟು ಬೆಳವಣಿಗೆಗಳನ್ನು ಚರ್ಚಿಸಿ, ಎರಡನೆಯ ಭಾಗದಲ್ಲಿ ದಾಸಪಂಥದವರ ಮುಖ್ಯೋದ್ದೇಶವೇನೆಂದು ಹೇಳಿ, ಮೂರು ಮತ್ತು ನಾಲ್ಕನೆಯ ಭಾಗಗಳಲ್ಲಿ ದಾಸಕೂಟದವರು ಪ್ರಪಂಚದ ಸಂಸ್ಕೃತಿಗೆ ಮಾಡಿರುವ ಸಹಾಯವನ್ನೂ ಹೀಗೆ ಸಹಾಯಮಾಡಿದ ದಾಸರ ಪೀಳಿಗೆಯನ್ನೂ ಹೇಳಿ, ಐದನೆಯ ಭಾಗದಲ್ಲಿ ದಾಸಪಂಥದಲ್ಲಿ ಮುಖ್ಯರಾದ ಕೆಲವರ ವಿಷಯವನ್ನೂ ಅವರ ಕೃತಿಗಳಲ್ಲಿ ಮುಖ್ಯವಾದ ಕೆಲವನ್ನೂ ಆರಿಸಿ ಬರೆದು ಅವರ ಪರಿಚಯಮಾಡಿಕೊಟ್ಟು, ಕೊನೆಯದರಲ್ಲಿ ಉಪಸಂಹಾರವಾಗಿ ನಾಲ್ಕು ಮಾತನ್ನು ಹೇಳಿದ್ದಾರೆ. ದಾಸರ ಪವಾಡಗಳು ಕಟ್ಟುಕಥೆಗಳು ಇವುಗಳ ಗೋಜಿಗೆ ಹೋಗದೆ—

ಗ್ರಂಥವನ್ನು ಪುರಾಣವನ್ನಾಗಿ ಮಾಡದೆ—ಎಷ್ಟು ಬೇಕೋ ಅಷ್ಟೇ ವಿಷಯಗಳನ್ನು ಆರಿಸಿಕೊಂಡು ಬರೆದಿರುವ ಇವರ ಕ್ರಮವು ಮೆಚ್ಚತಕ್ಕುದಾಗಿದೆ.

ಪ್ರಪಂಚದಲ್ಲಿ ಜನ್ಮವೆತ್ತಿದ ಮಾನವರೆಲ್ಲರೂ ಹುಟ್ಟುಸಾವುಗಳ ರಾಟಳದಿಂದ ತಪ್ಪಿಸಿಕೊಂಡು ಮುಕ್ತಿ ಪಡೆಯಲು ಯತ್ನಿಸುತ್ತಾರೆ. ಇದಕ್ಕೆ ಅವರು ಅನುಸರಿಸುವ ಮಾರ್ಗ ಬೇರೆ ಬೇರೆ; ಅಷ್ಟೆ. ಕೆಲವರು ಕರ್ಮಮಾರ್ಗದಲ್ಲಿಯೂ, ಕೆಲವರು ಜ್ಞಾನ ಮಾರ್ಗದಲ್ಲಿಯೂ ನಡೆದು ಕೊನೆಗೆ ಮುಕ್ತಿಯನ್ನು ಸಾಧಿಸುತ್ತಾರೆ. ಆದರೆ ಈ ಎರಡು ಮಾರ್ಗಗಳಲ್ಲಿಯೇ ಎಲ್ಲರೂ ಹೋಗಲು ಸಾಧ್ಯವಿಲ್ಲ. ಶಕ್ತಿ ಇದ್ದ ಕೆಲವರಿಗೆ ಮಟ್ಟಿಗೆ ಇಲ್ಲಿ ಹೋಗಲು ರಹದಾರಿ ಇದೆ. ಹಾಗಾದರೆ ಇತರರು ಏನು ಮಾಡ ಬೇಕು? ಇವೆರಡಕ್ಕಿಂತ ಸುಲಭವಾದ ಬೇರೊಂದು ಮಾರ್ಗವನ್ನು ಹುಡುಕ ಬೇಕು. ಜನಸಾಮಾನ್ಯರಿಗೆ ತಮ್ಮ ತಮ್ಮ ಉದ್ಧಾರಮಾಡಿಕೊಳ್ಳಲು ಭಕ್ತಿಯಲ್ಲದೆ ಬೇರೆ ಮಾರ್ಗವಿಲ್ಲ.

"ಸಾಧ್ಯವಿದ್ದ ಯಾವ ಕರ್ಮವೂ ಜೀವನ ಕಷ್ಟವನ್ನು ಪರಿಹರಿಸದಾಗಲು, ಗೊತ್ತಿದ್ದ ಯಾವ ಜ್ಞಾನವೂ ದಿನದ ಸುಖದುಃಖಗಳನ್ನು ಕಳೆಯದಾಗಲು, ದುರ್ಬ ಲರು, ಅಲ್ಪಜ್ಞರು, ಜಗತ್ತನ್ನು ನಡೆಸುತ್ತಿರುವ ಮಹಾಶಕ್ತಿಗೆ ಮರೆಹೊಗುವರು— ಅವನೇ ಈಶ್ವರ." ಒಬ್ಬನಿಗೆ ಸಂಸಾರದಲ್ಲಿ ಅತಿಯಾಗಿ ತೊಂದರೆಯಾದಾಗ ಅವನು ದೇವರನ್ನು ನೆನೆಯಬಹುದು. ಕ್ಷೋಭೆಗೊಂಡ ಮನಸ್ಸು ಸ್ವಲ್ಪ ಸಮಾಧಾನಗೊಳ್ಳ ಬಹುದು. ಆಗ ಅವನು ಈಶ್ವರನ ಕೃಪೆ ತನಗುಂಟಾಯಿತೆಂದು ತಿಳಿದು ಪುನಃ ಪುನಃ ಅವನನ್ನು ನೆನೆಯಲು ತೊಡಗಬಹುದು. ಅತ್ತಿತ್ತ ಎಳೆದಾಡುವ ಮನಸ್ಸನ್ನು ಸೆಳೆದು ಒಂದು ಕಡೆ ನಿಲ್ಲುವಂತೆ ಯತ್ನಿಸುವ ಕಾರ್ಯಕ್ಕೆ ಅವನ ಮನಸ್ಸು ಪರಿಶುದ್ಧವಾಗ ಬೇಕು. ಎಷ್ಟೇ ಕಷ್ಟಗಳು ಬರಲಿ, ಎಷ್ಟೇ ತೊಂದರೆಯಾಗಲಿ ಯಾವುದಕ್ಕೂ ಜಗ್ಗದೆ ನಿಲ್ಲಬೇಕು. ಎಲ್ಲವೂ ಪರಮಾತ್ಮನ ಕೃಪೆಯಿಂದಾಗತಕ್ಕದ್ದು; ತನ್ನ ವಸ್ತು ಒಂದೂ ಇಲ್ಲ; ಎಲ್ಲ ಅವನದೆ; ತಾನು ಅವನ ಅಧೀನ ಎಂಬ ಭಾವನೆ ಬರಬೇಕು. ತನ್ನನ್ನೂ ತನ್ನ ಸರ್ವಸ್ವವನ್ನೂ ದೇವರಿಗಾಗಿ ಅರ್ಪಿಸಿಬಿಡಬೇಕು. ಹೀಗೆ ಅರ್ಪಿಸಿ ಕ್ಷಣಕ್ಷಣ ಕಾಲವನ್ನು ಕಳೆಯುವವನೇ ಶರಣ, ದಾಸ, ಭಕ್ತ. "ಈ ಮಾರ್ಗದಲ್ಲಿ ಪೌರುಷದ ಮಸೆದಾಟವಾಗಲಿ, ತರ್ಕದ ಎಳೆದಾಟವಾಗಲಿ ಇಲ್ಲ. ಹೃದಯದಲ್ಲಿಯೇ ಬೇರು ಬಿಡುವ ಈಶ್ವರಭಾವನೆಯು ಭಕ್ತರ ಜ್ಞಾನದಲ್ಲಿ ಹೂವಾಗಿ, ಅವರ ಕರ್ಮದಲ್ಲಿ ಹಣ್ಣಾಗಿ ಬರುವುದು."

ಈ ಭಕ್ತಿಮಾರ್ಗ ಈಚೆಗೆ ಹುಟ್ಟಿದ್ದಲ್ಲ. ಬಹು ಹಿಂದಿನಿಂದ ಬಂದದ್ದು. ವೇದ, ಉಪನಿಷತ್ತುಗಳಲ್ಲೂ ಈ ಭಕ್ತಿಯ ಹೆಸರು—ಈಗಿನ ಅರ್ಥವ್ಯಾಪ್ತಿ ಆಗ ಇಲ್ಲ

ದಿದ್ದರೂ—ಬರುತ್ತದೆ. ಆ ಕಾಲದಲ್ಲಿ ಅನೇಕ ದೇವರುಗಳ ಪೂಜಾ ಪದ್ಧತಿ ಇದ್ದುದರಿಂದ ಏಕದೈವತ್ವವನ್ನು ನಂಬುವುದು ಸಾಧ್ಯವಾಗಿರಲಿಲ್ಲ. ಭಕ್ತಿಮಾರ್ಗದ ಸರಿಯಾದ ಒಂದು ನಡೆಯನ್ನು ನಾವು ಮೊಟ್ಟಮೊದಲು ಕಾಣುವುದು ಭಗವದ್ಗೀತೆಯಲ್ಲಿ. ಅಲ್ಲಿಂದ ಮುಂದೆ ಭಕ್ತಿ ಬೆಳೆದು ಬಂತು. ಪುರಂದರ ಕನಕದಾಸರ ಕಾಲಕ್ಕೆ ಅದು ಅತ್ಯಂತ ಮೇಲ್ಮಟ್ಟಕ್ಕೆ ಏರಿತು.

ಭಕ್ತಿಮಾರ್ಗದಲ್ಲಿ ಮುಖ್ಯವಾಗಿ ಎರಡು ಅಂಶಗಳನ್ನು ನಾವು ಗಮನದಲ್ಲಿಡಬೇಕು. ದೇವರು ಒಬ್ಬನೇ, ಅವನು ಸಗುಣ, ಸಾಕಾರ; ಅವನಲ್ಲಿ ಎಲ್ಲ ಗುಣಗಳೂ—ಜಗನ್ನಿಯಾಮಕತ್ವ, ಸರ್ವಶಕ್ತಿಮಯತ್ವ, ಸರ್ವಕಲ್ಯಾಣಗುಣತ್ವ, ಆಪದ್ಬಾಂಧವತ್ವ, ಅನಾಥರಕ್ಷಕತ್ವ—ಇವೆ ಎಂದು ನಂಬಬೇಕು. ಭಕ್ತನಾದವನು ತಾನು ದೇವರ ಅಧೀನ, ಅವನನ್ನು ನಂಬದೆ ತನಗೆ ಮುಕ್ತಿ ಇಲ್ಲ, ಅದನ್ನು ಪಡೆಯಲು ಭಕ್ತಿಯೇ—ನಿಷ್ಕಾಮಭಕ್ತಿ—ಮುಖ್ಯಮಾರ್ಗ ಎಂದು ತಿಳಿದು ತನ್ನ ಸರ್ವಸ್ವವನ್ನೂ ಪರಮಾತ್ಮನಿಗೆ ಅರ್ಪಿಸಿಬಿಡಬೇಕು.

ಭಕ್ತಿಮಾರ್ಗಕ್ಕೂ ಕರ್ಣಾಟಕಕ್ಕೂ ಅಪೂರ್ವ ಸಂಬಂಧವಿದೆ. ಇಂಡಿಯದೊಳಗಿನ ಎಲ್ಲ ಭಕ್ತಿಪಂಥಗಳೂ ಒಂದಿಲ್ಲೊಂದು ರೀತಿಯಿಂದ ಕರ್ಣಾಟಕ ಭಕ್ತಿಪಂಥಕ್ಕೆ ಸಂಬಂಧಿಸಿವೆ. ಬಂಗಾಳದ ಚೈತನ್ಯಭಕ್ತಪಂಥವು ಮಧ್ವಾಚಾರ್ಯರ ಭಕ್ತಿಪಂಥದ ಪೀಳಿಗೆಯು ಮರಿ. ರಾಮಾನುಜಾಚಾರ್ಯರ ಶಿಷ್ಯರಲ್ಲೊಬ್ಬನಾದ ರಮಾನಂದನು ಉತ್ತರಭಾರತದಲ್ಲಿ 'ರಮಾನಂದೀಯಮತ'ವನ್ನು ಹರಡಿದನು. ಇವನ ಮತದಿಂದ ಮುಂದೆ ತುಳಸೀದಾಸ ಮೊದಲಾದವರ ಭಕ್ತಿಪಂಥಗಳು ಜನ್ಮವೆತ್ತಿದುವು. ಮಹಾರಾಷ್ಟ್ರದವರು ಪೂಜಿಸುವ ವಿಠ್ಠಲನು ಕನ್ನಡನೆಂದು ಅವರೇ ಒಪ್ಪುತ್ತಾರಂತೆ.

ದೇವರ ಮಹಿಮೆಯನ್ನು ತಾವು ಕಂಡು ಆನಂದಿಸಿ ನಲಿದು ಅದನ್ನು ಇತರರಿಗೆ ಹೇಳಲು ಊರಿಂದೂರಿಗೆ ಭಕ್ತರಾದವರು ಸುತ್ತಾಡಲಾರಂಭಿಸಿದರು. ಇವರೇ ಹರಿದಾಸರು. ಹೋದೆಡೆಯಲ್ಲೆಲ್ಲಾ ಸಂಸಾರ ಅನಿತ್ಯವೆಂದೂ, ಇಂದ್ರಿಯಗಳು ಅಷ್ಟಮದಗಳಿಗೂ ಅರಿಷಡ್ವರ್ಗಗಳಿಗೂ ಒಳಗಾಗದಂತೆ ನೋಡಿಕೊಳ್ಳಬೇಕೆಂದೂ, ಯಾವಾಗಲೂ ಪರಮಾತ್ಮನನ್ನು ಧ್ಯಾನಮಾಡಬೇಕೆಂದೂ ಹೇಳುತ್ತಾ ಹೋದರು. ತಾವು ಸತ್ಯವನ್ನರಿತ ರೀತಿಯನ್ನೂ ಪರಮಾತ್ಮನ ಕರುಣೆ ಪಡೆದ ವಿಧವನ್ನೂ ಹಾಡಿನ ರೂಪದಲ್ಲಿ ಹೇಳಿದರು. ಇವೇ 'ದಾಸರ ಪದ'ಗಳು. ದಾಸರ ಪದಗಳಲ್ಲಿ ಮುಖ್ಯವಾಗಿ ಕಂಡುಬರುವುದು ದಾಸ್ಯಭಾವ—ದೇವರು ಒಡೆಯ, ತಾವು ಅವನ ಆಳುಗಳು. ಆದರೆ ಇದೇ ದಾಸ್ಯಭಾವ ಕೊನೆಯವರೆಗೂ ಇರಬೇಕೆಂಬ ನಿಯಮವೇನೂ ಇಲ್ಲ. ಹೊಸದಾಗಿ ಗುರುತಾದ ಒಬ್ಬನು ಕೊನೆಯವರೆಗೂ ಹೊಸಬನಾಗಿಯೇ ಉಳಿಯ

ಲಾರ. ಅವನು ಸ್ನೇಹಿತನಾಗಿ ಸ್ನೇಹ ಬೆಳೆದಂತೆಲ್ಲ ಆಪ್ತನಾಗಿ ಕೊನೆಗೆ ತನ್ನ ಸಂಸಾರದಲ್ಲೇ ಒಬ್ಬನಂತಾಗಿ ಪರಿಣಮಿಸಬಹುದು. ಹಾಗೆಯೇ ಭಕ್ತಿಮಾರ್ಗದಲ್ಲೂ ಮೊದಲಿದ್ದ ದಾಸ್ಯಭಾವ ಬರಬರುತ್ತಾ ಸಖ್ಯಭಾವಕ್ಕೂ ಅಲ್ಲಿಂದ ಸತಿಪತಿ ಭಾವಕ್ಕೂ ಕೊನೆಗೆ ವಾತ್ಸಲ್ಯಭಾವಕ್ಕೂ ತಿರುಗಬಹುದು. ದೈವಸಾನ್ನಿಧ್ಯ ಪಡೆಯಲು ದಾಸ್ಯಭಾವ ಮೊದಲ ಮೆಟ್ಟಲಾದರೆ ವಾತ್ಸಲ್ಯಭಾವ ಕೊನೆಯ ಮೆಟ್ಟಲು. ದಾಸರ ಪದಗಳಲ್ಲಿ ಈ ರೀತಿಯ ಭಾವನೆಗಳಿಗೆ ಸಂಬಂಧಿಸಿದ ಹಾಡುಗಳು ಕಂಡುಬರುತ್ತವೆ. ಎಂದರೆ ಅವರ ಮನಸ್ಸು ಕ್ರಮಕ್ರಮವಾಗಿ ಹೇಗೆ ಪರಿಪಕ್ವ ಸ್ಥಿತಿಗೆ ಬರುತ್ತದೆ ಎಂಬುದನ್ನು ಆ ಹಾಡುಗಳು ತೋರಿಸುತ್ತವೆ.

ಎಷ್ಟೋ ಕಡೆಗಳಲ್ಲಿ ದೇವರನ್ನು ನಂಬಿದ್ದರೂ ಹರಿದಾಸರು ತೊಂದರೆಗೀಡಾಗ ಬಹುದು. ದೇವರಲ್ಲಿನ ನಂಬಿಕೆ ಕೆಡುವ ಸ್ಥಿತಿ ಬರಬಹುದು. ಆದರೆ ಸ್ವಲ್ಪದರಲ್ಲಿಯೇ ಅವರು ಮನಸ್ಸನ್ನು ಸಮಾಧಾನಸ್ಥಿತಿಗೆ ತಂದುಕೊಂಡು

"ತನು ನಿನ್ನದು ಜೀವನ ನಿನ್ನದು
ಅನುದಿನದಲಿ ಬಹ ಸುಖದುಃಖ ನಿನ್ನದಯ್ಯ"

ಎಂದು ಸರ್ವಸ್ವವನ್ನೂ ಪರಮಾತ್ಮನಿಗೆ ಅರ್ಪಿಸಬಹುದು. ಅವನಿಂದ ತಿರುಗಿ ಅಪೇಕ್ಷೆಪಡುವುದೆಂದರೆ "ನನ್ನ ಹೃದಯಕಮಲದೊಳಿರುವ ಹರಿಯೆ" ಎಂಬುದಷ್ಟೆ. ದೇವರಲ್ಲಿದ್ದ ನಂಬಿಕೆ ಹೆಚ್ಚಾಗಿ ದಾಸರಿಗೆ ಅವನ ಹುಚ್ಚೇ ಹಿಡಿಯಬಹುದು.

"ಹುಚ್ಚು ಹಿಡಿಯಿತು ಎನಗೆ ಹುಚ್ಚು ಹಿಡಿಯಿತು
ಅಚ್ಚುತನ ನಾಮವೆಂಬ ಮೆಚ್ಚು ಮದ್ದು ತಲೆಗೆ ಏರಿ"

ಎಂದು ಕುಣಿದಾಡಲು ಆರಂಭಿಸಬಹುದು.

ದಾಸರು ಜನರ ನಡೆನುಡಿಗಳಿಗೆ ಪ್ರಾಧಾನ್ಯಕೊಟ್ಟು ಜನರ ಸಂಸ್ಕೃತಿ ಮೇಲ್ಮಟ್ಟಕ್ಕೆ ಏರುವಂತೆ ಮಾಡಿದರು. ಜಾತಿಕುಲಗಳ ಭೇದವನ್ನೆಣಿಸದೆ ಎಲ್ಲರೂ ಸಮವೆಂಬ ಭಾವನೆಯಿಂದ ಅನೇಕ ಜನ ಕೀಳುಕುಲದವರನ್ನು ಕೈಹಿಡಿದು ಉದ್ಧಾರ ಮಾಡಿದರು. ಕನ್ನಡಕ್ಕೆ ಇವರು ಮಾಡಿದ ಸೇವೆ ಅಪಾರ. ಸಂಸ್ಕೃತದ ಪ್ರಭಾವಕ್ಕೆ ಹೆದರಿ ತಲೆಯೆತ್ತಲು ನಾಚಿ ಹಿಂದೆ ಸರಿದು ನಿಂತ ಕನ್ನಡ ಭಾಷೆಗೆ ಇವರು ಧೈರ್ಯಕೊಟ್ಟು ಕೈಹಿಡಿದು ಮುಂದೆ ಬರುವಂತೆ ಮಾಡಿದರು. ಮಧ್ವಮತದ ಮುಖ್ಯ ತತ್ವಗಳನ್ನು ಜನಸಾಮಾನ್ಯರಿಗೆ ತಿಳಿಯುವಂತೆ ತಿಳಿಗನ್ನಡದಲ್ಲಿ ಹೇಳಿದರು.

ಭಕ್ತಿಯ ಹುಟ್ಟು ಮತ್ತು ಬೆಳವಣಿಗೆ ಎಂಬ ಭಾಗದಲ್ಲಿ ಗ್ರಂಥಕರ್ತರು ಭಕ್ತಿ ಹುಟ್ಟಿದ್ದು ಏತಕ್ಕೆ ಎಂಬ ವಿಷಯವನ್ನು ಅಷ್ಟಾಗಿ ಹೇಳದೆ ವೇದಗಳ ಮತ್ತು ಉಪನಿಷತ್ತುಗಳ ಕಾಲದಲ್ಲಿ ಭಕ್ತಿಗೆ ಇದ್ದ ಸ್ಥಾನವೇನು ಎಂದು ತಿಳಿಸಿ ಅದು ಮುಂದೆ ಬೆಳೆದು

ಬಂದ ರೀತಿಯನ್ನು ವಿವರಿಸಿದ್ದಾರೆ. ಭಕ್ತಿ ಏತಕ್ಕೆ ಹುಟ್ಟುತ್ತದೆ? ಅದರ ಆವಶ್ಯಕತೆ ಏನು? ಎಂದು ಎರಡೆರಡು ಮಾತುಗಳಲ್ಲಿ ಹೇಳಿದ್ದರೂ ಚೆನ್ನಾಗಿತ್ತು. ಭಕ್ತಿಯಲ್ಲಿ ದಾಸ್ಯ, ಸಖ್ಯ, ಸತಿಪತಿ, ವಾತ್ಸಲ್ಯ ಮತ್ತು ಪಶುಪತಿ ಭಾವಗಳೆಂಬ ನಾನಾ ಮೆಟ್ಟಲುಗಳಿವೆಯೆಂಬ ಅಂಶವನ್ನು ತಿಳಿಸಬಹುದಾಗಿತ್ತು.

ಬೇರೆ ಬೇರೆ ದಾಸರ ವಿಷಯವನ್ನು ಹೇಳುವಾಗ ಇವರು ಅನುಸರಿಸಿರುವ ರೀತಿ ಸಮರ್ಪಕವಾಗಿದೆ. ಆದರೆ ಅವರ ಕೃತಿಗಳ ವಿಷಯ ಹೇಳುವಾಗ ಮುಖ್ಯವಾದ ಇನ್ನೂ ನಾಲ್ಕಾರು ಕೃತಿಗಳನ್ನು ಸೇರಿಸಿದ್ದರೆ ಹಿತವಾಗಿರುತ್ತಿತ್ತು. "ವೈಷ್ಣವ ದಾಸಭಕ್ತಿಯ ವಸಂತಕಾಲವೆಂದರೆ ಪುರಂದರದಾಸರ ಕಾಲ", ಎಂದು ಹೇಳುವುದು ವಾಡಿಕೆಯಾಗಿದೆ. ಆದುದರಿಂದ ಪುರಂದರದಾಸರಿಗಾಗಿಯೇ ಇನ್ನೂ ನಾಲ್ಕಾರು ಪುಟಗಳನ್ನು ಮೀಸಲಾಗಿಡಬಹುದಾಗಿತ್ತು.

ಗ್ರಂಥಕರ್ತರು ತಮ್ಮ ಮುನ್ನುಡಿಯಲ್ಲೇ ಹೇಳಿಕೊಂಡಿದ್ದಾರೆ, ಇಲ್ಲಿಯವರೆಗೆ ಹರಿದಾಸರಿಗೆ ಸಂಬಂಧಿಸಿದಂತೆ ಏನೇನು ಗ್ರಂಥಗಳು ಬಂದಿವೆ ಅವುಗಳನ್ನೆಲ್ಲ ನೋಡಿ, ಓದಿ, ಅವುಗಳ ಆಧಾರದ ಮೇಲೆ ಈ ಗ್ರಂಥ ಬರೆದಿದೆ ಎಂದು. ಈ ಗ್ರಂಥವನ್ನು ಸಂಪೂರ್ಣವಾಗಿ ಓದಿದ ಮೇಲೆ ಇವರ ಮಾತು ನಿಜವೆಂಬ ವಿಶ್ವಾಸ ಹುಟ್ಟುತ್ತದೆ. ಇದರಲ್ಲಿ ಬಹುಭಾಗ ಮ|| ರಾ|| ಬೇಲೂರು ಕೇಶವದಾಸರ "ಭಕ್ತಿವಿಜಯ"ದ ಸಂಗ್ರಹವಾಗಿದೆ. ಇದರ ಜೊತೆಗೆ ಹೊಸ ವಿಷಯಗಳನ್ನು ಕಂಡುಹಿಡಿದು ಇಲ್ಲಿ ಬರೆದಿದ್ದರೆ ಪುಸ್ತಕದ ಬೆಲೆ ಇನ್ನಷ್ಟು ಏರುತ್ತಿತ್ತು.

ಆದರೆ ಇವರು ಮಾಡಿರುವ ಒಂದು ಉಪಕಾರವನ್ನು ಯಾರೂ ಮರೆಯುವಂತಿಲ್ಲ. ಇಲ್ಲಿಯವರೆಗೆ ದಾಸರ ಮೇಲೆ ಹೆಚ್ಚು ಗ್ರಂಥಗಳು ಹುಟ್ಟಿಲ್ಲವೆಂದರೆ ತಪ್ಪಾಗಲಾರದು. ಬಂದಿರುವ ಕೆಲವು ಗ್ರಂಥಗಳೂ ಕನ್ನಡದಲ್ಲಿ ಬರೆದುವು. ಇವನ್ನು ಓದಿ ವಿಷಯ ಸಂಗ್ರಹಿಸಲು ಸಾಧ್ಯವಾಗಿರುವುದು ಕನ್ನಡಿಗರಿಗೆ ಮಾತ್ರ. ಬರಿಯ ಕನ್ನಡದಲ್ಲೇ ಇದ್ದ ವಿಷಯವನ್ನು ತಿಳಿಯುವವರು ಎಷ್ಟು ಜನರಿದ್ದಾರು? ಭರತಖಂಡದ, ಏಕೆ, ಪ್ರಪಂಚದ ಜನಸಂಖ್ಯೆಯೊಡನೆ ಕನ್ನಡ ತಿಳಿದವರ ಜನಸಂಖ್ಯೆಯನ್ನು ಹೋಲಿಸಿದರೆ ಇದು ಸಾಗರದೊಳಗಿನ ಒಂದು ಜಲಕಣದಂತೆ. ಇಷ್ಟೇ ಜನ ಓದಿ ತೃಪ್ತಿಪಟ್ಟರಾಯಿತೇ? ನಮ್ಮಲ್ಲಿರುವ ಮುಖ್ಯ ವಿಷಯಗಳನ್ನು ಇತರರಿಗೆ ತಿಳಿಸಲು ಯತ್ನಿಸಬೇಡವೇ? ಬೇಡವೆನ್ನುವವರು ಯಾರು? ಈ ಕಾರ್ಯವನ್ನು ಈ ಗ್ರಂಥಕರ್ತರು ಕೈಗೊಂಡಿರುವುದು ನಿಜವಾಗಿಯೂ ವಂದನಾರ್ಹವಾದುದು. ನಮ್ಮ ಹರಿದಾಸರ ವಿಷಯವನ್ನೂ, ಅವರು ಪ್ರಚಾರ ಮಾಡಿದ ತತ್ವವನ್ನೂ ಪಾಶ್ಚಾತ್ಯರನೇಕರು ಓದಿ ಅದರ ಸವಿಯನ್ನು ಸವಿಯುವಂತೆ ಮಾಡಿಕೊಟ್ಟಿದ್ದಾರೆ ಇವರು. ಕನ್ನಡದ ಕೃತಿಗಳಲ್ಲಿನ

ಸ್ವಾರಸ್ಯ, ಬಿಗಿ, ಜೋರು ಇವನ್ನು ಕೆಡಿಸದಂತೆ ಅದೇ ಭಾವಗಳನ್ನು ಅಚ್ಚುಳಿಯದಂತೆ ಇಂಗ್ಲೀಷಿನ ಭಾಷಾಂತರದಲ್ಲಿ ತಂದಿದ್ದಾರೆ ಎಂದು ಹೇಳಬಹುದು. ಕೆಲವುಕಡೆ ಸ್ವಲ್ಪ ಸಪ್ಪೆಯಾಗಿ ಕಾಣಬಹುದು. ಬೇರೆಯವರ ಉಡುಪನ್ನು ತೊಟ್ಟಾಗ ನಮ್ಮವರು ಸ್ವಲ್ಪ ವಿಚಿತ್ರವಾಗಿ ಕಾಣುವುದು ಸಹಜ.

ಮ|| ರಾ|| ಕರಮರಕರ್ ಮತ್ತು ಮ|| ರಾ|| ಕಲಮದಾನಿಯವರು ಇದೇ ರೀತಿ ಇನ್ನೂ ಅನೇಕ ಗ್ರಂಥಗಳನ್ನು ಇಂಗ್ಲೀಷಿನಲ್ಲಿ ಬರೆದು ನಮ್ಮಲ್ಲಿಯ ಸಂಪತ್ತನ್ನು ಇತರರಿಗೂ ಕಾಣುವಂತೆ ಮಾಡಿಕೊಡಲೆಂದೂ, ಅವರಿಗೆ ಆ ಕಾರ್ಯದಲ್ಲಿ ದೇವರು ಸಹಾಯಮಾಡಲೆಂದೂ ಕೋರುತ್ತೇವೆ. ಮತ್ತೇನುಮಾಡಲಿ ಮಾಡದಿರಲಿ ಈಗ ಮಾಡಿರುವ ಕಾರ್ಯವೇ ಸಾಕು ಅವರಿಗೆ ಕೀರ್ತಿಗಳಿಸಿಕೊಡುವುದಕ್ಕೆ.

ಈ ಗ್ರಂಥಕ್ಕೆ ಬೊಂಬಾಯಿಯ ಐತಿಹಾಸಿಕ ಸಂಶೋಧನ ಸಂಸ್ಥೆಯ ಮುಖ್ಯಾಧಿಕಾರಿಗಳಾದ ರೆ. ಎಚ್. ಹೀರಾಸ್ ಅವರು ಸುಮಾರು ನಲವತ್ತು ಪುಟಗಳ ಉಪೋದ್ಘಾತವನ್ನು ಬರೆದಿದ್ದಾರೆ. ಇದರಲ್ಲಿ ಅವರು ಭಾರತೀಯ ದರ್ಶನ ಮತ್ತು ಆಧ್ಯಾತ್ಮಿಕ ಜೀವನದ ಉತ್ಪತ್ತಿಯನ್ನು ಚರ್ಚಿಸಿ ಇದಕ್ಕೆ ದ್ರಾವಿಡ ಸಂಸ್ಕೃತಿಯೇ ಮೂಲವೆಂದು ಅಭಿಪ್ರಾಯಪಡುತ್ತಾರೆ. (ಹೀಗೆ 'ಆತ್ಮ', ಶಬ್ದವೇ ಸಂಸ್ಕೃತವಲ್ಲ, ದ್ರಾವಿಡ—'ಅತಮಾಣ್' ಎಂಬುದು ಅದರ ರೂಪ. 'ಕೆಳಲೋಕದ ಒಡೆಯ' ಎಂದು ಅದರ ಅರ್ಥ !) ಇದಕ್ಕೆ ಅವರು ಕೊಡುವ ಆಧಾರ ಮೊಹೆಂಜೊ ದಾರೊ ಶಾಸನಗಳು. ಮೊಹೆಂಜೊ ದಾರೊ ಶಾಸನಗಳಲ್ಲಿ ಏನಿದೆಯೋ ಇನ್ನೂ ಯಾರಿಗೂ ಗೊತ್ತಾಗಿಲ್ಲ. ರೆ. ಹೀರಾಸರವರು ಆ ಭಾಷೆಯನ್ನೂ ಅದರ ವಿಷಯವನ್ನೂ ಗೊತ್ತುಹಚ್ಚಿದ್ದೇವೆಂದು ಹೇಳಿ ಅನೇಕ ಪತ್ರಿಕೆಗಳಲ್ಲಿ ಆಗಾಗ್ಗೆ ಲೇಖನಗಳನ್ನು ಬರೆದಿದ್ದಾರೆ. ಇವುಗಳದ್ದು ಪೂರ್ವ ದ್ರಾವಿಡಭಾಷೆಯೆಂಬುದು ಅವರ ಮತ. ಮೊಹೆಂಜೊ ದಾರೋ ಸಂಸ್ಕೃತಿಯನ್ನು ವ್ಯಾಸಂಗಮಾಡಿರುವ ಯಾವ ಗಣ್ಯವಿದ್ವಾಂಸರೂ ರೆ. ಹೀರಾಸರವರ ಮತವನ್ನು ಒಪ್ಪಿದಂತೆ ನಮಗೆ ತಿಳಿದುಬಂದಿಲ್ಲ.

ಕೂಡಲಿ ಸುಬ್ಬರಾವ್.

---

**ಪರಮಾಣು (The Atom)**—ಲೇಖಕರು : ಶ್ರೀಮಾನ್ ಜಿ. ಆರ್. ರಂಗಸ್ವಾಮಿ, ಎಂ.ಎ. ; ಪ್ರಕಾಶಕರು : "ಕಾವ್ಯಾಲಯ," ಶಿವಮೊಗ್ಗ; ಕ್ರೌನ್ ಅ. ಪು. ೧೧ + ೨೧೨ ; ಬೆಲೆ, ರೂ. ೨—೪—೦.

ಸಾಮಾನ್ಯವಾಗಿ ಕನ್ನಡಿಗರಲ್ಲಿ ಅನೇಕರಿಗೆ ಕ್ರಮಬದ್ಧವಾದ ವಿಜ್ಞಾನ ಶಿಕ್ಷಣದ ವಾಸನೆಯಿಲ್ಲದಿದ್ದರೂ, ವಿಜ್ಞಾನ ವಿಷಯಗಳನ್ನು ಕೇಳಿ ಓದಿ ತಿಳಿದುಕೊಳ್ಳಬೇಕೆಂಬ

ಆಸಕ್ತಿಯೂ ಉತ್ಸಾಹವೂ ಇತ್ತೀಚೆಗೆ ತಲೆದೋರುತ್ತಿವೆ. ನವೀನ ನಾಗರಿಕತೆಗೆ ವಿಜ್ಞಾನವೇ ಅಡಿಗಲ್ಲೆಂದೂ, ಅದರ ವಿಚಾರ ಸ್ವಲ್ಪ ಮಟ್ಟಿಗಾದರೂ ತಿಳಿದಲ್ಲದೆ ನಿತ್ಯಜೀವನದಲ್ಲಿ ಸುಧಾರಣೆಗಳು ಬರಲಾರವೆಂದೂ ಮುಂದಟ್ಟಾಗಲು ಪ್ರಾರಂಭ ವಾಗಿದೆ. ಜನರಲ್ಲಿ ಈ ವಿಧವಾದ ಭಾವನೆಗಳು ಮೂಡಿದೊಡನೆಯೇ ವಿಜ್ಞಾನ ಪ್ರಸಾರದ ನೂತನ ಚಳುವಳಿಗೆ ಸರಿಯಾದ ಕಾಲವೆಂದು ಭಾಸವಾಯಿತು. ಕನ್ನಡ ನಾಡಿನಲ್ಲಿ ಮುಂದಾಳುಗಳಾಗಿ ತರುಣ ವಿಜ್ಞಾನಿಗಳನೇಕರು ಮೈಸೂರು ವಿಶ್ವವಿದ್ಯಾ ನಿಲಯದ ಆಶ್ರಯದಲ್ಲಿ ಪ್ರಚಾರೋಪನ್ಯಾಸಗಳನ್ನು ಮಾಡಿ, ಆ ಉಪನ್ಯಾಸಗಳ ಉಪಯೋಗವು ಸರ್ವತೋಮುಖವಾಗಿ ಹರಡಲು ಪುಟ್ಟ ಪುಸ್ತಕಗಳನ್ನು ಪ್ರಕಟಿಸಲು ಆರಂಭಿಸಿರುವರು. ಆದರೆ ಈ ವಿಧವಾದ ಯಾವ ಆಶ್ರಯವೂ ಇಲ್ಲದೆ ತಮ್ಮ ಸ್ವಂತ ಖರ್ಚಿನಿಂದಲೇ ವಿಜ್ಞಾನವಿಷಯಕವಾದ ಪುಸ್ತಕವನ್ನು ಕನ್ನಡದಲ್ಲಿ ಪ್ರಕಟಿಸುವ ಗ್ರಂಥಕರ್ತರು ಅತಿ ವಿರಳ. ವ್ಯಯದ ಕಡೆಗೆ ದೃಷ್ಟಿಯಿಡದೆ, ಕನ್ನಡ ಜನರಿಗೆ ವಿಜ್ಞಾನದಲ್ಲಿ ಅಭಿರುಚಿ ಹುಟ್ಟಿಸಬೇಕೆಂಬ ಅಧಿಕ ಕುತೂಹಲದಿಂದ, ಶ್ರೀಮಾನ್ ಜಿ. ಆರ್. ರಂಗಸ್ವಾಮಿಯವರು 'ಪರಮಾಣು'ವೆಂಬ ಪುಸ್ತಕವನ್ನು ಬರೆದು ಕನ್ನಡಕ್ಕೆ ಸೇವೆಯನ್ನು ಸಲ್ಲಿಸಿರುವರು. ಇದರ ಮುದ್ರಣ ಮಾರಾಟಗಳ ಆಯವ್ಯಯಗಳು ಹೇಗಾದರೂ ಇರಲಿ; ಪುಸ್ತಕವನ್ನು ಕನ್ನಡಿಗರು ಆದರದಿಂದ ಓದಿ ವಿಜ್ಞಾನದ ಮೂಲತತ್ವಗಳ ವಿಚಾರವಾಗಿ ನಡೆಸಿರುವ ಹೊಸ ಶೋಧನೆಗಳ ಕಡೆಗೆ ಗಮನಕೊಟ್ಟರೆ ಗ್ರಂಥಕರ್ತರ ಶ್ರಮವು ಸ್ವಲ್ಪ ಮಟ್ಟಿಗೆ ಸಾರ್ಥಕವಾದಂತಾಗುವುದು. ವಿಷಯಕ್ಕೆ ಸಂಬಂಧಿಸಿದ ಅನೇಕ ಆಂಗ್ಲೇಯ ಲೇಖನಗಳನ್ನು ಪರಿಶೀಲಿಸಿ, ಪಾರಿಭಾಷಿಕ ಪದಗಳ ಭಾಷಾಂತರದ ತೊಡರನ್ನು ಯಥಾಶಕ್ತಿ ಬಗೆಹರಿಸಿ, ಕನ್ನಡದಲ್ಲಿ ವಿಜ್ಞಾನ ಪ್ರಸಾರಣೆಗೆ ಅನುಕೂಲ ಕಲ್ಪಿಸಿರುತ್ತಾರೆ. ಅವರ ಶ್ರಮವೂ ಪರ್ಯಾಲೋಚನೆಯೂ ಕೃತಜ್ಞತೆಗೆ ಅರ್ಹವಾದುವು.

ಭೌತವಿಜ್ಞಾನದಲ್ಲಿ ಉದ್ದಾಮ ಪಂಡಿತರಾದ ರಾವ್ ಬಹದ್ದೂರ್ ಶ್ರೀಮಾನ್ ಬಿ. ವೆಂಕಟೇಶಾಚಾರ್ಯರು ಈ ಪುಸ್ತಕದ ಮುನ್ನುಡಿಯಲ್ಲಿ "ನಾನು ನೋಡಿದ್ದರಲ್ಲಿ ವಿಷಯಗಳು ಆಧುನಿಕ ವೈಜ್ಞಾನಿಕರ ಅಭಿಪ್ರಾಯಕ್ಕೆ ವಿರೋಧವಿಲ್ಲದಂತೆ ನಿರೂಪಿಸ ಲ್ಪಟ್ಟಿವೆ" ಎಂದು ಬರೆದಿರುವರು. ಆದಕಾರಣ ಈ ವಿಷಯದಲ್ಲಿ ಗ್ರಂಥವಿಮರ್ಶಕನ ಕೆಲಸವು ಬಹು ಸುಲಭವಾಯಿತು. ರಂಗಸ್ವಾಮಿಯವರು ವಾಚಕರಿಗೆ ಪರಮಾಣು ಶಾಸ್ತ್ರದ ಸ್ಥೂಲಪರಿಚಯವನ್ನು ಮಾಡಿಕೊಟ್ಟು, ಅನಂತರ ಗ್ರೀಕರ ಕಾಲದಿಂದ ಭೂತತತ್ವದ ಚರಿತ್ರೆಯನ್ನು ಸಂಕ್ಷೇಪವಾಗಿ ವಿವರಿಸಿರುವರು. ಸೃಷ್ಟಿಯಲ್ಲಿ ೯೨ ಭೂತ ಪರಮಾಣುಗಳು ಮಾತ್ರ ಇರುವುವೆಂದು ತೋರಿಸಿ, ಇವುಗಳ ಸಂಯೋಗದಿಂದಲೇ

ಸಂಯುಕ್ತಗಳಾಗುವುವೆಂದು ಸಾಧಿಸಿ, ಪದಾರ್ಥಗಳ ಘನ, ದ್ರವ, ಅನಿಲಸ್ಥಿತಿಗಳಿಗೆ ಕಾರಣಗಳನ್ನು ವಿಶದಪಡಿಸಿರುವರು. ಪರಮಾಣುಗಳ ಗಾತ್ರ, ತೂಕ ಮತ್ತು ಸಂಖ್ಯೆಗಳನ್ನು ಕಂಡುಹಿಡಿಯಲು ವೈಜ್ಞಾನಿಕರು ಮಾಡಿರುವ ಕೆಲವು ಪ್ರಯೋಗಗಳನ್ನು ಸುಲಭ ರೀತಿಯಲ್ಲಿ ವರ್ಣಿಸಿರುವರು. ಮೆಂಡಲೀಫನ ಸಕ್ರಮ ತತ್ವದಿಂದ ಪರಮಾಣು ಶಾಸ್ತ್ರದ ಬೆಳವಣಿಗೆಗೆ ಆದ ಸಹಾಯವನ್ನು ವಿವರಿಸಿ, ಅನಂತರ ಪೀಠಿಕಾರೂಪವಾಗಿ ವಿದ್ಯುಚ್ಛಕ್ತಿಯ ಚರಿತ್ರೆ ಮತ್ತು ಸ್ವರೂಪಗಳ ಪರಿಚಯಮಾಡಿಕೊಟ್ಟಿರುವರು. ಪರಮಾಣುಗಳ ರಚನೆಯನ್ನು ತಿಳಿಸುವ ಕೆಲವು ಪ್ರಯೋಗಗಳಿಂದ ಪರಮಾಣುಗಳೆಲ್ಲವೂ ಎಲೆಕ್ಟ್ರಾನ್ (ಋಣಾಂಶ), ಪ್ರೋಟಾನ್ (ಧನಕಣ) ಮತ್ತು ನ್ಯೂಟ್ರಾನ್ (ಶೂನ್ಯಕಣ)ಗಳಿಂದಲೇ ರಚಿತವಾಗಿರುವುವೆಂದು ಸಮರ್ಥಿಸಿರುವರು. ಪ್ಲಾಂಕ್ ಮತ್ತು ಐನ್‌ಸ್ಟೈನರ ಸಿದ್ಧಾಂತಗಳನ್ನು ಸ್ವಲ್ಪಮಟ್ಟಿಗೆ ವಿವರಿಸಲು ಯತ್ನಿಸಿ, ಪರಮಾಣುವಿನಲ್ಲಿರುವ ಮೂಲತತ್ವಗಳ ಒಳಚಲನದ ಪರಿಣಾಮವಾಗಿಯೇ ವಿವಿಧ ಶಕ್ತಿಗಳ ಉತ್ಪತ್ತಿಯಾಗುವುದೆಂದು ತೋರಿಸಿರುವರು. ಈ ಸತ್ಯಶೋಧನೆಯ ಹಾದಿಯಲ್ಲಿ ಹಿಮ್ಮೆಟ್ಟದೆ ಮುಂದುವರಿಯುವ ವೈಜ್ಞಾನಿಕನ ಸಾಹಸದಿಂದ ಸೃಷ್ಟಿಕರ್ತನ ರಹಸ್ಯಗಳನ್ನು ಬಯಲುಮಾಡುವ ಪ್ರಯತ್ನಗಳು ನಡೆದು ಲೋಕೋಪಕಾರವಾಗುವುದೆಂದು ಉಪಸಂಹಾರಮಾಡಿರುವರು. ವಿಜ್ಞಾನದ ಹೊಸ ಪ್ರಮೇಯವನ್ನೊಳಗೊಂಡ ಇಂತಹ ಗ್ರಂಥವನ್ನು ರಂಗಸ್ವಾಮಿಯವರು ಆಬಾಲವೃದ್ಧರಿಗೂ ತಿಳಿಯುವಂತೆ ಸುಲಭಶೈಲಿಯಲ್ಲಿ ಬರೆದು ಕನ್ನಡ ವಿಜ್ಞಾನದ ಅಭ್ಯುದಯಕ್ಕೂ ಪ್ರಸಾರಕ್ಕೂ ಮಾಡಿರುವ ಮಹೋಪಕಾರವು ಬಹು ಶ್ಲಾಘನೀಯವಾಗಿದೆ.

ಗ್ರಂಥವಿಮರ್ಶಕರಿಗೆ ಹುಳುಕು ಹುಡುಕುವ ಒಂದು ಹಕ್ಕು ವಾಡಿಕೆಯಾಗಿ ಬಂದಿದೆ; ಇದಕ್ಕೆ ಈ ಪುಸ್ತಕದಲ್ಲಿ ಹೆಚ್ಚು ಆಸ್ಪದವಿಲ್ಲವೆಂದು ಮೊದಲೇ ತಿಳಿಸುವುದು ನನ್ನ ಕರ್ತವ್ಯ. ಸಾಹಿತ್ಯದಲ್ಲಿ ಸಾಮಾನ್ಯವಾಗಿ ರೂಢಿಯಲ್ಲಿರುವಂತೆ ಒಂದೇ ಅರ್ಥವ್ಯಕ್ತ ನಾನಾ ಶಬ್ದಗಳನ್ನು ಬೇರೆ ಬೇರೆ ಕಡೆಗಳಲ್ಲಿ ಉಪಯೋಗಿಸುವುದನ್ನೂ, ಒಂದೇ ಶಬ್ದವನ್ನು ನಾನಾರ್ಥಗಳಲ್ಲಿ ಪ್ರಯೋಗಿಸುವುದನ್ನೂ, ಕನ್ನಡ ವಿಜ್ಞಾನ ಗ್ರಂಥಕರ್ತರು ಮಾಡಬಾರದು. ವಿಜ್ಞಾನದಲ್ಲಿ ಸಾಂಕೇತಿಕ ಶಬ್ದಗಳನ್ನು ಪುನರುಕ್ತಿಯ ದೋಷಬಂದರೂ ಬೇಸರವಿಲ್ಲದೆ ವ್ಯತ್ಯಾಸಮಾಡದೆ ಉಪಯೋಗಿಸಬೇಕು. ಹೀಗೆ ಕಲ್ಪಿಸಿದ ಶಬ್ದಗಳ ಅರ್ಥವನ್ನು ನಿಷ್ಕರ್ಷೆ ಮಾಡಿದಮೇಲೆ, ಅವನ್ನು ಬೇರೆ ಅರ್ಥಗಳಲ್ಲಿ ಸಡಿಲವಾಗಿ ಖಂಡಿತವಾಗಿಯೂ ಪ್ರಯೋಗಿಸಲಾಗದು. 'ಪರಮಾಣು'ವಿನಿಂದ ಒಂದೇ ಒಂದು ಉದಾಹರಣೆಯನ್ನು ಕೊಡುತ್ತೇನೆ. "Element" ಎಂಬ ಒಂದು ಆಂಗ್ಲೇಯಪದವನ್ನು ೧೦ನೇ ಪುಟದಲ್ಲಿ ಮೂಲಧಾತು, ಭೂತ ಎಂದೂ,

೨೩, ೨೪ನೇ ಪುಟಗಳಲ್ಲಿ ಮೂಲವಸ್ತು, ಮೂಲಪದಾರ್ಥಗಳೆಂದೂ ಭಾಷಾಂತರ ಮಾಡಿರುತ್ತಾರೆ. ಒಂದೇ ಅರ್ಥದಲ್ಲಿ ಈ ಬೇರೆ ಬೇರೆ ಶಬ್ದಗಳು ಅನಾವಶ್ಯಕ; ಇದರಿಂದುಂಟಾಗುವ ತೊಂದರೆಗೆ ಒಂದು ನಿದರ್ಶನಕೊಡುತ್ತೇನೆ. ೨೩ನೇ ಪುಟದಲ್ಲಿ (ಸಕ್ಕರೆ ಮತ್ತು ಮರಳಿನ) "ಮಿಶ್ರಣಗಳಲ್ಲಿ ಮೂಲಪದಾರ್ಥಗಳ ಲಕ್ಷಣಗಳು ಕಾಣುತ್ತವೆ," ಮತ್ತು ಮುಂದಿನ ಪುಟದಲ್ಲಿ "ಸಂಯುಕ್ತಗಳ ಗುಣಕ್ಕೂ ಅವುಗಳಲ್ಲಿ ಅಡಗಿರುವ ಮೂಲಪದಾರ್ಥಗಳ ಗುಣಕ್ಕೂ ಯಾವ ವಿಧವಾದ ಸಂಬಂಧವೂ ಇಲ್ಲ" ಎಂಬೆರಡು ವಾಕ್ಯಗಳಲ್ಲಿ "ಮೂಲಪದಾರ್ಥಗಳು" ಎಂಬ ಶಬ್ದವು ಮೊದಲಲ್ಲಿ Constituent substances ಎಂಬ ಅರ್ಥದಲ್ಲೂ, ಆ ಮೇಲೆ elements ಎಂಬ ಅರ್ಥದಲ್ಲೂ ಪ್ರಯೋಗಿಸಲ್ಪಟ್ಟು, ಅರಿಯದ ವಾಚಕರಿಗೆ ಸ್ವಲ್ಪ ತಲೆನೋವು ತರಬಹುದು. ಈ ವಿಜ್ಞಾನ ಪುಸ್ತಕದಲ್ಲಿ ಚಿತ್ರಗಳು ಕಡಿಮೆಯಾದರೂ, ಬಹು ಅಂದವಾಗಿಯೂ ಸಂದರ್ಭಕ್ಕೆ ಅನುಗುಣವಾಗಿಯೂ ಇವೆ. ಆದರೆ ೧೭೪ ನೇ ಪುಟದಲ್ಲಿರುವ ಚಿತ್ರವು ಮಾತ್ರ ಕೆಳಗೆ ಮುದ್ರಿತವಾಗಿರುವ ಒಕ್ಕಣೆಗೆ ಸರಿಯಾದುದಲ್ಲ; ಇದು ನೀರು ಅಥವಾ ಪಾದರಸದ ಮೇಲ್ಮೈಯಲ್ಲಿ ಎರಡು ವರ್ತುಲಾಕಾರದ ಅಲೆಗಳು ಒಂದಸ್ಸೊಂದು ಸಂಧಿಸಿದಾಗ ಕಾಣುವ ದೃಶ್ಯ. ಈ ಸಣ್ಣ ಪುಟ್ಟ ನ್ಯೂನತೆಗಳು ಪ್ರಥಮ ಮುದ್ರಣದ ದೋಷಗಳು. ಕನ್ನಡ ಭಾಷಾಭಿಮಾನಿಗಳು ಈ ಗ್ರಂಥಕರ್ತರ ಶ್ರಮಕ್ಕೆ ತಕ್ಕ ಉತ್ತೇಜನ ಕೊಟ್ಟರೆ, ಮುಂದಿನ ಮುದ್ರಣಗಳಲ್ಲಿ ಈ ನ್ಯೂನತೆಗಳು ಮಾಯವಾಗುವುವು. ಅಲ್ಲದೆ ಕನ್ನಡಿಗರಲ್ಲಿ ವಿಜ್ಞಾನಪ್ರಸಾರವನ್ನು ಮಾಡಿ ಕೃತಕೃತ್ಯರಾಗಬೇಕೆಂಬ ಗ್ರಂಥಕರ್ತರ ಆಕಾಂಕ್ಷೆಯೂ ಈಡೇರುವುದು.

ಈ ಬಗೆಯ ನೂತನಸಾಹಸಗಳಿಗೆ ಉತ್ತೇಜನಕೊಡುವ ಉದ್ದೇಶದಿಂದಲೂ, ಕನ್ನಡ ನಾಡಿನಲ್ಲಿ ವಿಜ್ಞಾನಪ್ರಸಾರವಾಗಿ ಸಾಂಕೇತಿಕಶಬ್ದಗಳ ಗೂಢಾರ್ಥಗಳು ಜನಸಾಮಾನ್ಯದಲ್ಲೂ ಸಾಹಿತಿಗಳಲ್ಲೂ ಹರಡುವ ಉದ್ದೇಶದಿಂದಲೂ, ಹೊಸ ಶಬ್ದಗಳ ಕಲ್ಪನೆಯಿಂದ ಕನ್ನಡ ವಿಜ್ಞಾನ ಶಬ್ದಕೋಶವು ಬೆಳೆಯಲೆಂಬ ಉದ್ದೇಶದಿಂದಲೂ, "ಪರಮಾಣು"ವಂಥಾ ವಿಜ್ಞಾನ ಪುಸ್ತಕಗಳನ್ನು "ಇಂಟರ್‌ಮೀಡಿಯೆಟ್," "ಬಿ.ಎ." ಮತ್ತು "ಬಿ.ಯಸ್ಸಿ" ತರಗತಿಗಳಲ್ಲಿ ಇತರ ಕನ್ನಡಸಾಹಿತ್ಯಪಠ್ಯ ಪುಸ್ತಕಗಳೊಂದಿಗೆ ನಿಯಮಿಸಬೇಕು. ವಿಜ್ಞಾನದ ಸುಳಿವೇ ಇಲ್ಲದ ವಿದ್ಯಾರ್ಥಿಗಳಿಗಂತು ಇದು ತೀರ ಆವಶ್ಯಕ. ಇದರಿಂದ ಬಹು ಸ್ವಲ್ಪಕಾಲದಲ್ಲಿಯೇ ಕನ್ನಡದಲ್ಲಿ ವಿಜ್ಞಾನ ವಿಷಯಕವಾದ ಗ್ರಂಥಗಳು ಬೆಳೆದು ಭಾಷಾ ಸೇವೆ ನಡೆಯುವುದರಲ್ಲಿಯೂ, ಜನರು ವಿಜ್ಞಾನಮಾರ್ಗಾವಲಂಬಿಗಳಾಗುವುದರಲ್ಲಿಯೂ ಯಾವ ಸಂಶಯವೂ ಇಲ್ಲ.

ಯಲ್. ಸೀಬಯ್ಯ.

---

**ಚೆಂಗಲವೆ** (ಕವನಸಂಗ್ರಹ)—ಶ್ರೀಮಾನ್ ಪಾಂಡೇಶ್ವರ ಗಣಪತಿರಾಯರಿಂದ ರಚಿತವಾದುದು. ಪ್ರಕಾಶಕರು: ಶ್ರೀಮಾನ್ ಬಾಳಿಗಾ ಆ್ಯಂಡ್ ಸನ್ಸ, ಮಂಗಳೂರು. ಕ್ರೌನ್ ಅ. ೧೨ + ೮೮ ಬೆಲೆ, ೧೦ ಆಣೆ.

ತಮ್ಮ 'ಹೂಗೊಂಚಲಿ' ನಿಂದ ಕನ್ನಡಿಗರಿಗೆ ಪರಿಮಳವಿತ್ತು ಪರಿಚಿತರಾದ ಶ್ರೀಮಾನ್ ಪಾಂಡೇಶ್ವರ ಗಣಪತಿರಾಯರು ಇಂದು 'ಚಂಗಲವೆ' ಯನ್ನು ಕನ್ನಡ ರಸಿಕರಿಗರ್ಪಿಸಿದ್ದಾರೆ. ಶ್ರೀಯುತರು 'ತುಳುನಾಡಿನ ಹಾಡುಹಕ್ಕಿ, ಹಾರುಹಕ್ಕಿ.' ಅವರ ಕಾವ್ಯವು ಜೀವನದ ವಿವಿಧ ಅನುಭವಗಳಿಂದ ಎದ್ದುನಿಂತು ವಿವಿಧ ರೀತಿಯಲ್ಲಿ ಹೊರಹೊಮ್ಮಿದೆ. ಅಂತೆಯೇ ಅದರಲ್ಲಿ ಸ್ವಾರಸ್ಯವಿದೆ, ಸ್ಪಷ್ಟತೆಯಿದೆ. ಶ್ರೀಯುತರ ಕನ್ನಡನಾಡಿನ ಸುತ್ತಾಟ ಅವರ ಕಾವ್ಯಕ್ಕೆ ಅನೇಕ ಕಡೆ ಮೆರಗು ಕೊಟ್ಟಿದೆ. 'ಮನೆಯ ನೆನವು' ಎಂಬ ಕವನವನ್ನು ಬೆಳಗಾವಿ ಜಿಲ್ಲೆಯ ನಿಪ್ಪಾಣಿಯಲ್ಲಿ ಬರೆದರೆ 'ಶ್ರೀರಂಗಪಟ್ಟಣ' ವನ್ನು ಶಿವಮೊಗ್ಗೆಯ 'ಮ್ಯಾಜೆಸ್ಟಿಕ್' ಹೋಟಲಿನಲ್ಲಿ ಕುಳಿತು ಬರೆದಿದ್ದಾರೆ. ನಾಡ ಅನುಭವ ನುಡಿಗೆ ಜೀವಕೊಟ್ಟಿರುವುದನ್ನು ಇವರ ಕವನಗಳಲ್ಲಿ ಅನೇಕ ಕಡೆ ನೋಡಬಹುದಾಗಿದೆ. ಮುಕ್ಕಾಲುಪಾಲು ಗೀತೆಗಳಲ್ಲಿ ಇವರ ಜೀವನದ ಕಹಿ, ಕಟು ಅನುಭವ, ಆಘಾತ, ದೈವದುರ್ವಿಪಾಕ, ವಿಷಾದಸ್ಮರಣೆ ಮೊದಲಾದವುಗಳು ಕವನಸಾಮಗ್ರಿಗಳಾಗಿ ನಿಂತಿವೆ. 'ಹಾಳೂರಕತೆ', 'ಒಡಹುಟ್ಟಿದವರ ಸ್ಮೃತಿ', 'ಅಕಾಲಮೃತ್ಯು' ಇವು ಆಘಾತದಿಂದೆದ್ದ ಕರುಣಾಮಯ ಸುಂದರ ಚಿತ್ರಗಳಾಗಿವೆ. ಅನೇಕ ಭಾವಗೀತಗಳ ಭಾಷೆ ಭಾವದೊಡನೆ ಬೆರೆತು ಪೂರ್ಣತ್ವವನ್ನು ಹೊಂದಿ ಸಾಮರಸ್ಯದ ಸವಿರಸವನ್ನು ಬೀರುತ್ತದೆ. 'ಪಂಡಿತಪಕ್ಕಿ' 'ಅನ್ವೇಷಣ' 'ಮಧುಮಾಸದುದಯ' 'ಸಂಜೆಬಂತು' 'ಒಂದು ಭಾವ' 'ಪಡಿನುಡಿ' ಮೊದಲಾದ ಕವನಗಳು ಈ ಮಾತಿಗೆ ಸಾಕ್ಷಿಗಳಾಗಿ ನಿಂತಿವೆ.

'ಯೌವನವೆ ನಿನಗೇಕೆ
ಸುಡುಗಾಡ ಚಿಂತೆ
ಜೀವವಾಹಿನಿಯತ್ತ
ಲಡಿಯಿಡುವ ಮುಂತೆ'

ಎಂದು ಯೌವನಕ್ಕೆ ಬುದ್ಧಿ ಹೇಳುವಾಗಲೂ,

'ಮಧುಮಾಸದುದಯದಲಿ
ಮಧುರ ಮಧುಗೀತಂ
ಯೌವನದ ಪಾತ್ರೆಯಲಿ
ಪ್ರೇಮಸಂಗೀತಂ'

ಎಂದು ಮಧುಮಾಸದುದಯವನ್ನು ಬಣ್ಣಿಸುವಾಗಲೂ,

'ಕವಿಗಳ ಕಣ್ಣನು ತೆರೆಯಿಸಿ ತನ್ನನು
ಬಣ್ಣಿಸಿ, ಬಣ್ಣಿಸಿ ಕವಿತೆಗಳ
ಸುವಿಮಲ ಸುರಸಸ್ವನದ ಸುಧಾರಸ
ಸರಿಯಂ ಸೂಸುತ ಬರುತಿಹಳು!'

ಎಂದು ಉಷೆಯ ಬರವಿನ ಡಂಗುರ ಹೊಯ್ಯುವಾಗಲೂ,

'ನೀತಿನಿರ್ಮಲ ಬೇಕು
ಮಾತು ಮೃದುವಿರಬೇಕು
ಪೂತಸಂಸಾರದಲಿ
ಸರಳವಿರಬೇಕು'

ಎಂದು 'ಬೇಕು'ಗಳ ಜೋಕಿನಲ್ಲಿ ತೂಗಾಡುವಾಗಲೂ,

'ಯಾತ್ರಿಕನೆ ಏಕಿಂತು
ಸ್ತಬ್ಧನಾಗಿರುವೆ?
ಮಾತಿಲ್ಲದೇಕಿಂತು
ಮೌನವಾಗಿರುವೆ?'

ಎಂದು ಸೋತ ಜೀವಿಯನ್ನು ಬಡಿದೆಬ್ಬಿಸಿದಾಗಲೂ, ಸೌಂದರಭಾವ ಬಂಧುರ ಛಂದದೊಡನೆ ಮೈಗೂಡಿ ಎದೆಗೂಡುತ್ತದೆ. 'ಸನ್ಯಾಸಿ'ಯಲ್ಲಿ ಮೂಡಿದ ತಾಯ್ನಾಡಿನ ಕಳವಳವು ಭಾವಾತಿರೇಕದಲ್ಲಿ ಮುಕ್ತಾಯವಾಗುತ್ತದೆ. ಅಲ್ಲಲ್ಲಿ ಬೇರೆ ಬೇರೆ ಭಾವಗಳ ತಾಕಲಾಟವಾಗುವದರಿಂದ ಮೂರ್ತಿಸಮನ್ವಯಕ್ಕೆ ಕೆಲಕಡೆ ಭಂಗಬಂದಿದೆ. ಕೆಲವು ಕವನಗಳಲ್ಲಿ ಕವಿಯು ನೀತಿಕಾರನಾಗಿ ಬಿಡುವದೂ ಉಂಟು. 'ನೀತಿ', 'ಮಾಯೆ', 'ಬೇಕು' ಮೊದಲಾದ ಕವನಗಳಲ್ಲಿ ಹೊಸ ಶಿಕ್ಷಕನು ವಿದ್ಯಾರ್ಥಿಗಳನ್ನು ಬೆರಗು ಪಡಿಸಲು ಹವಣಿಸುವ ಮಾತುಗಾರಿಕೆಯ ಕೈಚಳಕ ಕಂಡುಬರುತ್ತದೆ. 'ಚಂಗಲವೆ' ಅನೇಕ ಕಡೆ ಚಂಚಲಚಿತ್ತಳೂ ಆಗಿದ್ದಾಳೆ.

ಒಟ್ಟಾರೆ, ಶ್ರೀ ಪಾಂಡೇಶ್ವರರ ಕವಿತೆಗಳಲ್ಲಿ ಬಾಳಿನ ಗೋಳುಗಳು, ಜೀವನದ ಕಹಿಸಿಹಿಗಳು, ಮಾನವನ ಸೋಲುಗೆಲವುಗಳು ಪ್ರತಿಭಾಮಯವಾಗಿ ಮೂಡಿವೆ. ಕೆಲವೆಡೆಯಲ್ಲಿ ಭಾವ ಭಾಷೆಯಲ್ಲಿ ಕುಸುರಲು ಅವಕಾಶವಿಲ್ಲದೇ ಹೋಗಿರಬಹುದು, ಒಮ್ಮೊಮ್ಮೆ ಭಾವದ ವೇಗವು ಭಾಷೆಯನ್ನು ಮೀರಿಸಿ ನಿಂತಿರಬಹುದು. ಇನ್ನೊಮ್ಮೆ ಭಾಷೆ ಭಾವವನ್ನೇ ಮರೆಯಿಸಿರಬಹುದು. ಆದರೆ ಕವಿತೆಗಳೆಲ್ಲ ಜೀವಪೂರ್ಣವಾಗಿವೆ. ಕಾವ್ಯದಲ್ಲಿ 'ಜೀವ'ವೇ ಜೀವಾಳವಲ್ಲವೆ?

ಕೃಷ್ಣಮೂರ್ತಿ ಪುರಾಣಿಕ.

---

**ಸೆರೆಯ ಮರೆಯಲ್ಲಿ** (ಕಾರಾವಾಸದ ಒಂದು ಹರಟೆ)—ಬರೆದವರು : ಶ್ರೀಮಾನ್ ರಂಗನಾಥ ರಾ. ದಿವಾಕರ, ಎಂ.ಎ., ಎಲ್‌ಎಲ್.ಬಿ. ಕ್ರೌನ್ ಅ. ೨೩೦ ; ೭ ಚಿತ್ರಗಳ ಸಹಿತ. ಪ್ರಕಾಶಕರು : ಅಧ್ಯಾತ್ಮ ಕಾರ್ಯಾಲಯ, ಹುಬ್ಬಳ್ಳಿ; ಬೆಲೆ, ೧ ರೂಪಾಯಿ.

ಶ್ರೀ. ದಿವಾಕರರು ಕನ್ನಡಿಗರಿಗೆ ಸುಪರಿಚಿತರು. ಅವರು ಈ ವರೆಗೆ ಆರು ವರ್ಷಗಳ ಕಾರಾಗೃಹವಾಸವನ್ನು ಮುಗಿಸಿದ್ದಾರೆ. ಧಾರವಾಡ, ಬಿಜಾಪುರ, ಬೆಳಗಾಂವಿ, ಯರವಾಡ—ಈ ನಾಲ್ಕು ಊರುಗಳಲ್ಲಿ ಇರುವ ಸೆರೆಮನೆಯ ಪರಿಚಯವೂ ಅವರಿಗಿದೆ. ಆದ್ದರಿಂದ, ರಾಜಕೀಯ ಕೈದಿಗಳ ಉಪಚಾರಕ್ರಮದಲ್ಲಿ ಅವರ ಮತ್ತು ಅವರ ಹಿತಚಿಂತಕರ ಪರಿಶ್ರಮಗಳಿಂದ ೧೯೨೭ ರಿಂದ ಈಚೆಗೆ ನಡೆದಿರುವ ಸುಧಾರಣೆಗಳೆಲ್ಲ ವನ್ನೂ ದಿವಾಕರರು ಅನುಭವದಿಂದ ಟೀಕಿಸಬಲ್ಲರು ; ಇತರ ಕೈದಿಗಳ ಆಗುಹೋಗು ಗಳನ್ನೂ ಅವರು ವಿವೇಚನೆಯಿಂದ ವಿಮರ್ಶಿಸಬಲ್ಲರು. ಕನ್ನಡನಾಡಿನ ಸತ್ಯಾಗ್ರಹಿ ಗಳಲ್ಲಿ ದಿವಾಕರರಿಗೆ ಮಾನ್ಯಸ್ಥಾನವಿದೆ. ಅಲ್ಲದೆ, ಸೆರೆಮನೆಯ ಒಳಗೂ ಹೊರಗೂ ಅವರು ಏಕಪ್ರಕಾರವಾಗಿ ಆಧ್ಯಾತ್ಮಿಕದ ಹಾದಿಯಲ್ಲೇ ಹೆಜ್ಜೆಯಿಡಲು ಹವಣಿಸು ತ್ತಿರುವರು. ಸೆರೆಮನೆಯನ್ನೇ "ಗುರುಮನೆ"ಯೆಂದು ಭಾವಿಸಿ, ಅವರು ಅಲ್ಲಿ ಇರು ವಾಗಲೇ ವಚನಶಾಸ್ತ್ರರಹಸ್ಯ, ಹರಿಭಕ್ತಿಸುಧೆ, ಅಂತರಾತ್ಮನಿಗೆ, ಉಪನಿಷತ್ಪ್ರಕಾಶ, ಗೀತೆಯ ಗುಟ್ಟು, ಶ್ರೀರಾಮಕೃಷ್ಣ—ಮುಂತಾದ ಗ್ರಂಥಗಳನ್ನು ರಚಿಸಿದರು. ಆದ್ದರಿಂದ, ತಮ್ಮ ಕಾರಾಗೃಹವಾಸದ ನೆನಪನ್ನು ಬರೆಯಲು ಅವರಿಗೆ ಪ್ರೇರಣೆ ಯಾದದ್ದು ಕನ್ನಡಿಗರ ಪುಣ್ಯವೇ ಸರಿ.

"ಈಗ ಕೈಕೊಂಡ ವಿಷಯ ಪೂರ್ಣ ಪರಿಚಿತ; ಅದನ್ನು ಕುರಿತು ಬರೆಯುವ ರೀತಿ ತೀರ ಅಪರಿಚಿತ" ಎಂದು ಗ್ರಂಥಕರ್ತರು ಮುನ್ನುಡಿಯಲ್ಲಿ ಹೇಳಿಕೊಂಡಿದ್ದಾರೆ. ಆದರೆ ಇಂತಹ ಎದೆಗೊಂದಲಕ್ಕೆ ಏನೂ ಕಾರಣವಿಲ್ಲ. ಶೈಲಿ ಸರಳವಾಗಿದೆ ; ಮೂರು ನಾಲ್ಕು ಗೆಳೆಯರನ್ನು ಹತ್ತಿರ ಕೂರಿಸಿಕೊಂಡು ಆರಾಮವಾಗಿ ನಕ್ಕು ನಗಿಸಿ ಕತೆ ಹೇಳುವ ಹಾಗೆ ಇದೆ, ಪುಸ್ತಕದ ಧಾಟಿ. ವಿಷಯವೂ ಮಂದಿಗೆ ಹೊಸದಾದ್ದರಿಂದ ಕುತೂಹಲವನ್ನು ಕೆರಳಿಸುವಂತಿದೆ.

ಈ ಗ್ರಂಥದಿಂದ ವಾಚಕರು ಎರಡು ಪ್ರಯೋಜನಗಳನ್ನು ಪಡೆಯಬಹುದೆಂದು ತೋರುತ್ತದೆ. ಮೊದಲನೆಯದಾಗಿ, ಸತ್ಯಾಗ್ರಹಾಚಾರ್ಯರ ಸಾತ್ವಿಕ ರಣಭೇರಿಗೆ ಕಿವಿಗೊಟ್ಟು, ಕಾರಾಗೃಹದ ಕಡೆ ನುಗ್ಗುತ್ತಿರುವ ದೇಶಬಾಂಧವರ ಆಸೆ ಆತಂಕಗಳೇನು ? ಅವರು ಕಾಣುವ ಕನಸು, ಕಟ್ಟುತ್ತಿರುವ ಗುಡಿ ಗೋಪುರ, ಇವು ಏನು ? ಅವರ ಎಡರು ತೊಡರುಗಳೇನು ?—ಎಂಬುದನ್ನು ಈ ಪುಸ್ತಕವು ಕರತಲಾಮಲಕದಂತೆ ತೋರಿಸುತ್ತದೆ. ಎರಡನೆಯದಾಗಿ, ಸೆರೆಯನ್ನನುಭವಿಸುವ ಇತರ ವಿಧವಾದ ಕೈದಿಗಳು

ಅಲ್ಲಿ ಹೇಗೆ ವರ್ತಿಸುತ್ತಾರೆ, ಅವರನ್ನು ಸರ್ಕಾರವೂ ಸಮಾಜವೂ ಯಾವ ದೃಷ್ಟಿಯಿಂದ ಕಾಣುತ್ತಿವೆ, ಅವರ ಉದ್ಧಾರಕ್ಕಾಗಿ ಈಗ ಸೆರೆಮನೆಗಳು ಕೈಕೊಳ್ಳುತ್ತಿರುವ ಶಿಕ್ಷೆ ಮತ್ತು ಶಿಕ್ಷಣ ಕ್ರಮಗಳು ಎಷ್ಟರ ಮಟ್ಟಿಗೆ ಫಲಕಾರಿಯಾಗಿವೆ ಎಂಬುದನ್ನೂ ಈ ಪುಸ್ತಕದಿಂದ ತಿಳಿದುಕೊಳ್ಳಬಹುದಾಗಿದೆ. "ಮುಖ್ಯವಾಗಿ ಕೈದಿಗೆ ಪ್ರಾಯಶ್ಚಿತ್ತ ಕೊಡುವ ಹವ್ಯಾಸವನ್ನು ಬಿಟ್ಟು ಅವನಿಗೆ ಪಶ್ಚಾತ್ತಾಪವಾಗುವಂತೆ ಜೆಯಿಲ ಪದ್ಧತಿಯನ್ನು ಮಾರ್ಪಡಿಸಬೇಕು. ಅವನು ಒಬ್ಬ ರೋಗಿ ಎಂಬ ಭಾವನೆಯಿಂದ ಅವನೊಡನೆ ಸಹಾನುಭೂತಿಯಿಂದ ನಡೆದುಕೊಳ್ಳಲಾರಂಭಿಸಬೇಕು. ದೇಹದಂಡಕ್ಕಿಂತ ಅವನ ಮನಸ್ಸಿನ ಮೇಲೆ ಪರಿಣಾಮವಾಗುವಂತೆ ಹಾಗೂ ಗುನ್ಹೆ ಮಾಡುವದು ಯಾವದೇ ರೀತಿ ಹಿತಕರವಲ್ಲ ಎಂಬ ಭಾವವು ಮತ್ತು ಅನುಭವವು ಅವನಲ್ಲಿ ನೆಲೆಯಾಗುವಂತೆ ಯತ್ನಿಸಬೇಕು" ಎಂಬ ಗ್ರಂಥಕರ್ತರ ಅಭಿಪ್ರಾಯಕ್ಕೆ ಓದುಗರೆಲ್ಲರೂ ತಲೆಬಾಗುವಂತೆ ಅನೇಕ ಸನ್ನಿವೇಶಗಳನ್ನು ದಿವಾಕರರು ವಿವರಿಸಿರುವರು. ಶ್ರೀ ಸ್ವಾಮಿ ವಿವೇಕಾನಂದರವರು, "ದರಿದ್ರ ದೇವೋಭವ; ಮೂರ್ಖ ದೇವೋಭವ" ಎಂದು ನಮ್ಮನ್ನು ಆಗಲೇ ಎಚ್ಚರಿಸಿ ಮೂರ್ಖ ನಾರಾಯಣ ಸೇವೆಗೆ ನಮ್ಮನ್ನು ಪ್ರೇರೇಪಿಸಿದರು. ಈ ಗ್ರಂಥದಿಂದ ಆ ಬಗ್ಗೆ ಜನರಲ್ಲಿ ಜಾಗೃತಿ ಉಂಟಾಗುವುದೆಂದು ನಂಬುತ್ತೇವೆ.

ನಾ. ಕ.

---

**ದರ್ಪಚೂರ್ಣ**—ಅನುವಾದಕರು : ಶ್ರೀ ಸಿ. ಕೆ. ನಾಗರಾಜರಾವ್ ; ಪ್ರಕಾಶಕರು : ಸತ್ಯಶೋಧನ ಪುಸ್ತಕ ಭಂಡಾರ, ಬೆಂಗಳೂರು ; ಕ್ರೌ. ಅ. ೮೫ ; ಬೆಲೆ, ೮ ಆಣೆ.

ಇದು ಬಂಗಾಳಿ ಭಾಷೆಯಲ್ಲಿ ಅನೇಕ ಗ್ರಂಥಗಳನ್ನು ಬರೆದು ಸುಪ್ರಸಿದ್ಧರಾದ ಶರಚ್ಚಂದ್ರರ ಕಾದಂಬರಿಯೊಂದರ ಅನುವಾದ. ಶ್ರೀ ನಾಗರಾಜರಾಯರು ಈಗಾಗಲೇ ಶರಚ್ಚಂದ್ರರ 'ಅನುಪಮ-ಕಾ-ಪ್ರೇಮ್' ಎಂಬ ಕಾದಂಬರಿಯನ್ನು 'ಪ್ರೇಮಯೋಗಿನಿ' ಎಂದು ಕನ್ನಡಿಸಿದ್ದಾರೆ. ಇದು ಎರಡನೆಯ ಅನುವಾದಗ್ರಂಥ. 'ದರ್ಪಚೂರ್ಣ'ವು ಶರಚ್ಚಂದ್ರರ ಕಾದಂಬರಿಗಳಲ್ಲಿ ಅಷ್ಟು ಮುಖ್ಯವಾದದ್ದಲ್ಲ; ಇಬ್ಬರು ಸ್ತ್ರೀಯರ ಮಾನಸಿಕ ಪರಿಸ್ಥಿತಿಗಳನ್ನು ವಿವರಿಸುವ ಒಂದು ಉಪನ್ಯಾಸದಂತೆ ಕಂಡುಬರುತ್ತದೆ.

ಇಂದುಮತಿ ಭಾಗ್ಯವಂತರ ಮನೆಯಲ್ಲಿ ಹುಟ್ಟಿ ಬಡವರ ಮನೆಗೆ ಬಂದು, 'ಪ್ರೇಮವೆಂದರೆ ಐಶ್ವರ್ಯ' ಎಂಬ ಭಾವನೆಯನ್ನು ಹೊಂದಿರುವವಳು. ವಿಮಲೆ ಪತಿಯ ಮೇಲೆ ಅಗಾಧ ಪ್ರೇಮವಿಟ್ಟಿರುವವಳು. ವಿಮಲೆಯ ಜೀವನ ಸುಖಮಯವಾಗಿದೆ. ಇಂದುಮತಿಯದು ದುಃಖಮಯವಾಗಿದೆಯೆಂದು ಅವಳ ಭಾವನೆ. ವಿಮಲೆಯ ಪ್ರಯತ್ನದಿಂದ ಕೊನೆಗೆ ಐಶ್ವರ್ಯವೇ ಸರ್ವಸ್ವವಲ್ಲ

ವೆಂಬುದು ಇಂದುಮತಿಗೆ ತಿಳಿಯುತ್ತದೆ. ಅಷ್ಟಾಗಬೇಕಾದರೆ ಗಂಡನಾದ ನರೇಂದ್ರನು ಸಾಲಗಾರರ ಕಾಟದಿಂದ ಜೈಲು ಸೇರಬೇಕಾಯಿತು.

ಈ ಕಾದಂಬರಿಯಲ್ಲಿ ಸ್ತ್ರೀ ಪಾತ್ರಗಳು ಮುಖ್ಯವಾದುವು. ಕಥೆಯು ಸ್ವಲ್ಪವಾದ್ದರಿಂದ ಅದರಲ್ಲಿ ಓಟವಿಲ್ಲ. ಸ್ವಲ್ಪಕಥೆಯನ್ನು ಕಾದಂಬರಿಯಾಗಿ ವಿಸ್ತರಿಸಲು ಹೊರಟರೆ ಆಗುವುದೇ ಹೀಗೆ.

'ಜೀವಶ್ರವ' ಮುಂತಾದ ಅಸಾಧುಪ್ರಯೋಗಗಳು ಇಲ್ಲದೆ, ವಾಕ್ಯಗಳು ವ್ಯಾಕರಣಬದ್ಧವಾಗಿದ್ದರೆ ಗ್ರಂಥದ ಬೆಲೆ ಇನ್ನೂ ಹೆಚ್ಚುತ್ತದೆ. ಶರಚ್ಚಂದ್ರರ ಇತರ ಉತ್ತಮ ಕಾದಂಬರಿಗಳೂ ಇವರಿಂದ ಕನ್ನಡಕ್ಕೆ ಬರಲಿ ಎಂದು ಹಾರೈಸುತ್ತೇವೆ.

ಜಿ. ವೆಂಕಟಸುಬ್ಬಯ್ಯ.

---

# ಸಾದರ ಸ್ವೀಕಾರ

೧. **ಪರಮಾಣು** (ಸಚಿತ್ರ)—ಲೇಖಕರು: ಶ್ರೀಮಾನ್ ಜಿ. ಆರ್. ರಂಗಸ್ವಾಮಿ, ಎಂ.ಎ.; ಪ್ರಕಾಶಕರು : ಕಾವ್ಯಾಲಯ, ಶಿವಮೊಗ್ಗ; ಕ್ರೌನ್ ಅ. ೧೨ + ೨೧೨ ; ಬೆಲೆ, ರೂ. ೨—೪—೦.

೨. **ಸೆರೆಯ ಮರೆಯಲ್ಲಿ** (ಸಚಿತ್ರ)—ಬರೆದವರು: ಶ್ರೀಮಾನ್ ರಂಗನಾಥ ದಿವಾಕರ, ಎಂ.ಎ., ಎಲ್‌ಎಲ್.ಬಿ. ; ಪ್ರಕಾಶಕರು: ಅಧ್ಯಾತ್ಮ ಕಾರ್ಯಾಲಯ, ಹುಬ್ಬಳ್ಳಿ; ಕ್ರೌನ್. ಅ. ೧೨+೨೦೪; ಬೆಲೆ, ೧-೦-೦.

೩. **ಪರ್ಣಕುಟಿ** (ಸಚಿತ್ರ)—ಬರೆದವರು: ಶ್ರೀಮಾನ್ ಸಿದ್ದವ್ವನಹಳ್ಳಿ ಕೃಷ್ಣಶರ್ಮ; ಪ್ರಕಾಶಕರು: ಸಾಧನ ಮುದ್ರಣಾಲಯ, ಧಾರವಾಡ; ಕ್ರೌನ್. ಅ. ೫+೪+೨೦೮; ಬೆಲೆ, ೧-೮-೦.

೪. **ಕುಂಕುಮ** (ಸಣ್ಣ ಕಥೆಗಳು)—ಲೇಖಕರು: ಶ್ರೀಮಾನ್ ಎಸ್.ಎಂ. ಮುನಿವೆಂಕಟಪ್ಪ, ಎಂ.ಎ.; ಸರ್ಜಾಪುರ; ಕ್ರೌನ್. ಅ. iv+೮೦; ಬೆಲೆ, ಆರಾಣೆ.

೫. **ದರ್ಪಚೂರ್ಣ** (ಕಾದಂಬರಿ ; ಬಂಗಾಳಿಯಿಂದ ಭಾಷಾಂತರ)—ಅನುವಾದಕರು : ಶ್ರೀಮಾನ್ ಸಿ. ಕೆ. ನಾಗರಾಜಾರಾವ್; ಸತ್ಯಶೋಧನ ಪುಸ್ತಕ ಭಂಡಾರ, ಕೋಟೆ, ಬೆಂಗಳೂರು ನಗರ; ಕ್ರೌನ್. ಅ. ii+೮೫; ಬೆಲೆ?

೬. **ನಾಡ ಹಾಡುಗಳು** (ಮಿಂಚಿನಬಳ್ಳಿ ಗ್ರಂಥಮಾಲೆಯ ೩ನೆಯ ವರ್ಷದ ೪ನೆಯ ಕುಡಿ)—ಸಂಪಾದಕರು: ಶ್ರೀಮಾನ್ ಬರ್ಲಿ ಬಿಂದುಮಾಧವ; ಕ್ರೌನ್. ಅ. ೧೨+೧೭೮; ಬೆಲೆ, ಸಾದಾ ೧-೦-೦, ವಾಚನಾಲಯದ ಪ್ರತಿ, ೧-೪-೦.

೭. **ದೀಪದ ಕೆಳಗೆ** (ಸಾಮಾಜಿಕ ಕಾದಂಬರಿ)—ಪ್ರೇಮಪ್ರಕಟನಾಲಯದ ೧೩ನೆಯ ಪ್ರಕಟನೆ; ಬರೆದವರು: ಶ್ರೀಮಾನ್ ಕುಲಕರ್ಣಿ ಶ್ರೀನಿವಾಸ, ಬಿ.ಎ.; ಮಾರಾಟದ ಏಜೆಂಟರು: ಸಾಹಿತ್ಯ ಭಂಡಾರ, ಹುಬ್ಬಳ್ಳಿ; ಕ್ರೌನ್. ಅ. ೧೪೧; ವಾರ್ಷಿಕ ಚಂದ, ೨-೮-೦, ಬಿಡಿ, ೦-೮-೦

೮. **ಮಂಗಳಸೂತ್ರ** (ಸಾಮಾಜಿಕ ಕಾದಂಬರಿ)—ಬರೆದವರು: ಶ್ರೀಮಾನ್ ಅ. ನ. ಕೃಷ್ಣರಾಯ; ಪ್ರಕಾಶಕರು: ಮನೋಹರ ಗ್ರಂಥಪ್ರಕಾಶನ ಸಮಿತಿ, ಧಾರವಾಡ; ಕ್ರೌನ್. ಅ. ೨೨೮; ಬೆಲೆ, ೧-೮-೦.

೯. **ಆತ್ಮನಿವೇದನಂ**—ಲೇಖಕರು: ಶ್ರೀಮಾನ್ ಕೆ. ಭುಜಬಲಿಶಾಸ್ತ್ರೀ ; ಪ್ರಕಾಶಕರು: ಶ್ರೀ. ಡಿ. ಕುಸುಮಾವತಿ ಅಮ್ಮ ; ಪುಟ, ೧೪ ; ಬೆಲೆ. ?

೧೦. **ಶ್ರೀ ಕುಮಾರವ್ಯಾಸ ಕೃತ ಭಗವದ್ಗೀತಾಸಾರ**—ಪ್ರಕಾಶಕರು: ಶ್ರೀ ಕುಮಾರವ್ಯಾಸ ಸ್ಮಾರಕ ಸಂಸ್ಥೆ, ಕೋಳಿವಾಡ; ಪುಟ, ೪+೮೨; ಬೆಲೆ, ೨ ಆಣೆ.

೧೧. **ಜೀವಜ್ಯೋತಿ** (ಸಚಿತ್ರ)—ಅಮರವಾಣಿ ಗ್ರಂಥಮಾಲೆಯ ಮೊದಲನೆಯ ಸುಮ; ಲೇಖಕರು : ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯರು ; ಪ್ರಕಾಶಕರು : ಶ್ರೀ|| ಸ|| ಪು|| ಶಿವಕುಮಾರಸ್ವಾಮಿಗಳು, ಸಿದ್ಧಗಂಗಾ ಗುರುಕುಲಾಶ್ರಮ ; ಡೆ. ಸೋ. ೪೩ ; ಬೆಲೆ, ೧ ಆಣೆ.

೧೨. **ಕನ್ನಡಿಗ**—ಸಂಚಿಕೆ ೨ ; ಬೆಂಗಳೂರಿನ ಸೇಯಿಂಟ್ ಜೋಸೆಫ್ಸ್ ಕಾಲೇಜ್ ಕನ್ನಡ ಸಂಘದ ಪತ್ರಿಕೆ, ಸಚಿತ್ರ ; ಡೆಮಿ ಅ. ೮೦.

# ವಸ್ತುಕೋಶ

ಈ ಸಂಚಿಕೆಗೆ "ಪ್ರಬುದ್ಧ ಕರ್ಣಾಟಕ"ದ ಇಪ್ಪತ್ತೆರಡನೆಯ ಸಂಪುಟವು ಮುಗಿಯಿತು. ಈ ಸಂಪುಟದಲ್ಲಿ ಸುಮಾರು ೬೫೦ ಪುಟಗಳನ್ನು ಕೊಟ್ಟಿರುವುದಲ್ಲದೆ, ಕಲೆ ಶಾಸ್ತ್ರ ಸಾಹಿತ್ಯ ಮುಂತಾದವುಗಳಿಗೆ ಸಂಬಂಧಪಟ್ಟಂತೆ ಹಲವು ಸಣ್ಣ, ದೊಡ್ಡ, ಸರಳ, ಪ್ರೌಢ ಲೇಖನಗಳನ್ನು ಪ್ರಕಟಿಸಿದೆ. ವಿದ್ವಾಂಸರು, ವಿದ್ಯಾರ್ಥಿಗಳು, ಮಹಿಳೆಯರು, ಮೈಸೂರಿನವರು, ಹೊರಗಿನವರು, ಕನ್ನಡಿಗರು, ಕನ್ನಡಿಗರಲ್ಲದವರು ಎಲ್ಲರೂ ಅಭಿಮಾನವಿಟ್ಟು ಲೇಖನಗಳನ್ನು ಬರೆದುಕೊಟ್ಟಿದ್ದಾರೆ. ನೂರಕ್ಕೆ ಮೇಲ್ಪಟ್ಟು ಚಿತ್ರಗಳನ್ನು ಹಾಕಿದೆ. ಹೀಗೆ ವಿಷಯ, ವಿಸ್ತಾರ, ವೈವಿಧ್ಯ, ಸ್ವಾರಸ್ಯ, ಸೌಂದರ್ಯ ಎಲ್ಲವನ್ನೂ ಹೆಚ್ಚುಮಾಡಲು ಸಕಾಲಕ್ಕೆ ಒದಗಿಬಂದ ನಮ್ಮ ಲೇಖಕ ಮಿತ್ರರ ಸಹಾಯವು ಅಪಾರವಾಗಿದೆ. ಆದರೆ ಇದೆಲ್ಲವೂ ಹೀಗೆ ದೃಶ್ಯರೂಪಕ್ಕೆ ಬಂದದ್ದು ಮೈಸೂರು ವಿಶ್ವವಿದ್ಯಾನಿಲಯವು ಈ ವರ್ಷ ಪತ್ರಿಕೆಗೆ ಕೊಟ್ಟ ಇಮ್ಮಡಿಯಾದ ಬೆಂಬಲದಿಂದ. ಇದಕ್ಕಾಗಿ ನಾವು ವಿಶ್ವವಿದ್ಯಾನಿಲಯದ ಮುಖ್ಯಾಧಿಕಾರಿಗಳನ್ನು ಕನ್ನಡಿಗರ ಪರವಾಗಿ ಕೃತಜ್ಞತೆಯಿಂದ ವಂದಿಸುತ್ತೇವೆ.

ಪ್ರಬುದ್ಧ ಕರ್ಣಾಟಕಕ್ಕೆ ಪ್ರೋತ್ಸಾಹ

*
* *

ಈ ಸಾರಿ ಶ್ರೀಮನ್ಮಹಾರಾಜರವರು ಮೈಸೂರು ಮಲೆನಾಡಿನಲ್ಲಿ ಸಂಚಾರಮಾಡಿ ಅಲ್ಲಿನ ಪ್ರಜೆಗಳಿಗೆ ಸಂದರ್ಶನವಿತ್ತು ಅವರ ಕ್ಷೇಮಲಾಭಗಳನ್ನೂ ಕಷ್ಟನಷ್ಟಗಳನ್ನೂ ತಿಳಿದುಕೊಳ್ಳುತ್ತ ಶಿವಮೊಗ್ಗೆಗೆ ದಯಮಾಡಿದ ಸಮಯದಲ್ಲಿ ಅಲ್ಲಿಯ ಪ್ರಸಿದ್ಧ ಮಹನೀಯರಾದ ಶ್ರೀಮಾನ್ ಹಸೂಡಿ ವೆಂಕಟಶಾಸ್ತ್ರಿಗಳವರು ಸ್ಥಳೀಯ ಕರ್ಣಾಟಕ ಸಂಘದ ಕಟ್ಟಡ ಕ್ಕೋಸ್ಕರ ಐದು ಸಾವಿರ ರೂಪಾಯಿಗಳ ಉದಾರ ದಾನವನ್ನು ಮಾಡಿದ್ದಕ್ಕಾಗಿ, ಎಲ್ಲ ಕನ್ನಡಿಗರೊಡನೆ ನಾವು ಅವರನ್ನೂ ಕರ್ಣಾಟಕ ಸಂಘದ ಅಧಿಕಾರಿಗಳನ್ನೂ ಬಹು ಸಂತೋಷದಿಂದ ಅಭಿನಂದಿಸುತ್ತೇವೆ. ಇದು ಶಿವಮೊಗ್ಗೆಯ ಕರ್ಣಾಟಕ ಸಂಘವು ಹಲವು ವರ್ಷಗಳಿಂದ ಮಾಡುತ್ತಿರುವ ನಿರಂತರವಾದ ಉಪಾಸನೆಗೆ ಬಂದ ಪ್ರಸಾದವೆಂದು ನಾವು ಭಾವಿಸುತ್ತೇವೆ. ಈಚೆಗೆ ಶ್ರೀಮಾನ್ ಶಾಸ್ತ್ರಿಗಳವರು ಸಂಘದ ಪುಸ್ತಕಭಂಡಾರಕ್ಕೆಂದು ಮತ್ತೆ ಒಂದು

ಕರ್ಣಾಟಕ ಸಂಘಕ್ಕೆ ಶ್ರೀಮಾನ್ ಹಸೂಡಿ ವೆಂಕಟಶಾಸ್ತ್ರಿಗಳವರ ಉದಾರ ದಾನ

ಸಾವಿರ ರೂಪಾಯಿಗಳನ್ನು ಕೊಟ್ಟಿರುತ್ತಾರೆಂದು ಕೇಳಿ ನಮ್ಮ ಹರ್ಷವು ಇಮ್ಮಡಿಯಾಗಿದೆ. ಕಷ್ಟಪಟ್ಟು ಸಂಪಾದಿಸಿದ ಹಣಕ್ಕೆ ಇದಕ್ಕಿಂತ ಸದ್ವಿನಿಯೋಗವಿರಲಾರದು. ಆಹಾರ, ಅಭಯ, ಭೈಷಜ್ಯ, ಶಾಸ್ತ್ರ ದಾನಗಳಲ್ಲಿ ಇದು ಯಾವುದಕ್ಕೂ ಕಡಮೆಯಾಗುವುದಿಲ್ಲ—ಅವೆಲ್ಲವೂ ಇದರಿಂದ ಬರುತ್ತದೆಯೆಂದು ಬೇಕಾದರೂ ಹೇಳಬಹುದು. ಕರ್ಣಾಟಕ ಸಂಘಗಳು ಕನ್ನಡ ದೇಶದಲ್ಲಿ ಮಾಡುತ್ತಿರುವ, ಮಾಡಬಲ್ಲ, ಕೆಲಸಗಳನ್ನು ನೋಡಿದರೆ, ಯೋಚಿಸಿಕೊಂಡರೆ, ಇದು ಅತಿಶಯೋಕ್ತಿಯೆಂದು ಯಾರೂ ಹೇಳುವ ಹಾಗಿಲ್ಲ. ಹೊಟ್ಟೆಗೆ ಹಾಕಿದರೆ ತಾನೇ ಹಸು ಹಾಲು ಕರೆದೀತು? ಶ್ರೀಮಾನ್ ಶಾಸ್ತ್ರಿಗಳಂಥ ಅಭಿಮಾನಿಗಳೂ, ಉದಾರಿಗಳೂ, ಹಣವಂತರೂ ಕನ್ನಡನಾಡಿನಲ್ಲಿ ಹಲವರಿದ್ದಾರೆ. ಅವರೆಲ್ಲರ ಗಮನವು ಕನ್ನಡದ ಕಡೆಗೆ ತಿರುಗಿ ನಮ್ಮ ತಾಯ್ನುಡಿಯು ಗುಡಿಗಟ್ಟಲಿ ಎಂದು ಹಾರೈಸುತ್ತೇವೆ.

***

ಈ ಸಂಚಿಕೆಯ ಬೇರೊಂದು ಕಡೆಯಲ್ಲಿ (ಪುಟ ೩೯) "ಸುಬುದ್ಧಿಪ್ರಕಾಶ"ವೆಂಬ ಲೇಖನವೊಂದಿದೆ. ಅದರ ಪರಿಚಯವನ್ನು ಇಲ್ಲಿ ಮಾಡಿಕೊಡಲಾಗಿದೆ:—

"ಸುಬುದ್ಧಿಪ್ರಕಾಶ"ವು ಈಗ ನಮಗೆ ತಿಳಿದು ಬಂದಿರುವ ಕನ್ನಡ ಪತ್ರಿಕೆಗಳಲ್ಲೆಲ್ಲಾ ಬಹಳ ಹಿಂದಿನದು. ಇದು ಆರಂಭವಾದದ್ದು ಕ್ರಿ.ಶ. ೧೮೫೦ನೆಯ ಇಸವಿಯಲ್ಲಿ ಎಂದರೆ ೯೨ ವರ್ಷಗಳ ಹಿಂದೆ. ೨೮-೯-೧೮೫೫ರಲ್ಲಿ ಪ್ರಕಟವಾದ ಅದರ ೬ನೆಯ ಸಂಪುಟದ ೨೩ನೆಯ ಸಂಚಿಕೆಯನ್ನು ಈ ಲೇಖನದಲ್ಲಿ ಪ್ರತಿಮಾಡಿ ಕೊಟ್ಟಿದೆ. ಹರಿದುಹೋಗಿದ್ದ ಕಡೆಗಳಲ್ಲಿ ಚುಕ್ಕಿ ಹಾಕಿದೆ.

ಸುಬುದ್ಧಿಪ್ರಕಾಶ

ಇದಕ್ಕೆ ಮುಂಚೆ ನಮಗೆ ತಿಳಿದುಬಂದಿದ್ದ ಅತ್ಯಂತ ಪ್ರಾಚೀನ ಕನ್ನಡ ಪತ್ರಿಕೆ ೧೮೨೦ರಲ್ಲಿ ಹುಟ್ಟಿದ್ದ "ಹಿತೇಚ್ಛು" (ಶ್ರೀಮಾನ್ ಡಿ. ವಿ. ಗುಂಡಪ್ಪನವರ "ವೃತ್ತಪತ್ರಿಕೆಗಳು", ಪುಟ ೧೪).

ಇದು ವಾರಪತ್ರಿಕೆ: ಪ್ರತಿ ಸೋಮವಾರವೂ ಹೊರಡುತ್ತಿತ್ತು. ಒಂದು ಸಂಚಿಕೆಗೆ ನಾಲ್ಕು ಪುಟ. ಚಂದಾ—ತಿಂಗಳಿಗೆ ಎಂಟಾಣೆ, ವರ್ಷಕ್ಕೆ ಆರು ರೂಪಾಯಿ. ಬಿಡಿ ಸಂಚಿಕೆಗೆ ಎರಡಾಣೆ. ಪತ್ರಿಕೆ ಕೈಯಲ್ಲಿ ಬರೆದು ಕಲ್ಲಿನ ಮೇಲೆ ಪ್ರತಿ ಎತ್ತಿದ್ದು. ಸಂಪಾದಕರು ಯಾರೋ, ಪತ್ರಿಕೆಯು ಮುಂದೆ ಎಷ್ಟು ದಿನ ನಡೆದು ಏಕೆ ನಿಂತಿತೋ ಗೊತ್ತಿಲ್ಲ.

ಈ ಸಂಚಿಕೆಯು ಬೆಳಗಾವಿಯ ಶ್ರೀಮಾನ್ ಭರಮಪ್ಪ ರುದ್ರಪ್ಪ ಪಾಟೀಲರಲ್ಲಿ ದೊರೆಯಿತು. ಅದರ ನಾಲ್ಕು ಪುಟಗಳನ್ನು ನಾಲ್ಕು ಚಿತ್ರಗಳಾಗಿ ಅದೇ ಊರಿನ

ಶ್ರೀಮಾನ್ ಎಸ್. ಎಸ್. ಕಟ್ಟಿಯವರು ಫೋಟೋ ತೆಗೆದರು. ಇವುಗಳನ್ನೂ ಇವುಗಳಲ್ಲಿ ಮುಖಪುಟದ ಪಡಿಯಚ್ಚನ್ನೂ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಗಳಾದ ಶ್ರೀಮಾನ್ ಬಿ. ವೆಂಕೋಬರಾವ್, ಬಿ.ಎ., ಅವರು ದಯವಿಟ್ಟು ಕೊಟ್ಟರು. ಅವರಿಗೆ ನಾವು ಕೃತಜ್ಞರಾಗಿದ್ದೇವೆ.

ಈ ಸಂಚಿಕೆಯ ವಿಷಯವನ್ನು, ಮೂಲದಲ್ಲಿ ಇದ್ದ ಪುಟವಿಭಾಗಗಳನ್ನು ತೋರಿಸಿ, ಯಥಾವತ್ತಾಗಿ ಪ್ರತಿಮಾಡಿದೆ. ಇದನ್ನು ಬಹು ಶ್ರಮವಹಿಸಿ ಶ್ರೀಮಾನ್ ಎನ್. ಅನಂತರಂಗಾಚಾರ್, ಎಂ.ಎ., ಬಿ.ಟಿ., ಅವರು ಬರೆದುಕೊಟ್ಟರು. ಇದನ್ನು ಓದುವುದರಿಂದ ಆಗಿನ ಕಾಲದಲ್ಲಿ ಬರೆಯುತ್ತಿದ್ದ ಬರೆವಣಿಗೆ, ಅದರ ರೀತಿ, ವಿಷಯಗಳು, ಇವು ಗೊತ್ತಾಗುತ್ತವೆ. ಸುಮಾರು ಮೂರು ವರ್ಷಕ್ಕೆ ಮೇಲ್ಪಟ್ಟು ಚಂದಾ ಹಣವನ್ನು ಬಾಕಿ ಇಟ್ಟುಕೊಂಡು ತಕರಾರು ಮಾಡುತ್ತಿದ್ದ ಒಬ್ಬ "ಸಂಭಾವಿತ ಗ್ರಹಸ್ಥನ" ಮೇಲೆ ಆಗ್ರಹಮಾಡಿ ಸಂಪಾದಕರು ಬರೆದಿರುವ ಲೇಖನವು (ಪುಟ ೪೦) ಇಂಗು ಹಾಕಿದ ಉಪ್ಪಿನ ಕಾಯಿಯಂತಿದೆ. ಮುಂದೆ ಬಂದಿರುವ ಸಣ್ಣ ದೊಡ್ಡ ಲೇಖನಗಳು ಆಗಿನ ರಾಜಕೀಯ ಆರ್ಥಿಕ ಸಾಮಾಜಿಕ ಮುಂತಾದ ಸಂಗತಿಗಳಿಗೆ ಸಂಬಂಧಪಟ್ಟಿದ್ದು ಓದುವುದಕ್ಕೆ ಸ್ವಾರಸ್ಯವಾಗಿವೆ.

***

**ಕವಿತ್ವಕಲೆ ಮತ್ತು ಯುವಕರು**

"ಸಾಹಿತ್ಯದಲ್ಲಿ ಯುವಕರು ಅತ್ಯಂತ ನೂತನೋತ್ಸಾಹದಿಂದ ಸ್ವೇಚ್ಛೆಯಾಗಿ ಗ್ರಂಥಗಳನ್ನು ಬರೆಯಲಾರಂಭಿಸಿದರು. ಆದರೆ ಈ ಯುವಕ ಕವಿಗಳು ಪಾಶ್ಚಾತ್ಯ ಗ್ರಂಥ ಪಠನದಲ್ಲಿ ತೊಡಗಿ, ಪಾಶ್ಚಾತ್ಯ ನಾಗರೀಕ ವರ್ಣನೆಗಳಿಂದ ಕೂಡಿದ ಆಂಗ್ಲೇಯ ಗ್ರಂಥಗಳಲ್ಲಿನ ಭಾವತರಂಗಗಳಲ್ಲಿ ಮುಳುಗಿ ತೇಲುತ್ತಿರುವುದರಿಂದ ಇವರು ಬರೆಯುವ ಗ್ರಂಥಗಳೂ ಸಹ ಆಂಗ್ಲನಾಗರೀಕ ಜೀವನದ ಭಾವನಾ ಪರಂಪರೆಗಳಲ್ಲಿ ಮುಳುಗಿರುತ್ತವೆ. ಆಂಗ್ಲೇಯ ವಾತಾವರಣವನ್ನನುಸರಿಸಿ, ಪಾರಮಾರ್ಥಿಕ ಭಾವಗಳಿಗೆ ಸ್ಥಳವಿಲ್ಲದೆ, ಕೇವಲ ಲೌಕಿಕ ಪ್ರೇಮ, ಸ್ವೇಚ್ಛಾವಿಹಾರಗಳು, ಪ್ರಣಯಗಳು, ಪ್ರಣಯಭಂಗಗಳು, ಇವುಗಳಿಂದ ಆಗುವ ಸಂಕಟಗಳು, ಕ್ರೋಧ ಲೋಭ ಮದ ಮಾತ್ಸರ್ಯಗಳು, ಉದ್ವೇಗಗಳು ಮೊದಲಾದವುಗಳ ವರ್ಣನೆಗಳಿಂದ ಕೂಡಿದ ಗ್ರಂಥಗಳನ್ನೇ ಬರೆಯುತ್ತಿರುವರು. ಅದೇ ಭಾವಕವಿತ್ವವೆಂಬ ಹೆಸರಿನಿಂದ, ಪದ್ಯಗಳ ರೂಪದಲ್ಲಿಯೂ ಹಾಡುಗಳ ರೂಪದಲ್ಲಿಯೂ ವಚನರೂಪಗಳಲ್ಲಿಯೂ ದೇಶಗಳೆಲ್ಲಾ ವ್ಯಾಪಿಸಿಬಿಟ್ಟಿದೆ. ಇದೇ ರೀತಿ, ಯುವಕರಾದ ಪುರುಷರಂತೆಯೇ ಸ್ತ್ರೀಯರು ಸಹ ಈ ಬಗೆಯ ಉದ್ವೇಗಭಾವನೆಗಳಿಗನುಸರಿಸಿಯೇ ಗ್ರಂಥರಚನೆಗೆ ಪ್ರಾರಂಭಿಸಿದರು. ನವೀನ ಭಾವರಚನೆಯಿಂದಲೂ,

ಚಿತ್ರವಿಚಿತ್ರವರ್ಣನೆಗಳಿಂದಲೂ, ಸ್ವಾತಂತ್ರ್ಯಸಂಗ್ರಾಮಗಳಿಂದಲೂ, ಕೂಡಿದ ಗ್ರಂಥಗಳನ್ನು ಓದಲು ಮನೋಹರವಾಗಿದ್ದರೂ, ಆದಿಯಿಂದಲೂ ಪವಿತ್ರವೂ ಪೂಜನೀಯವೂ ಆದ ಈ ಭಾರತ ದೇಶದ ಹಿಂದೂಮತ ಸಂಪ್ರದಾಯವನ್ನನುಸರಿಸಿ, ನೀತಿಧರ್ಮಗಳು, ದೈವಭಕ್ತಿ, ನಿರ್ಮಲ ಪ್ರೇಮಾದಿಗಳಿಗೆ ಸ್ಥಳಕೊಡದ ಗ್ರಂಥಗಳು ಕೇವಲ ಗರ್ಹಿತವಾದವುಗಳಾದ್ದರಿಂದ ನಮ್ಮ ಭಾರತಸ್ತ್ರೀಯರೂ ಯುವಕರೂ ಈ ವಿಷಯವನ್ನು ಗಮನಿಸಬೇಕೆಂಬುದೇ ಮುಖ್ಯ ಉದ್ದೇಶ."—ಶ್ರೀಮತಿ ಭಾರತೀದೇವಿ ('ಸುಬೋಧ'ದಿಂದ).

ಈ ವಿಚಾರವನ್ನು ಕುರಿತು "ಸುಬೋಧ" ಪತ್ರಿಕೆಯ ಸಂಪಾದಕರು ಈ ರೀತಿ ಬರೆದಿದ್ದಾರೆ :—

"ಸಾಹಿತ್ಯವು ಜನಜೀವನವನ್ನು ಚಿತ್ರಿಸಬೇಕೇ ರೂಪಿಸಬೇಕೇ ? ಎಂಬ ವಿಚಾರವನ್ನು, ನಮ್ಮ ಸಾಹಿತ್ಯಸೇವಕರು ಈ ವರೆಗೆ ಲಕ್ಷ್ಯಕ್ಕೆ ತಂದುಕೊಳ್ಳದಿರುವುದು ಶೋಚನೀಯ ವಿಚಾರ. ಕೆಲವರ ಅಭಿಪ್ರಾಯದಂತೆ, ಸಾಹಿತ್ಯವು ಜನಜೀವನವನ್ನು ರೂಪಿಸಬೇಕೆಂಬ ಧ್ಯೇಯಪ್ರೇರಿತರಾಗಿ ರಚಿಸುತ್ತಿರುವ ಪುಸ್ತಕ ಪರಂಪರೆಗಳಿಂದ ಜನಸಮಾಜದ ಏಳಿಗೆಗೆ ಬದಲು ನೈತಿಕಹಾನಿಯೇ ವಿಶೇಷವಾಗಿ ಆಗುತ್ತಿರುವುದು ಕಂಡುಬರುತ್ತಿದೆ. ಸಾಹಿತ್ಯವು ಜನಜೀವನವನ್ನು ರೂಪಿಸುವ ಸಾಧನವಾಗಿ ರಚನೆಯಾದಲ್ಲಿ ಅದು ಜನರ ರೀತಿ ನೀತಿ ಧರ್ಮಗಳ ಋಜುಮಾರ್ಗದ ನಡವಳಿಕೆಗೆ ಮಾರ್ಗದರ್ಶಕವಾಗಿದ್ದು ಜನಸಮಾಜವನ್ನು ಉತ್ತಮಮಾರ್ಗದಲ್ಲಿ ನಡೆಯಿಸಲು ಕಾರಣವಾಗುವುದು. ಭಾಷಾಸೇವೆಯ ಮಹತ್ತ್ವವನ್ನು ತಿಳಿದು, ಅದನ್ನು ಜನಾಂಗ ಹಿತಸಾಧನೆಗಾಗಿ ನಿಯೋಜಿಸತಕ್ಕ ಧುರೀಣರೂ ಸಂಸ್ಥೆಗಳವರೂ ಈ ಪ್ರಶ್ನೆಯನ್ನು ಅಗತ್ಯವಾಗಿ ಗಮನಿಸಿ ಒಂದು ತೀರ್ಮಾನಕ್ಕೆ ಬಂದು ಭಾಷಾಸೇವಕರ ವರ್ಗಕ್ಕೆ ಮಾರ್ಗದರ್ಶಕರಾಗತಕ್ಕದ್ದು ಅತ್ಯಾವಶ್ಯಕವೆಂದು ಭಾವಿಸುತ್ತೇವೆ."

---

# ಪ್ರಾಚ್ಯಲೇಖನಾವಳಿ

**ಜೈನಸಿದ್ಧಾಂತ ಭಾಸ್ಕರ** (*The Jaina Antiquary*), ಡಿಸೆಂಬರ್, ೧೯೪೦.

೧. ಶ್ರವಣಬೆಳ್ಗೊಳಕೆ ಶಿಲಾಲೇಖೋಂಮೆ ಭೌಗೋಳಿಕನಾಮ—ಶ್ರೀ ಕಾಮತಾ ಪ್ರಸಾದ ಜೈನ.

೨. 'Asoka and Jainism'—KAMTA PRASADA JAIN.

[The teaching of philosophical dogmas of Asoka are in conformity with those of Jainism].

೩. 'The Southern Asmaka'—G. N. SALETORE.

[Aryan colony christened after their mother city; means mountainous country; same as Barbora and Sapādalaksha country over which Arikesari I ruled. Poudanapura (of Jains), modern Bodhan (in Nizam's territory) its capital; also called Potali, Potana, Potanagara, Poutana, Podana. Proximity of Aṣmaka to Gurjara Mandala].

೪. 'New Studies in South Indian Jainism, III: Sravanabelgola culture, section (ii)—B. SESHAGIRI RAO.

೫. 'Remnants of the 12th Jaina Srutānga Diṭṭhivāda—HIRALAL JAIN.

[Svetambara Jains have preserved only first eleven angas; Digambaras have preserved the twelfth anga also; thus they are complementary to each other].

**The Karnataka Historical Review, July, 1938.** 'Ancient Karnataka and the Tamils'—V. R. RAMACHANDRA DIKSHITAR.

[Early Tamils called the Deccan plateau, north of Nilgiris, Karnadu. People of modern South Canara called Kosar, Nanmolikkosar identified with Satyaputras of Asoka inscriptions. Kadamba was an island kingdom originally very near modern Goa. Valuable testimony re boundary limits of ancient Karnataka. Nadugar originally applied to both Telugus and Kannadigas. Tamil has adapted Kannada words and expressions in literature—Jivaka Chintamani (9th century), Sulamani, etc.].

**A.B.O.R.I.**—16-12-40.

1. 'Paisaci Language and Literature'—A. N. UPADHYE.
2. 'The Upapuranas'—R. C. HAZRA.

3. ‘Identification of Udayana of Kausambi with Udayin of Magadha’—H. C. SETH.
4. ‘On the Probable Date of Jaimini and his Sutras’—G. V. DEVASTHALI.

   [Latest date cannot be later than 500 B.C.].
5. ‘Concord in Prakrit Syntax’—A. M. GHATAGE.
6. ‘Fresh and Further Lights on the Mohenjodaro Riddle’—A. P. KARMARKAR.

   [The ‘Minas’ theory of Rev. Heras supported].

**I.C.—**July—Sept., 1940.

1. ‘The Age of Kalachuri Imperialism’—Gangeya and Karna.—BY A. GHOSH.
2. ‘Jivadatta Pradipika on Gommatasara’—

   [Nemichandra’s J.P. is heavily indebted to the Kannada J.P. written by Kesava Varni in A.D. 1359].
3. ‘Some Jain Teachers in Sravana Belgola Inscriptions’—BY V. R. R. DIKSHITAR.
4. ‘Greek and Sanskrit’—BY BATAKRISHNA GHOSH.

**Calcutta Review.—**July, 1940.

1. ‘The Prototype of Siva in the Pre-historic Age’—BY JYOTIRMAYEE BOSE.
2. ‘A Note on the Geographical Concepts of the Ancient Indians (from the sixth century B.C. to the fourth century A.D.)’—BY SUDHAKAR CHATTERJEE.

**Journal of Annamalai University.—**Sept., 1940.

‘The Rasa Doctrine and the Concept of Suggestion in Hindu Æsthetics’—BY P. S. NAIDU.

**Journal of the University of Bombay.—**Sept., 1940.

‘Karnataka-Viṣaya-Jāti’—BY K. G. KUNDANGAR, M.A.

**ಭಾರತಿ (ತೆಲುಗು)—**ಜನವರಿ, ೧೯೪೧.

ಆಂಧ್ರಭಾಷಾ ವಾಙ್ಮಯಮುಲು: ಪ್ರಾಕೃತ ಸಂಪರ್ಕಮು—ಕೋರಾಡ ರಾಮಕೃಷ್ಣಯ್ಯ.

(ನನ್ನಯ್ಯನಿಗೆ ಹಿಂದೆ ಆಂಧ್ರಭಾಷಾ ವಾಙ್ಮಯಗಳು ಇರಲಿಲ್ಲವೇ? ಆಂಧ್ರಭಾಷೆಯೆಲ್ಲಾ—ದೇಶ್ಯವೂ ಸಹ—ಸಂಸ್ಕೃತ ಪ್ರಾಕೃತ ಜನ್ಯವೇಯೇ?)

**ಶಿವಾನುಭವ**—ಜನವರಿ, ೧೯೪೧.

೧. ಮಹಾದೇವಿಯಮ್ಮನ ವಚನಗಳು—ಶ್ರೀ ಸಿದ್ಧವೀರದೇವರು, ಹೊಸಮಠ.

೨. ಷಟ್‌ಸ್ಥಲಸಾರ—ಶ್ರೀ ಕಲ್ಯಾಣಪ್ಪಾ ಬ್ಯಾಳಿ.

೩. ಶಿವದೀಕ್ಷೆ ಅರ್ಥಾತ್ ಲಿಂಗಧಾರಣೆ—ಶ್ರೀ ಜೇರಿಗೆ ಕ. ಬಸವಪ್ಪ, ಬಿ.ಎ.

(ಶಿವದೀಕ್ಷೆ ಲಿಂಗಧಾರಣೆಗಳು ಭಿನ್ನವಲ್ಲ; ಎರಡೂ ಒಂದೇ ಕಾರ್ಯಕ್ರಮ. ಶಿವದೀಕ್ಷೆಯಲ್ಲಿ ಲಿಂಗಧಾರಣವಿದೆ.)

೪. ಬಸವೇಶ್ವರನಕಿಂತಲೂ ಮೊದಲಿನ ವೀರಶೈವ ಧರ್ಮ—ರಾ|| ಬ|| ಪಿ. ಜಿ. ಹಳಕಟ್ಟಿ. (ಫೆಬ್ರುವರಿ ಸಂಚಿಕೆಯನ್ನೂ ನೋಡಿ.)

೫. ಶಿವಾನುಭವ ಶಬ್ದಕೋಶ—(ಫೆಬ್ರುವರಿ ಸಂಚಿಕೆಯನ್ನೂ ನೋಡಿ.)

**ಶಿವಾನುಭವ**—ಫೆಬ್ರುವರಿ, ೧೯೪೧.

೧. ಸಂಕೀರ್ಣ ವಚನಗಳು—ಭಾಗ ೩ (ಭಂಡಾರಿ ಶಾಂತಯ್ಯನ ವಚನಗಳು, ರೆಮ್ಮವ್ವೆಯ ವಚನಗಳು.)

೨. ಹರಿಹರನ ರಗಳೆಗಳು—ಭಾಗ ೮ (ಬಾಹೂರ ಬೊಮ್ಮಯ್ಯನ, ತೆಲುಗು ಜೊಮ್ಮಯ್ಯನ, ರಗಳೆಗಳು.)

೩. ಶಿವಾನುಭವ ಸೃಷ್ಟಿಯ ವಚನಗಳು.

---

# ಪ್ರೊ|| ಟಿ. ಎಸ್. ವೆಂಕಣ್ಣಯ್ಯನವರ ಸ್ಮಾರಕನಿಧಿ

ಪಟ್ಟಿ ೫

| | | |
|---|---|---|
| ೧—೮—೧೯೪೦ ರ ವರೆಗೆ ಈ ನಿಧಿಗೆ ಪಾವತಿ ಬಂದು ಮೈಸೂರು ಬ್ಯಾಂಕಿನಲ್ಲಿ ಇಟ್ಟಿದ್ದ ಹಣ (ಪ್ರಬುದ್ಧ ಕರ್ಣಾಟಕ ಸಂಪುಟ ೨೨, ಸಂಚಿಕೆ ೧, ಪುಟ ೧೫೪ ನೋಡಿ.) | ರೂ. | ೨,೭೨೧—೧೧—೦ |
| ಈಚೆಗೆ ಬಂದ ಹಣ (ಕಮಿಷನ್ ಕಳೆದು) | ,, | ೧೨೮—೧೨—೦ |
| ಬಡ್ಡಿ (೩೧—೧೨—೧೯೪೦ ರ ವರೆಗೆ) | ,, | ೩೧— ೪—೦ |
| ಮೈಸೂರು ಬ್ಯಾಂಕಿನಲ್ಲಿ ಇಟ್ಟಿರುವ ಹಣ ಒಟ್ಟು | ರೂ. | ೨,೮೮೧—೧೧—೦ |

ಈ ನಿಧಿಯನ್ನು ಮೂರು ಸಾವಿರ ರೂಪಾಯಿಗಳನ್ನಾಗಿಯಾದರೂ ಮಾಡಿ ಅದನ್ನು ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಬೇಕೆಂಬುದು ಈ ಸಮಿತಿಯ ಆಶೆಯಾಗಿದೆ. ಆದ್ದರಿಂದ ಈಗಾಗಲೆ ವಾಗ್ದಾನಮಾಡಿ ಇನ್ನೂ ಪೂರ್ತಿಯಾಗಿ ಹಣ ಸಲ್ಲಿಸದೆ ಇರತಕ್ಕ ಮಹನೀಯರು ಅದನ್ನು ದಯವಿಟ್ಟು ಕೂಡಲೆ ಪಾವತಿ ಮಾಡಬೇಕೆಂದು ಪ್ರಾರ್ಥಿಸುತ್ತೇವೆ.

ಸಮಿತಿಯ ಪರವಾಗಿ,

ಎ. ಆರ್. ಕೃಷ್ಣಶಾಸ್ತ್ರೀ,
ಕೋಶಾಧ್ಯಕ್ಷ.

೮—೩—೧೯೪೧,
ಮೈಸೂರು

---

# ಪ್ರಕಟನೆ

"ಪ್ರಬುದ್ಧ ಕರ್ಣಾಟಕ"ದ ೧೯ ಮತ್ತು ೨೦ನೆಯ ಸಂಪುಟಗಳು, ಪೂರ್ತಿ ಸಂಪುಟ ಒಂದಕ್ಕೆ (ನಾಲ್ಕು ಸಂಚಿಕೆಗಳು) ಎಂಟಾಣೆಯಂತೆಯೂ, ಬಿಡಿ ಸಂಚಿಕೆ ಒಂದಕ್ಕೆ ಮೂರಾಣೆಯಂತೆಯೂ ದೊರೆಯುತ್ತವೆ.

ವಿ.ಪಿ. ಮುಂತಾದ ಅಂಚೆ ವೆಚ್ಚ ಬೇರೆ.

ಕಾರ್ಯದರ್ಶಿ,

**ಪ್ರಚಾರ ಮತ್ತು ಪ್ರಕಾಶನ ಕಾರ್ಯ,**
ಮಹಾರಾಜರವರ ಕಾಲೇಜು, ಮೈಸೂರು.

### ಮೈಸೂರು ಮಹಾರಾಜರವರ ಕಾಲೇಜಿನ

# ಕರ್ಣಾಟಕ ಸಂಘದ ಪ್ರಕಟನೆಗಳು

---

## ೧. ಕುಮಾರವ್ಯಾಸ ಪ್ರಶಸ್ತಿ

ಬೆಲೆ, ಕ್ಯಾಲಿಕೊ ಪ್ರತಿ ರೂ. ೨-೮-೦ ; ಸಾದಾ ಪ್ರತಿ ರೂ. ೨-೦-೦

ದೊರೆಯುವ ಸ್ಥಳ :

**ಕರ್ಣಾಟಕ ಸಂಘ,**
**ಸೆಂಟ್ರಲ್ ಕಾಲೇಜು, ಬೆಂಗಳೂರು**

**ಕರ್ಣಾಟಕ ಸಂಘ,**
**ಶಿವಮೊಗ್ಗ**

---

**೨. ಕಿರಿಯ ಕಾಣಿಕೆ** (ಎರಡನೆಯ ಮುದ್ರಣ)—ಕ್ಯಾಲಿಕೊ ಪ್ರತಿ ರೂ. ೧- ೮-೦
ಸಾದಾ ಪ್ರತಿ ,, ೧- ೦-೦

**೩. ತಳಿರು**— ಕ್ಯಾಲಿಕೊ ಪ್ರತಿ ,, ೧- ೪-೦
ಸಾದಾ ಪ್ರತಿ ,, ೦-೧೨-೦

ಮಾರಾಟಗಾರರು :

**ಪ್ರೋಗ್ರೆಸ್ ಬುಕ್ ಸ್ಟಾಲ್, ಮೈಸೂರು**

---

**೪. ಆಷಾಢಭೂತಿ** (ಶ್ರೀ. ಎ. ಎನ್. ಮೂರ್ತಿರಾವ್, ಎಂ.ಎ. ಅವರಿಂದ)—
ಕ್ಯಾಲಿಕೊ ಪ್ರತಿ ರೂ. ೧-೮-೦
ಸಾದಾ ಪ್ರತಿ ,, ೧-೦-೦

**೫. ಸಾವಿನ ಸಮಸ್ಯೆ** (ಶ್ರೀ. ವೆಂಬಾರ್ ವೆಂಕಟಾಚಾರ್ಯ, ಎಂ.ಎ., ಬಿ.ಕಾಮ್., ಎಲ್‌ಎಲ್.ಬಿ. ಅವರಿಂದ)— ಕ್ಯಾಲಿಕೊ ಪ್ರತಿ ರೂ. ೧-೪-೦

ಮಾರಾಟಗಾರರು :

**ಕೃಷ್ಣ ಮತ್ತು ಕಂಪನಿ, ಮೈಸೂರು**

---

**ಕಾರ್ಯದರ್ಶಿ, ಕರ್ಣಾಟಕ ಸಂಘ, ಮಹಾರಾಜರವರ ಕಾಲೇಜು,**
**ಮೈಸೂರು**

# ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ

ಬೆಲೆ: ಕ್ಯಾಲಿಕೊ ರೂ. ೧—೪—೦, ಸಾದಾ ೧೨ ಆಣೆ.

ಪ್ರಧಾನಸಂಪಾದಕರು : ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್.

೧. **ಹರಿಶ್ಚಂದ್ರಕಾವ್ಯ ಸಂಗ್ರಹ** (ತೃತೀಯ ಮುದ್ರಣ)—ಸಂಪಾದಕರು : ಟಿ. ಎಸ್. ವೆಂಕಣ್ಣಯ್ಯ, ಎಂ.ಎ. ಮತ್ತು ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ.

೨. **ಕರ್ಣಾಟಕ ಕಾದಂಬರೀ ಸಂಗ್ರಹ**—ಸಂಪಾದಕರು : ಟಿ. ಎಸ್. ವೆಂಕಣ್ಣಯ್ಯ, ಎಂ.ಎ.

೩. **ಪ್ರಭುಲಿಂಗಲೀಲೆಯ ಸಂಗ್ರಹ** (ಸಚಿತ್ರ)—ಸಂಪಾದಕರು : ಎಂ. ಎಸ್. ಬಸವಲಿಂಗಯ್ಯ, ಎಂ.ಎ., ಬಿ.ಎಲ್. ಮತ್ತು ಎಂ. ಆರ್. ಶ್ರೀನಿವಾಸಮೂರ್ತಿ, ಬಿ.ಎ.

೪. **ಸಾಕ್ರೆಟೀಸನ ಕೊನೆಯ ದಿನಗಳು** (ಸಚಿತ್ರ)—ಅನುವಾದಕರು : ಎ. ಎನ್. ಮೂರ್ತಿರಾವ್, ಎಂ.ಎ.

೫. **ಶ್ರೀರಾಮಕೃಷ್ಣ ಪರಮಹಂಸ**—ಲೇಖಕರು : ಕೆ. ವಿ. ಪುಟ್ಟಪ್ಪ, ಎಂ.ಎ.

೬. **ರವೀಂದ್ರನಾಥ ಠಾಕೂರರು** (ಸಚಿತ್ರ)—ಲೇಖಕರು : ಮಾಸ್ತಿ ವೆಂಕಟೇಶ ಐಯಂಗಾರ್, ಎಂ.ಎ.

೭. **ಆರೋಗ್ಯ ಅದರ ಜ್ಞಾನ ಮತ್ತು ಸಾಧನ** (ಸಚಿತ್ರ)—ಲೇಖಕರು : ಜೆ. ಎ. ಈಶ್ವರ ಮೂರ್ತಿ, ಬಿ.ಎ., ಎಲ್.ಎಂ.ಎಸ್., ಬಿ.ಎಸ್.ಎಸ್‌ಸಿ.

೮. **ಪಂಪರಾಮಾಯಣ ಸಂಗ್ರಹ**—ಸಂಪಾದಕರು: ಆಸ್ಥಾನಮಹಾವಿದ್ವಾನ್ ತಿರುವಳ್ಳೂರ್ ಶ್ರೀನಿವಾಸರಾಘವಾಚಾರ್ ಮತ್ತು ಡಿ. ಎಲ್. ನರಸಿಂಹಾಚಾರ್, ಎಂ.ಎ.

೯. **ಹಣ ಪ್ರಪಂಚ**—ಲೇಖಕರು : ವಿ. ಸೀತಾರಾಮಯ್ಯ, ಎಂ.ಎ.

೧೦. **ಸಂಸ್ಕೃತ ನಾಟಕ**—ಲೇಖಕರು : ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ.

೧೧. **ಜೀವವಿಜ್ಞಾನ**—ಲೇಖಕರು : ಬಿ. ವೆಂಕಟನಾರಾಯಣಪ್ಪ, ಎಂ.ಎ.

೧೨. **ಹಿಂದೂದರ್ಶನಸಾರ**—ಲೇಖಕರು : ಪಂಡಿತರತ್ನಂ ಲಕ್ಷ್ಮೀಪುರಂ ಶ್ರೀನಿವಾಸಾಚಾರ್ಯರು.

೧೩. **ರಾಜನೀತಿ**—ಲೇಖಕರು : ಎಚ್. ಕೃಷ್ಣರಾವ್, ಎಂ.ಎ.

೧೪. **ಹದಿಬದೆಯ ಧರ್ಮ**—ಸಂಪಾದಕಿಯರು: ಶ್ರೀ ಡಿ. ಚಂಪಾಬಾಯಿ, ಎಂ.ಎ.

**ಕ್ಯೂರೇಟರ್, ಓರಿಯೆಂಟಲ್ ಲೈಬ್ರರಿ, ಮೈಸೂರು.**

# ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರ ಪುಸ್ತಕಮಾಲೆ

## ೧೯೩೮–೩೯ರಲ್ಲಿ ಅಚ್ಚಾಗಿರುವ ಪುಸ್ತಕಗಳು

ಬೆಲೆ: ಸಾಧಾರಣ ಪ್ರತಿಗೆ ೨ ಆಣೆ; ಉತ್ತಮ ಪ್ರತಿಗೆ ೩ ಆಣೆ

೧. ಖಗೋಳಶಾಸ್ತ್ರಪ್ರವೇಶ—ಸಿ. ಎನ್. ಶ್ರೀನಿವಾಸ ಅಯ್ಯಂಗಾರ್, ಡಿ.ಎಸ್‌ಸಿ.
೨. ಸಮಾಜದ ರೋಗರುಜಿನಗಳು—ಜಿ. ಹನುಮಂತರಾವ್, ಎಂ.ಎ.
೩. ತೆರಿಗೆ—ಬಿ. ಆರ್. ಸುಬ್ಬರಾವ್, ಎಂ.ಎ.
೪. ನವರತ್ನಗಳು—ಎಚ್. ಸುಬ್ಬಾಜೋಯಿಸ್, ಎಂ.ಎಸ್‌ಸಿ.
೫. ನಮ್ಮ ಹಳ್ಳಿಗಳು—ಜಿ. ಎನ್. ಕೃಷ್ಣಮೂರ್ತಿ, ಎಂ.ಎ.

## ೧೯೩೯–೪೦ರಲ್ಲಿ ಅಚ್ಚಾಗಿರುವ ಪುಸ್ತಕಗಳು

೬. ಕುಮಾರವ್ಯಾಸ—ಎಸ್. ವಿ. ರಂಗಣ್ಣ, ಎಂ.ಎ.
೭. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್, ಎಂ.ಎ.
೮. ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ, ಎಂ.ಎ.
೯. ವಿದ್ಯುಚ್ಛಕ್ತಿಯ ವೈಭವ—ಬಿ. ಎ. ಕೃಷ್ಣಸ್ವಾಮಿರಾವ್, ಎಂ.ಎಸ್‌ಸಿ.
೧೦. ಪಂಪ—ಟಿ. ಎನ್. ಶ್ರೀಕಂಠಯ್ಯ, ಎಂ.ಎ.
೧೧. ಪ್ರಾಣಿಜೀವನ—ಎ. ನಾರಾಯಣರಾವ್, ಎಂ.ಎಸ್‌ಸಿ.
೧೨. ಕನಸುಗಳು—ಎನ್. ಎಸ್. ನಾರಾಯಣಶಾಸ್ತ್ರಿ, ಎಂ.ಎ.
೧೩. ಮದುವೆಯ ಇತಿಹಾಸ—ಎನ್. ಕಸ್ತೂರಿ, ಎಂ.ಎ., ಬಿ.ಎಲ್.
೧೪. ನಮ್ಮ ಆರ್ಥಿಕ ದೃಷ್ಟಿ—ಎಸ್. ಗೋಪಾಲಸ್ವಾಮಿ, ಎಂ.ಎ.
೧೫. ವಾಯುಗುಣ—ಕೆ. ಶೇಷಾದ್ರಿ ಅಯ್ಯಂಗಾರ್, ಎಂ.ಎಸ್‌ಸಿ., ಎಲ್‌ಎಲ್.ಬಿ.
೧೬. ಬೆಳಕು—ಟಿ. ಎಸ್. ಸುಬ್ಬರಾಯ, ಎಂ.ಎಸ್‌ಸಿ.
೧೭. ಕನ್ನಡ ಕಾದಂಬರಿ—ವಿ. ಸೀತಾರಾಮಯ್ಯ, ಎಂ.ಎ.

## ೧೯೪೦–೪೧ ರಲ್ಲಿ ಅಚ್ಚಾಗಿರುವ ಪುಸ್ತಕಗಳು

೧೮. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್, ಎಂ.ಎ.
೧೯. ಇಂಗ್ಲೆಂಡಿನ ರಾಜಕೀಯ ಬೆಳವಣಿಗೆ—ಪಿ. ಜಿ. ಸತ್ಯಗಿರಿನಾಥನ್, ಎಂ.ಎ.
೨೦. ಕಣ್ಣು ಮತ್ತು ಅದರ ರಕ್ಷಣೆ—ಡಾ|| ಡಿ. ಶಾಮಣ್ಣ, ಬಿ.ಎ., ಎಂ.ಬಿ., ಬಿ.ಎಸ್.
೨೧. ಸಾರ್ವಜನಿಕ ವೆಚ್ಚ—ಎಂ. ಎಚ್. ಗೋಪಾಲ್, ಎಂ.ಎ., ಪಿಎಚ್.ಡಿ.
೨೨. ಶಿಶುವಿಹಾರಗಳು—ಸಿ. ರಂಗಾಚಾರ್, ಬಿ.ಎಸ್‌ಸಿ., ಎಂ.ಎಡ್.
೨೩. ಸಂಖ್ಯೋದ್ಯಾನ—ಬಿ. ಸೀತಾರಾಮಶಾಸ್ತ್ರಿ, ಎಂ.ಎ.
೨೪. ವಿಡಂಬನ—ಎಸ್. ವಿ ರಂಗಣ್ಣ, ಎಂ.ಎ.
೨೫. ಎಲ್ಲೋರ ಮತ್ತು ಅಂಜತಾ—ಡಾ|| ಎಂ. ಎಚ್. ಕೃಷ್ಣ, ಎಂ.ಎ., ಡಿ.ಲಿಟ್.

ವಾರ್ಷಿಕ ಚಂದಾ—ಸಾಧಾರಣ ಪ್ರತಿ ರೂ. ೧—೪—೦
ಉತ್ತಮ ಪ್ರತಿ ರೂ. ೨—೦—೦

**ಜಿ. ಹನುಮಂತರಾವ್, ಎಂ.ಎ.,**

ಸಂಪಾದಕ, ಪ್ರಚಾರ ಪುಸ್ತಕಮಾಲೆ, ಮಹಾರಾಜರವರ ಕಾಲೇಜು, ಮೈಸೂರು.

